# ಶ್ರೀಮನ್ಮಹಾಭಾರತ

ಭಾರತ ದರ್ಶನ ಪ್ರಕಾಶನ



ಭೀಷ್ಮಪರ್ವ

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥

ಸಂಪುಟ ೧೨

ಭಾರತ ದರ್ಶನ ಪ್ರಕಾಶನ

# ಶ್ರೀಮನ್ಮಹಾಭಾರತ

(ವ್ಯಾಸಭಾರತದ ಕನ್ನಡ ಸರಳಾನುವಾದ)

ಭಾತಿ ಸರ್ವೇಷು ವೇದೇಷು
ರತಿಃ ಸರ್ವೇಷು ಜನ್ತುಷು ।
ತರಣಂ ಸರ್ವತೀರ್ಥಾನಾಂ
ತೇನ ಭಾರತಮುಚ್ಯತೇ ॥

**ಸಂಪುಟ 12**

*ಮುದ್ರಕರು:*

**ಭಾರತ ದರ್ಶನ ಮುದ್ರಣಾಲಯ**

163, ಮಂಜುನಾಥ ರಸ್ತೆ, 2ನೇ ಬ್ಲಾಕ್, ತ್ಯಾಗರಾಜನಗರ,
ಬೆಂಗಳೂರು - 560 028
ದೂರವಾಣಿ: 080-26765381

ಪ್ರಥಮ ಇ-ಮುದ್ರಣ ಜನವರಿ ೨೦೧೪

*ಆದಿ ಅಧ್ಯಕ್ಷರು:*

**ಪರಮಪೂಜ್ಯ ಶ್ರೀ ಶ್ರೀ**
**ರಂಗಪ್ರಿಯಮಹಾದೇಶಿಕಸ್ವಾಮಿಗಳವರು**

*ಆದಿ ವ್ಯವಸ್ಥಾಪಕ ಸಂಪಾದಕರು:*

**ದಿ|| ಕೆ.ಎಸ್. ಕೌಶಿಕ್ ('ವಿಶ್ವಾಮಿತ್ರ')**

*ಆದಿ ಸಂಪಾದಕರು:*

**ದಿ|| ವಿದ್ವಾನ್ ಹೆಚ್.ಎನ್. ರಂಗಸ್ವಾಮೀ**

*ಆದಿ ಸಂಪಾದಕರು:*

**ದಿ|| ವಿದ್ವಾನ್ ರಾಮೇಶ್ವರಾವಧಾನೀ**



ಸಂಪಾದಕ ಮಂಡಲಿ:

ಶ್ರೀ ಶ್ರೀಹರಿ
ಶ್ರೀ ನೆ.ವೆಂ. ಶ್ರೀನಿವಾಸರಾಯ

ಶ್ರೀ ವಿ. ಸೂರ್ಯನಾರಾಯಣ್, M.A. B.Com., B.L.,
ಕೋಶಾಧ್ಯಕ್ಷರು

# ವಿನಮ್ರವಚನಗಳು

ದಯಾಮಯನಾದ ಪರಮಾತ್ಮನ ಮತ್ತು ಮಹಾಕಾರುಣಿಕನಾದ ಸದ್ಗುರುವಿನ ದಿವ್ಯಾನುಗ್ರಹದಿಂದ ಸಿದ್ಧವಾಗಿರುವ ಹನ್ನೆರಡನೆಯ ಸಂಪುಟ ವನ್ನು ಮೊದಲು ಮನಃಪೂರ್ವಕವಾಗಿ ಹರಿ-ಗುರು-ಶಿವರ ದಿವ್ಯಪಾದಾರ ವಿಂದಗಳಲ್ಲಿ ಸಮರ್ಪಿಸಿ ಅನಂತರ ಅವರ ವರಪ್ರಸಾದರೂಪವಾದ ಈ ಸಂಪುಟವನ್ನು ನಮ್ಮ ಪ್ರಿಯವಾಚಕರ ಅಂಜಲಿಪುಟಗಳಲ್ಲಿಡುತ್ತಿದ್ದೇವೆ.

ಆರು ತಿಂಗಳಾದರೂ ಹೊಸಸಂಪುಟವು ಬಾರದೇ ಇದ್ದುದನ್ನು ಕಂಡು ನಮ್ಮ ಪ್ರಿಯವಾಚಕರು ಬಹುವಾಗಿ ಬೇಸತ್ತಿದ್ದಾರೆ. ದಯಮಾಡಿ ಬೇಸರ ಪಡಬಾರದಾಗಿ ನಾವು ಅವರಲ್ಲಿ ವಿನಂತಿಮಾಡಿಕೊಳ್ಳುತ್ತೇವೆ. ನಿಧಾನ ವಾಗಲು ಕಾರಣ : ಆರು ಮತ್ತು ಐದನೇ ಸಂಪುಟಗಳನ್ನು ಪುನರ್ಮುದ್ರಣ ಮಾಡಿದುದು. ನಮ್ಮ ಕಾರ್ಯಕ್ರಮದಂತೆ ಹನ್ನೆರಡನೆಯ ಸಂಪುಟವು ಹೊರ ಬಂದ ಮೇಲೆ ಐದನೆಯ ಸಂಪುಟವನ್ನು ಪುನರ್ಮುದ್ರಿಸಬೇಕಾಗಿದ್ದಿತು. ಆದರೆ ನಾಲ್ಕು ತಿಂಗಳ ಹಿಂದೆಯೇ ಪ್ರತಿಗಳು ಸಂಪೂರ್ಣವಾಗಿ ಮುಗಿದು ಹೋಗಿದ್ದುದರಿಂದ ಅದನ್ನೇ ಮೊದಲು ಮುದ್ರಣಕ್ಕೆ ತೆಗೆದುಕೊಳ್ಳಬೇಕಾ ಯಿತು. ಹನ್ನೆರಡನೆಯ ಸಂಪುಟದಲ್ಲಿ ಪ್ರಾರಂಭವಾಗುವ ಶ್ರೀಮದ್ಭಗವ ದ್ಗೀತೆಯ ವಿಷಯಸಂಗ್ರಹಣೆಗೆ ಅನುವುಮಾಡಿಕೊಳ್ಳಲು ದೈವವೇ ಈ ಕಾಲ ವನ್ನು ನಿರ್ಧರಿಸಿತ್ತೆಂದರೂ ತಪ್ಪಾಗುವುದಿಲ್ಲ.

ಶ್ರೀಮದ್ಭಗವದ್ಗೀತೆಯನ್ನು ಯಾವ ರೀತಿಯಲ್ಲಿ ಕೊಡಬೇಕೆಂಬುದೇ ನಮಗೊಂದು ಸಮಸ್ಯೆಯಾಗಿತ್ತು. ಪರಮಾತ್ಮನ ಅನುಗ್ರಹದಿಂದಾಗಿ ಈ ಪ್ರಕರಣವು ಸ್ವಲ್ಪ ವಿಸ್ತಾರವಾದರೂ ವಾಚಕರಿಗೆ ಮನದಟ್ಟಾಗುವ ರೀತಿಯಲ್ಲಿ ಕೊಡುವುದಕ್ಕೆ ಸಾಧ್ಯವಾಯಿತು. ಗೀತೆಯನ್ನು ಅರ್ಥಮಾಡಿಕೊಳ್ಳುವುದು ಮತ್ತು ಅರ್ಥಮಾಡಿಸುವುದು ಎರಡೂ ಕಷ್ಟಸಾಧ್ಯವಾದ ಕಾರ್ಯವೇ ಆಗಿದೆ. ಜನಸಾಮಾನ್ಯರಿಗೂ ಅರ್ಥವಾಗುವಂತೆ ಸಾಧ್ಯವಾದಮಟ್ಟಿಗೂ ವಿವರಣೆ ಯನ್ನು ಕೊಡಲಾಗಿದೆ. ಗೀತೆಯ ಎಲ್ಲ ಶ್ಲೋಕಗಳನ್ನೂ ಉದ್ಧರಿಸಲಾಗಿದೆ. ಎಲ್ಲ ಆಚಾರ್ಯರ ಅಭಿಪ್ರಾಯಗಳನ್ನೂ ಕಡೆಯಲ್ಲಿ ಕೊಡಲಾಗಿದೆ. ನಮ್ಮ ಪ್ರಿಯವಾಚಕರು ಇದನ್ನು ಓದಿ ಅರ್ಥವಾಗುತ್ತದೆಯೆಂಬ ಅಭಿಪ್ರಾಯ ಕೊಟ್ಟರೆ ಈ ಕಾರ್ಯವು ಸಾರ್ಥಕವಾದೀತು. ವಿಷಯಗಳನ್ನು ಸಿದ್ಧಗೊಳಿಸಲು ಪ್ರಕಾಶನದ ಅಧ್ಯಕ್ಷರಾದ ವಿದ್ವಾನ್ ಹೆಚ್. ಎಸ್. ವರದದೇಶಿಕಾ ಚಾರ್ಯರಂಗಪ್ರಿಯರು ಹೆಚ್ಚು ಶ್ರಮವಹಿಸಿದ್ದಾರೆ. ಅವರ ನಿರ್ದೇಶನ

ದಲ್ಲಿಯೇ ಇದನ್ನು ಸಿದ್ಧಗೊಳಿಸಲಾಗಿದೆ. ಸಂಪಾದಕಮಂಡಲಿಯವರ ಶ್ರಮವೂ ಸಹ ಅತ್ಯಧಿಕವಾದುದು. ಎಲ್ಲರೂ ನಗುಮುಖದಿಂದ ಈ ಮಹಾ ಕಾರ್ಯವನ್ನು ಮಾಡಿಕೊಡುತ್ತಿದ್ದಾರೆ. ಇದು ಪರಮಾತ್ಮನ ದಯೆಯಲ್ಲದೇ ಮತ್ತೇನು? ಹೆಜ್ಜೆ-ಹೆಜ್ಜೆಗೂ ದಯಾಮಯನು ತನ್ನ ಅಪ್ರಮೇಯತ್ವವನ್ನು ತೋರುತ್ತಲೇ ಇದ್ದಾನೆ. ಅಸಾಧ್ಯವಾದುದನ್ನು ಸಾಧಿಸಿಕೊಡುತ್ತಿದ್ದಾನೆ.

ಹದಿಮೂರನೆಯ ಸಂಪುಟದಲ್ಲಿ ಗೀತೆಯ ಉಳಿದ ಹನ್ನೆರಡು ಅಧ್ಯಾಯಗಳೂ ಮುಗಿಯುವುವೆಂದು ನಿರೀಕ್ಷಿಸಿದ್ದೇವೆ. ನಮ್ಮ ಯೋಜನೆ ಯಂತೆ ಈ ವರ್ಷದ ಇನ್ನೆರಡು ಸಂಪುಟಗಳೂ ಬೇಗ ಹೊರಬರುವಂತೆ ಅನುಗ್ರಹಿಸಬೇಕೆಂದು ಪರಮಾತ್ಮನನ್ನು ಪ್ರಾರ್ಥಿಸುತ್ತಿದ್ದೇವೆ.

ನಮ್ಮ ವಾಚಕರೂ ಸಹ ಹೀಗೆಯೇ ಪ್ರಾರ್ಥಿಸಬೇಕು. ಎಲ್ಲರ ಪ್ರಾರ್ಥನಾಬಲದಿಂದಲೇ ಈ ಮಹಾಕಾರ್ಯವು ಮುಂದುವರಿಯಬೇಕಾ ಗಿದೆ. ನಮ್ಮ ಪ್ರಿಯವಾಚಕರು 'ಈ ಮಹಾಕಾರ್ಯವು ಸುಗಮವಾಗಿ ನಡೆ ಯಲಿ' ಎಂದು ಪ್ರಾರ್ಥಿಸಿ ಭಗವಂತನ ಅಡಿದಾವರೆಗಳಲ್ಲಿ ಒಂದು ಹೂವನ್ನು ಹಾಕಿದರೆ ಇಲ್ಲಿ ನಮ್ಮ ಕಾರ್ಯವು ಸುಲಭವಾಗಿಯೂ, ಸಮೀಚೀನ ವಾಗಿಯೂ ನಡೆಯುತ್ತದೆ. ವಾಚಕರು ಹೀಗೆ ಮಾಡುವರೆಂಬ ಭರವಸೆಯಿದೆ.

ಪ್ರಸಕ್ತಸಂದರ್ಭದಲ್ಲಿ ಒಂದರಿಂದ ಹನ್ನೆರಡನೆಯ ಸಂಪುಟದವರೆಗಿನ ಎಲ್ಲ ಸಂಪುಟಗಳೂ ಸಿಕ್ಕುತ್ತವೆ. ನಮ್ಮ ಪ್ರಿಯವಾಚಕರಲ್ಲಿ ಪ್ರತಿಯೊಬ್ಬರೂ ಒಬ್ಬೊಬ್ಬರನ್ನಾದರೂ ನೂತನಸದಸ್ಯರನ್ನಾಗಿ ಮಾಡಿಕೊಡಲು ಪ್ರಯತ್ನಿಸ ಬೇಕು. ಪ್ರಯತ್ನಮಾಡಿದರೆ ಇದು ಅಸಾಧ್ಯವೇನಲ್ಲ. ನಾಲ್ಕು ಸುಪ್ರಸಿದ್ಧ ಬ್ಯಾಂಕುಗಳು ಪೂರ್ಣಮಾಲಿಕೆಗೆ ಸಾಲವನ್ನೊದಗಿಸಲು ಮುಂದಾಗಿವೆ. ಕೆನರಾ ಬ್ಯಾಂಕ್, ಸಿಂಡಿಕೇಟ್ ಬ್ಯಾಂಕ್, ಕರ್ಣಾಟಕ ಬ್ಯಾಂಕ್ ಲಿ., ಮತ್ತು ಕಾರ್ಪೊರೇಶನ್ ಬ್ಯಾಂಕ್, ಇವೇ ಆ ನಾಲ್ಕು ಬ್ಯಾಂಕುಗಳು. ಕಂತುಗಳೂ ಬಹು ಸುಲಭ. ಹಣಕೊಟ್ಟ ಪರಿವೆಯೇ ಇರುವುದಿಲ್ಲ. ಅಷ್ಟು ಸುಲಭಕಂತಿ ನಲ್ಲಿ ಸಾಲ ಕೊಡುತ್ತವೆ. ಆದರೆ ಸುಹೃದರು ಮಹಾಭಾರತವನ್ನು ಪಡೆದುಕೊಳ್ಳುವ ಮನಸ್ಸುಮಾಡಬೇಕು. ನಮ್ಮ ಸದಸ್ಯರು ಅವರ ಬಂಧು-ಮಿತ್ರರಿಗೆ ಒತ್ತಾಯಮಾಡಿ ಹೇಳಬೇಕು. ಖಾಯಿಲೆ ಬಂದರೆ ಔಷಧಿಯನ್ನು ಒತ್ತಾಯವಾಗಿ ಕುಡಿಸುವಂತೆ ಜೀವನಕ್ಕೆ ದಿವ್ಯೌಷಧವೆನಿಸಿದ ಈ ಮಹಾಭಾರತ ಗ್ರಂಥವನ್ನು ಬಲಾತ್ಕಾರಪೂರ್ವಕವಾಗಿಯೇ ಆದರೂ ತೆಗೆದುಕೊಳ್ಳುವಂತೆ

ಒತ್ತಾಯಮಾಡಿದರೆ ಅದು ತಪ್ಪಾಗುವುದಿಲ್ಲ. ಮಗುವು ಒಲ್ಲದಿದ್ದರೂ ಬಲಾತ್ಕಾರಪೂರ್ವಕವಾಗಿ ಹಸುವಿನ ಹಾಲು ಕುಡಿಸುವುದು ತಪ್ಪಾಗದಲ್ಲವೇ?

ವೇದವಿದ್ವಾಂಸರ ಸ್ವಸ್ತಿವಾಚನದೊಡನೆಯೂ, ಕುಮಾರೀ ಸತ್ಯವತಿಯವರ ಸ್ವಾಗತಪದ್ಯಪಠನದೊಡನೆಯೂ ಹನ್ನೊಂದನೆಯ ಸಂಪುಟದ ಪ್ರಕಾಶನಸಮಾರಂಭವು ಬೆಂಗಳೂರಿನ ಬಸವೇಶ್ವರಗುಡಿ ರಸ್ತೆಯಲ್ಲಿರುವ ಶ್ರೀನಿಜಗುಣರ ಕಲ್ಯಾಣಮಂದಿರದಲ್ಲಿ ತಾ.19-12-76ರಂದು ಸಂಭ್ರಮದಿಂದ ಪ್ರಾರಂಭವಾಯಿತು. ಕರ್ನಾಟಕದ ರಾಜ್ಯಪಾಲರಾದ ಶ್ರೀ ಉಮಾಶಂಕರ ದೀಕ್ಷಿತರು ಸಂಪುಟವನ್ನು ಪ್ರಕಾಶನಗೊಳಿಸಿದರು. ಈ ಮಹಾಕಾರ್ಯಕ್ಕೆ ತಮ್ಮ ಸರ್ಕಾರವು ಸಾಧ್ಯವಿದ್ದಷ್ಟು ಸಹಕಾರ ನೀಡುವುದಾಗಿ ರಾಜ್ಯಪಾಲರು ಆಶ್ವಾಸನೆ ನೀಡಿದರು. ಪ್ರಕಾಶನದ ಅಧ್ಯಕ್ಷರಾದ ವಿದ್ವಾನ್ ವರದದೇಶಿಕಾಚಾರ್ಯರಂಗಪ್ರಿಯರು ಸಂಪುಟದ ಪರಿಚಯವನ್ನು ಮಾಡಿಕೊಟ್ಟರು. ಶ್ರೀಮದ್ರಾಮಚಂದ್ರಾಪುರಮಠದ ಜಗದ್ಗುರು ಶ್ರೀಶಂಕರಾ ಚಾರ್ಯ ಶ್ರೀ ಶ್ರೀ ರಾಘವೇಂದ್ರ ಭಾರತೀಸ್ವಾಮಿಗಳು ಕಳುಹಿಸಿದ್ದ ಸುವರ್ಣ ಮಂತ್ರಾಕ್ಷತೆಯನ್ನು ಸಂಪಾದಕಮಂಡಲಿಯ ವಿದ್ವಾಂಸರಿಗೆ ರಾಜ್ಯಪಾಲರು ತಮ್ಮ ಅಮೃತಹಸ್ತದಿಂದ ದಯಪಾಲಿಸಿದರು. ಶಾಂತಿಪಾಠದೊಂದಿಗೆ ಸಮಾರಂಭವು ಮುಕ್ತಾಯವಾಯಿತು.

ವಿದ್ವಾನ್ ಹೆಚ್. ಎಸ್. ವರದದೇಶಿಕಾಚಾರ್ಯರಂಗಪ್ರಿಯರು ಈ ಸಂಪುಟಕ್ಕೆ ಮುನ್ನುಡಿಯನ್ನು ಬರೆದುಕೊಟ್ಟಿರುತ್ತಾರೆ. ಅವರಿಗೆ ನಮ್ಮ ಹೃತ್ಪೂರ್ವಕವಾದ ವಂದನೆಗಳು.

ಎಂದಿನಂತೆಯೇ ನಮ್ಮ ಅನೇಕ ಪ್ರತಿನಿಧಿಗಳು ನಿಸ್ವಾರ್ಥಸೇವೆಯನ್ನು ಸಲ್ಲಿಸುತ್ತಿದ್ದಾರೆ. ಮನೆ-ಮನೆಗೂ ಸಂಪುಟಗಳನ್ನೊಯ್ದುಕೊಟ್ಟು ಹಣವನ್ನು ಸಂಗ್ರಹಿಸಿಕೊಡುತ್ತಾ ನೆರವು ನೀಡುತ್ತಿದ್ದಾರೆ. ಆದರೆ ಇದು ಕರ್ಣಾಟಕದ ಮೂಲೆ-ಮೂಲೆಗೂ ಇನ್ನೂ ಪ್ರಸಾರವಾಗಿರುವುದಿಲ್ಲ. ಕರ್ಣಾಟಕದ ಜನಸಂಖ್ಯಾದೃಷ್ಟಿಯಿಂದ ಈಗ ಮಹಾಭಾರತವನ್ನು ಪಡೆದುಕೊಳ್ಳುತ್ತಿರುವವರು ಅತ್ಯಲ್ಪ. ಐದು ಸಾವಿರಕ್ಕೆ ಒಬ್ಬರು ಪಡೆದುಕೊಳ್ಳುತ್ತಿದ್ದಾರೆಂದು ಹೇಳಬಹುದು. ಆದುದರಿಂದ ಇದರ ಪ್ರಚಾರಕಾರ್ಯವಿನ್ನೂ ಬಹಳವಾಗಿ ನಡೆಯಬೇಕಾಗಿದೆ. ನಮ್ಮ ಪ್ರತಿನಿಧಿಗಳು ಇನ್ನೂ ಹೆಚ್ಚಿನ ಉತ್ಸಾಹದಿಂದ ಈ ಪ್ರಚಾರಕಾರ್ಯವನ್ನು ಮಾಡಬೇಕಾಗಿದೆ. ದಯಾಮಯನಾದ ಪರಮಾತ್ಮನು ಇವರೆಲ್ಲರಿಗೂ ಸ್ಫೂರ್ತಿಯನ್ನೂ, ದೇಹದಾರ್ಢ್ಯವನ್ನೂ ಅನು

ಗ್ರಹಿಸಲೆಂದು ಪ್ರಾರ್ಥಿಸುತ್ತೇವೆ. ನಿಸ್ವಾರ್ಥಸೇವೆಯನ್ನು ಸತತವಾಗಿ ಸಲ್ಲಿಸುತ್ತಿರುವ ಇವರೆಲ್ಲರಿಗೂ ಅಭಿನಂದನೆಗಳು.

ಸಂಪಾದಕಮಂಡಲಿಯವರ ಸೌಹಾರ್ದವನ್ನು ಎಷ್ಟು ಹೇಳಿದರೂ ಅಲ್ಪವೇ ಆಗುತ್ತದೆ. ತಮ್ಮ ಸ್ವಕಾರ್ಯಗಳನ್ನೇ ಅವರು ಇಷ್ಟು ಶ್ರದ್ಧೆವಹಿಸಿ ಮಾಡುತ್ತಿರಲಾರರು. ಈ ಕಾರ್ಯವು ಪರಮಾತ್ಮನ ಪ್ರೀತ್ಯರ್ಥವಾಗಿ ಆಗುತ್ತಿರುವ ಕಾರ್ಯವೆಂದು ಬಗೆದು ಎಲ್ಲರೂ ಸಹ ಶ್ರದ್ಧಾಪೂರ್ವಕವಾಗಿ ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ. ಇವರಿಗೆ ಹೃತ್ಪೂರ್ವಕವಂದನೆಗಳು.

ಅನೇಕರು ಅನೇಕರೀತಿಯಲ್ಲಿ ಈ ಮಹಾಕಾರ್ಯಕ್ಕೆ ನೆರವು ನೀಡುತ್ತಿದ್ದಾರೆ. ತೆರೆಯ ಮರೆಯಲ್ಲಿ ಕೆಲಸಮಾಡುತ್ತಿರುವ ಇವರೆಲ್ಲರಿಗೂ ದಯಾಮಯನಾದ ಪರಮಾತ್ಮನು ಆಯುರಾರೋಗ್ಯ-ಐಶ್ವರ್ಯಾದಿಗಳನ್ನು ದಯಪಾಲಿಸಿ ಕಾಪಾಡಲೆಂದು ಪ್ರಾರ್ಥಿಸಿ ಆ ದಿವ್ಯಪುರುಷನ ಪಾದಾರವಿಂದಗಳನ್ನು ಪುನಃ ಪುನಃ ಸ್ಮರಿಸುತ್ತಾ ವಿರಮಿಸುವೆವು. —ಪ್ರಕಾಶಕರು.

## ಚತುರ್ಥ ಮುದ್ರಣದ ಪ್ರಸ್ತಾವನೆ

ದಯಾಮಯನಾದ ಭಗವಂತನ ಕೃಪೆಯಿಂದಾಗಿ ಭಗವದ್ಗೀತೆಗೆ ಸಂಬಂಧಿಸಿದಂತೆ 12-13 ಮತ್ತು 14ನೇ ಸಂಪುಟಗಳನ್ನು ಒಟ್ಟಾಗಿ ಹೊರತರಲು ಸಂಕಲ್ಪಿಸಿದ್ದೆವು. ಕಾಗದಕ್ಕೆ ಹಣದ ನೆರವೂ ಸಿಕ್ಕಿತ್ತು. ಆದರೆ ಮಾರುಕಟ್ಟೆಯಲ್ಲಿ ಕಾಗದ ಸಿಕ್ಕುವುದೇ ಪ್ರಯಾಸವಾಗಿ ಒಂದು ತಿಂಗಳು ವ್ಯರ್ಥವಾಗಿ ಕಳೆದುಹೋಯಿತು. ಇದು ಭಗವಂತನ ಸಂಕಲ್ಪ. ನಾವೇನು ಮಾಡಲೂ ಸಾಧ್ಯವಾಗುವುದಿಲ್ಲ. ಕಡೆಗಾದರೂ ಬೇಕಾದ ಕಾಗದವು ಸಿಕ್ಕಿ ಇಷ್ಟು ಬೇಗನೆ ಸಂಪುಟಗಳು ಸಿದ್ಧವಾದುದಕ್ಕೆ ದಯಾಮಯನಾದ ಭಗವಂತನ ಕೃಪೆಯೇ ಕಾರಣ. ಅವನ ಸಂಕಲ್ಪದಂತೆ ಸಂಪುಟಗಳು ಆಯಾಕಾಲಕ್ಕೆ ಪ್ರಕಟವಾಗುವುವು. ಗ್ರಾಹಕರು ಸಹಕರಿಸಬೇಕಾಗಿ ವಿನಂತಿಸುತ್ತೇವೆ.

ಕನ್ನಡ ಬಂಧುಗಳೇ! ನಮ್ಮ ಅಜೇಯ ಸಂಸ್ಕೃತಿಯ ಅಡಿಗಲ್ಲುಗಳಂತಿರುವ ಮಹಾಭಾರತ-ರಾಮಾಯಣ-ಭಾಗವತಗಳನ್ನು ಸಂಗ್ರಹಿಸಿಟ್ಟುಕೊಳ್ಳಲು ಇದೊಂದು ಸುವರ್ಣಾವಕಾಶ. ತ್ವರೆಮಾಡಿರಿ. ಜ್ಞಾನದೀವಿಗೆಯನ್ನು ಮನೆ-ಮನೆಗಳಲ್ಲಿ ಹೊಚ್ಚಿರಿ. ಮಹಾಭಾರತ-ರಾಮಾಯಣ-ಭಾಗವತಗಳ ಅಧ್ಯಯನದಿಂದ ಸುಜ್ಞಾನವನ್ನು ಪಡೆದು ಹೃದಯಕಮಲದ ಮಧ್ಯದಲ್ಲಿರುವ ದಿವ್ಯಜ್ಯೋತಿಯನ್ನು ಕಂಡುಕೊಳ್ಳಿರಿ. ಬ್ರಹ್ಮಾನಂದವನ್ನು ಅನುಭವಿಸಿರಿ. ಭಗವಂತನು ನಮಗೆಲ್ಲರಿಗೂ ಸನ್ಮಂಗಲವನ್ನುಂಟುಮಾಡಲಿ. **—ಪ್ರಕಾಶಕರು.**

॥ ಶ್ರೀಃ ॥

# ಭೂಮಿಕಾ

ಶ್ರೀರಂಗೇ ಶೋಭತೇ ಯಸ್ಯ ಶ್ರೀರಂಗೇ ಶೋಭತೇ ಚ ಯಃ ।
ನಮೋಽಹಂ ಕಲಯೇ ತಸ್ಮೈ ನಮೋಽಹಂ ಕಲಯೇ ತತಃ ॥

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥

ವಂದೇ ಯೋಗೀಶ್ವರಂ ಭೀಷ್ಮಂ ಕೃಷ್ಣಂ ಯೋಗೇಶ್ವರಂ ಭಜೇ ।
ತದ್ಯೋಗಜಾಹ್ನವೀಮೇತಾಂ ಗಾಹೇ ಭಾರತಸಂಹಿತಾಮ್ ॥

ಮಹಾಭಾರತದ ಮಹಾಪುರುಷರಲ್ಲಿ ಅಗ್ರಗಣ್ಯನಾದ ಭೀಷ್ಮನ ಪವಿತ್ರವಾದ ಅಂಕಿತದಿಂದ ಅಲಂಕೃತವಾದ ಭೀಷ್ಮಪರ್ವದ ಪ್ರಾರಂಭಭಾಗವು ಮಹಾಭಾರತದ ಈ ಸಂಪುಟದ ವಿಷಯವಾಗಿದೆ. ಈ ಹಿಂದಿನ ಪರ್ವದಲ್ಲಿ ವರ್ಣಿತವಾಗಿರುವಂತೆ ಮಹಾಸಂಗ್ರಾಮಕ್ಕೆ ಸಜ್ಜುಮಾಡಿಕೊಂಡಿದ್ದ ಕೌರವ-ಪಾಂಡವಪಕ್ಷಗಳು ನೇರವಾಗಿ ಯುದ್ಧಕ್ಕೆ ಇಳಿಯುವ ಮುನ್ನ ಮಾಡಿಕೊಂಡ ಸನ್ನಾಹ, ಸೈನಿಕರ ಸ್ಥಿತಿ, ಯುದ್ಧನಿಯಮಗಳ ಒಪ್ಪಂದ, ಜಯಾಪಜಯ ಶಕುನಗಳು, ವ್ಯಾಸರ ಅನುಗ್ರಹದಿಂದ ದಿವ್ಯದೃಷ್ಟಿಯನ್ನು ಪಡೆದ ಸಂಜಯನ ಒಳಗಿನ ವಿವೇಕದೃಷ್ಟಿ ಮತ್ತು ಹೊರಗಿನ ಇಂದ್ರಿಯದೃಷ್ಟಿ, *ಎರಡರಲ್ಲೂ ಕುರುಡನಾಗಿದ್ದ ಕುರುಭೂಪತಿ ಧೃತರಾಷ್ಟ್ರನ ಪ್ರಾಸಂಗಿಕಪ್ರಶ್ನೆಗೆ ಉತ್ತರವಾಗಿ ಹೇಳುವ ಭೂವರ್ಣನೆ ಮತ್ತು ಮುಖ್ಯಪ್ರಶ್ನೆಯಾದ ಭೀಷ್ಮವಧವಿಸ್ತಾರಕ್ಕೆ ಉತ್ತರವಾಗಿ ನಿರೂಪಿಸಲು ಪ್ರಾರಂಭಿಸುವ ಸೈನ್ಯವ್ಯೂಹವ್ಯವಸ್ಥೆ, ಪ್ರೋತ್ಸಾಹ ಭರಿತವಾದ ಉಭಯಸೈನ್ಯಗಳ ಮಧ್ಯೆ ಆಕಸ್ಮಿಕವಾಗಿ ವಿಷಾದ-ಕಶ್ಮಲಗಳಿಗೆ ವಶನಾದ ನರನಿಗೆ ಪ್ರೋತ್ಸಾಹನೀಡುವ [2]ನೆಪದಲ್ಲಿ ವಿಶ್ವದ ಸರ್ವಜನರ

---

* ಏವಂ ಜ್ಞಾತ್ವಾಪಿ ಸರ್ವಾತ್ಮನಾ ಅಂಧೋ ಧೃತರಾಷ್ಟ್ರಃ

2 ಪಾಂಡುತನಯಯುದ್ಧಪ್ರೋತ್ಸಾಹನವ್ಯಾಜೇನ ಪರಮಪುರುಷಾರ್ಥ ಲಕ್ಷಣ ಮೋಕ್ಷಸಾಧನತಯಾ.

(ಶ್ರೀರಾಮಾನುಜರ ಗೀತಾಭಾಷ್ಯದ ಅವತರಣಿಕೆ.)

ಆತ್ಮೋಜ್ಜೀವನಾರ್ಥವಾಗಿ ನಾರಾಯಣನು ದಯಪಾಲಿಸಿದ ಮಹೋಪ ನಿಷತ್ತೂ–ಯೋಗಶಾಸ್ತ್ರವೂ–ಮಹಾಭಾರತದರ್ಶನದ *ಕೇಂದ್ರಸ್ಥಾನವೂ ಆದ ಅಷ್ಟಾದಶಾಧ್ಯಾಯಿನೀ ಭಗವದ್ಗೀತೆಯ ಪ್ರಥಮಷಟ್ಕ–ಇವಿಷ್ಟನ್ನೂ ಒಳಗೊಂಡಿದೆ.

ಭಾರತಗ್ರಂಥವನ್ನು ವೀರಗಾಥಾಕಾವ್ಯವೆಂದೂ–ದರ್ಶನಶಾಸ್ತ್ರ, ನೀತಿ ಶಾಸ್ತ್ರ , ಸಮಾಜಶಾಸ್ತ್ರಾತ್ಮಕವಾದ ಧರ್ಮಶಾಸ್ತ್ರವೆಂದೂ ಎರಡು ಮುಖ್ಯ ದೃಷ್ಟಿ ಗಳಿಂದ ವಿಚಾರಮಾಡುವುದುಂಟು. ಈ ಎರಡೂ ದೃಷ್ಟಿಗಳಿಂದಲೂ ಅತ್ಯಂತ ಮಹತ್ತ್ವಪೂರ್ಣವಾದ ಘಟ್ಟವಾಗಿದೆ ಈ ಗ್ರಂಥಭಾಗ. ಜೀವನದ ಹೊರಗಿನ ಕುರುಕ್ಷೇತ್ರದಲ್ಲಿ ಅಪ್ರತಿದ್ವಂದ್ವನಾದ ಮಹಾವೀರನೂ ಮಹಾಧೀರ ಧೌರೇ ಯನೂ ಅಂತೆಯೇ ಅಷ್ಟೇ ಮಟ್ಟದಲ್ಲಿನ ಧರ್ಮವೀರ ಯೋಗೀಶ್ವರನೂ ಆಗಿ ಬೆಳಗಿದ ಭೀಷ್ಮಪಿತಾಮಹನು ತನ್ನ ಇಬ್ಬಗೆಯ ಪರಾಕ್ರಮದ ಪರಾ ಕಾಷ್ಠೆಯನ್ನು ತೋರಿಸಿ ಆತ್ಮಾರ್ಪಣೆಮಾಡಿಕೊಂಡ ರೋಮಾಂಚಕಾರಿಯಾದ ಕಥಾನಕ ಇದರಲ್ಲಿದೆ. ಅಂತಹ ಭೀಷ್ಮನಿಗೂ ಆರಾಧ್ಯದೈವವಾಗಿದ್ದ ಅಜಿತ-ಅಪ್ರಧೃಷ್ಯ-ಮಹಾಯೋಗೇಶ್ವರ-ಸಮಗ್ರಜ್ಞಾನ-ಬಲೈಶ್ವರ್ಯ-ವೀರ್ಯ-ಶಕ್ತಿ-ತೇಜೋನಿಧಿಯಾದ ಧರ್ಮಪ್ರಭು ಪುರುಷೋತ್ತಮ-ಶ್ರೀಕೃಷ್ಣಪರ ಮಾತ್ಮನ ಯೋಗವೈಭವವೂ ಅಂತೆಯೇ ಇದನ್ನು ಆಪ್ಲಾವನೆಮಾಡಿದೆ. ಈ ಈರ್ವರು ಮಹಾಪುರುಷರ ಮಹಿಮೆಯ ರಸಪಾಕವಾಗಿದೆ ಭೀಷ್ಮಪರ್ವ.

ಕಥಾವಸ್ತುವಿನಲ್ಲಿ ಮೊದಲಿನಿಂದ ಕೊನೆಯವರೆಗೂ ಪ್ರಭಾವ ಪೂರ್ಣವಾಗಿರುವ ಪಾತ್ರ ಭೀಷ್ಮನದು. ಹುಟ್ಟು, ಬೆಳವಣಿಗೆ, ಜೀವನಯಾತ್ರೆ, ಆತ್ಮಯಾತ್ರೆ–ಎಲ್ಲದರಲ್ಲೂ ಪರಮಾದ್ಭುತ ದಿವ್ಯಪರಾಕ್ರಮಸಂಪನ್ನ ನಾದವನು ಈ ಮಹಾತ್ಮ. ಆತನ ತಂದೆಯು ದಿವ್ಯಾವತಾರಿಯಾದ ಮಹಾ ಭಿಷನ ಮಾನುಷರೂಪನಾದ ಪುತ್ರ ಶ˙ಂತನು. ತಾಯಿಯು ತ್ರಿಮೂರ್ತಿ

---

* "ಭಾರತಾರ್ಥಸಂಗ್ರಹಾಂ ಭಾರತಪಾರಿಜಾತಮಧುಭೂತಾಂ ಗೀತಾಮ್"
(ಶ್ರೀಮಧ್ವಾಚಾರ್ಯರ ಗೀತಾಭಾಷ್ಯದ ಅವತರಣಿಕೆ)

"ತದಿದಂ ಗೀತಾಶಾಸ್ತ್ರಂ ಸಮಸ್ತವೇದಾರ್ಥಸಾರಸಂಗ್ರಹಭೂತಮ್"
(ಶ್ರೀಶಂಕರಾಚಾರ್ಯರ ಗೀತಾಭಾಷ್ಯದ ಉಪೋದ್ಘಾತ)

ಸಂಸರ್ಗಪರಿಪೂತೇ ತ್ರಿಲೋಕಪಾವನೀ, ಜ್ಞಾನವಾಹಿನಿಯಾದ ಗಂಗೆ. *ತಾನೂ ಕೂಡ ಬ್ರಹ್ಮಾದಿಯಾದ ವಸುದೇವತೆಯ ಅವತಾರವಾಗಿ **'ಪಿತುಶ್ಶತಗುಣಂ ಪುತ್ರಃ'** ಮತ್ತು **'ಉತ್ತಮಾ ಆತ್ಮನಾಖ್ಯಾತಾಃ'** ಎಂಬಂತೆ ತನ್ನ ಪರಮೋನ್ನತವಾದ ಪರಾಕ್ರಮ-ಜ್ಞಾನ-ವೃತ್ತ-ಚಾರಿತ್ರಗಳಿಂದ ಚರಿತ್ರೆಯನ್ನು ಬೆಳಗಿದವನು. ಬಾಲ್ಯದಲ್ಲಿಯೇ ಗಂಗೆಯ ಮಹಾಪ್ರವಾಹವನ್ನು ಶರಜಾಲದಿಂದ ನಿರೋಧಿಸಿ ಸ್ವಯಂ ನಿಸ್ಸಮಾಭ್ಯಧಿಕಮಹಾವೀರನಾದ ತಂದೆಯನ್ನೂ ಅಚ್ಚರಿಗೊಳಿಸಿದವನು. ಕಾಶೀರಾಜನ ಸ್ವಯಂವರಸಭೆಯಲ್ಲಿ ನೆರೆದಿದ್ದ ಸರ್ವಕ್ಷತ್ರಿಯವೀರರನ್ನೂ ಪರಾಭವಗೊಳಿಸಿ ಆತನ ಪುತ್ರಿಯರನ್ನು ಗೆದ್ದು ತಂದವನು. ಸಮಸ್ತಭೂಮಂಡಲವನ್ನೂ ಇಪ್ಪತ್ತೇಳು ಬಾರಿ ಸುತ್ತಿ ಸರ್ವದುಷ್ಟಕ್ಷತ್ರಿಯರ ದೋರ್ದಂಡಮದವನ್ನೂ ಮುರಿದ ಜಗದೇಕಮಲ್ಲನಾದ ಪರಶುಧರ ರಾಮನನ್ನು ಯುದ್ಧದಲ್ಲಿ ಸೋಲಿಸಿ **'ತ್ವತ್ಸಮೋ ನಾಸ್ತಿ ಲೋಕೇಽಸ್ಮಿನ್ ಕ್ಷತ್ರಿಯಃ ಪೃಥಿವೀಚರಃ'** (ನಿನಗೆಣೆಯಾದ ಕ್ಷತ್ರಿಯನು ಈ ಭೂಮಿಯಲ್ಲಿ ಯಾವನೂ ಇಲ್ಲ) ಎಂದು ಹೊಗಳಿಸಿಕೊಂಡವನು. ಧರ್ಮರಾಜನ ರಾಜಸೂಯಸಭೆಯಲ್ಲಿ ನೆರೆದಿದ್ದ ಸರ್ವಕ್ಷತ್ರಿಯರನ್ನೂ ಪರಾಕ್ರಮದಿಂದ ಧಿಕ್ಕರಿಸಿ ಅದಟು ಉತ್ಸಾಹ-ಆತ್ಮವಿಶ್ವಾಸಗಳಿಂದ ತುಂಬಿದವನು–ಎಂದು ಈ ಮೊದಲೇ ಆತನ ಅಪ್ರತಿಮಪ್ರತಾಪವು ಎಲ್ಲರ ಮನಸ್ಸಿನಲ್ಲೂ ಮುದ್ರಿತವಾಗಿದೆ. "ಪ್ರತಿದಿನವೂ ಆಹ್ನಿಕಕ್ಕೆ ಮೊದಲು ಹತ್ತುಸಾವಿರ ಯೋಧರನ್ನೂ, ಸಾವಿರ ರಥಿಗಳನ್ನೂ ಧ್ವಂಸಮಾಡಬಲ್ಲೆ. ಒಂದು ತಿಂಗಳೊಳಗೆ ಇಡೀ ಪಾಂಡವಸೇನೆಯನ್ನು ಭಸ್ಮಮಾಡಬಲ್ಲೆ"

**ದಿವಸೇ ದಿವಸೇ ಕೃತ್ವಾ ಭಾಗಂ ಪ್ರಾಗಾಹ್ನಿಕಂ ಮಮ ।**
**ಯೋಧಾನಾಂ ದಶಸಾಹಸ್ರಂ ಕೃತ್ವಾ ಭಾಗಂ ಮಹಾದ್ಯುತೇ ॥**

---

* ಆದಾವಾದಿಪಿತಾಮಹಸ್ಯ ನಿಯಮವ್ಯಾಪಾರಪಾತ್ರೇ ಜಲಂ
ಪಶ್ಚಾತ್ಪನ್ನಗಶಾಯಿನೋ ಭಗವತಃ ಪಾದೋದಕಂ ಪಾವನಮ್ ।
ಭೂಯಶ್ಶಂಭುಜಟಾವಿಭೂಷಣಮಣಿರ್ಜಹ್ನೋರ್ಮಹರ್ಷೇರಿಯಂ
ಕನ್ಯಾ ಕಲ್ಮಷನಾಶಿನೀ ಭಗವತೀ ಭಾಗೀರಥೀ ಪಾತು ಮಾಮ್"

(ಶ್ರೀಶಂಕರರ ಗಂಗಾಷ್ಟಕ)

**ಸಹಸ್ರಂ ರಥಿನಾಮೇಕಮೇಷ ಭಾಗೋ ಮತೋ ಮಮ ।**
**ಶತಸಾಹಸ್ರಘಾತೀನಿ ಹನ್ಯಾಂ ಮಾಸೇನ ಭಾರತ ॥**

(ಉದ್ಯೋಗ 193/11-14)

ಎಂಬ ಪ್ರತಿಜ್ಞೆಯನ್ನು ನೆರವೇರಿಸಬಲ್ಲ ಮಹಾಸಾಹಸವನ್ನು ಇಲ್ಲಿಯೂ ಆತ ತೋರಿಸುತ್ತಾನೆ. ತಾನು ಯುದ್ಧದಲ್ಲಿ ಶಸ್ತ್ರವನ್ನು ಧರಿಸುವುದಿಲ್ಲವೆಂದು ಪ್ರತಿಜ್ಞೆಮಾಡಿದ್ದ ಜನಾರ್ದನನನ್ನು ತಾಳ್ಮೆಮೀರುವಂತೆ ಘಾಸಿಪಡಿಸಿ ಸುದರ್ಶನಚಕ್ರವನ್ನು ಹಿಡಿದು ಮೇಲೇರಿ ಬರುವಂತೆ ಮಾಡಿ, ಪಶು ಪತಿಯನ್ನು ಯುದ್ಧದಲ್ಲಿ ಮೆಚ್ಚಿಸಿದ ಅತಿರಥಿ ತರುಣ ಅರ್ಜುನನನ್ನೂ ನಾಚಿ ಸುವ ವೀರಪಿತಾಮಹನಿವನು ಎಂದು ಈ ಪರ್ವ ಚಿತ್ರಿಸುತ್ತದೆ. (ತನ್ನ ಪ್ರತಿಜ್ಞೆ ಹೋದರೂ ಭಕ್ತನ ಪ್ರತಿಜ್ಞೆಯನ್ನು ಉಳಿಸಲು ಶ್ರೀಕೃಷ್ಣನು ಈ ಕೋಪದ ನಾಟಕವನ್ನು ಹೂಡಿದ ಎನ್ನುವ ಮಾತು ಬೇರೆ!) *ಈತನು ಯುದ್ಧಮಾಡು ತ್ತಿದ್ದಾಗ ಬಲದ ದೇವತೆಯಾದ ಸಾಕ್ಷಾತ್ ಶತಕ್ರತುವೂ ಇವನನ್ನು ಸೋಲಿಸ ಲಾರ. (ಶಿಖಂಡಿಯನ್ನು ಮಧ್ಯದಲ್ಲಿಟ್ಟು ಯುದ್ಧಮಾಡದಿದ್ದರೆ ತನ್ನನ್ನು ಯಾರೂ ಎಂದಿಗೂ ಗೆಲ್ಲಲಾರರು ಎಂದು ತನ್ನ ವಧೋಪಾಯವನ್ನು ತಾನೇ ವಾತ್ಸಲ್ಯದಿಂದ ಧರ್ಮರಾಜನಿಗೆ ಸೂಚಿಸುತ್ತಾನೆ.)

ಇಂತಹ ಅದ್ವಿತೀಯಪರಾಕ್ರಮಕ್ಕೆ ತಕ್ಕ ಅಲಂಕಾರವಾಗಿದ್ದ ಇವನ ವಿನಯವೂ ಅಷ್ಟೇ ಶ್ಲಾಘನೀಯ. ಗುರುವಾದ ಪರಶುರಾಮನೊಡನೆ ಪ್ರತಿಜ್ಞಾಪಾಲನೆಗಾಗಿ ಅನಿವಾರ್ಯವಾಗಿ ಯುದ್ಧಮಾಡಬೇಕಾಗಿ ಬಂದಾ ಗಲೂ ಅವರ ಪಾದಗಳಿಗೆರಗಿ ಆಶೀರ್ವಾದಪಡೆದೇ ಸಮರಸೇವೆಗೆ ತೊಡಗು ತ್ತಾನೆ.

**ಯೋತ್ಸ್ಯೇ ತ್ವಯಾ ರಣೇ ರಾಮ ಸದೃಶೇನಾಧಿಕೇನ ವಾ ।**
**ಗುರುಣಾ ಧರ್ಮಶೀಲೇನ ಜಯಮಾಶಾಸ್ವ ಮೇ ವಿಭೋ ॥**

ಉದ್ಯೋಗ 179-14

ಎಂಬುದು ಅವನ ಪ್ರಾರ್ಥನೆ. ಗುರುವು ಯುದ್ಧದಲ್ಲಿ ಸೋಲನ್ನೊಪ್ಪಿ ದರೂ 'ಹೂವಿನಿಂದ ಪೂಜಿಸಬೇಕಾದ ಪಾದಗಳನ್ನು ಬಾಣಗಳಿಂದ ಘಾಸಿ

---

* ನೈನಂ ಪಶ್ಯಾಮಿ ಕೌಂತೇಯ ಯೋ ಮಾಂ ಯುಧ್ಯಂತಮಾಹವೇ ।
ವಿಜಯೇತ ಪುಮಾನ್ಕಶ್ಚಿತ್ ಸಾಕ್ಷಾದಪಿ ಶತಕ್ರತುಃ ॥ ಭೀಷ್ಮ-೪೩.೪೬

ಪಡಿಸಿದೆನಲ್ಲಾ! ಎಂತಹ ಅವಿನಯ ನನ್ನದು? ಎಂದು ನೊಂದುಕೊಳ್ಳುತ್ತಾನೆ. ಸನ್ಮಾನ್ಯನಾದ ತಂದೆಯ, ತಾಯಿಯ ಸ್ಥಾನದಲ್ಲಿರುವ ಸತ್ಯವತಿಯ ಮತ್ತು ಋಷಿಮುನಿಗಳ ಸನ್ನಿಧಿಯಲ್ಲಂತೂ ಈತನು ವಿನಯದ ಮೂರ್ತಿಯಾಗಿಯೇ ಆಗಿದ್ದು ಕಿಂಕರನ ಕೆಲಸಮಾಡುತ್ತಾನೆ.

ತಂದೆಯನ್ನು ಸಂತೋಷಪಡಿಸಲು ಈತನು ಮಾಡಿದ ಮಹಾತ್ಯಾಗ "ಈ ನಿನ್ನ ಮಗಳ ಮಗನೇ ರಾಜನಾಗಲಿ" "ನಾನು ಬ್ರಹ್ಮಚಾರಿಯಾಗಿಯೇ ಇದ್ದುಬಿಡುತ್ತೇನೆ" **"ಯೋಽಸ್ಯಾಂ ಜನಿಷ್ಯತೇ ಪುತ್ರಃ ಸ ನೋ ರಾಜಾ ಭವಿಷ್ಯತಿ." "ಅದ್ಯಪ್ರಭೃತಿ ಮೇ ದಾಶ ಬ್ರಹ್ಮಚರ್ಯಂ ಭವಿಷ್ಯತಿ"** ಎಂದು ಅದ್ಭುತವಾದ ಪ್ರತಿಜ್ಞೆಗಳನ್ನು ಮಾಡಿ ದೇವತೆಗಳಿಂದಲೇ "ಭೀಷ್ಮ" ಎಂದು ಬಿರುದುಗಳಿಸಿದವನು. **"ಅಭ್ಯವರ್ಷನ್ತ ಕುಸುಮೈರ್ಭೀಷ್ಮೋಽಯಮಿತಿ ಚಾಬ್ರುವನ್."** ಎಂಬ ಈತನ ಪಿತೃಭಕ್ತಿ-ಸಂಯಮಗಳ ನಿಷ್ಠೆಯ ಕೀರ್ತಿ ಸುಪ್ರಸಿದ್ಧವೇ ಆಗಿದೆ. (ಅವನ ಬಿರುದಾಂಕಿತವು ಅವನ ನಿಜವಾದ ಹೆಸರಾದ ದೇವವ್ರತ ಎಂಬುದನ್ನೇ ಮರೆಯಾಗಿಸಿಬಿಟ್ಟಿದೆ.) ಹೀಗೆ ತಾನು ಬ್ರಹ್ಮಚರ್ಯದಲ್ಲಿದ್ದರೂ ಕರ್ತವ್ಯದೃಷ್ಟಿ ಯಿಂದ ತನ್ನ ಮಲತಾಯಿಯ ಮಕ್ಕಳಿಗೆ ವಿವಾಹಮಾಡಿಸಿ ರಾಜ್ಯರಕ್ಷಣೆಯಲ್ಲಿ ಅವರಿಗೆ ಬೆಂಗಾವಲಾಗಿರುತ್ತಾನೆ. ತಮ್ಮಂದಿರು ಮಡಿದ ಬಳಿಕ ವ್ಯಾಸರ ಅನುಗ್ರಹದಿಂದ ಹುಟ್ಟಿದ ಧೃತರಾಷ್ಟ್ರ-ಪಾಂಡು-ವಿದುರ ಇವರುಗಳ ಮತ್ತು ಅನಂತರ ಜನಿಸಿದ ಕೌರವ-ಪಾಂಡವರ ಯೋಗ-ಕ್ಷೇಮಗಳ ನಿರ್ವಹಣೆಯನ್ನೂ ಅಷ್ಟೇ ನಿಷ್ಠೆಯಿಂದ ಮಾಡುತ್ತಾನೆ. ಕುರುಸಿಂಹಾಸನದ ರಕ್ಷಣೆಯನ್ನು ದೇಹದಲ್ಲಿ ಕಿಂಚಿತ್ತು ಬಲ ಇರುವವರೆಗೂ ಬಿಡದೇ ಮಾಡುತ್ತಾನೆ. ಅವನ ಧರ್ಮವೀರತ್ವವು ಅಪ್ರತಿಮವಾದುದು. ಗುರು-ಹಿರಿಯರ ಆಜ್ಞೆ ಶಿರಸಾಮಾನ್ಯವಾದರೂ ಆತನು ಯಾವುದೇ ಭಯದಿಂದಾಗಲೀ, ಪ್ರಲೋಭನದಿಂದಾಗಲೀ ತನ್ನ ಸತ್ಯವ್ರತದಿಂದ ಜಾರುವುದಿಲ್ಲ. ತಮ್ಮಂದಿರು ಮಡಿದ ಬಳಿಕ ವಂಶತಂತುವನ್ನು ಮುಂದುವರಿಸಬೇಕೆಂಬ ತಾಯಿಯ ಪ್ರಾರ್ಥನೆ, ಅಂಬೆಯನ್ನು ವಿವಾಹವಾಗೆಂಬ ಗುರುವಿನ ಆಣತಿ–ಇವೆರಡರ ಪಾಲನೆ ಅತ್ಯಂತಸುಖಕರವಾಗಿದ್ದುವು. ಹಿರಿಯರ ಆಜ್ಞೆಯ ಪಾಲನೆ, ಆಪದ್ಧರ್ಮ–ಮುಂತಾದ ಕಾರಣಗಳನ್ನು ಹೇಳಿದ್ದರೆ ಅದರಿಂದ ಅಪಕೀರ್ತಿಯೂ

ಉಂಟಾಗುತ್ತಿರಲಿಲ್ಲ. ಭಯಕ್ಕೂ ಕಾರಣವಿರಲಿಲ್ಲ. ಆದರೆ ಅದರಿಂದ ಧರ್ಮದ ಎಳೆ ಕಿತ್ತುಹೋಗುತ್ತದೆ–ಎಂಬ ಕಾರಣದಿಂದ ಅವನು ಅದನ್ನು ಆದರಿಸುವುದಿಲ್ಲ. **"ನ ಭಯಾದ್ವಾಸವಸ್ಯಾಪಿ ಧರ್ಮಂ ಜಹ್ಯಾಂ ಮಹಾವ್ರತ"** (ಉದ್ಯೋಗ 178,46) ಇಂತಹ ವ್ರತನಿಷ್ಠೆಯಿಂದಲೇ ಆತನು 'ಅಚ್ಯುತ' ಎಂಬ ಹೆಸರನ್ನೂ ಗಳಿಸಿದನು.

ಹೀಗೆ ಅಪ್ರತಿಮಪರಾಕ್ರಮೀ, ಧರ್ಮಿಷ್ಠ, ಮಹಾಕ್ಷತ್ರಿಯನಾಗಿದ್ದಂತೆಯೇ ಭಕ್ತಿ-ಜ್ಞಾನ-ವೈರಾಗ್ಯಗಳಲ್ಲಿ ಈತನು ಮಹರ್ಷಿಕಲ್ಪನೂ ಆಗಿದ್ದನು. 'ಶ್ರೀಕೃಷ್ಣನು ಸಾಕ್ಷಾತ್ ಪರಬ್ರಹ್ಮ' **"ನರಾಕೃತಿಃ ಪರಂ ಬ್ರಹ್ಮ"** ಎಂಬ ಸತ್ಯವನ್ನು ಸದಾ ಸ್ಮರಿಸುತ್ತಾ ಕಾಲಕಾಲದಲ್ಲಿ ಈ ತತ್ತ್ವವನ್ನು ಇತರರಿಗೂ ವೀರ್ಯವತ್ತಾದ ಮತ್ತು ಹೃದಯಂಗಮವಾದ ರೀತಿಯಲ್ಲಿ ಬೋಧಿಸುತ್ತಿದ್ದ ಪರಮಭಾಗವತೋತ್ತಮ ಭೀಷ್ಮ. ಈ ದೃಷ್ಟಿಯಿಂದ ಈತನು ಧರ್ಮಜನಿಗೆ ಉಪದೇಶಿಸಿದ 'ವಿಷ್ಣುಸಹಸ್ರನಾಮ', ಸ್ವಾನುಭವಗೀತೆಯಾದ 'ಭೀಷ್ಮಸ್ತವರಾಜ' ಇವು ಭಾರತಮಹೋದಧಿಯ ಮಹಾರತ್ನಗಳಲ್ಲಿ* ಪರಿಗಣಿತವಾಗಿವೆ. ಅಂತ್ಯಕಾಲದಲ್ಲಿ ಈತನು ಅನುಭವಿಸಿದ ಕೃಷ್ಣಸಾಯುಜ್ಯವೂ ಈ ಭಕ್ತಿಗೆ ಕಲಶಪ್ರಾಯವಾಗಿದೆ. ಜ್ಞಾನ-ವಿಜ್ಞಾನ ನಿಧಿ ಮತ್ತು ಅದ್ಭುತ ಸಿದ್ಧಪುರುಷ ಈ ಭೀಷ್ಮ. ಈತ ಹುಟ್ಟಿನಿಂದಲೇ ಜ್ಞಾನೀ. **"ಜನ್ಮಾಂತರೇ ಕೃತಾಭ್ಯಾಸಾತ್ ಸ್ವಯಂ ತತ್ತ್ವಂ ಪ್ರಕಾಶತೇ"** ಜೀವನದಲ್ಲಿಯೂ ಬ್ರಹ್ಮಚರ್ಯ-ಯೋಗಬಲಗಳಿಂದ ಜ್ಞಾನವನ್ನು ಬೆಳೆಸಿಕೊಂಡವನು. ಶರಪಂಜರದಲ್ಲಿ ಮಲಗಿದ್ದಾಗ ಶ್ರೀಕೃಷ್ಣನ ಅನುಗ್ರಹದಿಂದ ಸರ್ವಜ್ಞತ್ವದ ವರವನ್ನು ಪಡೆದು ಈತನು ಧರ್ಮರಾಜನಿಗೆ ಉಪದೇಶಿಸಿದ ಧರ್ಮಾಮೃತವು ಮಹಾಭಾರತದ ಒಂದು ಪರ್ವವನ್ನೇ ತುಂಬಿಕೊಂಡಿದೆ. ಇದಕ್ಕೆ ಹಿಂದೆಯೂ ಈತನು ತಪಸ್ಸು, ಗುರುಶುಶ್ರೂಷೆಗಳಿಂದ ಜ್ಞಾನ-ವಿಜ್ಞಾನನಿಧಿಯನ್ನು ವಶಪಡಿಸಿಕೊಂಡಿದ್ದವನು. ಈ ಸಂದರ್ಭದಲ್ಲಿ ಶ್ರೀರಂಗಮಹಾಗುರುಗಳು ಅಪ್ಪಣೆಕೊಡಿಸಿದ ಹೇಳಿಕೆಯೊಂದನ್ನು ನೆನೆಯಬಹುದು. "ಒಬ್ಬೊಬ್ಬ ಮಹರ್ಷಿಯು ತನ್ನ ತಪಸ್ಸಿನ ಫಲವಾಗಿ ತತ್ತ್ವದ

---

* **ಗೀತಾ ಸಹಸ್ರನಾಮೈವ ಸ್ತವರಾಜೋಽಹ್ಯನುಸ್ಮೃತಿಃ।
ಗಜೇಂದ್ರಮೋಕ್ಷಣಂ ಚೈವ ಪಂಚ ರತ್ನಾನಿ ಭಾರತೇ ॥**

ಒಂದೊಂದು ಕ್ಷೇತ್ರದಲ್ಲಿ ವಿಶೇಷಯೋಗ್ಯತೆಯನ್ನು ಪಡೆದಿದ್ದನು. ಆದರೆ ಭೀಷ್ಮನು ಇಂತಹ ನೂರಾರು ಮಹರ್ಷಿಗಳನ್ನು ತನ್ನ ಸಭೆಗೆ ಬರಮಾಡಿ ಕೊಂಡು ಅವರಿಂದ ಧರ್ಮೋಪದೇಶವನ್ನು ಗ್ರಹಿಸಿದ್ದರಿಂದ ಆ ಎಲ್ಲ ಮಹರ್ಷಿಗಳ ಜ್ಞಾನ-ವಿಜ್ಞಾನಗಳೂ ಈ ಒಬ್ಬ ವ್ಯಕ್ತಿಯಲ್ಲಿ ನೆಲೆಸಿದ್ದುವು." ತಂದೆಯ ಅನುಗ್ರಹದಿಂದ ಈತನು ಪಡೆದಿದ್ದ "ಸ್ವಚ್ಛಂದಮರಣ"ದ ಸಿದ್ಧಿ ಮತ್ತು ಅದನ್ನವನು ಉತ್ತರಾಯಣದಲ್ಲಿ ದೇಹತ್ಯಾಗಮಾಡಲು ಬಳಸಿ ಕೊಂಡದ್ದೂ ಪ್ರಸಿದ್ಧವಾಗಿದೆ.

ದುಷ್ಟರಾದ ದುರ್ಯೋಧನಾದಿಗಳು ಧರ್ಮರಾಜನೊಡನೆ ಸೌಭ್ರಾತ್ರ ದಿಂದಿದ್ದು ಧರ್ಮಮಾರ್ಗದಲ್ಲಿ ಬರುವಂತೆ ಮಾಡಲು ಭೀಷ್ಮನು ಸರ್ವ ಪ್ರಯತ್ನವನ್ನೂ ಮಾಡುತ್ತಾನೆ. ಕೌರವರು-ಪಾಂಡವರು ಇಬ್ಬರಲ್ಲೂ ಇವನಿಗೆ ಸಮನಾದ ವಾತ್ಸಲ್ಯವಿದ್ದರೂ ಪಾಂಡವರು ಧರ್ಮಿಷ್ಠರೆಂಬುದು ಖಚಿತ ವಾಗಿದ್ದುದರಿಂದ ಹೃದಯವನ್ನು ಅವರಿಗೆ ಒಪ್ಪಿಸಿ, ಅವರ ವಿಜಯಕ್ಕಾಗಿ ಪ್ರಾರ್ಥನೆ ಸಲ್ಲಿಸುತ್ತಿದ್ದುದು* ಸಹಜವೇ ಆಗಿದೆ. ಆದರೆ ಕೌರವರ ಅನ್ನವನ್ನು ತಿಂದಿದ್ದರಿಂದ ಆ ಅನ್ನದ ಋಣವನ್ನು ತೀರಿಸಲು ಶರೀರವನ್ನು ಅವರಿಗೇ ಕೊಟ್ಟುಕೊಂಡು ಅವರ ಪರವಾಗಿಯೇ ಯುದ್ಧಮಾಡಿದನು.

ದುರಹಂಕಾರದವನಾದ ದುರ್ಯೋಧನನು ದ್ರೌಪದೀವಸ್ತ್ರಾಪಹರಣ ದಂತಹ ನೀಚಕೃತ್ಯವನ್ನು ಮಾಡಿದಾಗಲೂ ಭೀಷ್ಮನು ವಹಿಸಿದ ಮೌನ ಮತ್ತು ದ್ರೌಪದಿಯು ಸಭೆಯಲ್ಲಿ ಕೇಳುವ ಪ್ರಶ್ನೆಗಳಿಗೆ ಇವನು ಕೊಡುವ ಉತ್ತರಗಳು ಒಗಟೆಯಂತಿದ್ದು ಭಗವನ್ಮಹಿಮೆಯ ಪ್ರಕಾಶನಕ್ಕೆ ಎಡೆಮಾಡಿಕೊಡುತ್ತದೆ. ತಾನು ದುರ್ಯೋಧನನ ಪಕ್ಷದಿಂದ ಯುದ್ಧಮಾಡುವುದಕ್ಕೆ ಕಾರಣವನ್ನು ಹೇಳುತ್ತಾ :

**ಅರ್ಥಸ್ಯ ಪುರುಷೋ ದಾಸೋ ದಾಸಸ್ತ್ವರ್ಥೋ ನ ಕಸ್ಯಚಿತ್ ।**
**ಇತಿ ಸತ್ಯಂ ಮಹಾರಾಜ ಬದ್ಧೋಽಸ್ಮ್ಯರ್ಥೇನ ಕೌರವೈಃ ॥**
**ಅತಸ್ತ್ವಾಂ ಕ್ಲೀಬವದ್ವಾಕ್ಯಂ ಬ್ರವೀಮಿ ಕುರುನನ್ದನ ।**

(ಭೀಷ್ಮ-43/41-42)

---

* ಅಹನ್ಯಹನಿ ಪಾರ್ಥಾನಾಂ ವೃದ್ಧಃ ಕುರುಪಿತಾಮಹಃ ।
ಜಯೋಽಸ್ತು ಪಾಂಡುಪುತ್ರಾಣಾಮಿತ್ಯೂಚುರರಿಂದಮಮ್ ॥ (ಭೀಷ್ಮ-೧೭-೬)

“ಮನುಷ್ಯನು ಹಣಕ್ಕೆ ದಾಸ. ಆದರೆ ಹಣವು ಯಾರಿಗೂ ದಾಸನಲ್ಲ. ಕೌರವರು ನನ್ನನ್ನು ಹಣದಿಂದ ಕಟ್ಟಿಹಾಕಿದ್ದಾರೆ. ಆದ್ದರಿಂದ ನಪುಂಸಕನಂತೆ ನಿನ್ನೊಡನೆ ಮಾತನಾಡುತ್ತಿದ್ದೇನೆ”–ಎನ್ನುತ್ತಾನೆ ಭೀಷ್ಮ. (‘ಮಹಾರಾಜ!” ಎಂದು ಧರ್ಮರಾಜನನ್ನು ಸಂಬೋಧಿಸಿರುವುದರಿಂದ ಯುದ್ಧದಲ್ಲಿ ಜಯಗಳಿಸಿ, ಅವನೇ ರಾಜನಾಗುವನೆಂಬುದು ಧ್ವನಿತವಾಗಿದೆ ಭೀಷ್ಮರ ಮಾತಿನಲ್ಲಿ.)

ಮನಸ್ಸು ಪಾಂಡವರದು. ಆಶೀರ್ವಾದ ಅವರಿಗೆ, ಆದರೆ ಶರೀರ ದುರ್ಯೋಧನನಿಗೆ–ಹೀಗೆ ಶರೀರದ ಕೆಲಸ ಒಂದು ಕಡೆಗೆ, ಮನಸ್ಸಿನ ಕೆಲಸ ಮತ್ತೊಂದು ಕಡೆಗೆ ಇರುವುದು–ಸಾಮಾನ್ಯವಾಗಿ ಇದು ದುರಾತ್ಮರ ರೀತಿಯೇ ಆಗುವುದಲ್ಲಾ?–ಎಂಬ ಪ್ರಶ್ನೆಯೂ ಇಲ್ಲಿ ಏಳುತ್ತದೆ. **‘ಕರ್ಮಣ್ಯೇಕಂ ವಚಸ್ಯೇಕಂ ಮನಸ್ಯೇಕಂ ದುರಾತ್ಮನಾಂ’** ಆದರೆ ಇಲ್ಲಿಯದು ಒಂದು ವಿಚಿತ್ರಪ್ರಸಂಗ. ಇಲ್ಲಿ ಎರಡು ಧರ್ಮಗಳಿಗೆ ತಿಕ್ಕಾಟವಿದೆ. ಉಪ್ಪಿನ ಋಣ ತೀರಿಸುವುದು ವೈಯಕ್ತಿಕವಾದ ಧರ್ಮ. ಧರ್ಮಿಷ್ಠರಾದ ಪಾಂಡವರಿಗೇ ಸಹಾಯಮಾಡುವುದು ರಾಷ್ಟ್ರೀಯವಾಗಿ ಧರ್ಮರಕ್ಷಣೆಮಾಡುವ ಧರ್ಮ. ಇವೆರಡರಲ್ಲಿ ಮೊದಲನೆಯದನ್ನು ಭೀಷ್ಮನು ಆರಿಸಿಕೊಂಡನು. ಇಂತಹುದೇ ಒಂದು ಪ್ರಸಂಗದಲ್ಲಿ ವಿಭೀಷಣನು ಎರಡನೆಯ ಬಗೆಯ ಧರ್ಮವನ್ನು ಆಶ್ರ ಯಿಸಿ, ಶ್ರೀರಾಮನ ಪಕ್ಷವನ್ನು ಸೇರಿದನು. ಹೀಗೆ ಪ್ರಬಲವಾಗಿರುವ ಎರಡು ಧರ್ಮಗಳಲ್ಲಿ ತಮಗೆ ಕಾಲ-ದೇಶ-ಪರಿಣಾಮಗಳ ದೃಷ್ಟಿಯಿಂದ ಯುಕ್ತವಾಗಿ ಕಂಡುಬಂದುದನ್ನು ಆ ಇಬ್ಬರು ಧರ್ಮಿಷ್ಠರು ಆರಿಸಿಕೊಂಡರು. ನಮ್ಮ ಸಂಕುಚಿತವಾದ ಜ್ಞಾನದಿಂದ ಇವರಲ್ಲಿ ಯಾರೊಬ್ಬರನ್ನೂ ಧರ್ಮಭ್ರಷ್ಟರೆಂದು ಜರೆದರೂ ನಾವೇ ಧರ್ಮಭ್ರಷ್ಟರಾಗುತ್ತೇವೆ. ಭೀಷ್ಮನು ಹೀಗೆ ಕೌರವ ಪಕ್ಷವನ್ನು ವಹಿಸಿದ್ದರಲ್ಲಿ ಭೂಭಾರಾವತರಣಾರ್ಥವಾಗಿ ಅವತರಿಸಿದ್ದ ಶ್ರೀಕೃಷ್ಣ ಪರಮಾತ್ಮನ ಸಂಕಲ್ಪವೂ ಪ್ರೇರಕವಾಗಿತ್ತೆಂಬುದನ್ನು ಮರೆಯಬಾರದು. ಭೂಮಿಗೆ ಭಾರವಾಗಿದ್ದ ಜನರು ಕೌರವರ ಸೇನೆಯಲ್ಲಿ ಇದ್ದಂತೆಯೇ ಪಾಂಡ ವರ ಸೇನೆಯಲ್ಲಿಯೂ ಹೇರಳವಾಗಿದ್ದರು. ಅವರನ್ನು ಧ್ವಂಸಮಾಡಿಸುವುದ ಕ್ಕೋಸ್ಕರವೇ ಭೀಷ್ಮನನ್ನು ಭಗವಂತನು ಪಾಂಡವರಿಗೆ ವಿರುದ್ಧಪಕ್ಷದಲ್ಲಿಯೇ

ಉಳಿಯುವಂತೆ ಪ್ರೇರಿಸಿದನೆಂದು ತಿಳಿಯುವುದು ದಾರ್ಶನಿಕದೃಷ್ಟಿಯಿಂದ ಸಂಗತವಾಗುತ್ತದೆ.

'ಭೀಷ್ಮ' ಎಂಬ ಹೆಸರನ್ನು ಉಚ್ಚರಿಸಿದೊಡನೆಯೇ ಅವನ ಭೀಷ್ಮಪ್ರತಿಜ್ಞೆ ನೆನಪಿಗೆ ಬರುವುದಲ್ಲದೇ–ಅವನು ಶತ್ರುಭೀಕರ ಎಂಬುದೂ ನೆನಪಿಗೆ ಬರಬೇಕು. ಒಳಗಿನ ಮತ್ತು ಹೊರಗಿನ ಶತ್ರುಗಳಿಬ್ಬರೂ ಅವನ ಸ್ಮರಣೆ ಬಂದೊಡನೆಯೇ ಪಲಾಯನಸೂಕ್ತವನ್ನು ಪಾರಾಯಣಮಾಡುತ್ತಿದ್ದರು.*

ಭೀಷ್ಮನ ಮಹಾಗುಣಗಳನ್ನು ಸಾಮಾನ್ಯರಾದ ನಾವು ಹೊಗಳುವುದು ಹಾಗಿರಲಿ. ದೇವರ್ಷಿ-ಮಹರ್ಷಿಗಳೂ ಮತ್ತು ಆದಿಋಷಿಯಾದ ನಾರಾಯಣನೂ ಮುಕ್ತಕಂಠದಿಂದ ನಾನಾಸಮಯಗಳಲ್ಲಿ ಕೊಂಡಾಡುತ್ತಾರೆ. ನಮಗಿಂತಲೂ ಉತ್ತಮರು ಹೊಗಳಿದರೆ ಅದಕ್ಕೆ ದೊಡ್ಡ ಬೆಲೆ! 'ಪ್ರಾಯಃ ಪ್ರತ್ಯಯಮಾದತ್ತೇ ಸ್ವಗುಣೇಷೂತ್ತಮಾದರಃ'

[ಕುಮಾರಸಂಭವಃ ಸರ್ಗ-೬]

**ಶ್ರೋತುಮಿಚ್ಛಸಿ ಚೇದ್ಧರ್ಮಾನ್ ನಿಖಿಲೇನ ನರಾಧಿಪ ।**
**ಪ್ರೇಹಿ ಭೀಷ್ಮಂ ಮಹಾಬಾಹೋ ವೃದ್ಧಂ ಕುರುಪಿತಾಮಹಮ್ ॥**

**ಸ ತೇ ಸರ್ವರಹಸ್ಯೇಷು ಸಂಶಯಾನ್ಮನಸಿ ಸ್ಥಿತಾನ್ ।**
**ಛೇತ್ತಾ ಭಾಗೀರಥೀಪುತ್ರಃ ಸರ್ವಜ್ಞಃ ಸರ್ವತತ್ತ್ವವಿತ್ ॥**

**ಸಾಕ್ಷಾದ್ದದರ್ಶ ಯೋ ದೇವಾನ್ಸರ್ವಾನ್ ಶಕ್ರಪುರೋಗಮಾನ್ ।**
**ಯಸ್ಯ ಬ್ರಹ್ಮರ್ಷಯಃ ಪುಣ್ಯಾಃ ನಿತ್ಯಮಾಸನ್ಸಭಾಸದಃ ॥**
**ಯಸ್ಯ ನಾವಿದಿತಂ ಕಿಂಚಿತ್ ಜ್ಞಾನಂ ಜ್ಞೇಯೇಷು ವಿದ್ಯತೇ ॥**

ಶಾಂತಿ-ಅಧ್ಯಾಯ ೨೨

'ಮಹಾರಾಜ! ಧರ್ಮಗಳೆಲ್ಲವನ್ನೂ ತಿಳಿಯುವ ಇಚ್ಛೆಯಿದ್ದರೆ ವೃದ್ಧನೂ ಕುರುಪಿತಾಮಹನೂ ಆದ ಭೀಷ್ಮನ ಬಳಿಗೆ ಹೋಗು. ಸರ್ವಜ್ಞನೂ ಸರ್ವತತ್ತ್ವಗಳನ್ನೂ ಬಲ್ಲವನೂ ಆದ ಗಂಗೆಯ ಮಗನು ನಿನ್ನ ಮನಸ್ಸಿನಲ್ಲಿ

---

* ಸರ್ವೇಷಾಂ ಬಹಿರನ್ತಃಶತ್ರೂಣಾಂ ಭಯಹೇತುಃ ಭೀಷ್ಮಃ
ಮೋಕ್ಷಧರ್ಮಾದೀನಾಂ ಪ್ರವಕ್ತಾ ಸರ್ವಜ್ಞಃ

ಶ್ರೀಶಂಕರಾಚಾರ್ಯರ ವಿಷ್ಣುಸಹಸ್ರನಾಮದ ಭಾಷ್ಯ

ರುವ ಎಲ್ಲ ರಹಸ್ಯಗಳ ಬಗ್ಗೆ ಇರುವ ಸಂಶಯವನ್ನೂ ಕತ್ತರಿಸಿಹಾಕುವನು. ಅವನು ಇಂದ್ರನೇ ಮೊದಲಾದ ಎಲ್ಲ ದೇವತೆಗಳನ್ನೂ ಸಾಕ್ಷಾತ್ತಾಗಿ ಕಂಡ ವನು. ಪುಣ್ಯರಾದ ಬ್ರಹ್ಮರ್ಷಿಗಳು ಸದಾ ಆತನ ಸಭಾಸದರಾಗಿರುತ್ತಿದ್ದರು. ಅವನಿಗೆ ತಿಳಿಯಬೇಕಾದ ವಿಷಯಗಳಲ್ಲಿ ತಿಳಿಯದೇ ಇರುವ ಜ್ಞಾನವೂ ಏನೂ ಇರುವುದಿಲ್ಲ'–ಎಂದು ಭಗವಾನ್ ವೇದವ್ಯಾಸರು ಧರ್ಮರಾಜನಿಗೆ ಹೇಳುತ್ತಾರೆ.

ದೇವರ್ಷಿಗಳಾದ ನಾರದರು '**ಕೃತ್ಸ್ನಾನ್ ಹಿ ವಿವಿಧಾನ್ಧರ್ಮಾನ್ ಚಾತುರ್ವರ್ಣ್ಯಸ್ಯ ವೇತ್ತ್ಯಯಮ್ । ತಚ್ಛೀಘ್ರಮುಪಯುಙ್ಕ್ಷ್ವೇಧ್ವಂ ಸಂಶಯಾನ್ಮನಸಿ ಸ್ಥಿತಾನ್** (ಶಾಂತಿ-ಅಧ್ಯಾಯ ೫೪) ಈತನು ನಾಲ್ಕು ವರ್ಣಗಳ ಬಗೆ-ಬಗೆಯ ಧರ್ಮಗಳೆಲ್ಲವನ್ನೂ ಅರಿತಿದ್ದಾನೆ. ಆದುದರಿಂದ ಮನಸ್ಸಿನಲ್ಲಿರುವ ಸಂಶಯಗಳನ್ನೆಲ್ಲಾ ಬೇಗನೇ ಈತನಿಂದ ಪರಿಹರಿಸಿ ಕೊಳ್ಳಿರಿ'–ಎಂದು ಈತನ ಬಗೆಗೆ ಶ್ಲಾಘನೆಮಾಡಿದ್ದಾರೆ.

"ಮಹಾತೇಜಸ್ವಿಯಾದ ಭೀಷ್ಮನು ಬುದ್ಧಿವಂತನು. ದಿವ್ಯಾಸ್ತ್ರಗಳನ್ನು ಬಲ್ಲವನು. ಅಂಗಸಹಿತವಾದ ನಾಲ್ಕು ವೇದಗಳನ್ನೂ ಬಲ್ಲವನು. ಧರ್ಮಿಷ್ಠ ರಲ್ಲಿ ಶ್ರೇಷ್ಠನಾದ ಆತನು ಭೂತ-ಭವಿಷ್ಯದ್ವರ್ತಮಾನಗಳೆಲ್ಲವನ್ನೂ ತಿಳಿದಿ ದ್ದಾನೆ. ಆದುದರಿಂದ ನನ್ನ ಮನಸ್ಸು ಅವನಲ್ಲಿ ಲಗ್ನವಾಗಿದೆ. ಕುರು ಧುರಂಧರನಾದ ಆ ಭೀಷ್ಮನು ಮರಣಹೊಂದಿದೊಡನೆಯೇ ಜ್ಞಾನಗಳೆಲ್ಲಾ ಕಡಿಮೆಯಾಗಿಬಿಡುತ್ತವೆ. ಆದುದರಿಂದ ಅವನ ಬಳಿಗೆ ಹೋಗೆಂದು ನಾನು ಪ್ರೇರಿಸುತ್ತಿದ್ದೇನೆ"–ಎಂಬುದಾಗಿ ಸಾಕ್ಷಾತ್ ಭಗವಂತನೇ ಹೇಳಿದ್ದಾನೆ.

**ದಿವ್ಯಾಸ್ತ್ರಾಣಿ ಮಹಾತೇಜಾಃ ಯೋ ಧಾರಯತಿ ಬುದ್ಧಿಮಾನ್ ।**
**ಸಾಙ್ಗಾಂಶ್ಚ ಚತುರೋ ವೇದಾನ್ ತಮಸ್ಮಿ ಮನಸಾ ಗತಃ ॥**
**ಸ ಹಿ ಭೂತಂ ಭವಿಷ್ಯಚ್ಚ ಭವಚ್ಚ ಭರತರ್ಷಭ ।**
**ವೇತ್ತಿ ಧರ್ಮಭೃತಾಂ ಶ್ರೇಷ್ಠಃ ತತೋ ಮೇ ತದ್ಗತಂ ಮನಃ ॥**
**ತಸ್ಮಿನ್ನಸ್ತಮಿತೇ ಭೀಷ್ಮೇ ಕೌರವಾಣಾಂ ಧುರಂಧರೇ ।**
**ಜ್ಞಾನಾನ್ಯಲ್ಪೀಭವಿಷ್ಯನ್ತಿ ತಸ್ಮಾತ್ತ್ವಾಂ ಚೋದಯಾಮ್ಯಹಮ್ ॥**

**ಶಾಂತಿ-ಅಧ್ಯಾಯ ೪೬***

---

* ಈ ಅಂಶಗಳನ್ನು ಪರಾಶರಭಟ್ಟರೆಂಬ ಸಂತರು ತಮ್ಮ ಭಗವದ್ಗುಣದರ್ಪಣವೆಂಬ ವಿಷ್ಣುಸಹಸ್ರನಾಮಭಾಷ್ಯದ ಉಪೋದ್ಘಾತದಲ್ಲಿ ಉದಾಹರಿಸಿದ್ದಾರೆ.

ಹೀಗೆ ವರ್ಣಿತವಾದ ಮಹಾಮಹಿಮೆಯುಳ್ಳ ಭೀಷ್ಮನ ಪಾತ್ರವು ಈ ಪರ್ವದ ಆದಿ-ಮಧ್ಯ ಮತ್ತು ಅಂತ್ಯ–ಎಲ್ಲ ಕಡೆಗಳಲ್ಲಿಯೂ ತುಂಬಿಕೊಂಡು ಭೀಷ್ಮಚಾರಿತ್ರ್ಯಮಯವಾಗಿದೆ. ಇದರಲ್ಲಿ ಯಾವುದೇ ಹೇಳಿಕೆ ಅಥವಾ ಘಟನೆ ಬಂದರೂ ಅವುಗಳೆಲ್ಲಕ್ಕೂ ಭೀಷ್ಮನೇ ಕೇಂದ್ರವಾಗುತ್ತಾನೆ. ಅವನು ಕುರು ಕ್ಷೇತ್ರದಲ್ಲಿ ಮಾಡುವ ಸಂಗ್ರಾಮವೂ ಅಷ್ಟೇ ಭೀಷ್ಮವಾಗಿದೆ. ಈ ಕಾರಣ ಗಳಿಂದ ಇಡೀ ಪರ್ವಕ್ಕೆ ಆತನ ನಾಮಾಂಕಿತವನ್ನು ಕೊಟ್ಟಿರುವುದು ಸರ್ವಾತ್ಮನಾ ಉಚಿತವಾಗಿದೆ.

ದಾರ್ಶನಿಕದೃಷ್ಟಿಯಿಂದ ಶ್ರೀಕೃಷ್ಣನು ಇಡೀ ಭಾರತದ ನಾಯಕನಾಗಿ ದ್ದಾನೆ ಮತ್ತು ಭೀಷ್ಮಪರ್ವದಲ್ಲಿ ಅಂತರ್ಗತವಾದ ಭಗವದ್ಗೀತಾಪರ್ವದಲ್ಲಿ ಆತನೇ ಪರಿಪೂರ್ಣಪಾತ್ರನಾಗಿದ್ದಾನೆ. ಆದರೂ ಕಾರ್ಯದೃಷ್ಟಿಯಿಂದ ಕೇಂದ್ರವಾಗಿರುವವನು ಭೀಷ್ಮ. ಆತನ ಈ ಪವಿತ್ರಕಥಾಭಾಗವು ರಸಭರಿತ ವಾದ ಕಾವ್ಯಗುಣಸಂಪತ್ತಿನಿಂದಲೂ ಕಳಕಳಿಸುತ್ತದೆ. ಅರ್ಜುನನ ವಿಷಾದ ಯೋಗದಲ್ಲಿ ಜಿನುಗುತ್ತಿರುವ ಕರುಣರಸ, ಭೀಷ್ಮಾರ್ಜುನಾದಿ ಮಹಾವೀರರ ಯುದ್ಧದಲ್ಲಿ ಎದ್ದುಕಾಣುವ ಉತ್ಸಾಹಸ್ಥಾಯೀಭಾವದ ವೀರರಸ, ಭಗ ವಂತನು ತೋರುವ ವಿಶ್ವರೂಪದರ್ಶನದಲ್ಲಿ ಮತ್ತು ಅತಿರಥರ ಪರಾಕ್ರಮ ಕಾರ್ಯಗಳಲ್ಲಿ ತೋರಿಬರುವ ಅದ್ಭುತರಸ, ಯುದ್ಧದಲ್ಲಿ ಎದ್ದು ಕಾಣುವ ಭಯಾನಕ–ಬೀಭತ್ಸ–ರೌದ್ರರಸಗಳು ಮತ್ತು ಮೋಕ್ಷಶಾಸ್ತ್ರವಾದ ಗೀತೆಯ ಅನುಧ್ಯಾನವು ಉಂಟುಮಾಡುವ ಶಾಂತರಸ–ಇವೆಲ್ಲವೂ ಹರಿದು ಬಂದು ಸೇರುತ್ತಿರುವ ಸಮುದ್ರದಂತಿದೆ–ಈ ಭೀಷ್ಮಪರ್ವ. ಭಕ್ತಶ್ರೇಷ್ಠನಾದ ಭೀಷ್ಮನ ಈ ಮಹಿಮಾಗಾನಗೌರವವು ಆತನ ಹೃದಯೇಶ್ವರನಾದ ಶ್ರೀಕೃಷ್ಣನಿಗೂ ಪ್ರಿಯವೇ ಆಗಿರಬೇಕು. ಭಕ್ತನು ಭಗವಂತನಿಗೆ ಆತ್ಮಭೂತನಲ್ಲವೇ? ಅವರು ಪರಸ್ಪರ ಧ್ಯಾನಮಾಡುವವರೆಂದು ಜ್ಞಾನಿಶ್ರೇಷ್ಠರಾದ ವೇದವ್ಯಾಸರೇ ಅಪ್ಪಣೆಕೊಡಿಸಿದ್ದಾರೆ.

ಭಗವದ್ಗೀತೆಯ ಮೂರನೆಯ ಒಂದು ಭಾಗವು ಈ ಗ್ರಂಥವನ್ನಲಂಕರಿ ಸಿದೆ. ಗೀತಾಚಾರ್ಯನು ಸಾಕ್ಷಾತ್ತಾಗಿಯೂ ಮತ್ತು ತನ್ನ ಭಕ್ತಶ್ರೇಷ್ಠನಾದ ಭೀಷ್ಮನ ಮೂಲಕವೂ ಇಲ್ಲಿಯೂ ತುಂಬಿಕೊಂಡಿದ್ದಾನೆ. ಆದುದರಿಂದ ಆತನ ಗುಣಗಾನ ಮತ್ತು ಅವನ ಅಮೃತವಾಣಿಯಾದ ಭಗವದ್ಗೀತೆಯ

ವಿವೇಚನೆಯು ಈ ಭೂಮಿಕೆಯಲ್ಲಿ ಪ್ರಸ್ತುತವೇ ಆಗಿದ್ದರೂ ಅದನ್ನು ಗೀತೈಕಮಯವಾದ ಮುಂದಿನ ಸಂಪುಟದಲ್ಲಿ ತೆಗೆದುಕೊಳ್ಳುತ್ತೇವೆ.

ಇಲ್ಲಿ ಕೊಟ್ಟಿರುವ ಗೀತಾವ್ಯಾಖ್ಯಾನದ ಬಗೆಗೆ ಮಾತ್ರ ಒಂದು ಮಾತು. ಭಗವದ್ಗೀತೆಗೆ ನೂರಾರು ವ್ಯಾಖ್ಯಾನಗಳುಂಟು. ಆದರೆ ಅವುಗಳಲ್ಲಿನ ಖಂಡನ-ಮಂಡನರೂಪವಾದ ಪವಾಡಗಳಿಗೆ ಇಲ್ಲಿ ಕೈಹಾಕಿಲ್ಲ. ಪದ-ವಾಕ್ಯ-ಪ್ರಮಾಣಗಳು ಅರ್ಥಜ್ಞಾನಕ್ಕೆ ಸ್ವಲ್ಪಮಟ್ಟಿಗೆ ಸಹಾಯಕವಾಗಬಹುದಾದರೂ ಅರ್ಥದ ತೀರ್ಮಾನವಾಗುವುದು ಅನುಭವದಲ್ಲಿಯೇ.

**ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿನ್ದತಿ**

ಎಂದು ಭಗವಂತನೇ ಅಪ್ಪಣೆಕೊಡಿಸುತ್ತಾನೆ. (ಅದನ್ನು ಯೋಗಸಿದ್ಧಿಯುಂಟಾದಾಗ ತನ್ನೊಳಗೆ ತಾನೇ ಕಾಲವಿಶೇಷದಲ್ಲಿ ಅನುಭವಿಸಬೇಕಾದ ವಿಷಯವಾಗಿದೆ.)

ತಮ್ಮ ಸಾಧನೆಗೆ ಒಪ್ಪಿಗೆಯಾದ ಅಭಿಪ್ರಾಯವನ್ನು ಗ್ರಹಿಸಿ ಸಾಧನೆ ಮಾಡುವ ಸ್ವಾತಂತ್ರ್ಯವಿರಲೆಂದು ಮುಖ್ಯರಾದ ಆಚಾರ್ಯರ ವ್ಯಾಖ್ಯಾನದ ಪ್ರಮೇಯಭಾಗಗಳನ್ನು ಸಂಕ್ಷಿಪ್ತವಾಗಿ ಕೊಟ್ಟಿದೆ. ಇದು ಓದುಗರಿಗೆ ಹಿತವೂ ಮತ್ತು ಪ್ರಿಯವೂ ಆಗುವುದೆಂದು ನಮ್ಮ ಹಾರೈಕೆ.

ಸತ್ಯಧೃತಿಯಾದ ಭೀಷ್ಮನ ಮತ್ತು ಅವನ ಹೃದಯಪ್ರಭುವಾದ ಸತ್ಯಜ್ಞಾನಾನಂತಸ್ವರೂಪಿಯಾದ ಶ್ರೀಕೃಷ್ಣನ ಅನುಗ್ರಹದಿಂದ ಈ ಗ್ರಂಥಕ್ಕೆ ಸನ್ಮಂಗಲವು ದೊರೆಯಲೆಂದು ಆಶಂಸೆಮಾಡುತ್ತೇವೆ.

**ಓಂ ನಮೋ ನಾರಾಯಣಾಯ**

ಬೆಂಗಳೂರು.
2-7-1977 **—ಹೆಚ್. ಎಸ್. ವರದದೇಶಿಕಾಚಾರ್ಯರಂಗಪ್ರಿಯ**

# ಮಹಾಭಾರತ-ಭೀಷ್ಮಪರ್ವ : ಹನ್ನೆರಡನೆಯ ಸಂಪುಟದ ವಿಷಯಾನುಕ್ರಮಣಿಕೆ

| ಅಧ್ಯಾಯ | ವಿಷಯಗಳು | ಪುಟಸಂಖ್ಯೆ |
|---|---|---|

ಶ್ರೀಮದ್ಭವದ್ಗೀತಾಪರ್ವ

## ದ್ವಿತೀಯ ಮುದ್ರಣದ ಪ್ರಸ್ತಾವನೆ

ತಿರುಮಲೆ-ತಿರುಪತಿ ದೇವಸ್ಥಾನದ ಎಕ್ಸಿಕ್ಯೂಟಿವ್ ಆಫೀಸರ್ ಆಗಿರುವ ಸನ್ಮಾನ್ಯ ಶ್ರೀ ಪಿ. ವಿ. ಆರ್. ಕೆ. ಪ್ರಸಾದ್‌ರವರ ಮೂಲಕವಾಗಿ ಶ್ರೀರಂಗಸ್ವರೂಪನಾದ ಶ್ರೀ ಶ್ರೀನಿವಾಸನು ಅನುಗ್ರಹಿಸಿದುದರಿಂದ ಈ ಸಂಪುಟವನ್ನು ಛಾಯಾಮುದ್ರಣಕ್ಕೆ ಕೊಡಲು ನಿಶ್ಚಯಿಸಿದೆವು. ಛಾಯಾ ಮುದ್ರಣದಲ್ಲಿ ಇದು ಎರಡನೆಯ ಸಂಪುಟವಾಗಿದೆ. ಛಾಯಾಮುದ್ರಣಕ್ಕಾಗಿ ನಾವು ಹೆಚ್ಚು ಹಣವನ್ನು ತೆರಬೇಕಾಗಿದ್ದರೂ ತಿರುಪತಿ ಶ್ರೀನಿವಾಸನ ದಿವ್ಯಾನುಗ್ರಹದಿಂದ ಐದು ಸಾವಿರ ರೂಪಾಯಿಗಳ ದೇಣಿಗೆಯು ಸಿಕ್ಕುವುದ ರಿಂದ ಭಾರವು ಸ್ವಲ್ಪ ಕಡಿಮೆಯಾದಂತಾಗಿದೆ. ಶ್ರೀಪ್ರಸಾದರು ಇತ್ತಿರುವ ಆಶ್ವಾಸನೆಯಂತೆ ಈ ಮಹಾಕಾರ್ಯಕ್ಕೆ ಇನ್ನೂ ಹೆಚ್ಚಿನ ಸಹಕಾರವು ಶ್ರೀ ಶ್ರೀನಿವಾಸನ ದಿವ್ಯನಿಧಿಯಿಂದ ದೊರಕಬಹುದೆಂಬ ಆಶಯದಿಂದಿರುತ್ತೇವೆ. ಇನ್ನೂ ಕೆಲವು ಸಂಪುಟಗಳನ್ನು ಛಾಯಾಮುದ್ರಣದ ಮೂಲಕವಾಗಿ ಪುನರ್ಮುದ್ರಣಮಾಡಿಸಿ, ತವಕದಿಂದಿರುವ ಗ್ರಾಹಕರಿಗೆ ಕೊಡಬೇಕೆಂದು ನಿಶ್ಚಯಿಸಲಾಗಿದೆ. ಆದರೆ ಛಾಯಾಮುದ್ರಣವೂ ನಾವು ನಿರೀಕ್ಷಿಸಿದಷ್ಟು ಶೀಘ್ರವಾಗಿ ಆಗುತ್ತಿಲ್ಲ. ಮೆ|| ನವೀನ್ ಮುದ್ರಣದವರು ಶ್ರದ್ಧೆವಹಿಸಿ ಕಾರ್ಯಮಾಡುತ್ತಿದ್ದಾರೆ. ಆದರೂ ಅವರಿಗಿರುವ ಕಾರ್ಯದ ಒತ್ತಡದಲ್ಲಿ ನಾವು ನಿರೀಕ್ಷಿಸುವಷ್ಟು ಶೀಘ್ರವಾಗಿ ಮುದ್ರಣಮಾಡಲು ಅವರಿಗೆ ಸಾಧ್ಯ ವಾಗುತ್ತಿಲ್ಲ. ಮುಂದೆಯಾದರೂ ಅವರು ಈ ಮಹಾಕಾರ್ಯಕ್ಕೆ ಆದ್ಯತೆ ಯನ್ನಿತ್ತು ನಮ್ಮ ಕಾರ್ಯವನ್ನು ಸಾಧ್ಯವಾದಷ್ಟು ಬೇಗ ಮುಗಿಸಿಕೊಡುವರೆಂಬ ಭರವಸೆಯಿಂದಿರುತ್ತೇವೆ.

ಈ ಸಂಪುಟವು ಹೊರಬೀಳುವ ವೇಳೆಗೆ ಹದಿನಾಲ್ಕನೆಯ ಸಂಪುಟವೂ ಮುಗಿದಿದ್ದು ಪುನಃ 22 ಸಂಪುಟಗಳಲ್ಲಿ 8 ಸಂಪುಟಗಳು ಇಲ್ಲವಾಗಿವೆ. ಸಂಪುಟಗಳು ಮುಗಿಯುವಷ್ಟು ತ್ವರಿತವಾಗಿ ಪುನರ್ಮುದ್ರಣ ಮಾಡಲು ಸಾಧ್ಯವಾಗುತ್ತಿಲ್ಲ. ಅನಿವಾರ್ಯವಾದ ಈ ಸಾವಕಾಶವನ್ನು ಗ್ರಾಹಕರು ಸಹಿಸಿಕೊಳ್ಳಬೇಕಾಗಿ ಪ್ರಾರ್ಥನೆ.

—ಪ್ರಕಾಶಕರು.

ಶ್ರೀಮಜ್ಜಗದ್ಗುರು ಶಂಕರಾಚಾರ್ಯ ಶ್ರೀಮದ್ರಾಮಚಂದ್ರಾಪುರಮಠಸ್ಥ

**ಶ್ರೀಮದ್ರಾಘವೇಂದ್ರಭಾರತೀ ಶ್ರೀಸ್ವಾಮಿಭಿಃ ।**

ಶ್ರೀಯುತ ಕೆ.ಎಸ್. ಕೌಶಿಕರು, ವ್ಯವಸ್ಥಾಪಕರು, ಶ್ರೀಮನ್ಮಹಾಭಾರತ ಪ್ರಕಾಶನ ಸಮಿತಿ, ತ್ಯಾಗರಾಜನಗರ, ಬೆಂಗಳೂರು-28 ಇವರಿಗೆ

**॥ ಶ್ರೀಮನ್ನಾರಾಯಣಸ್ಮರಣಪುರಸ್ಸರಂ**
**ಸಂದಿಷ್ಟೋಽಯಂ ಸಂದೇಶಃ ॥**

'ಪಂಚರತ್ನಾನಿ ಭಾರತೇ' ಎಂಬ ಉಕ್ತಿಯಂತೆ ಭಗವದ್ಗೀತೆಯು ಮಹಾಭಾರತದಲ್ಲಿರುವ ಪಂಚರತ್ನಗಳಲ್ಲೊಂದಾಗಿದೆ. ಮಹಾಭಾರತದ ಇತರ ಅನೇಕ ಕಡೆಗಳಲ್ಲಿ ಮತ್ತು ಯೋಗವಾಸಿಷ್ಠರಾಮಾಯಣ-ಭಾಗವತಾದಿ ಗ್ರಂಥಗಳಲ್ಲಿ ಯೋಗಶಾಸ್ತ್ರೇ ಮಯಾ ಪ್ರೋಕ್ತಾಃ ಎಂಬ ಉಕ್ತಿಯಂತೆ ಜ್ಞಾನ-ಕರ್ಮ-ಭಕ್ತಿವಿಷಯಗಳು ಅಲ್ಲಲ್ಲಿ ಬರುತ್ತವೆ. ಆದರೆ ಒಂದೇ ಸ್ಥಳದಲ್ಲಿ ಆಧ್ಯಾತ್ಮವಿಷಯಗಳೆಲ್ಲವನ್ನೂ ಕ್ರೋಡೀಕರಿಸಿರುವ ಮತ್ತು ಸಾಕ್ಷಾತ್ ಭಗವಂತನೇ ಹೇಳಿರುವ ಭಾಗವೆಂದರೆ ಭೀಷ್ಮಪರ್ವಾಂತರ್ಗತವಾದ ಭಗವದ್ಗೀತೆ.

ಭಾರತ ದರ್ಶನ ಪ್ರಕಾಶಕರು ಈಗ ಹೊರತರಲಿರುವ ಹನ್ನೆರಡನೆಯ ಸಂಪುಟದಲ್ಲಿ ಭಗವದ್ಗೀತೆಯ ಆರು ಅಧ್ಯಾಯಗಳು ಸೇರಿವೆ. ಸಂಪಾದಕ ಮಂಡಲಿಯವರು ಸಾಮಾನ್ಯಮನುಷ್ಯನಿಗೂ ಸಹ ಅರ್ಥವಾಗುವಂತೆ ವಿವ ರಣೆಯನ್ನು ಕೊಟ್ಟಿರುವುದಲ್ಲದೇ ಕಡೆಯಲ್ಲಿ ತ್ರಿಮತಸ್ಥ ಆಚಾರ್ಯರುಗಳ ಅಭಿಪ್ರಾಯಗಳನ್ನೂ ನಿರೂಪಿಸಿರುವುದು ಸಮಂಜಸವೆಂದು ಭಾವಿಸಿದೆ.

ಇದೇ ರೀತಿಯಲ್ಲಿ ಇವರು ಮುಂದಿನವುಗಳನ್ನೂ ಪ್ರಕಟಿಸಲೆಂದು ಆಶಿಸುತ್ತೇವೆ. ಈ ಮಹಾಕಾರ್ಯವು ಶ್ರೀ ಸೀತಾರಾಮ-ಚಂದ್ರಮೌಳೀಶ್ವರರ ಪರಮಪ್ರಸಾದದಿಂದ ನಿರ್ವಿಘ್ನವಾಗಿ ಸಾಗುತ್ತಿರಲೆಂದು ಹಾರೈಸಿ ಜನತೆಯು ಈ ಪವಿತ್ರಪ್ರಯತ್ನದ ಪ್ರಯೋಜನಪಡೆಯಲೆಂದು ಅಪೇಕ್ಷಿಸುತ್ತೇವೆ.

ಇತಿ ಶ್ರೀಮನ್ನಾರಾಯಣಸ್ಮೃತಯಃ

---

ಮಿತಿ: – ಪಿಂಗಲನಾಮ ಸಂ॥ ದ ಅಧಿಕಾಷಾಢ ಕೃಷ್ಣ ೪ ಸೋಮವಾಸರೇ (ತಾ॥ ೪-೭-೧೯೭೭)

ವಸತಿ :- ತುಂಗಾತೀರಸ್ಥ ತೀರ್ಥಹಳ್ಳಿ ಶ್ರೀಮದ್ರಾಮಚಂದ್ರಾಪುರಮಠೇ

## ತೃತೀಯ ಮುದ್ರಣದ ಪ್ರಸ್ತಾವನೆ

ಪರಮಾತ್ಮನ ದಯೆಯಿಂದ 12ನೆಯ ಸಂಪುಟದ ಮೂರನೆಯ ಆವರ್ತಿಯನ್ನು ಹೊರತರುತ್ತಿದ್ದೇವೆ. ಈ ಸಂಪುಟವು ಮುಗಿಯುವ ವೇಳೆಗೆ ಕಾಗದದ ಬೆಲೆ ಮತ್ತಷ್ಟು ಹೆಚ್ಚಾಗಿದೆ. ಆರೆಂಟು ತಿಂಗಳ ಹಿಂದೆ ಐದು ಟನ್ ಗಳಿಗೆ 58 ಸಾವಿರ ರೂ.ಗಳನ್ನು ಕೊಟ್ಟ ನಾವು ಈಗ ನಾಲ್ಕು ಟನ್ ಕಾಗದಕ್ಕೆ 70 ಸಾವಿರ ರೂ.ಗಳನ್ನು ಕೊಡಬೇಕಾಯಿತು. ಕಾಗದದ ಬೆಲೆ ಈ ವರ್ಷ ಎಷ್ಟು ಹೆಚ್ಚಾಗಿರುವುದೆಂಬುದನ್ನು ವಾಚಕರೇ ಇದರಿಂದ ಊಹಿಸಿಕೊಳ್ಳ ಬಹುದಾಗಿದೆ. ಕಾಗದದ ಜೊತೆಗೆ ಕಾರ್ಡ್‌ಬೋರ್ಡ್, ಕ್ಯಾಲಿಕೋ ಮುಂತಾ ದುವುಗಳ ಬೆಲೆಯೂ ಸಾಕಷ್ಟು ಹೆಚ್ಚಾಗಿದೆ. ಉತ್ಪಾದನಾ ಬೆಲೆಯೇ ನಾವೀಗ ಇಟ್ಟಿರುವ ಬೆಲೆಗಿಂತ ಹೆಚ್ಚಾಗುತ್ತಿದೆ. ಕಾಗದದ ಬೆಲೆಯೂ ಸ್ಥಿರವಾಗಿರುವು ದೆಂದು ಹೇಳಬರುವುದಿಲ್ಲ. ಇಂತಹ ಸಂದರ್ಭದಲ್ಲಿ ದಯಾಮಯನಾದ ಭಗವಂತನೇ ಮಾರ್ಗದರ್ಶಕನಾಗಬೇಕಾಗಿದೆ. ಅವನಿಗೇ ಸಮರ್ಪಿತವಾದ ಈ ಕಾರ್ಯಕ್ಕೆ ಎಲ್ಲಿಂದಾದರೂ ನೆರವು ಒದಗಿಸಿಕೊಟ್ಟು ಕಾಪಾಡುವನೆಂಬ ಭರವಸೆಯೂ ಇದೆ.

ಸಂಪಾದಕಮಂಡಲಿಯ ವಿದ್ವಾಂಸರು ಈ ಸಂಪುಟದ ತಪ್ಪು-ಒಪ್ಪು ಗಳನ್ನು ನೋಡಿಕೊಟ್ಟು ಸಹಕರಿಸಿರುತ್ತಾರೆ. ಇವರಿಗೆ ನಮ್ಮ ಹೃತ್ಪೂರ್ವಕ ವಂದನೆಗಳು.

ಪ್ರಸಕ್ತ ನಮ್ಮಲ್ಲಿ ಈ ಸಂಪುಟವೂ ಸೇರಿ 15 ಸಂಪುಟಗಳು ಸಿಕ್ಕುತ್ತವೆ. ರಾಮಾಯಣದ 8ನೆಯ ಸಂಪುಟದ ಮುದ್ರಣವನ್ನು ಪ್ರಾರಂಭಿಸಲಾಗಿದೆ. ಅದು ಮುಗಿದನಂತರ ಪುನಃ ಮಹಾಭಾರತದ ಸಂಪುಟಗಳನ್ನು ಪುನರ್ಮುದ್ರಣಮಾಡಲಾಗುವುದು.

ದಯಾಮಯನಾದ ಪರಮಾತ್ಮನು ಎಲ್ಲರಿಗೂ ಸುಖ-ಶಾಂತಿಗಳನ್ನಿತ್ತು ಕಾಪಾಡಲಿ.

ಶಾನ್ತಿಃ ಪುಷ್ಟಿಸ್ತುಷ್ಟಿಶ್ಚಾಸ್ತು<br>ಸಮಸ್ತಸನ್ಮಙ್ಗಲಾನಿ ಭವನ್ತು.

—ಪ್ರಕಾಶಕರು.

ಶ್ರೀಮಹಾಗಣಪತಯೇ ನಮಃ ಶ್ರೀಸರಸ್ವತ್ಯೈ ನಮಃ ಶ್ರೀಸದ್ಗುರವೇ ನಮಃ



**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।**
**ದೇವೀಂ ಸರಸ್ವತೀಂ ಚೈವ ತತೋ ಜಯಮುದೀರಯೇತ್ ॥**

# ಶ್ರೀಮನ್ಮಹಾಭಾರತ-ಭೀಷ್ಮಪರ್ವ :
# ಹನ್ನೆರಡನೆಯ ಸಂಪುಟ

೧ನೆಯ ಅಧ್ಯಾಯ ಜಮ್ಬೂಖಣ್ಡವಿನಿರ್ಮಾಣಪರ್ವ

## ಕುರುಕ್ಷೇತ್ರದಲ್ಲಿ ಉಭಯಪಕ್ಷಗಳ ಸೈನಿಕರ ಸಜ್ಜು: ಯುದ್ಧದ ನಿಯಮಾವಳಿಯ ಅಂಗೀಕಾರ

ಜನಮೇಜಯನು ಪ್ರಶ್ನಿಸುತ್ತಾನೆ :

**ಕಥಂ ಯುಯುಧಿರೇ ವೀರಾಃ ಕುರುಪಾಣ್ಡವಸೋಮಕಾಃ ।**
**ಪಾರ್ಥಿವಾಃ ಸುಮಹಾತ್ಮಾನೋ ನಾನಾದೇಶಸಮಾಗತಾಃ ॥೧॥**

"ವೈಶಂಪಾಯನರೇ! ಕೌರವರು, ಪಾಂಡವರು, ಸೋಮಕರು ಮತ್ತು ನಾನಾದೇಶಗಳಿಂದ ಬಂದಿದ್ದ ಮಹಾತ್ಮರಾದ ರಾಜರು ಪರಸ್ಪರವಾಗಿ ಯಾವ ರೀತಿಯಲ್ಲಿ ಯುದ್ಧಮಾಡಿದರು–ಎಂಬುದನ್ನು ವಿವರಿಸಿ ಹೇಳಿರಿ."

"ಮಹಾರಾಜ! ಕುರು-ಪಾಂಡವ-ಸೋಮಕರು ತಪೋಭೂಮಿಯಾದ ಕುರುಕ್ಷೇತ್ರದಲ್ಲಿ ಯುದ್ಧಮಾಡಿದ ರೀತಿಯನ್ನು ಹೇಳುವೆನು, ಕೇಳು. ಮಹಾಬಲಿಷ್ಠರಾದ ಸೋಮಕಸಮೇತರಾದ ಪಾಂಡವರು ಮತ್ತು ಕೌರವರು ತಪೋಭೂಮಿಯಾದ ಕುರುಕ್ಷೇತ್ರಕ್ಕೆ ಬಂದು ಪಾಳಯವನ್ನು ರಚಿಸಿ, ಪ್ರತಿಪಕ್ಷವನ್ನು ಜಯಿಸುವ ಉತ್ಕಟೇಚ್ಛೆಯಿಂದ ಎದುರು-ಬದುರಾಗಿ ನಿಂತುಕೊಂಡರು.

ಮಹಾರಾಜ! ಕುರು-ಪಾಂಡವ-ಸೋಮಕವೀರರೆಲ್ಲರೂ ವೇದಾಧ್ಯಯನಸಂಪನ್ನರಾಗಿದ್ದರು. ಯುದ್ಧವನ್ನೇ ಪ್ರಶಂಸೆಮಾಡುವವರಾಗಿದ್ದರು.

(ಕ್ಷತ್ರಿಯನಾದವನಿಗೆ ಯುದ್ಧಮಾಡುವುದೇ ಮುಖ್ಯಕರ್ತವ್ಯವೆಂಬ ದೃಢ ನಿರ್ಧಾರವು ಅವರಿಗಿದ್ದಿತು.) ಉಭಯಪಕ್ಷಗಳ ಯೋಧರೂ ತಮ್ಮ ಪಕ್ಷಕ್ಕೇ ಜಯವು ಲಭಿಸುವುದೆಂಬ ಆಶಾಭಾವನೆಯಿಂದ ಕೂಡಿದವರಾಗಿ ತಮ್ಮ ಬಲ ದಿಂದಲೇ ಯುದ್ಧದಲ್ಲಿ ಗೆಲುವನ್ನು ಹಾರೈಸುತ್ತಾ ಶತ್ರುಗಳಿಗೆ ಅಭಿಮುಖರಾಗಿ ನಿಂತಿದ್ದರು. ಸಸೈನಿಕರಾದ ಪಾಂಡವರು ದುರ್ಯೋಧನನ ದುರ್ಧರ್ಷವಾದ (ಎದುರಿಸಲಾಗದ) ಮಹಾವಾಹಿನಿಯ ಸಮ್ಮುಖಕ್ಕೆ ಹೋಗಿ ಕುರುಕ್ಷೇತ್ರದ ಪಶ್ಚಿಮದಿಕ್ಕಿನಲ್ಲಿ ಪೂರ್ವಾಭಿಮುಖವಾಗಿ ಉಪಸ್ಥಿತರಾದರು. ಸಮಂತ ಪಂಚಕಕ್ಷೇತ್ರದ ಹೊರವಲಯದಲ್ಲಿ ಕುಂತೀಪುತ್ರನಾದ ಯುಧಿಷ್ಠಿರನು ಯಥಾವಿಧಿಯಾಗಿ ಸಾವಿರಾರು ಶಿಬಿರಗಳನ್ನು ಕಟ್ಟಿಸಿದ್ದನು. ಜನಮೇಜಯ! ಆ ಸಮಯದಲ್ಲಿ ಪೃಥ್ವಿಯಲ್ಲಿದ್ದ ಯುವಕರೆಲ್ಲರೂ ಆ ಮಹಾಯುದ್ಧದಲ್ಲಿ ಭಾಗವಹಿಸಿದ್ದರು. ಅದರಿಂದಾಗಿ ಪೃಥ್ವಿಯೇ ಶೂನ್ಯವಾಗಿ ಕಾಣುತ್ತಿದ್ದಿತು. ಎಲ್ಲ ದೇಶಗಳಲ್ಲಿಯೂ ಬಾಲಕರು, ವೃದ್ಧರು, ಸ್ತ್ರೀಯರು, ಇವರು ಮಾತ್ರವೇ ಉಳಿದುಕೊಂಡಿದ್ದರು. ಆ ಸಮಯದಲ್ಲಿ ಪ್ರಪಂಚವೆಲ್ಲವೂ ಪುರುಷಾಶ್ವರಥ ಕುಂಜರರಹಿತವಾಗಿರುವಂತೆಯೇ ಕಾಣುತ್ತಿದ್ದಿತು. ಜಂಬೂದ್ವೀಪದಲ್ಲಿರುವ ಯಾವ ಯಾವ ಭೂಭಾಗವನ್ನು ಸೂರ್ಯನು ತನ್ನ ಕಿರಣಗಳಿಂದ ಬೆಳಗು ತ್ತಾನೆಯೋ ಆಯಾ ಭೂಭಾಗದ (ಜಂಬೂದ್ವೀಪದ ಸಕಲಭಾಗಗಳ) ಸೈನಿಕ ರೆಲ್ಲರೂ ಆ ಮಹಾಯುದ್ಧದಲ್ಲಿ ಭಾಗವಹಿಸಲು ಬಂದಿದ್ದರು. ಆ ಸಮಯ ದಲ್ಲಿ ಸರ್ವವರ್ಣದವರೂ ಏಕತ್ರ ಮಿಳಿತರಾಗಿದ್ದರು. ಯುದ್ಧಭೂಮಿಯ ಆವರಣವು ಬಹುಯೋಜನಗಳವರೆಗೂ ವಿಸ್ತೃತವಾಗಿದ್ದಿತು. ಆ ಸೈನಿಕರು ಅನೇಕದೇಶಗಳನ್ನೂ, ನದಿಗಳನ್ನೂ, ಪರ್ವತಗಳನ್ನೂ, ವನಗಳನ್ನೂ ಆವರಿಸಿ ಕೊಂಡಿದ್ದರು. ಯುಧಿಷ್ಠಿರರಾಜನು ಪರಿವಾರಸಹಿತರಾದ ಆ ಎಲ್ಲ ರಾಜ ರಿಗೂ ಉತ್ತಮೋತ್ತಮವಾದ ಭಕ್ಷ್ಯ-ಭೋಜ್ಯಾದಿಗಳನ್ನಿತ್ತು ಉಪಚರಿಸುವಂತೆ ಆಜ್ಞಾಪಿಸಿದನು. ರಾತ್ರಿಯ ಕಾಲದಲ್ಲಿ ನಿದ್ರಿಸಲು ಆ ಅಪಾರಸೈನ್ಯಕ್ಕೂ ಯುಧಿಷ್ಠಿರನು ವಿಧ-ವಿಧವಾದ ಹಾಸಿಗೆಗಳನ್ನೂ ಒದಗಿಸಿದ್ದನು. ಯುದ್ಧ ಕಾಲವು ಸಮೀಪಿಸಲಾಗಿ–'ಇವನು ಪಾಂಡವಪಕ್ಷೀಯನು'–ಎಂಬುದನ್ನು ತನ್ನ ಪಕ್ಷದವರು ಸ್ಪಷ್ಟವಾಗಿ ತಿಳಿದುಕೊಳ್ಳಬೇಕೆಂಬ ಅಭಿಪ್ರಾಯದಿಂದ ಯುಧಿಷ್ಠಿರನು ಅನೇಕವಿಧವಾದ ಸಾಂಕೇತಿಕಶಬ್ದಗಳನ್ನು ಸರ್ವರಿಗೂ

ತಿಳಿಯಪಡಿಸಿದನು ಮತ್ತು ಪಾಂಡವಪಕ್ಷೀಯರೆಂದು ಸೂಚಿಸುವ ಸಾಂಕೇತಿಕ ಲಾಂಛನಗಳನ್ನೂ ತನ್ನ ಸೈನಿಕರೆಲ್ಲರಿಗೂ ಹಂಚಿಸಿದನು.

ಅತ್ತಲಾಗಿ ಮಹಾತ್ಮನಾದ ದುರ್ಯೋಧನನು ಪಾರ್ಥನ ರಥದ ಧ್ವಜಾಗ್ರ ವನ್ನು ಕಾಣುತ್ತಲೇ ತನ್ನ ಪಕ್ಷದ ಸಕಲರಾಜರಿಂದೊಡಗೂಡಿ ಧರ್ಮಜನು ರಚಿಸಿಕೊಂಡಿದ್ದ ಸೇನಾವ್ಯೂಹಕ್ಕೆ ಪ್ರತಿಯಾಗಿ ಸೇನಾವ್ಯೂಹವನ್ನು ರಚಿಸಿದನು.

ಶ್ವೇತಚ್ಛತ್ರವನ್ನು ಧೃತರಾಷ್ಟ್ರನ ಮಗನಾದ ದುರ್ಯೋಧನನ ತಲೆಯ ಮೇಲೆ ಹಿಡಿದಿದ್ದರು. ಸಹಸ್ರಗಜಸೈನ್ಯದ ಮಧ್ಯದಲ್ಲಿ ತನ್ನ ತಮ್ಮಂದಿರಿಂದ ಪರಿವೃತನಾಗಿ ದುರ್ಯೋಧನನು ಪರಿಶೋಭಿಸುತ್ತಿದ್ದನು. ಯುದ್ಧತೋಷಿ ಗಳಾದ ಪಾಂಚಾಲರು ದುರ್ಯೋಧನನನ್ನು ನೋಡಿದೊಡನೆಯೇ ಪರಮ ಹೃಷ್ಟರಾಗಿ ಮತ್ತು ಪರಮಪ್ರೀತರಾಗಿ ದೊಡ್ಡ-ದೊಡ್ಡ ಶಂಖಗಳನ್ನು ಊದಿ ದರು. ಮಧುರವಾದ ನಿನಾದವನ್ನುಂಟುಮಾಡುತ್ತಿದ್ದ ಭೇರಿಗಳನ್ನು ಬಾರಿಸಿ ದರು. ಅತ್ಯಂತೋಲ್ಲಾಸದಿಂದ ಕೂಡಿದ್ದ ಆ ತಮ್ಮ ಸೇನೆಯನ್ನು ನೋಡಿ ಪಾಂಡವರು ಸಂತುಷ್ಟಮನಸ್ಕರಾದರು. ಅದೇ ರೀತಿಯಲ್ಲಿ ಶ್ರೀಕೃಷ್ಣನೂ ಸಹ ಸುಪ್ರೀತನಾದನು. ಒಂದೇ ರಥದಲ್ಲಿ ಕುಳಿತಿದ್ದ ಪುರುಷವ್ಯಾಘ್ರರಾದ ವಾಸುದೇವ-ಧನಂಜಯರೂ ಸಹ ಆನಂದತುಂದಿಲರಾಗಿ ದಿವ್ಯವಾದ ತಮ್ಮ ತಮ್ಮ ಶಂಖಗಳನ್ನೂದಿದರು. ಪಾಂಚಜನ್ಯ ಮತ್ತು ದೇವದತ್ತಗಳೆಂಬ ಎರಡೂ ಶಂಖಗಳ ಏಕಮುಖವಾದ ಸುಘೋರಧ್ವನಿಯನ್ನು ಕೇಳಿ ಶತ್ರುಪಕ್ಷದ ಅನೇಕ ಸೈನಿಕರು ಭಯದಿಂದ ವಿಹ್ವಲರಾಗಿ ಮೂತ್ರ-ಪುರೀಷಗಳ ಉತ್ಸರ್ಜನೆಮಾಡಿದರು.

ಯಾವ ರೀತಿಯಲ್ಲಿ ಸಿಂಹದ ಗರ್ಜನೆಯನ್ನು ಕೇಳಿದ ಕೂಡಲೇ ಇತರ ಮೃಗಗಳು ಭಯದಿಂದ ನಡುಗುತ್ತವೆಯೋ–ಅದೇ ರೀತಿಯಲ್ಲಿ ಕೃಷ್ಣಾರ್ಜು ನರ ಏಕಮುಖವಾದ ಶಂಖಧ್ವನಿಯನ್ನು ಕೇಳಿ ಶತ್ರುಪಕ್ಷದ ಸೈನಿಕರು ನಡುಗತೊಡಗಿದರು. ಅವರ ಯುದ್ಧೋತ್ಸಾಹವೇ ಉಡುಗಿಹೋಯಿತು. ಆ ಸಮಯದಲ್ಲಿ ಸೈನಿಕರ ಮಧ್ಯಭಾಗದ ಭೂಪ್ರದೇಶದಿಂದ ಧೂಳೆದ್ದಿತು. ಧೂಳಿನಿಂದ ಆವೃತವಾದ ಕುರುಕ್ಷೇತ್ರದಲ್ಲಿ–'ಯಾರಿದ್ದಾರೆ? ಏನಾಗು ತ್ತಿದೆ?'–ಎಂಬುದಾವುದೂ ತಿಳಿಯುತ್ತಿರಲಿಲ್ಲ. ಸೈನ್ಯದಿಂದ ವ್ಯಾಪ್ತವಾಗಿದ್ದ

ಆ ಪ್ರದೇಶದಲ್ಲಿ ಸರ್ವತ್ರ ಧೂಳಿನ ಹರಡುವಿಕೆಯಿಂದಾಗಿ, ಕ್ಷಣಮಾತ್ರದಲ್ಲಿ ಸೂರ್ಯನೇ ಅಸ್ತಂಗತನಾಗಿಬಿಟ್ಟನೋ–ಎಂಬ ಭ್ರಾಂತಿಯು ಸೈನಿಕರಲ್ಲಿ ಹುಟ್ಟುತ್ತಿರಲಾಗಿ ಎಲ್ಲ ದಿಕ್ಕುಗಳಿಂದಲೂ ಸರ್ವಸೈನಿಕರ ಮೇಲೆ ಪರ್ಜನ್ಯನು ಮಾಂಸ-ರಕ್ತಗಳಿಂದ ಕೂಡಿದ ಮಳೆಯನ್ನು ಸುರಿಸಿದನು. ಆ ದೃಶ್ಯವು ಪರಮಾದ್ಭುತವಾಗಿ ಕಂಡುಬಂದಿತು. ಆ ಸಮಯದಲ್ಲಿ ಮತ್ತೊಂದು ವಿಚಿತ್ರವೂ ನಡೆಯಿತು ; ಜನಮೇಜಯ! ಭೂಮಿಯಲ್ಲಿರುವ ಕಲ್ಲುಗುಂಡು ಗಳನ್ನು ಅಂತರಿಕ್ಷದಲ್ಲಿ ಹಾರಾಡಿಸಬಲ್ಲ ಸುಂಟರಗಾಳಿಯೆದ್ದಿತು. ಆ ಸುಂಟರ ಗಾಳಿಯು ಕೆಳಭಾಗದಲ್ಲಿದ್ದ ಕಲ್ಲುಗಳನ್ನೆತ್ತಿ ಅಲ್ಲಿದ್ದ ಸಾವಿರಾರು ಸೈನಿಕರ ಮೇಲೆ ಸುರಿಸಿಬಿಟ್ಟಿತು. ಅದರಿಂದ ಅನೇಕಸೈನಿಕರು ಗಾಯಗೊಂಡರು. ಜನಮೇಜಯ! ಆದರೆ ಅದ್ಭುತವಾದ ಆ ದೃಶ್ಯದಿಂದಾಗಿ ಉಭಯಸೇನೆಗಳಲ್ಲಿ ಯಾರೂ ಧೃತಿಗೆಡಲಿಲ್ಲ. ಕುರುಕ್ಷೇತ್ರದಲ್ಲಿ ಯುದ್ಧಮಾಡುವ ಸಲುವಾಗಿ ಹರ್ಷೋತ್ಸಾಹಗಳಿಂದ ಸನ್ನದ್ಧವಾಗಿದ್ದ ಆ ಎರಡು ವಾಹಿನಿಗಳೂ ಬಿರುಗಾಳಿಯಿಂದ ಕ್ಷುಭಿತವಾಗಿದ್ದ ಎರಡು ಮಹಾಸಮುದ್ರಗಳಂತೆಯೇ ಕಾಣುತ್ತಿದ್ದುವು. ಯುಗದ ಅಂತ್ಯವು ಸಮೀಪಿಸಿದಾಗ ಎರಡು ಮಹಾಸಮುದ್ರ ಗಳು ಎಲ್ಲೆಮೀರಿ ಉಕ್ಕಿಹರಿದು ಒಂದಕ್ಕೊಂದು ಸೇರಿಕೊಳ್ಳುವಂತೆ ಕೌರವ-ಪಾಂಡವರ ಸೇನೆಗಳು ಒಂದೆಡೆಯಲ್ಲಿ ಸೇರಿದ್ದುವು. ಆ ಸೇನಾಸಂಗಮವು ಪರಮಾದ್ಭುತವಾಗಿ ಕಾಣುತ್ತಿದ್ದಿತು. ಜನಮೇಜಯ! ನಾನು ಹಿಂದೆಯೇ ಒಮ್ಮೆ ಹೇಳಿದಂತೆ ಕೌರವ-ಪಾಂಡವರ ಅದ್ಭುತಸೇನಾಸಂಗ್ರಹದಿಂದಾಗಿ ಪೃಥ್ವಿಯ ಉಳಿದ ಭಾಗವೆಲ್ಲಾ ಶೂನ್ಯವಾಗಿ ಕಾಣುತ್ತಿದ್ದಿತು. ವೃದ್ಧರು ಮತ್ತು ಬಾಲಕರು ಮಾತ್ರವೇ ಪೃಥ್ವಿಯಲ್ಲಿ (ದೇಶಗಳಲ್ಲಿ) ಉಳಿದುಕೊಂಡಿದ್ದರು. ಪೃಥ್ವಿಯಲ್ಲಿ ಪುರುಷರು ಮತ್ತು ಕುದುರೆಗಳು ಇರಲೇ ಇಲ್ಲವೋ ಏನೋ ಎಂಬ ಸಂಶಯವುಂಟಾಗುತ್ತಿದ್ದಿತು. ಆ ಸಮಯದಲ್ಲಿ ಪೃಥ್ವಿಯು ರಥಗಳಿಂದಲೂ ಮತ್ತು ಆನೆಗಳಿಂದಲೂ ವರ್ಜಿತವಾಗಿದ್ದಿತು. (ಪೃಥ್ವಿಯ ಎಲ್ಲ ರಾಜ್ಯಗಳ ಯುವಸಮೂಹವನ್ನೂ, ಅಶ್ವ-ಗಜ-ರಥಸೈನ್ಯಗಳನ್ನೂ ಸಹ ಪಾಂಡವ-ಕೌರ ವರು ಆ ಮಹಾಯುದ್ಧಕ್ಕಾಗಿ ಸಂಗ್ರಹಿಸಿಬಿಟ್ಟಿದ್ದರು.) ಅನಂತರ ಕುರು-ಪಾಂಡವ-ಸೋಮಕಮುಖ್ಯರು ಒಂದೆಡೆಯಲ್ಲಿ ಸೇರಿ ಸಮಾಲೋಚಿಸಿ ಯುದ್ಧಧರ್ಮಗಳನ್ನು ಕುರಿತಾದ ನಿಬಂಧನೆಗಳನ್ನು ಮಾಡಿಕೊಂಡರು.

**ನಿವೃತ್ತೇ ವಿಹಿತೇ ಯುದ್ಧೇ ಸ್ಯಾತ್ಪ್ರೀತಿರ್ನಃ ಪರಸ್ಪರಮ್ ।**
**ಯಥಾಪುರಂ ಯಥಾಯೋಗಂ ನ ಚ ಸ್ಯಾತ್ಕಸ್ಯಚಿತ್ಪುನಃ ॥೨೭॥**

ಧರ್ಮಸಮ್ಮತವಾದ ಈ ಯುದ್ಧವು ನಿಂತನಂತರದಲ್ಲಿ ನಮ್ಮಲ್ಲಿ ಯಾವ ವಿಧವಾದ ದ್ವೇಷಮನೋಭಾವವೂ ಇರಬಾರದು. ನಾವು ಪರಸ್ಪರ ಪ್ರೀತಿಯಿಂದಲೇ ಇರಬೇಕು. ಹಿಂದಿದ್ದಂತೆ, ಪರಸ್ಪರ ಕಾದಾಡಿದಂತೆ– ಯಾರೂ ಯಾರೊಡನೆಯೂ ಶತ್ರುತ್ವದ ಭಾವನೆಯನ್ನಿಟ್ಟುಕೊಳ್ಳಬಾರದು. (ಈ ಶ್ಲೋಕವು ಬಹುಸುಲಭವಾಗಿ ಕಂಡರೂ ಅರ್ಥಮಾಡಲು ಸ್ವಲ್ಪಕಷ್ಟವೇ. ಯುದ್ಧವು ನಿಂತನಂತರದಲ್ಲಿ ; ಪೂರ್ಣಗೊಂಡನಂತರದಲ್ಲಿ ಯಾರೇ ಗೆಲ್ಲಲಿ ಯಾರೇ ಸೋಲಲಿ–ಪರಸ್ಪರದ್ವೇಷವನ್ನು ಬೆಳೆಸಿಕೊಳ್ಳದೆ ಪರಸ್ಪರಪ್ರೀತಿ ಯಿಂದಿರಬೇಕು–ಎಂಬುದು ಪೂರ್ವಾರ್ಧದ ಅರ್ಥವಾಗುತ್ತದೆ. ಒಬ್ಬ ವ್ಯಾಖ್ಯಾನಕಾರರು **ಯುದ್ಧೇ ನಿವೃತ್ತೇ**–ಎಂಬುದಕ್ಕೆ ಪ್ರತಿದಿನ ಸಾಯಂಕಾಲ ಯುದ್ಧವಿರಾಮಸಮಯದಲ್ಲಿ–ಎಂದು ಅರ್ಥಮಾಡಿದ್ದಾರೆ. ಉತ್ತರಾರ್ಧ ದಲ್ಲಿ **ಯಥಾಪರಂ** ಎಂಬ ಪಾಠವು ಅನೇಕ ಪುಸ್ತಕಗಳಲ್ಲಿದೆ. ವ್ಯಾಖ್ಯಾನಕಾರರೂ ಸಹ ಇದೇ ಪಾಠವನ್ನಿಟ್ಟುಕೊಂಡು ಬಹಳ ಕಷ್ಟಪಟ್ಟು ವ್ಯಾಖ್ಯಾನಮಾಡಿರುತ್ತಾರೆ. ಅವರ ವ್ಯಾಖ್ಯಾನದ ಪ್ರಕಾರ ಉತ್ತರಾರ್ಧದ ಅರ್ಥವೇ ಬದಲಾಗುತ್ತದೆ. '**ಯಥಾಯೋಗಂ=ತುಲ್ಯಯೋರ್ಯೋಗಸ್ಯ ಅನತಿಕ್ರಮಣಂ** ಸಮಾನಬಲವುಳ್ಳವರು ಮಾತ್ರವೇ ಪರಸ್ಪರ ಯುದ್ಧಮಾಡಬೇಕೆಂಬ ನಿಯಮದ ಅತಿಕ್ರಮಣವಾಗದಂತೆ. **ಯಥಾ ಪರಂ=ಯಥಾ ಯೇನ ಪ್ರಕಾರೇಣ ಅಪರಂ ಅನುತ್ಕೃಷ್ಟಂ ಅನ್ಯಾಯ್ಯಂ ಇತ್ಯರ್ಥಃ। ತಥಾ ನ ಕಸ್ಯಚಿತ್ತುಲ್ಯಯೋಗಾತಿಕ್ರಮಃ ಸ್ಯಾದಿತಿ ಭಾವಃ** ಅನ್ಯಾಯವಾಗದಂತೆ ಅಸಮಾನಬಲವುಳ್ಳವರು ಪರಸ್ಪರ ಕಾದಾಡದಂತೆ ಯಾವನೊಬ್ಬನೂ ಬಲದಲ್ಲಿ ತನ್ನನ್ನು ಮೀರಿಸಿರುವವನೊಡನೆ ಯುದ್ಧಮಾಡದಂತೆ ನೋಡಿಕೊಳ್ಳಬೇಕು' ಹೀಗೆ ಅರ್ಥಮಾಡಿರುತ್ತಾರೆ. **ಯಥಾಪರಂ** ಎಂಬ ಪದಕ್ಕೆ ಅವರು ಬಹಳ ಕಷ್ಟಪಟ್ಟು ಅರ್ಥ ಮಾಡಿರುತ್ತಾರೆ. ಭಂಡಾರ್‌ಕರ್ ರಿಸರ್ಚ್ ಸಂಸ್ಥೆಯವರು ಪ್ರಕಾಶಿಸಿರುವ ಭಾರತದಲ್ಲಿ **ಯಥಾಪುರಂ** ಎಂಬುದಾಗಿಯೇ ಇದೆ. ಇಷ್ಟು ಕಷ್ಟಪಟ್ಟಾ ದರೂ ಈ ಅರ್ಥವನ್ನೇಕೆ ಮಾಡಿದರೆಂಬುದು ಊಹೆಗೆ ನಿಲುಕದ ವಿಷಯ.

ಅಸಮಾನಬಲರು ಪರಸ್ಪರವಾಗಿ ಯುದ್ಧಮಾಡಕೂಡದೆಂಬ ನಿಯಮವು ಮುಂದಿನ ಶ್ಲೋಕಗಳಲ್ಲಿ ಇನ್ನೂ ಸ್ಪಷ್ಟವಾಗಿ ವಿಸ್ತಾರವಾಗಿ ಹೇಳಲ್ಪಟ್ಟಿದೆ. ಆದುದರಿಂದ ಈ ಶ್ಲೋಕಕ್ಕೆ ವ್ಯಾಖ್ಯಾನಕಾರರು ಕೊಟ್ಟಿರುವ ಅರ್ಥಕ್ಕೆ ಕಾರಣ ವನ್ನು ಹೀಗೆ ನಿರೂಪಿಸಬಹುದಾಗಿದೆ : 'ಯುದ್ಧದಲ್ಲಿ ಒಂದು ಪಕ್ಷ ನಿರ್ಮೂಲವಾಗಲೇಬೇಕು. ಆದುದರಿಂದ ಯುದ್ಧಾನಂತರದಲ್ಲಿ ಪರಸ್ಪರ ಪ್ರೀತಿಯ ಪ್ರಶ್ನೆಯೇ ಹುಟ್ಟುವುದಿಲ್ಲ. ಆದುದರಿಂದ ದಿನದ ಯುದ್ಧ ಮುಗಿದ ಮೇಲೆ ಮಾತ್ರ ಪರಸ್ಪರ ಪ್ರೀತಿ-ವಿಶ್ವಾಸಕ್ಕೆ ಅವಕಾಶವಿದೆ.' ಯುದ್ಧವು ನಿಂತಮೇಲೆ ಎಂದರೆ 'ಸಾಯಂಕಾಲ' ಎಂಬ ಅರ್ಥವನ್ನು ಸಮರ್ಥಿಸಲು ಪದಗಳಿಲ್ಲದೇ ಇರುವುದರಿಂದ ನಾವು ಯಥಾಶ್ರುತವಾಗಿ ಅರ್ಥಮಾಡಿರು ತ್ತೇವೆ.)

**ವಾಚಾ ಯುದ್ಧಪ್ರವೃತ್ತಾನಾಂ ವಾಚೈವ ಪ್ರತಿಯೋಧನಮ್ ।**
**ನಿಷ್ಕ್ರಾನ್ತಾಃ ಪೃತನಾಮಧ್ಯಾನ್ನ ಹನ್ತವ್ಯಾಃ ಕದಾಚನ ॥೨೮॥**

ಕೇವಲ ವಾಗ್ಯುದ್ಧಮಾಡುವವರೊಡನೆ ವಾಗ್ಯುದ್ಧವನ್ನೇ ಮಾಡಬೇಕು. ಸೈನ್ಯದ ಮಧ್ಯದಿಂದ ಹೊರಟುಹೋದವನನ್ನು ಯಾವ ಕಾರಣದಿಂದಲೂ ಯಾವಾಗಲೂ ಸಂಹರಿಸಬಾರದು.

**ರಥೀ ಚ ರಥಿನಾಂ ಯೋಧ್ಯೋ ಗಜೇನ ಗಜಧೂರ್ಗತಃ ।**
**ಅಶ್ವೇನಾಶ್ವೀ ಪದಾತಿಶ್ಚ ಪಾದಾತೇನೈವ ಭಾರತ ॥೨೯॥**

ರಥಸೈನಿಕನು ಮತ್ತೊಬ್ಬ ರಥಿಕನೊಡನೆಯೇ ಯುದ್ಧಮಾಡಬೇಕು. ಇದೇ ರೀತಿಯಲ್ಲಿ ಗಜಾರೋಹಿಯು ಎದುರುಪಕ್ಷದ ಗಜಸೈನಿಕರೊಡ ನೆಯೂ, ಕುದುರೇಸವಾರನು ಎದುರುಪಕ್ಷದ ಕುದುರೇಸವಾರನೊಡನೆಯೂ, ಪದಾತಿಯು ಎದುರುಪಕ್ಷದ ಕಾಲಾಳಿನೊಡನೆಯೂ ಯುದ್ಧಮಾಡಬೇಕು. (ರಥಿಕನು ಪದಾತಿಯ ಮೇಲಾಗಲೀ–ಗಜಸೈನಿಕನು ಕುದುರೇ ಸವಾರನ ಮೇಲಾಗಲೀ ಯುದ್ಧಮಾಡಬಾರದು.)

**ಯಥಾಯೋಗಂ ಯಥಾಕಾಮಂ ಯಥೋತ್ಸಾಹಂ ಯಥಾಬಲಮ್ ।**
**ಸಮಾಭಾಷ್ಯ ಪ್ರಹರ್ತವ್ಯಂ ನ ವಿಶ್ವಸ್ತೇ ನ ವಿಹ್ವಲೇ ॥೩೦॥**

ಅವನು ತನಗೆ ಸರಿಸಮಾನನಾಗಿದ್ದಾನೆಯೇ? ಅವನಿಗೆ ತನ್ನೊಡನೆ ಯುದ್ಧಮಾಡುವ ಇಚ್ಛೆಯಿದೆಯೇ? ಅವನು ತನ್ನೊಡನೆ ಯುದ್ಧಮಾಡಲು

ಉತ್ಸಾಹವುಳ್ಳವನಾಗಿರುವನೇ? ಅವನಿಗೆ ತನ್ನೊಡನೆ ಯುದ್ಧಮಾಡಲು ಸಾಕಷ್ಟು ಬಲವಿದೆಯೇ?–ಇವುಗಳೆಲ್ಲವನ್ನೂ ಸಮಾಲೋಚಿಸಿ ಎದುರಾಳಿಯನ್ನು ಆರಿಸಿಕೊಳ್ಳಬೇಕು. ತನಗೆ ಅನುರೂಪನಾದವನನ್ನು ಎದುರಿಸಿ ನಿಂತು, ಅವನೊಡನೆ ಮಾತನಾಡಿ–ಅವನೂ ತನ್ನೊಡನೆ ಯುದ್ಧಮಾಡಲು ಸನ್ನದ್ಧನಾಗಿರುವನೆಂಬುದನ್ನು ಮನಗಂಡನಂತರವೇ–ಅವನೊಡನೆ ಯುದ್ಧ ಮಾಡಬೇಕು. ತತ್ಕಾಲದಲ್ಲಿ ಯುದ್ಧನಡೆಯದೆಂದೂ ಅಥವಾ ತನ್ನ ಮೇಲೆ ಯಾರೂ ಶಸ್ತ್ರಪ್ರಯೋಗ ಮಾಡರೆಂದೂ ನಂಬಿ ಯುದ್ಧಕ್ಕೆ ಸಿದ್ಧನಾಗಿಲ್ಲದವನ ಮೇಲೆ ಮತ್ತು ಗಾಬರಿಗೊಂಡಿರುವವನ ಮೇಲೆ ಶಸ್ತ್ರಪ್ರಯೋಗ ಮಾಡಬಾರದು.

**ಏಕೇನ ಸಹ ಸಂಯುಕ್ತಃ ಪ್ರಪನ್ನೋ ವಿಮುಖಸ್ತಥಾ ।**
**ಕ್ಷೀಣಶಸ್ತ್ರೋ ವಿವರ್ಮಾ ಚ ನ ಹನ್ತವ್ಯಃ ಕದಾಚನ ॥೩೧॥**

ಒಬ್ಬ ಯೋಧನು ಮತ್ತೊಬ್ಬ ಯೋಧನ ಮೇಲೆ ಯುದ್ಧಮಾಡುತ್ತಿರುವಾಗ ತನ್ನ ಕಡೆಯವನ ಬಲವು ಕ್ಷೀಣಿಸುತ್ತಿದೆಯೆಂಬುದನ್ನು ತಿಳಿದು ಮಿತ್ರಯೋಧನಾದ ಬೇರೊಬ್ಬನು ಮಧ್ಯದಲ್ಲಿ ಪ್ರವೇಶಿಸಿ ಎದುರಾಳಿಯನ್ನು ಸಂಹರಿಸಬಾರದು. ಶರಣಾಗತನಾದವನನ್ನೂ ಯುದ್ಧದಿಂದ ವಿಮುಖನಾದವನನ್ನೂ ಸಂಹರಿಸಬಾರದು. ಒಬ್ಬ ಯೋಧನಲ್ಲಿ ಶಸ್ತ್ರಾಸ್ತ್ರಗಳು ಮುಗಿದುಹೋಗಿದ್ದರೆ ಅಂತಹವನನ್ನೂ ಕೊಲ್ಲಬಾರದು. ಒಬ್ಬ ಯೋಧನು ಕವಚಹೀನನಾಗಿದ್ದರೆ ಅಂತಹವನನ್ನು ಸಹ ಯಾವುದೇ ಕಾಲದಲ್ಲಿಯೂ ಸಂಹರಿಸಬಾರದು.

**ನ ಸೂತೇಷು ನ ಧುರ್ಯೇಷು ನ ಚ ಶಸ್ತ್ರೋಪನಾಯಿಷು ।**
**ನ ಭೇರೀಶಙ್ಖವಾದೇಷು ಪ್ರಹರ್ತವ್ಯಂ ಕದಾಚನ ॥೩೨॥**

ಸಾರಥಿಗಳಲ್ಲಿ, ರಥವನ್ನು ಎಳೆಯುವ ಕುದುರೆಗಳಲ್ಲಿ ಅಥವಾ ಆನೆಗಳಲ್ಲಿ, ಶಸ್ತ್ರಾಸ್ತ್ರಗಳನ್ನು ಸರಬರಾಜು ಮಾಡುವವರಲ್ಲಿ, ಭೇರೀ-ಶಂಖಗಳನ್ನು ನಿನಾದಮಾಡುವವರಲ್ಲಿ ಶಸ್ತ್ರಪಾತಮಾಡಬಾರದು. ಇವರನ್ನು ಯಾವುದೇ ಕಾರಣದಿಂದಲೂ ಯಾವಾಗಲೂ ಕೊಲ್ಲಬಾರದು. (ಸಾರಥಿಗಳನ್ನು ಕೊಲ್ಲುವುದು ಯುದ್ಧದಲ್ಲಿ ಸರ್ವಸಾಮಾನ್ಯವಾದುದರಿಂದ ಒಬ್ಬ ವ್ಯಾಖ್ಯಾನಕಾರರು ಸೂತನೆಂಬುವುದಕ್ಕೆ ಕುದುರೆಗಳನ್ನು ಸಾಕುವವನೆಂದೂ–ಧುರ್ಯಶಬ್ದಕ್ಕೆ

ಭಾರಹೊರುವ ಸೇವಕರೆಂದೂ ಅರ್ಥಮಾಡಿರುತ್ತಾರೆ. ಇದೇ ಸಾಧುವಾಗಿ ಕಾಣುತ್ತದೆ.)

ಜನಮೇಜಯ! ಈ ವಿಧವಾಗಿ ಕುರು-ಪಾಂಡವ-ಸೋಮಕಪ್ರಮುಖರು ಯುದ್ಧನಿಯಮಗಳನ್ನು ಅನುಮೋದಿಸಿ ಒಬ್ಬರು ಮತ್ತೊಬ್ಬರನ್ನು ನೋಡುತ್ತಾ ಆಶ್ಚರ್ಯಚಕಿತರಾದರು. (ಯುದ್ಧಸನ್ನದ್ಧರಾಗಿದ್ದರೂ ಸಹ ಪರಸ್ಪರಸೌಜನ್ಯದಿಂದ ನಡೆದುಕೊಳ್ಳುತ್ತಿದ್ದುದೇ ಅವರು ಆಶ್ಚರ್ಯಚಕಿತರಾಗಲು ಕಾರಣವಾಗಿದ್ದಿರಬಹುದು.)

ಅನಂತರ ಮಹಾತ್ಮರಾದ, ಪುರುಷರ್ಷಭರಾದ ಪಾಂಡವ-ಕೌರವ-ಸೋಮಕಯೋಧರೆಲ್ಲರೂ ತಮ್ಮ ತಮ್ಮ ಸೈನಿಕರೊಡನೆ ಪರಮಹೃಷ್ಟರೂ ಸುಮನಸ್ಕರೂ ಉತ್ಸಾಹಿಗಳೂ ಆಗಿ ನಿಯಮಿತವಾದ ತಮ್ಮ ತಮ್ಮ ಸ್ಥಳಗಳಲ್ಲಿ ಉಪಸ್ಥಿತರಾದರು.

೧ನೆಯ ಅಧ್ಯಾಯವು ಮುಗಿಯಿತು.

೨ನೆಯ ಅಧ್ಯಾಯ ಜಮ್ಬೂಖಣ್ಡವಿನಿರ್ಮಾಣಪರ್ವ (ಮುಂದುವರಿದಿದೆ.)

## ವ್ಯಾಸರು ಸಂಜಯನಿಗೆ ದಿವ್ಯದೃಷ್ಟಿಯನ್ನು ದಯಪಾಲಿಸಿದುದು : ಭಯಸೂಚಕಗಳಾದ ಉತ್ಪಾತಗಳ ವರ್ಣನೆ

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

ಮಹಾರಾಜ! ಕುರುಕ್ಷೇತ್ರದಲ್ಲಿ ಪೂರ್ವ-ಪಶ್ಚಿಮಾಭಿಮುಖವಾಗಿ ಕೌರವ-ಪಾಂಡವ-ಸೋಮಕರ ಸೈನ್ಯಗಳು ಎದುರು-ಬದುರಾಗಿ ನಿಂತು ಯುದ್ಧಸನ್ನದ್ಧವಾಗಿರುವುದನ್ನು ನೋಡಿ ಸಕಲವೇದವಿದರಲ್ಲಿ ಶ್ರೇಷ್ಠರಾದ, ಸತ್ಯವತಿಯ ಮಕ್ಕಳಾದ, ಭೂತ-ಭವ್ಯ-ಭವಿಷ್ಯಗಳನ್ನೂ ತಿಳಿದವರಾಗಿದ್ದ, ಕುರುಕುಲಪಿತಾಮಹರಾದ, ಭಯಂಕರಸಂಗ್ರಾಮದ ಪರಿಣಾಮವೇನಾಗುವುದೆಂಬುದನ್ನು ಪ್ರತ್ಯಕ್ಷವಾಗಿ ಕಂಡುಕೊಂಡಿದ್ದ, ಭಗವಾನ್ ವ್ಯಾಸಮಹರ್ಷಿಗಳು–ಮಕ್ಕಳು ಮಾಡಿದ ಅನ್ಯಾಯದ ವಿಷಯವಾಗಿ ಚಿಂತಿಸುತ್ತಿದ್ದ, ಶೋಕಪೂರ್ಣನಾಗಿದ್ದ ಮತ್ತು ಆರ್ತನಾಗಿದ್ದ ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರನನ್ನು ಏಕಾಂತದಲ್ಲಿ ಸಂಧಿಸಿ ಹೇಳಿದರು :

"ಮಹಾರಾಜ! ನಿನ್ನ ಮಕ್ಕಳು ಮತ್ತು ಅವರ ಪರವಾಗಿ ಯುದ್ಧ

ಮಾಡಲು ಬಂದಿರುವ ಇತರ ರಾಜರು ಕಳೆದುಹೋದ ಆಯುಷ್ಯವುಳ್ಳವರಾಗಿದ್ದಾರೆ. (ಸಾಯುವ ಕಾಲವು ಬಂದಿದೆ.) ಅವರು ಯುದ್ಧದಲ್ಲಿ ಒಬ್ಬರು ಮತ್ತೊಬ್ಬರನ್ನು ಎದುರಿಸಿ ಪರಸ್ಪರವಿನಾಶಕ್ಕೇ ಸಿದ್ಧರಾಗಿದ್ದಾರೆ. ಕಳೆದುಹೋದ ಆಯುಷ್ಯವುಳ್ಳ ನಿನ್ನ ಮಕ್ಕಳೂ ಮತ್ತು ರಾಜರೂ ವಿನಾಶಹೊಂದುತ್ತಿರಲಾಗಿ ಇದೊಂದು ಕಾಲಗತಿಯೆಂಬುದನ್ನು ನೀನು ಮನಗಾಣು. ಶೋಕ ಮಗ್ನನಾಗಬೇಡ.

ಮಹಾರಾಜ! ಯುದ್ಧಭೂಮಿಯಲ್ಲಿ ನೀನು ಈ ಎಲ್ಲರನ್ನೂ ನೋಡ ಲಿಚ್ಛಿಸುವೆಯಾದರೆ ನಿನಗೆ ದಿವ್ಯದೃಷ್ಟಿಯನ್ನು ಅನುಗ್ರಹಿಸುತ್ತೇನೆ. ಆ ದಿವ್ಯ



ದೃಷ್ಟಿಯಿಂದ ನೀನು ರಣಾಂಗಣದಲ್ಲಿ ನಡೆಯುವುದೆಲ್ಲವನ್ನೂ ಕಾಣಬಹುದಾಗಿದೆ.”

“ಬ್ರಹ್ಮರ್ಷಿಸತ್ತಮರೇ! ನನ್ನ ಕುಟುಂಬಕ್ಕೆ ಸೇರಿದವರ ವಧೆಯನ್ನು ನೋಡಲು ನಾನು ಇಚ್ಛಿಪಡುವುದಿಲ್ಲ. ನನಗದು ರುಚಿಸದು. ಆದರೆ ನಿಮ್ಮ ಪ್ರಭಾವದಿಂದಾಗಿ ನಾನು ಸಮರವಾರ್ತೆಯನ್ನು ಆಮೂಲಾಗ್ರವಾಗಿ ಕೇಳಿ ತಿಳಿದುಕೊಳ್ಳಬೇಕೆಂದಿರುತ್ತೇನೆ.”

ಜನಮೇಜಯ! ಧೃತರಾಷ್ಟ್ರನಿಗೆ ಯುದ್ಧವನ್ನು ಪ್ರತ್ಯಕ್ಷವಾಗಿ ನೋಡಲು ಆಸಕ್ತಿಯಿಲ್ಲದಿರುವುದನ್ನೂ ಯುದ್ಧವಾರ್ತೆಯನ್ನು ಕೇಳಬೇಕೆಂಬ ಆಶಯವಿರುವುದನ್ನೂ ತಿಳಿದು ವರಪ್ರದಾನದಲ್ಲಿ ಅತ್ಯಂತಸಮರ್ಥರಾದ ವ್ಯಾಸರು ಸಂಜಯನಿಗೆ (ಯುದ್ಧವನ್ನು ಪ್ರತ್ಯಕ್ಷವಾಗಿ ಕಾಣುವ) ವರವನ್ನು ದಯಪಾಲಿಸಿದರು. ಅನಂತರ ಧೃತರಾಷ್ಟ್ರನನ್ನು ಕುರಿತು ಹೀಗೆಂದು ಹೇಳಿದರು:

"ಧೃತರಾಷ್ಟ್ರಮಹಾರಾಜ! ಈ ಸಂಜಯನು ನಿನಗೆ ಯುದ್ಧದಲ್ಲಿ ನಡೆಯುವ ಸಕಲಸಮಾಚಾರಗಳನ್ನೂ ಹೇಳುತ್ತಾನೆ. ಸಂಗ್ರಾಮಭೂಮಿಯಲ್ಲಿ ಎಲ್ಲಿ ಏನೇ ನಡೆದರೂ ಇವನಿಗೆ ಪರೋಕ್ಷವಾದುದು (ಕಾಣದೇ ಇರುವುದು) ಯಾವುದೂ ಇರುವುದಿಲ್ಲ. ದಿವ್ಯದೃಷ್ಟಿಯಿಂದ ಸಮನ್ವಿತನಾಗುವ ಸಂಜಯನು ಸರ್ವಜ್ಞನೇ ಆಗುತ್ತಾನೆ. ನಿನ್ನ ಇಚ್ಛೆಯಂತೆ ನಿನಗೆ ಈ ಮಹಾಯುದ್ಧದ ವಾರ್ತೆಗಳೆಲ್ಲವನ್ನೂ ಹೇಳುತ್ತಾನೆ.

**ಪ್ರಕಾಶಂ ವಾಪ್ರಕಾಶಂ ವಾ ದಿವಾ ವಾ ಯದಿ ವಾ ನಿಶಿ ।**
**ಮನಸಾ ಚಿನ್ತಿತಮಪಿ ಸರ್ವಂ ವೇತ್ಸ್ಯತಿ ಸಂಜಯಃ ॥೧೧॥**

ಯಾವುದಾದರೂ ಕಾರ್ಯವು ಜನಸಮುದಾಯದಲ್ಲೇ ನಡೆಯಲಿ–ರಹಸ್ಯದಲ್ಲೇ ನಡೆಯಲಿ, ಹಗಲಿನಲ್ಲೇ ನಡೆಯಲಿ–ರಾತ್ರಿಯಲ್ಲೇ ನಡೆಯಲಿ, ಯಾವುದಾದರೂ ವಿಷಯವನ್ನು ಯಾವ ಪಕ್ಷದ ಯಾವನೇ ಆದರೂ ಮನಸ್ಸಿನಲ್ಲೇ ಚಿಂತಿಸಲಿ–ಆ ಎಲ್ಲವನ್ನೂ ಸಂಜಯನು, ನಾನು ಅನುಗ್ರಹಿಸಿರುವ ದಿವ್ಯದೃಷ್ಟಿಯ ಮೂಲಕವಾಗಿ ತಿಳಿದುಕೊಳ್ಳುತ್ತಾನೆ.

**ನೈನಂ ಶಸ್ತ್ರಾಣಿ ಭೇತ್ಸ್ಯನ್ತಿ ನೈನಂ ಬಾಧಿಷ್ಯತೇ ಶ್ರಮಃ ।**
**ಗಾವಲ್ಗಣಿರಯಂ ಜೀವನ್ಯುದ್ಧಾದಸ್ಮಾದ್ವಿಮೋಕ್ಷ್ಯತೇ ॥೧೨॥**

ಇವನ ಮೇಲೆ ಬೀಳುವ ಯಾವ ಶಸ್ತ್ರಾಸ್ತ್ರಗಳೂ ಇವನಿಗೆ ಯಾವ ವಿಧವಾದ ಪರಿಣಾಮವನ್ನೂ ಉಂಟುಮಾಡಲಾರವು. ಇವನಿಗೆ ಯಾವ ವಿಧವಾದ ಶ್ರಮವೂ ಉಂಟಾಗುವುದಿಲ್ಲ. ಯುದ್ಧಶ್ರಮದಿಂದಿವನು ಬಾಧೆಪಡುವುದಿಲ್ಲ. ಗವಲ್ಗಣನ ಮಗನಾದ ಸಂಜಯನು ಜೀವಸಹಿತವಾಗಿ ಈ ಮಹಾಯುದ್ಧದಿಂದ ಪಾರಾಗುತ್ತಾನೆ.

ನಾನಾದರೋ ಕೌರವರ, ಪಾಂಡವರ ಮತ್ತು ಇತರ ರಾಜರ ಕೀರ್ತಿ

ಯನ್ನು ಸರ್ವವ್ಯಾಪಿಯನ್ನಾಗಿ ಮಾಡುತ್ತೇನೆ. ಆದುದರಿಂದ ನೀನು ದುಃಖಿಸ ಬೇಡ.

**ದಿಷ್ಟಮೇತನ್ನರವ್ಯಾಘ್ರ ನಾಭಿಶೋಚಿತುಮರ್ಹಸಿ ।**
**ನ ಚೈವ ಶಕ್ಯಂ ಸಂಯನ್ತುಂ ಯತೋ ಧರ್ಮಸ್ತತೋ ಜಯಃ ॥೧೪॥**

ಮಹಾರಾಜ! ಈಗ ನಡೆಯುತ್ತಿರುವುದು ದೈವದ ಕಾರ್ಯ. ಇದನ್ನು ನಿಯಂತ್ರಿಸಲು ಅಥವಾ ಈ ಯುದ್ಧವು ನಡೆಯದಂತೆ ತಡೆಯಲು ಯಾರಿಂದಲೂ ಸಾಧ್ಯವಿಲ್ಲ. ಧರ್ಮವಿದ್ದ ಕಡೆಗೇ ಜಯವು ಲಭಿಸುತ್ತದೆ. ಆದುದರಿಂದ ಈ ವಿಷಯದಲ್ಲಿ ನೀನು ದುಃಖಪಡುವ ಕಾರಣವಿಲ್ಲ."

ಕುರುಪಿತಾಮಹರಾದ ವ್ಯಾಸರು ಇಷ್ಟು ಹೇಳಿ ಸ್ವಲ್ಪ ತಡೆದು ಉದ್ವಿಗ್ನ ರಾಗಿ ಪುನಃ ಹೇಳತೊಡಗಿದರು :

"ಧೃತರಾಷ್ಟ್ರ! ಈ ಮಹಾಯುದ್ಧದಲ್ಲಿ ಅಪಾರಸಂಖ್ಯೆಯಲ್ಲಿ ಮನುಷ್ಯ ಕ್ಷಯವಾಗುತ್ತದೆ. ತತ್ಸೂಚಕಗಳಾದ, ಭಯವನ್ನುಂಟುಮಾಡುವ ನಿಮಿತ್ತ ಗಳನ್ನು ನಾನು ಕಾಣುತ್ತಿದ್ದೇನೆ.

**ಶ್ಯೇನಾ ಗೃಧ್ರಾಶ್ಚ ಕಾಕಾಶ್ಚ ಕಙ್ಕಾಶ್ಚ ಸಹಿತಾ ಬಕೈಃ ।**
**ಸಮ್ಪತನ್ತಿ ನಗಾಗ್ರೇಷು ಸಮವಾಯಾಂಶ್ಚ ಕುರ್ವತೇ ॥೧೭॥**

ಗಿಡಗಹಕ್ಕಿಗಳು, ಹದ್ದುಗಳು, ಕಾಗೆಗಳು, ರಣಹದ್ದುಗಳು, ಬಕಪಕ್ಷಿ ಗಳಿಂದ ಕೂಡಿದುವುಗಳಾಗಿ ವೃಕ್ಷಾಗ್ರಗಳ ಮೇಲೆ ಬಂದು ಬೀಳುತ್ತವೆ. (ಬಂದು ಕುಳಿತುಕೊಳ್ಳುತ್ತವೆ.) ಅಲ್ಲಿ ಕುಳಿತು ತಮ್ಮ ಜಾತಿಯ ಪಕ್ಷಿಗಳನ್ನು ಏಕತ್ರ ಕಲೆಹಾಕುತ್ತವೆ. (ನಾನಾಜಾತಿಯ ಪಕ್ಷಿಗಳು ಗುಂಪಾಗಿ ಸೇರುತ್ತವೆ.)

ಆನಂದಭರಿತವಾದ ಈ ಪಕ್ಷಿಗಳು ರಣರಂಗದ ಹತ್ತಿರಕ್ಕೆ ಬಂದು ಪದೇ ಪದೇ ನೋಡುತ್ತಿರುತ್ತವೆ. ಮಾಂಸಭಕ್ಷಿಗಳಾದ ಪಶು-ಪಕ್ಷಿಗಳು ಕುದುರೆ ಮತ್ತು ಆನೆಗಳ ಮಾಂಸಗಳನ್ನು ರಣರಂಗದಲ್ಲಿ ನಿಷ್ಕರುಣೆಯಿಂದ ತಿನ್ನುತ್ತವೆ ಯೆಂಬುದಕ್ಕೆ ಇದು ಸೂಚಕವಾಗಿದೆ. ಮುಂಬರುವ ಭಯಂಕರಸನ್ನಿವೇಶ ವನ್ನು ಮುಂದಾಗಿಯೇ ತಿಳಿಸುವ ಸಾಮರ್ಥ್ಯವಿರುವ ರಣಹದ್ದುಗಳು ಕರ್ಣ ಕಠೋರವಾಗಿ ಧ್ವನಿಮಾಡುತ್ತಾ ಉಭಯಸೈನಿಕರ ಮಧ್ಯದಲ್ಲಿ ದಕ್ಷಿಣಾಭಿ

ಮುಖವಾಗಿ ಹಾರಿಹೋಗುತ್ತಿವೆ. ಪ್ರಾತಃಕಾಲದ ಪೂರ್ವಸಂಧ್ಯೆಯಲ್ಲಿಯೂ, ಸಾಯಂಕಾಲದ ಅಪರಸಂಧ್ಯೆಯಲ್ಲಿಯೂ ಸಹ ಸೂರ್ಯನು ಉದಯ ಮತ್ತು ಅಸ್ತಮನಸಮಯಗಳಲ್ಲಿ ತಲೆಯಿಲ್ಲದ ಅನೇಕಾನೇಕ ಮುಂಡಗಳಿಂದ ಪರಿವೃತನಾಗಿರುವುದನ್ನು ನಾನು ಕಾಣುತ್ತಿದ್ದೇನೆ.

ಬಿಳೀಬಣ್ಣವು ಅಂತ್ಯದಲ್ಲಿ, ಕೆಂಪುಬಣ್ಣವು ಮಧ್ಯಭಾಗದಲ್ಲಿ, ಕಪ್ಪುಬಣ್ಣವು ಕಡೆಯಲ್ಲಿ ಅಥವಾ ಕುತ್ತಿಗೆಯಲ್ಲಿ ಉಳ್ಳ, ಈ ಮೂರು ಬಣ್ಣಗಳಿಂದ ಕೂಡಿದ ಮತ್ತು ಮಿಂಚಿನಿಂದ ಸುಲಗ್ನವಾದ ಪರಿವೇಷಗಳು ಸಂಧ್ಯೆಯ ಸಮಯದಲ್ಲಿ ಸೂರ್ಯನನ್ನು ಆವರಿಸಿರುತ್ತವೆ. (ಸಂಧ್ಯಾಸಮಯದಲ್ಲಿ ಸೂರ್ಯನಿಗೆ ಪರಿವೇಷಕಟ್ಟುವುದನ್ನಿಲ್ಲಿ ವಿವರಿಸಲಾಗಿದೆ. ಈ ವಿಧವಾದ ಪರಿವೇಷವು ಸೂರ್ಯನ ಸುತ್ತಲೂ ಚಕ್ರಾಕಾರದಂತಿದ್ದು ಪ್ರಪಂಚಕ್ಕೆ ಮಹಾ ವಿಪತ್ತು ಒದಗುವ ಸಮಯದಲ್ಲಿ ಮಾತ್ರ ಕಾಣಿಸುತ್ತದೆಯೆಂದು ಶಕುನ ಶಾಸ್ತ್ರಜ್ಞರು ಹೇಳುತ್ತಾರೆ. ಆ ಪರಿವೇಷವು ಮೂರು ಬಣ್ಣಗಳಿಂದ ಕೂಡಿದುದಾಗಿರುತ್ತದೆ. ಹೊರವಲಯವು ಬಿಳುಪಾಗಿಯೂ ಮಧ್ಯದಲ್ಲಿ ಕೆಂಪಾಗಿಯೂ ಒಳವಲಯವು ಕಪ್ಪಾಗಿಯೂ ಇರುತ್ತದೆ. ಅದರಿಂದ ಮಿಂಚೂ ಸಹ ಹೊರಹೊಮ್ಮುತ್ತದೆ.) ವ್ಯಾಖ್ಯಾನಕಾರರು ಪರಿಘಾಃ ಎಂಬುದಕ್ಕೆ ಪರಿವೇಷಾಃ ಎಂದು ಅರ್ಥಮಾಡಿರುವುದರಿಂದ ಹೀಗೆ ಅರ್ಥಮಾಡಬೇಕಾಗಿದೆ. ಪರಿಘಾಃ ಎಂಬುದಕ್ಕೆ ಕಬ್ಬಿಣದ ಕಟ್ಟುಹಾಕಿದ ದೊಣ್ಣೆ ಅಥವಾ ಕಬ್ಬಿಣದ ಆಯುಧ ಎಂದೇ ಅರ್ಥವಾಗುತ್ತದೆ. ಪರಿಘಶಬ್ದಕ್ಕೆ ಪರಿವೇಷ ಎಂದು ಅರ್ಥವು ಎಲ್ಲೂ ಕಂಡುಬರುವುದಿಲ್ಲ. ಆಯುಧ ಎಂದು ಅರ್ಥಮಾಡುವುದಾದರೆ ಈ ಶ್ಲೋಕಕ್ಕೆ ಹೀಗೆ ಅರ್ಥಮಾಡಬಹುದಾಗಿದೆ. 'ಬಿಳಿಯ ಬಣ್ಣದ ಅಂತ್ಯಭಾಗಗಳುಳ್ಳ ಕೆಂಪುಬಣ್ಣದ ಮಧ್ಯಭಾಗಗಳುಳ್ಳ ಮತ್ತು ಕಪ್ಪುಬಣ್ಣದ ಶಿರಃಪ್ರದೇಶಗಳುಳ್ಳ ಮೂರು ಬಣ್ಣಗಳಿಂದ ಸಮ್ಮಿಶ್ರಿತವಾದ ಪರಿಘಾಯುಧಗಳು ಮಿಂಚಿನೊಡನೆ ಸಂಧ್ಯಾಸಮಯದಲ್ಲಿ ಸೂರ್ಯನನ್ನು ಆವರಿಸುತ್ತವೆ.'

(ಪರಿಘಾಯುಧರೂಪದ ಮೋಡಗಳು ಎಂದು ಒಬ್ಬರು ಅರ್ಥ ಮಾಡಿರುತ್ತಾರೆ. ಆದರೆ ಮೋಡಕ್ಕೆ ಅಂತ್ಯ-ಮಧ್ಯ-ಶಿರಃಪ್ರದೇಶಗಳನ್ನು ಕಲ್ಪಿಸುವುದು ಕಷ್ಟ.)

ಮಹಾರಾಜ! ನಾನು ಹಗಲಿನಲ್ಲಿಯೂ ಮತ್ತು ರಾತ್ರಿಯಲ್ಲಿಯೂ ಈ

ಒಂದು ವಿಚಿತ್ರವನ್ನು ಕಾಣುತ್ತಿದ್ದೇನೆ. ಹಗಲಿನಲ್ಲಿ ಸೂರ್ಯನು ಧಗ-ಧಗನೆ ಉರಿಯುತ್ತಿರುತ್ತಾನೆ. ರಾತ್ರಿಯಲ್ಲಿ ಶೀತಾಂಶುವಾದ ಚಂದ್ರ ಮತ್ತು ನಕ್ಷತ್ರಗಳೂ ಸಹ ವಿಶೇಷವಾದ ಕಾಂತಿಯಿಂದ ಪ್ರಜ್ವಲಿಸುತ್ತಿರುತ್ತವೆ. ಇದರಿಂದಾಗಿ ಹಗಲಿಗೂ ಮತ್ತು ರಾತ್ರಿಗೂ ಯಾವ ತಾರತಮ್ಯವೂ ಕಾಣುತ್ತಿಲ್ಲ. 'ಹಗಲಿನಲ್ಲಿ ಮಾತ್ರವೇ ಬೆಳಕಿರುತ್ತದೆ' ಎಂಬ ಹಗಲಿನ ವೈಶಿಷ್ಟ್ಯವೇ ಈಗ ಹೊರಟುಹೋಗಿದೆ. ಇದು ಮುಂದೆ ಸಂಭವಿಸುವ ಭಯದ ಸೂಚಕ ವಾಗಿದೆ. ಶರದೃತುವಿನಲ್ಲಿ ಬೆಳದಿಂಗಳು ಹೆಚ್ಚು ಪ್ರಕಾಶಮಾನವಾಗಿರುತ್ತದೆ. ಆದರೆ ಕಾರ್ತಿಕಮಾಸದ ಹುಣ್ಣಿಮೆಯ ದಿವಸವೇ ಚಂದ್ರನು ಪ್ರಭೆಯಿಂದ ಹೀನನಾಗಿದ್ದುದರಿಂದ ಕಣ್ಣಿಗೇ ಕಾಣಿಸುತ್ತಿರಲಿಲ್ಲ. ಅವನು ಸ್ಪಷ್ಟವಾಗಿ ಕಾಣಿಸದಿರಲು ಕಾರಣವೇನೆಂದರೆ ಆ ಸಮಯದಲ್ಲಿ ಆಕಾಶವು ಕಮಲದ ಬಣ್ಣವನ್ನು (ಹೊಂಗೆಂಪು) ಹೊಂದಿದ್ದಿತು. ಚಂದ್ರನೂ ಸಹ ಯಜ್ಞೇಶ್ವರನ ಬಣ್ಣಕ್ಕೆ ತಿರುಗಿಬಿಟ್ಟಿದ್ದನು. ಆಕಾಶ ಮತ್ತು ಚಂದ್ರರಿಗೆ ಸಮಾನ ವರ್ಣವಿದ್ದಿತಾದುದರಿಂದ ಚಂದ್ರನು ಕಣ್ಣಿಗೆ ಕಾಣಿಸುತ್ತಿರಲಿಲ್ಲ.

ಇದರ ಫಲವೇನೆಂದರೆ ಪರಿಘಾಯುಧಕ್ಕೆ ಸಮಾನವಾದ ತೋಳು ಗಳಿಂದ ಕೂಡಿದ ವೀರರಾದ ರಾಜರು ಮತ್ತು ಶೂರರಾದ ರಾಜಪುತ್ರರು ಪರಸ್ಪರ ಸಂಘರ್ಷದಿಂದ ಸಂಹೃತರಾಗಿ ಭೂಮಿಯನ್ನಾವರಿಸಿ ಮಲಗುತ್ತಾರೆ. ಹಂದಿ ಮತ್ತು ಬೆಕ್ಕುಗಳು ಯದ್ಯಪಿ ಭೂಚರಪ್ರಾಣಿಗಳೇ ಆದರೂ ಸಹ ಈ ಸಮಯದಲ್ಲವು ಅಂತರಿಕ್ಷಕ್ಕೆ ಹಾರಿ ಅಲ್ಲಿಯೇ ಪರಸ್ಪರ ಜಗಳವಾಡುತ್ತಾ ರಾತ್ರಿಯ ಕಾಲದಲ್ಲಿ ಭಯಂಕರವಾಗಿ ಶಬ್ದಮಾಡುವುದನ್ನು ನಾನು ಅನು ದಿನವೂ ನೋಡುತ್ತಿದ್ದೇನೆ. ಧೃತರಾಷ್ಟ್ರ! ಈಗ ನಡೆಯುತ್ತಿರುವ ಮತ್ತೂ ಒಂದು ವಿಚಿತ್ರವೇನೆಂದರೆ : ಪ್ರತಿಷ್ಠಿತವಾದ ದೇವತಾಮೂರ್ತಿಗಳೂ ಸಹ ಒಮ್ಮೆ ನಡುಗುತ್ತವೆ. ಮತ್ತೊಮ್ಮೆ ನಗುತ್ತವೆ. ಮುಖಗಳಿಂದ ರಕ್ತವನ್ನೇ ವಾಂತಿಮಾಡುತ್ತವೆ. ಕೆಲವು ಸಮಯಗಳಲ್ಲಿ ದೈನ್ಯಮುಖಭಾವದಿಂದಿರುತ್ತವೆ. ಮತ್ತೆ ಕೆಲವು ಸಮಯಗಳಲ್ಲಿ ಕೆಳಕ್ಕೆ ಬಿದ್ದುಬಿಡುತ್ತವೆ. ಇನ್ನೂ ಹೆಚ್ಚಿನ ವಿಚಿತ್ರಸಂಗತಿಗಳನ್ನು ಹೇಳುವೆನು ಕೇಳು : ಪ್ರಹರಿಸದೆಯೇ ದುಂದುಭಿಗಳು ನಿನಾದಮಾಡುತ್ತಿವೆ. ಕ್ಷತ್ರಿಯರ ಮಹಾರಥಗಳು ಕುದುರೆಗಳಿಲ್ಲದೆಯೇ ಹೊರಡಲುದ್ಯುಕ್ತವಾಗುತ್ತಿವೆ. ಕೋಗಿಲೆಗಳು, ನವಿಲುಗಳು, ಶಕುನಪಕ್ಷಿಗಳು

(ಕಳಿಂಗಪಕ್ಷಿಗಳು), ಗಿಡಗಪಕ್ಷಿಗಳು, ಗಿಣಿಗಳು, ಸಾರಸಪಕ್ಷಿಗಳು ಮತ್ತು ಮಯೂರಗಳು ಭಯಂಕರವಾದ ಮಾತನ್ನು (ಶಬ್ದವನ್ನು) ಹೊರಹೊಮ್ಮಿ ಸುತ್ತಿವೆ. ಆಯುಧಗಳನ್ನು ಹಿಡಿದು ಕವಚಧಾರಿಗಳಾದ ಕುದುರೇಸವಾರರು ಗಟ್ಟಿಯಾಗಿ ಚೀತ್ಕಾರಮಾಡುತ್ತಿರುತ್ತಾರೆ. ಅರುಣೋದಯಕಾಲದಲ್ಲಿ ನೂರಾರು ಮಿಡತೆಯ ಹುಳುಗಳ ಸಮೂಹಗಳು ಕಾಣಿಸಿಕೊಳ್ಳುತ್ತಿವೆ. ಎರಡು ಸಂಧ್ಯಾಕಾಲಗಳೂ ದಿಗ್ದಾಹಗಳಿಂದ (ನಾಲ್ಕು ದಿಕ್ಕುಗಳಲ್ಲಿಯೂ ಹೊತ್ತಿಕೊಂಡಿರುವ ಬೆಂಕಿಯಿಂದ) ಪ್ರಕಾಶಿಸುತ್ತಿವೆ. ಪರ್ಜನ್ಯನು ನೀರಿಗೆ ಬದಲಾಗಿ ಧೂಳನ್ನೂ ಮತ್ತು ಮಾಂಸವನ್ನೂ ಸುರಿಸುತ್ತಿದ್ದಾನೆ. ಮೂರು ಲೋಕಗಳಲ್ಲೂ ಮಹಾಪತಿವ್ರತೆಯೆಂದು ವಿಖ್ಯಾತಳಾಗಿರುವ, ಸಾಧುಸಮ್ಮತ ಳಾದ ಅರುಂಧತಿಯು (ನಕ್ಷತ್ರವು) ಪತಿವ್ರತಾಧರ್ಮಕ್ಕೆ ವಿರುದ್ಧವಾಗಿ ತನ್ನ ಪತಿಯಾದ ವಸಿಷ್ಠನನ್ನು ತನ್ನ ಪೃಷ್ಠಭಾಗದಲ್ಲಿರುವಂತೆ ಮಾಡಿಬಿಟ್ಟಿದ್ದಾಳೆ. ರೋಹಿಣಿಯನ್ನು ಶನೈಶ್ಚರನು ಪೀಡಿಸುತ್ತಲೇ ಇದ್ದುಬಿಟ್ಟಿದ್ದಾನೆ. ಚಂದ್ರನಲ್ಲಿರುವ ಮೃಗಲಾಂಛನವು ಲುಪ್ತವಾಗಿಬಿಟ್ಟಿದೆ. ಈ ಕಾರಣಗಳಿಂದ ಬಹಳ ದೊಡ್ಡದಾದ ಭಯಂಕರಸನ್ನಿವೇಶವು ಒದಗಿಬರಲಿದೆ, ಮಹಾರಾಜ! ಮೋಡವೇ ಇಲ್ಲದ ಆಕಾಶದ ಕಡೆಯಿಂದ ಅತಿಭಯಂಕರವಾದ ಗುಡುಗಿನ ಶಬ್ದವು ಕೇಳಿಬರುತ್ತಿದೆ. ಕುದುರೆ ಮೊದಲಾದ ವಾಹನಯೋಗ್ಯಪ್ರಾಣಿಗಳು ಕಾರಣವಿಲ್ಲದೇ ರೋದನಮಾಡುತ್ತಿವೆ. ಅವುಗಳ ಕಣ್ಣಿನಿಂದ ಕಣ್ಣೀರಿನ ಹನಿಗಳು ಉದುರುತ್ತಿವೆ."

೨ನೆಯ ಅಧ್ಯಾಯವು ಮುಗಿಯಿತು.

೩ನೆಯ ಅಧ್ಯಾಯ ಜಮ್ಬೂಖಣ್ಡವಿನಿರ್ಮಾಣಪರ್ವ (ಮುಂದುವರಿದಿದೆ.)

## ವ್ಯಾಸರು ಅಮಂಗಳಸೂಚಕವಾದ ಉತ್ಪಾತಗಳನ್ನೂ ವಿಜಯಸೂಚಕವಾದ ಲಕ್ಷಣಗಳನ್ನೂ ವಿವರಿಸಿದುದು

"ಧೃತರಾಷ್ಟ್ರ! ಮಹಾಭಯಂಕರವಾದ ಸಮಯವು ಒದಗಿಬಂದಾಗ ಅತ್ಯಾಶ್ಚರ್ಯಕರವಾದ, ಅಸಂಭವವಾದ ಅನೇಕ ಸಂಗತಿಗಳು ಪೃಥ್ವಿಯಲ್ಲಿ ಗೋಚರಿಸುತ್ತವೆ.

**ಖರಾ ಗೋಷು ಪ್ರಜಾಯನ್ತೇ ರಮನ್ತೇ ಮಾತೃಭಿಃ ಸುತಾಃ ।**
**ಅನಾರ್ತವೇ ಪುಷ್ಪಫಲಂ ದರ್ಶಯನ್ತಿ ವನದ್ರುಮಾಃ ॥೧॥**

ಹಸುಗಳ ಹೊಟ್ಟೆಯಲ್ಲಿ ಕತ್ತೆಗಳು ಹುಟ್ಟುತ್ತವೆ. ತಾಯಿಯ ಜೊತೆಯಲ್ಲಿ ಗಂಡುಮಕ್ಕಳು ರಮಿಸುತ್ತಾರೆ. ಅರಣ್ಯದ ವೃಕ್ಷಗಳು ಅಕಾಲದಲ್ಲಿ ಪುಷ್ಪ-ಫಲಗಳನ್ನು ನೀಡುತ್ತವೆ.

**ಗರ್ಭಿಣ್ಯೋಽಜಾತಪುತ್ರಾಶ್ಚ ಜನಯನ್ತಿ ವಿಭೀಷಣಾನ್ ।**
**ಕ್ರವ್ಯಾದಾಃ ಪಕ್ಷಿಭಿಶ್ಚಾಪಿ ಸಹಾಶ್ನನ್ತಿ ಪರಸ್ಪರಮ್ ॥೨॥**

ಗರ್ಭಿಣೀಸ್ತ್ರೀಯರೂ ಮತ್ತು ಮಕ್ಕಳೇ ಇಲ್ಲದಿದ್ದವರೂ ಸಹ ಈ ಸಮಯದಲ್ಲಿ ಭಯಂಕರಜೀವಿಗಳನ್ನು ಪ್ರಸವಿಸುತ್ತಾರೆ. ಮಾಂಸವನ್ನು ತಿನ್ನುವ ಪ್ರಾಣಿಗಳು ಮಾಂಸವನ್ನು ತಿನ್ನದ ಪಕ್ಷಿಗಳೊಡನೆ ಸೇರಿಕೊಂಡು ಆಹಾರವನ್ನು ತಿನ್ನುತ್ತಿರುತ್ತವೆ.

**ತ್ರಿವಿಷಾಣಾಶ್ಚತುರ್ನೇತ್ರಾಃ ಪಞ್ಚಪಾದಾ ದ್ವಿಮೇಹನಾಃ ।**
**ದ್ವಿಶೀರ್ಷಾಶ್ಚ ದ್ವಿಪುಚ್ಛಾಶ್ಚ ದಂಷ್ಟ್ರಿಣಃ ಪಶವೋಽಶಿವಾಃ ।**
**ಜಾಯನ್ತೇ ವಿವೃತಾಸ್ಯಾಶ್ಚ ವ್ಯಾಹರನ್ತೋಽಶಿವಾ ಗಿರಃ ॥೩॥**

ಮೂರು ಕೊಂಬುಗಳುಳ್ಳ, ನಾಲ್ಕು ಕಣ್ಣುಗಳುಳ್ಳ, ಐದು ಕಾಲುಗಳುಳ್ಳ, ಎರಡು ಮೂತ್ರೇಂದ್ರಿಯಗಳುಳ್ಳ, ಎರಡು ತಲೆಗಳುಳ್ಳ, ಎರಡು ಬಾಲಗಳುಳ್ಳ, ಕೋರೆದಾಡೆಗಳುಳ್ಳ ಅಮಂಗಳಕರವಾದ ಪ್ರಾಣಿಗಳು ಹುಟ್ಟುತ್ತವೆ. ಅಗಲವಾಗಿ ಬಾಯ್ತೆರೆದುಕೊಂಡು ಅಮಂಗಳಕರವಾದ ಧ್ವನಿಮಾಡುತ್ತಲೇ ಇಂತಹ ಪ್ರಾಣಿಗಳು ಭೂಮಿಯಲ್ಲಿ ಜನ್ಮತಾಳುತ್ತವೆ.

**ತ್ರಿಪದಾಃ ಶಿಖಿನಸ್ತಾರ್ಕ್ಷ್ಯಾಶ್ಚತುರ್ದಂಷ್ಟ್ರಾ ವಿಷಾಣಿನಃ ॥೪॥**

**ತಥೈವಾನ್ಯಾಶ್ಚ ದೃಶ್ಯನ್ತೇ ಸ್ತ್ರಿಯೋ ವೈ ಬ್ರಹ್ಮವಾದಿನಾಮ್ ।**
**ವೈನತೇಯಾನ್ಮಯೂರಾಂಶ್ಚ ಜನಯನ್ತಿ ಪುರೇ ತವ ॥೫॥**

ಗರುಡಪಕ್ಷಿಗಳು ನವಿಲುಗಳಂತೆ ತಲೆಯಲ್ಲಿ ಶಿಖೆಯನ್ನಿಟ್ಟುಕೊಂಡು ಹುಟ್ಟುತ್ತವೆ. ಅವುಗಳಿಗೆ ಮೂರು ಕಾಲುಗಳಿರುತ್ತವೆ. ನಾಲ್ಕು ಕೋರೆ ಹಲ್ಲುಗಳಿರುತ್ತವೆ. ಅವುಗಳಿಗೆ ಕೋಡುಗಳೂ ಸಹ ಇರುತ್ತವೆ. ಇತರ

ಪ್ರಾಣಿಗಳೂ ಇಂತಹುದೇ ವಿಚಿತ್ರರೀತಿಯಲ್ಲಿ ಹುಟ್ಟುವುದನ್ನು ನಾವು ಕಾಣಬಹುದಾಗಿದೆ. ನಿನ್ನ ಪಟ್ಟಣದಲ್ಲಿ ವೇದವಿದರಾದ ಬ್ರಾಹ್ಮಣರ ಮನೆಯ ಸ್ತ್ರೀಯರು ಗರುಡಪಕ್ಷಿಗಳನ್ನೂ ಮತ್ತು ನವಿಲುಗಳನ್ನೂ ಪ್ರಸವಿಸುತ್ತಾರೆ.

**ಗೋವತ್ಸಂ ವಡವಾ ಸೂತೇ ಶ್ವಾ ಸೃಗಾಲಂ ಮಹೀಪತೇ ।**
**ಕುಕ್ಕುರಾನ್ಕರಭಾಶ್ಚೈವ ಶುಕಾಶ್ಚಾಶುಭವಾದಿನಃ ॥೬॥**

ಕುದುರೆಯು ಹಸುವಿನ ಕರುವನ್ನೀಯುತ್ತದೆ. ನಾಯಿಯು ಗುಳ್ಳೇ ನರಿಯನ್ನೀಯುತ್ತದೆ. ಆನೆಗಳು ನಾಯಿಮರಿಗಳನ್ನು ಹಾಕುತ್ತವೆ. ಗಿಣಿಗಳು ಅಶುಭವಾದ ಮಾತುಗಳನ್ನೇ ಹೇಳುತ್ತಿರುತ್ತವೆ.

**ಸ್ತ್ರಿಯಃ ಕಾಶ್ಚಿತ್ಪ್ರಜಾಯನ್ತೇ ಚತಸ್ರಃ ಪಞ್ಚಕನ್ಯಕಾಃ ।**
**ಜಾತಮಾತ್ರಾಶ್ಚ ನೃತ್ಯನ್ತಿ ಗಾಯನ್ತಿ ಚ ಹಸನ್ತಿ ಚ ॥೭॥**

ಕೆಲವು ಸ್ತ್ರೀಯರು ಒಂದೇ ಬಾರಿಗೆ ನಾಲ್ಕು ಅಥವಾ ಐದು ಹೆಣ್ಣು ಮಕ್ಕಳಿಗೆ ಜನ್ಮವೀಯುತ್ತಾರೆ. ಹುಟ್ಟಿದೊಡನೆಯೇ ಆ ಮಕ್ಕಳೂ ಸಹ ಕುಣಿಯುತ್ತವೆ, ಗಾಯನಮಾಡುತ್ತವೆ ಮತ್ತು ನಗುತ್ತವೆ.

**ಪೃಥಗ್ಜನಸ್ಯ ಸರ್ವಸ್ಯ ಕ್ಷುದ್ರಕಾಃ ಪ್ರಹಸನ್ತಿ ಚ ।**
**ನೃತ್ಯನ್ತಿ ಪರಿಗಾಯನ್ತಿ ವೇದಯನ್ತೋ ಮಹದ್ಭಯಮ್ ॥೮॥**

ಸಮಸ್ತನೀಚಜಾತಿಗಳ ಮನೆಗಳಲ್ಲಿ ಹುಟ್ಟಿದ ಕುರುಡರು, ಕಿವುಡರು, ಹೆಳವರು ಸಹ ನಗುತ್ತಾರೆ. ಕುಣಿಯುತ್ತಾರೆ. ಗಾಯನಮಾಡುತ್ತಾರೆ. (ಇದು ಮುಂಬರುವ ಭಯಂಕರಸನ್ನಿವೇಶವನ್ನು ಸೂಚಿಸುತ್ತದೆ.)

**ಪ್ರತಿಮಾಶ್ಚಾಲಿಖನ್ತ್ಯೇತಾಃ ಪಶಸ್ತ್ರಾಃ ಕಾಲಚೋದಿತಾಃ ।**
**ಅನ್ಯೋನ್ಯಮಭಿಧಾವನ್ತಿ ಶಿಶವೋ ದಣ್ಡಪಾಣಯಃ ॥೯॥**

ಕಾಲಚೋದಿತರಾದ ಆ ಕ್ಷುದ್ರಕರು ಶಸ್ತ್ರಧಾರಿಪ್ರತಿಮೆಗಳನ್ನು ಬರೆಯುತ್ತಾರೆ. ಸಣ್ಣ-ಸಣ್ಣ ಮಕ್ಕಳೂ ಸಹ ಕೈಯಲ್ಲಿ ದಂಡವನ್ನು ಹಿಡಿದು ತಮ್ಮ ಒಡನಾಡಿಗಳೊಡನೆ ಕಾದಾಡಲು ಹೋಗುತ್ತಾರೆ.

**ಅನ್ಯೋನ್ಯಮಭಿಮೃದ್ನನ್ತಿ ನಗರಾಣಿ ಯುಯುತ್ಸವಃ ।**
**ಪದ್ಮೋತ್ಪಲಾನಿ ವೃಕ್ಷೇಷು ಜಾಯನ್ತೇ ಕುಮುದಾನಿ ಚ ॥೧೦॥**

ಪರಸ್ಪರವಾಗಿ ಕಾದಾಡಲಿಚ್ಛಿಸುವ ಆ ಬಾಲಕರು ತಾವು ಕಟ್ಟಿದ ಚಿಕ್ಕದಾದ ಆಟದ ಪಟ್ಟಣಗಳನ್ನು ಧ್ವಂಸಮಾಡಿಬಿಡುತ್ತವೆ. ಕಮಲಗಳು, ಕನ್ನೈದಿಲೆಗಳು (ನೀಲಕಮಲ), ಬಿಳೀನೈದಿಲೆಗಳು ಮುಂತಾದ ಜಲಪುಷ್ಪಗಳು ವೃಕ್ಷಗಳಲ್ಲಿ ಹುಟ್ಟುತ್ತವೆ.

**ವಿಷ್ವಗ್ವಾತಾಶ್ಚ ವಾನ್ತ್ಯುಗ್ರಾ ರಜೋ ನಾಪ್ಯುಪಶಾಮ್ಯತಿ ।**
**ಅಭೀಕ್ಷ್ಣಂ ಕಮ್ಪತೇ ಭೂಮಿರರ್ಕಂ ರಾಹುರುಪೈತಿ ಚ ॥೧೧॥**

ನಾಲ್ಕು ದಿಕ್ಕುಗಳಲ್ಲಿಯೂ ಉಗ್ರವಾದ ಚಂಡಮಾರುತವು ಬೀಸುತ್ತದೆ. ಆ ಚಂಡಮಾರುತದಿಂದ ಉದ್ಭೂತವಾದ ಧೂಳು ಉಪಶಮನವಾಗುವುದೇ ಇಲ್ಲ. ಭೂಮಿಯು ಬಾರಿ-ಬಾರಿಗೂ ಕಂಪಿಸುತ್ತಿರುತ್ತದೆ. ಸೂರ್ಯನ ಬಳಿಗೆ ರಾಹುವು ಹೋಗುತ್ತಾನೆ.

**ಶ್ವೇತೋ ಗ್ರಹಸ್ತಥಾ ಚಿತ್ರಾಂ ಸಮತಿಕ್ರಮ್ಯ ತಿಷ್ಠತಿ ।**
**ಅಭಾವಂ ಹಿ ವಿಶೇಷೇಣ ಕುರೂಣಾಂ ತತ್ರ ಪಶ್ಯತಿ ॥೧೨॥**

ಕೇತುವು ಚಿತ್ತಾನಕ್ಷತ್ರವನ್ನು ಅತಿಕ್ರಮಿಸಿ ಸ್ವಾತೀನಕ್ಷತ್ರಕ್ಕೆ ಹೊರಟುಹೋಗಿದ್ದಾನೆ. ಅವನಿಗೆ ವಿಶೇಷವಾಗಿ ಕುರುವಂಶದ ವಿನಾಶದ ಕಡೆಗೇ ದೃಷ್ಟಿಯಿದೆ. (೧೧ನೆಯ ಶ್ಲೋಕದಲ್ಲಿ **ಅರ್ಕಂ ರಾಹುರುಪೈತಿ** ಎಂದಿದೆ. ಯುದ್ಧವು ಪ್ರಾರಂಭವಾದುದು ಕಾರ್ತಿಕಮಾಸವಾದುದರಿಂದ ಕಾರ್ತಿಕಮಾಸದಲ್ಲಿ ಸೂರ್ಯನು ತುಲಾರಾಶಿಯಲ್ಲಿರುತ್ತಾನೆ. ಇದಕ್ಕೆ ತುಲಾ ಮಾಸವೆಂದೂ ಹೆಸರು. ಅರ್ಥಾತ್ ರಾಹುವು ತುಲಾರಾಶಿಗೆ ಬಂದನೆಂದು ಅರ್ಥವಾಗುತ್ತದೆ. ೧೨ನೆಯ ಶ್ಲೋಕದಲ್ಲಿ ಕೇತುವು ಚಿತ್ತಾನಕ್ಷತ್ರವನ್ನು ಅತಿಕ್ರಮಿಸಿ ನಿಂತಿದ್ದಾನೆಂದಿದೆ. ಸ್ವಾತೀನಕ್ಷತ್ರಕ್ಕೆ ಬಂದಿದ್ದಾನೆಂದ ಹಾಗಾಯಿತು. ಸ್ವಾತೀನಕ್ಷತ್ರವೆಂದರೆ ತುಲಾರಾಶಿಯಾಗುತ್ತದೆ. ಅರ್ಥಾತ್ ರಾಹು-ಕೇತುಗಳಿಬ್ಬರೂ ತುಲಾರಾಶಿಗೆ ಬಂದಿದ್ದಾರೆ. ರಾಹು-ಕೇತುಗಳು ಯಾವಾಗಲೂ ಪರಸ್ಪರ ಏಳನೆಯ ಸ್ಥಾನದಲ್ಲೇ ಇರುತ್ತಾರೆ. ಆ ಸಮಯ ದಲ್ಲಿ ಒಂದೇ ರಾಶಿಗೆ ಬಂದಿದ್ದಾರೆಂದು ಈ ಶ್ಲೋಕಕ್ಕೆ ಅರ್ಥಮಾಡಬಹು ದಾಗಿದೆ. ಅವರಿಬ್ಬರೂ ಒಂದೇ ರಾಶಿಯಲ್ಲಿ ಇರುವ ಸಾಧ್ಯತೆಯಿದೆಯೇ?

ಮುಂದೆಯೂ ಯಾವಾಗಲಾದರೂ ಒಂದೇ ರಾಶಿಗೆ ಬರುತ್ತಾರೆಯೇ?–ಎಂಬುದನ್ನು ಜ್ಯೋತಿಷ್ಕರು ಖಚಿತಪಡಿಸಬೇಕಾಗಿದೆ.

**ಶ್ವೇತೋ ಗ್ರಹಃ = ಕೇತುಃ ಚಿತ್ರಾಮತಿಕ್ರಾಮತಿ = ಸ್ವಾತ್ಯಾದೌ ವರ್ತತೇ.** ಕೇತುವು ಚಿತ್ತಾನಕ್ಷತ್ರವನ್ನತಿಕ್ರಮಿಸಿ ಸ್ವಾತಿಯ ಪ್ರಥಮ ಪಾದದಲ್ಲಿದೆ. **ಸಮಸಪ್ತಕಸ್ಥೌ ರಾಹುಕೇತೂ ಇದಾನೀಮೇಕರಾಶಿಗತೌ ಮಹಾನಿಷ್ಟಸೂಚಕಾವಿತಿ ಭಾವಃ**–ಯಾವಾಗಲೂ ಸಮಸಪ್ತಕದಲ್ಲಿರುವ ರಾಹು-ಕೇತುಗಳು ಈಗ ಒಂದೇ ರಾಶಿಗೆ ಬಂದುಬಿಟ್ಟಿರುವುದು ಬಹಳ ಅನಿಷ್ಟಸೂಚಕಗಳಾಗಿವೆ. ಆದರೆ ವ್ಯಾಖ್ಯಾನಕಾರರು ಯಾವ ಆಧಾರದ ಮೇಲೆ ಶ್ವೇತಗ್ರಹ ಎಂಬುದಕ್ಕೆ ಕೇತುವೆಂದು ಅರ್ಥಮಾಡಿದ್ದಾರೆಂಬುದನ್ನು ವಿವೇಚಿಸಬೇಕಾಗಿದೆ. ಗ್ರಹನಿಘಂಟುವಿನಲ್ಲಿ ಕೇತುಗ್ರಹಕ್ಕೆ ಈ ಹೆಸರುಗಳಿವೆ.

**ಕೇತುಶ್ಶಿಖೀ ಧ್ವಜೋ ಧೂಮ್ರ ಉತ್ಪಾತೋ ಬಹುರೂಪಕೃತ್ ।**
**ಶಿರೋಹೀನೋ ಘೋರರೂಪಶ್ಚಿತ್ರವರ್ಣಃ ಸುಕೇತನಃ ॥**

ಕೇತುಃ, ಶಿಖೀ, ಧ್ವಜಃ, ಧೂಮ್ರಃ, ಉತ್ಪಾತಃ, ಬಹುರೂಪಕೃತ್, ಶಿರೋಹೀನಃ, ಘೋರರೂಪಃ, ಚಿತ್ರವರ್ಣಃ, ಸುಕೇತನಃ–ಈ ಹತ್ತು ಕೇತುವಿನ ಹೆಸರುಗಳು. ಇಲ್ಲಿ ಶ್ವೇತವೆಂಬ ಹೆಸರು ಉಕ್ತವಾಗಿಲ್ಲ. ಕೇತುವಿಗೇ ಮಾತ್ರವಲ್ಲ. ಗ್ರಹನಿಘಂಟುವಿನಲ್ಲಿ ಯಾವ ಗ್ರಹಕ್ಕೂ 'ಶ್ವೇತ' ಎಂಬ ಹೆಸರು ಉಕ್ತವಾಗಿಲ್ಲ. ಆದರೆ ಇತರ ನಿಘಂಟುವಿನಲ್ಲಿ ಶ್ವೇತ ಎಂಬುದಕ್ಕೆ ಶುಕ್ರಗ್ರಹ ಎಂಬ ಅರ್ಥವನ್ನೂ ಹೇಳಿದ್ದಾರೆ. ಆದುದರಿಂದ ಈ ಪ್ರಕರಣದಲ್ಲಿ ಶುಕ್ರನು ಚಿತ್ತಾನಕ್ಷತ್ರವನ್ನತಿಕ್ರಮಿಸಿ ಸ್ವಾತಿಯ ಪ್ರಥಮಪಾದಕ್ಕೆ ಅಥವಾ ಸ್ವಕ್ಷೇತ್ರವಾದ ತುಲಾರಾಶಿಗೆ ಬಂದಿದ್ದಾನೆಂದು ಅರ್ಥಮಾಡಿದರೆ ಹೆಚ್ಚು ಸಮಂಜಸವಾಗಿ ಕಾಣುತ್ತದೆ. ಆದರೆ ಮುಂದೆ ಪುನಃ ಶುಕ್ರನ ಮತ್ತು ಶ್ವೇತಗ್ರಹದ ಪ್ರಸ್ತಾಪವು ಬಂದಿರುವುದರಿಂದ ಹೀಗೂ ಸಮನ್ವಯಿಸುವುದು ಕಷ್ಟವೇ ಸರಿ.

**ಧೂಮಕೇತುರ್ಮಹಾಘೋರಃ ಪುಷ್ಯಂ ಚಾಕ್ರಮ್ಯ ತಿಷ್ಠತಿ ।**
**ಸೇನಯೋರಶಿವಂ ಘೋರಂ ಕರಿಷ್ಯತಿ ಮಹಾಗ್ರಹಃ ॥೧೩॥**

ಮಹಾಘೋರವಾದ ಧೂಮಕೇತುವೆಂಬ ಗ್ರಹವು ಪುಷ್ಯನಕ್ಷತ್ರವನ್ನು

ಆಕ್ರಮಿಸಿ ಕುಳಿತಿದೆ. ಈ ಮಹಾಗ್ರಹವು ಎರಡು ಸೇನೆಗಳಿಗೂ ಬಹುಘೋರವಾದ ಅಮಂಗಳವನ್ನುಂಟುಮಾಡುತ್ತದೆ ಮತ್ತು ಉಭಯಸೇನೆಗಳಿಗೂ ವಿನಾಶಕಾರಿಯಾಗಿದೆ. (ಧೂಮಕೇತುವು ಜ್ವಲಿಸುತ್ತಿರುವಂತೆ ಕಾಣಿಸಿಕೊಳ್ಳುವ ಒಂದು ಗ್ರಹ. ಆ ಗ್ರಹವು ಕಾಣಿಸಿಕೊಳ್ಳುವುದು ದೇಶದಲ್ಲಿ ಉಂಟಾಗುವ ಅನರ್ಥಕ್ಕೆ ಸೂಚಕವೆಂದು ಇಂದೂ ನಾವು ಭಾವಿಸುತ್ತೇವೆ.)

**ಮಘಾಸ್ವಜ್ಞಾರಕೋ ವಕ್ರಃ ಶ್ರವಣೇ ಚ ಬೃಹಸ್ಪತಿಃ ।**
**ಭಗಂ ನಕ್ಷತ್ರಮಾಕ್ರಮ್ಯ ಸೂರ್ಯಪುತ್ರೇಣ ಪೀಡ್ಯತೇ ॥೧೪॥**

ಅಂಗಾರಕನು ವಕ್ರನಾಗಿ ಮಘಾನಕ್ಷತ್ರದಲ್ಲಿದ್ದಾನೆ. ಶ್ರವಣದಲ್ಲಿ ಬೃಹಸ್ಪತಿಯಿದ್ದಾನೆ. ಸೂರ್ಯಪುತ್ರನಾದ ಶನಿಯು ಭಗನಕ್ಷತ್ರಕ್ಕೆ (ಉತ್ತರಾ) ಹೋಗಿ ಅದನ್ನು ಪೀಡಿಸುತ್ತಿದ್ದಾನೆ.

**ಶುಕ್ರಃ ಪ್ರೋಷ್ಠಪದೇ ಪೂರ್ವೇ ಸಮಾರುಹ್ಯ ವಿರೋಚತೇ ।**
**ಉತ್ತರೇ ತು ಪರಿಕ್ರಮ್ಯ ಸಹಿತಃ ಸಮುದೀಕ್ಷತೇ ॥೧೫॥**

ಶುಕ್ರನು ಪೂರ್ವಪ್ರೋಷ್ಠಪದನಕ್ಷತ್ರದಲ್ಲಿ ಆರೂಢನಾಗಿ ವಿರಾಜಿಸುತ್ತಿದ್ದಾನೆ ಮತ್ತು ಉತ್ತರಪ್ರೋಷ್ಠಪದನಕ್ಷತ್ರದ ಕಡೆಗೆ ತಿರುಗಿ ಮತ್ತೊಂದು ಗ್ರಹದೊಡನೆ ಕೂಡಿಕೊಂಡು ಆ ನಕ್ಷತ್ರವನ್ನೇ ನೆಟ್ಟದೃಷ್ಟಿಯಿಂದ ನೋಡುತ್ತಿದ್ದಾನೆ. (ಇಲ್ಲಿ ಸೂಚಿಸಿರುವ ಮತ್ತೊಂದು ಗ್ರಹಕ್ಕೆ ವ್ಯಾಖ್ಯಾನಕಾರರು ಪರಿಘ ಎಂದು ಹೆಸರಿಸಿದ್ದಾರೆ.)

**ಶ್ವೇತೋ ಗ್ರಹಃ ಪ್ರಜ್ವಲಿತಃ ಸಧೂಮ ಇವ ಪಾವಕಃ ।**
**ಐನ್ದ್ರಂ ತೇಜಸ್ವಿನಕ್ಷತ್ರಂ ಜ್ಯೇಷ್ಠಾಮಾಕ್ರಮ್ಯ ತಿಷ್ಠತಿ ॥೧೬॥**

ಧೂಮದಿಂದ ಕೂಡಿದ ಅಗ್ನಿಯೋಪಾದಿಯಲ್ಲಿ–ಪ್ರಕೃಷ್ಟವಾಗಿ ಜ್ವಲಿಸುತ್ತಿರುವ ಶ್ವೇತಗ್ರಹವು ತೇಜಃಪುಂಜಯುಕ್ತವಾದ, ಇಂದ್ರನಸಂಬಂಧವಾದ ಜ್ಯೇಷ್ಠಾನಕ್ಷತ್ರವನ್ನು ಆಕ್ರಮಿಸಿ ಕುಳಿತಿದೆ. (ಹಿಂದೆ ೧೨ನೆಯ ಶ್ಲೋಕದಲ್ಲಿ ಶ್ವೇತಗ್ರಹವು ಚಿತ್ತಾನಕ್ಷತ್ರವನ್ನು ಅತಿಕ್ರಮಿಸಿ ಎಂದರೆ ಸ್ವಾತೀನಕ್ಷತ್ರದಲ್ಲಿ ಕುಳಿತಿದೆ ಎಂದು ಉಕ್ತವಾಗಿದೆ. ಈ ಶ್ಲೋಕದಲ್ಲಿ ಅದೇ ಶ್ವೇತಗ್ರಹವೇ ಜ್ಯೇಷ್ಠಾನಕ್ಷತ್ರವನ್ನತಿಕ್ರಮಿಸಿ ಕುಳಿತಿದೆ ಎಂದು ಉಕ್ತವಾಗಿದೆ. ಇವೆರಡಕ್ಕೂ ವ್ಯಾಖ್ಯಾನಕಾರರು ಕೇತುವೆಂದೇ ಅರ್ಥಮಾಡಿರುತ್ತಾರೆ. ಹೇಗೆ ಸಮಂಜಸವಾಗುತ್ತದೆಯೆಂಬುದನ್ನು ಸಮನ್ವಯಿಸಲು ಪ್ರಯತ್ನಿಸಿಲ್ಲ.)

**ಧ್ರುವಂ ಪ್ರಜ್ವಲಿತೋ ಘೋರಮಪಸವ್ಯಂ ಪ್ರವರ್ತತೇ ।**
**ರೋಹಿಣೀಂ ಪೀಡಯತ್ಯೇವಮುಭೌ ಚ ಶಶಿಭಾಸ್ಕರೌ ।**
**ಚಿತ್ರಾಸ್ವಾತ್ಯನ್ತರೇ ಚೈವ ವಿಷ್ಠಿತಃ ಪುರುಷಗ್ರಹಃ ॥೧೭॥**

ಚಿತ್ತಾ ಮತ್ತು ಸ್ವಾತೀನಕ್ಷತ್ರಗಳ ಮಧ್ಯದಲ್ಲಿರುವ ಪುರುಷಗ್ರಹವು(? ) (ರಾಹುವು) ರೋಹಿಣೀನಕ್ಷತ್ರವನ್ನೂ ಚಂದ್ರ-ಸೂರ್ಯರನ್ನೂ ಪೀಡಿಸುತ್ತಿದೆ. ಘೋರವಾಗಿ ಪ್ರಜ್ವಲಿಸುತ್ತಾ ಧ್ರುವನಕ್ಷತ್ರವನ್ನು ಎಡಭಾಗಕ್ಕೆ ಬಿಟ್ಟುಕೊಂಡು (ಅಪಸವ್ಯವಾಗಿ) ಮುನ್ನಡೆಯುತ್ತಿದೆ. (ಇಲ್ಲಿಯೂ ಗ್ರಹದ ಹೆಸರಿಲ್ಲ. ಪುರುಷ ಗ್ರಹ ಎಂದು ಹೇಳಿದ್ದಾರೆ. ವ್ಯಾಖ್ಯಾನಕಾರರು 'ರಾಹು' ಎಂದು ಅರ್ಥ ಮಾಡಿರುತ್ತಾರೆ. ಆದರೆ ಜ್ಯೋತಿಷ್ಯಶಾಸ್ತ್ರದ ಪ್ರಕಾರ ಸೂರ್ಯ, ಗುರು ಮತ್ತು ಅಂಗಾರಕ–ಇವು ಪುರುಷಗ್ರಹಗಳು. ಶುಕ್ರ, ಚಂದ್ರ, ರಾಹು–ಇವುಗಳು ಸ್ತ್ರೀಗ್ರಹಗಳು. ಶನಿ, ಬುಧ, ಕೇತು– ಇವುಗಳು ನಪುಂಸಕಗ್ರಹಗಳು. ಹಿಂದಿನ ೧೨ನೆಯ ಶ್ಲೋಕದಲ್ಲಿ ಚಿತ್ತಾ-ಸ್ವಾತೀನಕ್ಷತ್ರಗಳ ನಡುವೆ ಶ್ವೇತಗ್ರಹವಿದೆ ಯೆಂದು ಹೇಳಿದೆ. ಆದುದರಿಂದ ಪುರುಷಗ್ರಹವೆಂದರೆ ಇಂತಹುದೇ ಗ್ರಹ ವೆಂದು ನಿರ್ಣಯಮಾಡಲು ಬಹು ಕಷ್ಟವೇ ಸರಿ. ಕೆಲವು ಪುಸ್ತಕಗಳಲ್ಲಿ ಪುರುಷ ಗ್ರಹವೆಂಬ ಪಾಠಾಂತರವಿದೆ. ಇದಕ್ಕೆ ಕ್ರೂರಗ್ರಹವೆಂದು ಅರ್ಥಮಾಡ ಬಹುದೇ ವಿನಾ ಇಂತಹುದೇ ಗ್ರಹವೆಂದು ಈ ಪಾಠದಂತೆಯೂ ಹೇಳಲು ಸಾಧ್ಯವಾಗುವುದಿಲ್ಲ. ಇದಕ್ಕೂ ಒಬ್ಬರು ರಾಹುವೆಂದೇ ಅರ್ಥಮಾಡಿದ್ದಾರೆ. ಎಲ್ಲ ಭಾಷಾಂತರಕಾರರಿಗೂ ಈ ಶ್ಲೋಕಗಳು ಬಹಳ ಒಗಟಾಗಿಯೇ ಇರುವು ವೆಂಬುದಕ್ಕೆ ಈ ಶ್ಲೋಕದ ಆಂಗ್ಲಭಾಷಾಂತರವನ್ನು ಉದಾಹರಿಸಬಹುದು.

The constellation Dhruva blazing fiercely wheeleth towards the right. Both the moon and the sun are afflicting Rohini. The fierce planet (Rahu) hath taken up the position between constellation Chitra and Swathi."

**ವಕ್ರಾನುವಕ್ರಂ ಕೃತ್ವಾ ಚ ಶ್ರವಣಂ ಪಾವಕಪ್ರಭಃ ।**
**ಬ್ರಹ್ಮರಾಶಿಂ ಸಮಾವೃತ್ಯ ಲೋಹಿತಾಙ್ಗೋ ವ್ಯವಸ್ಥಿತಃ ॥೧೮॥**

ಅಗ್ನಿಗೆ ಸಮಾನವಾದ ಪ್ರಭೆಯುಳ್ಳ ಮಂಗಳನು ವಕ್ರಾನುವಕ್ರ

ವಾಗಿ ಬೃಹಸ್ಪತಿಯಿರುವ ಶ್ರವಣನಕ್ಷತ್ರವನ್ನೂ ಬೃಹಸ್ಪತಿಯ ರಾಶಿಯನ್ನೂ ಆವರಿಸಿ ಕುಳಿತಿದ್ದಾನೆ.

**ಸರ್ವಸಸ್ಯಪರಿಚ್ಛನ್ನಾ ಪೃಥಿವೀ ಸಸ್ಯಶಾಲಿನೀ ।**
**ಪಞ್ಚಶೀರ್ಷಾ ಯವಾಶ್ಚಾಪಿ ಶತಶೀರ್ಷಾಶ್ಚ ಶಾಲಯಃ ॥೧೯॥**

ಅಂಗಾರಕನ ಈ ವಕ್ರಾನುವಕ್ರಗತಿಯಿಂದಾಗಿ ಭೂಮಿಯು ಸಸ್ಯಶಾಲಿನಿಯಾಗಿದ್ದಾಳೆ. ಸಕಲವಿಧವಾದ ಸಸ್ಯಗಳಿಂದಲೂ ಆಚ್ಛಾದಿತಳಾಗಿದ್ದಾಳೆ. ಗೋಧಿಯ ಸಸ್ಯಗಳಲ್ಲಿ ಐದೈದು ತೆನೆಗಳಿವೆ. ಭತ್ತದ ಸಸ್ಯಗಳಲ್ಲಿ ನೂರು ತೆನೆಗಳಿವೆ.

**ಪ್ರಧಾನಾಃ ಸರ್ವಲೋಕಸ್ಯ ಯಾಸ್ವಾಯತ್ತಮಿದಂ ಜಗತ್ ।**
**ತಾ ಗಾವಃ ಪ್ರಸ್ನುತಾ ವತ್ಸೈಃ ಶೋಣಿತಂ ಪ್ರಕ್ಷರನ್ತ್ಯುತ ॥೨೦॥**

ಯಾವುಗಳು ಸರ್ವಲೋಕಗಳಲ್ಲಿಯೂ ತಾಯಿಯಂತೆ ಪ್ರಧಾನಭೂತಗಳಾಗಿವೆಯೋ ಯಾವುಗಳಿಗೆ ಈ ಜಗತ್ತು ಅಧೀನವಾಗಿರುವುದೋ ಅಂತಹ ಗೋವುಗಳು–ಕರುಗಳು ಹಾಲುಕುಡಿಯಲು ಹೋದಾಗ ಕೇವಲ ರಕ್ತವನ್ನೇ ತಮ್ಮ ಕೆಚ್ಚಲಿನಿಂದ ಸುರಿಸುತ್ತವೆ.

**ನಿಶ್ಚೇರುರರ್ಚಿಷಶ್ಚಾಪಾತ್ಖಡ್ಗಾಶ್ಚ ಜ್ವಲಿತಾ ಭೃಶಮ್ ।**
**ವ್ಯಕ್ತಂ ಪಶ್ಯನ್ತಿ ಶಸ್ತ್ರಾಣಿ ಸಂಗ್ರಾಮಂ ಸಮುಪಸ್ಥಿತಮ್ ॥೨೧॥**

ಯೋಧರ ಧನುಸ್ಸುಗಳಿಂದ ಬೆಂಕಿಯ ಜ್ವಾಲೆಗಳು ಹೊರಹೊಮ್ಮುತ್ತಿವೆ. ಖಡ್ಗಗಳು ಬಹುವಾಗಿ ಪ್ರಜ್ವಲಿಸುತ್ತಿವೆ. ಸಮಸ್ತಶಸ್ತ್ರಾಸ್ತ್ರಗಳೂ ಸಹ ಯುದ್ಧಸನ್ನಿಹಿತವಾಗಿರುವುದನ್ನು ಅರಿತುಕೊಂಡಿವೆಯೆಂಬುದು ಇದರಿಂದ ವ್ಯಕ್ತವಾಗುತ್ತದೆ.

**ಅಗ್ನಿವರ್ಣಾ ಯಥಾ ಭಾಸಃ ಶಸ್ತ್ರಾಣಾಮುದಕಸ್ಯ ಚ ।**
**ಕವಚಾನಾಂ ಧ್ವಜಾನಾಂ ಚ ಭವಿಷ್ಯತಿ ಮಹಾಕ್ಷಯಃ ॥೨೨॥**

ಶಸ್ತ್ರಗಳ, ನೀರಿನ, ಕವಚಗಳ ಮತ್ತು ಧ್ವಜಗಳ ಕಾಂತಿಯು ಬೆಂಕಿಯ ಬಣ್ಣಕ್ಕೆ ತಿರುಗಿತೆಂದರೆ ಮಹತ್ತರವಾದ ಜನಕ್ಷಯವು ಆಗಿಯೇ ತೀರುತ್ತದೆ. ಮಹಾರಾಜ! ಪಾಂಡವರೊಡನೆ ಕೌರವರು ಮಾಡುವ ಯುದ್ಧದಲ್ಲಿ ಕಗ್ಗೊಲೆಯ ಪರಿಣಾಮವಾಗಿ ಭೂಮಿಯಲ್ಲಿ ಸುಳಿಗಳಿಂದ ಕೂಡಿದ ರಕ್ತ

ನದಿಯೇ ಹರಿಯುತ್ತದೆ. ಆ ರಕ್ತನದಿಯಲ್ಲಿ ಧ್ವಜರೂಪವಾದ ಉಕ್ಕಡಗಳು (ಸಣ್ಣ ದೋಣಿಗಳು) ತೇಲುತ್ತಿರುತ್ತವೆ. ನಾಲ್ಕು ದಿಕ್ಕುಗಳಲ್ಲಿಯೂ ಮೃಗ-ಪಕ್ಷಿಗಳು ಮುಂಬರುವ ಮಹಾಭಯವನ್ನು ಮನಗಂಡು ಪ್ರಜ್ವಲಿಸುವ ಮುಖ ದಿಂದ ಕೂಡಿದುವುಗಳಾಗಿ (ಭಯದಿಂದ ಕೆಂಪಾದ ಮುಖದಿಂದ ಕೂಡಿದುವು ಗಳಾಗಿ) ಕಿರುಚಿಕೊಳ್ಳುತ್ತಿವೆ. ಈ ಮೂಲಕವಾಗಿ ಅವುಗಳು ಮುಂಬರುವ ಮಹಾಭಯದ ಸೂಚನೆಯನ್ನೀಯುತ್ತಿವೆ. ಒಂದೇ ರೆಕ್ಕೆಯುಳ್ಳ, ಒಂದೇ ಕಣ್ಣುಳ್ಳ ಮತ್ತು ಒಂದೇ ಕಾಲುಳ್ಳ ಆಕಾಶಗಾಮಿಯಾದ ಒಂದು ಜಾತಿಯ ಪಕ್ಷಿಯು ರಾತ್ರಿಯ ವೇಳೆಯಲ್ಲಿ ಕೋಪಗೊಂಡು ರಕ್ತವನ್ನೇ ವಾಂತಿಮಾಡು ತ್ತಿದೆಯೋ ಎಂಬಂತೆ ಬಹುಭಯಂಕರವಾಗಿ ಕಿರುಚಿಕೊಳ್ಳುತ್ತಿದೆ.

ಮಹಾರಾಜ! ಈ ಸಮಯದಲ್ಲಿ ಶಸ್ತ್ರಗಳು ಧಗ-ಧಗನೆ ಉರಿಯುತ್ತಿ ವೆಯೋ ಎಂಬಂತೆಯೇ ಕಾಣುತ್ತಿವೆ. ಇವುಗಳ ಜಾಜ್ವಲ್ಯಮಾನವಾದ ಪ್ರಭೆ ಯಿಂದಾಗಿ ಅಂತರಿಕ್ಷದಲ್ಲಿರುವ ಉದಾರರಾದ ಸಪ್ತರ್ಷಿಗಳ ಪ್ರಭೆಯೂ ಸಹ ಲುಪ್ತವಾಗಿಹೋಗಿದೆ. (ಶಸ್ತ್ರಗಳ ಪ್ರಭೆಯು ಸಪ್ತರ್ಷಿಗಳ ಪ್ರಭೆಯನ್ನೂ ಮಸುಕುಗೊಳಿಸಿದೆ.)

ಸಂವತ್ಸರಪರ್ಯಂತವಾಗಿ ಒಂದೇ ರಾಶಿಯಲ್ಲಿರಬೇಕಾದ, ಜಾಜ್ವಲ್ಯ ಮಾನವಾದ ಪ್ರಕಾಶವುಳ್ಳ ಬೃಹಸ್ಪತಿ-ಶನೈಶ್ಚರಗ್ರಹಗಳು ವಕ್ರಗತಿಯಿಂದ ವಿಶಾಖಾನಕ್ಷತ್ರವನ್ನು ಸಮೀಪಿಸುತ್ತಿವೆ.

**ಚನ್ದ್ರಾದಿತ್ಯಾವುಭೌ ಗ್ರಸ್ತಾವೇಕಾಹ್ನಾ ಹಿ ತ್ರಯೋದಶೀಮ್ ।**
**ಅಪರ್ವಣಿ ಗ್ರಹಂ ಯಾತೌ ಪ್ರಜಾಸಂಕ್ಷಯಮಿಚ್ಛತಃ ॥೨೮॥**

ಈ ಪಕ್ಷದಲ್ಲಿ ಹದಿಮೂರನೆಯ ದಿವಸವೇ ಸೂರ್ಯ-ಚಂದ್ರರಿಬ್ಬರೂ ಒಂದಾಗಿಬಿಟ್ಟರು. (**ದರ್ಶಃ ಸೂರ್ಯೇನ್ದುಸಂಗಮಃ** ಸೂರ್ಯ-ಚಂದ್ರರಿಬ್ಬರೂ ಸೇರುವ ದಿವಸಕ್ಕೆ ದರ್ಶ ಅಥವಾ ಅಮಾವಾಸ್ಯೆ ಎಂದು ಹೆಸರು. ಸಾಮಾನ್ಯವಾಗಿ ದರ್ಶವು ಹುಣ್ಣಿಮೆಯಿಂದ ಹದಿನೈದು ದಿವಸಕ್ಕೆ ಹದಿನಾರು ಅಥವಾ ಹದಿನಾಲ್ಕು ದಿವಸಕ್ಕೆ ಬರುವುದುಂಟು. ಆದರೆ ಮಹಾಭಾರತಯುದ್ಧವು ನಡೆಯಬೇಕಾಗಿದ್ದ ಆ ಪಕ್ಷದಲ್ಲಿ ಎರಡು ತಿಥಿಗಳು ಉಪರಿಯಾಗಿ ಬಂದುಬಿಟ್ಟುವು. ಆದುದರಿಂದ ಹದಿಮೂರನೆಯ ದಿವಸಕ್ಕೇ ಚಂದ್ರ-ಸೂರ್ಯರ ಸಂಗಮವಾಯಿತು. (ಅಮಾವಾಸ್ಯೆಯಾಯಿತು.) ಆ

ಸಮಯದಲ್ಲಿ ಪ್ರಜೆಗಳ ಕ್ಷಯವನ್ನು ಇಚ್ಛಿಸಿದ ಸೂರ್ಯ-ಚಂದ್ರರಿಬ್ಬರೂ ರಾಹುಗ್ರಸ್ತರಾದರು. (ಪಕ್ಷದಲ್ಲಿ ಎರಡು ತಿಥಿಗಳು ಉಪರಿಯಾಗಿ ಬಂದು ಹದಿಮೂರನೆಯ ದಿವಸವೇ ಅಮಾವಾಸ್ಯೆಯಾಗಿ ಅಂದು ಗ್ರಹಣವೂ ಆಗಿ ಬಿಟ್ಟರೆ ಜನನಾಶವಾಗುತ್ತದೆಯೆಂಬುದು ಶಾಸ್ತ್ರದಲ್ಲಿ ಉಕ್ತವಾಗಿದೆ.)

**ಅಶೋಭಿತಾ ದಿಶಃ ಸರ್ವಾಃ ಪಾಂಸುವರ್ಷೈಃ ಸಮನ್ತತಃ ।**
**ಉತ್ಪಾತಮೇಘಾ ರೌದ್ರಾಶ್ಚ ರಾತ್ರೌ ವರ್ಷನ್ತಿ ಶೋಣಿತಮ್ ॥೨೯॥**

ಧೂಳಿನ ಮಳೆಯಿಂದ ಕೂಡಿರುವ ನಾಲ್ಕು ದಿಕ್ಕುಗಳೂ ಸಹ ಮಸುಕು-ಮಸುಕಾಗಿವೆ. (ಕಾಂತಿಹೀನವಾಗಿವೆ.) ಉತ್ಪಾತಸೂಚಕವಾದ ಭಯಂಕರಮೇಘಗಳು ರಾತ್ರಿಯಲ್ಲಿ ರಕ್ತವನ್ನೇ ಸುರಿಸುತ್ತವೆ.

**ಕೃತ್ತಿಕಾಂ ಪೀಡಯಂಸ್ತೀಕ್ಷ್ಣೈರ್ನಕ್ಷತ್ರಂ ಪೃಥಿವೀಪತೇ ।**
**ಅಭೀಕ್ಷ್ಣಂವಾತಾ ವಾಯನ್ತೇ ಧೂಮಕೇತುಮವಸ್ಥಿತಾಃ ॥೩೦॥**

ಚಿತ್ತಾ ಮತ್ತು ಸ್ವಾತೀನಕ್ಷತ್ರಗಳ ನಡುವೆ ಇರುವ ರಾಹುವು ಈ ಹಿಂದೆ ರೋಹಿಣಿಯನ್ನು ಪೀಡಿಸುತ್ತಿದೆಯೆಂದು ಹೇಳಿದೆ. ಅದೇ ರಾಹುವು ಚಿತ್ತಾ ನಕ್ಷತ್ರದ ಅಂಶದಲ್ಲಿ ಕುಳಿತು ಹದಿನೆಂಟನೆಯದಾದ ರೋಹಿಣೀನಕ್ಷತ್ರವನ್ನು ಪೀಡಿಸುತ್ತಾನೆ. ಕ್ರೂರವಾದ ಕರ್ಮಗಳಿಂದ ಉಪಲಕ್ಷಿತವಾದ ಅದೇ ರಾಹು ಗ್ರಹವು ಸರ್ವತೋಭದ್ರಚಕ್ರದಲ್ಲಿ ಸ್ವಾತ್ಯಂಶದಲ್ಲಿ ಕುಳಿತು ಹದಿನಾರನೆಯ ದಾದ ಸಾಂಘಾತಿಕನಕ್ಷತ್ರವಾದ ಕೃತ್ತಿಕೆಯನ್ನು ಪೀಡಿಸುತ್ತದೆ. (ಈ ಶ್ಲೋಕದಲ್ಲಿ ರಾಹುವಿನ ಹೆಸರೇ ಇಲ್ಲದಿದ್ದರೂ ವ್ಯಾಖ್ಯಾನಕಾರರು ಕೊಟ್ಟಿರುವ ಅರ್ಥವನ್ನು ಇಲ್ಲಿ ಭಾಷಾಂತರಿಸಲಾಗಿದೆ. ಅವರ ವ್ಯಾಖ್ಯಾನವನ್ನು ಬಿಟ್ಟರೆ ಈ ಶ್ಲೋಕದ ಪೂರ್ವಾರ್ಧಕ್ಕೆ ಇಷ್ಟುಮಾತ್ರ ಅರ್ಥಮಾಡಬಹುದಾಗಿದೆ : "ಪೃಥಿವೀಪತಿಯೇ! ಕೃತ್ತಿಕಾನಕ್ಷತ್ರವನ್ನು ಬಹುತೀಕ್ಷ್ಣವಾದ (ಕಿರಣಗಳಿಂದ) ಪೀಡಿಸುತ್ತಾ ಧೂಮಕೇತುವನ್ನು ಆಶ್ರಯಹೊಂದಿರುವ ಚಂಡಮಾರುತಗಳು ಬೀಸುತ್ತಿವೆ." ಭಂ. ರಿ. ಸಂಸ್ಥೆಯವರು ಪ್ರಕಟಿಸಿರುವ ಪ್ರತಿಯಲ್ಲಿ ಈ ಶ್ಲೋಕದ ಪಾಠವು ಈ ರೀತಿಯಾಗಿದೆ.

**ಕೃತ್ತಿಕಾಸು ಗ್ರಹಸ್ತೀವ್ರೋ ನಕ್ಷತ್ರೇ ಪ್ರಥಮೇ ಜ್ವಲನ್ ।**
**ವಪೂಂಷ್ಯಪಹರನ್ಭಾಸಾಂ ಧೂಮಕೇತುರಿವ ಸ್ಥಿತಃ ॥**

ತೀವ್ರವಾದ ಗ್ರಹವು (? ) ಕೃತ್ತಿಕಾನಕ್ಷತ್ರಗಳಲ್ಲಿ ಮೊದಲನೆಯ ನಕ್ಷತ್ರದಲ್ಲಿ ಪ್ರಜ್ವಲಿಸುತ್ತಾ ಕೃತ್ತಿಕಾನಕ್ಷತ್ರಗಳ ಶರೀರಗಳನ್ನು ತನ್ನ ಕಾಂತಿಯಿಂದ ಅಪಹರಿಸುತ್ತಾ (ನಕ್ಷತ್ರಕಾಂತಿಯನ್ನು ಕುಂಠಿತಗೊಳಿಸುತ್ತಾ ) ಧೂಮಕೇತುವಿನೋಪಾದಿಯಲ್ಲಿ ನಿಂತಿದೆ)

**ವಿಷಮಂ ಜನಯನ್ನೇತ ಆಕ್ರನ್ದಜನನಂ ಮಹತ್ ।**
**ತ್ರಿಷು ಸರ್ವೇಷು ನಕ್ಷತ್ರನಕ್ಷತ್ರೇಷು ವಿಶಾಮ್ಪತೇ ।**
**ಗೃಧ್ರಃ ಸಮ್ಪತತೇ ಶೀರ್ಷಂ ಜನಯನ್ಭಯಮುತ್ತಮಮ್ ॥೩೧॥**

ಈ ದುಶ್ಶಕುನಗಳು ವಿಷಮಪರಿಸ್ಥಿತಿಯನ್ನುಂಟುಮಾಡುತ್ತವೆ ಮತ್ತು ಆಕ್ರಂದಜನಕವಾಗಿವೆ. ಈ ಯುದ್ಧದಿಂದಾಗಿ ಲಕ್ಷೋಪಲಕ್ಷ ಜನರು ಶೋಕ ಸಾಗರದಲ್ಲಿ ಮುಳುಗುತ್ತಾರೆ. ಇಪ್ಪತ್ತೇಳು ನಕ್ಷತ್ರಗಳನ್ನೂ ಮೂರು ವಿಭಾಗ ಗಳನ್ನಾಗಿ ಮಾಡಿದರೆ ಒಂಬತ್ತೊಂಬತ್ತು ನಕ್ಷತ್ರಗಳಿಗೆ ಒಂದು ಭಾಗವಾಗುತ್ತದೆ. ಈ ಮೂರು ಸಮುದಾಯಕ್ಕೂ ಕ್ರಮಶಃ, ಅಶ್ವಪತಿಛತ್ರ, ಗಜಪತಿಛತ್ರ ಮತ್ತು ನರಪತಿಛತ್ರ–ಎಂದು ಕರೆಯುತ್ತಾರೆ. ಈ ಮೂರು ಸಮುದಾಯಗಳಲ್ಲಿ ಮುಖ್ಯನಕ್ಷತ್ರಗಳಿಗೆ ಪಾಪಗ್ರಹದ ವೇಧೆಯಿದ್ದಲ್ಲಿ ಆ ಪಾಪಗ್ರಹವು ಮಹತ್ತರವಾದ ಭಯವನ್ನುಂಟುಮಾಡುತ್ತದೆ. ಮೊದಲನೆಯದಾದ ಅಶ್ವಪತಿಛತ್ರದಲ್ಲಿರುವ ನಕ್ಷತ್ರಗಳಲ್ಲಿ ಕೃತ್ತಿಕಾ-ರೋಹಿಣೀ ಮತ್ತು ಪುಷ್ಯ ನಕ್ಷತ್ರಗಳಿಗೆ ಪಾಪಗ್ರಹಗಳ ವೇಧೆಯಿದೆ. ಗಜಪತಿಛತ್ರದಲ್ಲಿರುವ ನಕ್ಷತ್ರಗಳಲ್ಲಿ ಮಘಾನಕ್ಷತ್ರದಲ್ಲಿ ಅಂಗಾರಕನೂ, ಸ್ವಾತಿಯಲ್ಲಿ ಸೂರ್ಯ-ಚಂದ್ರ-ರಾಹುಗಳೂ ಇದ್ದಾರೆ. ಮೂರನೆಯದಾದ ನರಪತಿಛತ್ರದಲ್ಲಿರುವ ನಕ್ಷತ್ರ ಗಳಲ್ಲಿ ಶ್ರವಣ-ಪ್ರೋಷ್ಠಪದಗಳಲ್ಲಿ ಬೃಹಸ್ಪತಿ-ಶುಕ್ರರಿದ್ದಾರೆ. ಉತ್ತರಾನಕ್ಷತ್ರ ದಲ್ಲಿ ಶನೈಶ್ಚರನಿದ್ದಾನೆ. ಈ ಭರತಖಂಡವನ್ನೂ ಸಹ ಮೂರು ಪ್ರಕಾರವಾಗಿ ವಿಂಗಡಿಸಲಾಗಿದೆ. ಸಿಂಧು-ಸಾಗರಸಂಗಮದಿಂದ ಗೋದಾವರೀ-ಸಾಗರ ಸಂಗಮದವರೆಗೆ ಒಂದು ರೇಖೆಯೆಳೆದರೆ ಆ ರೇಖೆಯ ದಕ್ಷಿಣದಿಕ್ಕಿಗಿರುವುದು ನರಪತಿಪ್ರದೇಶ. ದಕ್ಷಿಣಸಮುದ್ರಪ್ರದೇಶದಲ್ಲಿರುವ ಕರ್ಣಪ್ರಾವರಣ ಪ್ರದೇಶದವರೆಗೂ ಒಂದು ಗೆರೆಯನ್ನೆಳೆದರೆ ಆ ಗೆರೆಯ ಉತ್ತರಕ್ಕಿರುವುದು ಗಜಪತಿಪ್ರದೇಶ. ಆ ಎರಡು ರೇಖೆಗಳ ಮಧ್ಯಭಾಗದಲ್ಲಿರುವುದೇ ಅಶ್ವಪತಿ

ಪ್ರದೇಶ.) ಮೂರು ಭಾಗಗಳ ನಕ್ಷತ್ರಗಳಿಗೂ ಪಾಪಗ್ರಹಗಳ ವೇಧೆಯಿರುವುದರಿಂದ ಈ ಮೂರು ಪ್ರದೇಶಗಳ ಜನರೂ ಕ್ಷಯಿಸುತ್ತಾರೆ.

**ಚತುರ್ದಶೀಂ ಪಞ್ಚದಶೀಂ ಭೂತಪೂರ್ವಾಂ ಚ ಷೋಡಶೀಮ್ ।**
**ಇಮಾಂ ತು ನಾಭಿಜಾನೇऽಹಮಮಾವಾಸ್ಯಾಂ ತ್ರಯೋದಶೀಮ್ ।**
**ಚನ್ದ್ರಸೂರ್ಯಾವುಭೌ ಗ್ರಸ್ತಾವೇಕಮಾಸೀಂ ತ್ರಯೋದಶೀಮ್ ॥**

ಹದಿನಾಲ್ಕು ದಿನಗಳಿರುವ ಪಕ್ಷವನ್ನು ಕಂಡಿದ್ದೇನೆ. ಹದಿನೈದು ದಿನಗಳಿರುವ ಪಕ್ಷವನ್ನೂ ಕಂಡಿದ್ದೇನೆ. ಅಪರೂಪಕ್ಕೊಮ್ಮೆ ಒಂದು ಪಕ್ಷದಲ್ಲಿ ಹದಿನಾರು ದಿವಸಗಳೂ ಇರುವುದುಂಟು. ಆದರೆ ಹುಣ್ಣಿಮೆಯು ಕಳೆದು ಹದಿಮೂರನೆಯ ದಿವಸವೇ ಅಮಾವಾಸ್ಯೆಯು ಬರುವುದನ್ನು ನಾನಿದುವರೆಗೂ ಕಂಡೂ ಇಲ್ಲ ; ಕೇಳಿಯೂ ಇಲ್ಲ. ಈ ಒಂದು ತಿಂಗಳಲ್ಲಿ ಮಾತ್ರ (ಸರ್ವವಿನಾಶಕವಾದ ಯುದ್ಧಸೂಚಕವಾಗಿಯೋ ಎಂಬಂತೆ) ಹದಿಮೂರು ದಿವಸಗಳಲ್ಲಿ ಚಂದ್ರ-ಸೂರ್ಯರಿಬ್ಬರೂ ರಾಹುಗ್ರಸ್ತರಾಗಿರುತ್ತಾರೆ. (**ತ್ರಯೋದಶೀಂ** ಎಂಬುದಕ್ಕೆ ವ್ಯಾಖ್ಯಾನಕಾರರು ಹೀಗೆ ಅರ್ಥಮಾಡಿರುತ್ತಾರೆ. **ತ್ರಯೋದಶಾನಾಂ ಅಹ್ನಾಂ ಪೂರಣೀಂ=ಅಮಾವಾಸ್ಯಾಂ** ಹದಿಮೂರು ದಿವಸಗಳಿಗೆ ತುಂಬಿದ ಅಮಾವಾಸ್ಯೆ.)

ಈ ಪ್ರಕಾರವಾಗಿ ಅಪ್ರಸಿದ್ಧವಾದ ಕೇವಲ ಹದಿಮೂರೇ ದಿವಸಗಳುಳ್ಳ ಪಕ್ಷದಿಂದ ಕೂಡಿದ ಅಮಾವಾಸ್ಯೆಯಲ್ಲಿ ರಾಹುಗ್ರಸ್ತರಾದ ಸೂರ್ಯ-ಚಂದ್ರರಿಬ್ಬರೂ ಲೋಕದ ಪ್ರಜೆಗಳನ್ನು ಕ್ಷಯಿಸುವವರಾಗುತ್ತಾರೆ. ಕೃಷ್ಣಪಕ್ಷದ ಚತುರ್ದಶಿಯನ್ನು ಅನುಸರಿಸಿ ದೊಡ್ಡ ಮಾಂಸದ ಮಳೆಯೇ ಸುರಿದು ಹೋಯಿತು. ಆ ಸಮಯದಲ್ಲಿ ರಾಕ್ಷಸರ ಮುಖವು ರಕ್ತದಿಂದ ತುಂಬಿ ಹೋಗಿದ್ದಿತು. ಅವರು ಎಷ್ಟು ರಕ್ತವನ್ನು ಕುಡಿದಿದ್ದರೂ ಸಹ ಸಂತೃಪ್ತರಾಗಿರಲಿಲ್ಲ. ಧೃತರಾಷ್ಟ್ರ! ನದಿಗಳೆಲ್ಲವೂ ಹಿಂದುಮುಂದಾಗಿ ಹರಿಯುತ್ತಿವೆ. ಕೆಲವು ನದಿಗಳು ರಕ್ತದ ನೀರಿನಿಂದ ತುಂಬಿವೆ. ನೊರೆಗಳಿಂದಲೇ ತುಂಬಿ ಹೋಗಿರುವ ಬಾವಿಗಳು ಎತ್ತುಗಳಂತೆ ಕುಣಿದಾಡುತ್ತಿವೆ. ಇಂದ್ರನ ವಜ್ರಾಯುಧಕ್ಕೆ ಸಮಾನವಾದ ಪ್ರಭೆಯುಳ್ಳ ಉಲ್ಕೆಗಳು ಬಿರುಗಾಳಿಯಿಂದ ಕೂಡಿ ಕೆಳಗೆ ಬೀಳುತ್ತಿವೆ. ಈ ರಾತ್ರಿಯು ಕಳೆದೊಡನೆಯೇ ಬೆಳಗಾಗುತ್ತಲೇ ನೀವು ಮಾಡಿದ ಅನ್ಯಾಯಕ್ಕೆ ಫಲವನ್ನು ಅನುಭವಿಸುವಿರಿ. ನಾಲ್ಕೂ ದಿಕ್ಕುಗಳಲ್ಲಿ

ಗಾಢಾಂಧಕಾರವು ಕವಿದಿತ್ತಾದ್ದರಿಂದ ಪಂಜನ್ನು ಹಿಡಿದುಕೊಂಡು ಆಶ್ರಮ ಗಳಿಂದ ಹೊರಕ್ಕೆ ಬಂದ ಮಹರ್ಷಿಗಳು ಅನ್ಯೋನ್ಯವಾಗಿ ಕಲೆತು ಈ ಉತ್ಪಾತಗಳ ವಿಷಯವಾಗಿ ತಮ್ಮ ತಮ್ಮ ಅಭಿಪ್ರಾಯಗಳನ್ನು ಹೀಗೆ ವ್ಯಕ್ತ ಪಡಿಸಿದರು :

**ಭೂಮಿಪಾಲಸಹಸ್ರಾಣಾಂ ಭೂಮಿಃ ಪಾಸ್ಯತಿ ಶೋಣಿತಮ್ ॥೩೭॥**

'ಸಾವಿರಾರು ಭೂಮಿಪಾಲರ ರಕ್ತವನ್ನು ಭೂದೇವಿಯು ಕುಡಿಯು ತ್ತಾಳೆ.'

ಧೃತರಾಷ್ಟ್ರ! ಕೈಲಾಸ, ಮಂದರಪರ್ವತ ಮತ್ತು ಹಿಮಾಲಯಗಳ ಕಡೆಯಿಂದ ಸಾವಿರಾರು ರೀತಿಯ ಭಯಾನಕವಾದ ಮಹಾಶಬ್ದಗಳು ಕೇಳಿ ಬರುತ್ತಿವೆ. ಆ ಪರ್ವತಗಳಲ್ಲಿರುವ ಅನೇಕಶಿಖರಗಳೂ ಸಹ ಕೆಳಕ್ಕೆ ಬೀಳು ತ್ತಿವೆ. ಭೂಕಂಪದಿಂದಾಗಿ ಪ್ರತ್ಯೇಕ-ಪ್ರತ್ಯೇಕವಾಗಿರುವ ನಾಲ್ಕು ಸಾಗರಗಳೂ ಅತಿಯಾಗಿ ವೃದ್ಧಿಹೊಂದಿ ತೀರವನ್ನೇ ಅತಿಕ್ರಮಿಸಿ ನುಗ್ಗಿಬಿಡುತ್ತವೆಯೋ ಎಂಬಂತೆ ಭೂಮಿಯನ್ನು ಕ್ಷೋಭೆಗೊಳಿಸುತ್ತಿವೆ. ಕಲ್ಲುಗಳನ್ನೂ ಸಹ ಹಾರಿಸಿಕೊಂಡು ಹೋಗುವ ಉಗ್ರವಾದ ಚಂಡಮಾರುತಗಳು ಅನೇಕಾನೇಕ ವೃಕ್ಷಗಳನ್ನು ಬುಡಮೇಲಾಗಿ ಮಾಡುತ್ತಿವೆ. ದೊಡ್ಡ ದೊಡ್ಡ ಚಂಡಮಾರುತ ಗಳಿಂದ ಭಗ್ನವಾಗಿಹೋದ ಮತ್ತು ಸಿಡಿಲುಗಳ ಆಘಾತಕ್ಕೊಳಗಾದ ವೃಕ್ಷಗಳು ಪೂಜಾವೃಕ್ಷಗಳು (ಅರಳೀಮರ ಮುಂತಾದುವು) ಮತ್ತು ಪೂಜಾಸ್ಥಾನಗಳು ನಗರಗಳಲ್ಲಿಯೂ ಮತ್ತು ಗ್ರಾಮಗಳಲ್ಲಿಯೂ ಹೇರಳವಾಗಿ ಬಿದ್ದು ಹೋಗುತ್ತಿವೆ. ಬ್ರಾಹ್ಮಣರು ಯಜ್ಞೇಶ್ವರನಲ್ಲಿ ಹೋಮಮಾಡಿದನಂತರ ಕಪ್ಪು, ಕೆಂಪು ಮತ್ತು ಹಳದಿಯ ಜ್ವಾಲೆಗಳು ಮೇಲೇಳುತ್ತವೆ. ಈ ಜ್ವಾಲೆಗಳು ಅಪಸವ್ಯವಾಗಿ ಸುತ್ತುತ್ತಿವೆ. ಇವುಗಳಿಂದ ದುರ್ಗಂಧವು ಹುಟ್ಟುವುದಲ್ಲದೆ ದಾರುಣವಾದ ಕರ್ಣಕಠೋರವಾದ ಶಬ್ದವೂ ಹೊರಬರುತ್ತಿರುತ್ತದೆ. ಸ್ಪರ್ಶ, ರಸ ಮತ್ತು ಗಂಧಗಳು ವಿಪರೀತವಾದ ಸ್ಥಿತಿಯನ್ನು ಹೊಂದಿವೆ. (ಸುಗಂಧವು ಬರಬೇಕಾದೆಡೆಯಲ್ಲಿ ದುರ್ಗಂಧವು ಬರುತ್ತದೆ. ಸ್ವಾದುವಾಗಿರಬೇಕಾದ ಪದಾರ್ಥವು ಕಟುವಾಗಿರುತ್ತದೆ. ಮಕ್ಕಳೀಗ ಸ್ಪರ್ಶಸುಖವನ್ನು ಕೊಡುತ್ತಿಲ್ಲ.) ಧ್ವಜದಂಡಗಳು ಬಾರಿಬಾರಿಗೂ ಕಂಪಿಸುತ್ತಾ ಹೊಗೆಯನ್ನು ಹೊರಗೆಡಹುತ್ತಿವೆ. ಭೇರೀ ಮತ್ತು ನಗಾರಿಗಳು ಬಾರಿಸಿದೊಡನೆಯೇ ಅತಿ

ಯಾಗಿ ಶಬ್ದಮಾಡುವುದಲ್ಲದೇ ಶಬ್ದದ ಜೊತೆಯಲ್ಲಿಯೇ ಅಗ್ನಿಯ ಕಿಡಿಗಳನ್ನೂ ಸುರಿಸುತ್ತವೆ. ಫಲ-ಪುಷ್ಪಭರಿತವಾದ ವೃಕ್ಷಗಳ ಅಗ್ರಭಾಗಗಳ ಸುತ್ತಲೂ ಕಾಗೆಗಳು ಅಪಸವ್ಯದ ಮಂಡಲಾಕಾರದಲ್ಲಿ ಕುಳಿತು ಅತಿ ಭಯಂಕರವಾಗಿ ಕಿರುಚಿಕೊಳ್ಳುತ್ತಿವೆ. ಪಕ್ಷಿಗಳೂ ಸಹ 'ಪಕ್ವಾ-ಪಕ್ವಾ' ಎಂಬ ಶಬ್ದವನ್ನು ಬಾರಿಬಾರಿಗೂ ಹೇಳಿಕೊಂಡು ಧ್ವಜಗಳ ಅಗ್ರಭಾಗಗಳಲ್ಲಿ ಬಚ್ಚಿಟ್ಟುಕೊಳ್ಳುತ್ತಿವೆ. ಇವುಗಳು ಹೀಗೆ ಹೇಳುತ್ತಿರುವುದೂ ಪೃಥ್ವೀಪಾಲಕರ ವಿನಾಶಸೂಚಕವಾಗಿದೆ. (ಪಕ್ವಂ ಎಂದರೆ ವಿನಾಶವು ಸನ್ನಿಹಿತವಾಗಿದೆ ಯೆಂದರ್ಥ. **'ಪಕ್ವಂ ಪರಿಣತೇಽಪಿ ಸ್ಯಾದ್ವಿನಾಶಾಭಿಮುಖೇ ತ್ರಿಷು'** [ಮೇದಿನೀ] )

ಸೊಕ್ಕಿದ ಆನೆಗಳು ಮುಂದಾಗುವುದನ್ನು ನೆನೆದು ಗಡ-ಗಡನೆ ನಡುಗುತ್ತಾ ಮಲ-ಮೂತ್ರಗಳನ್ನು ವಿಸರ್ಜನೆಮಾಡುತ್ತಿವೆ. ಕುದುರೆಗಳೆಲ್ಲವೂ ಬಹುದೀನವಾದ ಮುಖಭಾವದಿಂದ ಕೂಡಿವೆ. ಅವುಗಳ ಮುಖದಲ್ಲಿ ಉತ್ಸಾಹವೇ ಕಾಣುತ್ತಿಲ್ಲ. ಆನೆಗಳು ಬೆವರಿನಿಂದ ಕೂಡಿದುವುಗಳಾಗಿ ನೀರನ್ನಾಶ್ರಯಿಸಿಬಿಟ್ಟಿವೆ.

ಧೃತರಾಷ್ಟ್ರ! ನಾನು ಇದುವರೆಗೂ ಹೇಳಿದುದನ್ನು ಕೇಳಿದ ಮೇಲಾದರೂ–ಈಗಲೂ ಸಹ ಕಾಲವು ಮೀರಿಹೋಗಿಲ್ಲವೆಂಬುದನ್ನು ಮನಗಂಡು–ವಿನಾಶವನ್ನು ತಪ್ಪಿಸಲು ಇದು ಸರಿಯಾದ ಕಾಲವೆಂದು ಭಾವಿಸಿ, ಯಾವ ಕಾರ್ಯಮಾಡಿದರೆ ಈ ಲೋಕವು ವಿನಾಶಹೊಂದುವುದಿಲ್ಲವೋ ದುರ್ಗತಿಯಿಂದ ಪಾರಾಗುವುದೋ–ಅಂತಹ ಕಾರ್ಯವನ್ನು ಈ ಕೂಡಲೇ ಮಾಡು. (ಕಾಲಕ್ಕೆ ತಕ್ಕಂತೆ ಮಾಡಬೇಕಾದ ಕೆಲಸಮಾಡು.) ಅಂತಹ ಯಾವುದಾದರೊಂದು ಉಪಾಯವನ್ನು ಕ್ಷಿಪ್ರವಾಗಿ ಯೋಚಿಸು."

ವೈಶಂಪಾಯನರು ಹೇಳುತ್ತಾರೆ :

ಮಹಾರಾಜ! ತಂದೆಯವರು ಹೇಳಿದ ಮಾತನ್ನು ಕೇಳಿ ಧೃತರಾಷ್ಟ್ರನು ನಿಟ್ಟುಸಿರುಬಿಡುತ್ತಾ ಈ ಮಾತುಗಳನ್ನು ಹೇಳಿದನು :

**ದಿಷ್ಟಮೇತತ್ಪುರಾ ಮನ್ಯೇ ಭವಿಷ್ಯತಿ ನರಕ್ಷಯಃ ॥೪೭॥**

"ತಂದೆಯೇ! ಇದು ಹೀಗೆಯೇ ನಡೆಯಬೇಕೆಂದು ದೈವವು ನಿಶ್ಚಯಿಸಿ

ಬಿಟ್ಟಿದೆಯೆಂದು ನಾನು ಭಾವಿಸಿದ್ದೇನೆ. ಎಷ್ಟೇ ಪ್ರಯತ್ನಮಾಡಿದರೂ ಈ ಯುದ್ಧವು ನಿಲ್ಲಲಾರದು. ಜನಕ್ಷಯವು ಆಗಿಯೇ ತೀರುತ್ತದೆ. (ಮೇಲಾಗಿ ಇದರಲ್ಲಿ ನನಗೆ ಯಾವ ದೋಷವೂ ಕಾಣುತ್ತಿಲ್ಲ.)

**ರಾಜಾನಃ ಕ್ಷತ್ರಧರ್ಮೇಣ ಯದಿ ವಧ್ಯನ್ತಿ ಸಂಯುಗೇ ।**
**ವೀರಲೋಕಂ ಸಮಾಸಾದ್ಯ ಸುಖಂ ಪ್ರಾಪ್ಸ್ಯನ್ತಿ ಕೇವಲಮ್ ॥೪೮॥**

ಕ್ಷತ್ರಧರ್ಮಾನುಸಾರವಾಗಿ ರಾಜರೇನಾದರೂ ಯುದ್ಧದಲ್ಲಿ ವಧಿಸಲ್ಪಟ್ಟರೆ ಪುಣ್ಯತಮವಾದ ವೀರಲೋಕಕ್ಕೆ ಹೋಗಿ ಅಲ್ಲಿ ಕೇವಲಸುಖವನ್ನೇ ಅನುಭವಿಸುತ್ತಾರೆ.

**ಇಹ ಕೀರ್ತಿಂ ಪರೇ ಲೋಕೇ ದೀರ್ಘಕಾಲಂ ಮಹತ್ಸುಖಮ್ ।**
**ಪ್ರಾಪ್ಸ್ಯನ್ತಿ ಪುರುಷವ್ಯಾಘ್ರಾಃ ಪ್ರಾಣಾಂಸ್ತ್ಯಕ್ತ್ವಾ ಮಹಾಹವೇ ॥೪೯॥**

ಮಹಾಯುದ್ಧದಲ್ಲಿ ಪುರುಷಶ್ರೇಷ್ಠರು ಶೌರ್ಯದಿಂದ ಪ್ರಾಣದ ಹಂಗು ತೊರೆದು ಕಾದಾಡಿದ್ದಕ್ಕಾಗಿ ಇಹದಲ್ಲಿ ಕೀರ್ತಿಯನ್ನೂ, ಆಯುಧಪ್ರಹಾರದಿಂದ ಯುದ್ಧದಲ್ಲಿ ಪ್ರಾಣತೊರೆದ ಕಾರಣ ಪರಲೋಕದಲ್ಲಿ ಬಹುಕಾಲದವರೆಗೆ ಮಹತ್ಸುಖವನ್ನೂ ಪಡೆಯುತ್ತಾರೆ."*

ವೈಶಂಪಾಯನರು ಹೇಳುತ್ತಾರೆ :

ಜನಮೇಜಯ! ಯಾವ ಉಪಾಯದಿಂದಲಾದರೂ ಯುದ್ಧವನ್ನು ನಿಲ್ಲಿಸೆಂದು ಹೇಳಿದುದಕ್ಕೆ ತನ್ನ ಪುತ್ರನಾದ ಧೃತರಾಷ್ಟ್ರನು ತಾತ್ತ್ವಿಕವಾದ ಉತ್ತರವನ್ನು ಹೇಳಲಾಗಿ, ಜ್ಞಾನಿಗಳಲ್ಲಿ ಶ್ರೇಷ್ಠರಾದ ವ್ಯಾಸರು ಮುಹೂರ್ತ ಕಾಲ ಧ್ಯಾನಾಸಕ್ತರಾಗಿದ್ದು ಅನಂತರ ಬಹಿರ್ಮುಖರಾಗಿ ಪುನಃ ಧೃತರಾಷ್ಟ್ರನನ್ನು ಕುರಿತು ಈ ಮಾತುಗಳನ್ನು ಹೇಳಿದರು :

**ಅಸಂಶಯಂ ಪಾರ್ಥಿವೇನ್ದ್ರ ಕಾಲಃ ಸಂಕ್ಷಿಪತೇ ಜಗತ್ ।**
**ಸೃಜತೇ ಚ ಪುನರ್ಲೋಕಾನ್ನೇಹ ವಿದ್ಯತಿ ಶಾಶ್ವತಮ್ ॥೫೦॥**

* ಮಹಾಜ್ಞಾನಿಗಳಾದ ವ್ಯಾಸರು ಪೌತ್ರರ ವಿಷಯದಲ್ಲಿ ವ್ಯಾಮೋಹಗೊಂಡಂತೆ ಮಾತನಾಡಿದುದೂ–ಪುತ್ರವ್ಯಾಮೋಹಪೀಡಿತನಾದ ಧೃತರಾಷ್ಟ್ರನು ತಾತ್ತ್ವಿಕವಾಗಿ ಮಾತನಾಡಿದುದೂ ಕಾಲದ ವಿಪರ್ಯಾಸವೇ ಇರಬಹುದಲ್ಲವೇ?

"ಮಗು! ಧೃತರಾಷ್ಟ್ರ! ನೀನು ಹೇಳಿದುದೂ ಸತ್ಯವೇ ಸರಿ. ಕಾಲವು ಈ ಜಗತ್ತನ್ನು ವಿನಾಶಮಾಡುತ್ತದೆ. (ನೀನು ಹೇಳಿದಂತೆ ಎಲ್ಲವೂ ದೈವದ ಇಚ್ಛೆಗೆ ಸಂಬಂಧಪಟ್ಟೇ ಇರುತ್ತದೆ.) ಈ ವಿಷಯದಲ್ಲಿ ಸಂಶಯವೇ ಇಲ್ಲ. ಜಗತ್ತನ್ನು ವಿನಾಶಮಾಡುವ ಈ ಕಾಲವೇ ಪುನಃ ಅನೇಕಾನೇಕ ಲೋಕಗಳನ್ನೂ ಸೃಷ್ಟಿಸುತ್ತದೆ. ಯಾವುದೊಂದೂ ಇಲ್ಲಿ ಶಾಶ್ವತವಾಗಿ ಉಳಿಯುವುದಿಲ್ಲ. ಈ ವಿಷಯವೇನೋ ನೀನು ಹೇಳಿದಂತೆಯೇ ಸರಿ. ಆದರೆ ಮನುಷ್ಯನು ಯಾವಾಗಲೂ ಧರ್ಮಮಾರ್ಗಾವಲಂಬಿಯಾಗಿರಬೇಕು. ಈ ದೃಷ್ಟಿಯಿಂದ ನಾನು ನಿನಗೆ ಸಲಹೆನೀಡುತ್ತಿದ್ದೇನೆ. ಜ್ಞಾತಿಗಳಾದ ಪಾಂಡವರಿಗೂ, ನಿನ್ನ ಮಕ್ಕಳಾದ ಕೌರವರಿಗೂ, ಬಂಧುಗಳಿಗೂ ಮತ್ತು ಮಿತ್ರರಿಗೂ ಧರ್ಮಮಾರ್ಗವನ್ನು ತೋರಿಸಿಕೊಡು. (ನಿನ್ನ ಮಕ್ಕಳೀಗ ಧರ್ಮಮಾರ್ಗದಲ್ಲಿ ನಡೆದುಕೊಳ್ಳುತ್ತಿಲ್ಲ.) ಇಂದಿನ ಅನಾಹುತವನ್ನು ತಪ್ಪಿಸಲು ನೀನು ಸಮರ್ಥನಾಗಿರುವೆ. ಯುದ್ಧದಲ್ಲಿ ಮಡಿದರೆ ವೀರಸ್ವರ್ಗವನ್ನು ಪಡೆಯುತ್ತಾರೆಂಬುದು ಒತ್ತಟ್ಟಿಗಿರಲಿ. ಜ್ಞಾತಿವಧೆಯು ಬಹಳ ನೀಚಕಾರ್ಯ ವೆಂದು ತಿಳಿದವರು ಹೇಳುತ್ತಾರೆ. ಆದುದರಿಂದ ನನಗೆ ಹೆಚ್ಚು ಅಪ್ರಿಯವಾದ ಕಾರ್ಯಮಾಡಲು ಹೋಗಬೇಡ.

**ಕಾಲೋಽಯಂ ಪುತ್ರರೂಪೇಣ ತವ ಜಾತೋ ವಿಶಾಮ್ಪತೇ ।**
**ನ ವಧಃ ಪೂಜ್ಯತೇ ವೇದೇ ಹಿತಂ ನೈವ ಕಥಂಚನ ॥೫೪॥**

ಮಹಾರಾಜ! ನಾನು ಈ ಹಿಂದೆ ಹೇಳಿದ ಜಗತ್ತಿನ ವಿನಾಶಕವಾದ ಈ ಕಾಲವೇ ನಿನ್ನ ಮಗನ ರೂಪದಲ್ಲಿ ಹುಟ್ಟಿಬಿಟ್ಟಿದೆ. (ಹುಟ್ಟಿರುವುದೆಂದು ಕಾಣು ತ್ತದೆ.) ನಾನು ತಿಳಿದಿರುವಂತೆ ವೇದದಲ್ಲಿ ವಧೆಯ ಪ್ರಶಂಸೆಯೇನೂ ಇರುವು ದಿಲ್ಲ. ನಿಷ್ಕಾರಣವಾದ ಈ ವಧೆಯಿಂದ ಯಾರೊಬ್ಬರಿಗೂ ಹಿತವುಂಟಾಗು ವುದಿಲ್ಲ. ಕುಲಧರ್ಮವೆಂಬುದು ನಿನ್ನ ಶರೀರಕ್ಕೆ ಸಮಾನವಾದುದು. ಯಾರು ಈ ಕುಲಧರ್ಮವನ್ನು ನಾಶಮಾಡುತ್ತಾರೆಯೋ ಅವರು ತಮ್ಮನ್ನೇ ತಾವು ನಾಶಮಾಡಿಕೊಂಡಂತಾಗುತ್ತದೆ. ಯಾವನು ಧರ್ಮವನ್ನು ಹನನ ಮಾಡುತ್ತಾನೆಯೋ ಅವನನ್ನು ಆ ಧರ್ಮವೇ ಸಂಹಾರಮಾಡುತ್ತದೆ. ನೀನು ಬಹಳ ಕಾಲದಿಂದಲೂ ನ್ಯಾಯವಲ್ಲದ ಮಾರ್ಗದಲ್ಲಿಯೇ ನಡೆಯುತ್ತಿರುವೆ.

ಆದರೆ ಎಂತಹ ಅಧಮರೇ ಆದರೂ ಆಪತ್ಕಾಲದಲ್ಲಿ ತಮ್ಮ ತಪ್ಪನ್ನು ತಿದ್ದಿ ಕೊಳ್ಳಲು ಪ್ರಯತ್ನಿಸುತ್ತಾರೆ. ಆದರೆ ಆಪತ್ಕಾಲವು ಸನ್ನಿಹಿತವಾಗಿರು ವಾಗಲೂ–ನಿನಗದನ್ನು ನಿವಾರಿಸಲು ಶಕ್ಯವಿರುವಾಗಲೂ ಸಹ–ಅದಕ್ಕಾಗಿ ನೀನು ಪ್ರಯತ್ನಪಡುತ್ತಿಲ್ಲ. ನಿನ್ನ ಕುಲದ ವಿನಾಶಕ್ಕಾಗಿ–ಅಂತೆಯೇ ಈ ಸಕಲ ರಾಜರ ವಿನಾಶಕ್ಕಾಗಿ–ಅನರ್ಥವೆಂಬುದು ರಾಜ್ಯದ ರೂಪದಲ್ಲಿ ನಿನಗೆ ಪ್ರಾಪ್ತ ವಾಗಿದೆ. (ಅನರ್ಥಕರವಾದ ರಾಜ್ಯಲೋಭವು ನಿನಗುಂಟಾಗಿದೆ.) ನಿನ್ನಲ್ಲಿ ಧರ್ಮವೆಂಬುದು ಸಂಪೂರ್ಣವಾಗಿ ಲುಪ್ತವಾಗಿಹೋಗಿದೆ. ಇದು ನಿನಗೆ ತಕ್ಕುದಲ್ಲ. ನಿನ್ನ ಮಕ್ಕಳಿಗೆ ಧರ್ಮಮಾರ್ಗವನ್ನು ತೋರಿಸು. ದುರ್ಧರ್ಷನೇ! ನಿನಗೆ ಈ ರಾಜ್ಯದಿಂದೇನಾಗಬೇಕಾಗಿದೆ? ರಾಜ್ಯಲೋಭದಿಂದಾಗಿ ನೀನಿಂದು ಪಾಪದ ರಾಶಿಯನ್ನೇ ತಲೆಯ ಮೇಲೆ ಹೊತ್ತುಕೊಳ್ಳುತ್ತಿರುವೆ. ಸ್ವರ್ಗಪ್ರಾಪ್ತಿಗೆ ಯುದ್ಧದಲ್ಲಿ ಸಾಯುವುದೊಂದೇ ಮಾರ್ಗವಲ್ಲ. ಯಶೋವಂತನಾಗಿ ಬಾಳಿ, ಧರ್ಮದಲ್ಲಿಯೇ ಇರುತ್ತಿದ್ದು, ಕೀರ್ತಿಮಂತನಾಗಿ, ಕಡೆಯಲ್ಲಿ ಶಾಶ್ವತವಾದ ಸ್ವರ್ಗವನ್ನು ನೀನು ಪಡೆದುಕೊಳ್ಳಬಹುದಾಗಿದೆ. ಪಾಂಡವರು ತಮಗೆ ಸಲ್ಲಬೇಕಾಗಿರುವ ರಾಜ್ಯವನ್ನು ಪಡೆದುಕೊಳ್ಳಲಿ ; ನಿನ್ನ ಮಕ್ಕಳು ಅವರೊಡನೆ ಸಂಧಾನಮಾಡಿಕೊಂಡು ಶಾಂತಿಯಿಂದಿರಲಿ."

ಬ್ರಾಹ್ಮಣಶ್ರೇಷ್ಠರಾದ ವ್ಯಾಸರು ಧೃತರಾಷ್ಟ್ರನಿಗೆ ಪರಿ-ಪರಿಯಾಗಿ ಉಪದೇಶಮಾಡುತ್ತಿರಲಾಗಿ, ವಾಕ್ಯಜ್ಞನಾದ ಅಂಬಿಕಾತನಯನಾದ ಧೃತರಾಷ್ಟ್ರನು ಮಧ್ಯದಲ್ಲಿಯೇ ಬಾಯಿಹಾಕಿ (ವ್ಯಾಸರ ಮಾತನ್ನು ಮೊಟಕು ಗೊಳಿಸಿ) ಈ ಮಾತುಗಳನ್ನು ಹೇಳಿದನು :

**ಯಥಾ ಭವಾನ್ವೇತ್ತಿ ತಥೈವವೇತ್ತಾ**
**ಭಾವಾಭಾವೌ ವಿದಿತೌ ಮೇ ಯಥಾರ್ಥೌ ।**
**ಸ್ವಾರ್ಥೇ ಹಿ ಸಮ್ಮುಹ್ಯತಿ ತಾತ ಲೋಕೋ**
**ಮಾಂ ಚಾಪಿ ಲೋಕಾತ್ಮಕಮೇವ ವಿದ್ಧಿ ॥೬೦॥**

"ಪೂಜ್ಯರೇ! ಈ ವಿಷಯದಲ್ಲಿ ನೀವು ನನಗೆ ಹೆಚ್ಚು ಹೇಳುವ ಅಗತ್ಯವಿಲ್ಲ. ನಿಮಗೆ ಎಷ್ಟು ವಿಷಯಗಳು ತಿಳಿದಿವೆಯೋ ಅಷ್ಟು ವಿಷಯ ಗಳನ್ನು ನಾನೂ ತಿಳಿದುಕೊಂಡಿರುತ್ತೇನೆ. ಸ್ಥಿತಿ-ವಿನಾಶಗಳು ನನಗೆ ಯಥಾ

ವತ್ತಾಗಿ ರಹಸ್ಯಮೂಲವಾಗಿ ತಿಳಿದಿವೆ. ಆದರೆ ಒಂದು ವಿಷಯವನ್ನು ನಾನು ಹೇಳಲಿಚ್ಛಿಸುತ್ತೇನೆ. ಸ್ವಾರ್ಥದ ವಿಷಯ ಬಂದಾಗ ಪ್ರಪಂಚವೇ ಮೋಹ ಗೊಳ್ಳುತ್ತದೆ. (ಇನ್ನೊಬ್ಬರಿಗೆ ಹೇಳುವಾಗ ಸರಿಯಾಗಿ ಹೇಳಬಹುದು. ಆದರೆ ತಾವು ನಡೆಯುವಾಗ ಮೋಹಕ್ಕೆ ಗುರಿಯಾಗುತ್ತಾರೆ.) ಸ್ವಾರ್ಥಕ್ಕೆ ಹೊರತಾದವನು ಈ ಪ್ರಪಂಚದಲ್ಲಿಯೇ ಯಾರೂ ಇರಲಾರನು. ನಾನೂ ಸಹ ಈ ಲೋಕದಲ್ಲಿದ್ದೇನೆ. ಸಂಸಾರದಿಂದ ಅಭಿನ್ನನಾಗಿದ್ದೇನೆ. (ನಾನೂ ಸ್ವಾರ್ಥಕ್ಕೆ ಬಲಿಯಾಗಿದ್ದೇನೆ.) ಇದನ್ನು ತಾವು ಮನಗಾಣಬೇಕಾಗಿದೆ.

**ಪ್ರಸಾದಯೇ ತ್ವಾಮತುಲಪ್ರಭಾವಂ**
**ತ್ವಂ ನೋ ಗತಿರ್ದರ್ಶಯಿತಾ ಚ ಧೀರಃ ।**
**ನ ಚಾಪಿ ತೇ ಮದ್ವಶಗಾ ಮಹರ್ಷೇ**
**ನ ಚಾಧರ್ಮಂ ಕರ್ತುಮರ್ಹಾ ಹಿ ಮೇ ಮತಿಃ ॥೬೧॥**

(ಇಷ್ಟು ಸ್ಪಷ್ಟವಾಗಿ ಇಷ್ಟು ದಿಟ್ಟತನದಿಂದ ಮಾತನಾಡಿದ ಧೃತರಾಷ್ಟ್ರನು ವ್ಯಾಸರ ವ್ಯಕ್ತಿತ್ವವನ್ನು ಸ್ಮರಿಸಿ ಮರುಕ್ಷಣದಲ್ಲಿಯೇ ವಿನಮ್ರತೆಯನ್ನು ಬೆರೆಸಿಕೊಂಡು ಮಾತನಾಡುತ್ತಾನೆ.)

ಮಹಾಪ್ರಭಾವಶಾಲಿಗಳಾದ ತಮ್ಮನ್ನು ನಾನು ಪ್ರಸನ್ನರಾಗುವಂತೆ ಕೇಳಿಕೊಳ್ಳುತ್ತೇನೆ. ತಾವು ನನ್ನ ಮೇಲೆ ಕೋಪಗೊಳ್ಳಬೇಡಿರಿ. ತಾವೇ ನನಗೆ ಆಶ್ರಯರಾಗಿರುವಿರಿ ; ಮಾರ್ಗದರ್ಶಕರಾಗಿರುವಿರಿ. ನೀವು ಧೀರ ಪುರುಷರು. (ಸಂಸಾರಸಮುದ್ರವನ್ನು ದಾಟಿರತಕ್ಕವರು.) ದಯಮಾಡಿ ತಾವು ನನ್ನ ವಿಷಯದಲ್ಲಿ ಪ್ರಸನ್ನರಾಗಬೇಕು. ತಮ್ಮ ಉಪದೇಶದಂತೆ ನಡೆಯದಿರು ವುದಕ್ಕೆ ಕೋಪಿಸಿಕೊಳ್ಳಬಾರದು. ನನ್ನ ಬುದ್ಧಿಯೂ ಸಹ ಅಧರ್ಮವೆನಿಸಿದ ಕಾರ್ಯಮಾಡಲು ಉತ್ಸುಕವಾಗಿಲ್ಲ. ಆದರೆ ಮಹರ್ಷಿಗಳೇ! ನನ್ನ ಮಕ್ಕಳು ನನ್ನ ವಶದಲ್ಲಿಲ್ಲ. ನಾನು ಹೇಳಿದಂತೆ ಕೇಳುತ್ತಿಲ್ಲ. (ಈ ವಿಷಯವೂ ತಮಗೆ ತಿಳಿದೇ ಇದೆ.)

**ತ್ವಂ ಹಿ ಧರ್ಮಪ್ರವೃತ್ತಿಶ್ಚ ಯಶಃ ಕೀರ್ತಿಶ್ಚ ಭಾರತೀ ।**
**ಕುರೂಣಾಂ ಪಾಣ್ಡವಾನಾಂ ಚ ಮಾನ್ಯಶ್ಚಾಪಿ ಪಿತಾಮಹಃ ॥೬೨॥**

ಮಹರ್ಷಿಗಳೇ! ತಾವು ಭರತವಂಶದ ಧರ್ಮಪ್ರವರ್ತಕರಾಗಿದ್ದೀರಿ. ಯಶೋರೂಪರಾಗಿದ್ದೀರಿ. ಕೀರ್ತಿವರ್ಧಕರಾಗಿದ್ದೀರಿ. ಕುರು-ಪಾಂಡವರಿಗೆ ಪಿತಾಮಹರಾಗಿದ್ದು ಸರ್ವಮಾನ್ಯರೂ ಆಗಿರುತ್ತೀರಿ."

ವ್ಯಾಸರು ಧೃತರಾಷ್ಟ್ರನ ಮನೋಗತವಾದ ಅಭಿಪ್ರಾಯವನ್ನು ತಿಳಿದುಕೊಂಡರು. ಅಂತೆಯೇ ಹೇಳಿದರು :

"ವಿಚಿತ್ರವೀರ್ಯಕುಮಾರ! ನಿನ್ನ ಮನಸ್ಸಿನಲ್ಲಿ ಯಾವ ಸಂದೇಹ ವಿದೆಯೋ ಅದನ್ನು ನಿನ್ನ ಇಚ್ಛಾನುಸಾರವಾಗಿ ಪ್ರಕಟಿಸು. ನಿನ್ನ ಸಂಶಯವು ಎಂತಹುದೇ ಆಗಿದ್ದರೂ ನಾನು ಅದರ ನಿವಾರಣೆಮಾಡುತ್ತೇನೆ."

"ಪಿತಾಮಹರೇ! ನೀವು ಹೇಳಿದಂತೆ ಒಂದು ನಿರ್ದಿಷ್ಟವಿಷಯವನ್ನು ನಿಮ್ಮಿಂದ ಕೇಳಿ ತಿಳಿಯಬೇಕೆಂಬ ಆಶಯವು ನನಗಿದೆ. ಯುದ್ಧವಾಗುವ ಮೊದಲೇ ಯಾರು ವಿಜಯಿಗಳಾಗುತ್ತಾರೆಂಬುದನ್ನು ತಿಳಿಯುವ ಸಾಧ್ಯತೆ ಯಿದೆಯೇ? ಸಾಧ್ಯವಿರುವುದಾದರೆ ಹೇಗೆ ತಿಳಿದುಕೊಳ್ಳಬಹುದು? ಯುದ್ಧದ ಪ್ರಾರಂಭದಲ್ಲಿಯೇ ವಿಜಯಿಗಳಾಗುವವರ ಮುಖದಲ್ಲಿ ತತ್ಸೂಚಕವಾದ ಶುಭಲಕ್ಷಣಗಳೇನಾದರೂ ಇರುತ್ತವೆಯೇ? ವಿಜಯಗಳಿಸುವ ಪಕ್ಷದಲ್ಲಿ ತತ್ಸೂಚಕವಾದ ನಿಮಿತ್ತಗಳೇನಾದರೂ ಕಂಡುಬರುವುದೇ?–ಈ ಎಲ್ಲ ವಿಷಯಗಳನ್ನೂ ಸಹ ಯಥಾವತ್ತಾಗಿ ನಿಮ್ಮಿಂದ ಕೇಳಿ ತಿಳಿದುಕೊಳ್ಳಬೇಕೆಂದಿರುತ್ತೇನೆ."

"ಧೃತರಾಷ್ಟ್ರ! ಯುದ್ಧಮುಗಿಯುವ ಮೊದಲೇ ನಾವು ಕೆಲವು ನಿಮಿತ್ತಗಳಿಂದಲೂ ಶುಭಲಕ್ಷಣಗಳಿಂದಲೂ ಜಯಗಳಿಸುವರಾರೆಂಬುದನ್ನು ತಿಳಿದುಕೊಳ್ಳಬಹುದಾಗಿದೆ. ಹೇಗೆ ತಿಳಿದುಕೊಳ್ಳಬಹುದೆಂಬುದನ್ನು ವಿವರಿಸಿ ಹೇಳುವೆನು, ಕೇಳು :

**ಪ್ರಸನ್ನಭಾಃ ಪಾವಕ ಊರ್ಧ್ವರಶ್ಮಿಃ**
**ಪ್ರದಕ್ಷಿಣಾವರ್ತಶಿಖೋ ವಿಧೂಮಃ ।**
**ಪುಣ್ಯಾ ಗನ್ಧಾಶ್ಚಾಹುತೀನಾಂ ಪ್ರವಾನ್ತಿ**
**ಜಯಸ್ಯೈತದ್ಭಾವಿನೋ ರೂಪಮಾಹುಃ ॥೬೫॥**

ವಿಜಯವನ್ನು ಗಳಿಸುವವರ ಪಕ್ಷದಲ್ಲಿ ಯಜ್ಞೇಶ್ವರನು ಮನಸ್ಸಿಗೆ ಆಹ್ಲಾದಕರವಾದ ಕಾಂತಿಯಿಂದ ವಿರಾಜಿಸುತ್ತಿರುತ್ತಾನೆ. ಅವನ ಜ್ವಾಲೆಗಳು

ಊರ್ಧ್ವಗತಿಯಲ್ಲಿರುತ್ತವೆ ; ಪ್ರದಕ್ಷಿಣಾಕಾರವಾಗಿಯೂ ಸುತ್ತುತ್ತಿದ್ದು ಧೂಮರಹಿತವಾಗಿರುತ್ತವೆ. ಆಹುತಿಯನ್ನು ಕೊಟ್ಟ ಸಮಯದಲ್ಲಿ (ಹೋಮ ಮಾಡಿದ ಸಮಯದಲ್ಲಿ) ಯಜ್ಞೇಶ್ವರನಿಂದ ಪವಿತ್ರಸುಗಂಧವು ಹೊರಟು ವಾಯುವಿನಲ್ಲಿ ಸೇರಿ ಸರ್ವತ್ರ ವ್ಯಾಪ್ತವಾಗುತ್ತದೆ. ಇದು ಮುಂದೆ ಲಭಿಸ ಬಹುದಾದ ವಿಜಯದ ಸೂಚನೆಯೆಂದು ಹೇಳುತ್ತಾರೆ.

**ಗಮ್ಭೀರಘೋಷಾಶ್ಚ ಮಹಾಸ್ವನಾಶ್ಚ**
**ಶಙ್ಖಾ ಮೃದಙ್ಗಾಶ್ಚ ನದನ್ತಿ ಯತ್ರ ।**
**ವಿಶುದ್ಧರಶ್ಮಿಸ್ತಪನಃ ಶಶೀ ಚ**
**ಜಯಸ್ಯೈತದ್ಭಾವಿನೋ ರೂಪಮಾಹುಃ ॥೬೬॥**

ಯಾವ ಪಕ್ಷದಲ್ಲಿ ಶಂಖ ಮತ್ತು ಮೃದಂಗಗಳು ಗಂಭೀರವಾಗಿ ಘೋಷಮಾಡುತ್ತವೆಯೋ, ಗಟ್ಟಿಯಾಗಿ ಶಬ್ದಮಾಡುತ್ತವೆಯೋ ಮತ್ತು ಕಿವಿಗಿಂಪಾಗುವಂತೆ ಶಬ್ದಮಾಡುತ್ತವೆಯೋ, ಯಾವ ಪಕ್ಷದವರಿಗೆ ಸೂರ್ಯ-ಚಂದ್ರರು ವಿಶುದ್ಧವಾದ ಕಾಂತಿಯಿಂದಿರುವರಂತೆ ಕಾಣುತ್ತಾ ರೆಯೋ–ಅಂತಹ ಪಕ್ಷಕ್ಕೇ ಜಯವು ಲಭಿಸುತ್ತದೆ. ಇವುಗಳು ಮುಂದೆ ಲಭಿ ಸುವ ವಿಜಯದ ಸೂಚಕಗಳೆಂದು ತಿಳಿದವರು ಹೇಳುತ್ತಾರೆ.

**ಇಷ್ಟಾ ವಾಚಃ ಪೃಷ್ಠತೋ ವಾಯಸಾನಾಂ**
**ಸಮ್ಪ್ರಸ್ಥಿತಾನಾಂ ಚ ಗಮಿಷ್ಯತಾಂ ಚ ।**
**ಯೇ ಪೃಷ್ಠತಸ್ತೇ ತ್ವರಯನ್ತಿ ರಾಜ-**
**ನ್ಯೇ ಚಾಗ್ರತಸ್ತೇ ಪ್ರತಿಷೇಧಯನ್ತಿ ॥೬೭॥**

ಯಾವುದಾದರೂ ಕಾರ್ಯಕ್ಕೆ ಅಥವಾ ಯುದ್ಧಕ್ಕೆ ಸಿದ್ಧರಾಗುತ್ತಿರು ವಾಗ ಅಥವಾ ಕಾರ್ಯಕ್ಕಾಗಿ ಅಥವಾ ಯುದ್ಧಕ್ಕಾಗಿ ಪ್ರಯಾಣಮಾಡು ತ್ತಿರುವಾಗ ಕಾಗೆಗಳ ವಿಕಾರವಲ್ಲದ ಧ್ವನಿಗಳು ಹೊರಟಿದ್ದೇ ಆದರೆ (ಕೇಳಿಸಿದ್ದೇ ಆದರೆ) ಅದು ಕಾರ್ಯಸಿದ್ಧಿಗೆ ಅಥವಾ ವಿಜಯಕ್ಕೆ ಸೂಚಕ ವೆಂದು ಹೇಳುತ್ತಾರೆ. ಕಾಗೆಗಳು ಹಿಂದಿನಿಂದ ಧ್ವನಿಮಾಡಿದರೆ 'ಬೇಗ ಹೋಗು ; ಕೆಲಸವಾಗುತ್ತದೆ'–ಎಂಬುದನ್ನು ಸೂಚಿಸುತ್ತದೆಯೆಂದು ತಿಳಿಯಬೇಕು. ಮುಂದೆ ಬಂದು ಕೂಗಿಕೊಂಡರೆ–'ನೀನಿಂದು ಹೊರಟ

ಕಾರ್ಯವಾಗುವುದಿಲ್ಲ ; ಹಿಂದಿರುಗುವುದೊಳ್ಳೆಯದು'-ಎಂಬುದನ್ನು ಸೂಚಿ ಸುತ್ತದೆಯೆಂದೂ-ಉದ್ದಿಷ್ಟವಾದ ಕಾರ್ಯವನ್ನು ನಿರೋಧಿಸುತ್ತಿದೆಯೆಂದೂ ತಿಳಿಯಬೇಕು.

ಕಲ್ಯಾಣವಾಚಃ ಶಕುನಾ ರಾಜಹಂಸಾಃ
ಶುಕಾಃ ಕ್ರೌಞ್ಚಾಃ ಶತಪತ್ರಾಶ್ಚ ಯತ್ರ ।
ಪ್ರದಕ್ಷಿಣಾಶ್ಚೈವ ಭವನ್ತಿ ಸಂಖ್ಯೇ
ಧ್ರುವಂ ಜಯಸ್ತತ್ರ ವದನ್ತಿ ವಿಪ್ರಾಃ ॥೬೮॥

ಮಂಗಳಕರವಾದ ಮಾತುಗಳನ್ನಾಡುವ (ಕಿವಿಗಿಂಪಾಗಿ ಶಬ್ದ ಮಾಡುವ) ರಾಜಹಂಸಗಳು, ಗಿಣಿಗಳು, ಕ್ರೌಂಚಪಕ್ಷಿಗಳು (ಕೊಕ್ಕರೆಗಳು), ನವಿಲು ಗಳು-ಇವೇ ಮುಂತಾದ ಪಕ್ಷಿಗಳು ಯುದ್ಧಸಮಯದಲ್ಲಿ ಕೂಗುತ್ತಾ ಪ್ರದಕ್ಷಿಣಾಕಾರವಾಗಿ ಸೈನಿಕರನ್ನು ಸುತ್ತುತ್ತಾ ಹೋಗುತ್ತಿದ್ದರೆ ಆ ಸೈನಿಕರ ಪಕ್ಷಕ್ಕೇ ವಿಜಯವು ಕಟ್ಟಿಟ್ಟಬುತ್ತಿಯೆಂದು ಬ್ರಾಹ್ಮಣರು ಹೇಳುತ್ತಾರೆ.

ಅಲಙ್ಕಾರೈಃ ಕವಚೈಃ ಕೇತುಭಿಶ್ಚ
ಸುಖಪ್ರಣಾದೈರ್ಹೇಷಿತೈರ್ವಾ ಹಯಾನಾಮ್ ।
ಭ್ರಾಜಿಷ್ಮತೀ ದುಷ್ಪ್ರತಿವೀಕ್ಷಣೀಯಾ
ಯೇಷಾಂ ಚಮೂಸ್ತೇ ವಿಜಯನ್ತಿ ಶತ್ರೂನ್ ॥೬೯॥

ನಾನಾವಿಧವಾದ ಅಲಂಕಾರಗಳಿಂದಲೂ, ಕವಚಗಳಿಂದಲೂ, ಧ್ವಜ-ಪತಾಕೆಗಳಿಂದಲೂ, ಶಂಖ-ಭೇರೀನಿನಾದಗಳಿಂದಲೂ, ಕುದುರೆಗಳ ಹೇಷಾ ರವಗಳಿಂದಲೂ ಯಾರ ಸೇನೆಯು ಅತ್ಯಂತಶೋಭಾಯಮಾನವಾಗಿ ಕಾಣುವುದೋ ಮತ್ತು ಯಾರ ಸೇನೆಯನ್ನು ಎದುರುಪಕ್ಷದವರು ದಿಟ್ಟಿಸಿ ನೋಡಲು ಕೂಡ ಸಾಧ್ಯವಾಗುವುದಿಲ್ಲವೋ-ಅಂತಹವರ ಸೇನೆಯೇ ಶತ್ರು ಗಳನ್ನು ಖಂಡಿತವಾಗಿಯೂ ಪರಾಭವಗೊಳಿಸುತ್ತದೆ.

ಹೃಷ್ಟಾ ವಾಚಸ್ತಥಾ ಸತ್ತ್ವಂ ಯೋಧಾನಾಂ ಯತ್ರ ಭಾರತ ।
ನ ಮ್ಲಾಯನ್ತಿ ಸ್ರಜಶ್ಚೈವ ತೇ ತರನ್ತಿ ರಣೋದಧಿಮ್ ॥೭೦॥

ಯಾವ ಪಕ್ಷದ ಸೈನಿಕರ ಮಾತು ಹರ್ಷಯುಕ್ತವಾಗಿಯೂ ಉತ್ಸಾಹ ಯುಕ್ತವಾಗಿಯೂ ಇರುವುದೋ, ಬಲವು ವೃದ್ಧಿಹೊಂದುತ್ತಿರುವುದೋ

ಮತ್ತು ಧರಿಸಿದ ಪುಷ್ಪಮಾಲಿಕೆಗಳೂ ಬಾಡುವುದಿಲ್ಲವೋ–ಆ ಪಕ್ಷದವರು ಯುದ್ಧರೂಪದ ಮಹಾಸಾಗರವನ್ನು ದಾಟುತ್ತಾರೆ. (ವಿಜಯಿಗಳಾಗುತ್ತಾರೆ.)

**ಇಷ್ಟಾ ವಾಚಃ ಪ್ರವಿಷ್ಟಸ್ಯ ದಕ್ಷಿಣಾಃ ಪ್ರವಿವಿಕ್ಷತಃ ।**
**ಪಶ್ಚಾತ್ಸನ್ಧಾರಯನ್ನರ್ಥಮಗ್ರೇ ಚ ಪ್ರತಿಷೇಧಿಕಾಃ ॥೭೧॥**

ಯುದ್ಧರಂಗವನ್ನು ಪ್ರವೇಶಿಸಿದವನಿಗೆ ಯಾವ ಪಕ್ಷದಲ್ಲಿ ಇಷ್ಟವಾದ (ಉತ್ಸಾಹಪೂರಿತವಾದ) ಮಾತುಗಳನ್ನಾಡಿ ಪ್ರೋತ್ಸಾಹಿಸುತ್ತಾರೆಯೋ ಮತ್ತು ಯುದ್ಧಕ್ಕೆ ಹೋಗಲಿಚ್ಛಿಸುವವನಿಗೆ ಯಥೇಚ್ಛವಾದ ಹಣಕೊಡುತ್ತಾರೆಯೋ ಮತ್ತು ಯಾರು ಮೊದಲು ಯುದ್ಧವನ್ನು (ಅದರಿಂದಾಗಬಹುದಾದ ದುಷ್ಪರಿಣಾಮಗಳನ್ನು ಮನಗಂಡು) ಪ್ರತಿಷೇಧಿಸುತ್ತಾರೆಯೋ ಅಂತಹವರು ಮೊದಲೇ ಯುದ್ಧದ ಪ್ರಯೋಜನವನ್ನು (ವಿಜಯವನ್ನು) ಪಡೆದುಕೊಂಡುಬಿಡುತ್ತಾರೆ. (ಅಂತಹವರಿಗೆ ವಿಜಯವು ಖಂಡಿತವಾಗಿಯೂ ಲಭಿಸುತ್ತದೆ.)

(ಈ ಶ್ಲೋಕಕ್ಕೆ ಅನೇಕ ಪಾಠಾಂತರಗಳಿವೆ.

**ಇಷ್ಟಾ ವಾಚಃ ; ಇಷ್ಟೋ ವಾತಃ ; ಇಷ್ಟೋ ವಾಮಃ ; ಇಷ್ಟೋ ವಾಯುಃ ; ಇಷ್ಟಾ ವಾಚಪ್ರವಿಷ್ಟಸ್ಯ ; ಇಷ್ಟೋ ವಾಮಸ್ತ್ವರಿಷ್ಟಶ್ಚ; ಪ್ರಾಯೇಣ ವಾಯಸೋ ವಾಮೇ ; ಪ್ರಯಾಣೇ ವಾಯಸೋ ವಾಮೇ ; ಪ್ರಯಾಣೇ ವಾಯಸೇ ವಾಮಾತ್ । ದಕ್ಷಿಣಾಃ; ದಕ್ಷಿಣಃ ; ದಕ್ಷಿಣಸ್ಯ ; ದಕ್ಷಿಣೇ ; ದಕ್ಷಿಣಾ ಪ್ರವಕ್ಷಿತಃ ; ಪ್ರವಿವಕ್ಷತ ; ಪ್ರವಿವಿಕ್ಷಿತಃ; ಪ್ರವಿವಿಕ್ಷತಿ ; ಪ್ರವಿಪಕ್ಷತಃ; ಪ್ರತಿವೀಕ್ಷಿತಃ ; ದಕ್ಷಿಣಾತ್ಪ್ಲವತೇ ಯತಃ। ಪಶ್ಚಾತ್ಸಂಧಾಯ ; ಪಶ್ಚಾತ್ಸಂಸಾಧಯತ್ಯರ್ಥಂ ; ಪಶ್ಚಾತ್ಸಂಧಾರ-ಯನ್ನರ್ಥಂ ; ಪಶ್ಚಾತ್ಸಂಸಾಧಯನ್ನರ್ಥಂ ; ಪೃಷ್ಠತಃ ಸಾಧ-ಯತ್ಯರ್ಥಂ। ಪ್ರತಿಷೇಧತಿ ; ಪ್ರತಿಷೇಧಿಕಾಃ ; ಪ್ರತಿಷೇಧತಾಃ** ಇದೇ ರೀತಿಯಲ್ಲಿ ಅರ್ಥವನ್ನೂ ಬಗೆ-ಬಗೆಯಾಗಿ ಮಾಡಿದ್ದಾರೆ. **ದಕ್ಷಿಣಾಃ** ಎಂಬುದಕ್ಕೆ ಒಬ್ಬರು ದಾಕ್ಷ್ಯ–ಸಾಮರ್ಥ್ಯ ಎಂದು ಅರ್ಥಮಾಡಿದ್ದಾರೆ. ಮತ್ತೊಬ್ಬರು ದಾಕ್ಷಿಣ್ಯ–ಸೌಜನ್ಯ ಎಂದು ಅರ್ಥಮಾಡಿದ್ದಾರೆ. ಈ ಶ್ಲೋಕ ದಲ್ಲಿರುವ ಯಾವ ಪದಗಳಿಗೂ 'ಇದೇ ಅರ್ಥವು ಸರಿ' ಎಂದು ನಿರ್ಣಾ

ಯಕವಾಗಿ ಹೇಳುವ ಸಾಧ್ಯತೆಯಿಲ್ಲ. ಅರ್ಥೈಸುವವನ ಊಹೆಗೆ ತಕ್ಕಂತೆ ಹೇಗೆ ಬೇಕಾದರೂ ಅರ್ಥಮಾಡಬಹುದಾಗಿದೆ. ನಾವೂ ಸಹ ಸನ್ನಿವೇಶಕ್ಕೆ ತಕ್ಕಂತೆ ಅರ್ಥಮಾಡಿರುತ್ತೇವೆ.)

**ಶಬ್ದರೂಪರಸಸ್ಪರ್ಶಗನ್ಧಾಶ್ಚಾವಿಕೃತಾಃ ಶುಭಾಃ ।**
**ಸದಾ ಹರ್ಷಶ್ಚ ಯೋಧಾನಾಂ ಜಯತಾಮಿಹ ಲಕ್ಷಣಮ್ ॥೭೨॥**

ಯಾವ ಪಕ್ಷದವರಿಗೆ ಶಬ್ದ, ರೂಪ, ರಸ, ಸ್ಪರ್ಶ ಮತ್ತು ಗಂಧಗಳು ಯಾವ ವಿಧವಾದ ವಿಕಾರವನ್ನೂ ಹೊಂದದೆ ಶುಭಾವಹಗಳಾಗಿರುತ್ತವೆಯೋ ಮತ್ತು ಯಾವ ಪಕ್ಷದ ಯೋಧರಿಗೆ ಸದಾಕಾಲದಲ್ಲಿಯೂ ಹೃದಯದಲ್ಲಿ ಹರ್ಷವಿರುತ್ತದೆಯೋ–ಆ ಪಕ್ಷದವರು ವಿಜಯಗಳಿಸುತ್ತಾರೆ. ಇಂತಹವರೇ ಜಯಿಸುತ್ತಾರೆಂದು ಹೇಳಲು ಇದೂ ಒಂದು ಲಕ್ಷಣವಾಗಿದೆ.

**ಅನುಗಾ ವಾಯವೋ ವಾನ್ತಿ ತಥಾಭ್ರಾಣಿ ವಯಾಂಸಿ ಚ ।**
**ಅನುಪ್ಲವನ್ತಿ ಮೇಘಾಶ್ಚ ತಥೈವೇನ್ದ್ರಧನೂಂಷಿ ಚ ॥೭೩॥**

**ಏತಾನಿ ಜಯಮಾನಾನಾಂ ಲಕ್ಷಣಾನಿ ವಿಶಾಮ್ಪತೇ ।**
**ಭವನ್ತಿ ವಿಪರೀತಾನಿ ಮುಮೂರ್ಷೂಣಾಂ ಜನಾಧಿಪ ॥೭೪॥**

ಯಾವ ಪಕ್ಷದವರಿಗೆ ಗಾಳಿಯು ಎದುರುಗಡೆಯಿಂದ ಬೀಸದೇ ಅನುಸರಿಸಿ ಬೀಸುತ್ತದೆಯೋ, ಮೋಡಗಳು ಮತ್ತು ಪಕ್ಷಿಗಳು ಎದುರುಗಡೆಯಿಂದ ಬರದೇ ಹಿಂಬಾಲಿಸಿ ಬರುತ್ತವೆಯೋ, ಮೇಘಗಳು ಛತ್ರಿಯ ರೂಪದಲ್ಲಿ ಹಿಂಬಾಲಿಸಿ ಬರುತ್ತಿರುತ್ತವೆಯೋ ಮತ್ತು ಕಾಮನಬಿಲ್ಲುಗಳು ಶುಭಪ್ರದವಾದ ದಿಕ್ಕಿನಲ್ಲಿ ಯಾರ ದೃಷ್ಟಿಗೆ ಗೋಚರವಾಗುತ್ತವೆಯೋ–ಆ ಪಕ್ಷದವರಿಗೇ ವಿಜಯವು ಲಭಿಸುತ್ತದೆ. ಮಹಾರಾಜ! ಇವೆಲ್ಲವೂ ವಿಜಯಿಗಳಾಗುವವರ ಪಕ್ಷದಲ್ಲಿ ಕಂಡುಬರುವ ಲಕ್ಷಣಗಳಾಗಿರುತ್ತವೆ. ಇದಕ್ಕೆ ವಿಪರೀತವಾದ ವಿರೋಧವಾದ ಲಕ್ಷಣಗಳು–ಮರಣವು ಸನ್ನಿಹಿತವಾಗಿರುವವರಿಗೆ ಕಂಡುಬರುತ್ತವೆ.

ಕೇವಲ ಸೈನ್ಯದ ಸಂಖ್ಯಾಬಲವೇ ವಿಜಯವನ್ನು ನಿಶ್ಚಯಿಸುವುದಿಲ್ಲ. ಧೃತರಾಷ್ಟ್ರ!

**ಅಲ್ಪಾಯಾಂ ವಾ ಮಹತ್ಯಾಂ ವಾ ಸೇನಾಯಾಮಿತಿ ನಿಶ್ಚಯಃ ।**
**ಹರ್ಷೋ ಯೋಧಗಣಸ್ಯೈಕೋ ಜಯಲಕ್ಷಣಮುಚ್ಯತೇ ॥೭೫॥**

ಸೇನೆಯು ಅಲ್ಪವಾಗಿರಲಿ, ಅಪಾರವಾಗಿರಲಿ–ಯಾವ ಪಕ್ಷದ ಸೇನೆಯಲ್ಲಿ ಯೋಧಗಣವು ಹರ್ಷಯುಕ್ತವಾಗಿರುತ್ತದೆಯೋ ಆ ಪಕ್ಷವು ಜಯಗಳಿಸುತ್ತದೆ. ಸೇನೆಯಲ್ಲಿ ಯೋಧಗಣದ ಹರ್ಷವೊಂದೇ ಜಯದ ಲಕ್ಷಣವಾಗಿರುತ್ತದೆ. ಇದರಿಂದ ಯಾವ ಪಕ್ಷವು ವಿಜಯಗಳಿಸಬಹುದೆಂಬುದನ್ನು ನಿಶ್ಚಯಿಸಬಹುದಾಗಿದೆ.

**ಏಕೋ ದೀರ್ಣೋ ದಾರಯತಿ ಸೇನಾಂ ಸುಮಹತೀಮಪಿ ।**
**ತಾಂ ದೀರ್ಣಾಮನುದೀರ್ಯನ್ತೇ ಯೋಧಾಃ ಶೂರತರಾ ಅಪಿ ॥೭೬॥**

ಒಂದು ಸೇನೆಯ ಒಬ್ಬನೇ ಒಬ್ಬ ಉತ್ಸಾಹಹೀನನಾದ, ಭೀರುವಾದ ಸೈನಿಕನು–ತಾನಿರುವ ಪಡೆಯು ಎಷ್ಟೇ ದೊಡ್ಡದಾಗಿದ್ದರೂ ಸಹ–ಅದನ್ನು ಒಡೆದುಬಿಡುತ್ತಾನೆ. ಇದಕ್ಕೆ ಕಾರಣವಿಷ್ಟೇ ಧೃತರಾಷ್ಟ್ರ! ಅಖಂಡಸೇನೆಯಲ್ಲಿ ಒಬ್ಬನೇ ಒಬ್ಬನು ಭಯಭ್ರಾಂತನಾಗಿ ಶತ್ರುವಿಗೆ ಬೆನ್ನು ತೋರಿಸಿ ಓಡಲು ಪ್ರಾರಂಭಿಸಿದರೆ ಅವನ ಸಂಗಡಿಗರಾದ ಸೈನಿಕರು ಎಷ್ಟೇ ಶೂರರಾಗಿದ್ದರೂ ಸಹ ಓಡುತ್ತಿರುವ ಹೇಡಿಯ ಹಿಂದೆ ತಾವೂ ಓಡಿಹೋಗುತ್ತಾರೆ. (ಓಡುತ್ತಿರುವವನನ್ನು ತಡೆದು ನಿಲ್ಲಿಸಿ ಅವನಿಗೆ ಉತ್ಸಾಹತುಂಬಿ ಯುದ್ಧಕ್ಕೆ ಸಜ್ಜಾಗುವಂತೆ ಮಾಡಲಾರರು.) (ಈ ಶ್ಲೋಕದಲ್ಲಿ ವ್ಯಾಸರು ಮನುಷ್ಯನ ಸಹಜಸ್ವಭಾವವನ್ನು ಬಹುಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಈ ವಿಷಯವನ್ನು ನಾವು ಯುದ್ಧರಂಗದಲ್ಲಿ ಕಾಣದಿದ್ದರೂ ಅನೇಕ ಬಾರಿ ಬೀದಿಗಳಲ್ಲಿ ಕಾಣು ತ್ತೇವೆ. ರಕ್ಷಣಾದಳದವರು ಯಾರನ್ನೋ ಏತಕ್ಕೋ ಎಲ್ಲೋ ತನಿಖೆ ಮಾಡುತ್ತಿದ್ದಾರೆಂದು ತಿಳಿದೊಡನೆಯೇ ಏನಾಗುತ್ತಿದೆಯೆಂಬುದನ್ನೂ ಸಹ ನೋಡಲು ಹೋಗದೆ, ನಿಜವೇ ಸುಳ್ಳೇ–ಎಂಬುದನ್ನೂ ಪರೀಕ್ಷಿಸಹೋಗದೆ ಜನರು ಪಲಾಯನಮಾಡುತ್ತಾರೆ. ಆದುದರಿಂದ ಶೂರನೊಬ್ಬನು ತಮ್ಮ ಕಡೆಯ ಸೇನೆಯನ್ನು ತುಂಡು-ತುಂಡಾಗಿ ಕತ್ತರಿಸುತ್ತಿರುವನೆಂಬ ವಾರ್ತೆಯನ್ನು ಕೇಳಿ ಒಬ್ಬ ಯೋಧನು ಓಡಲು ಪ್ರಾರಂಭಿಸಿದನೆಂದರೆ ಅವನ ಹಿಂದೆ ನೂರಾರು ಯೋಧರು ಹಿಂದೆ ನೋಡದೆ ಓಡಿಹೋಗುವುದು ಸ್ವಾಭಾವಿಕವಾಗಿದೆ.)

**ದುರ್ನಿವರ್ತ್ಯಾ ತದಾ ಚೈವ ಪ್ರಭಗ್ನಾ ಮಹತೀ ಚಮೂಃ ।**
**ಅಪಾಮಿವ ಮಹಾವೇಗಾಸ್ತ್ರಸ್ತಾ ಮೃಗಗಣಾ ಇವ ॥೭೭॥**

ನೀರಿನ ಮಹಾಪ್ರವಾಹಗಳನ್ನು ತಡೆಯಲಾಗದಂತೆ ಭಯದಿಂದ ಓಡು ತ್ತಿರುವ ಜಿಂಕೆಗಳನ್ನು ಹಿಂದಿರುಗಿಸಲಾಗದಂತೆ–ಭಗ್ನವಾಗಿ ಓಡಿಹೋಗು ತ್ತಿರುವ ಸೇನೆಯನ್ನು ತಡೆಗಟ್ಟಿ ಸಮಸ್ಥಿತಿಗೆ ತರುವುದು ಅತ್ಯಂತ ದುಷ್ಕರವೇ ಸರಿ.

**ನೈವ ಶಕ್ಯಾ ಸಮಾಧಾತುಂ ಸಂನಿಪಾತೇ ಮಹಾಚಮೂಃ ।**
**ದೀರ್ಣಮಿತ್ಯೇವ ದೀರ್ಯನ್ತೇ ಸುವಿದ್ವಾಂಸೋಽಪಿ ಭಾರತ ॥೭೮॥**

ಮಹಾಸೇನೆಯು ಪತನವಾಗಲು ಆರಂಭವಾಯಿತೆಂದರೆ (ಸೇನೆಯು ಪಲಾಯನಮಾಡಲು ಪ್ರಾರಂಭಿಸಿದರೆ) ಅದನ್ನು ಸಮಾಧಾನಮಾಡಿ ಸಮ ಸ್ಥಿತಿಯಲ್ಲಿ ನಿಲ್ಲುವಂತೆ ಮಾಡುವ ಸಾಧ್ಯತೆಯೇ ಇಲ್ಲ. ಇದಕ್ಕೆ ಕಾರಣವಿಷ್ಟೆ : ಒಬ್ಬನು ಭಯಪಟ್ಟುಕೊಂಡು ಓಡಿಹೋಗುತ್ತಾನೆಂಬ ಕಾರಣದಿಂದ ಮತ್ತೊಬ್ಬನೂ ಓಡುತ್ತಾನೆ. ಆ ಸಮಯದಲ್ಲಿ ವಿದ್ವಾಂಸನಾದರೂ ಹೀಗೆಯೇ ಮಾಡುತ್ತಾನೆಯೇ ಹೊರತು ಆಗು-ಹೋಗುಗಳ ವಿಷಯವಾಗಿ ಕ್ಷಣಕಾಲವೂ ಯೋಚಿಸಹೋಗುವುದಿಲ್ಲ. ಯುದ್ಧವಿದ್ಯಾನಿಪುಣನೇ ಹೀಗೆ ಮಾಡುತ್ತಾನೆಂದ ಮೇಲೆ ಸಾಧಾರಣಸೈನಿಕರ ವಿಷಯವನ್ನು ಹೇಳಲೇ ಬೇಕಾಗಿಲ್ಲ.

**ಭೀತಾನ್ಭಗ್ನಾಂಶ್ಚ ಸಮ್ಪ್ರೇಕ್ಷ್ಯ ಭಯಂ ಭೂಯೋಽಭಿವರ್ಧತೇ ।**
**ಪ್ರಭಗ್ನಾ ಸಹಸಾ ರಾಜನ್ದಿಶೋ ವಿದ್ರವತೇ ಚಮೂಃ ॥೭೯॥**

ಮಹಾರಾಜ! ಭಯಭೀತರಾಗಿ ಓಡುತ್ತಿರುವ ಸೈನಿಕರನ್ನು ನೋಡಿ ದೊಡನೆಯೇ ದಳದಲ್ಲಿರುವ ಇತರ ಸೈನಿಕರ ಭಯವೂ ಹೆಚ್ಚುತ್ತದೆ. ಒಡನೆಯೇ ದಳದಲ್ಲಿರುವ ಎಲ್ಲ ಸೈನಿಕರೂ ಭಯಗ್ರಸ್ತರಾಗಿ ಚೆಲ್ಲಾಪಿಲ್ಲಿ ಯಾಗಿ ದಿಕ್ಕಾಪಾಲಾಗಿ ಓಡುತ್ತಾರೆ.

**ನೈವ ಸ್ಥಾಪಯಿತುಂ ಶಕ್ಯಾ ಶೂರೈರಪಿ ಮಹಾಚಮೂಃ ।**
**ಸತ್ಕೃತ್ಯ ಮಹತೀಂ ಸೇನಾಂ ಚತುರಙ್ಗಾಂ ಮಹೀಪತಿಃ ।**
**ಉಪಾಯಪೂರ್ವಂ ಮೇಧಾವೀ ಯತೇತ ಸತತೋತ್ಥಿತಃ ॥೮೦॥**

ಎಂತಹ ಶೂರರೇ ಆದರೂ ಪ್ರಭಗ್ನವಾಗಿಹೋದ ಸೇನೆಯನ್ನು ಪುನಃ ಕೂಡಿಸಿ ಯುದ್ಧಕ್ಕೆ ಸಿದ್ಧವಾಗುವಂತೆ ಸಜ್ಜುಗೊಳಿಸಲು ಸಾಧ್ಯವಾಗುವುದಿಲ್ಲ. ಆದುದರಿಂದ ಮೇಧಾವಿಯಾದ ಮಹೀಪತಿಯು ಯಾವಾಗಲೂ ಜಾಗರೂಕ

ನಾಗಿದ್ದುಕೊಂಡು ಚತುರಂಗಬಲಯುಕ್ತವಾದ ಮಹಾಸೇನೆಯನ್ನೂ ಮತ್ತು ಸೇನಾಪ್ರಮುಖರನ್ನೂ ಆಗಿಂದಾಗ್ಗೆ ಪಾರಿತೋಷಕಾದಿಗಳಿಂದ ಸತ್ಕರಿಸುತ್ತ ಲಿದ್ದು ಉಪಾಯದಿಂದ ತನ್ನ ವಿಜಯಕ್ಕೆ ಪ್ರಯತ್ನಿಸುತ್ತಿರಬೇಕು.

(ಶತ್ರುಪಕ್ಷಕ್ಕೆ ಭಯವುಂಟಾಗುವಂತೆ ಮಹಾಸೇನೆಯನ್ನು ಸಂಗ್ರ ಹಿಸಬೇಕೇ ಹೊರತು ಮಹಾಸೇನೆಯ ಮೂಲಕವಾಗಿಯೇ ಜಯಗಳಿಸುವೆ ನೆಂದು ಮೇಧಾವಿಯಾದವನು ನಿರ್ಧರಿಸಬಾರದು. ಭಯಪಡಿಸಲು ಮಹಾ ಸೇನೆಯನ್ನೂ ಸಜ್ಜುಗೊಳಿಸಿಕೊಂಡು ಉಪಾಯಾಂತರಗಳಿಂದಲೇ ಜಯ ಗಳಿಸಬೇಕು.)

**ಉಪಾಯವಿಜಯಂ ಶ್ರೇಷ್ಠಮಾಹುರ್ಭೇದೇನ ಮಧ್ಯಮಮ್ ।**
**ಜಘನ್ಯ ಏಷ ವಿಜಯೋ ಯೋ ಯುದ್ಧೇನ ವಿಶಾಮ್ಪತೇ ॥೮೧॥**

ಸಾಮ ಮತ್ತು ದಾನೋಪಾಯಗಳಿಂದ ಗಳಿಸುವ ವಿಜಯವು ಶ್ರೇಷ್ಠ ವಾದುದೆಂದು ಹೇಳುತ್ತಾರೆ. ಭೇದೋಪಾಯದ ಮೂಲಕವಾಗಿ ಶತ್ರುಗಳ ಸೈನ್ಯದಲ್ಲೇ ಒಡಕು ಹುಟ್ಟಿಸಿ ಗಳಿಸುವ ವಿಜಯವು ಮಧ್ಯಮಶ್ರೇಣಿಯದು. ಯುದ್ಧದ ಮೂಲಕವಾಗಿ ಜನಸಂಹಾರದಿಂದ ಗಳಿಸುವ ವಿಜಯವು ಅಧಮ ಶ್ರೇಣಿಯದೆಂದು ವಿದ್ವಾಂಸರು ಹೇಳುತ್ತಾರೆ.

**ಮಹಾದೋಷಃ ಸಂನಿಪಾತಸ್ತಸ್ಯಾದ್ಯಃ ಕ್ಷಯ ಉಚ್ಯತೇ ।**
**ಪರಸ್ಪರಜ್ಞಾಃ ಸಂಹೃಷ್ಟಾ ವ್ಯವಧೂತಾಃ ಸುನಿಶ್ಚಿತಾಃ ॥೮೨॥**
**ಪಞ್ಚಾಶದಪಿ ಯೇ ಶೂರಾಃ ಮೃದ್ನನ್ತಿ ಮಹತೀಂ ಚಮೂಮ್ ।**
**ಅಪಿ ವಾ ಪಞ್ಚ ಷಟ್ ಸಪ್ತ ವಿಜಯನ್ತ್ಯನಿವರ್ತಿನಃ ॥೮೩॥**

ಯೋಧರ ಸಂಘರ್ಷವು ಅರ್ಥಾತ್ ಯುದ್ಧವು ಮಹಾದೋಷಯುಕ್ತ ವಾದುದು. (ಪ್ರಬಲದೋಷಯುಕ್ತವಾದುದು.) ಅದರಲ್ಲಿ ಮೊದಲನೆಯದು ಅಥವಾ ಪ್ರಧಾನಭೂತವಾದುದು ಜನಕ್ಷಯ. ಪರೇಂಗಿತಜ್ಞರಾದ, ಹೃಷ್ಟರಾದ, ಸ್ತ್ರೀಯರ ವಿಷಯದಲ್ಲಿ ಕಾಮೋಪಭೋಗಗಳಲ್ಲಿ ಅನಾಸಕ್ತರಾದ, ದೃಢ ನಿಶ್ಚಯವುಳ್ಳ ಕೇವಲ ಐವತ್ತು ಮಂದಿ ಶೂರರೇ ದೊಡ್ಡಸೈನ್ಯವನ್ನೂ ಸಹ ಧೂಳೀಪಟಮಾಡಲು ಸಮರ್ಥರಾಗುತ್ತಾರೆ. ಯುದ್ಧದಿಂದ ಹಿಂದಿರುಗದೇ ಕಡೆಯವರೆಗೂ ಯುದ್ಧಮಾಡಲು ನಿಶ್ಚಯಿಸಿ ರಣರಂಗದಲ್ಲಿಯೇ ಪ್ರಾಣ ತ್ಯಾಗಮಾಡಲು ನಿಶ್ಚಯಿಸಿರುವವರು ಐದು, ಆರು ಅಥವಾ ಏಳು ಮಂದಿ

ಇದ್ದರೂ ಸಾಕು ; ಅಪಾರವಾದ ಸೇನೆಯನ್ನೂ ಸಹ ನಿರ್ನಾಮಮಾಡಿ ಜಯ ಗಳಿಸುತ್ತಾರೆ. (ಆದುದರಿಂದ ಕೇವಲ ಸಂಖ್ಯಾಬಲವಿದೆಯೆಂಬ ಮಾತ್ರದಿಂದ ಜಯವು ಸ್ವಾಧೀನವಾಗಿಬಿಡುವುದಿಲ್ಲ.)

**ನ ವೈನತೇಯೋ ಗರುಡಃ ಪ್ರಶಂಸತಿ ಮಹಾಜನಮ್ ।**
**ದೃಷ್ಟ್ವಾ ಸುಪರ್ಣೋಽಪಚಿತಿಂ ಮಹತ್ಯಾ ಅಪಿ ಭಾರತ ॥೮೪॥**

ಸೈನ್ಯವು ಎಷ್ಟೇ ದೊಡ್ಡದಾಗಿದ್ದರೂ ಸಹ ತಾನೊಬ್ಬನೇ ಅದನ್ನು ವಿನಾಶಮಾಡಲು ಸಮರ್ಥನೆಂದು ಭಾವಿಸುವ ವಿನತೆಯ ಮಗನಾದ, ಸುಪರ್ಣನಾದ ಗರುಡನು ಮಹಾಜನವನ್ನು (ಮಹಾಸೇನಾಸಂಗ್ರಹವನ್ನು ) ಪ್ರಶಂಸಿಸುವುದಿಲ್ಲ. (ಧೀರರಾದ ನಾಲ್ಕಾರು ಮಂದಿಯೇ ಅಪಾರವಾದ ಸೈನ್ಯ ವನ್ನೂ ಸೋಲಿಸಬಲ್ಲರೆಂಬುದಕ್ಕೆ ವ್ಯಾಸರು ಗರುಡನನ್ನು ಉದಾಹರಿಸುತ್ತಾರೆ. ಯಾವ ಸೈನ್ಯದ ಸಹಾಯವೂ ಇಲ್ಲದೆ ಗರುಡನೊಬ್ಬನೇ ಏಕಾಕಿಯಾಗಿ ಅನೇಕ ಯುದ್ಧಗಳಲ್ಲಿ ಜಯಗಳಿಸಿದ ಪ್ರಸಂಗಗಳು ಇತಿಹಾಸ-ಪುರಾಣಗಳಲ್ಲಿವೆ. ಆದುದರಿಂದ ಗರುಡನು ದೊಡ್ಡದಾಗಿ ಸೈನ್ಯಕಟ್ಟಿ ಯುದ್ಧಮಾಡುವುದನ್ನು ಪ್ರಶಂಸಿಸುವುದಿಲ್ಲವೆಂದಮೇಲೆ ನಿನ್ನ ಅಪಾರಸೈನ್ಯದಿಂದಲೂ ಯಾವ ಪ್ರಯೋಜನವೂ ಇಲ್ಲವೆಂದರ್ಥ. ಪಾಂಡವರ ಕಡೆಯ ಕೇವಲ ನಾಲ್ಕು ಮಂದಿ ವೀರಪುರುಷರು ನಿನ್ನ ಅಪಾರಸೇನೆಯನ್ನೂ ಸದೆಬಡಿಯಬಲ್ಲರೆಂದರ್ಥ. ಈ ವಿಷಯವನ್ನೇ ವ್ಯಾಸರು ಮುಂದೆ ಇನ್ನೂ ಸ್ಪಷ್ಟವಾಗಿ ಹೇಳುತ್ತಾರೆ. **ಅಪಚಿತಿಃ** ಎಂದರೆ ಪೂಜೆ ಎಂದೂ ಅರ್ಥವಾಗುತ್ತದೆ. ನಾಶ ಎಂದೂ ಅರ್ಥವಾಗುತ್ತದೆ. **'ಭವೇದಪಚಿತಿಃ ಪೂಜಾ ವ್ಯಯನಿಷ್ಕೃತಿ ಹಾನಿಷು'** (ಮೇದಿನೀ)

**ನ ಬಾಹುಲ್ಯೇನ ಸೇನಾಯಾ ಜಯೋ ಭವತಿ ನಿತ್ಯಶಃ ।**
**ಅಧ್ರುವೋ ಹಿ ಜಯೋ ನಾಮ ದೈವಂ ಚಾತ್ರ ಪರಾಯಣಮ್ ।**
**ಜಯವನ್ತೋ ಹಿ ಸಂಗ್ರಾಮೇ ಕೃತಕೃತ್ಯಾ ಭವನ್ತಿ ಹಿ ॥೮೫॥**

ಸೇನಾಬಾಹುಳ್ಯದಿಂದಲೇ ಯಾವಾಗಲೂ ಜಯವು ಲಭಿಸುವುದಿಲ್ಲ. ಯುದ್ಧದಲ್ಲಿ ಯಾವಾಗಲೂ ವಿಜಯವೆಂಬುದು ಅನಿಶ್ಚಿತವಾದುದು. ಜಯಾಪಜಯಗಳು ದೈವವನ್ನೇ ಆಶ್ರಯಿಸಿರುತ್ತವೆ. ದೈವೇಚ್ಛೆಯಂತೆ ಜಯಾಪಜಯಗಳು ಲಭಿಸುತ್ತವೆ. ಜಯಾಪಜಯಗಳಿಗೆ ವಿಧಿಯೇ ದಿಕ್ಕು.

(ಮೂಲಾಧಾರ.) ಯಾರು ಸಂಗ್ರಾಮದಲ್ಲಿ ಜಯಗಳಿಸುತ್ತಾರೆಯೋ ಅವರೇ ಕೃತಕೃತ್ಯರಾಗುತ್ತಾರೆ."

ಃನೆಯ ಅಧ್ಯಾಯವು ಮುಗಿಯಿತು.

೪ನೆಯ ಅಧ್ಯಾಯ ಜಮ್ಬೂಖಣ್ಡವಿನಿರ್ಮಾಣಪರ್ವ (ಮುಂದುವರಿದಿದೆ.)

## ಸಂಜಯನು ಧೃತರಾಷ್ಟ್ರನಿಗೆ ಭೂಮಿಯ ಮಹತ್ತ್ವವನ್ನು ವರ್ಣಿಸಿದುದು

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

ಮಹಾರಾಜ! ಹೀಗೆಂಬುದಾಗಿ ವ್ಯಾಸರು ಧೀಮಂತನಾದ ಧೃತರಾಷ್ಟ್ರ ನಿಗೆ ಹೇಳಿ ಹೊರಟುಹೋದರು. ಧೃತರಾಷ್ಟ್ರನೂ ಸಹ ವ್ಯಾಸರು ಹೇಳಿದು ದನ್ನೇ ಪುನಃ ಪುನಃ ಚಿಂತಿಸುತ್ತಿದ್ದನು. ಮುಹೂರ್ತಕಾಲದವರೆಗೆ ಅವರು ಹೇಳಿದುದನ್ನೇ ಯೋಚಿಸುತ್ತಿದ್ದು ಬಾರಿ-ಬಾರಿಗೂ ಸುದೀರ್ಘವಾಗಿ ನಿಟ್ಟು ಸಿರುಬಿಡುತ್ತಾ ವಿಶುದ್ಧಹೃದಯನಾದ ಸಂಜಯನನ್ನು ಪ್ರಶ್ನಿಸಿದನು :

"ಸಂಜಯ! ಈ ರಾಜರೆಲ್ಲರೂ ಶೂರರೂ, ಧೀರರೂ, ಯುದ್ಧವನ್ನೇ ಪ್ರಶಂಸೆಮಾಡುವವರೂ ಆಗಿರುತ್ತಾರೆ. ನಾನಾವಿಧವಾದ ಶಸ್ತ್ರಾಸ್ತ್ರಗಳಿಂದಿವರು ಪರಸ್ಪರವಾಗಿ ಸಂಹಾರಕ್ರಿಯೆಯನ್ನು ನಡೆಸುತ್ತಾರೆ. ಈ ಭೂಮಿಯ ಸಲುವಾಗಿ ತಮ್ಮ ಪ್ರಾಣಗಳನ್ನೇ ಒತ್ತೆಯಿಟ್ಟು ಕಾದಾಡುತ್ತಾರೆ. ಇವರು ಅನ್ಯೋನ್ಯವಾಗಿ ಸಂಧಾನವನ್ನೆಂದಿಗೂ ಮಾಡಿಕೊಳ್ಳುವುದಿಲ್ಲ. ಪರಸ್ಪರ ಕಾದಾಡಿ ಯಮಲೋಕದ ಜನಸಂಖ್ಯೆಯನ್ನು ಹೆಚ್ಚಿಸುತ್ತಾರೆ. ಭೂಮಿಯ ಸಂಬಂಧವಾದ ಐಶ್ವರ್ಯಕ್ಕೆ ಹಾತೊರೆಯುತ್ತಿರುವ ಇವರು ಮತ್ತೊಬ್ಬರ ವಿಷಯದಲ್ಲಿ ಸಹನೆಯುಳ್ಳವರಾಗಿಲ್ಲ.

ಒಬ್ಬನಲ್ಲಿ ಐಶ್ವರ್ಯವಿರುವುದನ್ನು ಮತ್ತೊಬ್ಬನು ಸಹಿಸುವುದಿಲ್ಲ. ಭೂಮಿಯು ಬಹುಗುಣಯುಕ್ತವಾಗಿದೆಯೆಂದು ನಾನು ಭಾವಿಸುತ್ತೇನೆ. (ಬಹುಗುಣಗಳಿಂದ ಕೂಡಿರದಿದ್ದರೆ ಈ ರಾಜರು ಭೂಮಿಗಾಗಿ ತಮ್ಮ ಪ್ರಾಣಗಳನ್ನೇ ಒತ್ತೆಯಿಟ್ಟು ಕಾದಾಡುತ್ತಿರಲಿಲ್ಲ.) ಆದುದರಿಂದ ನೀನು ಈ ಭೂಮಿಯಲ್ಲಿರುವ ಗುಣಗಳನ್ನು ವರ್ಣಿಸಿ ಹೇಳು. ಈ ಕುರುಕ್ಷೇತ್ರದಲ್ಲಿ

ಪ್ರಪಂಚದ ಎಲ್ಲ ಭಾಗಗಳಿಂದಲೂ ಸಾವಿರ, ಹತ್ತು ಸಾವಿರ, ಲಕ್ಷ, ದಶಲಕ್ಷ, ಕೋಟಿಸಂಖ್ಯೆಗಳಲ್ಲಿ ವೀರರು ಬಂದು ಸೇರಿದ್ದಾರೆ. ಸಂಜಯ! ಇವರೆಲ್ಲರೂ ಯಾವ ಯಾವ ದೇಶಗಳಿಂದ ಆಗಮಿಸಿದ್ದಾರೆ? ಆ ದೇಶಗಳ ಪರಿಮಿತಿ ಯೇನು? ಅವುಗಳ ವಿಸ್ತಾರವೆಷ್ಟು? ಅಲ್ಲಿರುವ ನಗರಗಳಾವುವು? ಇವು ಗಳೆಲ್ಲದರ ವಿವರಣೆಯನ್ನೂ ಸಹ ನಾನು ಯಥಾವತ್ತಾಗಿ ನಿನ್ನಿಂದ ಕೇಳಿ ತಿಳಿದುಕೊಳ್ಳಬೇಕೆಂದಿರುತ್ತೇನೆ. ನೀನೀ ವಿಷಯವನ್ನು ಹೇಳಲು ಸಮರ್ಥ ನಾಗಿರುವೆ. ವಿಪ್ರರ್ಷಿಗಳಾದ ಅಮಿತತೇಜಸ್ವಿಗಳಾದ ವ್ಯಾಸರ ಪ್ರಭಾವ ದಿಂದಾಗಿ ನೀನು ದಿವ್ಯಬುದ್ಧಿಯಿಂದ ಪ್ರದೀಪ್ತವಾದ ಜ್ಞಾನದೃಷ್ಟಿಯಿಂದ ಯುಕ್ತನಾಗಿರುವೆ."

"ಮಹಾಪ್ರಾಜ್ಞನೇ! ನಿನಗೆ ನಮಸ್ಕರಿಸುತ್ತೇನೆ. ನೀನು ಹೇಳಿದಂತೆ ನನ್ನ ಬುದ್ಧಿಗೆ ಗೋಚರಿಸಿದಷ್ಟು (ಜ್ಞಾನದೃಷ್ಟಿಗೆ ಕಂಡಷ್ಟು) ಭೂಮಿಯ ಸಂಬಂಧವಾದ ಗುಣಗಳನ್ನು ಹೇಳುತ್ತೇನೆ. ಶಾಸ್ತ್ರಚಕ್ಷುವಾಗಿರುವ (ಪ್ರಜ್ಞಾಚಕ್ಷುವಾಗಿರುವ) ನೀನು ನಾನು ಹೇಳುವುದೆಲ್ಲವನ್ನೂ ಪ್ರಜ್ಞೆಯಲ್ಲಿಯೇ ಕಾಣುವವನಾಗು.

**ದ್ವಿವಿಧಾನೀಹ ಭೂತಾನಿ ಚರಾಣಿ ಸ್ಥಾವರಾಣಿ ಚ ।**
**ತ್ರಸಾನಾಂ ತ್ರಿವಿಧಾ ಯೋನಿರಣ್ಡಸ್ವೇದಜರಾಯುಜಾಃ ॥೧೦॥**

ಮಹಾರಾಜ! ಈ ಪ್ರಪಂಚದಲ್ಲಿ ಚರಗಳು ಮತ್ತು ಸ್ಥಾವರಗಳು ಎಂಬ ಎರಡು ವಿಧವಾದ ಪ್ರಾಣಿಗಳಿವೆ. ಚರ ಅಥವಾ ಜಂಗಮಪ್ರಾಣಿಗಳಿಗೆ ಮೂರು ವಿಧವಾದ ಉತ್ಪತ್ತಿಯಿದೆ. ಅಂಡಜ (ಮೊಟ್ಟೆಯ ಮೂಲಕವಾಗಿ ಹುಟ್ಟುವ ಪಕ್ಷಿಗಳು), ಸ್ವೇದಜ (ಬೆವರಿನಿಂದಲೇ ಹುಟ್ಟುವ ನೊಣವೇ ಮೊದಲಾದ ಕ್ರಿಮಿಗಳು), ಜರಾಯುಜ (ಗರ್ಭಾಶಯದಿಂದ ಹುಟ್ಟುವ ಮನುಷ್ಯ, ಪಶು–ಮೊದಲಾದುವು).

**ತ್ರಸಾನಾಂ ಖಲು ಸರ್ವೇಷಾಂ ಶ್ರೇಷ್ಠಾ ರಾಜಞ್ಜರಾಯುಜಾಃ ।**
**ಜರಾಯುಜಾನಾಂ ಪ್ರವರಾ ಮಾನವಾಃ ಪಶವಶ್ಚ ಯೇ ॥೧೧॥**

ಅಂಡಜ, ಸ್ವೇದಜ ಮತ್ತು ಜರಾಯುಜಪ್ರಾಣಿಗಳಲ್ಲಿ ಗರ್ಭಾಶಯ ದಿಂದ ಹುಟ್ಟುವ ಜರಾಯುಜಗಳು ಶ್ರೇಷ್ಠವಾದುವುಗಳು. ಗರ್ಭಾಶಯದಿಂದ ಉತ್ಪತ್ತಿಯಾದುವುಗಳಲ್ಲಿ ಮನುಷ್ಯ ಮತ್ತು ಪಶುಗಳು ಶ್ರೇಷ್ಠವಾದುವುಗಳು.

**ನಾನಾರೂಪಧರಾ ರಾಜಂಸ್ತೇಷಾಂ ಭೇದಾಶ್ಚತುರ್ದಶ ।**
**ವೇದೋಕ್ತಾಃ ಪೃಥಿವೀಪಾಲ ಯೇಷು ಯಜ್ಞಾಃ ಪ್ರತಿಷ್ಠಿತಾಃ ॥೧೨॥**

ಪಶುಗಳು ಮತ್ತು ಮನುಷ್ಯರು ನಾನಾರೂಪಗಳನ್ನು ಧರಿಸಿರುತ್ತಾರೆ. ಅವುಗಳ ಭೇದಗಳು ಹದಿನಾಲ್ಕೆಂದು ವೇದಗಳಲ್ಲಿ ಉಕ್ತವಾಗಿದೆ. **ಸಪ್ತಗ್ರಾಮ್ಯಾಃ ಪಶವಃ ಸಪ್ತಾರಣ್ಯಾಃ ॥** ಯಾವ ಪ್ರಾಣಿಗಳಲ್ಲಿ ಮತ್ತು ಮನುಷ್ಯರಲ್ಲಿ ಯಜ್ಞವು ಪ್ರತಿಷ್ಠಿತವಾಗಿದೆಯೋ ಅವರು ಮತ್ತು ಆ ಪ್ರಾಣಿಗಳು ಉಳಿದ ಮನುಷ್ಯರಿಗಿಂತ ಮತ್ತು ಪ್ರಾಣಿಗಳಿಗಿಂತ ಶ್ರೇಷ್ಠರು.

**(ಮಾನವಾಸ್ತ್ರೈವರ್ಣಿಕಾಃ ಪಶವಶ್ಚ ಗೋಽಜಾದ್ಯಾಃ ।**

ಮೂರು ವರ್ಣಗಳ ಮನುಷ್ಯರು ಮತ್ತು ಗೋವು, ಆಡು ಮುಂತಾದ ಪ್ರಾಣಿಗಳು–ಎಂದು ವ್ಯಾಖ್ಯಾನಕಾರರು ಹೇಳಿದ್ದಾರೆ.)

**ಗ್ರಾಮ್ಯಾಣಾಂ ಪುರುಷಾಃ ಶ್ರೇಷ್ಠಾಃ ಸಿಂಹಾಶ್ಚಾರಣ್ಯವಾಸಿನಾಮ್ ।**
**ಸರ್ವೇಷಾಮೇವ ಭೂತಾನಾಮನ್ಯೋನ್ಯೇನೋಪಜೀವನಮ್ ॥೧೩॥**

ಗ್ರಾಮ್ಯಪಶುಗಳಲ್ಲಿ ಮನುಷ್ಯರು ಅಥವಾ ಪುರುಷರೇ ಶ್ರೇಷ್ಠರು. ಅರಣ್ಯದ ಪಶುಗಳಲ್ಲಿ ಸಿಂಹಗಳೇ ಶ್ರೇಷ್ಠವಾದುವುಗಳು. ಪ್ರಪಂಚದ ಎಲ್ಲ ಪ್ರಾಣಿಗಳ ಜೀವನದ ನಿರ್ವಾಹವೂ ಸಹ ಪರಸ್ಪರ ಸಹಯೋಗದಿಂದಲೇ ನಡೆಯುವುದಾಗಿದೆ. (ಒಂದು ಪ್ರಾಣಿಯು ಅಥವಾ ಒಬ್ಬ ಮನುಷ್ಯನು ಮತ್ತೊಂದು ಪ್ರಾಣಿಯನ್ನು ಅಥವಾ ಮತ್ತೊಬ್ಬ ಮನುಷ್ಯನನ್ನು ಅವಲಂಬಿಸಿಯೇ ಇರಬೇಕಾಗುತ್ತದೆ. ಈ ಅವಲಂಬನೆಗೆ ಉಭಯತ್ರರ ವ್ಯಾಪ್ತಿಯೂ (ಪರಸ್ಪರಾಪೇಕ್ಷೆಯೂ) ಇರುತ್ತದೆ. ಬೇರೊಬ್ಬರ ಸಹಾಯವಿಲ್ಲದೆ ತಾನೊಬ್ಬನೇ ಸ್ವತಂತ್ರನಾಗಿ ಬಾಳುವೆನೆನ್ನುವ ಮನುಷ್ಯನಾಗಲೀ ಪ್ರಾಣಿಯಾಗಲೀ ಪ್ರಪಂಚದಲ್ಲಿಲ್ಲ. ) (ಗ್ರಾಮ್ಯಪಶುಗಳಲ್ಲಿ ಪುರುಷನು ಶ್ರೇಷ್ಠನು. ಪುರುಷನಿಗೂ ಪಶುಶಬ್ದವಾಚ್ಯತ್ವವಿದೆ. '**ಪುರುಷಂ ವೈ ದೇವಾಃ ಪಶುಮಾಲಭಂತ । ತಸ್ಮಾತ್ರಯಃ ಪಶೂನಾಗ್ಂಹಸ್ತಾ-ದಾನಾಃ ಪುರುಷೋ ಹಸ್ತೀ ಮರ್ಕಟಃ**' ಎಂಬ ವೇದವಾಕ್ಯವೇ ಇದಕ್ಕೆ ಆಧಾರ.)

**ಉದ್ಭಿಜ್ಜಾಃ ಸ್ಥಾವರಾಃ ಪ್ರೋಕ್ತಾಸ್ತೇಷಾಂ ಪಞ್ಚೈವ ಜಾತಯಃ ।**
**ವೃಕ್ಷಗುಲ್ಮಲತಾವಲ್ಲ್ಯಸ್ತ್ವಕ್ಸಾರಾಸ್ತೃಣಜಾತಯಃ ॥೧೪॥**

ಸ್ಥಾವರಗಳಿಗೆ ಉದ್ಭಿಜ್ಜಗಳೆಂದು ಹೇಳುತ್ತಾರೆ. ಉದ್ಭಿಜ್ಜಗಳೆಂದರೆ ಭೂಮಿಯನ್ನು ಭೇದಿಸಿಕೊಂಡು ಹುಟ್ಟತಕ್ಕುವುಗಳು. ಇವುಗಳಲ್ಲಿ ಐದು ಜಾತಿಗಳಿವೆ. **ವೃಕ್ಷ, ಗುಲ್ಮ**, (ಮಧ್ಯದ ದೂಲವಿಲ್ಲದ ಗಿಡ, ದರ್ಭೆ, ಜೆಂಬುಹುಲ್ಲು, ಜೊಂಡುಹುಲ್ಲು–ಮುಂತಾದುವು.) **ಲತಾ**, (ಬಳ್ಳಿ, ಹಂಬು, ವೃಕ್ಷಾಶ್ರಯಿಗಳಾದ ಅಮೃತಬಳ್ಳಿ, ವೀಳೆಯದೆಲೆ ಇವೇ ಮುಂತಾದುವು ) **ವಲ್ಲೀ** (ನೆಲದ ಮೇಲೆ ಹರಡಿಕೊಳ್ಳುವ ವರ್ಷಮಾತ್ರವಿರುವ ಸೋರೇಕಾಯಿ ಬೂದುಗುಂಬಳಕಾಯಿ ಇವೇ ಮೊದಲಾದ ಬಳ್ಳಿಗಳು.) **ತ್ವಕ್ಸಾರಃ** (ಬಿದಿರು, ದಾಲ್ಚಿನ್ನಿ ಮುಂತಾದುವು. ಇವುಗಳು (ಬಿದಿರು ಮುಂತಾದುವು) ಹುಲ್ಲಿನ ಜಾತಿಗೆ ಸೇರಿದುವುಗಳೇ ಹೊರತು ವೃಕ್ಷಗಳಲ್ಲ.)

**ತೇಷಾಂ ವಿಂಶತಿರೇಕೋನಾ ಮಹಾಭೂತೇಷು ಪಞ್ಚಸು ।**
**ಚತುರ್ವಿಂಶತಿರುದ್ದಿಷ್ಟಾ ಗಾಯತ್ರೀ ಲೋಕಸಮ್ಮತಾ ॥೧೫॥**

ಮೇಲೆ ಹೇಳಿದ ಸ್ಥಾವರ-ಜಂಗಮಗಳ ಸಂಖ್ಯೆಯು ಹತ್ತೊಂಬತ್ತಾಗುತ್ತದೆ. ಜಂಗಮಗಳು ಹದಿನಾಲ್ಕು ರೀತಿಯ ಪ್ರಾಣಿಗಳು. **ಸಪ್ತಗ್ರಾಮ್ಯಾಃ ಪಶವಃ ಸಪ್ತಾರಣ್ಯಾಃ**-**ವೃಕ್ಷ-ಗುಲ್ಮ-ಲತಾ-ವಲ್ಲೀ-ತ್ವಕ್ಸಾರ** ಈ ಐದು ಸ್ಥಾವರಗಳು. ಒಟ್ಟು ಹತ್ತೊಂಬತ್ತು. ಇವುಗಳ ಜೊತೆಗೆ ಪೃಥಿವೀ, ನೀರು, ವಾಯು, ತೇಜಸ್ಸು ಮತ್ತು ಆಕಾಶ–ಈ ಐದು ಮಹಾಭೂತಗಳು ಸೇರಿದರೆ ಇಪ್ಪತ್ತುನಾಲ್ಕಾಗುತ್ತದೆ. ಗಾಯತ್ರೀಮಹಾಮಂತ್ರದಲ್ಲಿಯೂ ಇಪ್ಪತ್ತುನಾಲ್ಕು ಅಕ್ಷರಗಳಿವೆ. ಅರ್ಥಾತ್ ಲೋಕಸಮ್ಮತವಾದ ಗಾಯತ್ರೀಮಹಾಮಂತ್ರವು ಸರ್ವಭೂತಾತ್ಮಕವಾಗಿದೆ.

(ಹತ್ತನೆಯ ಶ್ಲೋಕದಲ್ಲಿ ತ್ರಸಪ್ರಾಣಿಗಳಲ್ಲಿ (ಚರ ಅಥವಾ ಜಂಗಮ ಪ್ರಾಣಿಗಳಲ್ಲಿ ) ಅಂಡಜ, ಸ್ವೇದಜ, ಜರಾಯುಜ ಎಂಬ ಮೂರು ವಿಭಾಗ ಮಾಡಿದ್ದಾರೆ. ಮುಂದೆ ಜರಾಯುಜಗಳನ್ನು (ಮನುಷ್ಯ-ಪಶು) ಮಾತ್ರ ಗಣನೆಗೆ ತೆಗೆದುಕೊಂಡಿರುವರೇ ಹೊರತು ಅಂಡಜಗಳನ್ನಾಗಲೀ ಸ್ವೇದಜಗಳನ್ನಾಗಲೀ ಗಣನೆಗೆ ತೆಗೆದುಕೊಂಡಿಲ್ಲ. ಇದಕ್ಕೆ ಕಾರಣವಿಷ್ಟೆ : ಅಂಡಜಗಳಿಗೆ

ಮೈಥುನಜನ್ಯತ್ವಸಾಮ್ಯವಿರುವುದರಿಂದ ಅವು ಪಶುಗಳ ಗುಂಪಿಗೆ ಸೇರಿಕೊಳ್ಳುತ್ತವೆ. ಸ್ವೇದಜಪ್ರಾಣಿಗಳು ಉದ್ಭಿಜ್ಜಪ್ರಾಣಿಗಳ ಗುಂಪಿಗೇ ಸೇರಿಕೊಳ್ಳುತ್ತವೆ. ಉದ್ಭಿಜ್ಜಗಳು ಭೂಮಿಯನ್ನು ಭೇದಿಸಿಕೊಂಡು ಹೊರಬರತಕ್ಕುವುಗಳು. ಸ್ವೇದಜಗಳು ನೀರನ್ನು ಭೇದಿಸಿಕೊಂಡು ಹೊರಬರತಕ್ಕುವುಗಳು. ಆದುದರಿಂದ ಇಪ್ಪತ್ತುನಾಲ್ಕು ಸಂಖ್ಯೆಯು ವ್ಯತ್ಯಸ್ತವಾಗುವುದಿಲ್ಲ. (ಛಾಂದೋಗ್ಯದಲ್ಲಿ ಗಾಯತ್ರಿಯನ್ನು ಭೂಮಿಯನ್ನಾಕ್ರಮಿಸಿರುವಳೆಂದೇ ವರ್ಣಿಸಿದ್ದಾರೆ. **ಗಾಯತ್ರೀ ವಾ ಇದಂ ಸರ್ವಂ ಭೂತಂ ... ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ ತದೇತದೃಚಾಭ್ಯನೂಕ್ತಂ ಏತಾವಾನಸ್ಯ ಮಹಿಮಾ ತತೋ ಜ್ಯಾಯಾಂಶ್ಚ ಪೂರುಷಃ । ಪಾದೋಸ್ಯ ಸರ್ವಾಭೂತಾನಿ । ತ್ರಿಪಾದಸ್ಯಾಮೃತಂ ದಿವಿ ॥)**

**ಯ ಏತಾಂ ವೇದ ಗಾಯತ್ರೀಂ ಪುಣ್ಯಾಂ ಸರ್ವಗುಣಾನ್ವಿತಾಮ್ ।**
**ತತ್ತ್ವೇನ ಭರತಶ್ರೇಷ್ಠ ಸ ಲೋಕೇ ನ ಪ್ರಣಶ್ಯತಿ ॥೧೬॥**

ಭರತಶ್ರೇಷ್ಠನೇ! ಈ ಲೋಕದಲ್ಲಿ ಯಾವನು ಸರ್ವಗುಣಸಂಪನ್ನಳಾದ ಪುಣ್ಯಮಯಿಯಾದ ಈ ಗಾಯತ್ರಿಯನ್ನು ತತ್ತ್ವತಃ ತಿಳಿದುಕೊಳ್ಳುತ್ತಾನೆಯೋ ಅವನು ವಿನಾಶಹೊಂದುವುದಿಲ್ಲ.

**ಅರಣ್ಯವಾಸಿನಃ ಸಪ್ತ ಸಪ್ತೈಷಾಂ ಗ್ರಾಮವಾಸಿನಃ ।**
**ಸಿಂಹಾ ವ್ಯಾಘ್ರಾ ವರಾಹಾಶ್ಚ ಮಹಿಷಾ ವಾರಣಾಸ್ತಥಾ ।**
**ಋಕ್ಷಾಶ್ಚ ವಾನರಾಶ್ಚೈವ ಸಪ್ತಾರಣ್ಯಾಃ ಸ್ಮೃತಾ ನೃಪ ॥೧೭॥**

ಮಹಾರಾಜ! ಮೇಲೆ ಹೇಳಿದ ಜರಾಯುಜಗಳಲ್ಲಿ ಶ್ರೇಷ್ಠವಾದ ಹದಿನಾಲ್ಕು ಪಶುಗಳಲ್ಲಿ ಅರಣ್ಯವಾಸಿಗಳಾದ ಪಶುಗಳು ಏಳು. ಗ್ರಾಮವಾಸಿಗಳಾದ ಪಶುಗಳು ಏಳು. ಸಿಂಹ, ಹುಲಿ, ಕಾಡೆಮ್ಮೆ, ಆನೆ, ಕರಡಿ ಮತ್ತು ಕೋತಿ–ಇವು ಅರಣ್ಯವಾಸಿಗಳಾದ ಏಳು ಶ್ರೇಷ್ಠಪಶುಗಳು.

**ಗೌರಜಾವಿಮನುಷ್ಯಾಶ್ಚ ಅಶ್ವಾಶ್ವತರಗರ್ದಭಾಃ ॥೧೮॥**
**ಏತೇ ಗ್ರಾಮ್ಯಾಃ ಸಮಾಖ್ಯಾತಾಃ ಪಶವಃ ಸಪ್ತ ಸಾಧುಭಿಃ ।**
**ಏತೇ ವೈ ಪಶವೋ ರಾಜನ್ಗ್ರಾಮ್ಯಾರಣ್ಯಾಶ್ಚತುರ್ದಶ ॥೧೯॥**

ಹಸು, ಆಡು, ಕುರಿ, ಮನುಷ್ಯ, ಕುದುರೆ, ಹೇಸರಗತ್ತೆ ಮತ್ತು ಕತ್ತೆ–

ಈ ಏಳು ಗ್ರಾಮ್ಯಪಶುಗಳೆಂದು ಸತ್ಪುರುಷರಿಂದ ಹೇಳಲ್ಪಟ್ಟಿವೆ. ಮಹಾರಾಜ! ಈ ಹದಿನಾಲ್ಕು ಗ್ರಾಮ್ಯಾರಣ್ಯಪಶುಗಳು.

**ಭೂಮೌ ಚ ಜಾಯತೇ ಸರ್ವಂ ಭೂಮೌ ಸರ್ವಂ ವಿನಶ್ಯತಿ ।**
**ಭೂಮಿಃ ಪ್ರತಿಷ್ಠಾ ಭೂತಾನಾಂ ಭೂಮಿರೇವ ಪರಾಯಣಮ್ ॥೨೦॥**

ಭೂಮಿಯಲ್ಲೇ ಎಲ್ಲ ಪ್ರಾಣಿಗಳೂ ಹುಟ್ಟುತ್ತವೆ. ಭೂಮಿಯಲ್ಲೇ ಎಲ್ಲ ಪ್ರಾಣಿಗಳೂ ವಿನಾಶಹೊಂದುತ್ತವೆ. ಭೂಮಿಯೇ ಸರ್ವಪ್ರಾಣಿಗಳಿಗೂ ನೆಲೆ ಮತ್ತು ಭೂಮಿಯೇ ಸರ್ವಪ್ರಾಣಿಗಳಿಗೂ ಆಶ್ರಯಭೂತವಾದುದು.

**ಯಸ್ಯ ಭೂಮಿಸ್ತಸ್ಯ ಸರ್ವಂ ಜಗತ್ ಸ್ಥಾವರಜಙ್ಗಮಮ್ ।**
**ತತ್ರಾತಿಗೃದ್ಧಾ ರಾಜಾನೋ ವಿನಿಘ್ನನ್ತೀತರೇತರಮ್ ॥೨೧॥**

ಯಾವನಿಗೆ ಈ ಭೂಮಿಯ ಸ್ವಾಮ್ಯವಿರುತ್ತದೆಯೋ ಅವನಿಗೆ ಸ್ಥಾವರ-ಜಂಗಮಾತ್ಮಕವಾದ ಈ ಅಖಿಲಜಗತ್ತೂ ಸ್ವಾಧೀನದಲ್ಲಿರುತ್ತದೆ. ಈ ಕಾರಣದಿಂದಲೇ ಭೂಸ್ವಾಮ್ಯದ ವಿಷಯದಲ್ಲಿ ಅತ್ಯಾಸಕ್ತರಾದ ರಾಜರು ಅದನ್ನು ಪಡೆದುಕೊಳ್ಳುವ ಸಲುವಾಗಿ ಒಬ್ಬರು ಮತ್ತೊಬ್ಬರನ್ನು ಸಂಹಾರ ಮಾಡುತ್ತಾರೆ. (ಯಾವನು ಈ ಭೂಮಿಯ ಒಡೆಯನೋ ಅವನ ಅಧೀನ ದಲ್ಲೇ ಈ ಸ್ಥಾವರ-ಜಂಗಮಾತ್ಮಕವಾದ ಜಗತ್ತಿರುತ್ತದೆ–ಎಂಬುದರಲ್ಲಿ ವಿಶೇಷವೇನೂ ಇಲ್ಲ. ಭೂಮಿಯ ಸ್ವಾಮ್ಯವಿದೆಯೆಂಬುದರಿಂದಲೇ ಅದರಲ್ಲಿ ರುವುದೆಲ್ಲವೂ ಅವನ ಅಧೀನದಲ್ಲಿರುತ್ತದೆಯೆಂಬ ಅರ್ಥಕೊಡುತ್ತದೆ. ಆದುದರಿಂದ ವ್ಯಾಖ್ಯಾನಕಾರರು–ಭೂಮಿಯ ಸ್ವಾಮ್ಯವನ್ನು ಪಡೆದವನಿಗೆ ಸರ್ವಸಿದ್ಧಿಯೂ ಲಭಿಸುತ್ತದೆಂದು ಅರ್ಥಮಾಡಿರುತ್ತಾರೆ. ಸಾರ್ವಭೌಮ ನಾದ ರಾಜನಿಗೆ ರಾಜಸೂಯಯಾಗಮಾಡುವ ಅಧಿಕಾರವು ಪ್ರಾಪ್ತವಾಗು ತ್ತದೆ. ಅದರಿಂದ ಅವನು ಸ್ವಾರಾಜ್ಯವನ್ನು ಹೊಂದುತ್ತಾನೆ. ಅಶ್ವಮೇಧಯಾಗ ಮಾಡಿ ಕ್ರಮಮುಕ್ತಿಸ್ಥಾನವನ್ನು ಹೊಂದುತ್ತಾನೆ. ಸಾರ್ವಭೌಮನಲ್ಲದವನು ರಾಜಸೂಯವನ್ನಾಗಲೀ, ಅಶ್ವಮೇಧವನ್ನಾಗಲೀ ಮಾಡಲಾರನು.)

೩ನೆಯ ಅಧ್ಯಾಯವು ಮುಗಿಯಿತು.

## ಪಂಚಮಹಾಭೂತಗಳ ಮತ್ತು ಸುದರ್ಶನ ದ್ವೀಪದ ಸಂಕ್ಷೇಪವರ್ಣನೆ

ಧೃತರಾಷ್ಟ್ರನು ಸಂಜಯನಿಗೆ ಹೇಳುತ್ತಾನೆ :

"ಸಂಜಯ! ನದಿಗಳ, ಪರ್ವತಗಳ, ಜನಪದಗಳ ಮತ್ತು ಭೂಮಿಯನ್ನಾಶ್ರಯಿಸಿರತಕ್ಕ ಇತರ ಪದಾರ್ಥಗಳ ನಾಮಧೇಯಗಳನ್ನು ಹೇಳು. ಪ್ರಮಾಣಜ್ಞನೇ! ನೀನು ಅಖಂಡಭೂಭಾಗದ ಸುತ್ತಳತೆಯನ್ನೂ, ಅದರಲ್ಲಿರುವ ಅರಣ್ಯಗಳನ್ನೂ, ಅವುಗಳ ನಾಮಧೇಯಗಳನ್ನೂ ನನಗೆ ಹೇಳು. ಯಾವುದೊಂದನ್ನೂ ಬಿಡದೇ ಹೇಳಬೇಕು, ಸಂಜಯ!"

**ಪಞ್ಚೇಮಾನಿ ಮಹಾರಾಜ ಮಹಾಭೂತಾನಿ ಸಂಗ್ರಹಾತ್ ।**
**ಜಗತೀಸ್ಥಾನಿ ಸರ್ವಾಣಿ ಸಮಾನ್ಯಾಹುರ್ಮನೀಷಿಣಃ ॥೩॥**

"ಮಹಾರಾಜ! ಪ್ರಪಂಚದಲ್ಲಿರತಕ್ಕ ಸಕಲಪದಾರ್ಥಗಳೂ ಸಹ ಸಂಕ್ಷೇಪದಲ್ಲಿ ಪಂಚಮಹಾಭೂತಗಳ ಸ್ವರೂಪಗಳೇ ಆಗಿವೆ. ಇದೇ ಕಾರಣದಿಂದಲೇ ಪಂಡಿತರಾದವರು ಪ್ರಪಂಚದಲ್ಲಿರುವುದೆಲ್ಲವನ್ನೂ ಸಮವೆಂದು ಭಾವಿಸುತ್ತಾರೆ. ಒಂದಕ್ಕೊಂದಕ್ಕೆ ತಾರತಮ್ಯವಿದೆಯೆನ್ನುವುದಿಲ್ಲ. '**ಪಣ್ಡಿತಾಃ ಸಮದರ್ಶಿನಃ**'

**ಭೂಮಿರಾಪಸ್ತಥಾ ವಾಯುರಗ್ನಿರಾಕಾಶಮೇವ ಚ ।**
**ಗುಣೋತ್ತರಾಣಿ ಸರ್ವಾಣಿ ತೇಷಾಂ ಭೂಮಿಃ ಪ್ರಧಾನತಃ ॥೪॥**

ಭೂಮಿ, ನೀರು, ವಾಯು, ಅಗ್ನಿ ಮತ್ತು ಆಕಾಶ–ಇವೇ ಪಂಚಮಹಾಭೂತಗಳು. (ಇವುಗಳಲ್ಲಿ ಮೊದಲನೆಯದಕ್ಕಿಂತ ಎರಡನೆಯದು ಹೆಚ್ಚು ಗುಣವುಳ್ಳದ್ದಾಗಿರುತ್ತದೆ. ಎರಡನೆಯದಕ್ಕಿಂತ ಮೂರನೆಯದು ಹೆಚ್ಚು ಗುಣವುಳ್ಳದ್ದಾಗಿರುತ್ತದೆ. ಮೂರನೆಯದಕ್ಕಿಂತ ನಾಲ್ಕನೆಯದು ಹೆಚ್ಚು ಗುಣವುಳ್ಳದ್ದಾಗಿರುತ್ತದೆ. ನಾಲ್ಕನೆಯದಕ್ಕಿಂತ ಐದನೆಯದು ಹೆಚ್ಚು ಗುಣವುಳ್ಳದ್ದಾಗಿರುತ್ತದೆ.) (ಈ ಪಂಚಮಹಾಭೂತಗಳು ಉತ್ತರೋತ್ತರ ಹೆಚ್ಚು ಗುಣವುಳ್ಳವುಗಳಾಗಿರುತ್ತವೆ.) ಈ ಕಾರಣದಿಂದಲೇ ಈ ಪಂಚಮಹಾಭೂತ

ಗಳಲ್ಲಿ ಭೂಮಿಗೆ ಪ್ರಾಧಾನ್ಯವು ಬಂದಿದೆ. (ಇದನ್ನು ಹೀಗೂ ವಿವರಿಸಬಹುದಾಗಿದೆ–**ಆಕಾಶಾದ್ವಾಯುಃ ; ವಾಯೋರಗ್ನಿಃ ; ಅಗ್ನೇರಾಪಃ ; ಅದ್ಭ್ಯಃ ಪೃಥಿವೀ** ಎಂಬುದು ಶ್ರುತಿವಚನ. ಆಕಾಶದಿಂದ ವಾಯುವಿನ ಉತ್ಪತ್ತಿಯಾಗುತ್ತದೆ. ಆಕಾಶಕ್ಕೆ ಒಂದು ಗುಣವಿದ್ದರೆ **ಗುಣೋತ್ತರಾಣಿ ಸರ್ವಾಣಿ** ಎಂಬ ವಚನದಂತೆ ವಾಯುವಿನಲ್ಲಿ ಎರಡು ಗುಣಗಳಿರುತ್ತವೆ. **ವಾಯೋರಗ್ನಿಃ**–ವಾಯುವಿನಿಂದ ಅಗ್ನಿಯು ಉತ್ಪತ್ತಿಯಾಗುತ್ತದೆ. ಅರ್ಥಾತ್ ವಾಯುವಿಗೆ ಎರಡು ಗುಣಗಳಿದ್ದರೆ ಅಗ್ನಿಗೆ ಮೂರು ಗುಣಗಳಿರುತ್ತವೆ. **ಅಗ್ನೇರಾಪಃ** : ಅಗ್ನಿಯಿಂದ ನೀರು ಉತ್ಪತ್ತಿಯಾಗುತ್ತದೆ. ಅಗ್ನಿಗೆ ಮೂರು ಗುಣಗಳಿದ್ದರೆ ; ನೀರಿಗೆ ನಾಲ್ಕು ಗುಣಗಳು. **ಅದ್ಭ್ಯಃ** ಪೃಥಿವೀ ನೀರಿನಿಂದ ಭೂಮಿಯ ಉತ್ಪತ್ತಿಯಾಗಿದೆ–ನೀರಿಗೆ ಹಿಂದೆ ಹೇಳಿದಂತೆ ನಾಲ್ಕು ಗುಣಗಳು. **ಗುಣೋತ್ತರಾಣಿ** ಸರ್ವಾಣಿ ಎಂಬ ವಚನದ ಪ್ರಕಾರ ಭೂಮಿಗೆ ಐದು ಗುಣಗಳು. ಐದು ಗುಣಗಳಾವುವೆಂಬುದನ್ನು ಮುಂದೆ ಹೇಳುತ್ತಾರೆ.)

**ಶಬ್ದಃ ಸ್ಪರ್ಶಶ್ಚ ರೂಪಂ ಚ ರಸೋ ಗನ್ಧಶ್ಚ ಪಞ್ಚಮಃ ।**
**ಭೂಮೇರೇತೇ ಗುಣಾಃ ಪ್ರೋಕ್ತಾ ಋಷಿಭಿಸ್ತತ್ತ್ವವೇದಿಭಿಃ ॥೫॥**

ಶಬ್ದ, ಸ್ಪರ್ಶ, ರೂಪ, ರಸ, ಐದನೆಯದಾದ ಗಂಧ–ಇವುಗಳು ಭೂಮಿಯ ಗುಣಗಳೆಂದು ತತ್ತ್ವವೇತ್ತರಾದ ಋಷಿಗಳಿಂದ ಹೇಳಲ್ಪಟ್ಟಿದೆ.

**ಚತ್ವಾರೋಽಪ್ಸು ಗುಣಾ ರಾಜನ್ಗನ್ಧಸ್ತತ್ರ ನ ವಿದ್ಯತೇ ।**
**ಶಬ್ದಃ ಸ್ಪರ್ಶಶ್ಚ ರೂಪಂ ಚ ತೇಜಸೋಽಥ ಗುಣಾಸ್ತ್ರಯಃ ।**
**ಶಬ್ದಃ ಸ್ಪರ್ಶಶ್ಚ ವಾಯೋಸ್ತು ಆಕಾಶೇ ಶಬ್ದ ಏವ ತು ॥೬॥**

ನೀರಿನಲ್ಲಿ ಶಬ್ದ-ಸ್ಪರ್ಶ-ರೂಪ-ರಸ ಎಂಬ ನಾಲ್ಕು ಗುಣಗಳಿವೆ. ಗಂಧವಿಲ್ಲ. ಅಗ್ನಿಯಲ್ಲಿ ಶಬ್ದ-ಸ್ಪರ್ಶ-ರೂಪಗಳಿವೆ. ರಸ-ಗಂಧಗಳಿಲ್ಲ. ವಾಯುವಿನಲ್ಲಿ ಶಬ್ದ-ಸ್ಪರ್ಶಗಳೆಂಬ ಎರಡು ಗುಣಗಳಿವೆ. ರೂಪ-ರಸ-ಗಂಧಗಳಿಲ್ಲ. ಆಕಾಶದಲ್ಲಿ ಶಬ್ದವು ಮಾತ್ರವಿದೆ. ಸ್ಪರ್ಶ-ರೂಪ-ರಸ-ಗಂಧಗಳಿಲ್ಲ. ಆಕಾಶದ ಮುಖ್ಯಗುಣವು ಶಬ್ದ. ವಾಯುವಿಗೆ ಎರಡು ಗುಣಗಳು ಶಬ್ದ-ಸ್ಪರ್ಶಗಳು. ಆಕಾಶವನ್ನು ವಾಯುವಿನಿಂದ ಪ್ರತ್ಯೇಕಿಸಬಹುದು. ಆದರೆ ವಾಯುವನ್ನು

ಆಕಾಶದಿಂದ ಪ್ರತ್ಯೇಕಿಸಲು ಸಾಧ್ಯವಿಲ್ಲ. ವಾಯುವು ಆಕಾಶಜನ್ಯವಾದುದು. ವಾಯುವು ಆಕಾಶದ ಗುಣವನ್ನು ಹೊಂದಿರುತ್ತದೆ. ಅದರ ಜೊತೆಗೆ ತನ್ನ ಸಹಜಗುಣವಾದ ಸ್ಪರ್ಶವನ್ನೂ ಹೊಂದಿದೆ. ವಾಯುವಿನ ಸ್ಪರ್ಶವನ್ನು ನಾವೂ ಮನಗಾಣುತ್ತೇವೆ. ಅಗ್ನಿಗೆ ಮೂರು ಗುಣಗಳು. ಶಬ್ದ, ಸ್ಪರ್ಶ, ರೂಪಗಳು. ಅಗ್ನಿಯು ವಾಯುವಿನಿಂದ ಹುಟ್ಟಿದುದು. ಅರ್ಥಾತ್ ವಾಯುವಿನಿಂದ ಶಬ್ದ-ಸ್ಪರ್ಶಗುಣಗಳೆರಡೂ ಅಗ್ನಿಗೆ ಬಂದುವು. ರೂಪವು ಅಗ್ನಿಯ ನಿಜಗುಣ. ಅಗ್ನಿಯನ್ನು ನಾವು ಪ್ರತ್ಯೇಕವಾಗಿ ಕಾಣುತ್ತೇವೆ. ವಾಯುವಿನ ಸಂಪರ್ಕವಿಲ್ಲದಿದ್ದರೆ ಅಗ್ನಿಯು ಉರಿಯಲಾರದು. ಎಣ್ಣೆಯ ದೀಪಕ್ಕೆ ಪಾತ್ರೆಯನ್ನು ಮುಚ್ಚಿದರೆ ಅದು ಆರಿಹೋಗುತ್ತದೆ. ಅಗ್ನಿಯಿಂದ ಶಬ್ದ-ಸ್ಪರ್ಶ ಗುಣಗಳನ್ನು ಪ್ರತ್ಯೇಕಿಸುವ ಸಾಧ್ಯತೆಯಿಲ್ಲ. ನೀರಿನಲ್ಲಿ ಶಬ್ದ-ಸ್ಪರ್ಶ-ರೂಪ-ರಸಗಳೆಂಬ ನಾಲ್ಕು ಗುಣಗಳಿವೆ. ಶಬ್ದ, ಸ್ಪರ್ಶ, ರೂಪ–ಈ ಮೂರು ಗುಣಗಳು ಅಗ್ನಿಯಿಂದ ಪಡೆದುಕೊಂಡುವುಗಳು. ರಸವು ನೀರಿನ ಸಹಜಗುಣ. ಭೂಮಿಗೆ ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ಗುಣಗಳಿವೆ. ಶಬ್ದ-ಸ್ಪರ್ಶ-ರೂಪ-ರಸಗಳು ನೀರಿನಿಂದ ಬಂದ ಗುಣಗಳು. ಭೂಮಿಯ ಸಹಜಗುಣ ಗಂಧ.)

**ಏತೇ ಪಞ್ಚ ಗುಣಾ ರಾಜನ್ಮಹಾಭೂತೇಷು ಪಞ್ಚಸು ।**
**ವರ್ತನ್ತೇ ಸರ್ವಲೋಕೇಷು ಯೇಷು ಭೂತಾಃ ಪ್ರತಿಷ್ಠಿತಾಃ ॥೭॥**

ಮಹಾಭೂತಗಳಾದ ಪೃಥಿವ್ಯಪ್ತೇಜೋವಾಯ್ವಾಕಾಶಗಳಲ್ಲಿ ಶಬ್ದ, ಸ್ಪರ್ಶ, ರೂಪ, ರಸ, ಗಂಧ–ಈ ಐದು ಗುಣಗಳೇ ಪ್ರತಿಷ್ಠಿತವಾಗಿವೆ. ಎಲ್ಲ ಲೋಕಗಳಲ್ಲಿಯೂ ಈ ಪಂಚಮಹಾಭೂತಗಳ ಅಧಿಷ್ಠಾನವಿದ್ದೇ ಇರುತ್ತದೆ.

**ಅನ್ಯೋನ್ಯಂ ನಾಭಿವರ್ತನ್ತೇ ಸಾಮ್ಯಂ ಭವತಿ ವೈ ಯದಾ ॥೮॥**

ಯಾವಾಗ ಈ ಪಂಚಭೂತಗಳು ಸಮಾನರೂಪದಲ್ಲಿರುತ್ತವೆಯೋ–ಆಗ ಇವುಗಳು ಪರಸ್ಪರವಾಗಿ ಸಂಘಟಿಸುವುದಿಲ್ಲ.

**ಯದಾ ತು ವಿಷಮೀಭಾವಮಾವಿಶನ್ತಿ ಪರಸ್ಪರಮ್ ।**
**ತದಾ ದೇಹೈರ್ದೇಹವನ್ತೋ ವ್ಯತಿರೋಹನ್ತಿ ನಾನ್ಯಥಾ ॥೯॥**

ಯಾವಾಗ ಈ ಪಂಚಭೂತಗಳು ತಾರತಮ್ಯವನ್ನು ಹೊಂದುತ್ತವೆಯೋ ಆಗ ಒಂದಕ್ಕೊಂದು ಸೇರಿಕೊಳ್ಳುತ್ತವೆ. ಆ ಸಮಯದಲ್ಲಿಯೇ ದೇಹಧಾರಿಗಳಾದ ಪ್ರಾಣಿಗಳು ಆಯಾ ದೇಹಗಳೊಳಗೆ ಸೇರಿಕೊಳ್ಳುತ್ತವೆ. ಇದು ಬೇರೆಯ ರೀತಿಯಲ್ಲಿ ಆಗಲು ಸಾಧ್ಯವೇ ಇಲ್ಲ. (೭ ಮತ್ತು ೮ನೆಯ ಶ್ಲೋಕಗಳಿಗೆ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಅರ್ಥಮಾಡಿರುತ್ತಾರೆ. ವ್ಯಾಖ್ಯಾನಕಾರರು ಈ ಶ್ಲೋಕಗಳಿಗೆ ಸಂಪೂರ್ಣವಾಗಿ ವೇದಾಂತಪರವಾದ ಅರ್ಥಮಾಡಿದ್ದಾರೆ.

**ಮಹಾಭೂತೇಷು ಪಞ್ಚಭೂತಾತ್ಮಕೇಷು ಸರ್ವೇಷು ಲೋಕೇಷು ।**

ಪಂಚಭೂತಾತ್ಮಕವಾದ ಸರ್ವಲೋಕಗಳಲ್ಲಿಯೂ **ಭೋಗ್ಯವಸ್ತುಷು ಶರೀರಾದಿ ಘಟಾನ್ತೇಷು ಏತೇ ಪಞ್ಚ ಗುಣಾಃ ಸನ್ತಿ** ಶರೀರಾದಿ ಘಟಾಂತವಾದ ಭೋಗ್ಯವಸ್ತುಗಳಲ್ಲಿ ಈ ಐದು ಗುಣಗಳೂ ಇವೆ. ಏತೇ ಕೇ? ಇವುಗಳು ಯಾವುವೆಂದರೆ : **ಯೇಷು ಗುಣೇಷು ಭೋಕ್ತಾರೋ ಭೂತಾಃ** ಯಾವ ಗುಣಗಳಲ್ಲಿ ಉಪಭೋಗಾಸಕ್ತರಾದ ನಿತ್ಯನಿರ್ವೃತ್ತಾಶ್ಚೇತನಾಃಪುರುಷಾಃ **ಪ್ರತಿಷ್ಠಿತಾಃ।**ನಿತ್ಯಸಿದ್ಧರಾದ ಪುರುಷರು ಪ್ರತಿಷ್ಠಿತರಾಗಿರುವರೋ ಆ ಗುಣಗಳು. **ದೇಹೇನ್ದ್ರಿಯಾದೀನ್ ಭೋಗ್ಯಾನಧಿಷ್ಠಾಯ ಚೇತನಾಃ ಶಬ್ದಾದೀನಿ ಭೋಗ್ಯಾನ್ತರಾಣಿ ಭುಞ್ಜತೇ ।** ಭೋಗ್ಯವಸ್ತುಗಳಾದ ದೇಹೇಂದ್ರಿಯಗಳಲ್ಲಿ ಅಧಿಷ್ಠಾನಹೊಂದಿ ಚೇತನಗಳು ಅಥವಾ ಪ್ರಾಣಿಗಳು ಶಬ್ದಸ್ಪರ್ಶಾದಿ ನಾನಾವಿಧವಾದ ಭೋಗ್ಯಗಳನ್ನು ಭೋಗಿಸುತ್ತವೆ. **ದೇಹಾದೀನಾಮಪಿ ಭೋಗೋಪಕರಣತ್ವಾತ್ ಭೋಗ್ಯತ್ವಮೇವ ನ ಭೋಕ್ತೃತ್ವಂ.** ದೇಹಾದಿಗಳೂ ಸಹ ಭೋಗಕ್ಕೆ ಉಪಕರಣಗಳಾದುದರಿಂದ ಭೋಗ್ಯವಸ್ತುಗಳೆಂದೇ ಪರಿಗಣಿತವಾಗುತ್ತವೆ. ದೇಹಕ್ಕೆ ಭೋಕ್ತೃತ್ವವಿಲ್ಲ. ಪಂಚಭೂತಾತ್ಮಕವಾದ ಸರ್ವಲೋಕಗಳಲ್ಲಿರುವ ಸಕಲವಸ್ತು ಗಳಲ್ಲಿಯೂ (ಶರೀರಾದಿಗಳಲ್ಲಿಯೂ) ಪೃಥಿವ್ಯಪ್ತೇಜೋವಾಯ್ವಾಕಾಶಗಳ ಅಧಿಷ್ಠಾನವಿರುತ್ತದೆ. ಈ ಪಂಚಭೂತಗಳು ಶರೀರದಲ್ಲಿರುವ ಕಾರಣ ದಿಂದಲೇ ಇವುಗಳಿಗೆ ಸಂಬಂಧಿಸಿದ ಐದು ಗುಣಗಳೂ ಸಹ ಶರೀರದಲ್ಲಿರು

ತ್ತವೆ. ಈ ಐದು ಗುಣಗಳನ್ನು ಎಂದರೆ ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳನ್ನು ಉಪಭೋಗಿಸುವುದು ಬೇರೆಯ ವಸ್ತು. ಅದು ಶರೀರವಲ್ಲ. ಪಂಚ ಭೂತಾತ್ಮಕವಾದ ಶರೀರವು ತನ್ನ ಗುಣಗಳನ್ನು ತಾನೇ ಅನುಭವಿಸುವ ಸಾಧ್ಯತೆಯಿಲ್ಲ. ಭೋಗಯೋಗ್ಯವಾದ ಈ ಶರೀರವು ಚೇತನದ ಅಧಿಷ್ಠಾನ ವಾಗುತ್ತದೆ. ಚೇತನದ ಅಧಿಷ್ಠಾನವಾದಾಗ ಶರೀರವೂ ಸಹ ಭೋಗ್ಯವಸ್ತು ವಾಗುವುದೇ ಹೊರತು ಪ್ರಪಂಚದ ತೋರಿಕೆಗೆ ಕಾಣುವಂತೆ ಭೋಕ್ತೃವಾಗು ವುದಿಲ್ಲ. ಶರೀರದಲ್ಲಿ ಅಧಿಷ್ಠಾನಹೊಂದಿರುವ ಚೇತನವೇ ಭೋಕ್ತೃ. ಪಂಚ ಭೂತಾತ್ಮಕವಾದ ಶರೀರ ಮತ್ತು ತತ್ಸಂಬಂಧವಾದ ಗುಣಗಳು ಚೇತನನಿಗೆ ಭೋಗ್ಯವಸ್ತುಗಳಾಗುತ್ತವೆ.

ಏಳನೆಯ ಶ್ಲೋಕಕ್ಕೆ ವ್ಯಾಖ್ಯಾನಕಾರರು ಮಾಡಿರುವ ಅರ್ಥವಿದು. ಮುಂದಿನ ಶ್ಲೋಕಕ್ಕೆ ಅದರ ಅರ್ಥವಿವರಣೆಯು ಈ ರೀತಿಯಾಗಿರುತ್ತದೆ.

**ಸಮಸ್ಯ ಭಾವಃ ಸಾಮ್ಯಂ ಬ್ರಹ್ಮಭಾವಃ** ಸರ್ವಸಮತ್ವದ ಭಾವವೇ ಬ್ರಹ್ಮಭಾವ. ಇದಕ್ಕೆ ಶ್ರುತಿ-ಸ್ಮೃತಿವಚನಗಳು ಆಧಾರ. **ಸಮ ಆತ್ಮೇತಿ ವಿದ್ಯಾತ್ । ನಿರ್ದೋಷಂ ಹಿ ಸಮಂ ಬ್ರಹ್ಮ । ಭೋಕ್ತೃ ಭೋಗ್ಯಯೋರ್ಯದಾ ಸುಷುಪ್ತಿಪ್ರಲಯಸಮಾಧಿಮೋಕ್ಷೇಷು ಬ್ರಹ್ಮಭಾವೋ ಭವತಿ ತದಾ ತೇ–ಉಭೇ ಅನ್ಯೋನ್ಯಂ ನಾಭಿ– ವರ್ತನ್ತೇ.** ಭೋಕ್ತೃ ಮತ್ತು ಭೋಗ್ಯಗಳಿಗೆ ಅರ್ಥಾತ್ ಪಂಚ ಭೂತಾತ್ಮಕವಾದ ಶರೀರಕ್ಕೆ ಮತ್ತು ಚೇತನಕ್ಕೆ ಯಾವಾಗ ಸುಷುಪ್ತಿ-ಪ್ರಲಯ ಸಮಾಧಿ ಮೋಕ್ಷಗಳಲ್ಲಿ ಬ್ರಹ್ಮಭಾವವು ಬರುತ್ತದೆಯೋ ಆ ಸಮಯದಲ್ಲಿ ಭೋಗ್ಯ ಭೋಕ್ತೃಗಳೆರಡಕ್ಕೂ ಸಂಬಂಧವಿರುವುದಿಲ್ಲ. **ವ್ಯವಹಾರತೋ ವಿದ್ಯಮಾನಮಪಿ ಭೋಗ್ಯಂ ಭೋಕ್ತಾರಂ ನೋಪ– ಸರ್ಪತಿ ।** ಯದ್ಯಪಿ ವ್ಯವಹಾರದಲ್ಲಿ ಚೇತನನು ದೇಹದಲ್ಲಿಯೇ ಅಧಿಷ್ಠಾನ ಹೊಂದಿದ್ದರೂ ಸಹ ಭೋಗ್ಯವು (ವಿಷಯೇಂದ್ರಿಯಗಳು) ಚೇತನನ ಸಮೀಪಕ್ಕೆ ಹೋಗುವುದಿಲ್ಲ. **ನಾಪಿ ಭೋಕ್ತಾಽಲುಪ್ತದೃಗಪಿ ಭೋಗಾಯ– ತನಸ್ಯ ದೇಹೇನ್ದ್ರಿಯಾದೇರಭಾವಾತ್ ಭೋಗ್ಯಜಾತಮುಪಸರ್ಪ ತೀತ್ಯರ್ಥಃ** ಯದ್ಯಪಿ ಭೋಕ್ತೃವಿಗೆ ಕಣ್ಣುಗಳಿದ್ದರೂ ಸಹ ಸಮಾಧಿಸ್ಥಿತಿಯಲ್ಲಿ

ಭೋಗಾಯತನವಾದ ದೇಹೇಂದ್ರಿಯಾದಿಗಳ ಅಭಾವವಿರುವುದರಿಂದ ಭೋಗ್ಯವಸ್ತುಜಾತಗಳ ಕಡೆಗೆ ಹೋಗುವುದಿಲ್ಲ.

ಸಮಭಾವದಲ್ಲಿ ಎಂದರೆ ಬ್ರಹ್ಮಭಾವದಲ್ಲಿ ಭೋಗ್ಯ-ಭೋಕ್ತೃಗಳು ಪರಸ್ಪರ ಸಮಾಗಮಹೊಂದುವುದಿಲ್ಲ. ಸರ್ವಂ ಖಲ್ವಿದಂ ಬ್ರಹ್ಮ ಎಂಬ ಶ್ರುತಿವಚನದಂತೆ ಇಂದ್ರಿಯಯುಕ್ತವಾದ ಶರೀರವೂ ಬ್ರಹ್ಮವೇ ಆಗಿಬಿಡು ತ್ತದೆ. ಭೋಜ್ಯ-ಭೋಕ್ತೃತ್ವಗಳ ವ್ಯತ್ಯಾಸವೇ ಇರುವುದಿಲ್ಲ. ಯದ್ಯಪಿ ಪಂಚಭೂತಾತ್ಮಕ ಶರೀರವೇ ಆಗಿದ್ದರೂ ಐದು ಗುಣಗಳಿಂದ ಈ ಶರೀರವು ಕೂಡಿದ್ದರೂ ಸಮಾಧಿಸ್ಥಿತಿಯಲ್ಲಿ ಎಲ್ಲವೂ ಬ್ರಹ್ಮಮಯವಾಗಿಬಿಡುತ್ತವೆ. ಪಂಚಭೂತಗಳೂ ಸಹ ತಮ್ಮ ಭೋಜ್ಯತ್ವವನ್ನು ಕಳೆದುಕೊಳ್ಳುತ್ತವೆ.)

**ಆನುಪೂರ್ವ್ಯಾ ವಿನಶ್ಯನ್ತಿ ಜಾಯನ್ತೇ ಚಾನುಪೂರ್ವಶಃ ।**
**ಸರ್ವಾಣ್ಯಪರಿಮೇಯಾಣಿ ತದೇಷಾಂ ರೂಪಮೈಶ್ವರಮ್ ॥೧೦॥**

ಈ ಪಂಚಭೂತಗಳೂ ಸಹ ಪೃಥಿವಿಯೇ ಮೊದಲಾದ ಆನುಪೂರ್ವಿಯಿಂದ ವಿನಾಶಹೊಂದುತ್ತವೆ. ಪುನಃ ಆಕಾಶವೇ ಮೊದಲಾದ ಆನುಪೂರ್ವಿಯಿಂದ ಪ್ರಾದುರ್ಭೂತವಾಗುತ್ತವೆ. ಈ ಪಂಚಭೂತಗಳ ಶಕ್ತಿ-ಸ್ವರೂಪಗಳು ಅಪರಿಮೇಯವಾದುವುಗಳು. ಇವುಗಳ ರೂಪವು ಪರಮಾತ್ಮನಿಗೇ ಸಂಬಂಧಿಸಿರುತ್ತದೆ.

**ತತ್ರ ತತ್ರ ಹಿ ದೃಶ್ಯನ್ತೇ ಧಾತವಃ ಪಾಞ್ಚಭೌತಿಕಾಃ ।**
**ತೇಷಾಂ ಮನುಷ್ಯಾಸ್ತರ್ಕೇಣ ಪ್ರಮಾಣಾನಿ ಪ್ರಚಕ್ಷತೇ ॥೧೧॥**

ಭಿನ್ನ-ಭಿನ್ನ ಲೋಕಗಳಲ್ಲಿ ಪಾಂಚಭೌತಿಕಧಾತುಗಳು ಕಂಡುಬರುತ್ತವೆ. ಅವುಗಳ ಪ್ರಮಾಣವೆಷ್ಟೆಂಬುದನ್ನು ಮನುಷ್ಯರು ಕೇವಲ ತರ್ಕದಿಂದ (ಊಹೆಯಿಂದ) ಹೇಳುತ್ತಾರೆ. (ಬ್ರಹ್ಮಾಂಡದ ಅನೇಕ ಕಡೆಗಳಲ್ಲಿ ಪೃಥಿವಿಯೇ ಮೊದಲಾದ ಪಂಚಭೂತಗಳಿವೆಯೆಂದು ಈ ಶ್ಲೋಕದ ಮೊದಲನೆಯ ಪಾದದಲ್ಲಿ ಹೇಳಿದೆ. ಇದನ್ನವರು ಹೇಗೆ ಕಂಡುಹಿಡಿದರೆಂಬುದನ್ನು ವಿವರಿಸುತ್ತಾ ವ್ಯಾಖ್ಯಾನಕಾರರು ಹೀಗೆ ಹೇಳಿದ್ದಾರೆ :

**ಸಿದ್ಧಾ ಅಪಿ ಯತ್ರ ಬ್ರಹ್ಮಾಣ್ಡಂ ಭಿತ್ವಾ ಗಚ್ಛನ್ತಿ**

**ತತ್ರಾಪಿ ವಾಸನಾಮಯಧಾತವೋ ವ್ಯಕ್ತಯಃ**
**ಪಾಞ್ಚಭೌತಿಕಾ ದೃಶ್ಯನ್ತೇ ಅತಃ ಅಪರಿಮೇಯಾ ಏವ ತೇ ॥**

ಸಿದ್ಧಪುರುಷರು ಬ್ರಹ್ಮಾಂಡವನ್ನು ಭೇದಿಸಿಕೊಂಡು ಎಲ್ಲಿಗೆ ಹೋಗುತ್ತಾರೆಯೋ ಅಲ್ಲಿಯೂ ಸಹ ಅವರಿಗೆ ಪಂಚಭೂತಾತ್ಮರಾದ ವ್ಯಕ್ತಿಗಳು ಮತ್ತು ವಾಸನಾಮಯಧಾತುಗಳು ಕಂಡುಬಂದಿವೆ. ಅದರಿಂದಲೇ ಅವರು ಪಂಚಭೂತಗಳನ್ನು ಅಪರಿಮೇಯಗಳೆಂದು ಸಿದ್ಧಾಂತಮಾಡಿ ಹೇಳಿದ್ದಾರೆ. ಸಾಧಾರಣಮನುಷ್ಯರು ಕೇವಲ ಗಣನೆಯಿಂದ ಮತ್ತು ಊಹೆಯಿಂದ ಸೂರ್ಯ-ಚಂದ್ರರ ಗತಿ ಮತ್ತು ನಕ್ಷತ್ರಗಳ ಗತಿ–ಇವುಗಳ ಆಧಾರದ ಮೇಲೆ ಪಂಚಭೂತಗಳ ಪರಿಮಾಣವನ್ನು ಅಳೆಯುತ್ತಾರೆ. ಆದರೆ ಈ ಪಂಚಭೂತಗಳ ಪರಿಮಿತಿಯು ತರ್ಕಕ್ಕೆ ಅಥವಾ ಇತರ ಗಣನೆಗೆ ಸಿಕ್ಕುವುದಿಲ್ಲ.)

**ಅಚಿನ್ತ್ಯಾಃ ಖಲು ಯೇ ಭಾವಾ ನ ತಾಂಸ್ತರ್ಕೇಣ ಸಾಧಯೇತ್ ।**
**ಪ್ರಕೃತಿಭ್ಯಃ ಪರಂ ಯತ್ತು ತದಚಿನ್ತ್ಯಸ್ಯ ಲಕ್ಷಣಮ್ ॥೧೨॥**

ಯಾವ ಭಾವಗಳು ಅಚಿಂತ್ಯವಾಗಿವೆಯೋ ಅವುಗಳನ್ನು ತರ್ಕದಿಂದ ಸಿದ್ಧಾಂತಮಾಡಲು ಹೋಗಬಾರದು. ಪ್ರಕೃತಿಗಳಿಗಿಂತ (ಪಂಚಭೂತಗಳಿಗಿಂತ) ಪರವಾದುದು, ಭಿನ್ನವಾದುದು ಯಾವುದಿರುವುದೋ ಅದು ಅಚಿನ್ತ್ಯದ ಲಕ್ಷಣ. (ಭಾವಾಃ ಎಂಬುದಕ್ಕೆ ವ್ಯಾಖ್ಯಾನಕಾರರು **ಜಗಜ್ಜನ್ಮೋ-ಪಾದಾನನಿಮಿತ್ತಪರಿಮಾಣಧರ್ಮಾಧರ್ಮಾದಯಃ** ಜಗತ್ತು, ಜನ್ಮ, ಮೂಲಕಾರಣ, ನಿಮಿತ್ತ, ಪರಿಮಾಣ, ಧರ್ಮ ಮತ್ತು ಅಧರ್ಮಗಳು ಎಂದು ಅರ್ಥಮಾಡಿರುತ್ತಾರೆ. ಇವುಗಳ ಸ್ವರೂಪವನ್ನು ತರ್ಕದಿಂದ ತಿಳಿಯಲು ಸಾಧ್ಯವಾಗುವುದಿಲ್ಲ.)

**ಸುದರ್ಶನಂ ಪ್ರವಕ್ಷ್ಯಾಮಿ ದ್ವೀಪಂ ತು ಕುರುನನ್ದನ ।**
**ಪರಿಮಣ್ಡಲೋ ಮಹಾರಾಜ ದ್ವೀಪೋಽಸೌ ಚಕ್ರಸಂಸ್ಥಿತಃ ॥೧೩॥**

ಮಹಾರಾಜ! ಇನ್ನು ಮುಂದೆ ನಾನು ಸುದರ್ಶನದ್ವೀಪದ ವಿಷಯವಾಗಿ ಹೇಳುತ್ತೇನೆ. ಆ ದ್ವೀಪವು ಚಕ್ರದಂತೆಯೇ ಇದ್ದು ಗೋಳಾಕಾರ ವಾಗಿದೆ. **(ಸುದರ್ಶನೋ ನಾಮ ಜಮ್ಬೂವೃಕ್ಷವಿಶೇಷಃ ತನ್ನಾಮಾಂಕಿ- ತೋಽಯಂ ದ್ವೀಪಃ** ಜಂಬೂವೃಕ್ಷವಿಶೇಷಕ್ಕೆ (ಒಂದು ಜಾತಿಯ ನೇರಳೇ

ಮರಕ್ಕೆ) 'ಸುದರ್ಶನ' ಎಂದು ಹೆಸರು. ಆ ಹೆಸರಿನ ದ್ವೀಪ ಎಂದು ವ್ಯಾಖ್ಯಾನಕಾರರು ಅರ್ಥಮಾಡಿರುತ್ತಾರೆ.)

ಆ ಸುದರ್ಶನದ್ವೀಪವು ನಾನಾನದಿಗಳ ನೀರಿನಿಂದ ಆಚ್ಛಾದಿತವಾಗಿದೆ. (ಅಲ್ಲಿ ಅನೇಕನದಿಗಳು ಹರಿಯುತ್ತವೆ.) ಆ ದ್ವೀಪವು ಮೇಘಸದೃಶವಾದ ಪರ್ವತಗಳಿಂದ ಸುಶೋಭಿತವಾಗಿದೆ. ನಾನಾವಿಧವಾದ ಆಕಾರಗಳುಳ್ಳ ಪಟ್ಟಣಗಳಿಂದ ಸುಶೋಭಿತವಾಗಿದೆ. ರಮ್ಯವಾದ ಪ್ರದೇಶಗಳಿಂದಲೂ ಪುಷ್ಪ-ಫಲಗಳಿಂದ ಕೂಡಿದ ವೃಕ್ಷಗಳಿಂದಲೂ ಸುಶೋಭಿತವಾಗಿದೆ. ಆ ದ್ವೀಪವು ಧನ-ಧಾನ್ಯಗಳಿಂದ ಸಮೃದ್ಧವಾಗಿದೆ. ಆ ದ್ವೀಪವು ಸುತ್ತಲೂ ಲವಣಸಮುದ್ರದಿಂದ ಆವೃತವಾಗಿದೆ. (ಆ ಸುದರ್ಶನದ್ವೀಪದ ಸುತ್ತಲೂ ಲವಣಸಮುದ್ರವಿದೆ.)

**ಯಥಾ ಹಿ ಪುರುಷಃ ಪಶ್ಯೇದಾದರ್ಶೇ ಮುಖಮಾತ್ಮನಃ ।**
**ಏವಂ ಸುದರ್ಶನದ್ವೀಪೋ ದೃಶ್ಯತೇ ಚನ್ದ್ರಮಣ್ಡಲೇ ॥೧೬॥**

ಯಾವ ರೀತಿಯಲ್ಲಿ ಪುರುಷನು ತನ್ನ ಮುಖವನ್ನು ಕನ್ನಡಿಯಲ್ಲಿ ನೋಡಿಕೊಳ್ಳುತ್ತಾನೆಯೋ (ಪುರುಷನ ಸಾಕ್ಷಾತ್ ಪ್ರತಿಬಿಂಬವೇ ಕನ್ನಡಿಯಲ್ಲಿ ಕಾಣುತ್ತದೆಯೋ) ಅದೇ ರೀತಿಯಲ್ಲಿ ಸುದರ್ಶನದ್ವೀಪವು ಚಂದ್ರಮಂಡಲ ದಲ್ಲಿ ಯಥಾವತ್ತಾಗಿ ಕಾಣುತ್ತದೆ. ಆ ಚಂದ್ರಮಂಡಲದ ಎರಡಂಶದಲ್ಲಿ ಅಶ್ವತ್ಥವೃಕ್ಷವಿದೆ. ಎರಡಂಶದಲ್ಲಿ ದೊಡ್ಡದಾದ ಮೊಲವಿದೆ. ಆ ಚಂದ್ರಮಂಡ ಲದ ಸುತ್ತಲೂ ಎಲ್ಲ ಓಷಧಿಲತೆಗಳ ಸಮುದಾಯವು ವ್ಯಾಪ್ತವಾಗಿದೆ. ಚಂದ್ರ ಮಂಡಲದಲ್ಲಿರುವ ಉಳಿದಂಶಗಳಲ್ಲಿ ನೀರಿದೆಯೆಂದು ತಿಳಿಯತಕ್ಕದ್ದು. ಇನ್ನೂ ಉಳಿದಿರುವ ಶೇಷಭಾಗವನ್ನು ಸಂಕ್ಷಿಪ್ತಭೂಖಂಡವೆಂದು ಹೇಳುತ್ತಾರೆ. ಆ ಖಂಡದ ವಿಷಯವಾಗಿ ಸಂಕ್ಷೇಪವಾಗಿ ಹೇಳುತ್ತೇನೆ, ಕೇಳು."

೫ನೆಯ ಅಧ್ಯಾಯವು ಮುಗಿಯಿತು.

## ಸುದರ್ಶನದ್ವೀಪದ ವರ್ಷ, ಪರ್ವತ, ಮೇರುಗಿರಿ, ಗಂಗಾನದೀ ಮತ್ತು ಶಶಾಕೃತಿಗಳ ವರ್ಣನೆ

ಧೃತರಾಷ್ಟ್ರನು ಹೇಳುತ್ತಾನೆ :

"ಬುದ್ಧಿಮನ್ ಸಂಜಯ! ನೀನು ವಿಧಿವತ್ತಾಗಿ ಸುದರ್ಶನದ್ವೀಪದ ವಿಷಯವನ್ನು ಸಂಕ್ಷೇಪವಾಗಿ ತಿಳಿಸಿರುವೆ. ಆದರೆ ನೀನು ಎಲ್ಲದರ ವಿಷಯ ಗಳನ್ನೂ ಆಮೂಲಾಗ್ರವಾಗಿ ತಿಳಿದವನಾಗಿರುವೆ. ಆದುದರಿಂದ ನೀನು ಸುದರ್ಶನದ್ವೀಪದ ವಿಷಯವನ್ನು ಸವಿಸ್ತಾರವಾಗಿ ಹೇಳು. ಚಂದ್ರಮಂಡಲ ದಲ್ಲಿ ಭೂಮಿಯಿರುವ ಸ್ಥಳವೆಲ್ಲಿ ಕಾಣುತ್ತದೆಯೋ ಅದರ ಪ್ರಮಾಣ ವೆಷ್ಟೆಂಬುದನ್ನು ಹೇಳು. ಅನಂತರ ಅರಳೀಮರದ ವರ್ಣನೆ ಮಾಡುವೆ ಯಂತೆ."

ಜನಮೇಜಯ! ರಾಜನು ಹೀಗೆಂದು ಪ್ರಶ್ನಿಸಿದನಂತರ ಸಂಜಯನು ಉತ್ತರಿಸಿದನು :

"ಮಹಾರಾಜ! ಪೂರ್ವದಿಕ್ಕಿನಲ್ಲಿ ಉದ್ದವಾಗಿ ಹಬ್ಬಿ ಹೋಗಿರುವ ಈ ಆರು ವರ್ಷಪರ್ವತಗಳು ಎರಡು ಕಡೆಗಳಲ್ಲಿಯೂ ಪೂರ್ವ-ಪಶ್ಚಿಮ ಸಮುದ್ರಗಳಲ್ಲಿ ಆಳವಾಗಿ ಒಳಹೊಕ್ಕಿವೆ.

ಹಿಮವಂತ, ಹೇಮಕೂಟ, ಪರ್ವತಶ್ರೇಷ್ಠವೆನಿಸಿರುವ ನಿಷಧಪರ್ವತ, ವೈಡೂರ್ಯಮಣಿಮಯವಾದ ನೀಲಪರ್ವತ, ಚಂದ್ರನಂತೆಯೇ ಇರುವ ಉಜ್ಜ್ವಲಕಾಂತಿಯುಕ್ತವಾದ ಶ್ವೇತಪರ್ವತ, ಸಕಲವಿಧವಾದ ಗೈರಿಕಾದಿ ಧಾತುಗಳಿಂದ ಚಿತ್ರ-ವಿಚಿತ್ರವಾಗಿ ಕಾಣುವ ಶೃಂಗವಂತವೆಂಬ ಪರ್ವತ– ಇವೇ ಆರು ವರ್ಷಪರ್ವತಗಳು. ಈ ಪರ್ವತಗಳೆಲ್ಲವೂ ಸಿದ್ಧ-ಚಾರಣರಿಂದ ಸಂಸೇವ್ಯಮಾನವಾಗಿವೆ.

**ಏಷಾಮನ್ತರವಿಷ್ಕಮ್ಭೋ ಯೋಜನಾನಿ ಸಹಸ್ರಶಃ ।**
**ತತ್ರ ಪುಣ್ಯಾ ಜನಪದಾಸ್ತಾನಿ ವರ್ಷಾಣಿ ಭಾರತ ॥೬॥**

ದಕ್ಷಿಣದಿಕ್ಕಿನಿಂದ ಪ್ರಾರಂಭಿಸಿ ಉತ್ತರದವರೆಗೂ ಪೂರ್ವ-ಪಶ್ಚಿಮವಾಗಿ ರುವ ಆ ಪರ್ವತಗಳ ಸಾಲು ಸಹಸ್ರಯೋಜನಗಳಷ್ಟು ಉದ್ದವಾಗಿದೆ. ಅವು

ಗಳ ಮಧ್ಯದಲ್ಲಿ ಅನೇಕ ಪುಣ್ಯಭೂಮಿಗಳಿವೆ. ಅವುಗಳೆಲ್ಲವೂ ಪ್ರತ್ಯೇಕ ಪ್ರತ್ಯೇಕವಾದ ಖಂಡಗಳೇ ಆಗಿವೆ. (ವರ್ಷಾಣಿ ಎಂದರೆ ಖಂಡಗಳು. ವರ್ಷಶಬ್ದವು ಖಂಡಾರ್ಥದಲ್ಲಿಯೂ ಇದೆ. ಮೇಲೆ ಹೇಳಿದ ಆರು ಪರ್ವತ ಗಳ ನಡುವೆ ಐದು ಖಂಡಗಳೂ, ಪೂರ್ವ-ಪಶ್ಚಿಮಸಮುದ್ರಾಂತವಾಗಿ ಎರಡು ಖಂಡಗಳೂ ಒಟ್ಟು ಏಳು ಖಂಡಗಳೆಂದು ವ್ಯಾಖ್ಯಾನಕಾರರು ಅರ್ಥ ಮಾಡಿರುತ್ತಾರೆ.

**ಸಹಸ್ರಶಃ** ಎಂದಿರುವುದನ್ನು ಸಾವಿರ ಎಂಬುದಕ್ಕೆ ಬದಲಾಗಿ ನೂರಾರೆಂದು ಅರ್ಥಮಾಡಬೇಕೆಂಬುದು ವ್ಯಾಖ್ಯಾನಕಾರರ ಅಭಿಪ್ರಾಯ ವಾಗಿದೆ. ಸೇತುವಿನಿಂದ ಹಿಮಾಲಯಕ್ಕೆ ಮುನ್ನೂರಾರು ಯೋಜನ ಅಥವಾ 3,672 ಕಿಲೋ ಮೀಟರ್ ಎಂದು ಪ್ರಸಿದ್ಧವಾಗಿದೆ. ಆದುದರಿಂದ ಸಾವಿರ ಯೋಜನಗಳಿರುವ ಸಾಧ್ಯತೆಯೇ ಇಲ್ಲವೆಂದು ಅವರ ಅಭಿಪ್ರಾಯವಾಗಿದೆ. ಆದರೆ ಇಲ್ಲಿ ಪೂರ್ವ-ಪಶ್ಚಿಮವಾಗಿ ಹಬ್ಬಿರುವ ಪರ್ವತಗಳ ಉದ್ದವನ್ನು ಹೇಳಿದ್ದಾರೆಯೇ ಹೊರತು ದಕ್ಷಿಣೋತ್ತರಗಳ ವಿಷಯವನ್ನು ಹೇಳಿಲ್ಲ. ಪೂರ್ವ ಮತ್ತು ಪಶ್ಚಿಮಸಮುದ್ರಗಳ ನಡುವೆ ಸಾವಿರ ಯೋಜನ ಗಳಷ್ಟಿರಬಹುದು. ಮೇಲಾಗಿ ಭಾರತದಲ್ಲಿ ಹೇಳುತ್ತಿರುವ ಖಂಡಗಳ ವರ್ಣ ನೆಯು ಸೇತು ಮತ್ತು ಹಿಮಾಚಲದ ಮಧ್ಯಭಾಗಕ್ಕೆ ಮಾತ್ರವೇ ಸೀಮಿತ ವಾಗಿಲ್ಲ. ಆದುದರಿಂದ **ಯೋಜನಾನಿ ಸಹಸ್ರಶಃ** ಎಂಬುದು ಯಥಾರ್ಥ ವಾಗಿಯೇ ಇರುವುದೆಂದು ಹೇಳಬಹುದಾಗಿದೆ.)

**ಹೇಮಕೂಟಾತ್ಪರಂ ಚೈವ ಹರಿವರ್ಷಂ ಪ್ರಚಕ್ಷತೇ ।**
**ದಕ್ಷಿಣೇನ ತು ನೀಲಸ್ಯ ನಿಷಧಸ್ಯೋತ್ತರೇಣ ತು ॥೮॥**

**ಪ್ರಾಗಾಯತೋ ಮಹಾಭಾಗ ಮಾಲ್ಯವಾನ್ನಾಮ ಪರ್ವತಃ ।**
**ತತಃ ಪರಂ ಮಾಲ್ಯವತಃ ಪರ್ವತೋ ಗನ್ಧಮಾದನಃ ॥೯॥**

ಹೇಮಕೂಟಪರ್ವತಕ್ಕೆ ಉತ್ತರದಲ್ಲಿರುವ ಖಂಡವನ್ನು ಹರಿವರ್ಷ ವೆಂದು ಹೇಳುತ್ತಾರೆ. ನೀಲಪರ್ವತಕ್ಕೆ ದಕ್ಷಿಣಭಾಗದಲ್ಲಿ ಮತ್ತು ನಿಷಧಪರ್ವ ತಕ್ಕೆ ಉತ್ತರಭಾಗದಲ್ಲಿ ಪೂರ್ವಪಶ್ಚಿಮವಾಗಿ ಮಾಲ್ಯವಾನ್ ಎಂಬ ಪರ್ವತ ಶ್ರೇಣಿಯಿದೆ. ಮಾಲ್ಯವತ್ಪರ್ವತದನಂತರ ಗಂಧಮಾದನಪರ್ವತವಿದೆ.

**ಪರಿಮಣ್ಡಲಸ್ತಯೋರ್ಮಧ್ಯೇ ಮೇರುಃ ಕನಕಪರ್ವತಃ ।**
**ಆದಿತ್ಯತರುಣಾಭಾಸೋ ವಿಧೂಮ ಇವ ಪಾವಕಃ ॥೧೦॥**

ಮಾಲ್ಯವತ್ಪರ್ವತಕ್ಕೂ ಮತ್ತು ಗಂಧಮಾದನಪರ್ವತಕ್ಕೂ ಮಧ್ಯ ಭಾಗದಲ್ಲಿ ಮಂಡಲಾಕಾರವಾಗಿರುವ ಸುವರ್ಣಮಯವಾದ ಮೇರುಪರ್ವತ ವಿದೆ. ಆ ಪರ್ವತವು ತರುಣಸೂರ್ಯನ ಕಾಂತಿಯಿಂದ ಪ್ರಕಾಶಿಸುತ್ತಿದ್ದು ಧೂಮರಹಿತನಾದ ಯಜ್ಞೇಶ್ವರನಂತೆಯೇ ಬೆಳಗುತ್ತಿದೆ. ಆ ಪರ್ವತವು ಭೂಮಿಯಿಂದ ಎಂಬತ್ತುನಾಲ್ಕು ಸಾವಿರ ಯೋಜನಗಳಷ್ಟು ಎತ್ತರವಾಗಿದೆ ಮತ್ತು ಇದು ಎಂಬತ್ತುನಾಲ್ಕು ಸಾವಿರ ಯೋಜನಗಳಷ್ಟು ಭೂಮಿಯ ಕೆಳಭಾಗಕ್ಕೂ ಹೋಗಿದೆ.

**ಊರ್ಧ್ವಮಧಶ್ಚ ತಿರ್ಯಕ್ಚ ಲೋಕಾನಾವೃತ್ಯ ತಿಷ್ಠತಿ ।**
**ತಸ್ಯ ಪಾರ್ಶ್ವೇಷ್ವಮೀ ದ್ವೀಪಾಶ್ಚತ್ವಾರಃ ಸಂಸ್ಥಿತಾ ವಿಭೋ ॥೧೨॥**

ಮೇರುಪರ್ವತವು ಮೇಲ್ಭಾಗದಲ್ಲಿಯೂ, ಕೆಳಭಾಗದಲ್ಲಿಯೂ, ಅಡ್ಡ ವಾಗಿಯೂ ಅನೇಕಲೋಕಗಳನ್ನಾವರಿಸಿದೆ. ಮೇರುಪರ್ವತದ ಪಾರ್ಶ್ವದಲ್ಲಿ ನಾಲ್ಕು ದ್ವೀಪಗಳು ಸುಪ್ರತಿಷ್ಠಿತವಾಗಿವೆ, ಮಹಾರಾಜ!

**ಭದ್ರಾಶ್ವಃ ಕೇತುಮಾಲಶ್ಚ ಜಮ್ಬೂದ್ವೀಪಶ್ಚ ಭಾರತ ।**
**ಉತ್ತರಾಶ್ಚೈವ ಕುರವಃ ಕೃತಪುಣ್ಯಪ್ರತಿಶ್ರಯಾಃ ॥೧೩॥**

ಭಾರತ! ಆ ನಾಲ್ಕು ದ್ವೀಪಗಳ ಹೆಸರು ಭದ್ರಾಶ್ವ, ಕೇತುಮಾಲ, ಜಂಬೂದ್ವೀಪ ಮತ್ತು ಉತ್ತರಕುರುದ್ವೀಪ. ಅವುಗಳಲ್ಲಿ ಉತ್ತರಕುರುದ್ವೀಪವು ಪುಣ್ಯಪುರುಷರಿಗೆ ನಿವಾಸಸ್ಥಾನವಾಗಿದೆ.

**ವಿಹಗಃ ಸುಮುಖೋ ಯಸ್ತು ಸುಪರ್ಣಸ್ಯಾತ್ಮಜಃ ಕಿಲ ।**
**ಸ ವೈ ವಿಚಿನ್ತಯಾಮಾಸ ಸೌವರ್ಣಾನ್ವೀಕ್ಷ್ಯ ವಾಯಸಾನ್ ॥೧೪॥**

**ಮೇರುರುತ್ತಮಮಧ್ಯಾನಾಮಧಮಾನಾಂ ಚ ಪಕ್ಷಿಣಾಮ್ ।**
**ಅವಿಶೇಷಕರೋ ಯಸ್ಮಾತ್ತಸ್ಮಾದೇನಂ ತ್ಯಜಾಮ್ಯಹಮ್ ॥೧೫॥**

ಗರುಡನ ಮಗ ಸುಮುಖನೆಂಬುವನನ್ನು ಕೇಳಿರುವೆಯಲ್ಲವೇ? ಅವನು ಮೇರುಪರ್ವತದಲ್ಲಿ ವಾಸಮಾಡುತ್ತಿದ್ದನು. ಮೇರುಪರ್ವತವು

ಸುವರ್ಣಮಯವಾದುದು. ಅಲ್ಲಿರುವ ಪಕ್ಷಿಗಳ ರೆಕ್ಕೆಗಳೂ ಸಹ ಸುವರ್ಣ ಮಯವಾಗಿಯೇ ಇರುತ್ತವೆ. ಈ ಕಾರಣದಿಂದಾಗಿ ಅಲ್ಲಿದ್ದ ಕಾಗೆಗಳಿಗೂ ಸುವರ್ಣಮಯವಾದ ರೆಕ್ಕೆಗಳೇ ಇದ್ದುವು. ಗರುಡ ಮತ್ತು ಗರುಡನ ಮಕ್ಕಳು ಸ್ವಭಾವತಃ ಹುಟ್ಟಿದಾಗಿನಿಂದ ಸುವರ್ಣಪಕ್ಷರಾಗಿಯೇ ಇದ್ದರು. ಮೇರುಪರ್ವತದ ಸಂಪರ್ಕದಿಂದಾಗಿ ಗರುಡನ ಮಗನಿಗೆ ಸುವರ್ಣಪಕ್ಷವು ಲಭಿಸಲಿಲ್ಲ. ಗರುಡನ ಮಗನಾದ ಸುಮುಖನು ಸುವರ್ಣದ ರೆಕ್ಕೆಗಳಿದ್ದ ಕಾಗೆಗಳನ್ನು ನೋಡಿ ತನ್ನಲ್ಲಿಯೇ ಹೀಗೆಂದು ಯೋಚಿಸಿದನು : "ಈ ಮೇರುಪರ್ವತದಲ್ಲಿರುವ ಪಕ್ಷಿಗಳಲ್ಲಿ ಉತ್ತಮ-ಮಧ್ಯಮಗಳೆಂಬ ತಾರತಮ್ಯವೇ ಇಲ್ಲ. ಎಲ್ಲ ಪಕ್ಷಿಗಳಿಗೂ ಸುವರ್ಣಮಯವಾದ ಪಕ್ಷಗಳೇ ಇವೆ. ಯದ್ಯಪಿ ನಾನು ಜನ್ಮತಃ ಸುಪರ್ಣನೇ ಆಗಿದ್ದರೂ ಈ ಮೇರುಪರ್ವತದಲ್ಲಿ ನನಗೆ ವಿಶೇಷವಾದ ಪುರಸ್ಕಾರವೇನೂ ಸಿಕ್ಕುವುದಿಲ್ಲ. ಈ ಕಾರಣದಿಂದಲೇ ನಾನು ಈ ಮೇರುಪರ್ವತವನ್ನೇ ಪರಿತ್ಯಜಿಸಿ ಹೊರಟುಹೋಗುತ್ತೇನೆ. (ಉತ್ತರಕುರುಗಳ ದ್ವೀಪಕ್ಕೆ ಹೊರಟುಹೋಗುತ್ತೇನೆ.)

**ತಮಾದಿತ್ಯೋಽನುಪರ್ಯೇತಿ ಸತತಂ ಜ್ಯೋತಿಷಾಂ ವರಃ ।**
**ಚನ್ದ್ರಮಾಶ್ಚ ಸನಕ್ಷತ್ರೋ ವಾಯುಶ್ಚೈವ ಪ್ರದಕ್ಷಿಣಃ ॥೧೬॥**

ಜ್ಯೋತಿರ್ಮಯಗ್ರಹಗಳಲ್ಲಿ ಸರ್ವಶ್ರೇಷ್ಠನೆನಿಸಿರುವ ಸೂರ್ಯನು ಮೇರುಪರ್ವತವನ್ನನುಸರಿಸಿ ಸುತ್ತುತ್ತಾನೆ. ನಕ್ಷತ್ರಸಹಿತನಾದ ಚಂದ್ರನೂ ಮತ್ತು ವಾಯುವೂ ಪ್ರದಕ್ಷಿಣಾಕಾರವಾಗಿ ಮೇರುಪರ್ವತವನ್ನು ಪರಿಕ್ರಮಣ ಮಾಡುತ್ತಿರುತ್ತಾರೆ.

ಮಹಾರಾಜ! ಆ ಮೇರುಪರ್ವತವು ದಿವ್ಯವಾದ ಪುಷ್ಪಗಳಿಂದಲೂ ಮತ್ತು ಫಲಗಳಿಂದಲೂ ಕೂಡಿರುವ ವೃಕ್ಷಗಳಿಂದ ಪರಿವೃತವಾಗಿದೆ. ಆ ಪರ್ವತದ ಸುತ್ತಲೂ ಜಾಂಬೂನದದಿಂದ (ಸುವರ್ಣದಿಂದ) ವಿಭೂಷಿತವಾದ ದಿವ್ಯಸೌಧಗಳಿವೆ. ಆ ಮೇರುಪರ್ವತದ ಮೇಲೆ ಗಂಧರ್ವರು, ಅಸುರರು, ರಾಕ್ಷಸರು ಮತ್ತು ದೇವತೆಗಳು ಅಪ್ಸರೆಯರೊಡನೆ ಸೇರಿಕೊಂಡು ಕ್ರೀಡಿಸುತ್ತಿರುತ್ತಾರೆ. ಎಲ್ಲ ಕಾಲಗಳಲ್ಲಿಯೂ ಆ ಪರ್ವತದಲ್ಲಿಯೇ ಬ್ರಹ್ಮ, ರುದ್ರ ಮತ್ತು ಸುರೇಶ್ವರನಾದ ಇಂದ್ರ ಇವರೆಲ್ಲರೂ ಸೇರಿ ಬಹುದಕ್ಷಿಣಾಕವಾದ,

ಅನೇಕವಿಧವಾದ ಯಾಗಗಳನ್ನು ಮಾಡುತ್ತಿರುತ್ತಾರೆ. ತುಂಬುರು, ನಾರದ, ವಿಶ್ವಾವಸು, ಹಾಹಾ, ಹೂಹೂ ಮುಂತಾದವರು ಆ ಮೇರುಪರ್ವತಕ್ಕೆ ಹೋಗಿ ಅಲ್ಲಿರುವ ಅಮರಶ್ರೇಷ್ಠರನ್ನು ನಾನಾವಿಧವಾದ ಸ್ತೋತ್ರಗಳಿಂದ ಸ್ತುತಿಮಾಡುತ್ತಾರೆ. ಮಹಾರಾಜ! ನಿನಗೆ ಮಂಗಳವಾಗಲಿ. ಮಹಾತ್ಮರಾದ ಸಪ್ತರ್ಷಿಗಳೂ, ಕಶ್ಯಪಪ್ರಜಾಪತಿಯೂ ಪ್ರತಿಪರ್ವಗಳಲ್ಲಿಯೂ ಮೇರು ಪರ್ವತಕ್ಕೆ ಹೋಗುತ್ತಾರೆ.

**ತಸ್ಯೈವಮೂರ್ಧನ್ಯುಶನಾಃ ಕಾವ್ಯೋ ದೈತ್ಯೈರ್ಮಹೀಪತೇ ।**
**ಇಮಾನಿ ತಸ್ಯ ರತ್ನಾನಿ ತಸ್ಯೇಮೇರತ್ನಪರ್ವತಾಃ ॥೨೨॥**

ಆ ಮೇರುಪರ್ವತದ ಶಿಖರದಲ್ಲಿ ದೈತ್ಯರೊಡನೆ ದೈತ್ಯಗುರುಗಳಾದ ಶುಕ್ರಾಚಾರ್ಯರು ವಾಸಮಾಡುತ್ತಿದ್ದಾರೆ. ಆ ಎಲ್ಲ ರತ್ನಗಳೂ ಆ ಪರ್ವತ ಗಳೂ ಶುಕ್ರಾಚಾರ್ಯರದ್ದೇ ಆಗಿವೆ.

**ತಸ್ಮಾತ್ಕುಬೇರೋ ಭಗವಾಂಶ್ಚತುರ್ಥಂ ಭಾಗಮಶ್ನುತೇ ।**
**ತತಃ ಕಲಾಂಶಂ ವಿತ್ತಸ್ಯ ಮನುಷ್ಯೇಭ್ಯಃ ಪ್ರಯಚ್ಛತಿ ॥೨೩॥**

ಆ ರತ್ನರಾಶಿಯಲ್ಲಿ ಭಗವಾನ್ ಕುಬೇರನು ನಾಲ್ಕನೆಯ ಒಂದು ಭಾಗವನ್ನು ಉಪಭೋಗಿಸುತ್ತಾನೆ. (ಪಡೆದುಕೊಳ್ಳುತ್ತಾನೆ.) ಹೀಗೆ ಪಡೆದುಕೊಂಡ ರತ್ನರಾಶಿಯಲ್ಲಿ ಹದಿನಾರನೇ ಒಂದು ಭಾಗದಷ್ಟು ರತ್ನವನ್ನು ಅಥವಾ ಐಶ್ವರ್ಯವನ್ನು ಕುಬೇರನು ಮನುಷ್ಯರಿಗೆ ಕೊಡುತ್ತಾನೆ.*

ಆ ಮೇರುಪರ್ವತದ ಉತ್ತರಪಾರ್ಶ್ವದಲ್ಲಿ ಎಲ್ಲ ಋತುಗಳಲ್ಲಿಯೂ ಪುಷ್ಪಭರಿತವಾಗಿರುವ, ಕಲ್ಲುಗಳ ಸಮೂಹದಲ್ಲಿ (ಮಧ್ಯದಲ್ಲಿ) ಬೆಳೆದಿರುವ ರಮ್ಯವಾದ ಕರ್ಣಿಕಾರ (ಬೆಟ್ಟದಕಣಗಿಲೇ ಗಿಡ) ವನವಿದೆ. (ರಾಜವೃಕ್ಷ ಗಳೆಂದು ವ್ಯಾಖ್ಯಾನಕಾರರು ಹೇಳುತ್ತಾರೆ.)

**ತತ್ರ ಸಾಕ್ಷಾತ್ಪಶುಪತಿರ್ದಿವ್ಯೈರ್ಭೂತೈಃ ಸಮಾವೃತಃ ।**
**ಉಮಾಸಹಾಯೋ ಭಗವಾನ್ರಮತೇ ಭೂತಭಾವನಃ ॥೨೪॥**

---

* ಈ ಎರಡು ಶ್ಲೋಕಗಳು ಉದ್ಯೋಗಪರ್ವದ ೧೧ಳನೆಯ ಅಧ್ಯಾಯದಲ್ಲಿ (ಸಂ.೧೧ ಪುಟ ೫೬೭೬) ಸಮಸ್ಯಾಪೂರ್ಣವಾಗಿರುವ ೨ ಮತ್ತು ೩ನೆಯ ಶ್ಲೋಕಗಳ ಮೇಲೆ [ನಿತ್ಯಂ....ಧನದೇನ ಚ] ಸ್ವಲ್ಪಮಟ್ಟಿಗೆ ಬೆಳಕು ಚೆಲ್ಲುತ್ತವೆ.

**ಕರ್ಣಿಕಾರಮಯೀಂ ಮಾಲಾಂ ಬಿಭ್ರತ್ವಾಪಾದಾವಲಮ್ಬಿನೀಮ್ ।**
**ತ್ರಿಭಿರ್ನೇತ್ರೈಃ ಕೃತೋದ್ಯೋತೈಸ್ತ್ರಿಭಿಃ ಸೂರ್ಯೈರಿವೋದಿತೈಃ ॥೨೬॥**

ಆ ಕರ್ಣಿಕಾರವನದಲ್ಲಿ ಭೂತಭಾವನನಾದ ಭಗವಂತನಾದ ಸಾಕ್ಷಾತ್ ಪರಮಶಿವನು ದಿವ್ಯವಾದ ಭೂತಗಣಗಳಿಂದ ಸಮಾವೃತನಾಗಿ ಪಾದಗಳ ವರೆಗೂ ಲಂಬಿಸಿರುವ ಕರ್ಣಿಕಾರಪುಷ್ಪಮಾಲೆಯನ್ನು ಧರಿಸಿ ಉದಿಸಿರುವ ಮೂವರು ಸೂರ್ಯರಂತೆ ಹೊಳೆಯುವ ಮೂರು ಕಣ್ಣುಗಳಿಂದಲೂ ದಿವ್ಯ ಕಾಂತಿಯನ್ನು ಹೊರಸೂಸುತ್ತಾ ಉಮೆಯೊಡನೆ ವಿಹರಿಸುತ್ತಿರುತ್ತಾನೆ.

**ತಮುಗ್ರತಪಸಃ ಸಿದ್ಧಾಃ ಸುವ್ರತಾಃ ಸತ್ಯವಾದಿನಃ ।**
**ಪಶ್ಯನ್ತಿ ನ ಹಿ ದುರ್ವೃತ್ತೈಃ ಶಕ್ಯೋ ದ್ರಷ್ಟುಂ ಮಹೇಶ್ವರಃ ॥೨೭॥**

ಉಮಾಸಹಿತನಾದ ಪರಮೇಶ್ವರನನ್ನು ಉಗ್ರತಪಸ್ಕರಾದ ಸುವ್ರತರಾದ ಸತ್ಯವಾದಿಗಳಾದ ಸಿದ್ಧರು ಸಂದರ್ಶಿಸುತ್ತಾರೆ. ದುರ್ವೃತ್ತರಾದವರಿಗೆ ಮಹೇಶ್ವರನನ್ನು ಸಂದರ್ಶಿಸಲು ಸಾಧ್ಯವೇ ಇಲ್ಲ.

**ತಸ್ಯ ಶೈಲಸ್ಯ ಶಿಖರಾತ್ಕ್ಷೀರಧಾರಾ ನರೇಶ್ವರ ।**
**ವಿಶ್ವರೂಪಾಪರಿಮಿತಾ ಭೀಮನಿರ್ಘಾತನಿಃಸ್ವನಾ ॥೨೮॥**

**ಪುಣ್ಯಾ ಪುಣ್ಯತಮೈರ್ಜುಷ್ಟಾ ಗಙ್ಗಾ ಭಾಗೀರಥೀ ಶುಭಾ ।**
**ಪ್ಲವನ್ತೀವ ಪ್ರವೇಗೇನ ಹ್ರದೇ ಚನ್ದ್ರಮಸಃ ಶುಭೇ ॥೨೯॥**

ನರೇಶ್ವರ! ಆ ಮೇರುಪರ್ವತದ ಶಿಖರದಿಂದ ಹಾಲಿನಂತೆ ಧಾರೆಯುಳ್ಳ (ಹಾಲಿನ ಧಾರೆಯಂತಿರುವ), ವಿಷ್ಣುರೂಪಳಾದ, ಅಪರಿಮಿತಶಕ್ತಿ ಶಾಲಿನಿಯಾದ, ಭಯಂಕರವಾದ ಸಿಡಿಲಿಗೆ ಸಮಾನವಾದ ಶಬ್ದದಿಂದ ಕೂಡಿ ರುವ, ಪುಣ್ಯಸ್ವರೂಪಳಾದ, ಪುಣ್ಯಾತ್ಮರಿಂದ ಸಂಸೇವ್ಯಮಾನಳಾದ, ಶುಭದಾಯಕಳಾದ ಗಂಗಾಭಾಗೀರಥಿಯು ಬಹುವೇಗದಿಂದ ಪ್ರವಹಿಸುತ್ತಾ ಶುಭಪ್ರದವಾದ ಚಂದ್ರಕುಂಡದಲ್ಲಿ ಬೀಳುತ್ತಾಳೆ. (ವಿಶ್ವರೂಪಾ–ಎಂಬುದಕ್ಕೆ ವ್ಯಾಖ್ಯಾನಕಾರರು ವಿಷ್ಣುರೂಪಳು ಎಂದು ಅರ್ಥಮಾಡಿದ್ದಾರೆ.

**ಯೋಽಸೌ ಸರ್ವಗತೋ ವಿಷ್ಣುಃ ಚಿತ್ಸ್ವರೂಪೀ ನಿರಞ್ಜನಃ ।**
**ಸ ಏವ ದ್ರವರೂಪೇಣ ಗಙ್ಗಾಮ್ಭೋ ನಾತ್ರ ಸಂಶಯಃ ॥**

ಸರ್ವರಲ್ಲಿಯೂ ಇರತಕ್ಕ ಚಿತ್ಸ್ವರೂಪಿಯಾದ, ನಿರಂಜನನಾದ ವಿಷ್ಣುವೇ ದ್ರವರೂಪದಿಂದ ಗಂಗಾಜಲವಾಗಿದ್ದಾನೆ. ಇದರಲ್ಲಿ ಸಂಶಯವಿಲ್ಲ.)

**ತಯಾ ಹ್ಯುತ್ಪಾದಿತಃ ಪುಣ್ಯಃ ಸ ಹ್ರದಃ ಸಾಗರೋಪಮಃ ।**
**ತಾಂ ಧಾರಯಾಮಾಸ ತದಾ ದುರ್ಧರಾಂ ಪರ್ವತೈರಪಿ ।**
**ಶತಂ ವರ್ಷಸಹಸ್ರಾಣಾಂ ಶಿರಸೈವ ಪಿನಾಕಧೃಕ್ ॥೩೦॥**

ಸಾಕ್ಷಾತ್ ಗಂಗಾದೇವಿಯೇ ಈಗ ಸಾಗರೋಪಮವಾಗಿ ಕಾಣುತ್ತಿರುವ ಪುಣ್ಯತಮವಾದ ಚಂದ್ರಕುಂಡವನ್ನು ತನ್ನ ವೇಗಾಧಿಕ್ಯದಿಂದ ನಿರ್ಮಿಸಿದ್ದಾಳೆ. ಮೇರುಪರ್ವತದ ಮೇಲಿನಿಂದ ಭೋರ್ಗರೆಯುತ್ತಾ ಬರುತ್ತಿದ್ದ ಗಂಗಾದೇವಿಯ ಪ್ರವಾಹವೇಗವನ್ನು ತಡೆದುಕೊಳ್ಳಲು ಪರ್ವತಗಳಿಗೂ ಶಕ್ಯವಾಗಲಿಲ್ಲ. ಆ ಸಮಯದಲ್ಲಿ ಪಿನಾಕಪಾಣಿಯಾದ ಮಹೇಶ್ವರನು ಒಂದು ಲಕ್ಷವರ್ಷಗಳ ಪರ್ಯಂತವಾಗಿ ಗಂಗಾದೇವಿಯನ್ನು ತನ್ನ ಶಿರಸ್ಸಿನಲ್ಲಿ ಧಾರಣೆಮಾಡಿಕೊಂಡಿದ್ದನು.

**ಮೇರೋಸ್ತು ಪಶ್ಚಿಮೇ ಪಾರ್ಶ್ವೇ ಕೇತುಮಾಲೋ ಮಹೀಪತೇ ॥**

**ಜಮ್ಬೂಖಣ್ಡಸ್ತು ತತ್ರೈವ ಸುಮಹಾನ್ನನ್ದನೋಪಮಃ ।**
**ಆಯುರ್ದಶ ಸಹಸ್ರಾಣಿ ವರ್ಷಾಣಾಂ ತತ್ರ ಭಾರತ ॥೩೧॥**

ಮಹೀಪತಿಯೇ! ಮೇರುವಿನ ಪಶ್ಚಿಮಪಾರ್ಶ್ವದಲ್ಲಿ 'ಕೇತುಮಾಲ' ಎಂಬ ದ್ವೀಪವಿದೆ. ಜಂಬೂಖಂಡವೆಂಬ ದ್ವೀಪವೂ ಸಹ ಅಲ್ಲಿಯೇ ಇದೆ. ಆ ದ್ವೀಪವು ಅತ್ಯಂತ ವಿಶಾಲವಾಗಿದ್ದು ನಂದನವನದಂತೆ ಬಹುಮನೋಹರವಾಗಿದೆ. ಅಲ್ಲಿಯ ನಿವಾಸಿಗಳ ಆಯುಃಪ್ರಮಾಣವು ಹತ್ತುಸಾವಿರ ವರ್ಷಗಳು.

**ಸುವರ್ಣವರ್ಣಾಶ್ಚ ನರಾಃ ಸ್ತ್ರಿಯಶ್ಚಾಪ್ಸರಸೋಪಮಾಃ ।**
**ಅನಾಮಯಾ ವೀತಶೋಕಾ ನಿತ್ಯಂ ಮುದಿತಮಾನಸಾಃ ।**
**ಜಾಯನ್ತೇ ಮಾನವಾಸ್ತತ್ರ ನಿಷ್ಟಪ್ತಕನಕಪ್ರಭಾಃ ॥೩೩॥**

ಅಲ್ಲಿಯ ಜನರು ಹೊಂಬಣ್ಣದವರು. ಸ್ತ್ರೀಯರು ಅಪ್ಸರೆಯರಂತೆಯೇ ಕಡುಚೆಲುವೆಯರು. ಅವರೆಲ್ಲರೂ ರೋಗರಹಿತರಾದವರು ಮತ್ತು ದುಃಖವಿಲ್ಲದವರು. ಯಾವಾಗಲೂ ಪ್ರಮುದಿತವಾದ (ಪ್ರಸನ್ನವಾದ) ಮನಸ್ಸಿ

ನಿಂದಿರತಕ್ಕವರು. ಆ ಪ್ರದೇಶದಲ್ಲಿ ಹುಟ್ಟುವಾಗಲೇ ಮನುಷ್ಯರು ಪುಟಕ್ಕೆ ಹಾಕಿದ ಸುವರ್ಣದ ಕಾಂತಿಯನ್ನು ಹೊಂದಿರುತ್ತಾರೆ.

**ಗನ್ಧಮಾದನಶೃಙ್ಗೇಷು ಕುಬೇರಃ ಸಹ ರಾಕ್ಷಸೈಃ ।**
**ಸಂವೃತೋಽಪ್ಸರಸಾಂ ಸಙ್ಘೈರ್ಮೋದತೇ ಗುಹ್ಯಕಾಧಿಪಃ ॥೩೪॥**

ಗಂಧಮಾದನಪರ್ವತದ ಶಿಖರಗಳಲ್ಲಿ ಕುಬೇರನು ರಾಕ್ಷಸರಿಂದಲೂ, ಅಪ್ಸರೆಯರ ಸಮೂಹದಿಂದಲೂ, ಗುಹ್ಯಕರೇ ಮೊದಲಾದವರಿಂದಲೂ ಪರಿವೃತನಾಗಿ ಅತ್ಯಾನಂದದಿಂದ ವಿಹರಿಸುತ್ತಿರುತ್ತಾನೆ.

**ಗನ್ಧಮಾದನಪಾದೇಷು ಪರೇಷ್ವಪರಗಣ್ಡಿಕಾಃ ।**
**ಏಕಾದಶ ಸಹಸ್ರಾಣಿ ವರ್ಷಾಣಾಂ ಪರಮಾಯುಷಃ ॥೩೫॥**

ಗಂಧಮಾದನಪರ್ವತದ ತಲಭಾಗದಲ್ಲಿ ಅದಕ್ಕೆ ಸೇರಿದಂತೆಯೇ ಇನ್ನೂ ಅನೇಕ ಚಿಕ್ಕ ಚಿಕ್ಕ ಪರ್ವತಗಳಿವೆ. ಅಲ್ಲಿ ವಾಸಮಾಡುವ ಮನುಷ್ಯರ ಆಯುಃಪ್ರಮಾಣವು ಹನ್ನೊಂದುಸಾವಿರ ವರ್ಷಗಳು.

**ತತ್ರ ಹೃಷ್ಟಾ ನರಾ ರಾಜಂಸ್ತೇಜೋಯುಕ್ತಾ ಮಹಾಬಲಾಃ ।**
**ಸ್ತ್ರಿಯಶ್ಚೋತ್ಪಲವರ್ಣಾಭಾಃ ಸರ್ವಾಃ ಸುಪ್ರಿಯದರ್ಶನಾಃ ॥೩೬॥**

ಮಹಾರಾಜ! ಅಲ್ಲಿ ವಾಸಮಾಡತಕ್ಕ ಮನುಷ್ಯರು ಹೃಷ್ಟರಾಗಿರುತ್ತಾರೆ. ತೇಜೋಯುಕ್ತರೂ, ಬಲಿಷ್ಠರೂ ಆಗಿರುತ್ತಾರೆ. ಸ್ತ್ರೀಯರು ಕಮಲ ಸದೃಶವಾದ ಶರೀರಕಾಂತಿಯಿಂದ ಕೂಡಿದವರಾಗಿರುತ್ತಾರೆ ಮತ್ತು ಅವ ರೆಲ್ಲರೂ ಪ್ರಿಯದರ್ಶನರಾಗಿರುತ್ತಾರೆ. (ಒಮ್ಮೆ ನೋಡಿದರೆ ಮತ್ತೊಮ್ಮೆ ನೋಡಬೇಕೆನ್ನುವ ಆಶಯವನ್ನು ಮೂಡಿಸುತ್ತಾರೆ.)

**ನೀಲಾತ್ಪರತರಂ ಶ್ವೇತಂ ಶ್ವೇತಾದ್ಧೈರಣ್ಯಕಂ ಪರಮ್ ।**
**ವರ್ಷಮೈರಾವತಂ ರಾಜನ್ನಾನಾಜನಪದಾವೃತಮ್ ॥೩೭॥**

ನೀಲಪರ್ವತದಿಂದ ಉತ್ತರಕ್ಕೆ ಶ್ವೇತವರ್ಷವಿದೆ. ಶ್ವೇತಖಂಡದಿಂದ ಉತ್ತರಕ್ಕೆ ಹಿರಣ್ಯಕವರ್ಷವಿದೆ. ಅನಂತರ ಶೃಂಗಪರ್ವತದ ಮುಂಭಾಗದಲ್ಲಿ ಐರಾವತಖಂಡವಿದೆ. ಆ ಖಂಡಗಳೆಲ್ಲವೂ ಅನೇಕಾನೇಕದೇಶಗಳಿಂದ ಆವೃತ ವಾಗಿವೆ.

**ಧನುಃಸಂಸ್ಥೇ ಮಹಾರಾಜ ದ್ವೇ ವರ್ಷೇ ದಕ್ಷಿಣೋತ್ತರೇ ।**
**ಇಲಾವೃತಂ ಮಧ್ಯಮಂ ತು ಪಞ್ಚ ವರ್ಷಾಣಿ ಚೈವ ಹಿ ॥೩೮॥**

ಧನುಸ್ಸಿನ ಎರಡು ತುದಿಗಳಲ್ಲಿರುವ ಕುಚ್ಚುಗಳಂತೆ ದಕ್ಷಿಣ ಮತ್ತು ಉತ್ತರದಿಕ್ಕುಗಳ ತುದಿಯಲ್ಲಿ ಭಾರತ ಮತ್ತು ಐರಾವತಖಂಡಗಳಿವೆ. ಧನುಸ್ಸಿನ ಮಧ್ಯಭಾಗದಲ್ಲಿ ಬಾಣವಿರುವಂತೆ ದಕ್ಷಿಣೋತ್ತರಗಳ ಮಧ್ಯಭಾಗದಲ್ಲಿ ಇಲಾವೃತವರ್ಷವಿದೆ. ಅರ್ಥಾತ್ ದಕ್ಷಿಣೋತ್ತರದಿಕ್ಕುಗಳ ಮಧ್ಯದಲ್ಲಿ ಐದು ಖಂಡಗಳಿವೆ. ಧನುಸ್ಸಿನ ರೂಪದಲ್ಲಿರುವ ದಕ್ಷಿಣೋತ್ತರಪರ್ವತಗಳ ಸಾಲಿನ ದಕ್ಷಿಣದ ತುದಿಯಲ್ಲಿ ಶ್ವೇತ-ಹಿರಣ್ಯಕಗಳು ; ಮಧ್ಯದಲ್ಲಿ ಇಲಾವೃತ, ಅನಂತರ ಹರಿವರ್ಷ-ಹೈಮವತಖಂಡಗಳು ; ಉತ್ತರದ ಕೊನೆಯಲ್ಲಿ ಐರಾ ವತಖಂಡ ಮತ್ತು ಭರತಖಂಡ ಹೀಗೆ ಒಟ್ಟು ಏಳು ಖಂಡಗಳಿವೆ. ಹಿಂದಿನ ಶ್ಲೋಕಗಳನ್ನು ಕ್ರೋಢೀಕರಿಸಿ ಇದರ ವಿವರಣೆಯನ್ನು ಹೀಗೆ ಕೊಡಬಹು ದಾಗಿದೆ. ಹಿಮವತ್ಪರ್ವತದ ದಕ್ಷಿಣಭಾಗದಲ್ಲಿ 1) ಭರತಖಂಡ. ಹಿಮವ ತ್ಪರ್ವತದ ಉತ್ತರದಲ್ಲಿ 2) ಹೈಮವತಖಂಡ. ಹೇಮಕೂಟಪರ್ವತದ ಉತ್ತರದಲ್ಲಿ 3) ಹರಿವರ್ಷ. ನಿಷಧಪರ್ವತದ ಉತ್ತರದಲ್ಲಿ ನೀಲಪರ್ವತಕ್ಕೆ ಉತ್ತರದಲ್ಲಿ ಮೇರುಪರ್ವತದ ಸುತ್ತಲೂ 4) ಇಲಾವೃತಖಂಡ. (ಅಲ್ಲಿಯೇ ಭದ್ರಾಶ್ವ, ಕೇತುಮಾಲ ಎಂಬ ಎರಡು ಖಂಡಗಳಿವೆಯೆಂದು ಕೆಲವರು ನವ ಖಂಡ ಅಥವಾ ನವವರ್ಷಗಳೆಂದೂ ಹೇಳುತ್ತಾರೆ.) ನೀಲಪರ್ವತಕ್ಕೆ ಉತ್ತರ ದಲ್ಲಿ 5) ಶ್ವೇತವರ್ಷ. ಶ್ವೇತಪರ್ವತದ ಉತ್ತರದಲ್ಲಿ 6) ಹೈರಣ್ಯಕವರ್ಷ. 7) ಶೃಂಗವತ್ಪರ್ವತದ ಸುತ್ತಲೂ ಇರುವುದು ಐರಾವತವರ್ಷ.)

**ಉತ್ತರೋತ್ತರಮೇತೇಭ್ಯೋ ವರ್ಷಮುದ್ರಿಚ್ಯತೇ ಗುಣೈಃ ।**
**ಆಯುಃಪ್ರಮಾಣಮಾರೋಗ್ಯಂ ಧರ್ಮತಃ ಕಾಮತೋಽರ್ಥತಃ ॥೩೯॥**

ಭಾರತವರ್ಷದಿಂದ ಆರಂಭಿಸಿ ಅನುಕ್ರಮವಾಗಿ ಆ ಎಲ್ಲ ಖಂಡಗಳೂ ಆಯುಃಪ್ರಮಾಣದಲ್ಲಿ, ಆರೋಗ್ಯದಲ್ಲಿ, ಧರ್ಮದ ಪರಿಪಾಲನೆಯಲ್ಲಿ, ಕಾಮಾರ್ಥಗಳಲ್ಲಿ ಉತ್ತರೋತ್ತರವಾಗಿ ಅತಿಶಯಿಸುತ್ತವೆ. (ಭಾರತದಲ್ಲಿ ಆಯುಃಪ್ರಮಾಣವು ನೂರಿಪ್ಪತ್ತು ವರ್ಷಗಳಾದರೆ ಹೈಮವತಖಂಡದಲ್ಲಿ ಸಾವಿರ ವರ್ಷಗಳು. ಈ ರೀತಿಯಲ್ಲಿ ಒಂದು ಖಂಡದಿಂದ ಮತ್ತೊಂದು

ಖಂಡಕ್ಕೆ ಆಯುರಾರೋಗ್ಯ–ಧರ್ಮಕಾಮಾರ್ಥಗಳು ಅಧಿಕವಾಗುತ್ತಾ ಹೋಗುತ್ತವೆ.)

**ಸಮನ್ವಿತಾನಿ ಭೂತಾನಿ ತೇಷು ವರ್ಷೇಷು ಭಾರತ ।**
**ಏವಮೇಷಾ ಮಹಾರಾಜ ಪರ್ವತೈಃ ಪೃಥಿವೀ ಚಿತಾ ॥೪೦॥**

ಮಹಾರಾಜ! ಈ ಖಂಡಗಳಲ್ಲಿ ಪ್ರಾಣಿಗಳು ಪರಸ್ಪರ ಹೊಂದಿಕೊಂಡು ಜೀವಿಸುತ್ತಿವೆ. ಈ ರೀತಿಯಾಗಿ ಈ ಭೂಮಂಡಲವು ಮಹಾಪರ್ವತಗಳಿಂದ ಸ್ಥಿರವಾಗಿ ನಿಂತಿದೆ.

**ಹೇಮಕೂಟಸ್ತು ಸುಮಹಾನ್ಕೈಲಾಸೋ ನಾಮ ಪರ್ವತಃ ।**
**ಯತ್ರ ವೈಶ್ರವಣೋ ರಾಜನ್ಗುಹ್ಯಕೈಃ ಸಹ ಮೋದತೇ ॥೪೧॥**

ಮಹಾರಾಜ! ಮಹಾಪರ್ವತವಾದ ಹೇಮಕೂಟವು ಕೈಲಾಸವೆಂಬ ಹೆಸರಿನಿಂದ ಲೋಕದಲ್ಲಿ ಪ್ರಸಿದ್ಧವಾಗಿದೆ. ಆ ಕೈಲಾಸಪರ್ವತದಲ್ಲಿ ಕುಬೇರನು ಗುಹ್ಯಕರೊಡನೆ ಆನಂದದಿಂದ ವಿಹರಿಸುತ್ತಿರುತ್ತಾನೆ.

**ಅಸ್ತ್ಯುತ್ತರೇಣ ಕೈಲಾಸಂ ಮೈನಾಕಂ ಪರ್ವತಂ ಪ್ರತಿ ।**
**ಹಿರಣ್ಯಶೃಙ್ಗಃ ಸುಮಹಾನ್ದಿವ್ಯೋ ಮಣಿಮಯೋ ಗಿರಿಃ ॥೪೨॥**

ಕೈಲಾಸಪರ್ವತದ ಉತ್ತರಕ್ಕೆ ಮೈನಾಕಪರ್ವತವಿದೆ. ಮೈನಾಕಪರ್ವತಕ್ಕೆ ಉತ್ತರದಲ್ಲಿ ದೊಡ್ಡದಾಗಿರುವ ದಿವ್ಯವಾಗಿರುವ ಮಣಿಮಯವಾಗಿರುವ ಹಿರಣ್ಯಶೃಂಗಪರ್ವತವಿದೆ.

**ತಸ್ಯ ಪಾರ್ಶ್ವೇ ಮಹದ್ದಿವ್ಯಂ ಶುಭ್ರಂ ಕಾಞ್ಚನವಾಲುಕಮ್ ।**
**ರಮ್ಯಂ ಬಿನ್ದುಸರೋ ನಾಮ ಯತ್ರ ರಾಜಾ ಭಗೀರಥಃ ।**
**ದೃಷ್ಟ್ವಾ ಭಾಗೀರಥೀಂ ಗಙ್ಗಾಮುವಾಸ ಬಹುಲಾಃ ಸಮಾಃ ॥೪೩॥**

ಹಿರಣ್ಯಶೃಂಗದ ಪಾರ್ಶ್ವದಲ್ಲಿ ಅಥವಾ ಮೈನಾಕ ಮತ್ತು ಹಿರಣ್ಯಶೃಂಗಗಳ ಮಧ್ಯಭಾಗದಲ್ಲಿ ದಿವ್ಯವಾದ ಶುಭ್ರವಾದ ಚಿನ್ನದ ಮರಳಿನಿಂದ ಕೂಡಿರುವ ರಮ್ಯವಾದ ಬಿಂದುಸರವೆಂಬ ಹೆಸರಿನ ಸರೋವರವಿದೆ. ಆ ಸರೋವರದ ಸಮೀಪದಲ್ಲಿಯೇ ಭಗೀರಥರಾಜನು ಗಂಗಾಭಾಗೀರಥಿಯನ್ನು ಸಂದರ್ಶಿಸುವ ಸಲುವಾಗಿ ಅನೇಕ ವರ್ಷಗಳ ಪರ್ಯಂತವಾಗಿ ವಾಸವಾಗಿದ್ದನು.

**ಯೂಪಾ ಮಣಿಮಯಾಸ್ತತ್ರ ಚೈತ್ಯಾಶ್ಚಾಪಿ ಹಿರಣ್ಮಯಾಃ ।**
**ತತ್ರೇಷ್ಟ್ವಾ ತು ಗತಃ ಸಿದ್ಧಿಂ ಸಹಸ್ರಾಕ್ಷೋ ಮಹಾಯಶಾಃ ॥೪೪॥**

ಬಿಂದುಸರೋವರದ ಸಮೀಪದಲ್ಲಿಯೇ ಮಣಿಮಯವಾದ ಯೂಪ ಸ್ತಂಭಗಳಿವೆ. ಸುವರ್ಣಮಯವಾದ ಯಜ್ಞಶಾಲೆಗಳಿವೆ. ಮಹಾಯಶೋ ವಂತನಾದ ಸಹಸ್ರಾಕ್ಷನು (ಇಂದ್ರನು) ಆ ಬಿಂದುಸರೋವರದ ತೀರದಲ್ಲಿಯೇ ಯಜ್ಞಮಾಡಿ ಸಿದ್ಧಿಯನ್ನು ಪಡೆದನು.

**ಸೃಷ್ಟ್ವಾ ಭೂತಪತಿರ್ಯತ್ರ ಸರ್ವಲೋಕೈಃ ಸನಾತನಃ ।**
**ಉಪಾಸ್ಯತೇ ತಿಗ್ಮತೇಜಾ ಯತ್ರ ಭೂತೈಃ ಸಮನ್ತತಃ ॥೪೫॥**

**ನರನಾರಾಯಣೌ ಬ್ರಹ್ಮಾ ಮನುಃ ಸ್ಥಾಣುಶ್ಚ ಪಞ್ಚಮಃ ॥೪೬॥**

ಆ ಬಿಂದುಸರೋವರದ ಸಮೀಪದಲ್ಲಿಯೇ ಸಕಲಜಗತ್ತಿನ ಸೃಷ್ಟಿಕರ್ತ ನಾದ, ಸನಾತನನಾದ, ಭೂತಪತಿಯಾದ, ತೀಕ್ಷ್ಣವಾದ ತೇಜಸ್ಸಿನಿಂದ ಕೂಡಿ ರುವ ಪರಶಿವನು ಎಲ್ಲ ಲೋಕಗಳ ಜನರಿಂದಲೂ, ಭೂತಗಣಗಳಿಂದಲೂ ಸಂಸೇವ್ಯಮಾನನಾಗಿರುತ್ತಾನೆ. (ಪರಮೇಶ್ವರನ ಸುತ್ತಲೂ ಎಲ್ಲ ಭೂತಗಣ ಗಳೂ ಮತ್ತು ಎಲ್ಲ ಲೋಕಗಳ ಪ್ರಾಣಿಗಳೂ ನಿಂತು ಸದಾಕಾಲ ಅವನನ್ನು ಸೇವಿಸುತ್ತಿರುತ್ತವೆ.) ನರ-ನಾರಾಯಣರ, ಬ್ರಹ್ಮ, ಮನು ಮತ್ತು ಸ್ಥಾಣುಗಳ ಸಾನ್ನಿಧ್ಯವು ಬಿಂದುಸರೋವರದ ಸಮೀಪದಲ್ಲಿ ಸದಾಕಾಲದಲ್ಲಿಯೂ ಇರುತ್ತದೆ.

**ತತ್ರ ದಿವ್ಯಾ ತ್ರಿಪಥಗಾ ಪ್ರಥಮಂ ತು ಪ್ರತಿಷ್ಠಿತಾ ।**
**ಬ್ರಹ್ಮಲೋಕಾದಪಕ್ರಾನ್ತಾ ಸಪ್ತಧಾ ಪ್ರತಿಪದ್ಯತೇ ॥೪೭॥**

ಬ್ರಹ್ಮಲೋಕದಿಂದ ಕೆಳಗಿಳಿದುಬಂದ ತ್ರಿಪಥಗಾಮಿನಿಯಾದ ದಿವ್ಯಳಾದ ಗಂಗಾದೇವಿಯು ಪ್ರಪ್ರಥಮವಾಗಿ ಆ ಬಿಂದುಸರೋವರದಲ್ಲಿಯೇ ಪ್ರತಿಷ್ಠಿತ ಳಾಗಿದ್ದು ಅನಂತರ ಏಳು ಪ್ರಕಾರವಾಗಿ ಭೂಮಿಯಲ್ಲಿ ಪ್ರವಹಿಸಿದಳು.

**ವಸ್ವೋಕಸಾರಾ ನಲಿನೀ ಪಾವನೀ ಚ ಸರಸ್ವತೀ ।**
**ಜಮ್ಬೂನದೀ ಚ ಸೀತಾ ಚ ಗಙ್ಗಾ ಸಿನ್ಧುಶ್ಚ ಸಪ್ತಮೀ ॥೪೮॥**

ಏಳು ಸೀಳಾಗಿ ಪ್ರವಹಿಸಿದ ಗಂಗಾನದಿಯ ಏಳು ಸೀಳುಗಳಿಗೂ ಒಂದೊಂದು ಹೆಸರಾಯಿತು. ವಸ್ವೋಕಸಾರಾ, ನಲಿನೀ, ಪಾವನೆಯಾದ

ಸರಸ್ವತೀ, ಜಮ್ಬೂನದೀ, ಸೀತಾ, ಗಂಗಾ, ಸಿಂಧು–ಈ ಏಳು ಹೆಸರುಗಳನ್ನು ಪಡೆದು ಗಂಗಾನದಿಯು ಭೂಮಿಯಲ್ಲಿ ಪ್ರವಹಿಸಿದಳು.

**ಅಚಿನ್ತ್ಯಾ ದಿವ್ಯಸಂಕಾಶಾ ಪ್ರಭೋರೇಷೈವ ಸಂವಿಧಿಃ ।**
**ಉಪಾಸತೇ ಯತ್ರ ಸತ್ರಂ ಸಹಸ್ರಯುಗಪರ್ಯಯೇ ॥೪೯॥**

ಯಾರೊಬ್ಬರ ಊಹೆಗೂ ನಿಲುಕದ, ಬಹುರಮಣೀಯವಾಗಿ ಕಾಣುವ, ಸಮೀಚೀನವಾದ, ಲೋಕೋಪಕಾರಿಯಾದ ವಿಧಾನವು (ಗಂಗಾ ನದಿಯನ್ನು ಏಳು ವಿಭಾಗಗಳಾಗಿ ಮಾಡಿ ಭೂಮಿಯಲ್ಲಿ ಪ್ರವಹಿಸುವಂತೆ ಮಾಡಿದುದು) ಪ್ರಭುವಾದ ಪರಮಾತ್ಮನ ಅದ್ಭುತಕಾರ್ಯವೇ ಸರಿ. ಗಂಗಾ ನದಿಯ ತೀರಪ್ರದೇಶಗಳಲ್ಲಿ ದೇವತೆಗಳು, ಋಷಿಗಳು ಮತ್ತು ಮಾನವರು ಸಹಸ್ರಯುಗಪರ್ಯಂತವಾಗಿ ಕಲ್ಪಾಂತದವರೆಗೂ ಯಜ್ಞ-ಯಾಗಾದಿಗಳನ್ನು ಮಾಡುತ್ತಾ ಭಗವಂತನ ಉಪಾಸನೆಮಾಡುತ್ತಿರುತ್ತಾರೆ.

**ದೃಶ್ಯಾದೃಶ್ಯಾ ಚ ಭವತಿ ತತ್ರ ತತ್ರ ಸರಸ್ವತೀ ।**
**ಏತಾ ದಿವ್ಯಾಃ ಸಪ್ತಗಙ್ಗಾಸ್ತ್ರಿಷು ಲೋಕೇಷು ವಿಶ್ರುತಾಃ ॥೫೦॥**

ಗಂಗಾನದಿಯ ಸಪ್ತಪ್ರವಾಹಗಳಲ್ಲಿ ಸರಸ್ವತೀನಾಮಕವಾದ ಪ್ರವಾಹವು ಕೆಲವೆಡೆಗಳಲ್ಲಿ ಕಾಣಿಸಿಕೊಳ್ಳುತ್ತಲೂ ಮತ್ತೆ ಕೆಲವೆಡೆಗಳಲ್ಲಿ ಗುಪ್ತಗಾಮಿನಿಯಾಗಿಯೂ ಹರಿಯುತ್ತದೆ. ಗಂಗಾನದಿಯ ದಿವ್ಯವಾದ ಏಳು ಪ್ರವಾಹಗಳೂ ಸಹ ಮೂರು ಲೋಕಗಳಲ್ಲಿಯೂ ವಿಖ್ಯಾತವಾಗಿವೆ.

**ರಕ್ಷಾಂಸಿ ವೈ ಹಿಮವತಿ ಹೇಮಕೂಟೇ ತು ಗುಹ್ಯಕಾಃ ।**
**ಸರ್ಪಾ ನಾಗಾಶ್ಚ ನಿಷಧೇ ಗೋಕರ್ಣಂ ಚ ತಪೋವನಮ್ ॥೫೧॥**
**ದೇವಾಸುರಾಣಾಂ ಸರ್ವೇಷಾಂ ಶ್ವೇತಪರ್ವತ ಉಚ್ಯತೇ ।**
**ಗನ್ಧರ್ವಾ ನಿಷಧೇ ನಿತ್ಯಂ ನೀಲೇ ಬ್ರಹ್ಮರ್ಷಯಸ್ತಥಾ ।**
**ಶೃಙ್ಗವಾಂಸ್ತು ಮಹಾರಾಜ ದೇವಾನಾಂ ಪ್ರತಿಸಂಚರಃ ॥೫೨॥**

ಹಿಮವತ್ಪರ್ವತದಲ್ಲಿ ರಾಕ್ಷಸರು ವಾಸಮಾಡುತ್ತಾರೆ. ಹೇಮಕೂಟದಲ್ಲಿ ಗುಹ್ಯಕರು ವಾಸಮಾಡುತ್ತಾರೆ. ನಿಷಧಪರ್ವತದಲ್ಲಿ ಸರ್ಪಗಳೂ ನಾಗಗಳೂ ವಾಸಮಾಡುತ್ತವೆ. ನಿಷಧಪರ್ವತದಲ್ಲಿಯೇ ಗೋಕರ್ಣವೆಂಬ ತಪೋ ವನವೂ ಇದೆ. ದೇವಾಸುರರೆಲ್ಲರಿಗೂ ಶ್ವೇತಪರ್ವತವೇ ನಿವಾಸಸ್ಥಾನವೆಂದು

ಹೇಳಲ್ಪಟ್ಟಿದೆ. ನಿಷಧಪರ್ವತದಲ್ಲಿ ಗಂಧರ್ವರೂ, ನೀಲಪರ್ವತದಲ್ಲಿ ಬ್ರಹ್ಮರ್ಷಿಗಳೂ ವಾಸಮಾಡುತ್ತಾರೆ. ಶೃಂಗಪರ್ವತವು ದೇವತೆಗಳಿಗೆ ಮಾತ್ರವೇ ವಿಹಾರಸ್ಥಾನವಾಗಿದೆ.

ಮಹಾರಾಜ! ಈ ರೀತಿಯಲ್ಲಿ ವಿಶ್ವವು ಏಳು ಖಂಡಗಳಾಗಿ ವಿಂಗಡಿಸಲ್ಪಟ್ಟಿದೆ. ಚರಾಚರಪ್ರಾಣಿಗಳೆಲ್ಲವೂ ಈ ಏಳು ಖಂಡಗಳಲ್ಲಿ ಭಾಗಶಃ ವಾಸಿಸುತ್ತವೆ. ಆ ಪ್ರಾಣಿಗಳಿಗೆ ಅನೇಕವಿಧವಾದ ದೈವಿಕ ಮತ್ತು ಮಾನುಷ ಸಮೃದ್ಧಿಯು ಪ್ರಾಪ್ತವಾಗುತ್ತದೆ. ಆ ಸಮೃದ್ಧಿಯು ಅಪರಿಮಿತವಾದುದು. ಶ್ರೇಯಃಕಾಮಿಗಳಾದವರು ಅದೃಷ್ಟಫಲಗಳಲ್ಲಿ ನಂಬಿಕೆಯಿಟ್ಟು ಋದ್ಧಿ ಪ್ರಾಪಕವಾದ ಕರ್ಮಗಳನ್ನು ಶ್ರದ್ಧೆಯಿಂದ ಮಾಡಬೇಕು.

**ಯಾಂ ತು ಪೃಚ್ಛಸಿ ಮಾಂ ರಾಜನ್ದಿವ್ಯಾಮೇತಾಂ ಶಶಾಕೃತಿಮ್ ।**
**ಪಾರ್ಶ್ವೇ ಶಶಸ್ಯ ದ್ವೇ ವರ್ಷೇ ಉಕ್ತೇ ಯೇ ದಕ್ಷಿಣೋತ್ತರೇ ।**
**ಕರ್ಣೌ ತು ನಾಗದ್ವೀಪಶ್ಚ ಕಾಶ್ಯಪದ್ವೀಪ ಏವ ಚ ॥೫೫॥**

ಮಹಾರಾಜ! ಚಂದ್ರಮಂಡಲದಲ್ಲಿ ಕಾಣುವ ಮೊಲದ ಆಕೃತಿಯ ವಿಷಯವಾಗಿ ನೀನು ಪ್ರಶ್ನಿಸಿದೆಯಲ್ಲವೇ? ಈ ಮೊಲದ ಆಕಾರದಲ್ಲಿ ಚಂದ್ರ ಬಿಂಬದಲ್ಲಿ ಕಾಣುವುದು ನಾನು ಈ ಹಿಂದೆ ಹೇಳಿದಂತೆ ಭೂಮಂಡಲದ ಪ್ರತಿಬಿಂಬವೇ ಆಗಿರುತ್ತದೆ. ಭೂಮಂಡಲದಲ್ಲಿ ಧನುರಾಕಾರದ ದಕ್ಷಿಣೋತ್ತರಗಳ ತುದಿಗಳಲ್ಲಿ ಭಾರತ ಮತ್ತು ಐರಾವತಖಂಡಗಳಿವೆಯೆಂದು ಹೇಳಿದೆನಲ್ಲವೇ? ಆ ಎರಡು ಖಂಡಗಳೇ ಚಂದ್ರಮಂಡಲದಲ್ಲಿ ಮೊಲದ ಎರಡು ಪಾರ್ಶ್ವರೂಪವಾಗಿ ಕಾಣುತ್ತವೆ. ನಾಗದ್ವೀಪ ಮತ್ತು ಕಾಶ್ಯಪದ್ವೀಪಗಳು ಚಂದ್ರಮಂಡಲದಲ್ಲಿರುವ ಮೊಲದ ಎರಡು ಕಿವಿಗಳ ರೂಪದಲ್ಲಿ ಕಾಣುತ್ತವೆ.

**ತಾಮ್ರಪರ್ಣಃ ಶಿರೋ ರಾಜಞ್ಛ್ರೀಮಾನ್ಮಲಯಪರ್ವತಃ ।**
**ಏತದ್ದ್ವಿತೀಯಂ ದ್ವೀಪಸ್ಯ ದೃಶ್ಯತೇ ಶಶಸಂಸ್ಥಿತಮ್ ॥೫೬॥**

ಕೆಂಬಣ್ಣದ ಎಲೆಗಳಿರುವ ವೃಕ್ಷಗಳಿಂದ ಕೂಡಿರುವ ಕಾಂತಿಯುಕ್ತವಾದ ಮಲಯಪರ್ವತದ ಛಾಯೆಯು ಚಂದ್ರಮಂಡಲದಲ್ಲಿರುವ ಮೊಲದ ತಲೆಯ ರೂಪವಾಗಿ ಕಾಣುತ್ತದೆ. ಈ ರೀತಿಯಲ್ಲಿ ಸುದರ್ಶನದ್ವೀಪದ ಮತ್ತೊಂದು ಭಾಗವು ಚಂದ್ರಮಂಡಲದಲ್ಲಿ ಮೊಲದ ಚಿಹ್ನೆಯಿಂದ ಅಭಿವ್ಯಕ್ತವಾಗಿದೆ.”

ಆರನೆಯ ಅಧ್ಯಾಯವು ಮುಗಿಯಿತು.

## ಉತ್ತರಕುರು, ಭದ್ರಾಶ್ವವರ್ಷ ಮತ್ತು ಮಾಲ್ಯವತ್ಪರ್ವತದ ವರ್ಣನೆ

ಧೃತರಾಷ್ಟ್ರನು ಸಂಜಯನನ್ನು ಕುರಿತು ಹೇಳುತ್ತಾನೆ :

"ಸಂಜಯ! ಮೊದಲು ನೀನು ಮೇರುಪರ್ವತದ ಉತ್ತರ ಮತ್ತು ಪೂರ್ವಪಾರ್ಶ್ವದಲ್ಲಿರುವ ಖಂಡಗಳನ್ನು ವಿವರಿಸಿ ಹೇಳು. ಅಂತೆಯೇ ಮಾಲ್ಯವತ್ಪರ್ವತವನ್ನೂ ಆಮೂಲಾಗ್ರವಾಗಿ ವರ್ಣಿಸು."

**ದಕ್ಷಿಣೇನ ತು ನೀಲಸ್ಯ ಮೇರೋಃ ಪಾರ್ಶ್ವೇ ತಥೋತ್ತರೇ ।**
**ಉತ್ತರಾಃ ಕುರವೋ ರಾಜನ್ಪುಣ್ಯಾಃ ಸಿದ್ಧನಿಷೇವಿತಾಃ ॥೨॥**

"ಮಹಾರಾಜ! ನೀಲಪರ್ವತಕ್ಕೆ ದಕ್ಷಿಣದಲ್ಲಿಯೂ ಮೇರುಪರ್ವತಕ್ಕೆ ಉತ್ತರಪಾರ್ಶ್ವದಲ್ಲಿಯೂ ಪುಣ್ಯತಮವಾದ ಸಿದ್ಧನಿಷೇವಿತವಾದ ಉತ್ತರ ಕುರುವರ್ಷವಿದೆ. ಅಲ್ಲಿರುವ ವೃಕ್ಷಗಳು ಸರ್ವಕಾಲಗಳಲ್ಲಿಯೂ ಫಲ-ಪುಷ್ಪ ಭರಿತವಾಗಿರುತ್ತವೆ. ಆ ವೃಕ್ಷಗಳಲ್ಲಿರುವ ಫಲಗಳು ಸುಮಧುರವಾಗಿಯೂ, ರಸವತ್ತಾಗಿಯೂ ಇರುತ್ತವೆ. ಅಲ್ಲಿರುವ ಪುಷ್ಪಗಳು ಸುಗಂಧಯುಕ್ತವಾಗಿರುತ್ತವೆ. ಅಲ್ಲಿರುವ ಕೆಲವು ವೃಕ್ಷಗಳು ಅಪೇಕ್ಷಿಸಿದ ಎಲ್ಲ ವಿಧವಾದ ಫಲಗಳನ್ನೂ ಕೊಡುತ್ತವೆ.

**ಅಪರೇ ಕ್ಷೀರಿಣೋ ನಾಮ ವೃಕ್ಷಾಸ್ತತ್ರ ಜನಾಧಿಪ ।**
**ಯೇ ಕ್ಷರನ್ತಿ ಸದಾ ಕ್ಷೀರಂ ಷಡ್ರಸಂ ಚಾಮೃತೋಪಮಮ್ ।**
**ವಸ್ತ್ರಾಣಿ ಚ ಪ್ರಸೂಯನ್ತೇ ಫಲೇಷ್ವಾಭರಣಾನಿ ಚ ॥೫॥**

ಮತ್ತೆ ಕೆಲವು ವೃಕ್ಷಗಳು 'ಕ್ಷೀರೀ' ಎಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಈ ಹೆಸರು ಆ ವೃಕ್ಷಗಳ ಅನ್ವರ್ಥನಾಮ. ಅವು ತಮ್ಮ ಹೆಸರಿಗೆ ಅನುಗುಣವಾಗಿ ಸದಾಕಾಲದಲ್ಲಿಯೂ ಅಮೃತೋಪಮವಾದ ಹಾಲನ್ನೂ ಷಡ್ರಸಗಳನ್ನೂ ಸುರಿಸುತ್ತವೆ. ಇಷ್ಟುಮಾತ್ರವಲ್ಲ. ಹಣ್ಣುಗಳ ಮೂಲಕವಾಗಿ ವಸ್ತ್ರಗಳನ್ನೂ ಮತ್ತು ಆಭರಣಗಳನ್ನೂ ಪ್ರಸವಿಸುತ್ತವೆ. (ಕೊಡುತ್ತವೆ.) ಉತ್ತರಕುರುಖಂಡದಲ್ಲಿರುವ ಭೂಮಿಯು ಮಣಿಮಯವಾಗಿದೆ. ಅಲ್ಲಿರುವ ಸೂಕ್ಷ್ಮವಾದ ಮರಳಿನ ಕಣಗಳು ಸುವರ್ಣಮಯವಾಗಿವೆ. ಎಲ್ಲ ಋತುಗಳಲ್ಲಿಯೂ ಅಲ್ಲಿಯ ವಾತಾವರಣವು ಸುಖದಾಯಕವಾಗಿರುತ್ತದೆ.

ಅಲ್ಲಿ ಕೆಸರೆಂಬುದೇ ಇಲ್ಲ. ಅಲ್ಲಿಯ ಸರೋವರಗಳು ಶುಭಪ್ರದಗಳಾಗಿವೆ. ಅವುಗಳು ನೋಡಲು ಅತ್ಯಂತಸುಂದರವಾಗಿಯೂ ಮನೋಹರವಾಗಿಯೂ ಇರುವುದು ಮಾತ್ರವಲ್ಲದೇ–ಸ್ಪರ್ಶಿಸಿದರೆ ಆನಂದವನ್ನೂ ಉಂಟುಮಾಡುತ್ತವೆ. ಅವುಗಳ ಸ್ಪರ್ಶದಿಂದ ಅನಿರ್ವಚನೀಯವಾದ ಸುಖವುಂಟಾಗುತ್ತದೆ. ದೇವಲೋಕದಿಂದ ಚ್ಯುತರಾದವರು ಆ ಉತ್ತರಕುರುಖಂಡದಲ್ಲಿ ಮಾನವರಾಗಿ ಜನ್ಮತಾಳುತ್ತಾರೆ. ಅಲ್ಲಿ ಎಲ್ಲರೂ ವಿಷ್ಣುಭಕ್ತರ ಸತ್ಸಂಗದಲ್ಲಿರುತ್ತಾರೆ ; ಎಲ್ಲರೂ ಪ್ರಿಯದರ್ಶನರಾಗಿರುತ್ತಾರೆ. ಅವರನ್ನೊಮ್ಮೆ ನೋಡಿದರೆ ಪುನಃ ಪುನಃ ನೋಡಬೇಕೆನ್ನಿಸುತ್ತದೆ. (**ಶುಕ್ಲಾಭಿಜನಸಮ್ಪನ್ನಾಃ**–ಎಂಬುದಕ್ಕೆ ವ್ಯಾಖ್ಯಾನಕಾರರು **ಶುಕ್ಲಾಭಿಜನಃ ವಿಷ್ಣುಭಕ್ತಜನಃ ತೇನ ಸಮ್ಪನ್ನಾ - ಸ್ತತ್ಸಙ್ಗಿನಃ** = ವಿಷ್ಣುಭಕ್ತಜನರೊಡನೆ ಸೇರಿರತಕ್ಕವರು–ಎಂದು ಅರ್ಥ ಮಾಡಿರುತ್ತಾರೆ. 'ಪರಿಶುದ್ಧರಾದವರ ಅಥವಾ ಸತ್ಪುರುಷರ ಸಹವಾಸದಲ್ಲಿರ ತಕ್ಕವರು' ಎಂದೂ (ಶುದ್ಧವಂಶದವರು ಎಂದೂ) ಸಹಜವಾಗಿ ಅರ್ಥ ಮಾಡಬಹುದಾಗಿದೆ.)

**ಮಿಥುನಾನಿ ಚ ಜಾಯನ್ತೇ ಸ್ತ್ರಿಯಶ್ಚಾಪ್ಸರಸೋಪಮಾಃ ।**
**ತೇಷಾಂ ತೇ ಕ್ಷೀರಿಣಾಂ ಕ್ಷೀರಂ ಪಿಬನ್ತ್ಯಮೃತಸನ್ನಿಭಮ್ ॥೮॥**

ಅಲ್ಲಿ ಸಾಮಾನ್ಯವಾಗಿ ಗಂಡು-ಹೆಣ್ಣುಗಳು ಒಟ್ಟಾಗಿಯೇ ಹುಟ್ಟುತ್ತವೆ–(ಅವಳೀ ಮಕ್ಕಳೇ ಹುಟ್ಟುತ್ತವೆ.) ಹಾಗೆ ಹುಟ್ಟುವ ಮಕ್ಕಳಲ್ಲಿ ಹೆಣ್ಣು ಮಕ್ಕಳು ಅಪ್ಸರೆಯರಷ್ಟು ಚೆಲುವಾಗಿರುತ್ತವೆ. ಆ ಎಲ್ಲ ಮಕ್ಕಳೂ ಅಮೃತೋಪಮವಾದ ಕ್ಷೀರೀವೃಕ್ಷದ ಹಾಲನ್ನು ಕುಡಿಯುತ್ತವೆ. ಒಂದೇ ಕಾಲದಲ್ಲಿ ಸ್ತ್ರೀ-ಪುರುಷಯುಗ್ಮಗಳೂ ಹುಟ್ಟುತ್ತವೆ. ಅವುಗಳು ಸಮ-ಸಮವಾಗಿಯೇ ಬೆಳೆಯುತ್ತವೆ. ಆ ಎರಡು ಮಕ್ಕಳೂ ಸಮಾನವಾದ ರೂಪ-ಗುಣಗಳನ್ನು ಹೊಂದಿರುತ್ತವೆ. ಅವುಗಳ ವೇಷ-ಭೂಷಣಗಳೂ ಸಹ ಒಂದೇ ಆಗಿರುತ್ತವೆ.

ಚಕ್ರವಾಕಪಕ್ಷಿಯುಗ್ಮದಂತೆ ಹುಟ್ಟಿದ ಗಂಡುಯುಗ್ಮವು ಹೆಣ್ಣುಯುಗ್ಮದೊಡನೆ ಪರಸ್ಪರ ಅನುರಕ್ತವಾಗಿರುತ್ತದೆ. ಉತ್ತರಕುರುಖಂಡದಲ್ಲಿರುವ ಪ್ರಜೆಗಳು ರೋಗರಹಿತರಾಗಿಯೂ ಸರ್ವದಾ ಪ್ರಸನ್ನಮನಸ್ಕರಾಗಿಯೂ ಇರುತ್ತಾರೆ. ಅಲ್ಲಿ ವಾಸಿಸುವ ಜನಗಳ ಆಯುಷ್ಯವು ಹನ್ನೊಂದು ಸಾವಿರ

ವರ್ಷಗಳು. ಹನ್ನೊಂದು ಸಾವಿರ ವರ್ಷಗಳವರೆಗೂ ಅವರು ಜೀವಿಸಿರುತ್ತಾರೆ. ಆದರೆ ಒಂದಾಗಿಯೇ ಹುಟ್ಟಿ ಒಂದಾಗಿಯೇ ಬೆಳೆದು ಪರಸ್ಪರಾನುರಾಗದಿಂದಿರುವ ಅಲ್ಲಿಯ ಸ್ತ್ರೀ-ಪುರುಷರು ಒಬ್ಬರು ಮತ್ತೊಬ್ಬರನ್ನು ಬಿಟ್ಟು ಸಾಯುವುದಿಲ್ಲ. ಸಾಯುವಾಗಲೂ ಒಟ್ಟಾಗಿಯೇ ಪ್ರಾಣಬಿಡುತ್ತಾರೆ.

**ಭಾರುಣ್ಡಾ ನಾಮ ಶಕುನಾಸ್ತೀಕ್ಷ್ಣ ತುಣ್ಡಾ ಮಹಾಬಲಾಃ ।**
**ತಾನ್ನಿರ್ಹರನ್ತೀಹ ಮೃತಾನ್ದರೀಷು ಪ್ರಕ್ಷಿಪನ್ತಿ ಚ ॥೧೨॥**

ಉತ್ತರಕುರುಖಂಡದಲ್ಲಿ ಭಾರುಂಡ ಎಂಬ ಹೆಸರಿನ ಬಹುಬಲಿಷ್ಠವಾದ ತೀಕ್ಷ್ಣವಾದ ಕೊಕ್ಕುಗಳನ್ನು ಹೊಂದಿರುವ ಪಕ್ಷಿಗಳಿವೆ. ಆ ಪಕ್ಷಿಗಳು ಮೃತರಾದವರ ಶರೀರಗಳನ್ನು ಕೊಕ್ಕಿನಲ್ಲೇ ಎತ್ತಿಕೊಂಡುಹೋಗಿ ಪರ್ವತದ ಕಂದರಗಳಲ್ಲಿ ಹಾಕಿಬಿಡುತ್ತವೆ.

ಮಹಾರಾಜ! ನಾನು ನಿನಗೆ ಉತ್ತರಕುರುಗಳ ವಿಷಯವನ್ನು ಆಮೂಲಾಗ್ರವಾಗಿ ಹೇಳಿರುತ್ತೇನೆ. ಮುಂದೆ ನಾನು ನಿನಗೆ ಮೇರುವಿನ ಪೂರ್ವ ದಿಕ್ಕಿನಲ್ಲಿರುವ ಖಂಡದ ವಿಷಯವನ್ನು ಯಥಾವತ್ತಾಗಿ ವರ್ಣಿಸುತ್ತೇನೆ.

ಧೃತರಾಷ್ಟ್ರ! ಭದ್ರಾಶ್ವವರ್ಷದಲ್ಲಿ ಭದ್ರಾಶ್ವಖಂಡಕ್ಕೇ ಕಿರೀಟಪ್ರಾಯವಾದ ಭದ್ರಶಾಲ ಎಂಬ ಹೆಸರಿನ ಮಹಾವನವಿದೆ. ಆ ವನದಲ್ಲಿ ಕಾಲಾಮ್ರವೆಂಬ ಮಹಾವೃಕ್ಷವಿದೆ. ಅಲ್ಲಿರುವ ಆಮ್ರವೃಕ್ಷವು ಒಂದು ಯೋಜನದಷ್ಟು ಎತ್ತರವಾಗಿದ್ದು ಬಹುಸುಂದರವಾಗಿದೆ. ಆ ವೃಕ್ಷದಲ್ಲಿ ಎಲ್ಲ ಋತುಗಳಲ್ಲಿಯೂ ಫಲಗಳಿರುತ್ತವೆ. ಭದ್ರಾಶ್ವಖಂಡದ ಪುರುಷರು ಬಿಳಿಯಬಣ್ಣದವರಾಗಿಯೂ ತೇಜೋಯುಕ್ತರಾಗಿಯೂ, ಮಹಾಬಲರಾಗಿಯೂ ಇರುತ್ತಾರೆ. ಸ್ತ್ರೀಯರು ಬಿಳೀನೈದಿಲೆಯ (ಕುಮುದಪುಷ್ಪದ) ಬಣ್ಣವುಳ್ಳವರಾಗಿದ್ದು ಚೆಲುವೆಯರಾಗಿಯೂ ಪ್ರಿಯದರ್ಶನೆಯರಾಗಿಯೂ ಇರುತ್ತಾರೆ.

**ಚನ್ದ್ರಪ್ರಭಾಶ್ಚನ್ದ್ರವರ್ಣಾಃ ಪೂರ್ಣಚನ್ದ್ರನಿಭಾನನಾಃ ।**
**ಚನ್ದ್ರಶೀತಲಗಾತ್ರ್ಯಶ್ಚ ನೃತ್ಯಗೀತವಿಶಾರದಾಃ ॥೧೭॥**

ಆ ಸ್ತ್ರೀಯರು ಚಂದ್ರನ ಪ್ರಭೆಯಂತೆ ಶರೀರಕಾಂತಿಯುಳ್ಳವರಾಗಿರುತ್ತಾರೆ. ಅವರ ಮೈಬಣ್ಣವೂ ಸಹ ಚಂದ್ರನ ಬಣ್ಣದಂತೆ ಬಿಳುಪಾಗಿದೆ. ಪೂರ್ಣಚಂದ್ರಸದೃಶವಾಗಿ ಅವರ ಮುಖಗಳಿವೆ. ಚಂದ್ರನ ಕಿರಣಗಳಂತೆ

ಅವರ ಶರೀರಗಳೂ ಸಹ ಶೀತಲವಾಗಿವೆ. ನೃತ್ಯ ಮತ್ತು ಗೀತಗಳಲ್ಲಿ ಭದ್ರಾಶ್ವಖಂಡದ ಸ್ತ್ರೀಯರು ವಿಶಾರದೆಯರಾಗಿರುತ್ತಾರೆ. ಅಲ್ಲಿರುವವರ ಆಯುಃಪ್ರಮಾಣವು ಹತ್ತುಸಾವಿರ ವರ್ಷಗಳು. ಕಾಲಾಮ್ರವೃಕ್ಷದ ರಸವನ್ನು (ಫಲರಸವನ್ನು ) ಕುಡಿದಿರುವ ಅವರು ನಿತ್ಯಯುವಕರಾಗಿರುತ್ತಾರೆ.

**ದಕ್ಷಿಣೇನ ತು ನೀಲಸ್ಯ ನಿಷಧಸ್ಯೋತ್ತರೇಣ ತು ।**
**ಸುದರ್ಶನೋ ನಾಮ ಮಹಾಞ್ಜಮ್ಬೂವೃಕ್ಷಃ ಸನಾತನಃ ॥೧೯॥**

ನೀಲಪರ್ವತಕ್ಕೆ ದಕ್ಷಿಣದಲ್ಲಿಯೂ ನಿಷಧಪರ್ವತಕ್ಕೆ ಉತ್ತರದಲ್ಲಿಯೂ ಬಹಳ ದೊಡ್ಡದಾದ ಮತ್ತು ಸನಾತನವಾದ ಸುದರ್ಶನವೆಂಬ ಹೆಸರಿನ ನೇರಳೆಯ ಮರವಿದೆ. ಆ ವೃಕ್ಷವು ಕೇಳಿದುದೆಲ್ಲವನ್ನೂ ಕೊಡತಕ್ಕದ್ದಾಗಿದೆ. ಅದು ಪುಣ್ಯತಮವಾಗಿದ್ದು ಸಿದ್ಧ-ಚಾರಣರಿಂದ ಅನುದಿನವೂ ಸಂಸೇವಿಸಲ್ಪಡುತ್ತಿದೆ. ಆ ನೇರಳೇಮರವಿರುವುದರಿಂದಲೇ ನೀಲಪರ್ವತದ ದಕ್ಷಿಣದಲ್ಲೂ ಮತ್ತು ನಿಷಧಪರ್ವತದ ಉತ್ತರದಲ್ಲೂ ಇರುವ ಆ ಖಂಡವು ಜಂಬೂದ್ವೀಪವೆಂದೇ ವಿಖ್ಯಾತವಾಗಿದೆ. (ಸುದರ್ಶನವೆಂದೂ ಆ ನೇರಳೆ ಮರಕ್ಕೆ ಹೆಸರಿರುವುದರಿಂದ ಆ ವೃಕ್ಷವಿರುವ ಖಂಡಕ್ಕೆ ಸುದರ್ಶನಖಂಡ ಅಥವಾ ಸುದರ್ಶನದ್ವೀಪವೆಂಬ ಹೆಸರೂ ಇದೆ.) ಆ ಜಂಬೂವೃಕ್ಷವು ಸಾವಿರದ ನೂರು ಯೋಜನದಷ್ಟು ಎತ್ತರವಾಗಿದ್ದು ಸ್ವರ್ಗಲೋಕವನ್ನು ಸ್ಪರ್ಶಿಸುತ್ತಿದೆಯೋ ಎಂಬಂತೆಯೇ ಕಾಣುತ್ತಿದೆ. ಯಥೇಚ್ಛವಾದ ರಸವನ್ನು ಸುರಿಸುವ ಆ ನೇರಳೇಮರದ ಫಲಗಳು ಎರಡು ಸಾವಿರದ ಐದುನೂರು ಅರತ್ನಿಗಳಷ್ಟು ಸುತ್ತಳತೆಯುಳ್ಳದ್ದಾಗಿರುತ್ತವೆ. (ಅರತ್ನಿಃ= ಕಿರುಬೆರಳು ನೀಡಿದ ಒಂದು ಗುದ್ದುಮೊಳ) ಆ ಹಣ್ಣುಗಳು ಮರದ ಮೇಲಿನಿಂದ ಭೂಮಿಗೆ ಬೀಳುವ ಸಮಯದಲ್ಲಿ ವಿಪುಲವಾದ ಶಬ್ದಮಾಡುತ್ತವೆ. ಕೆಳಕ್ಕೆ ಬಿದ್ದೊಡನೆಯೇ ರಜತಸದೃಶವಾದ ರಸವನ್ನು ಹೊರಸೂಸುತ್ತವೆ. ಆ ನೇರಳೇಮರದ ಹಣ್ಣುಗಳ ರಸವು ಕ್ರಮೇಣ ನದಿಯಾಗಿ ಪರಿವರ್ತನ ಹೊಂದಿ ಮೇರುಪರ್ವತದ ಸುತ್ತಲೂ ಪ್ರದಕ್ಷಿಣಾಕಾರವಾಗಿ ಹರಿಯುತ್ತಾ ಕಡೆಗೆ ಉತ್ತರಕುರುಖಂಡದೊಳಕ್ಕೆ ಹರಿದುಹೋಗುತ್ತದೆ. ಮಹಾರಾಜ! ಆ ಜಂಬೂಫಲರಸವನ್ನು ಕುಡಿದಿದ್ದೇ ಆದರೆ ಅವರನ್ನು ಮುಪ್ಪು ಬಾಧಿಸುವುದಿಲ್ಲ. (ಸರ್ವಕಾಲದಲ್ಲಿಯೂ ಅವರು ಯುವಕರಾಗಿಯೇ ಇರುತ್ತಾರೆ.) ಆ ನೇರಳೇಹಣ್ಣಿನ ರಸವನ್ನು ಕುಡಿದವರಿಗೆ ಯಾವಾಗಲೂ

ಬಾಯಾರಿಕೆಯೇ ಆಗುವುದಿಲ್ಲ. ಜಂಬೂಫಲರಸವನ್ನು ಪಾನಮಾಡಿದವರ ಮನಸ್ಸು ಯಾವಾಗಲೂ ಶಾಂತವಾಗಿಯೂ ಪ್ರಸನ್ನವಾಗಿಯೂ ಇರುತ್ತದೆ. ಜಂಬೂನದಿಯಲ್ಲಿ ದೇವತೆಗಳ ಆಭರಣಯೋಗ್ಯವಾದ ಇಂದ್ರಗೋಪಮಣಿ ಸದೃಶವಾದ, ಜಾಂಬೂನದವೆಂಬ ಕಾಂತಿಯುಕ್ತವಾದ ಸುವರ್ಣವು ಸಿಕ್ಕು ತ್ತದೆ. ಜಂಬೂದ್ವೀಪದಲ್ಲಿ ಮಾನವರು ತರುಣಾದಿತ್ಯವರ್ಣದಿಂದ ಕೂಡಿ ಹುಟ್ಟುತ್ತಾರೆ. (ಅಲ್ಲಿಯ ಜನರು ಎಳೆಯ ಸೂರ್ಯನಂತೆ ಕಾಂತಿಯುಕ್ತ ರಾಗಿರುತ್ತಾರೆ.)

ಮಹಾರಾಜ! ಮಾಲ್ಯವತ್ಪರ್ವತದ ಶಿಖರದಲ್ಲಿ ಎಲ್ಲ ಕಾಲದಲ್ಲಿಯೂ ಯಜ್ಞೇಶ್ವರನು ಪ್ರಜ್ವಲಿಸುತ್ತಿರುತ್ತಾನೆ. ಕಾಲಾಗ್ನಿಯು ಸಂವರ್ತಕನೆಂಬ ಹೆಸರಿನಿಂದ ಅಲ್ಲಿರುತ್ತಾನೆ. ಮಾಲ್ಯವತ್ಪರ್ವತದ ಪೂರ್ವದಿಕ್ಕಿಗೆ ಅನೇಕ ಚಿಕ್ಕ-ಚಿಕ್ಕ ಪರ್ವತಗಳಿವೆ. ಮಾಲ್ಯವತ್ಪರ್ವತದ ವಿಸ್ತಾರವು ಹನ್ನೊಂದು ಸಾವಿರ ಯೋಜನಗಳಷ್ಟಿದೆ. ಅಲ್ಲಿಯ ಮಾನವರು ಸುವರ್ಣಸದೃಶರಾಗಿ (ಕಾಂತಿಮಂತರಾಗಿ) ಹುಟ್ಟುತ್ತಾರೆ. ಅಲ್ಲಿಯ ಮಾನವರೆಲ್ಲರೂ ಬ್ರಹ್ಮ ಲೋಕದಿಂದಲೇ ಚ್ಯುತರಾದವರು. ಅವರೆಲ್ಲರಲ್ಲಿಯೂ ಸಾಧುಭಾವವಿರು ತ್ತದೆ. ಅವರೆಲ್ಲರೂ ಊರ್ಧ್ವರೇತಸ್ಕರಾಗಿ ಬಹುತೀಕ್ಷ್ಣವಾದ ತಪಸ್ಸು ಮಾಡುತ್ತಾರೆ. ಪುನಃ ಅವರು ಪ್ರಾಣಿಗಳ ರಕ್ಷಣಾರ್ಥವಾಗಿ ಸೂರ್ಯ ಮಂಡಲವನ್ನು ಪ್ರವೇಶಿಸುತ್ತಾರೆ. (ಸೂರ್ಯನ ಸಮೀಪಕ್ಕೆ ಹೋಗುತ್ತಾರೆ.) ಇಂತಹ ಅರುವತ್ತಾರು ಸಾವಿರ ತಪಸ್ವಿಗಳು ಸೂರ್ಯನನ್ನು ಸುತ್ತುವರಿದು ಸೂರ್ಯಸಾರಥಿಯಾದ ಅರುಣನ ಮುಂಭಾಗದಲ್ಲಿ ಹೋಗುತ್ತಾರೆ. ಅರುವತ್ತಾರು ಸಾವಿರ ವರ್ಷಗಳ ಕಾಲ ಆ ತಪಸ್ವಿಗಳು ಸೂರ್ಯನ ತಾಪದಿಂದ ತಪ್ತರಾಗಿ ಅನಂತರ ಚಂದ್ರಮಂಡಲವನ್ನು ಪ್ರವೇಶಿಸುತ್ತಾರೆ.”

೭ನೆಯ ಅಧ್ಯಾಯವು ಮುಗಿಯಿತು.

೮ನೆಯ ಅಧ್ಯಾಯ ಜಮ್ಬೂಖಣ್ಡವಿನಿರ್ಮಾಣಪರ್ವ (ಮುಂದುವರಿದಿದೆ.)

## ರಮಣಕ, ಹಿರಣ್ಯಕ, ಶೃಂಗವತ್ಪರ್ವತಗಳ ವರ್ಣನೆ

ಧೃತರಾಷ್ಟ್ರನು ಸಂಜಯನೊಡನೆ ಹೇಳುತ್ತಾನೆ :

“ಸಂಜಯ! ಪುನಃ ನೀನು ನನಗೆ ವರ್ಷಗಳ (ಖಂಡಗಳ ) ಹೆಸರು

ಗಳು, ಪರ್ವತಗಳ ಹೆಸರುಗಳು, ಪರ್ವತಗಳಲ್ಲಿ ವಾಸಮಾಡುತ್ತಿರುವವರ ಸ್ಥಿತಿಗತಿಗಳು–ಇವೆಲ್ಲವನ್ನೂ ಯಥಾವತ್ತಾಗಿ ತಿಳಿಸು."

"ಮಹಾರಾಜ! ಶ್ವೇತಪರ್ವತದ ದಕ್ಷಿಣಕ್ಕೂ ನಿಷಧಪರ್ವತದ ಉತ್ತರಕ್ಕೂ ರಮಣಕಖಂಡವಿದೆ. ಅಲ್ಲಿ ಮಾನವರು ಜನ್ಮತಾಳಿದ್ದಾರೆ. ಅವರೆಲ್ಲರೂ ಸತ್ಕುಲಪ್ರಸೂತರಾಗಿರುತ್ತಾರೆ. ಪ್ರಿಯದರ್ಶನರಾಗಿರುತ್ತಾರೆ. ಅಲ್ಲಿ ಹುಟ್ಟುವ ಮನುಷ್ಯರೆಲ್ಲರೂ ಶತ್ರುರಹಿತರಾಗಿರುತ್ತಾರೆ. ರಮಣಕಖಂಡದ ಜನರು ನಿತ್ಯವೂ ಪ್ರಹೃಷ್ಟಮನಸ್ಕರಾಗಿಯೇ ಜೀವನ ನಡೆಸುತ್ತಿರುತ್ತಾರೆ. ಅವರ ಆಯುಃಪ್ರಮಾಣವು ಹನ್ನೊಂದುಸಾವಿರದ ಐದುನೂರು ವರ್ಷಗಳು.

ನೀಲಪರ್ವತದ ದಕ್ಷಿಣಕ್ಕೂ ನಿಷಧಪರ್ವತದ ಉತ್ತರಕ್ಕೂ ಹಿರಣ್ಮಯವೆಂಬ ಹೆಸರಿನ ಖಂಡವಿದೆ. ಅಲ್ಲಿ ಹೈರಣ್ವತೀ ಎಂಬ ನದಿಯು ಪ್ರವಹಿಸುತ್ತದೆ. ಹಿರಣ್ಮಯಖಂಡದಲ್ಲಿ ಪಕ್ಷಿರಾಜನಾದ, ವಿಹಗೋತ್ತಮನಾದ ಗರುಡನು ವಾಸವಾಗಿದ್ದಾನೆ. ಅಲ್ಲಿಯ ಜನರು ಯಕ್ಷನ ಅನುಯಾಯಿಗಳಾಗಿರುತ್ತಾರೆ. (ಯಕ್ಷರನ್ನು ಉಪಾಸನೆಮಾಡುತ್ತಾರೆ.) ಈ ಕಾರಣದಿಂದಲೇ ಅವರು ಧನಿಕರಾಗಿಯೂ, ಪ್ರಿಯದರ್ಶನರಾಗಿಯೂ, ಮಹಾಬಲರಾಗಿಯೂ, ಮುದಿತಮನಸ್ಕರಾಗಿಯೂ ಇರುತ್ತಾರೆ. ಧೃತರಾಷ್ಟ್ರ! ಹಿರಣ್ಮಯಖಂಡದ ಜನರ ಆಯುಃಪ್ರಮಾಣವು ಹನ್ನೆರಡು ಸಾವಿರದ ಐದುನೂರು ವರ್ಷಗಳು. ಮನುಜೇಶ್ವರ! ನಾನಿನ್ನು ನಿನಗೆ ಶೃಂಗವತ್ಪರ್ವತದ ವಿಷಯವನ್ನು ತಿಳಿಸುತ್ತೇನೆ: ಶೃಂಗವತ್ಪರ್ವತದಲ್ಲಿ ವಿಚಿತ್ರವಾದ ಮೂರೇ ಮೂರು ಶೃಂಗಗಳಿವೆ. ಅದರಲ್ಲೊಂದು ಮಣಿಮಯಶೃಂಗ. ಮತ್ತೊಂದು ಪರಮಾದ್ಭುತವಾದ ಸುವರ್ಣಶೃಂಗ. ಇನ್ನೊಂದು ಅನೇಕಭವನಗಳಿಂದ ಸುಶೋಭಿತವಾದ ಸರ್ವರತ್ನಮಯಶೃಂಗ. ಆ ಶೃಂಗವತ್ಪರ್ವತದಲ್ಲಿಯೇ ಸ್ವಯಂಪ್ರಭೆಯಾದ (ಪ್ರಭಾಯುಕ್ತಳಾಗಿರುವ) ಶಾಣ್ಡಿಲೀದೇವಿಯು ಶಾಶ್ವತವಾಗಿ ನೆಲೆಸಿದ್ದಾಳೆ. ಶೃಂಗವತ್ಪರ್ವತದ ಉತ್ತರಭಾಗದಲ್ಲಿ ಐರಾವತವೆಂಬ ಹೆಸರಿನ ಖಂಡವಿದೆ. ಆ ಐರಾವತಖಂಡವು ಪೂರ್ವೋಕ್ತವಾದ ಖಂಡಗಳೆಲ್ಲಕ್ಕಿಂತಲೂ ಶ್ರೇಷ್ಠವಾಗಿದೆ. ಆ ಖಂಡದಲ್ಲಿ ಸೂರ್ಯನು ಮಾನವರಿಗೆ ತಾಪವನ್ನುಂಟುಮಾಡುವುದಿಲ್ಲ ಮತ್ತು ಮನುಷ್ಯರು ವೃದ್ಧರಾಗುವುದಿಲ್ಲ. ಆ ಐರಾವತದ್ವೀಪದಲ್ಲಿ ನಕ್ಷತ್ರಯುಕ್ತನಾದ ಚಂದ್ರನು ಜ್ಯೋತಿಸ್ಸ್ವರೂಪನಾಗಿ ಸರ್ವತ್ರ ವ್ಯಾಪ್ತನಾಗಿರು

ತ್ತಾನೆ. ಅಲ್ಲಿರತಕ್ಕ ಮಾನವರು ಕಮಲಪ್ರಭೆಯುಳ್ಳವರಾಗಿಯೂ, ಕಮಲದ ಬಣ್ಣವುಳ್ಳವರಾಗಿಯೂ, ಪದ್ಮಪತ್ರಕ್ಕೆ (ಪದ್ಮದಳಕ್ಕೆ) ಸದೃಶವಾದ ಕಣ್ಣುಗಳುಳ್ಳವರಾಗಿಯೂ ಇರುತ್ತಾರೆ. ಕಮಲಪುಷ್ಪಗಂಧಯುಕ್ತರಾಗಿಯೇ ಅಲ್ಲಿಯ ಮನುಷ್ಯರು ಹುಟ್ಟುತ್ತಾರೆ. ಅವರ ಶರೀರಗಳು ಬೆವರುವುದಿಲ್ಲ. ಅವರಿಗೆ ಸುಗಂಧವು ಬಹುಪ್ರಿಯವಾಗಿರುತ್ತದೆ. ಅವರು ನಿರಾಹಾರಿಗಳಾಗಿರುತ್ತಾರೆ. (ಹಸಿವು-ಬಾಯಾರಿಕೆಗಳಿಂದ ವಿವರ್ಜಿತರಾಗಿರುತ್ತಾರೆ.) ಜಿತೇಂದ್ರಿಯರಾಗಿರುತ್ತಾರೆ. ರಜೋಗುಣವರ್ಜಿತರಾದ ಅವರೆಲ್ಲರೂ ದೇವಲೋಕದಿಂದ ಚ್ಯುತರಾದವರು. ಭರತಸತ್ತಮ! ಆ ಐರಾವತಖಂಡದ ಮಾನವರ ಆಯುಃಪ್ರಮಾಣವು ಹದಿಮೂರು ಸಾವಿರ ವರ್ಷಗಳು.

**ಕ್ಷೀರೋದಸ್ಯ ಸಮುದ್ರಸ್ಯ ತಥೈವೋತ್ತರತಃ ಪ್ರಭುಃ ।**
**ಹರಿರ್ವಸತಿ ವೈಕುಣ್ಠಃ ಶಕಟೇ ಕನಕಾಮಯೇ ॥೧೫॥**

**ಅಷ್ಟಚಕ್ರಂ ಹಿ ತದ್ಯಾನಂ ಭೂತಯುಕ್ತಂ ಮನೋಜವಮ್ ।**
**ಅಗ್ನಿವರ್ಣಂ ಮಹಾತೇಜೋ ಜಾಮ್ಬೂನದವಿಭೂಷಿತಮ್ ॥೧೬॥**

ಕ್ಷೀರಸಮುದ್ರದ ಉತ್ತರತೀರದಲ್ಲಿ ಹರಿಯೂ, ವೈಕುಂಠನೂ ಆದ ಮಹಾವಿಷ್ಣುವು ಸುವರ್ಣಮಯವಾದ ರಥದಲ್ಲಿ ವಾಸಮಾಡುತ್ತಿದ್ದಾನೆ. ಅವನು ಕುಳಿತಿರುವ ರಥಕ್ಕೆ ಎಂಟು ಚಕ್ರಗಳಿವೆ. ಆ ರಥವು ಮನೋವೇಗಕ್ಕೆ ಸಮಾನವಾದ ವೇಗದಿಂದ ಕೂಡಿದೆ. ಆ ರಥವು ಸಮಸ್ತಭೂತಗಳಿಂದಲೂ (ಪ್ರಾಣಿಗಳಿಂದಲೂ) ಯುಕ್ತವಾಗಿದ್ದು ಅಗ್ನಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದಾಗಿದೆ. ಮಹಾತೇಜಃಪುಂಜಯುಕ್ತವಾಗಿದ್ದು ಜಾಂಬೂನದವೆಂಬ ಸುವರ್ಣದಿಂದ ವಿಭೂಷಿತವಾಗಿದೆ. (ಈ ಶ್ಲೋಕಗಳಿಗೆ ವ್ಯಾಖ್ಯಾನಕಾರರು ಆಧ್ಯಾತ್ಮಿಕಪರವಾದ ಅರ್ಥಮಾಡಿದ್ದಾರೆ. ಇದನ್ನು ಯಜುರಾರಣ್ಯಕದಲ್ಲಿ ಬರುವ **'ಅಷ್ಟಾಚಕ್ರಾ ನವದ್ವಾರಾ । ದೇವಾನಾಂ ಪೂರಯೋಧ್ಯಾ । ತಸ್ಯಾಗ್ಂ ಹಿರಣ್ಮಯಃ ಕೋಶಃ । ಸ್ವರ್ಗೋ ಲೋಕೋ ಜ್ಯೋತಿಷಾವೃತಃ'** ಎಂಬ ಮಂತ್ರಕ್ಕೆ ಸಮನ್ವಯಮಾಡಬಹುದಾಗಿದೆ. ನಮ್ಮ ಶರೀರವು ಎಂಟು ಚಕ್ರಗಳುಳ್ಳದ್ದಾಗಿದೆ. ಅಷ್ಟಚಕ್ರಯುಕ್ತವಾದ ರಥ

ದಲ್ಲಿ ಹಿರಣ್ಮಯಕೋಶವಿದೆ. ಅದು ಜ್ಯೋತಿಯಿಂದ ವ್ಯಾಪ್ತವಾಗಿದೆ. ಆ ಹಿರಣ್ಮಯಕೋಶದಲ್ಲಿ ಅಥವಾ ಸುವರ್ಣರಥದಲ್ಲಿ ಹರಿಯಿದ್ದಾನೆ.)

**ಸ ಪ್ರಭುಃ ಸರ್ವಭೂತಾನಾಂ ವಿಭುಶ್ಚ ಭರತರ್ಷಭ ।**
**ಸಂಕ್ಷೇಪೋ ವಿಸ್ತರಶ್ಚೈವ ಕರ್ತಾ ಕಾರಯಿತಾ ತಥಾ ॥೧೭॥**

ಅಷ್ಟಚಕ್ರಯುಕ್ತವಾದ ಹಿರಣ್ಮಯರಥದಲ್ಲಿ ಯಾವನಿದ್ದಾನೆಯೋ ಅವನೇ ಸರ್ವಪ್ರಾಣಿಗಳಿಗೂ ಪ್ರಭುವು. (ಪ್ರಾಣಿಗಳ ನಿಯಂತೃವು.) ಅವನೇ ವಿಭುವೂ ಆಗಿದ್ದಾನೆ. (ಸರ್ವವ್ಯಾಪಕನೂ ಆಗಿದ್ದಾನೆ.) ಅರ್ಥಾತ್ ಸರ್ವ ಪ್ರಾಣಿಗಳಲ್ಲಿಯೂ ಅವನೇ ಇದ್ದಾನೆ. ಸರ್ವಭೂತಗಳನ್ನು ನಿಯಂತ್ರಿಸು ವವನೂ ಅವನೇ ಆಗಿದ್ದಾನೆ. ವೈಕುಂಠನಾಮಕನಾದ ಹರಿಯು ಸೂಕ್ಷ್ಮಾತ್ ಸೂಕ್ಷ್ಮನೂ ಆಗಿದ್ದಾನೆ ; ಮಹತೋಮಹೀಯನೂ ಆಗಿದ್ದಾನೆ. ಕಾರ್ಯ ಮಾಡುವವನೂ ಆಗಿದ್ದಾನೆ ; ಮಾಡಿಸುವವನೂ ಆಗಿದ್ದಾನೆ. (ವ್ಯಾಖ್ಯಾನ ಕಾರರು ಸಂಕ್ಷೇಪವೆಂಬುದಕ್ಕೆ ಸಂಹಾರಕನೆಂದೂ, ವಿಸ್ತರ ಎಂಬುದಕ್ಕೆ ಸಮ್ಯಗ್ವಿರಚಿಸುವವನೆಂದೂ ಅರ್ಥಮಾಡಿರುತ್ತಾರೆ. ಜೀವರೂಪದಲ್ಲಿ ಕರ್ತೃವೂ ಈಶ್ವರರೂಪದಲ್ಲಿ ಕಾರ್ಯಮಾಡಿಸುವವನೂ ಆಗುತ್ತಾನೆ– ಎಂಬುದಾಗಿ **ಕರ್ತಾಕಾರಯಿತಾ** ಎಂಬುದಕ್ಕೆ ಅರ್ಥಮಾಡಿರುತ್ತಾರೆ.)

**ಪೃಥಿವ್ಯಾಪಸ್ತಥಾಕಾಶಂ ವಾಯುಸ್ತೇಜಶ್ಚ ಪಾರ್ಥಿವ ।**
**ಸ ಯಜ್ಞಃ ಸರ್ವಭೂತಾನಾಮಾಸ್ಯಂ ತಸ್ಯ ಹುತಾಶನಃ ॥೧೮॥**

ಪೃಥಿವೀ, ಜಲ, ಆಕಾಶ, ವಾಯು, ತೇಜಸ್ಸು–ಈ ಪಂಚಭೂತಗಳೂ ಅವನೇ ಆಗಿದ್ದಾನೆ. ಸರ್ವಪ್ರಾಣಿಗಳಿಗೂ ಅವನು ಯಜ್ಞಸ್ವರೂಪನಾಗಿದ್ದಾನೆ. ಯಜ್ಞೇಶ್ವರನೇ ಅವನ ಮುಖವಾಗಿದ್ದಾನೆ. (ಅಗ್ನಿಮುಖಾ ವೈ ದೇವಾಃ – ದೇವತೆಗಳೆಲ್ಲರಿಗೂ ಅಗ್ನಿಮುಖರೆಂದೇ ಅನ್ವರ್ಥಾಭಿಧಾನವಿದೆ.)

ಜನಮೇಜಯ! ಸಂಜಯನು ಐರಾವತವರ್ಷದ ವರ್ಣನೆಯನ್ನು ಮುಗಿಸಿದನಂತರ ಮಹಾತ್ಮನಾದ ಧೃತರಾಷ್ಟ್ರನು ತನ್ನ ಮಕ್ಕಳನ್ನು ಕುರಿತು ಚಿಂತಿಸತೊಡಗಿದನು. (ಈ ಹಿಂದಿನ ಶ್ಲೋಕದಲ್ಲಿಯೇ ಸಂಜಯನು ಭಗ ವಂತನ ಮಹತ್ತ್ವವನ್ನು ಹೇಳಿದ್ದರೂ ಸಹ ಧೃತರಾಷ್ಟ್ರನ ಮನಸ್ಸು ಭಗವಂತನಲ್ಲಿ ಲೀನವಾಗದೇ ತನ್ನ ಪುತ್ರರ ವಿಷಯವನ್ನೇ ಚಿಂತಿಸತೊಡಗಿತು.)

ಧೃತರಾಷ್ಟ್ರನು ಸ್ವಲ್ಪಕಾಲದವರೆಗೆ ಚಿಂತಿಸುತ್ತಿದ್ದು ಪುನಃ ಸಂಜಯನೊಡನೆ ಹೇಳಿದನು :

**ಅಸಂಶಯಂ ಸೂತಪುತ್ರ ಕಾಲಃ ಸಂಕ್ಷಿಪತೇ ಜಗತ್ ।**
**ಸೃಜತೇ ಚ ಪುನಃ ಸರ್ವಂ ವಿದ್ಯತೇ ನೇಹ ಶಾಶ್ವತಮ್ ॥೨೧॥**

**ನರೋ ನಾರಾಯಣಶ್ಚೈವ ಸರ್ವಜ್ಞಃ ಸರ್ವಭೂತಹೃತ್ ।**
**ದೇವಾ ವೈಕುಣ್ಠಮಿತ್ಯಾಹುರ್ನರಾ ವಿಷ್ಣುಮಿತಿ ಪ್ರಭುಮ್ ॥೨೨॥**

"ಸೂತಪುತ್ರ ಸಂಜಯ! ಕಾಲವು ಜಗತ್ತನ್ನು ಸಂಕ್ಷೇಪಗೊಳಿಸುತ್ತದೆ ಯೆಂಬುದರಲ್ಲಿ (ಸಂಹಾರಮಾಡುತ್ತದೆಯೆಂಬುದರಲ್ಲಿ) ಸಂಶಯವೇ ಇಲ್ಲ. ಜಗತ್ತನ್ನು ಸಂಹಾರಮಾಡಿದ ಆ ಕಾಲವೇ ಪುನಃ ಅದೇ ಜಗತ್ತನ್ನೇ ಯಥಾ ಪೂರ್ವವಾಗಿ ಸೃಷ್ಟಿಸುತ್ತದೆ. ಆದುದರಿಂದ ಶಾಶ್ವತವಾಗಿ ಉಳಿಯತಕ್ಕದ್ದು ಈ ಜಗತ್ತಿನಲ್ಲಿ ಯಾವುದೂ ಇರುವುದಿಲ್ಲ.

ನರನೇ ನಾರಾಯಣ, ಅವನೇ ಸರ್ವಜ್ಞ. ಸಕಲಪ್ರಾಣಿಗಳನ್ನೂ ಸಂಹರಿಸುವವನೂ ಅವನೇ ಆಗಿದ್ದಾನೆ. ಆ ನಾರಾಯಣನನ್ನೇ ದೇವತೆಗಳು ವೈಕುಂಠನೆನ್ನುತ್ತಾರೆ. ಮನುಷ್ಯರು ಅವನನ್ನು ಸರ್ವಲೋಕಪ್ರಭುವಾದ ಸರ್ವವ್ಯಾಪಿಯಾದ ವಿಷ್ಣುವೆನ್ನುತ್ತಾರೆ."

ಲನೆಯ ಅಧ್ಯಾಯವು ಮುಗಿಯಿತು.

೯ನೆಯ ಅಧ್ಯಾಯ ಜಮ್ಬೂಖಣ್ಡವಿನಿರ್ಮಾಣಪರ್ವ (ಮುಂದುವರಿದಿದೆ.)

## ಭಾರತವರ್ಷದ ನದಿಗಳ, ದೇಶಗಳ ಮತ್ತು ಜನಪದಗಳ ನಾಮಧೇಯಗಳು ಮತ್ತು ಭೂಮಿಯ ಮಹತ್ತ್ವ

ಧೃತರಾಷ್ಟ್ರನು ಮುಂದುವರಿದು ಹೇಳುತ್ತಾನೆ :

**ಯದಿದಂ ಭಾರತಂ ವರ್ಷಂ ಯತ್ರೇದಂ ಮೂರ್ಛಿತಂ ಬಲಮ್ ।**
**ಯತ್ರಾತಿಮಾತ್ರಲುಬ್ಧೋಽಯಂ ಪುತ್ರೋ ದುರ್ಯೋಧನೋ ಮಮ ॥೧॥**
**ಯತ್ರ ಗೃದ್ಧಾಃ ಪಾಣ್ಡುಪುತ್ರಾ ಯತ್ರ ಮೇ ಸಜ್ಜತೇ ಮನಃ ।**
**ಏತನ್ಮೇ ತತ್ತ್ವಮಾಚಕ್ಷ್ವ ತ್ವಂ ಹಿ ಮೇ ಬುದ್ಧಿಮಾನ್ಮತಃ ॥೨॥**

"ಸಂಜಯ! ಯಾವ ಭೂಪ್ರದೇಶವು ಭಾರತವರ್ಷ ಅಥವಾ ಭರತ

ಖಂಡವೆಂಬ ಹೆಸರಿನಿಂದ ವಿಖ್ಯಾತವಾಗಿದೆಯೋ, ಎಲ್ಲಿ ಸಮಸ್ತರಾಜರ ವಿಶಾಲವಾಹಿನಿಯು ಯುದ್ಧಮಾಡುವ ಸಲುವಾಗಿ ಏಕತ್ರ ಮಿಲಿತವಾಗಿದೆಯೋ, ಯಾವುದಕ್ಕಾಗಿ ನನ್ನ ಮಗನಾದ ದುರ್ಯೋಧನನು ಅತಿಲುಬ್ಧನಂತೆ ವರ್ತಿಸುತ್ತಿದ್ದಾನೆಯೋ, ಯಾವುದನ್ನು ಪಡೆದುಕೊಳ್ಳಬೇಕೆಂದು ಪಾಂಡುಪುತ್ರರೂ ಸಹ ಅತ್ಯಾಶೆಯಿಂದಿರುತ್ತಾರೆಯೋ ಮತ್ತು ಯಾವುದರ ವಿಷಯದಲ್ಲಿ ನನ್ನ ಮನಸ್ಸೂ ಸಹ ಆಸಕ್ತವಾಗಿರುವುದೋ–ಅಂತಹ ಮಹತ್ತ್ವಪೂರ್ಣವಾದ ಭರತಖಂಡದ ವಿಷಯವನ್ನು ಯಥಾವತ್ತಾಗಿ ಹೇಳು. ಈ ವಿಷಯವನ್ನು ಹೇಳಲು ನೀನೇ ಬುದ್ಧಿಶಾಲಿಯೆಂದು ನನ್ನ ಅಭಿಮತವಾಗಿದೆ. (ಬುದ್ಧಿವಂತನಾದ ನೀನು ಮಾತ್ರವೇ ಈ ಎಲ್ಲ ವಿಷಯಗಳನ್ನೂ ಯಥಾವತ್ತಾಗಿ ಹೇಳಬಲ್ಲೆಯೆಂದು ನಾನು ಭಾವಿಸಿದ್ದೇನೆ.)"

**(ಗೃದ್ಧಾಃ ಪಾಂಡುಪುತ್ರಾಃ ಪಾಂಡುಪುತ್ರರಿಗೆ ಭೂಮಿಯ ವಿಷಯದಲ್ಲಿ ಅತ್ಯಾಶೆಯಿದೆ–ಎಂಬ ಧೃತರಾಷ್ಟ್ರನ ಮಾತು ಸಂಜಯನಿಗೆ ಅಷ್ಟಾಗಿ ಹಿಡಿಸಲಿಲ್ಲ. ಧೃತರಾಷ್ಟ್ರನ ಆ ಮಾತನ್ನು ಕೇಳಿದೊಡನೆಯೇ ಸಂಜಯನು ಅವನ ಮಾತನ್ನು ಅಲ್ಲಗಳೆದು ಹೇಳುತ್ತಾನೆ.)**

**ನ ತತ್ರ ಪಾಣ್ಡವಾ ಗೃದ್ಧಾಃ ಶೃಣು ರಾಜನ್ವಚೋ ಮಮ ।**
**ಗೃದ್ಧೋ ದುರ್ಯೋಧನಸ್ತತ್ರ ಶಕುನಿಶ್ಚಾಪಿ ಸೌಬಲಃ ॥೩॥**

**ಅಪರೇ ಕ್ಷತ್ರಿಯಾಶ್ಚೈವ ನಾನಾಜನಪದೇಶ್ವರಾಃ ।**
**ಯೇ ಗೃದ್ಧಾ ಭಾರತೇ ವರ್ಷೇ ನ ಮೃಷ್ಯನ್ತಿ ಪರಸ್ಪರಮ್ ॥೪॥**

"ಮಹಾರಾಜ! ನನ್ನ ಮಾತನ್ನು ಕೇಳು. ಪಾಂಡವರು ಆಶೆಬಡುಕರಲ್ಲ. ಅವರಿಗೆ ರಾಜ್ಯಲೋಭವಿಲ್ಲ. ದುರ್ಯೋಧನ ಮತ್ತು ಸುಬಲನ ಮಗನಾದ ಶಕುನಿ–ಇವರೇ ಆಶೆಬಡುಕರು. ರಾಜ್ಯಲೋಭಿಗಳು. ನಾನಾದೇಶಗಳಿಗೆ ಒಡೆಯರಾಗಿರತಕ್ಕ ಇತರ ಕ್ಷತ್ರಿಯರೂ ಸಹ ಈ ಭಾರತವರ್ಷದ ವಿಷಯದಲ್ಲಿ ಅತ್ಯಾಶೆಯುಳ್ಳವರಾಗಿರುತ್ತಾರೆ. ಆದುದರಿಂದಲೇ ಇತರರ ಉತ್ಕರ್ಷವನ್ನು (ಮೇಲ್ಮೆಯನ್ನು ) ಸಹಿಸಿಕೊಳ್ಳತಕ್ಕವರಾಗಿಲ್ಲ.

ಭಾರತ! ಈಗ ನಾನು ನಿನಗೆ ಇಂದ್ರನಿಗೂ, ವೈವಸ್ವತಮನುವಿಗೂ ಅತ್ಯಂತಪ್ರಿಯವಾಗಿರುವ ಭಾರತವರ್ಷದ ಅಥವಾ ಭರತಖಂಡದ ವರ್ಣನೆ

ಯನ್ನು ಮಾಡುತ್ತೇನೆ. ದುರ್ಧರ್ಷ! ಈ ಭಾರತವರ್ಷವು ಕೇವಲ ಇಂದ್ರನಿಗೆ ಮತ್ತು ವೈವಸ್ವತಮನುವಿಗೆ ಮಾತ್ರವೇ ಪ್ರಿಯವಾದುದೆಂದು ತಿಳಿಯಬೇಡ. ವೇನಪುತ್ರನಾದ ಪೃಥು, ಮಹಾತ್ಮನಾದ ಇಕ್ಷ್ವಾಕು, ಯಯಾತಿ, ಅಂಬರೀಷ, ಮಾಂಧಾತಾ, ನಹುಷ, ಮುಚುಕುಂದ, ಉಶೀನರರ ಮಗನಾದ ಶಿಬಿ, ಋಷಭ, ಇಲಾ ಎಂಬ ರಾಜನ ಮಗನಾದ ಪುರೂರವ, ನೃಗ, ಕುಶಿಕ, ಮಹಾತ್ಮನಾದ ಗಾಧಿ, ಸೋಮಕ, ದಿಲೀಪ–ಇವರೆಲ್ಲರಿಗೂ ಈ ಭಾರತವರ್ಷವೂ ಬಹುಪ್ರಿಯವಾಗಿದ್ದಿತು. ಇವರೇ ಅಲ್ಲದೇ ಇನ್ನೂ ಅನೇಕ ಕ್ಷತ್ರಿಯರಾಜರು ಈ ಭಾರತವರ್ಷವನ್ನು ಬಹುವಾಗಿ ಪ್ರೀತಿಸುತ್ತಿದ್ದರು.

ಅರಿಂದಮನೇ! ನೀನು ಭಾರತವರ್ಷದ ವಿಷಯವಾಗಿ ಕೇಳಿರುವೆ. ನಾನೂ ಸಹ ನಿನ್ನ ಅಪೇಕ್ಷೆಯಂತೆ ಭಾರತವರ್ಷದ ವಿಷಯವನ್ನು ಯಥಾವತ್ತಾಗಿ ಹೇಳುತ್ತೇನೆ. ಏಕಾಗ್ರಚಿತ್ತನಾಗಿ ಕೇಳು :

**ಮಹೇನ್ದ್ರೋ ಮಲಯಃ ಸಹ್ಯಃ ಶುಕ್ತಿಮಾನೃಕ್ಷವಾನಪಿ ।**
**ವಿನ್ಧ್ಯಶ್ಚ ಪಾರಿಯಾತ್ರಶ್ಚ ಸಪ್ತೈತೇ ಕುಲಪರ್ವತಾಃ ॥೧೧॥**

ಈ ಭಾರತವರ್ಷದಲ್ಲಿ ಮಹೇಂದ್ರ, ಮಲಯ, ಸಹ್ಯ, ಶುಕ್ತಿಮಂತ, ಋಕ್ಷವಂತ, ವಿಂಧ್ಯ ಮತ್ತು ಪಾರಿಯಾತ್ರ–ಎಂಬ ಏಳು ಕುಲಪರ್ವತಗಳಿವೆ. ಅವುಗಳ ಸಮೀಪದಲ್ಲಿ ಹೆಸರಿಲ್ಲದ ಸಾವಿರಾರು ಪರ್ವತಗಳೂ ಇವೆ. ಆ ಅವಿಜ್ಞಾತಪರ್ವತಗಳೂ ವಿಸ್ತಾರವಾಗಿವೆ. ರತ್ನವೇ ಮೊದಲಾದ ಸಾರವಸ್ತುಗಳಿಂದ ಕೂಡಿವೆ. ವಿಚಿತ್ರಶಿಖರಗಳಿಂದ ಸುಶೋಭಿತವಾಗಿವೆ. ಅವುಗಳಲ್ಲದೇ ಇನ್ನೂ ಅನೇಕ ಅಪರಿಚಿತವಾದ ಚಿಕ್ಕ ಚಿಕ್ಕ ಪರ್ವತಗಳಿವೆ. (ಬೆಟ್ಟ-ಗುಡ್ಡಗಳಿವೆ.) ಅವುಗಳೂ ಸಹ ಚಿಕ್ಕ ಚಿಕ್ಕ ಪ್ರಾಣಿಗಳ ಜೀವನನಿರ್ವಹಣೆಗೆ ಆಶ್ರಯಭೂತವಾಗಿವೆ. ಈ ಭಾರತವರ್ಷದಲ್ಲಿ **ಆರ್ಯಾ ಮ್ಲೇಚ್ಛಾಶ್ಚ ಕೌರವ್ಯ ತೈರ್ಮಿಶ್ರಾಃ ಪುರುಷಾ ವಿಭೋ ।** ಆರ್ಯರಿದ್ದಾರೆ, ಮ್ಲೇಚ್ಛರಿದ್ದಾರೆ. ಅವರಿಬ್ಬರ ಸಂಪರ್ಕದಿಂದ ಹುಟ್ಟಿದ ಸಂಕರಜಾತಿಯವರೂ ಇದ್ದಾರೆ. ಅವರೆಲ್ಲರೂ ಭಾರತವರ್ಷದಲ್ಲಿರುವ ವಿಶಾಲವಾದ ನದಿಗಳ ನೀರನ್ನು ಕುಡಿಯುತ್ತಾರೆ. ಆರ್ಯ, ಮ್ಲೇಚ್ಛ ಮತ್ತು ಮಿಶ್ರಜಾತಿಯ ಜನರು ಯಾವ ಯಾವ ನದಿಗಳ ನೀರನ್ನು ಕುಡಿಯುತ್ತಾರೆಂಬುದನ್ನು ಹೇಳುವೆನು, ಕೇಳು ಮಹಾರಾಜ!

ನದೀಂ ಪಿಬನ್ತಿ ವಿಪುಲಾಂ ಗಙ್ಗಾಂ ಸಿನ್ಧುಂ ಸರಸ್ವತಿಮ್ ।
ಗೋದಾವರೀಂ ನರ್ಮದಾಂ ಚ ಬಾಹುದಾಂ ಚ ಮಹಾನದೀಮ್ ॥೧೪॥

ಶತದ್ರೂಂ ಚನ್ದ್ರಭಾಗಾಂ ಚ ಯಮುನಾಂ ಚ ಮಹಾನದೀಮ್ ।
ದೃಷದ್ವತೀಂ ವಿಪಾಶಾಂ ಚ ವಿಪಾಪಾಂ ಸ್ಥೂಲವಾಲುಕಾಮ್ ॥೧೫॥

ನದೀಂ ವೇತ್ರವತೀಂ ಚೈವ ಕೃಷ್ಣವೇಣಾಂ ಚ ನಿಮ್ನಗಾಮ್ ।
ಇರಾವತೀಂ ವಿತಸ್ತಾಂ ಚ ಪಯೋಷ್ಣೀಂ ದೇವಿಕಾಮಪಿ ॥೧೬॥

ವೇದಸ್ಮೃತಾಂ ವೇದವತೀಂ ತ್ರಿದಿವಾಮಿಕ್ಷುಲಾಂ ಕೃಮಿಮ್ ।
ಕರೀಷಿಣೀಂ ಚಿತ್ರವಾಹಾಂ ಚಿತ್ರಸೇನಾಂ ಚ ನಿಮ್ನಗಾಮ್ ॥೧೭॥

ಗೋಮತೀಂ ಧೂತಪಾಪಾಂ ಚ ವನ್ದನಾಂ ಚ ಮಹಾನದೀಮ್ ।
ಕೌಶಿಕೀಂ ತ್ರಿದಿವಾಂ ಕೃತ್ಯಾಂ ನಿಚಿತಾಂ ಲೋಹಿತಾರಣೀಮ್ ॥೧೮॥

ರಹಸ್ಯಾಂ ಶತಕುಮ್ಭಾಂ ಚ ಸರಯೂಂ ಚ ತಥೈವ ಚ ।
ಚರ್ಮಣ್ವತೀಂ ವೇತ್ರವತೀಂ ಹಸ್ತಿಸೋಮಾಂ ದಿಶಂ ತಥಾ ॥೧೯॥

ಶರಾವತೀಂ ಪಯೋಷ್ಣೀಂ ಚ ವೇಣಾಂ ಭೀಮರಥೀಮಪಿ ।
ಕಾವೇರೀಂ ಚುಲುಕಾಂ ಚಾಪಿ ವಾಣೀಂ ಶತಬಲಾಮಪಿ ॥೨೦॥

ನೀವಾರಾಮಹಿತಾಂ ಚಾಪಿ ಸುಪ್ರಯೋಗಾಂ ಜನಾಧಿಪ ।
ಪವಿತ್ರಾಂ ಕುಣ್ಡಲೀಂ ಸಿನ್ಧುಂ ರಜನೀಂ ಪುರಮಾಲಿನೀಮ್ ॥೨೧॥

ಪೂರ್ವಾಭಿರಾಮಾಂ ವೀರಾಂ ಚ ಭೀಮಾಮೋಘವತೀಂ ತಥಾ ।
ಪಾಶಾಶಿನೀಂ ಪಾಪಹರಾಂ ಮಹೇನ್ದ್ರಾಂ ಪಾಟಲಾವತೀಮ್ ॥೨೨॥

ಕರೀಷಿಣೀಮಸಿಕ್ನೀಂ ಚ ಕುಶಚೀರಾಂ ಮಹಾನದೀಮ್ ।
ಮಕರೀಂ ಪ್ರವರಾಂ ಮೇನಾಂ ಹೇಮಾಂ ಘೃತವತೀಂ ತಥಾ ॥೨೩॥

ಪುರಾವತೀಮನುಷ್ಣಾಂ ಚ ಶೈಬ್ಯಾಂ ಕಾಪೀಂ ಚ ಭಾರತ ।
ಸದಾನೀರಾಮಧೃಷ್ಯಾಂ ಚ ಕುಶಧಾರಾಂ ಮಹಾನದೀಮ್ ॥೨೪॥

ಸದಾಕಾನ್ತಾಂ ಶಿವಾಂ ಚೈವ ತಥಾ ವೀರಮತೀಮಪಿ ।
ವಸ್ತ್ರಾಂ ಸುವಸ್ತ್ರಾಂ ಗೌರೀಂ ಚ ಕಮ್ಪನಾಂ ಸಹಿರಣ್ವತೀಮ್ ॥೨೫॥

ವರಾಂ ವೀರಕರಾಂ ಚಾಪಿ ಪಞ್ಚಮೀಂ ಚ ಮಹಾನದೀಮ್ ।
ರಥಚಿತ್ರಾಂ ಜ್ಯೋತಿರಥಾಂ ವಿಶ್ವಾಮಿತ್ರಾಂ ಕಪಿಞ್ಜಲಾಮ್ ॥೨೬॥

ಉಪೇನ್ದ್ರಾಂ ಬಹುಲಾಂ ಚೈವ ಕುವೀರಾಮಮ್ಬುವಾಹಿನೀಮ್ ।
ವಿನದೀಂ ಪಿಞ್ಜಲಾಂ ವೇಣಾಂ ತುಙ್ಗವೇಣಾಂ ಮಹಾನದೀಮ್ ॥೨೭॥

ವಿದಿಶಾಂ ಕೃಷ್ಣವೇಣಾಂ ಚ ತಾಮ್ರಾಂ ಚ ಕಪಿಲಾಮಪಿ ।
ಖಲುಂ ಸುವಾಮಾಂ ವೇದಾಶ್ವಾಂ ಹರಿಶ್ರಾವಾಂ ಮಹಾಪಗಾಮ್ ॥೨೮॥

ಶೀಘ್ರಾಂ ಚ ಪಿಚ್ಛಿಲಾಂ ಚೈವ ಭಾರದ್ವಾಜೀಂ ಚ ನಿಮ್ನಗಾಮ್ ।
ಕೌಶಿಕೀಂ ನಿಮ್ನಗಾಂ ಶೋಣಾಂ ಬಾಹುದಾಮಥ ಚನ್ದ್ರಮಾಮ್ ॥೨೯॥

ದುರ್ಗಾಂ ಚಿತ್ರಶಿಲಾಂ ಚೈವ ಬ್ರಹ್ಮವೇಧ್ಯಾಂ ಬೃಹದ್ವತೀಮ್ ।
ಯವಕ್ಷಾಮಥ ರೋಹೀಂ ಚ ತಥಾ ಜಾಮ್ಬೂನದೀಮಪಿ ॥೩೦॥

ಸುನಸಾಂ ತಮಸಾಂ ದಾಸೀಂ ವಸಾಮನ್ಯಾಂ ವರಾಣಸೀಮ್ ।
ನೀಲಾಂ ಘೃತವತೀಂ ಚೈವ ಪರ್ಣಾಶಾಂ ಚ ಮಹಾನದೀಮ್ ॥೩೧॥

ಮಾನವೀಂ ವೃಷಭಾಂ ಚೈವ ಬ್ರಹ್ಮಮೇಧ್ಯಾಂ ಬೃಹದ್ಧನಿಮ್ ।
ಏತಾಶ್ಚಾನ್ಯಾಶ್ಚ ಬಹುಧಾ ಮಹಾನದ್ಯೋ ಜನಾಧಿಪ ॥೩೨॥
ಸದಾ ನಿರಾಮಯಾಂ ಕೃಷ್ಣಾಂ ಮನ್ದಗಾಂ ಮನ್ದವಾಹಿನೀಮ್ ।
ಬ್ರಾಹ್ಮಣೀಂ ಚ ಮಹಾಗೌರೀಂ ದುರ್ಗಾಮಪಿ ಚ ಭಾರತ ॥೩೩॥

ಚಿತ್ರೋಪಲಾಂ ಚಿತ್ರರಥಾಂ ಮಞ್ಜುಲಾಂ ವಾಹಿನೀಂ ತಥಾ ।
ಮನ್ದಾಕಿನೀಂ ವೈತರಣೀಂ ಕೋಷಾಂ ಚಾಪಿ ಮಹಾನದೀಮ್ ॥೩೪॥

ಶುಕ್ತಿಮತೀಮನಙ್ಗಾಂ ಚ ತಥೈವ ವೃಷಸಾಹ್ವಯಾಮ್ ।
ಲೋಹಿತ್ಯಾಂ ಕರತೋಯಾಂ ಚ ತಥೈವ ವೃಷಕಾಹ್ವಯಾಮ್ ॥೩೫॥

ಕುಮಾರೀಮೃಷಿಕುಲ್ಯಾಂ ಚ ಮಾರಿಷಾಂ ಚ ಸರಸ್ವತೀಮ್ ।
ಮನ್ದಾಕಿನೀಂ ಸುಪುಣ್ಯಾಂ ಚ ಸರ್ವಾಂ ಗಙ್ಗಾಂ ಚ ಭಾರತ ॥೩೬॥

ಗಂಗಾ, ಸಿಂಧು, ಸರಸ್ವತೀ, ಗೋದಾವರೀ, ನರ್ಮದಾ, ಬಾಹುದಾ, ಮಹಾನದೀ, ಶತದ್ರೂ, ಚಂದ್ರಭಾಗಾ, ಮಹಾನದಿಯಾದ ಯಮುನಾ, ದೃಷದ್ವತೀ, ವಿಪಾಶಾ, ವಿಪಾಪಾ, ಸ್ಥೂಲವಾಲುಕಾ, ವೇತ್ರವತೀ, ಕೃಷ್ಣ

ವೇಣಾ, ಇರಾವತೀ, ವಿತಸ್ತಾ, ಪಯೋಷ್ಣೀ, ದೇವಿಕಾ, ವೇದಸ್ಮೃತಾ, ವೇದವತೀ, ತ್ರಿದಿವಾ, ಇಕ್ಷುಲಾ, ಕೃಮಿ, ಕರೀಷಿಣೀ, ಚಿತ್ರವಾಹಾ, ಚಿತ್ರಸೇನಾ, ಗೋಮತೀ, ಧೂತಪಾಪಾ, ಮಹಾನದಿಯಾದ ವಂದನಾ, ಕೌಶಿಕೀ, ತ್ರಿದಿವಾ, ಕೃತ್ಯಾ, ನಿಚಿತಾ, ಲೋಹಿತಾರಣೀ, ರಹಸ್ಯಾ, ಶತಕುಂಭಾ, ಸರಯೂ, ಚರ್ಮಣ್ವತೀ, ವೇತ್ರವತೀ, ಹಸ್ತಿಸೋಮಾ, ದಿಕ್, ಶರಾವತೀ, ಪಯೋಷ್ಣೀ, ವೇಣಾ, ಭೀಮರಥೀ, ಕಾವೇರೀ, ಚುಲುಕಾ, ವಾಣೀ, ಶತಬಲಾ, ನೀವಾರಾ, ಅಹಿತಾ, ಸುಪ್ರಯೋಗ, ಪವಿತ್ರಾ, ಕುಂಡಲೀ, ಸಿಂಧು, ರಾಜನೀ, ಪುರಮಾಲಿನೀ, ಪೂರ್ವಾಭಿರಾಮಾ, ವೀರಾ, ಭೀಮಾ, ಓಘವತೀ, ಪಾಶಾಶಿನೀ, ಪಾಪಹರಾ, ಮಹೇಂದ್ರಾ, ಪಾಟಲಾವತೀ, ಕರೀಷಿಣೀ, ಅಸಿಕ್ನೀ, ಮಹಾನದಿಯಾದ ಕುಶಚೀರಾ, ಮಕರೀ, ಪ್ರವರಾ, ಮೇನಾ, ಹೇಮಾ, ಘೃತವತೀ, ಪುರಾವತೀ, ಅನುಷ್ಣಾ, ಶೈಬ್ಯಾ, ಕಾಪೀ, ಸದಾನೀರಾ, ಅಧೃಷ್ಯಾ, ಮಹಾನದಿಯಾದ ಕುಶಧಾರಾ, ಸದಾಕಾಂತಾ, ಶಿವಾ, ವೀರಮತೀ, ವಸ್ತ್ರಾ, ಸುವಸ್ತ್ರಾ, ಗೌರೀ, ಕಮ್ಪನಾ, ಹಿರಣ್ವತೀ, ವರಾ, ವೀರಕರಾ, ಮಹಾನದಿಯಾದ ಪಂಚಮೀ, ರಥಚಿತ್ರಾ, ಜ್ಯೋತಿರಥಾ, ವಿಶ್ವಾಮಿತ್ರಾ, ಕಪಿಂಜಲಾ, ಉಪೇಂದ್ರಾ, ಬಹುಲಾ, ಕುವೀರಾ, ಅಂಬುವಾಹಿನೀ, ವಿನದೀ, ಪಿಂಜಲಾ, ವೇಣಾ, ಮಹಾನದಿಯಾದ ತುಂಗವೇಣಾ, ವಿದಿಶಾ, ಕೃಷ್ಣವೇಣಾ, ತಾಮ್ರಾ, ಕಪಿಲಾ, ಖಲು, ಸುವಾಮಾ, ವೇದಾಶ್ವಾ, ಹರಿಶ್ರಾವಾ, ಮಹಾಪಗಾ, ಶೀಘ್ರಾ, ಪಿಚ್ಛಿಲಾ, ಭಾರದ್ವಾಜೀ, ಕೌಶಿಕೀ, ಶೋಣಾ, ಬಾಹುದಾ, ಚಂದ್ರಮಾ, ದುರ್ಗಾ, ಚಿತ್ರಶಿಲಾ, ಬ್ರಹ್ಮವೇಧ್ಯಾ, ಬೃಹದ್ವತೀ, ಯವಕ್ಷಾ, ರೋಹೀ, ಜಾಂಬೂನದೀ, ಸುನಸಾ, ತಮಸಾ, ದಾಸೀ, ವಸಾಮನ್ಯಾ, ವರಾಣಸೀ, ನೀಲಾ, ಘೃತವತೀ, ಮಹಾನದಿಯಾದ ಪರ್ಣಾಶಾ, ಮಾನವೀ, ವೃಷಭಾ, ಬ್ರಹ್ಮಮೇಧ್ಯಾ, ಬೃಹದ್ಧ್ವನಿ–ಈ ನದಿಗಳ ಮತ್ತು ಇನ್ನೂ ಅನೇಕನದಿಗಳ ನೀರನ್ನು ಭಾರತವರ್ಷದವರು ಕುಡಿಯುತ್ತಾರೆ.

ಸದಾನಿರಾಮಯಾ, ಕೃಷ್ಣಾ, ಮಂದಗಾ, ಮಂದವಾಹಿನೀ, ಬ್ರಾಹ್ಮಣೀ, ಮಹಾಗೌರೀ, ದುರ್ಗಾ, ಚಿತ್ರೋತ್ಪಲಾ, ಚಿತ್ರರಥಾ,

ಮಂಜುಲಾ, ವಾಹಿನೀ, ಮಂದಾಕಿನೀ, ವೈತರಣೀ, ಮಹಾನದಿಯಾದ ಕೋಷಾ, ಶುಕ್ತಮತೀ, ಅನಂಗಾ, ವೃಷಾ, ಲೋಹಿತ್ಯಾ, ಕರತೋಯಾ, ವೃಷಕಾ, ಕುಮಾರೀ, ಋಷಿಕುಲ್ಯಾ, ಮಾರಿಷಾ, ಸರಸ್ವತೀ, ಮಂದಾಕಿನೀ, ಸುಪುಣ್ಯಾ, ಸರ್ವಾ ಮತ್ತು ಗಂಗಾ–ಈ ಎಲ್ಲ ನದಿಗಳ ನೀರನ್ನೂ ಭಾರತವರ್ಷದ ಜನರು ಕುಡಿಯುತ್ತಾರೆ.

**ವಿಶ್ವಸ್ಯ ಮಾತರಃ ಸರ್ವಾಃ ಸರ್ವಾಶ್ಚೈವ ಮಹಾಫಲಾಃ ।**
**ತಥಾ ನದ್ಯಸ್ತ್ವಪ್ರಕಾಶಾಃ ಶತಶೋಽಥ ಸಹಸ್ರಶಃ ॥೩೭॥**

ಈ ಎಲ್ಲ ನದಿಗಳೂ ವಿಶ್ವಕ್ಕೇ ಮಾತೃಪ್ರಾಯವಾಗಿವೆ. ಈ ನದಿಗಳು ತಮ್ಮಲ್ಲಿ ಸ್ನಾನಮಾಡುವ ಜನರಿಗೆ ಮಹಾಫಲಗಳನ್ನು ನೀಡುತ್ತವೆ. ಈ ಮೇಲೆ ಹೇಳಿದ ನದಿಗಳೇ ಅಲ್ಲದೇ ಶತ-ಸಹಸ್ರಸಂಖ್ಯೆಯಲ್ಲಿ (ಲಕ್ಷೋಪಲಕ್ಷ ಸಂಖ್ಯೆಯಲ್ಲಿ ) ಕಣ್ಣಿಗೆ ಕಾಣಿಸದಿರುವ ಗುಪ್ತಗಾಮಿನಿಗಳಾದ ಅಥವಾ ಜನರಿಗೆ ಹೆಚ್ಚು ಪರಿಚಯವಿಲ್ಲದ ನದಿಗಳೂ ಇವೆ. ಮಹಾರಾಜ! ಇವುಗಳೇ ಭಾರತ ವರ್ಷದಲ್ಲಿರುವ ನದಿಗಳು. ನನ್ನ ಜ್ಞಾಪಕದಲ್ಲಿದ್ದಷ್ಟು ನದಿಗಳನ್ನು ನಿನಗೆ ಹೇಳಿದ್ದೇನೆ. ಇನ್ನುಮುಂದೆ ನಾನು ಭಾರತವರ್ಷದಲ್ಲಿರುವ ದೇಶಗಳ ಹೆಸರು ಗಳನ್ನು ಹೇಳುತ್ತೇನೆ ; ಕೇಳುವವನಾಗು.

**ತತ್ರೇಮೇ ಕುರುಪಾಞ್ಚಾಲಾಃ ಶಾಲ್ವಾ ಮಾದ್ರೇಯಜಾಙ್ಗಲಾಃ ।**
**ಶೂರಸೇನಾಃ ಪುಲಿನ್ದಾಶ್ಚ ಬೋಧಾ ಮಾಲಾಸ್ತಥೈವ ಚ ॥೩೯॥**

**ಮತ್ಸ್ಯಾಃ ಕುಶಲ್ಯಾಃ ಸೌಶಲ್ಯಾಃ ಕುನ್ತಯಃ ಕಾನ್ತಿಕೋಸಲಾಃ ।**
**ಚೇದಿಮತ್ಸ್ಯಕರೂಷಾಶ್ಚ ಭೋಜಾಃ ಸಿನ್ಧುಪುಲಿನ್ದಕಾಃ ॥೪೦॥**

**ಉತ್ತಮಾಶ್ವದಶಾರ್ಣಾಶ್ಚ ಮೇಕಲಾಶ್ಚೋತ್ಕಲೈಃ ಸಹ ।**
**ಪಞ್ಚಾಲಾಃ ಕೋಸಲಾಶ್ಚೈವ ನೈಕಪೃಷ್ಠಾಧುರಂಧರಾಃ ॥೪೧॥**

**ಗೋಧಾ ಮದ್ರಕಲಿಙ್ಗಾಶ್ಚ ಕಾಶಯೋಽಪರಕಾಶಯಃ ।**
**ಜಠರಾಃ ಕುಕ್ಕುರಾಶ್ಚೈವ ಸದಶಾರ್ಣಾಶ್ಚ ಭಾರತ ॥೪೨॥**

**ಕುನ್ತಯೋಽವನ್ತಯಶ್ಚೈವ ತಥೈವಾಪರಕುನ್ತಯಃ ।**
**ಗೋಮನ್ತಾ ಮಣ್ಡಕಾಃ ಸಣ್ಡಾ ವಿದರ್ಭಾ ರೂಪವಾಹಿಕಾಃ ॥೪೩॥**

ಅಶ್ಮಕಾಃ ಪಾಣ್ಡುರಾಷ್ಟ್ರಾಶ್ಚ ಗೋಪರಾಷ್ಟ್ರಾಃ ಕರೀತಯಃ ।
ಅಧಿರಾಜ್ಯಕುಶಾದ್ಯಾಶ್ಚ ಮಲ್ಲರಾಷ್ಟ್ರಂ ಚ ಕೇವಲಮ್ ॥೪೪॥

ವಾರವಾಸ್ಯಾಯವಾಹಾಶ್ಚ ಚಕ್ರಾಶ್ಚಕ್ರಾತಯಃ ಶಕಾಃ ।
ವಿದೇಹಾ ಮಗಧಾಃ ಸ್ವಕ್ಷಾ ಮಲಜಾ ವಿಜಯಾಸ್ತಥಾ ॥೪೫॥

ಅಙ್ಗಾ ವಙ್ಗಾಃ ಕಲಿಙ್ಗಾಶ್ಚ ಯಕೃಲ್ಲೋಮಾನ ಏವ ಚ ।
ಮಲ್ಲಾಃ ಸುದೇಷ್ಣಾಃ ಪ್ರಹ್ಲಾದಾ ಮಾಹಿಕಾಃ ಶಶಿಕಾಸ್ತಥಾ ॥೪೬॥

ಬಾಹ್ಲಿಕಾ ವಾಟಧಾನಾಶ್ಚ ಅಭೀರಾಃ ಕಾಲತೋಯಕಾಃ ।
ಅಪರಾನ್ತಾಃ ಪರಾನ್ತಾಶ್ಚ ಪಞ್ಚಾಲಾಶ್ಚರ್ಮಮಣ್ಡಲಾಃ ॥೪೭॥

ಅಟವೀಶಿಖರಾಶ್ಚೈವ ಮೇರುಭೂತಾಶ್ಚ ಮಾರಿಷ ।
ಉಪಾವೃತ್ತಾನುಪಾವೃತ್ತಾಃ ಸ್ವರಾಷ್ಟ್ರಾಃ ಕೇಕಯಾಸ್ತಥಾ ॥೪೮॥

ಕುನ್ದಾಪರಾನ್ತಾ ಮಾಹೇಯಾಃ ಕಕ್ಷಾಃ ಸಾಮುದ್ರನಿಷ್ಕುಟಾಃ ।
ಆನ್ಧ್ರಾಶ್ಚ ಬಹವೋ ರಾಜನ್ನನ್ತರ್ಗಿರ್ಯಾಸ್ತಥೈವ ಚ ॥೪೯॥

ಬಹಿರ್ಗಿರ್ಯಾಙ್ಗಮಲಜಾ ಮಗಧಾ ಮಾನವರ್ಜಕಾಃ ।
ಸಮನ್ತರಾಃ ಪ್ರಾವೃಷೇಯಾ ಭಾರ್ಗವಾಶ್ಚ ಜನಾಧಿಪ ॥೫೦॥

ಪುಣ್ಡ್ರಾ ಭರ್ಗಾಃ ಕಿರಾತಾಶ್ಚ ಸುದೃಷ್ಟಾ ಯಾಮುನಾಸ್ತಥಾ ।
ಶಕಾ ನಿಷಾದಾ ನಿಷಧಾಸ್ತಥೈವಾನರ್ತನೈರ್ಋತಾಃ ॥೫೧॥

ದುರ್ಗಾಲಾಃ ಪ್ರತಿಮತ್ಸ್ಯಾಶ್ಚ ಕುನ್ತಲಾಃ ಕೋಸಲಾಸ್ತಥಾ ।
ತೀರಗ್ರಹಾಃ ಶೂರಸೇನಾ ಈಜಿಕಾಃ ಕನ್ಯಕಾಗುಣಾಃ ॥೫೨॥

ತಿಲಭಾರಾ ಮಸೀರಾಶ್ಚ ಮಧುಮನ್ತಃ ಸುಕನ್ದಕಾಃ ।
ಕಾಶ್ಮೀರಾಃ ಸಿನ್ಧುಸೌವೀರಾ ಗಾನ್ಧಾರಾದರ್ಶಕಾಸ್ತಥಾ ॥೫೩॥

ಅಭಿಸಾರಾ ಉಲೂಕಾಶ್ಚ ಶೈವಲಾ ಬಾಹ್ಲಿಕಾಸ್ತಥಾ ।
ದಾರ್ವೀ ಚ ವಾನವಾ ದರ್ವಾ ವಾತಜಾಮರಥೋರಗಾಃ ॥೫೪॥

ಬಹುವಾದ್ಯಾಶ್ಚ ಕೌರವ್ಯ ಸುದಾಮಾನಃ ಸುಮಲ್ಲಿಕಾಃ ।
ವಧ್ರಾಃ ಕರೀಷಕಾಶ್ಚಾಪಿ ಕುಲಿನ್ದೋಪತ್ಯಕಾಸ್ತಥಾ ॥೫೫॥

ವನಾಯವ್ರೋ ದಶಾಪಾರ್ಶ್ವರೋಮಾಣಃ ಕುಶಬಿನ್ದವಃ ।
ಕಚ್ಛಾ ಗೋಪಾಲಕಕ್ಷಾಶ್ಚ ಜಾಙ್ಗಲಾಃ ಕುರುವರ್ಣಕಾಃ ॥೫೬॥

ಕಿರಾತಾ ಬರ್ಬರಾಃ ಸಿದ್ಧಾ ವೈದೇಹಾಸ್ತಾಮ್ರಲಿಪ್ತಕಾಃ ।
ಓಣ್ಡ್ರಾ ಮ್ಲೇಚ್ಛಾಃ ಸೈಸಿರಿಧ್ರಾಃ ಪಾರ್ವತೀಯಾಶ್ಚ ಮಾರಿಷ ॥೫೭॥

ಅಥಾಪರೇ ಜನಪದಾ ದಕ್ಷಿಣಾ ಭರತರ್ಷಭ ।
ದ್ರವಿಡಾಃ ಕೇರಲಾಃ ಪ್ರಾಚ್ಯಾ ಭೂಷಿಕಾ ವನವಾಸಿಕಾಃ ॥೫೮॥

ಕರ್ಣಾಟಕಾ ಮಹಿಷಕಾ ವಿಕಲ್ಪಾ ಮೂಷಕಾಸ್ತಥಾ ।
ಝಿಲ್ಲಿಕಾಃ ಕುನ್ತಲಾಶ್ಚೈವ ಸೌಹೃದಾ ನವಕಾನನಾಃ ॥೫೯॥

ಕೌಕುಟ್ಟಕಾಸ್ತಥಾ ಚೋಲಾಃ ಕೋಙ್ಕಣಾ ಮಾಲವಾ ನರಾಃ ।
ಸಮಙ್ಗಾಃ ಕರಕಾಶ್ಚೈವ ಕುಕುರಾಙ್ಗಾರಮಾರಿಷಾಃ ॥೬೦॥

ಧ್ವಜಿನ್ಯುತ್ಸವಸಂಕೇತಾಸ್ತ್ರಿಗರ್ತಾಃ ಶಾಲ್ವಸೇನಯಃ ।
ವ್ಯೂಕಾಃ ಕೋಕಬಕಾಃ ಪ್ರೋಷ್ಠಾಃ ಸಮವೇಗವಶಾಸ್ತಥಾ ॥೬೧॥

ತಥೈವ ವಿನ್ಧ್ಯಚುಲಿಕಾಃ ಪುಲಿನ್ದಾ ವಲ್ಕಲೈಃ ಸಹ ।
ಮಾಲವಾ ಬಲ್ಲವಾಶ್ಚೈವ ತಥೈವಾಪರಬಲ್ಲವಾಃ ॥೬೨॥

ಕುಲಿನ್ದಾಃ ಕಾಲದಾಶ್ಚೈವ ಕುಣ್ಡಲಾಃ ಕರಟಾಸ್ತಥಾ ।
ಮೂಷಕಾಃ ಸ್ತನಬಾಲಾಶ್ಚ ಸನೀಪಾ ಘಟಸೃಂಜಯಾಃ ॥೬೩॥

ಅಠಿದಾಃ ಪಾಶಿವಾಟಾಶ್ಚ ತನಯಾಃ ಸುನಯಾಸ್ತಥಾ ।
ಋಷಿಕಾ ವಿದಭಾಃ ಕಾಕಾಸ್ತಙ್ಗಣಾಃ ಪರತಙ್ಗಣಾಃ ॥೬೪॥

ಉತ್ತರಾಶ್ಚಪರಮ್ಲೇಚ್ಛಾಃ ಕ್ರೂರಾ ಭರತಸತ್ತಮ ।
ಯವನಾಶ್ಚೀನ ಕಾಮ್ಬೋಜಾ ದಾರುಣಾ ಮ್ಲೇಚ್ಛಜಾತಯಃ ॥೬೫॥

ಸಕೃದ್ಗ್ರಹಾಃ ಕುಲತ್ಥಾಶ್ಚ ಹೂಣಾಃ ಪಾರಸಿಕೈಃ ಸಹ ।
ತಥೈವ ರಮಣಾಶ್ಚೀನಾಸ್ತಥೈವ ದಶಮಾಲಿಕಾಃ ॥೬೬॥

ಕ್ಷತ್ರಿಯೋಪನಿವೇಶಾಶ್ಚ ವೈಶ್ಯಶೂದ್ರಕುಲಾನಿ ಚ ।
ಶೂದ್ರಾಭೀರಾಶ್ಚ ದರದಾಃ ಕಾಶ್ಮೀರಾಃ ಪಶುಭಿಃ ಸಹ ॥೬೭॥

ಸ್ವಾಶೀರಾಶ್ಚಾನ್ತಚಾರಾಶ್ಚ ಪಹ್ಲವಾ ಗಿರಿಗಹ್ವರಾಃ ।
ಆತ್ರೇಯಾಃ ಸಭರದ್ವಾಜಾಸ್ತಥೈವ ಸ್ತನಪೋಷಿಕಾಃ ॥೬೮॥

ಪ್ರೋಷಕಾಶ್ಚ ಕಲಿಙ್ಗಾಶ್ಚ ಕಿರಾತಾನಾಂ ಚ ಜಾತಯಃ ।
ತೋಮರಾ ಹನ್ಯಮಾನಾಶ್ಚ ತಥೈವ ಕರಭಞ್ಜಕಾಃ ॥೬೯॥

ಏತೇ ಚಾನ್ಯೇ ಜನಪದಾಃ ಪ್ರಾಚ್ಯೋದೀಚ್ಯಾಸ್ತಥೈವ ಚ ।
ಉದ್ದೇಶಮಾತ್ರೇಣ ಮಯಾ ದೇಶಾಃ ಸಂಕೀರ್ತಿತಾ ವಿಭೋ ॥೭೦॥

ಭಾರತದಲ್ಲಿರುವ ದೇಶಗಳು :

ಕುರುಪಾಂಚಾಲ, ಶಾಲ್ವ, ಮಾದ್ರೇಯ-ಜಾಂಗಲ, ಶೂರಸೇನ, ಪುಲಿಂದ, ಬೋಧ, ಮಾಲ, ಮತ್ಸ್ಯ, ಕುಶಲ್ಯ, ಸೌಶಲ್ಯ, ಕುಂತಿ, ಕಾಂತಿ, ಕೋಸಲ, ಚೇದಿ, ಮತ್ಸ್ಯ, ಕರೂಷ, ಭೋಜ, ಸಿಂಧು-ಪುಲಿಂದ, ಉತ್ತಮಾಶ್ವ, ದಶಾರ್ಣ, ಮೇಕಲ, ಉತ್ಕಲ, ಪಂಚಾಲ, ಕೋಸಲ, ನೈಕಪೃಷ್ಠ, ಧುರಂಧರ, ಗೋಧಾ, ಮದ್ರಕಲಿಂಗ, ಕಾಶಿ, ಅಪರಕಾಶಿ, ಜಠರ, ಕುಕ್ಕುರ, ದಶಾರ್ಣ, ಕುಂತಿ, ಅವಂತಿ, ಅಪರಕುಂತಿ, ಗೋಮಂತ, ಮಂಡಕ, ಸಂಡ, ವಿದರ್ಭ, ರೂಪವಾಹಿಕ, ಅಶ್ಮಕ, ಪಾಂಡುರಾಷ್ಟ್ರ, ಗೋಪರಾಷ್ಟ್ರ, ಕರೀತಿ, ಅಧಿರಾಜ್ಯ, ಕುಶಾದ್ಯ, ಮಲ್ಲರಾಷ್ಟ್ರ, ವಾರವಾಸ್ಯ, ಅಯವಾಹ, ಚಕ್ರ, ಚಕ್ರಾತಿ, ಶಕ, ವಿದೇಹ, ಮಗಧ, ಸ್ವಕ್ಷ, ಮಲಜ, ವಿಜಯ, ಅಂಗ, ವಂಗ, ಕಲಿಂಗ, ಯಕೃಲ್ಲೋಮಾ, ಮಲ್ಲ, ಸುದೇಷ್ಣ, ಪ್ರಹ್ಲಾದ, ಮಾಹಿಕ, ಶಶಿಕ, ಬಾಹ್ಲಿಕ, ವಾಟಧಾನ, ಆಭೀರ, ಕಾಲತೋಯಕ, ಅಪರಾಂತ, ಪರಾಂತ, ಪಂಚಾಲ, ಚರ್ಮಮಂಡಲ, ಅಟವೀಶಿಖರ, ಮೇರುಭೂತ, ಉಪಾವೃತ್ತ, ಅನುಪಾವೃತ್ತ, ಸ್ವರಾಷ್ಟ್ರ, ಕೇಕಯ, ಕುಂದಾ ಪರಾಂತ, ಮಾಹೇಯ, ಕಕ್ಷ, ಸಾಮುದ್ರನಿಷ್ಕುಟ, ಬಹುಸಂಖ್ಯಕ, ಅಂಧ್ರ, ಅಂತರ್ಗಿರ್ಯ, ಬಹಿರ್ಗಿರ್ಯ, ಅಂಗಮಲಜ, ಮಗಧ, ಮಾನವರ್ಜಕ, ಸಮಂತರ, ಪ್ರಾವೃಷೇಯ, ಭಾರ್ಗವ, ಪುಣ್ಡ್ರ, ಭರ್ಗ, ಕಿರಾತ, ಸುಹೃಷ್ಟ, ಯಾಮುನ, ಶಕ, ನಿಷಾದ, ನಿಷಧ, ಆನರ್ತ, ನೈರ್ಋತ, ದುರ್ಗಾಲ, ಪ್ರತಿಮತ್ಸ್ಯ, ಕುಂತಲ, ಕೋಸಲ, ತೀರಗ್ರಹ, ಶೂರಸೇನ, ಈಜಿಕ, ಕನ್ಯಕಾಗುಣ, ತಿಲಭಾರ, ಮಸೀರ, ಮಧುಮಂತ, ಸುಕಂದಕ, ಕಾಶ್ಮೀರ,

ಸಿಂಧುಸೌವೀರ, ಗಾಂಧಾರ, ದರ್ಶಕ, ಅಭೀಸಾರ, ಉಲೂತ, ಶೈವಲ, ಬಾಹ್ಲಿಕ, ದಾರ್ವೀ, ವಾನವ, ದರ್ವ, ವಾತಜ, ಆಮರಥ, ಉರಗ, ಬಹುವಾದ್ಯ, ಸುದಾಮ, ಸುಮಲ್ಲಿಕ, ವಧ್ರ, ಕರೀಷಕ, ಕುಲಿಂದ, ಉಪತ್ಯಕ, ವನಾಯು, ದರ್ಶಾಪಾರ್ಶ್ವರೋಮ, ಕುಶಬಿಂದು, ಕಚ್ಛ, ಗೋಪಾಲಕಕ್ಷ, ಜಾಂಗಲ, ಕುರುವರ್ಣಕ, ಕಿರಾತ, ಬರ್ಬರ, ಸಿದ್ಧ, ವೈದೇಹ, ತಾಮ್ರಲಿಪ್ತಕ, ಓಂಡ್ರ, ಮ್ಲೇಚ್ಛ, ಸೈಸಿರಿಧ್ರ, ಪಾರ್ವತೀಯ–ಇವೇ ಭಾರತವರ್ಷದ ಪ್ರಮುಖದೇಶಗಳು. ಭರತರ್ಷಭ! ದಕ್ಷಿಣದಿಕ್ಕಿನಲ್ಲಿ ಇನ್ನೂ ಅನೇಕ ದೇಶಗಳಿವೆ. ಅವುಗಳು ಯಾವುವೆಂಬುದನ್ನು ಹೇಳುವೆನು ಕೇಳು : ದ್ರವಿಡ, ಕೇರಲ, ಪ್ರಾಚ್ಯ, ಭೂಷಿಕ, ವನವಾಸಿಕ, ಕರ್ಣಾಟಕ, ಮಹಿಷಕ, ವಿಕಲ್ಪ, ಮೂಷಕ, ಝಿಲ್ಲಿಕ, ಕುಂತಲ, ಸೌಹೃದ, ನಭಕಾನನ, ಕೌಕುಟ್ಟಕ, ಚೋಲ, ಕೊಂಕಣ, ಮಾಲವ, ನರ, ಸಮಂಗ, ಕರಕ, ಕುಕುರ, ಅಂಗಾರ, ಮಾರಿಷ, ಧ್ವಜಿನ್ಯುತ್ಸವಸಂಕೇತ, ತ್ರಿಗರ್ತ, ಶಾಲ್ವಸೇನಿ, ವ್ಯೂಕ, ಕೋಕಬಕ, ಪ್ರೋಷ್ಠ, ಸಮವೇಗವಶ, ವಿಂಧ್ಯಚುಲಿಕ, ಪುಲಿಂದ, ವಲ್ಕಲ, ಮಾಲವ, ಬಲ್ಲವ, ಅಪರಬಲ್ಲವ, ಕುಲಿಂದ, ಕಾಲದ, ಕುಂಡಲ, ಕರಟ, ಮೂಷಕ, ಸ್ತನಬಾಲ, ಸನೀಪ, ಘಟ, ಸೃಂಜಯ, ಅಠಿದ, ಪಾಶಿವಾಟ, ತನಯ, ಸುನಯ, ಋಷಿಕ, ವಿದಭ, ಕಾಕ, ತಂಗಣ, ಪರತಂಗಣ, ಉತ್ತರ, ಕ್ರೂರ, ಅಪರಮ್ಲೇಚ್ಛ, ಯವನ, ಭಯಂಕರರಾದ ಮ್ಲೇಚ್ಛರು ವಾಸಮಾಡುವ ಚೀನ-ಕಾಂಬೋಜಗಳು, ಸಕೃದ್ಗ್ರಹ, ಕುಲತ್ಥ, ಹೂಣ, ಪಾರಸಿಕ, ರಮಣ, ಚೀನ, ದಶಮಾಲಿಕ, ಕ್ಷತ್ರಿಯರ ಉಪನಗರಗಳು, ವೈಶ್ಯ ಮತ್ತು ಶೂದ್ರರ ಉಪನಗರಗಳು, ಶೂದ್ರ, ಅಭೀರ, ದರದ, ಕಾಶ್ಮೀರ, ಪಶು, ಸ್ವಾಶೀರ, ಅಂತಚಾರ, ಪಹ್ಲವ, ಗಿರಿಗಹ್ವರ, ಆತ್ರೇಯ, ಭರದ್ವಾಜ, ಸ್ತನಪೋಷಿಕ, ಪ್ರೋಷಕ, ಕಲಿಂಗ, ಕಿರಾತದೇಶ, ತೋಮರ, ಹನ್ಯಮಾನ, ಕರಭಂಜಕ–ಇವೇ ಮೊದಲಾದ ದೇಶಗಳು ಭಾರತವರ್ಷದ ದಕ್ಷಿಣ, ಪೂರ್ವ ಮತ್ತು ಉತ್ತರದಿಕ್ಕುಗಳಲ್ಲಿವೆ. ಸಂಗ್ರಹವಾಗಿ ನಾನು ನಿನಗೆ ಭಾರತವರ್ಷದಲ್ಲಿರುವ ದೇಶಗಳನ್ನು ಹೇಳಿರುತ್ತೇನೆ. ಗುಣ ಮತ್ತು ಬಲಗಳಿಗೆ ಅನುಸಾರವಾಗಿ ಈ ಭೂಮಿಯನ್ನು ಒಳ್ಳೆಯ ರೀತಿಯಲ್ಲಿ ಪರಿಪಾಲಿಸಿದ್ದೇ ಆದರೆ, ಈ ಭೂಮಿಯು ಸರ್ವಕಾಮನೆಗಳನ್ನೂ ಪೂರ್ತಿ

ಗೊಳಿಸುವ ಕಾಮಧೇನುವಾಗಿ ಧರ್ಮಾರ್ಥ-ಕಾಮಗಳೆಂಬ ಮೂರು ಮಹಾ ಪುರುಷಾರ್ಥಗಳನ್ನೂ ನೀಡುತ್ತದೆ. ಶೂರರೂ ಧರ್ಮಾರ್ಥಕೋವಿದರೂ ಆಗಿರತಕ್ಕ ರಾಜರು, ಈ ಭೂಮಿಯನ್ನು ತಮ್ಮ ವಶವನ್ನಾಗಿ ಮಾಡಿ ಕೊಳ್ಳಬೇಕೆಂದು ಆಸೆಪಡುತ್ತಾರೆ. ಭೂಮಿಯಲ್ಲಿರುವ ಐಶ್ವರ್ಯವೆಲ್ಲವನ್ನೂ ಪಡೆದುಕೊಳ್ಳಬೇಕೆಂಬ ಅತ್ಯಾಶೆಯುಳ್ಳ ಬಲಿಷ್ಠರಾಜರು ಯುದ್ಧದಲ್ಲಿ ತಮ್ಮ ಪ್ರಾಣಗಳನ್ನೂ ಪರಿತ್ಯಜಿಸುತ್ತಾರೆ.

**ದೇವಮಾನುಷಕಾಯಾನಾಂ ಕಾಮಂ ಭೂಮಿಃ ಪರಾಯಣಮ್ ।**
**ಅನ್ಯೋನ್ಯಸ್ಯಾವಲುಮ್ಪನ್ತಿ ಸಾರಮೇಯಾ ಯಥಾಮಿಷಮ್ ॥೭೩॥**

**ರಾಜಾನೋ ಭರತಶ್ರೇಷ್ಠ ಭೋಕ್ತುಕಾಮಾ ವಸುಂಧರಾಮ್ ।**
**ನ ಚಾಪಿ ತೃಪ್ತಿಃ ಕಾಮಾನಾಂ ವಿದ್ಯತೇಽದ್ಯಾಪಿ ಕಸ್ಯಚಿತ್ ॥೭೪॥**

ದೇವ-ಮಾನವರಿಬ್ಬರಿಗೂ ವಿಶೇಷವಾಗಿ ಈ ಭೂಮಿಯೇ ಆಶ್ರಯ ಸ್ಥಾನವಾಗಿದೆ. (ದೇವತೆಗಳು ಹವಿರ್ಭುಜರು. ಭೂಮಿಯಲ್ಲಿ ನಡೆಯುವ ಯಜ್ಞ-ಯಾಗಾದಿಗಳಿಂದ ದೇವತೆಗಳ ಆಹಾರವಾದ ಹವಿಸ್ಸು ಅವರಿಗೆ ಲಭ್ಯ ವಾಗುತ್ತದೆ. ಆದುದರಿಂದ ದೇವತೆಗಳಿಗೂ ಭೂಮಿಯೇ ಆಶ್ರಯಸ್ಥಾನ. ಮನುಷ್ಯರಿಗೆ ಬೇಕಾಗುವ ಆಹಾರಪದಾರ್ಥಗಳು ಭೂಮಿಯಲ್ಲೇ ಬೆಳೆಯು ವುದರಿಂದ ಮನುಷ್ಯರಿಗೂ ಇದು ಆಶ್ರಯಸ್ಥಾನವಾಗಿದೆ.) ನಾಯಿಗಳು ಯಾವ ರೀತಿಯಲ್ಲಿ ಮಾಂಸದ ತುಂಡಿಗಾಗಿ ಪರಸ್ಪರ ಕಚ್ಚಾಡುತ್ತವೆಯೋ–ಅದೇ ರೀತಿಯಲ್ಲಿ ಈ ಪೃಥ್ವಿಯ ರಾಜರೂ ಸಹ ಈ ಭೂಮಿಯನ್ನೂ ಐಶ್ವರ್ಯ ವನ್ನೂ ತಾವೊಬ್ಬರೇ ಉಪಭೋಗಿಸಬೇಕೆಂಬ ದುರಾಶೆಯಿಂದ ಪರಸ್ಪರ ಕಚ್ಚಾಡುತ್ತಾರೆ. ಆದರೆ ಇದುವರೆಗೂ ಯಾರಿಗೂ ತಮ್ಮ ಕಾಮನೆಗಳ ವಿಷಯದಲ್ಲಿ ತೃಪ್ತಿಯೇ ಉಂಟಾಗಿಲ್ಲ. (ಎರಡು ದೇಶಗಳಿಗೆ ಅಧಿಪತಿಯಾದ ರಾಜನು ಮೂರನೆಯ ದೇಶಕ್ಕೂ ಅಧಿಪತಿಯಾಗಬೇಕೆನ್ನುತ್ತಾನೆ. ಒಂದು ವೇಳೆ ಭೂಮಂಡಲವೇ ಒಬ್ಬನ ಸ್ವಾಧೀನದಲ್ಲಿದ್ದರೂ ಅಷ್ಟರಿಂದಲೇ ತೃಪ್ತಿ ಹೊಂದುವುದಿಲ್ಲ. ಮರುಕ್ಷಣದಲ್ಲಿಯೇ ಅವನಿಗೆ ಸ್ವರ್ಗವನ್ನೂ ತನ್ನದನ್ನಾಗಿ ಮಾಡಿಕೊಳ್ಳಬೇಕೆಂಬ ಅಭಿಲಾಷೆಯು ಮೂಡುತ್ತದೆ. ಸುಖೋಪಭೋಗ ಗಳನ್ನು ಉಪಭೋಗಿಸಿದಷ್ಟೂ ಇನ್ನೂ ಹೆಚ್ಚಾಗಿ ಉಪಭೋಗಿಸಬೇಕೆಂಬ

ಆಶೆಯು ಮೂಡುವುದೇ ಹೊರತು ತೃಪ್ತಿಯೆಂದಿಗೂ ಉಂಟಾಗುವುದಿಲ್ಲ. ಪರಿಪೂರ್ಣ ತೃಪ್ತಿಯನ್ನು ಯಾರೂ ಇದುವರೆಗೆ ವ್ಯಕ್ತಪಡಿಸಿಲ್ಲ.) ಈ ವಿಧವಾದ ಅತೃಪ್ತಿಯಿಂದಲೇ ಕುರು-ಪಾಂಡವರು ಈ ಭೂಮಿಯನ್ನು ತಮ್ಮ ಸ್ವಾಧೀನಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಸಾಮದಿಂದಲಾದರೂ ಸರಿಯೇ ; ಭೇದ-ದಾನಗಳಿಂದಲಾದರೂ ಸರಿಯೇ ; ಕಟ್ಟಕಡೆಯದಾಗಿ ದಂಡನೀತಿಯಿಂದಾದರೂ ಭೂಮಂಡಲವನ್ನು ತಮ್ಮ ಸ್ವಾಧೀನಮಾಡಿಕೊಳ್ಳ ಬೇಕೆಂಬ ಆಶಯ ಎರಡು ಪಕ್ಷದವರಿಗೂ ಇದೆ.

**ಪಿತಾ ಭ್ರಾತಾ ಚ ಪುತ್ರಾಶ್ಚ ಖಂ ದ್ಯೌಶ್ಚ ನರಪುಙ್ಗವ ।**
**ಭೂಮಿರ್ಭವತಿ ಭೂತಾನಾಂ ಸಮ್ಯಗಚ್ಛಿದ್ರದರ್ಶನಾ ॥೭೭॥**

ಭೂಮಿಯ ನಿಜಸ್ವರೂಪವೇನೆಂಬುದನ್ನು ಏಕಾಗ್ರತೆಯಿಂದ ಪರಿಶೀಲಿಸಿದ್ದೇ ಆದರೆ ಭೂದೇವಿಯೇ ಪ್ರಾಣಿಗಳಿಗೆ ತಂದೆ-ತಾಯಿ, ಅಣ್ಣ-ತಮ್ಮಂದಿರು, ಮಕ್ಕಳು, ಆಕಾಶ, ಸ್ವರ್ಗ ಎಲ್ಲವೂ ಆಗುತ್ತಾಳೆ. (ಪ್ರವೃತ್ತಿ- ನಿವೃತ್ತಿ ಮಾರ್ಗಗಳೆರಡಕ್ಕೂ ಭೂಮಿಯೇ ಕಾರಣಳೆಂಬುದು ಸ್ಪಷ್ಟವಾಗುತ್ತದೆ.)”

೯ನೆಯ ಅಧ್ಯಾಯವು ಮುಗಿಯಿತು.

೧೦ನೆಯ ಅಧ್ಯಾಯ ಜಮ್ಬೂಖಣ್ಡವಿನಿರ್ಮಾಣಪರ್ವ (ಮುಂದುವರಿದಿದೆ.)

## ಯುಗಾನುಸಾರವಾಗಿ ಭಾರತವರ್ಷದಲ್ಲಿರುವ ಪ್ರಾಣಿಗಳ ಆಯುಃಪ್ರಮಾಣ

ಧೃತರಾಷ್ಟ್ರನು ಪುನಃ ಸಂಜಯನನ್ನು ಪ್ರಶ್ನಿಸುತ್ತಾನೆ :

“ಸಂಜಯ! ಭಾರತವರ್ಷ-ಹೈಮವತವರ್ಷಗಳಲ್ಲಿರುವ ಮಾನವರ ಆಯುಃಪ್ರಮಾಣವನ್ನು ಹೇಳು. ಅವರ ಬಲವೆಷ್ಟೆಂಬುದನ್ನು ತಿಳಿಸು. ಅಂತೆಯೇ ಹಿಂದೆ ಈ ಖಂಡಗಳಲ್ಲಿ ಮಾನವರ ಆಯುಃಪ್ರಮಾಣವು ಎಷ್ಟಿದ್ದಿತು? ಈಗ ಎಷ್ಟಿದೆ? ಮತ್ತು ಮುಂದೆ ಎಷ್ಟಿರುತ್ತದೆ?–ಎಂಬುದನ್ನೂ ವಿವರಿಸಿ ಹೇಳು. ಹಿರಣ್ಯವರ್ಷದ ವಿಷಯವನ್ನೂ ಸಹ ಸವಿಸ್ತರವಾಗಿ ತಿಳಿಸು.”

**ಚತ್ವಾರಿ ಭಾರತೇ ವರ್ಷೇ ಯುಗಾನಿ ಭರತರ್ಷಭ ।**
**ಕೃತಂ ತ್ರೇತಾ ದ್ವಾಪರಂ ಚ ತಿಷ್ಯಂ ಚ ಕುರುವರ್ಧನ ॥೩॥**

"ಕುರುವರ್ಧನನೇ! ಭಾರತವರ್ಷದಲ್ಲಿ ನಾಲ್ಕು ಯುಗಗಳ ಪರಿವರ್ತನೆಯಾಗುತ್ತದೆ. ಕೃತ, ತ್ರೇತಾ, ದ್ವಾಪರ ಮತ್ತು ಕಲಿ–ಇವುಗಳೇ ನಾಲ್ಕು ಯುಗಗಳು.

**ಪೂರ್ವಂ ಕೃತಯುಗಂ ನಾಮ ತತಸ್ತ್ರೇತಾಯುಗಂ ಪ್ರಭೋ ।**
**ಸಂಕ್ಷೇಪಾದ್ದ್ವಾಪರಸ್ಯಾಥ ತತಸ್ತಿಷ್ಯಂ ಪ್ರವರ್ತತೇ ॥೪॥**

ಭಾರತವರ್ಷದಲ್ಲಿ ಮೊದಲು ಕೃತಯುಗದ ಆವಿರ್ಭಾವವಾಗುತ್ತದೆ. ಅನಂತರ ತ್ರೇತಾಯುಗ. ತ್ರೇತಾಯುಗದ ಅನಂತರ ದ್ವಾಪರಯುಗ. ದ್ವಾಪರವು ಕಳೆದೊಡನೆಯೇ ಕಲಿಯುಗವು ಪ್ರಾರಂಭವಾಗುತ್ತದೆ.

**ಚತ್ವಾರಿ ತು ಸಹಸ್ರಾಣಿ ವರ್ಷಾಣಾಂ ಕುರುಸತ್ತಮ ।**
**ಆಯುಃಸಂಖ್ಯಾ ಕೃತಯುಗೇ ಸಂಖ್ಯಾತಾ ರಾಜಸತ್ತಮ ॥೫॥**

ಮೊದಲನೆಯದಾದ ಕೃತಯುಗ ಅಥವಾ ಸತ್ಯಯುಗದಲ್ಲಿ ಮಾನವರ ಆಯುಃಪ್ರಮಾಣವು ನಾಲ್ಕು ಸಾವಿರ ವರ್ಷಗಳು.

**ತಥಾ ತ್ರೀಣಿ ಸಹಸ್ರಾಣಿ ತ್ರೇತಾಯಾಂ ಮನುಜಾಧಿಪ ।**
**ದ್ವೇ ಸಹಸ್ರೇ ದ್ವಾಪರೇ ತು ಭುವಿ ತಿಷ್ಠತಿ ಸಾಮ್ಪ್ರತಮ್ ॥೬॥**

ಮನುಜಾಧಿಪನೇ! ತ್ರೇತಾಯುಗದಲ್ಲಿ ಮಾನವರ ಆಯುಃಪ್ರಮಾಣವು ಮೂರು ಸಾವಿರ ವರ್ಷಗಳು. ಈ ದ್ವಾಪರಯುಗದಲ್ಲಿ ಮಾನವರ ಆಯುಃಪ್ರಮಾಣವು ಎರಡು ಸಾವಿರ ವರ್ಷಗಳು.

**ನ ಪ್ರಮಾಣಸ್ಥಿತಿರ್ಹ್ಯಸ್ತಿ ತಿಷ್ಯೇಽಸ್ಮಿನ್ಭರತರ್ಷಭ ।**
**ಗರ್ಭಸ್ಥಾಶ್ಚ ಮ್ರಿಯನ್ತೇಽತ್ರ ತಥಾ ಜಾತಾ ಮ್ರಿಯನ್ತಿ ಚ ॥೭॥**

ಮುಂಬರುವ ಕಲಿಯುಗದಲ್ಲಿ ಮಾನವರ ಆಯುಃಪ್ರಮಾಣವಿಷ್ಟೇ–ಎಂಬ ನಿರ್ಧಾರವಿಲ್ಲ. ಗರ್ಭದಲ್ಲಿರುವಾಗಲೇ ಅನೇಕರು ಸಾಯುತ್ತಾರೆ. ಹುಟ್ಟಿದೊಡನೆಯೇ ಅನೇಕರು ಸಾಯುತ್ತಾರೆ.

ಸತ್ಯಯುಗದಲ್ಲಿ ಮಹಾಬಲಿಷ್ಠರಾದ, ಸತ್ತ್ವಗುಣಸಂಪನ್ನರಾದ, ಬುದ್ಧಿ

ವಂತರಾದ, ಧನವಂತರಾದ, ಪ್ರಿಯದರ್ಶನರಾದ ಮನುಷ್ಯರು ಹುಟ್ಟುತ್ತಾರೆ. ನೂರಾರು-ಸಾವಿರಾರು ಸಂಖ್ಯೆಯಲ್ಲಿ ಹುಟ್ಟಿದ್ದಾರೆ ಮತ್ತು ಹುಟ್ಟುತ್ತಾರೆ. ಮೊದಲನೆಯದಾದ ಸತ್ಯಯುಗದಲ್ಲಿಯೇ ತಪೋಧನರಾದ ಮುನಿಗಳು ನೂರಾರು-ಸಾವಿರಾರು ಸಂಖ್ಯೆಯಲ್ಲಿ ಹುಟ್ಟಿದ್ದಾರೆ. ಇದೇ ರೀತಿಯಲ್ಲಿ ತ್ರೇತಾ ಯುಗದಲ್ಲಿಯೂ ಸಹ ಅತ್ಯಂತೋತ್ಸಾಹಿಗಳಾದ, ಧಾರ್ಮಿಕರಾದ, ಸತ್ಯನಿಷ್ಠ ರಾದ, ಪ್ರಿಯದರ್ಶನರಾದ, ಸುಂದರಶರೀರವನ್ನು ಹೊಂದಿರುವ ಮಹಾ ವೀರ್ಯರಾದ, ಧನುರ್ಧರರಾದ, ವರವನ್ನು ಪಡೆದುಕೊಳ್ಳಲು ಯೋಗ್ಯ ರಾದ, ಯುದ್ಧದಲ್ಲಿ ಮಹಾಶೂರರೆನಿಸಿಕೊಳ್ಳುವ ಕ್ಷತ್ರಿಯರು ಹುಟ್ಟುತ್ತಾರೆ. ಅವರೆಲ್ಲರೂ ಚಕ್ರವರ್ತಿಗಳಾಗಿದ್ದು ಮಾನವರ ರಕ್ಷಣೆಯಲ್ಲಿ ನಿರತರಾಗಿರು ತ್ತಾರೆ.

ದ್ವಾಪರಯುಗದಲ್ಲಿ ಎಲ್ಲ ವರ್ಣದವರೂ ಹುಟ್ಟುತ್ತಾರೆ. ಅವರು ಮಹಾಉತ್ಸಾಹಿಗಳಾಗಿಯೂ ವೀರ್ಯವಂತರಾಗಿಯೂ ಒಬ್ಬರು ಮತ್ತೊಬ್ಬ ರನ್ನು ಜಯಿಸಬೇಕೆನ್ನುವ ಇಚ್ಛೆಯುಳ್ಳವರಾಗಿಯೂ ಇರುತ್ತಾರೆ.

**ತೇಜಸಾಲ್ಪೇನ ಸಂಯುಕ್ತಾಃ ಕ್ರೋಧನಾಃ ಪುರುಷಾ ನೃಪ ।**
**ಲುಬ್ಧಾ ಅನೃತಕಾಶ್ಚೈವ ತಿಷ್ಯೇ ಜಾಯನ್ತಿ ಭಾರತ ॥೧೩॥**

ಕಲಿಯುಗದಲ್ಲಿ ಹುಟ್ಟುವ ಜನರು ಪ್ರಾಯಶಃ ಅಲ್ಪವೀರ್ಯರಾಗಿರು ತ್ತಾರೆ. ಆದರೆ ಹೆಚ್ಚು ಕೋಪವುಳ್ಳವರಾಗಿರುತ್ತಾರೆ. ಲುಬ್ಧರಾಗಿರುತ್ತಾರೆ. ಹೆಚ್ಚು ಸುಳ್ಳುಹೇಳುವವರೂ ಆಗಿರುತ್ತಾರೆ.

**ಈರ್ಷ್ಯಾ ಮಾನಸ್ತಥಾ ಕ್ರೋಧೋ ಮಾಯಾಸೂಯಾ ತಥೈವ ಚ ।**
**ತಿಷ್ಯೇ ಭವತಿ ಭೂತಾನಾಂ ರಾಗೋ ಲೋಭಶ್ಚ ಭಾರತ ॥೧೪॥**

ಕಲಿಯುಗದಲ್ಲಿ ಮಾನವರು ಹೊಟ್ಟೇಕಿಚ್ಚು, ದುರಭಿಮಾನ, ಕೋಪ, ಇತರರ ಗುಣಗಳಲ್ಲಿ ದೋಷವೆಣಿಸುವುದು, ಕಾಮ ಮತ್ತು ಲೋಭ–ಈ ದುಷ್ಟಗುಣಗಳಿಂದ ಕೂಡಿದವರಾಗಿರುತ್ತಾರೆ.

ಈ ದ್ವಾಪರಯುಗದಲ್ಲಿಯೂ ಸಹ ಸದ್ಗುಣಗಳ ನ್ಯೂನತೆಯಿರುತ್ತದೆ. ಹೈಮವತದಲ್ಲಿ ಅದಕ್ಕಿಂತಲೂ ಹೆಚ್ಚಾಗಿ ಹರಿವರ್ಷದಲ್ಲಿ ಭಾರತವರ್ಷ ಕ್ಕಿಂತಲೂ ಹೆಚ್ಚಿನ ಸದ್ಗುಣಗಳು ಇರುತ್ತವೆ."

೧೦ನೆಯ ಅಧ್ಯಾಯವು ಮುಗಿಯಿತು.

## ಶಾಕದ್ವೀಪದ ವರ್ಣನೆ

ಧೃತರಾಷ್ಟ್ರನು ಸಂಜಯನನ್ನು ಕುರಿತು ಹೇಳುತ್ತಾನೆ :

"ಸಂಜಯ! ನೀನು ಜಂಬೂಖಂಡದ ವರ್ಣನೆಯನ್ನು ಯಥಾವತ್ತಾಗಿ ಮಾಡಿರುವೆ. ಈಗ ನೀನು ಈ ಜಂಬೂಖಂಡದ ಸುತ್ತಳತೆ ಮತ್ತು ವಿಸ್ತಾರ ವೆಷ್ಟೆಂಬುದನ್ನು ಯಥಾವತ್ತಾಗಿ ಹೇಳು. ಸುತ್ತಲೂ ಇರುವ ಸಮುದ್ರದ ಸುತ್ತಳತೆ ಎಷ್ಟೆಂಬುದನ್ನೂ–ಶಾಕದ್ವೀಪ, ಕುಶದ್ವೀಪ, ಶಾಲ್ಮಲಿದ್ವೀಪ, ಕ್ರೌಂಚದ್ವೀಪ–ಇವುಗಳ ವಿಷಯಗಳನ್ನೂ ಯಥಾವತ್ತಾಗಿ ಯಾವು ದೊಂದನ್ನೂ ಬಿಡದೇ, ಯಾವ ವಿಷಯವೂ ಲೋಪವಾಗದ ರೀತಿಯಲ್ಲಿ ವಿವರಿಸಿ ಹೇಳು. ಅನಂತರ ರಾಹುಸೋಮಾರ್ಕರ ವಿಷಯವನ್ನೂ ಹೇಳು."

"ಮಹಾರಾಜ! ಈ ಜಗತ್ತು ಅನೇಕಾನೇಕ ದ್ವೀಪಗಳಿಂದ ಕೂಡಿ ದ್ದಾಗಿದೆ. ಸಾವಿರಾರು ದ್ವೀಪಗಳಲ್ಲಿ ನಾನು ಏಳು ದ್ವೀಪಗಳ ವಿಷಯವನ್ನು ನಿನಗೆ ಸವಿಸ್ತಾರವಾಗಿ ಹೇಳುತ್ತೇನೆ. ನಿನ್ನ ಅಪೇಕ್ಷೆಯಂತೆ ಚಂದ್ರಾದಿತ್ಯರ ಮತ್ತು ರಾಹುವಿನ ವಿಷಯವನ್ನೂ ಹೇಳುತ್ತೇನೆ.

**ಅಷ್ಟಾದಶ ಸಹಸ್ರಾಣಿ ಯೋಜನಾನಿ ವಿಶಾಮ್ಪತೇ ।**
**ಷಟ್ ಶತಾನಿ ಚ ಪೂರ್ಣಾನಿ ನಿಷ್ಕಮ್ಭೋ ಜಮ್ಬುಪರ್ವತಃ ॥೫॥**

ಜಂಬುಪರ್ವತವು ಅಥವಾ ಜಂಬೂದ್ವೀಪವು ಹದಿನೆಂಟು ಸಾವಿರದ ಆರುನೂರು ಯೋಜನಗಳ ವಿಸ್ತೀರ್ಣವುಳ್ಳದ್ದಾಗಿದೆ. ಜಂಬೂದ್ವೀಪದ ಸುತ್ತಲೂ ಇರುವ ಲವಣಸಮುದ್ರವು ಜಂಬೂದ್ವೀಪದ ವಿಸ್ತಾರಕ್ಕೆ ಎರಡ ರಷ್ಟಿದೆ. ಅರ್ಥಾತ್ ಲವಣಸಮುದ್ರದ ವಿಸ್ತಾರವು ಮೂವತ್ತೇಳು ಸಾವಿರದ ಇನ್ನೂರು ಯೋಜನಗಳು. ಆ ಸಮುದ್ರದ ತೀರಪ್ರದೇಶಗಳಲ್ಲಿ ಅನೇಕದೇಶ ಗಳಿವೆ. ಸಮುದ್ರದ ಒಳಭಾಗವು ನಾನಾವಿಧವಾದ ಮಣಿಗಳಿಂದಲೂ ಹವಳ ಗಳಿಂದಲೂ ಕೂಡಿದ್ದು ಚಿತ್ರ-ವಿಚಿತ್ರವಾಗಿ ಕಾಣುತ್ತದೆ. ಮನಶ್ಶಿಲೆ, ಹರಿದಳ, ಸಿಂದೂರ, ಅಭ್ರಕ–ಇವೇ ಮುಂತಾದ ಅನೇಕಧಾತುಗಳಿಂದ ಚಿತ್ರ-ವಿಚಿತ್ರವಾಗಿ ಕಾಣುವ, ತೀರಪ್ರದೇಶದ ಪರ್ವತಗಳಿಂದ ಸಮುದ್ರವು

ಶೋಭಾಯಮಾನವಾಗಿ ಕಾಣುತ್ತದೆ. ಸಿದ್ಧ-ಚಾರಣರಿಂದ ತುಂಬಿಹೋಗಿದೆ. ಇಂತಹ ಲವಣಸಮುದ್ರವು ಮಂಡಲಾಕಾರವಾಗಿದೆ.

ಕುರುನಂದನ! ನಾನೀಗ ಶಾಕದ್ವೀಪದ ವಿಷಯವನ್ನು ಯಥಾವತ್ತಾಗಿ ಹೇಳುತ್ತೇನೆ. ನೀನೂ ಸಹ ಯಥೋಕ್ತರೀತಿಯಲ್ಲಿ ಮನಸ್ಸಿಟ್ಟು ನಾನು ಹೇಳುವುದನ್ನು ಕೇಳು.

ಶಾಕದ್ವೀಪವು ಜಂಬೂದ್ವೀಪದ ವಿಸ್ತಾರಕ್ಕೆ ದ್ವಿಗುಣವಾದ ವಿಸ್ತಾರ ವುಳ್ಳದ್ದಾಗಿದೆ. ಅದರ ಸುತ್ತಲೂ ಇರುವ ಸಮುದ್ರವೂ ಸಹ ಶಾಕದ್ವೀಪದ ವಿಸ್ತಾರಕ್ಕೆ ಎರಡರಷ್ಟು ವಿಸ್ತಾರವುಳ್ಳದ್ದಾಗಿದೆ. ಅರ್ಥಾತ್ ಶಾಕದ್ವೀಪದ ವಿಸ್ತಾರ 37, 200 ಯೋಜನಗಳು. ಅದರ ಸುತ್ತಲೂ ಇರುವ ಸಮುದ್ರದ ವಿಸ್ತಾರ 74, 400 ಯೋಜನಗಳು. ಆ ಶಾಕದ್ವೀಪವನ್ನಾವರಿಸಿರುವುದೇ ಕ್ಷೀರಸಮುದ್ರ. ಅದರ ತೀರದಲ್ಲಿ ಅನೇಕ ಪುಣ್ಯದೇಶಗಳಿವೆ. ಅಲ್ಲಿ ವಾಸಮಾಡುವ ಜನರಿಗೆ ಮರಣವೇ ಇಲ್ಲ. ಅವರೆಲ್ಲರೂ ಕ್ಷಮಾಗುಣದಿಂದಲೂ–ತೇಜಸ್ಸಿನಿಂದಲೂ ಯುಕ್ತರಾಗಿರುವುದರಿಂದ ಅವರಿಗೆ ದುರ್ಭಿಕ್ಷವೆಲ್ಲಿಯದು? ಯಾವ ರೀತಿಯ ಈತಿ-ಬಾಧೆಗಳೂ ಇಲ್ಲದೇ ಅವರು ಅಜರಾಮರರಾಗಿರುತ್ತಾರೆ. ಮಹಾರಾಜ! ಶಾಕದ್ವೀಪದ ವಿಷಯವನ್ನು ಸಂಕ್ಷೇಪವಾಗಿ ಯಥಾವತ್ತಾಗಿ ಹೇಳಿರುತ್ತೇನೆ. ಮುಂದೇನು ಹೇಳಲಿ?"

"ಸಂಜಯ! ನೀನೀಗ ಶಾಕದ್ವೀಪದ ವರ್ಣನೆಯನ್ನು ಸಂಕ್ಷೇಪವಾಗಿ ಯಥಾವತ್ತಾಗಿ ಮಾಡಿರುವೆ. ಆದರೆ ನಾನು ಈ ಸಂಕ್ಷೇಪಕಥನದಿಂದ ತೃಪ್ತ ನಾಗಿರುವುದಿಲ್ಲ. ಇದನ್ನು ವಿಸ್ತರಿಸಿ ಹೇಳು."

"ಹಾಗೆಯೇ ಆಗಲಿ. ಶಾಕದ್ವೀಪದಲ್ಲಿಯೂ ಸಹ ಮಣಿಮಯವಾದ ಏಳು ಪರ್ವತಗಳಿವೆ. ಅವುಗಳಲ್ಲಿ ರತ್ನದ ಅನೇಕ ಖನಿಜಗಳಿವೆ. ಪರ್ವತ ಗಳಿಂದ ಅನೇಕನದಿಗಳೂ ಹುಟ್ಟಿ ಪ್ರವಹಿಸುತ್ತವೆ. ಆ ಪರ್ವತಗಳ ನಾಮ ಧೇಯಗಳನ್ನು ಹೇಳುವೆನು, ಕೇಳು :

ಅಲ್ಲಿರುವ ಎಲ್ಲ ವಸ್ತುಗಳೂ ಸಹ ಗುಣಯುಕ್ತವಾಗಿಯೂ ಪವಿತ್ರ ವಾಗಿಯೂ ಇವೆ. ದೇವರ್ಷಿ-ಗಂಧರ್ವರಿಂದ ಕೂಡಿರುವ ಮೇರುಪರ್ವತ,

ಪೂರ್ವದಿಂದ ಪಶ್ಚಿಮಕ್ಕೆ ಹರಡಿಕೊಂಡಿರುವುದು ಮಲಯಪರ್ವತ. ಆ ಮಲಯಪರ್ವತದಿಂದಲೇ ಮೇಘಗಳು ಉತ್ಪನ್ನವಾಗಿ ಎಲ್ಲ ಕಡೆಗಳಿಗೂ ವ್ಯಾಪಿಸುತ್ತವೆ. ಅದಾದನಂತರ ಜಲಧಾರವೆಂಬ ಮಹಾಪರ್ವತವಿದೆ. ಜಲಧಾರಪರ್ವತದಿಂದಲೇ ವಾಸವನು ಶ್ರೇಷ್ಠವಾದ ಜಲವನ್ನು ಪ್ರತಿನಿತ್ಯವೂ ಸಂಗ್ರಹಿಸಿಕೊಳ್ಳುತ್ತಾನೆ. ಹೀಗೆ ಮಾಡುವುದರಿಂದಲೇ ಇಂದ್ರನು ವರ್ಷಾ ಕಾಲದಲ್ಲಿ ಯಥೇಚ್ಛವಾಗಿ ಮಳೆಗರೆಯುತ್ತಾನೆ. ಶಾಕದ್ವೀಪದಲ್ಲಿ ರೈವತಕ ಪರ್ವತವೇ ಎಲ್ಲ ಪರ್ವತಗಳಿಗಿಂತಲೂ ಎತ್ತರವಾದ ಪರ್ವತ. ಆ ಪರ್ವತ ದಲ್ಲಿ ರೇವತೀನಕ್ಷತ್ರವು ಚಿರಸ್ಥಾಯಿಯಾಗಿಬಿಟ್ಟಿದೆ. ರೇವತೀದೇವಿಯು ರೈವತಕಪರ್ವತದಲ್ಲಿಯೇ ಇರಬೇಕೆಂಬುದು ದೇವಿಯ ಹಣೆಯಲ್ಲಿ ಬ್ರಹ್ಮನು ಬರೆದ ಬರಹವಾಗಿದೆ. ವಿಧಿನಿಯಮದಂತೆ ರೇವತೀದೇವಿಯು ಅಲ್ಲಿಯೇ ನೆಲೆಸಿಬಿಟ್ಟಿದ್ದಾಳೆ. ಶಾಕದ್ವೀಪದ ಉತ್ತರದಿಕ್ಕಿನಲ್ಲಿ ಶ್ಯಾಮ ಎಂಬ ಹೆಸರಿನ ಮಹಾಪರ್ವತವಿದೆ. ಅದು ನೂತನಮೇಘಕ್ಕೆ ಸಮಾನವಾದ ಪ್ರಭೆಯಿಂದ ಕೂಡಿದ್ದು ಬಹಳ ಎತ್ತರವಾಗಿದೆ. ಉಜ್ಜ್ವಲವಾದ ಆ ಪರ್ವತದ ಶರೀರವು (ಪ್ರಕಾಶಮಾನವಾದ ಆ ಪರ್ವತವು) ಸಂಪದ್ಯುಕ್ತವಾಗಿದೆ. ಶ್ಯಾಮಪರ್ವತ ದಲ್ಲಿ ವಾಸಮಾಡುವ ಜನರು ಆ ಪರ್ವತದ ಸಹಯೋಗದಿಂದಾಗಿ ಶ್ಯಾಮಲ ವರ್ಣದವರಾಗಿರುತ್ತಾರೆ."

"ಸೂತಪುತ್ರ! ನಿನ್ನ ಈ ಮಾತಿನಿಂದ ನನಗೆ ದೊಡ್ಡದೊಂದು ಸಂಶಯವಾಗಿಬಿಟ್ಟಿದೆ. ಪರ್ವತವು ಶ್ಯಾಮಲವರ್ಣವಾಗಿದ್ದರೆ ಪ್ರಜೆಗಳೇಕೆ ಶ್ಯಾಮಲವರ್ಣದವರಾದರು?"

**ಸರ್ವೇಷ್ವೇವ ಮಹಾರಾಜ ದ್ವೀಪೇಷು ಕುರುನನ್ದನ ।**
**ಗೌರಃ ಕೃಷ್ಣಶ್ಚ ವರ್ಣೌ ದ್ವೌ ತಯೋರ್ವರ್ಣಾನ್ತರಂ ನೃಪ ॥೨೧॥**

**ಶ್ಯಾಮೋ ಯಸ್ಮಾತ್ಪ್ರವೃತ್ತೋ ವೈ ತತ್ತೇ ವಕ್ಷ್ಯಾಮಿ ಭಾರತ ।**
**ಅಸ್ತೇಽತ್ರ ಭಗವಾನ್ಕೃಷ್ಣಸ್ತತ್ಕಾನ್ತ್ಯಾ ಶ್ಯಾಮತಾಂ ಗತಃ ॥೨೨॥**

"ಕುರುನಂದನನೇ! ಮಹಾರಾಜ! ಎಲ್ಲ ದ್ವೀಪಗಳಲ್ಲಿಯೂ ಗೌರಾಂಗರು ಮತ್ತು ಕೃಷ್ಣವರ್ಣದವರು ಎಂಬ ಎರಡು ಬಗೆಯ ಬಣ್ಣದ ಜನಗಳಿರುತ್ತಾರೆ. (ಬಿಳಿಯ ಮತ್ತು ಕಪ್ಪುಬಣ್ಣದ ಜನರಿರುತ್ತಾರೆ.)

ಅಥವಾ ಈ ಎರಡು ಬಣ್ಣಗಳ ಮಿಶ್ರಣದ ಬಣ್ಣದವರಾಗಿಯೂ ಇರುತ್ತಾರೆ. (ಹೆಚ್ಚು ಬಿಳುಪಾಗಿಯೂ ಇರುವುದಿಲ್ಲ. ಹೆಚ್ಚು ಕಪ್ಪಾಗಿಯೂ ಇರುವುದಿಲ್ಲ.) ಆದರೆ ಆ ಪರ್ವತವು ಮಾತ್ರ ಹೇಗೆ ಶ್ಯಾಮಲವರ್ಣವಾಯಿತು ಮತ್ತು ಅಲ್ಲಿಯ ಜನರು ಶ್ಯಾಮಲವರ್ಣದವರು ಹೇಗಾದರು?–ಎಂಬುದನ್ನು ಹೇಳುವೆನು ; ಕೇಳು. ಆ ಪರ್ವತದಲ್ಲಿಯೇ ಭಗವಾನ್ ಶ್ರೀಕೃಷ್ಣನಿದ್ದಾನೆ. ಅವನು ಶ್ಯಾಮಲವರ್ಣನು. (ಕಡು ನೀಲೀಬಣ್ಣದವನು.) ಅವನ ಸಹ ಯೋಗದಿಂದಾಗಿ ಆ ಪರ್ವತವೂ ಶ್ಯಾಮಲವರ್ಣವಾಯಿತು. ಅಲ್ಲಿ ವಾಸ ಮಾಡುವ ಜನರೂ ಶ್ಯಾಮಪರ್ವತದ ಸಹಯೋಗದಿಂದಾಗಿ ಶ್ಯಾಮಲವರ್ಣ ದವರೇ ಆದರು. ಶ್ಯಾಮಪರ್ವತದ ನಂತರ ಬಹಳ ಎತ್ತರವಾಗಿರುವ ದುರ್ಗ ಶೈಲಪರ್ವತವಿದೆ. ಕೌರವೇಂದ್ರ! ಅದಾದನಂತರ ಕೇಸರಪರ್ವತವಿದೆ. ವಾಯುವು ಆ ಪರ್ವತದ ಮೇಲೆ ಬೀಸಿ ಕೇಸರಗಂಧಯುಕ್ತವಾಗಿ ಸರ್ವತ್ರ ವ್ಯಾಪಿಸುತ್ತದೆ. ಅನುಕ್ರಮವಾಗಿ ಆ ಪರ್ವತಗಳ ವಿಸ್ತಾರವು ದ್ವಿಗುಣಿತವಾಗಿದೆ. (ಅರ್ಥಾತ್ ಮೊದಲನೆಯ ಪರ್ವತವಾದ ಮೇರುವಿನ ವಿಸ್ತಾರವು ಸಾವಿರ ಯೋಜನಗಳಿದ್ದರೆ ಎರಡನೆಯದಾದ ಮಲಯಪರ್ವತದ ವಿಸ್ತಾರವು ಎರಡು ಸಾವಿರ ಯೋಜನಗಳು. ಮೂರನೆಯ ಪರ್ವತದ ವಿಸ್ತಾರವು ನಾಲ್ಕು ಸಾವಿರ ಯೋಜನಗಳು. ಹೀಗೆ ಒಂದಕ್ಕೆರಡರಂತೆ ಅಧಿಕವಾಗುತ್ತಾ ಹೋಗುತ್ತದೆ.) ಶಾಕದ್ವೀಪದಲ್ಲಿಯೂ ಸಹ ಏಳು ವರ್ಷಗಳು ಅಥವಾ ಖಂಡಗಳಿವೆಯೆಂದು ಮನೀಷಿಗಳು ಹೇಳುತ್ತಾರೆ.

**ಮಹಾಮೇರುರ್ಮಹಾಕಾಶೋ ಜಲದಃ ಕುಮುದೋತ್ತರಃ ।**
**ಜಲಧಾರೋ ಮಹಾರಾಜ ಸುಕುಮಾರ ಇತಿ ಸ್ಮೃತಃ ॥೨೫॥**

ಮಹಾಮೇರುಪರ್ವತದ ಸಮೀಪದಲ್ಲಿ ಮಹಾಕಾಶವರ್ಷವಿದೆ. ಜಲದ ಅಥವಾ ಮಲಯಪರ್ವತದ ಸಮೀಪದಲ್ಲಿ ಕುಮುದೋತ್ತರವರ್ಷವಿದೆ. ಜಲಧಾರಪರ್ವತದ ಸಮೀಪದಲ್ಲಿ ಸುಕುಮಾರವರ್ಷವಿದೆ.

**ರೇವತಸ್ಯ ತು ಕೌಮಾರಃ ಶ್ಯಾಮಸ್ಯ ಮಣಿಕಾಞ್ಚನಃ ।**
**ಕೇಸರಸ್ಯಾಥ ಮೋದಾಕೀ ಪರೇಣ ತು ಮಹಾಪುಮಾನ್ ॥೨೬॥**

ರೈವತಕಪರ್ವತದ ಸಮೀಪದಲ್ಲಿ ಕುಮಾರವರ್ಷವಿದೆ. ಶ್ಯಾಮಪರ್ವ ತದ ಸಮೀಪದಲ್ಲಿ ಮಣಿಕಾಂಚನವರ್ಷವಿದೆ. ಕೇಸರಪರ್ವತದ ಸಮೀಪದಲ್ಲಿ

ಮೋದಾಕಿಖಂಡವಿದೆ. ಮೋದಾಕಿವರ್ಷದನಂತರ ಮಹಾಪುಮಾನ್ ಎಂಬ ಪರ್ವತವಿದೆ. ಆ ಪರ್ವತವು ಉದ್ದವಾಗಿಯೂ ಅಗಲವಾಗಿಯೂ ಇದ್ದು ಅದರ ಸಮೀಪದ ದ್ವೀಪವನ್ನು ಸುತ್ತುವರಿದಿದೆ. ಆ ದ್ವೀಪದ ಮಧ್ಯದಲ್ಲಿ ಜಂಬೂದ್ವೀಪದಷ್ಟು ವಿಶಾಲವಾದ ಶಾಕ ಎಂಬ ಹೆಸರಿನ ಮಹಾವೃಕ್ಷವಿದೆ. ಅಲ್ಲಿಯ ಮಾನವರು ಯಾವಾಗಲೂ ಆ ವೃಕ್ಷವನ್ನಾಶ್ರಯಿಸಿರುತ್ತಾರೆ. ಆ ದ್ವೀಪದಲ್ಲಿ ಅನೇಕಪುಣ್ಯದೇಶಗಳಿವೆ. ಆ ದೇಶಗಳಲ್ಲಿ ಮುಖ್ಯವಾಗಿ ಭಗವಾನ್ ಶಂಕರನನ್ನು ಆರಾಧಿಸುತ್ತಾರೆ. ಆ ದ್ವೀಪಕ್ಕೆ ಸಿದ್ಧರೂ, ಚಾರಣರೂ, ದೇವತೆಗಳೂ ಹೋಗುತ್ತಲೇ ಇರುತ್ತಾರೆ. ಆ ದ್ವೀಪದಲ್ಲಿ ನಾಲ್ಕು ವರ್ಣದವರೂ ಸಹ ಅತ್ಯಂತಧಾರ್ಮಿಕರಾಗಿರುತ್ತಾರೆ.

**ವರ್ಣಾಃ ಸ್ವಕರ್ಮನಿರತಾ ನ ಚ ಸ್ತೇನೋऽತ್ರ ದೃಶ್ಯತೇ ।**
**ದೀರ್ಘಾಯುಷೋ ಮಹಾರಾಜ ಜರಾಮೃತ್ಯುವಿವರ್ಜಿತಾಃ ॥೩೦॥**

ಬ್ರಾಹ್ಮಣರೇ ಮೊದಲಾದ ನಾಲ್ಕು ವರ್ಣದವರೂ ಸಹ ತಮ್ಮ-ತಮ್ಮ ವರ್ಣೋಕ್ತವಾದ ಕರ್ಮಾನುಷ್ಠಾನಗಳಲ್ಲಿ ಸದಾ ನಿರತರಾಗಿರುತ್ತಾರೆ. ಅಲ್ಲಿ ಕಳ್ಳನೆಂಬುವನನ್ನೇ ನಾವು ಕಾಣಲಾರೆವು. ಆ ದ್ವೀಪದಲ್ಲಿ ಕಳ್ಳತನವೇ ನಡೆಯುವುದಿಲ್ಲ. ಮಾನವರೆಲ್ಲರೂ ಮುಪ್ಪು-ಸಾವುಗಳಿಂದ ವಿವರ್ಜಿತರಾಗಿ ದೀರ್ಘಾಯುಷ್ಮಂತರಾಗಿರುತ್ತಾರೆ.

**ಪ್ರಜಾಸ್ತತ್ರ ವಿವರ್ಧಂತೇ ವರ್ಷಾಸ್ವಿವ ಸಮುದ್ರಗಾಃ ।**
**ನದ್ಯಃ ಪುಣ್ಯಜಲಾಸ್ತತ್ರ ಗಙ್ಗಾ ಚ ಬಹುಧಾ ಗತಾ ॥೩೧॥**

ವರ್ಷರ್ತುವಿನಲ್ಲಿ ಸಮುದ್ರಗಾಮಿನಿಗಳಾದ ನದಿಗಳು ವೃದ್ಧಿಸಿ (ತುಂಬಿ) ಹರಿಯುವಂತೆ ಆ ದ್ವೀಪದ ಪ್ರಜೆಗಳು ಕಾಲ-ಕಾಲಕ್ಕೆ ವೃದ್ಧಿಹೊಂದುತ್ತಲೇ ಇರುತ್ತಾರೆ. ಆ ದ್ವೀಪದ ನದಿಗಳು ಪವಿತ್ರಜಲದಿಂದ ತುಂಬಿ ಹರಿಯುತ್ತವೆ. ಗಂಗಾನದಿಯು ಅನೇಕಶಾಖೆಗಳಾಗಿ ಆ ದ್ವೀಪದಲ್ಲಿ ಹರಿಯುತ್ತದೆ.

**ಸುಕುಮಾರೀ ಕುಮಾರೀ ಚ ಶೀತಾಶೀ ವೇಣಿಕಾ ತಥಾ ।**
**ಮಹಾನದೀ ಚ ಕೌರವ್ಯ ತಥಾಮಣಿಜಲಾ ನದೀ ॥೩೨॥**

**ಚಕ್ಷುರ್ವರ್ಧನಿಕಾ ಚೈವ ನದೀ ಭರತಸತ್ತಮ ।**
**ತತ್ರ ಪ್ರವೃತ್ತಾಃ ಪುಣ್ಯೋದಾ ನದ್ಯಃ ಕುರುಕುಲೋದ್ವಹ ॥೩೩॥**

ಕುರುನಂದನ! ಆ ದ್ವೀಪದಲ್ಲಿ ಸುಕುಮಾರೀ, ಕುಮಾರೀ, ಶೀತಾಶೀ, ವೇಣಿಕಾ, ಮಹಾನದೀ, ಮಣಿಜಲಾ ಮತ್ತು ಚಕ್ಷುರ್ವರ್ಧನಿಕಾ ಇವೇ ಮೊದಲಾದ ನದಿಗಳು ಪುಣ್ಯೋದಕಯುಕ್ತವಾಗಿ ಹರಿಯುತ್ತವೆ.

ಆ ದ್ವೀಪದಲ್ಲಿ ಈ ನದಿಗಳಲ್ಲದೇ ಶತಸಹಸ್ರಸಂಖ್ಯೆಯಲ್ಲಿ ಇನ್ನೂ ಅನೇಕನದಿಗಳು ಹರಿಯುತ್ತವೆ. ಆ ನದಿಗಳಿಂದ ನೀರನ್ನು ಸಂಗ್ರಹಿಸಿ ಇಂದ್ರನು ವರ್ಷಾಕಾಲದಲ್ಲಿ ಮಳೆಗರೆಯುತ್ತಾನೆ. ಆ ಅಸಂಖ್ಯಾತವಾದ ನದಿಗಳ ನಾಮಧೇಯಗಳನ್ನಾಗಲೀ ಅವುಗಳ ಪರಿಮಾಣವನ್ನಾಗಲೀ ಹೇಳುವ ಸಾಧ್ಯತೆಯೇ ಇಲ್ಲ. ಅಂತಹ ನದಿಗಳು ಎಷ್ಟಿವೆಯೆಂಬುದನ್ನೂ ಗಣನೆಮಾಡಿ ಹೇಳುವ ಸಾಧ್ಯತೆಯೂ ಇಲ್ಲ. ಆ ನದಿಗಳೆಲ್ಲವೂ ಶ್ರೇಷ್ಠವೂ ಮತ್ತು ಪುಣ್ಯಪ್ರದವೂ ಆಗಿವೆ. ಆ ದ್ವೀಪದಲ್ಲಿ ಲೋಕಸಮ್ಮತವಾದ ನಾಲ್ಕು ಪವಿತ್ರದೇಶಗಳಿವೆ.

**ಮಙ್ಗಾಶ್ಚ ಮಶಕಾಶ್ಚೈವ ಮಾನಸಾ ಮನ್ದಗಾಸ್ತಥಾ ।**
**ಮಙ್ಗಾ ಬ್ರಾಹ್ಮಣಭೂಯಿಷ್ಠಾಃ ಸ್ವಕರ್ಮನಿರತಾ ನೃಪ ॥೩೬॥**
**ಮಶಕೇಷು ತು ರಾಜನ್ಯಾ ಧಾರ್ಮಿಕಾಃ ಸರ್ವಕಾಮದಾಃ ।**
**ಮಾನಸಾಶ್ಚ ಮಹಾರಾಜ ವೈಶ್ಯಧರ್ಮೋಪಜೀವಿನಃ ॥೩೭॥**
**ಸರ್ವಕಾಮಸಮಾಯುಕ್ತಾಃ ಶೂರಾ ಧರ್ಮಾರ್ಥನಿಶ್ಚಿತಾಃ ।**
**ಶೂದ್ರಾಸ್ತು ಮನ್ದಗಾ ನಿತ್ಯಂ ಪುರುಷಾ ಧರ್ಮಶೀಲಿನಃ ॥೩೮॥**

ಮಹಾರಾಜ! ಆ ಪವಿತ್ರದೇಶಗಳ ನಾಮಧೇಯಗಳು ಈ ರೀತಿಯಾಗಿವೆ. ಮಂಗ, ಮಶಕ, ಮಾನಸ ಮತ್ತು ಮಂದಗ–ಇವೇ ಆ ನಾಲ್ಕು ಪವಿತ್ರದೇಶಗಳು. ಮೊದಲನೆಯದಾದ ಮಂಗದೇಶವು ಬ್ರಾಹ್ಮಣರಿಂದ ತುಂಬಿದೆ. ಅವರೆಲ್ಲರೂ ಸ್ವಕರ್ಮನಿರತರಾಗಿರುತ್ತಾರೆ. ಮಶಕದೇಶಗಳಲ್ಲಿ ಧಾರ್ಮಿಕರಾದ, ಯಾಚಿಸಿದವರ ಕಾಮನೆಗಳೆಲ್ಲವನ್ನೂ ಪೂರ್ಣಗೊಳಿಸುವ ರಾಜರಿದ್ದಾರೆ. ಮಾನಸದೇಶದಲ್ಲಿ ವೈಶ್ಯಧರ್ಮೋಪಜೀವಿಗಳಾದ ಜನರಿದ್ದಾರೆ. (ವೈಶ್ಯರಿದ್ದಾರೆ.) ಅವರು ಸಕಲವಿಧವಾದ ಕಾಮನಾವಸ್ತುಗಳಿಂದಲೂ ಕೂಡಿದ್ದು ಶೂರರಾಗಿಯೂ–ಧರ್ಮಾರ್ಥಗಳಲ್ಲಿ ನಿಶ್ಚಯಜ್ಞಾನವುಳ್ಳವರಾಗಿಯೂ ಇದ್ದಾರೆ. ಮಂದಗದೇಶದಲ್ಲಿ ಶೂದ್ರರಿದ್ದಾರೆ. ಅವರೂ ಸಹ ಧರ್ಮಶೀಲರಾಗಿರುತ್ತಾರೆ.

**ನ ತತ್ರ ರಾಜಾ ರಾಜೇನ್ದ್ರ ನ ದಣ್ಡೋ ನ ಚ ದಣ್ಡಿಕಃ ।**
**ಸ್ವಧರ್ಮೇಣೈವ ಧರ್ಮಜ್ಞಾಸ್ತೇ ರಕ್ಷನ್ತಿ ಪರಸ್ಪರಮ್ ॥೩೮॥**

ಧೃತರಾಷ್ಟ್ರ! ಆ ದ್ವೀಪದ ಒಂದು ವೈಚಿತ್ರ್ಯವೇನೆಂದರೆ : ಅಲ್ಲಿ ರಾಜರೂ ಇಲ್ಲ. ದಂಡಪ್ರಯೋಗವೂ ಇಲ್ಲ ; ಶಿಕ್ಷಿಸುವವರೂ ಇಲ್ಲ. ಶಿಕ್ಷೆಯನ್ನು ಕೊಡತಕ್ಕವನೂ ಇಲ್ಲ ; ಶಿಕ್ಷೆಯನ್ನು ಅನುಭವಿಸತಕ್ಕವನೂ ಇಲ್ಲ. ರಕ್ಷಕನೂ ಇಲ್ಲ ; ರಕ್ಷಿಸಿಕೊಳ್ಳತಕ್ಕವನೂ ಇಲ್ಲ. ಧರ್ಮಜ್ಞರಾದ ಅವರು ಸ್ವಧರ್ಮಾನುಷ್ಠಾನದಲ್ಲಿದ್ದುಕೊಂಡು ಆ ಧರ್ಮದ ಪ್ರಭಾವದಿಂದಲೇ ಪರಸ್ಪರವಾಗಿ ರಕ್ಷಣೆಮಾಡಿಕೊಳ್ಳುತ್ತಾರೆ.

ಮಹಾರಾಜ! ತೇಜೋಮಯವಾದ ಶಾಕದ್ವೀಪದ ವಿಷಯವಾಗಿ ಇಷ್ಟು ಮಾತ್ರ ಹೇಳಲು ಸಾಧ್ಯ ಮತ್ತು ಆ ದ್ವೀಪದ ವಿಷಯವಾಗಿ ಇಷ್ಟು ಮಾತ್ರವೇ ತಿಳಿದುಕೊಳ್ಳಬಹುದು. ಹೆಚ್ಚು ತಿಳಿದುಕೊಳ್ಳಲು ಪ್ರಯತ್ನಿಸಲೇ ಬಾರದು."

ಹಿ೧ನೆಯ ಅಧ್ಯಾಯವು ಮುಗಿಯಿತು.

೧೨ನೆಯ ಅಧ್ಯಾಯ ಭೂಮಿಪರ್ವ (ಮುಂದುವರಿದಿದೆ.)

## ಕುಶ-ಕ್ರೌಂಚ-ಪುಷ್ಕರಾದಿ ದ್ವೀಪಗಳ ಮತ್ತು ರಾಹು-ಸೂರ್ಯ-ಚಂದ್ರರ ವರ್ಣನೆ

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಧೃತರಾಷ್ಟ್ರ! ಉತ್ತರದಲ್ಲಿರುವ ದ್ವೀಪಗಳ ವಿಷಯವಾಗಿ ಪ್ರಚಲಿತವಾಗಿರುವ ಕಥೆಯನ್ನು ನಾನು ಕೇಳಿರುವಂತೆಯೇ ನಿನಗೂ ತಿಳಿಸುತ್ತೇನೆ. ಕೇಳು:

**ಘೃತತೋಯಃ ಸಮುದ್ರೋಽತ್ರ ದಧಿಮಣ್ಡೋದಕೋಽಪರಃ ।**
**ಸುರೋದಃ ಸಾಗರಶ್ಚೈವ ತಥಾನ್ಯೋ ಜಲಸಾಗರಃ ॥೨॥**

ಆ ದ್ವೀಪಗಳಲ್ಲಿ ತುಪ್ಪವೇ ನೀರಾಗಿ ಉಳ್ಳ ಸಮುದ್ರವಿದೆ. ಅನಂತರ ಮೊಸರೇ ನೀರಾಗಿ ಉಳ್ಳ ಸಮುದ್ರವಿದೆ. ಅದಾದನಂತರ ಸುರೆಯೇ ನೀರಾಗಿ

ಉಳ್ಳ ಸಮುದ್ರವಿದೆ. ಅನಂತರದಲ್ಲಿ ಪುನಃ ನೀರಿನ ಸಮುದ್ರವು ಸಿಕ್ಕುತ್ತದೆ. ಆ ಸಮುದ್ರಗಳಿಂದ ಸುತ್ತುವರಿಯಲ್ಪಟ್ಟಿರುವ ದ್ವೀಪಗಳಲ್ಲಿ ಅನುಕ್ರಮವಾಗಿ ಒಂದು ದ್ವೀಪವು ಮತ್ತೊಂದು ದ್ವೀಪಕ್ಕಿಂತ ಎರಡರಷ್ಟು ವಿಸ್ತಾರವಾಗಿದೆ ಮತ್ತು ಆ ದ್ವೀಪಗಳಲ್ಲಿರುವ ಪರ್ವತಗಳೂ ಸಹ ಅನುಕ್ರಮವಾಗಿ ಮೊದಲನೆಯ ದ್ವೀಪದ ಪರ್ವತಗಳಿಗಿಂತ ಎರಡರಷ್ಟು ಎತ್ತರವಾಗಿವೆ.

**ಗೌರಸ್ತು ಮಧ್ಯಮೇ ದ್ವೀಪೇ ಗಿರಿರ್ಮಾನಃಶಿಲೋ ಮಹಾನ್ ।**
**ಪರ್ವತಃ ಪಶ್ಚಿಮೇ ಕೃಷ್ಣೋ ನಾರಾಯಣಸಖೋ ನೃಪ ॥೪॥**

ಆ ದ್ವೀಪಸ್ತೋಮಗಳ ಮಧ್ಯದಲ್ಲಿರುವ ದ್ವೀಪದಲ್ಲಿ (ಕುಶದ್ವೀಪ) ದೊಡ್ಡದಾದ ಮನಃಶಿಲಾಪರ್ವತವಿದೆ. ಆ ಪರ್ವತಕ್ಕೆ ಗೌರಪರ್ವತವೆಂದೂ ಹೆಸರು. ಆ ದ್ವೀಪದ ಪಶ್ಚಿಮದಿಕ್ಕಿನಲ್ಲಿ ಕೃಷ್ಣ ಎಂಬ ಹೆಸರಿನ ಪರ್ವತವಿದೆ. ಆ ಪರ್ವತವು ನಾರಾಯಣನಿಗೆ ಅತ್ಯಂತಪ್ರಿಯವಾದ ಪರ್ವತವಾಗಿದೆ.

ಆ ಪರ್ವತದಲ್ಲಿರುವ ದಿವ್ಯವಾದ ರತ್ನಗಳನ್ನು ಸ್ವಯಂ ಕೇಶವನೇ ರಕ್ಷಿಸುತ್ತಿದ್ದಾನೆ. ಅಲ್ಲಿಯ ಪ್ರಜೆಗಳ ವಿಷಯದಲ್ಲಿಯೂ ಸಹ ಕೇಶವನು ಪ್ರಸನ್ನನಾಗಿದ್ದುಕೊಂಡು ಅವರು ಯಾವಾಗಲೂ ಸುಖವಾಗಿರುವಂತೆ ವ್ಯವಸ್ಥೆ ಮಾಡಿದ್ದಾನೆ. ಕುಶದ್ವೀಪದ ಮಧ್ಯದಲ್ಲಿ ಒಂದು ಕುಶಸ್ತಂಭವಿದೆ. ಅದನ್ನು ಅಲ್ಲಿರುವ ಪ್ರಜೆಗಳು ಸಂಪೂಜಿಸುತ್ತಾರೆ. ಅಂತೆಯೇ ಶಾಲ್ಮಲೀದ್ವೀಪ ದಲ್ಲಿಯೂ ಸಹ ಶಾಲ್ಮಲೀವೃಕ್ಷವಿದೆ. (ಬೂರುಗದ ಮರವಿದೆ.) ಅದನ್ನೂ ಸಹ ಆ ದ್ವೀಪದಲ್ಲಿರುವ ಪ್ರಜೆಗಳು ಸಂಪೂಜಿಸುತ್ತಾರೆ.

ಕ್ರೌಂಚದ್ವೀಪದಲ್ಲಿ ರತ್ನಗಳ ಸಮೂಹದಿಂದ ಕೂಡಿದ ಕ್ರೌಂಚವೆಂಬ ಮಹಾಪರ್ವತವಿದೆ. ಆ ದ್ವೀಪದಲ್ಲಿರುವ ಚಾತುರ್ವರ್ಣ್ಯದವರು ಆ ಪರ್ವತ ವನ್ನು ಅನುದಿನವೂ ಪೂಜಿಸುತ್ತಾರೆ.

**ಗೋಮನ್ತಃ ಪರ್ವತೋ ರಾಜನ್ಸುಮಹಾನ್ಸರ್ವಧಾತುಕಃ ।**
**ಯತ್ರ ನಿತ್ಯಂ ನಿವಸತಿ ಶ್ರೀಮಾನ್ಕಮಲಲೋಚನಃ ।**
**ಮೋಕ್ಷಿಭಿಃ ಸಂಸ್ತುತೋ ನಿತ್ಯಂ ಪ್ರಭುರ್ನಾರಾಯಣೋ ಹರಿಃ ॥೮॥**

ಆ ಕ್ರೌಂಚದ್ವೀಪದಲ್ಲಿಯೇ ಸರ್ವಧಾತುಗಳಿಂದಲೂ ಕೂಡಿರುವ ಬಹಳ ದೊಡ್ಡದಾದ ಗೋಮಂತಪರ್ವತವಿದೆ. ಮೋಕ್ಷಾಪೇಕ್ಷಿಗಳಿಂದ ಸಂಸ್ತೂಯ ಮಾನನಾದ, ಪ್ರಭುವಾದ, ಕಮಲಲೋಚನನಾದ, ನಾರಾಯಣನಾದ

ಶ್ರೀಹರಿಯು ಆ ಪರ್ವತದಲ್ಲಿಯೇ ವಾಸವಾಗಿದ್ದಾನೆ. ಕುಶದ್ವೀಪದಲ್ಲಿ ಪ್ರವಾಳಗಳಿಂದ ಕೂಡಿರುವ, ಹತ್ತಲಸಾಧ್ಯವಾದ, ಸುವರ್ಣಮಯವಾದ ಸುಧಾಮಾ ಎಂಬ ಹೆಸರಿನ ಎರಡನೆಯ ಪರ್ವತವಿದೆ. ಆ ದ್ವೀಪದಲ್ಲಿಯೇ ಇರುವ ಮೂರನೆಯ ಪರ್ವತಕ್ಕೆ ದ್ಯುತಿಮತ್ಪರ್ವತವೆಂದೂ ಕುಮುದವೆಂದೂ ಹೆಸರು. ನಾಲ್ಕನೆಯದಕ್ಕೆ ಪುಷ್ಪವತ್ಪರ್ವತವೆಂದೂ, ಐದನೆಯದಕ್ಕೆ ಕುಶೇಶಯವೆಂದೂ, ಆರನೆಯದಕ್ಕೆ ಹರಿಗಿರಿಯೆಂದೂ ಹೆಸರು. ಕುಶದ್ವೀಪ ದಲ್ಲಿ ಆ ಆರು ಪರ್ವತಗಳೂ ಶ್ರೇಷ್ಠವಾದ ಪರ್ವತಗಳೆಂದು ಪರಿಗಣಿತ ವಾಗಿವೆ. ಆ ಪರ್ವತಗಳ ವಿಸ್ತಾರವು ಉತ್ತರೋತ್ತರ ದ್ವಿಗುಣಿತವಾಗುತ್ತಾ ಹೋಗುತ್ತದೆ. (ಹಿಂದೆಯೇ ಒಮ್ಮೆ ಹೇಳಿದಂತೆ ಕುಶದ್ವೀಪದಲ್ಲಿ ಮೊದ ಲನೆಯದಾದ ಗೌರಪರ್ವತಕ್ಕೂ–ಎರಡನೆಯದಾದ ಸುಧಾಮಾಪರ್ವತಕ್ಕೂ ಅಂತರವು ಒಂದು ಸಾವಿರ ಯೋಜನವಾಗಿದ್ದರೆ ಸುಧಾಮಾಪರ್ವತಕ್ಕೂ– ಮೂರನೆಯದಾದ ಕುಮುದಪರ್ವತಕ್ಕೂ ಅಂತರವು ಎರಡುಸಾವಿರ ಯೋಜನಗಳು. ಕುಮುದಪರ್ವತಕ್ಕೂ–ಪುಷ್ಪವತ್ಪರ್ವತಕ್ಕೂ ಅಂತರ ನಾಲ್ಕು ಸಾವಿರ ಯೋಜನಗಳು. ಹೀಗೆಯೇ ಉತ್ತರೋತ್ತರ ದ್ವಿಗುಣಿತವಾಗುತ್ತಾ ಹೋಗುತ್ತದೆ.) ಕುಶದ್ವೀಪದಲ್ಲಿರುವ ಮೊದಲನೆಯ ಖಂಡದ ಅಥವಾ ವರ್ಷದ ಹೆಸರು ಔದ್ಭಿದ. ಎರಡನೆಯದು ವೇಣುಮಂಡಲ. ಮೂರನೆ ಯದು ಸುರಥಾಕಾರ. ನಾಲ್ಕನೆಯದು ಕಂಬಲ. ಐದನೆಯದು ಧೃತಿಮಂತ. ಆರನೆಯದು ಪ್ರಭಾಕರವರ್ಷ. ಏಳನೆಯದು ಕಾಪಿಲವರ್ಷ. ಈ ಏಳು ಕುಶದ್ವೀಪದಲ್ಲಿರುವ ಖಂಡಗಳ ಸಮುದಾಯಗಳಾಗಿವೆ. ಆ ವರ್ಷಗಳಲ್ಲಿ ದೇವ-ಗಂಧರ್ವರೂ ಮತ್ತು ಮಾನವರೂ ಆನಂದತುಂದಿಲರಾಗಿ ವಿಹರಿಸು ತ್ತಿರುತ್ತಾರೆ. ಅಲ್ಲಿ ಜನರು ಸಾಯುವುದಿಲ್ಲ. ದಸ್ಯುಗಳಾಗಲೀ (ಕಳ್ಳರು) ಮ್ಲೇಚ್ಛರಾಗಲೀ ಆ ಖಂಡಗಳಲ್ಲಿರುವುದಿಲ್ಲ. ಕುಶದ್ವೀಪದ ವರ್ಷಗಳಲ್ಲಿರುವ ಜನರು ಸಾಮಾನ್ಯವಾಗಿ ಗೌರಾಂಗರಾಗಿರುತ್ತಾರೆ. ಸುಕುಮಾರರಾಗಿರುತ್ತಾರೆ.

ಮಹಾರಾಜ! ಮುಂದೆ ನಾನು ಉಳಿದೆಲ್ಲ ದ್ವೀಪಗಳ ವಿಷಯಗಳನ್ನೂ ಹೇಳುತ್ತೇನೆ. ನಾನು ಈ ವಿಷಯವನ್ನು ಹೇಗೆ ಕೇಳಿದ್ದೇನೆಯೋ ಹಾಗೆಯೇ ನಿನಗೂ ಹೇಳುತ್ತೇನೆ. ಏಕಾಗ್ರಚಿತ್ತನಾಗಿ ಕೇಳು : ನಾನು ಈ ಹಿಂದೆಯೇ ಹೇಳಿದಂತೆ ಕ್ರೌಂಚದ್ವೀಪದಲ್ಲಿ ಕ್ರೌಂಚವೆಂಬ ಮಹಾಪರ್ವತವಿದೆ. ಕ್ರೌಂಚ

ಪರ್ವತದನಂತರ ವಾಮನಪರ್ವತವಿದೆ. ಅದಾದಮೇಲೆ ಅಂಧಕಾರಪರ್ವತ ವಿದೆ. ಅಂಧಕಾರಪರ್ವತವನ್ನು ದಾಟಿದರೆ ಶ್ರೇಷ್ಠವಾದ ಮೈನಾಕಪರ್ವತವು ಸಿಕ್ಕುತ್ತದೆ. ಮೈನಾಕಪರ್ವತದನಂತರ ಉತ್ತಮೋತ್ತಮವಾದ ಗೋವಿಂದಗಿರಿ ಎಂಬ ಪರ್ವತವಿದೆ. ಗೋವಿಂದಗಿರಿಯನ್ನು ದಾಟಿದರೆ ನಿಬಿಡವೆಂಬ ಪರ್ವತವಿದೆ. ಹಿಂದಿನ ದ್ವೀಪಗಳಂತೆಯೇ ಕ್ರೌಂಚದ್ವೀಪದಲ್ಲಿಯೂ ಸಹ ಒಂದು ಪರ್ವತದಿಂದ ಮತ್ತೊಂದು ಪರ್ವತದ ಅಂತರವು ಉತ್ತರೋತ್ತರ ದ್ವಿಗುಣಿಸುತ್ತದೆ. ಆ ಪರ್ವತಗಳ ನಡುವೆ ಇರುವ ದೇಶಗಳನ್ನು ಹೇಳುತ್ತೇನೆ, ಸಾವಧಾನವಾಗಿ ಕೇಳು. ಕ್ರೌಂಚಪರ್ವತದ ಸಮೀಪದಲ್ಲಿ ಕುಶಲ ಎಂಬ ದೇಶವಿದೆ. ವಾಮನಪರ್ವತದ ಸಮೀಪದಲ್ಲಿ ಮನೋನುಗ ಎಂಬ ದೇಶ ವಿದೆ. ಮನೋನುಗದೇಶದನಂತರ ಉಷ್ಣದೇಶವು ಸಿಕ್ಕುತ್ತದೆ. ಉಷ್ಣದೇಶದ ನಂತರ ಪ್ರಾವರಕದೇಶವೂ, ಪ್ರಾವರಕದೇಶದ ನಂತರ ಅಂಧಕಾರಕದೇಶವೂ, ಅಂಧಕಾರಕದೇಶದನಂತರ ಮುನಿದೇಶವೂ ಸಿಕ್ಕುತ್ತದೆ. ಮುನಿದೇಶದನಂತರ ಇರುವ ದೇಶಕ್ಕೆ ದುಂದುಭಿಸ್ವನವೆಂದು ಹೆಸರು. ಆ ದೇಶಗಳೆಲ್ಲವೂ ಸಿದ್ಧ-ಚಾರಣರಿಂದ ತುಂಬಿಹೋಗಿವೆ. ಕುಶದ್ವೀಪದಲ್ಲಿರುವಂತೆಯೇ ಅಲ್ಲಿಯ ಜನರೂ ಸಹ ಪ್ರಾಯಶಃ ಗೌರಾಂಗರಾಗಿರುತ್ತಾರೆ. ಮಹಾರಾಜ! ಆ ದೇಶ ಗಳೆಲ್ಲವೂ ದೇವ-ಗಂಧರ್ವರಿಂದ ಸಂಸೇವ್ಯಮಾನವಾಗಿರುತ್ತವೆ.

ಮಹಾರಾಜ! ಮುಂದೆ ಪುಷ್ಕರದ್ವೀಪದ ವಿಷಯವನ್ನು ಹೇಳುತ್ತೇನೆ. ಪುಷ್ಕರದ್ವೀಪದಲ್ಲಿ ಮಣಿರತ್ನಗಳಿಂದ ಕೂಡಿರುವ ಪುಷ್ಕರವೆಂಬ ಹೆಸರಿನ ಪರ್ವತವಿದೆ. ಆ ಪರ್ವತದಲ್ಲಿ ಭಗವಾನ್ ಬ್ರಹ್ಮನು ಸ್ವಯಂ ಉದ್ಭವಿಸಿದ್ದಾನೆ. ಅಲ್ಲಿ ಬ್ರಹ್ಮನನ್ನು ಅನುದಿನವೂ ಎಲ್ಲ ದೇವತೆಗಳೂ ಮತ್ತು ಎಲ್ಲ ಮಹರ್ಷಿಗಳೂ ಮನೋನುಕೂಲವಾದ ಮಾತುಗಳಿಂದ (ಮಂತ್ರಾದಿ ಗಳಿಂದಲೂ ಸ್ತೋತ್ರಾದಿಗಳಿಂದಲೂ) ಸಂಪೂಜಿಸುತ್ತಾ ಉಪಾಸನೆಮಾಡು ತ್ತಿರುತ್ತಾರೆ. ಜಂಬೂದ್ವೀಪದಿಂದ ಅನೇಕವಿಧವಾದ ರತ್ನಗಳು ಉಳಿದ ದ್ವೀಪ ದಲ್ಲಿರುವ ಪ್ರಜೆಗಳ ಉಪಯೋಗಕ್ಕಾಗಿ ಕಳುಹಿಸಲ್ಪಡುತ್ತವೆ. (ರಫ್ತಾಗುತ್ತವೆ.) ಬ್ರಹ್ಮಚರ್ಯೆ, ಸತ್ಯನಿಷ್ಠೆ, ಇಂದ್ರಿಯನಿಗ್ರಹ–ಇವುಗಳ ಪ್ರಭಾವದಿಂದ ಜಂಬೂದ್ವೀಪಕ್ಕಿಂತಲೂ ಉಳಿದ ದ್ವೀಪಗಳಲ್ಲಿ ಜನರ ಆರೋಗ್ಯ ಮತ್ತು ಆಯುಃಪ್ರಮಾಣಗಳು ಅನುಕ್ರಮವಾಗಿ ಎರಡೆರಡುಪಟ್ಟು ಅಧಿಕವಾಗುತ್ತಾ

ಹೋಗುತ್ತವೆ. ಆ ದ್ವೀಪಗಳಲ್ಲಿ ಸಾಮಾನ್ಯವಾಗಿ ಒಂದೊಂದೇ ದೇಶವಿರು ತ್ತದೆ. (ಒಂದೇ ಜನಾಂಗವಿದೆ.) ಹೆಚ್ಚು ದೇಶಗಳಿರುವ ದ್ವೀಪಗಳಲ್ಲಿಯೂ ಸಹ ಒಂದೇ ಧರ್ಮವಿರುತ್ತದೆ. (ಒಂದೇ ಧರ್ಮಕ್ಕೆ ಸೇರಿದ ಜನಾಂಗದವರಿದ್ದಾರೆ.)

**ಈಶ್ವರೋ ದಣ್ಡಮುದ್ಯಮ್ಯ ಸ್ವಯಮೇವ ಪ್ರಜಾಪತಿಃ ।**
**ದ್ವೀಪಾನೇತಾನ್ಮಹಾರಾಜ ರಕ್ಷಂಸ್ತಿಷ್ಠತಿ ನಿತ್ಯದಾ ॥೨೯॥**

ಸರ್ವೇಶ್ವರನಾದ ಪ್ರಜಾಪತಿಯು ತಾನೇ ದಂಡವನ್ನೆತ್ತಿಕೊಂಡು ಆ ದ್ವೀಪಗಳಲ್ಲಿಯೇ ಚಿರಸ್ಥಾಯಿಯಾಗಿ ನಿಂತು ಆ ದ್ವೀಪಗಳನ್ನು ರಕ್ಷಣೆಮಾಡು ತ್ತಿದ್ದಾನೆ.

**ಸ ರಾಜಾ ಸ ಶಿವೋ ರಾಜನ್ಸ ಪಿತಾ ಪ್ರಪಿತಾಮಹಃ ।**
**ಗೋಪಾಯತಿ ನರಶ್ರೇಷ್ಠ ಪ್ರಜಾಃ ಸಜಡಪಣ್ಡಿತಾಃ ॥೩೦॥**

ಪ್ರಜಾಪತಿಯೇ ಆ ದ್ವೀಪಗಳ ರಾಜನು ; ಈಶ್ವರನು (ದೇವತೆಯು.) ಅಲ್ಲಿಯ ಪ್ರಜೆಗಳಿಗೆ ತಂದೆಯೂ, ಪ್ರಪಿತಾಮಹನೂ ಸಹ ಅವನೇ ಆಗಿದ್ದು ಜಡವಸ್ತುವಿನಿಂದ ಹಿಡಿದು ಚೇತನಪರ್ಯಂತವಾಗಿ ಎಲ್ಲ ಪ್ರಜೆಗಳನ್ನೂ ರಕ್ಷಣೆಮಾಡುತ್ತಾನೆ.

**ಭೋಜನಂ ಚಾತ್ರ ಕೌರವ್ಯ ಪ್ರಜಾಃ ಸ್ವಯಮುಪಸ್ಥಿತಮ್ ।**
**ಸಿದ್ಧಮೇವ ಮಹಾಬಾಹೋ ತದ್ಧಿ ಭುಞ್ಜನ್ತಿ ನಿತ್ಯದಾ ॥೩೧॥**

ಆ ದ್ವೀಪಗಳಲ್ಲಿ ಪ್ರಜೆಗಳು ಅಡಿಗೆಮಾಡಬೇಕಾಗಿಲ್ಲ. ಆಹಾರಪದಾರ್ಥ ಗಳನ್ನು ತರಬೇಕಾಗಿಯೂ ಇಲ್ಲ. ಪ್ರಜೆಗಳ ಮನೆಗಳಲ್ಲಿ ಅವರವರಿಗೆ ಬೇಕಾಗುವಷ್ಟು ಭೋಜನವು ಸ್ವಯಂಸಿದ್ಧವಾಗಿರುತ್ತದೆ. ಅದನ್ನೇ ಅಲ್ಲಿಯ ಪ್ರಜೆಗಳು ಪ್ರತಿನಿತ್ಯವೂ ಉಪಭುಂಜಿಸುತ್ತಾರೆ. ಅದಾದನಂತರದಲ್ಲಿ ಸಮಾ ಎಂಬ ಹೆಸರಿನ ಲೋಕಗಳ ಸಮೂಹವು ಕಂಡುಬರುತ್ತದೆ. ಆ ಲೋಕ ಸಂಸ್ಥಿತಿಯು ಚತುರಶ್ರವಾಗಿದ್ದು (ಚಚ್ಚೌಕವಾಗಿದ್ದು), ಆ ಸಮೂಹದಲ್ಲಿ ಮೂವತ್ತುಮೂರು ಮಂಡಲಗಳಿವೆ. ಅಲ್ಲಿ ಲೋಕವಿಖ್ಯಾತವಾದ, ವಾಮನ, ಐರಾವತ, ಸುಪ್ರತೀಕ ಮತ್ತು ಅಂಜನಗಳೆಂಬ ನಾಲ್ಕು ದಿಗ್ಗಜಗಳು ನಿಂತಿವೆ. ಗಂಡಸ್ಥಳದಿಂದ ಸದಾಕಾಲದಲ್ಲಿಯೂ ಮದೋದಕವನ್ನು ಸುರಿಸುವ ಸುಪ್ರತೀಕವೆಂಬ ದಿಗ್ಗಜದ ಪರಿಮಾಣವು (ಉದ್ದ ಅಗಲ ಮತ್ತು ಎತ್ತರವು) ಎಷ್ಟಿದೆಯೆಂಬುದನ್ನು ಹೇಳಲು ನನಗೆ ಶಕ್ತಿಯಿಲ್ಲ. ಆ ಸುಪ್ರತೀಕದಿಗ್ಗಜದ

ಉದ್ದ, ಅಗಲ ಮತ್ತು ಎತ್ತರವು ಅಸಂಖ್ಯಾತಯೋಜನಗಳಷ್ಟು ಪರಿಮಾಣ ದಲ್ಲಿದೆ. ಆ ದಿಗ್ಗಜದ ಸುತ್ತಳತೆಯನ್ನು ನಿರ್ಧರಿಸಿ ಹೇಳಲು ಶಕ್ಯವಿಲ್ಲ.

**ತತ್ರ ವೈ ವಾಯವೋ ವಾನ್ತಿ ದಿಗ್ಭ್ಯಃ ಸರ್ವಾಭ್ಯ ಏವ ಹಿ ।**
**ಅಸಮ್ಬದ್ಧಾ ಮಹಾರಾಜ ತಾನ್ನಿಗೃಹ್ಣನ್ತಿ ತೇ ಗಜಾಃ ॥೩೫॥**

**ಪುಷ್ಕರೈಃ ಪದ್ಮಸಂಕಾಶೈರ್ವಿಕಸದ್ಭಿರ್ಮಹಾಪ್ರಭೈಃ ।**
**ಶತಧಾ ಪುನರೇವಾಶು ತೇ ತಾನ್ಮುಞ್ಚನ್ತಿ ನಿತ್ಯಶಃ ॥೩೬॥**

**ಶ್ವಸದ್ಭಿರ್ಮುಚ್ಯಮಾನಾಸ್ತು ದಿಗ್ಗಜೈರಿಹ ಮಾರುತಾಃ ।**
**ಆಗಚ್ಛನ್ತಿ ಮಹಾರಾಜ ತತಸ್ತಿಷ್ಠನ್ತಿ ವೈ ಪ್ರಜಾಃ ॥೩೭॥**

ಆ ನಾಲ್ಕು ದಿಗ್ಗಜಗಳಿರುವೆಡೆಯಲ್ಲಿ ಎಲ್ಲ ಕಡೆಗಳಿಂದಲೂ ಗಾಳಿಯು ಅಸಂಬದ್ಧವಾಗಿ ಬೀಸುತ್ತಿರುತ್ತದೆ. ಅರಳುತ್ತಿರುವ, ಮಹಾಪ್ರಭೆಯಿಂದ ಕೂಡಿದ ಕಮಲಸದೃಶವಾದ ಸೊಂಡಿಲುಗಳಿಂದ ಆ ದಿಗ್ಗಜಗಳು ಅಸ್ತವ್ಯಸ್ತ ವಾಗಿ ಬೀಸುವ ಗಾಳಿಯನ್ನು ಹೀರಿಕೊಂಡುಬಿಡುತ್ತವೆ. ಅದೇ ಗಾಳಿಯನ್ನು ನೂರಾರು ವಿಭಾಗಗಳನ್ನಾಗಿಮಾಡಿ ತಮ್ಮ ಸೊಂಡಿಲುಗಳಿಂದ ಮರುಕ್ಷಣ ದಲ್ಲಿಯೇ ಹೊರಕ್ಕೆ ಬಿಡುತ್ತವೆ. ನಿಃಶ್ವಾಸಬಿಡುವ ದಿಗ್ಗಜಗಳ ಸೊಂಡಿಲು ಗಳಿಂದ ಮಾರುತಗಳು (ಗಾಳಿಯು) ಹೊರಬರುತ್ತವೆ. ಆ ಗಾಳಿಯಿಂದಲೇ ಆ ಪ್ರದೇಶದ ಪ್ರಜೆಗಳು ಜೀವಿಸುತ್ತಾರೆ.

(ದಿಗ್ಗಜಗಳ ಅಪರಿಮೇಯತ್ವವನ್ನು ದೃಷ್ಟಾಂತಪೂರ್ವಕವಾಗಿ ತೋರಿಸಿ ಕೊಡಲು ಹೇಳಿರುವ ಶ್ಲೋಕಗಳಿವು. ನಾಲ್ಕು ಕಡೆಗಳಿಂದಲೂ ಬೀಸುವ ವಾಯುವು ದಿಗ್ಗಜಗಳು ಉಸಿರನ್ನೆಳೆದುಕೊಂಡೊಡನೆಯೇ ಅವುಗಳ ಸೊಂಡಿಲುಗಳ ಮೂಲಕವಾಗಿ ಒಳಗೆ ಹೊರಟುಹೋಗುತ್ತದೆ. ಅಸಂಬದ್ಧ ವಾಗಿ ಬೀಸುವ ಗಾಳಿಯನ್ನು ನಿಯಂತ್ರಿಸಿ ಸುಸಂಬದ್ಧವಾಗಿಮಾಡಿ ಪ್ರಜೆಗಳಿಗೆ ಹಿತವನ್ನುಂಟುಮಾಡುತ್ತವೆ. ಮರುಕ್ಷಣದಲ್ಲಿಯೇ ಆ ಆನೆಗಳು ನಿಃಶ್ವಾಸ ರೂಪವಾಗಿ ವಾಯುವನ್ನು ಹೊರಬಿಡುತ್ತವೆ. ಆ ಗಾಳಿಯ ಸೇವನೆಯಿಂದ ಪುನಃ ಪ್ರಜೆಗಳು ಬದುಕಿಕೊಳ್ಳುತ್ತಾರೆ. ಆ ಆನೆಗಳು ಅಷ್ಟು ಅಗಾಧವಾಗಿವೆ.)"

"ಸಂಜಯ! ನೀನು ದ್ವೀಪಗಳ ವಿಷಯವಾಗಿ ಸವಿಸ್ತಾರವಾಗಿಯೇ ಹೇಳಿರುವೆ. ನೀನು ಹೇಳಿದ್ದರಿಂದಲೇ ನಾನು ದ್ವೀಪಮಂಡಲವನ್ನು ನೋಡಿ

ದಂತೆಯೇ ಆಗಿದೆ. ಉಳಿದ ವಿಷಯವನ್ನೂ (ರಾಹು, ಸೂರ್ಯ ಮತ್ತು ಚಂದ್ರರ ವಿಷಯಗಳನ್ನು ) ಇದೇ ರೀತಿಯಲ್ಲಿ ವಿಶದವಾಗಿ ಹೇಳು."

"ನಿಜ ಮಹಾರಾಜ! ದ್ವೀಪಗಳ ವಿಷಯಗಳೆಲ್ಲವನ್ನೂ ನಾನು ಆಮೂಲಾಗ್ರವಾಗಿ ಹೇಳಿದ್ದೇನೆ. ಇನ್ನು ಮುಂದೆ ಗ್ರಹಗಳ ವಿಷಯವನ್ನು ಯಥಾವತ್ತಾಗಿ ಹೇಳುವೆನು, ಕೇಳು : ರಾಹುವಿನ ಪ್ರಮಾಣವೆಷ್ಟಿದೆಯೆಂಬುದನ್ನು ಹೇಳುತ್ತೇನೆ. ಸ್ವರ್ಭಾನುವು ಮಂಡಲಾಕಾರನಾಗಿದ್ದಾನೆಂದು ನಾನು ಕೇಳಿದ್ದೇನೆ. ರಾಹುಗ್ರಹದ ವ್ಯಾಸದ ವಿಸ್ತಾರ ಹನ್ನೆರಡು ಸಾವಿರ ಯೋಜನಗಳು. ಅದರ ಸುತ್ತಳತೆ ಮೂವತ್ತಾರು ಸಾವಿರ ಯೋಜನಗಳು. ರಾಹುಗ್ರಹದ ಗಾತ್ರವು (ದಪ್ಪವು) ಆರು ಸಾವಿರ ಯೋಜನಗಳೆಂದು ಪೌರಾಣಿಕರು ಹೇಳುತ್ತಾರೆ. ಚಂದ್ರಗ್ರಹದ ವ್ಯಾಸ ಹನ್ನೊಂದು ಸಾವಿರ ಯೋಜನಗಳಿವೆ. ಸುತ್ತಳತೆಯು ಮೂವತ್ತುಮೂರು ಸಾವಿರ ಯೋಜನಗಳು. ಚಂದ್ರಗ್ರಹದ ಗಾತ್ರವು ಅಥವಾ ದಪ್ಪವು ಐದು ಸಾವಿರದ ಒಂಬೈನೂರು ಯೋಜನಗಳು. ಸೂರ್ಯಗ್ರಹದ ವಿಸ್ತಾರ ಹತ್ತು ಸಾವಿರ ಯೋಜನಗಳು. ಸುತ್ತಳತೆ ಮೂವತ್ತು ಸಾವಿರ ಯೋಜನಗಳು. ಸೂರ್ಯಗ್ರಹದ ಗಾತ್ರ ಐದು ಸಾವಿರದ ಎಂಟುನೂರು ಯೋಜನಗಳು. ಈ ರೀತಿಯಾಗಿ ಪರಮೋದಾರನಾದ, ಶೀಘ್ರಗಾಮಿಯಾದ ವಿಭಾವಸುವಿನ (ಸೂರ್ಯಗ್ರಹದ) ಪರಿಮಾಣವನ್ನು ಹೇಳುತ್ತಾರೆ. ಧೃತರಾಷ್ಟ್ರ! ಇದೇ ಸೂರ್ಯಗ್ರಹದ ಪ್ರಮಾಣವೆಂದು ನಿರ್ದಿಷ್ಟವಾಗಿದೆ. ಮೂರು ಗ್ರಹಗಳಲ್ಲಿ ರಾಹುವೇ ಬಹಳ ದೊಡ್ಡಗ್ರಹವಾದುದರಿಂದ ಕೆಲವು ಸಮಯಗಳಲ್ಲಿ ರಾಹುಗ್ರಹವು ಸೂರ್ಯ-ಚಂದ್ರಗ್ರಹಗಳನ್ನೇ ಮುಚ್ಚಿಬಿಡುತ್ತದೆ. ಈ ಮೂರು ಗ್ರಹಗಳ ವಿಷಯವಾಗಿ ಪ್ರಶ್ನಿಸಿದ ನಿನಗೆ ಶಾಸ್ತ್ರಾಧಾರದಂತೆ ಈ ಗ್ರಹಗಳ ಪ್ರಮಾಣವನ್ನು ಸಂಕ್ಷೇಪವಾಗಿ ಹೇಳಿದ್ದೇನೆ. ನೀನು ಕೇಳಿದುದೆಲ್ಲವನ್ನೂ ಯಥಾವತ್ತಾಗಿ ಹೇಳಿರುತ್ತೇನೆ. ಈಗಲಾದರೂ ನೀನು ಶಾಂತಿಯನ್ನು ಹೊಂದು. (ನಾನೀಗ ಹೇಳಿದುದೆಲ್ಲವನ್ನೂ ಮನಸ್ಸಿನಲ್ಲಿ ಧಾರಣೆಮಾಡಿಕೊಂಡಿದ್ದೇ ಆದರೆ ನೀನು ಶಾಂತಿಯನ್ನು ಪಡೆದುಕೊಳ್ಳುವೆ.)

ಜಗತ್ತಿನ ನಿರ್ಮಾಣ ಮತ್ತು ಅದರ ಸ್ವರೂಪವನ್ನು ನೀನು ಆಶಿಸಿದ್ದಂತೆಯೇ ನಾನು ಹೇಳಿದ್ದೇನೆ. ಆದುದರಿಂದ ದುರ್ಯೋಧನನ ವಿಷಯವಾಗಿ ನೀನು ಈ ಕಥನದಿಂದಲೇ ಆಶ್ವಾಸನೆಯನ್ನು ಹೊಂದು.

**ಶ್ರುತ್ವೇದಂ ಭರತಶ್ರೇಷ್ಠ ಭೂಮಿಪರ್ವ ಮನೋಽನುಗಮ್ ।**
**ಶ್ರೀಮಾನ್ಭವತಿ ರಾಜನ್ಯಃ ಸಿದ್ಧಾರ್ಥಃ ಸಾಧುಸಮ್ಮತಃ ।**
**ಆಯುರ್ಬಲಂ ಚ ಕೀರ್ತಿಶ್ಚ ತಸ್ಯ ತೇಜಶ್ಚ ವರ್ಧತೇ ॥೫೦॥**

ಮಹಾರಾಜ! ಯಾವ ರಾಜನು ಈ ಭೂಮಿಪರ್ವವನ್ನು ಮನಸ್ಸಿಟ್ಟು ಕೇಳುತ್ತಾನೆಯೋ ಅವನು ಶ್ರೀಮಂತನಾಗುತ್ತಾನೆ. ಸಿದ್ಧಾರ್ಥನಾಗುತ್ತಾನೆ. ಸಾಧುಸಮ್ಮತನಾಗುತ್ತಾನೆ. ಆ ರಾಜನ ಆಯುಷ್ಯ, ಬಲ ಮತ್ತು ಕೀರ್ತಿಗಳೂ ಸಹ ವರ್ಧಿಸುತ್ತವೆ.

**ಯಃ ಶೃಣೋತಿ ಮಹೀಪಾಲ ಪರ್ವಣೀದಂ ಯತವ್ರತಃ ।**
**ಪ್ರೀಯನ್ತೇ ಪಿತರಸ್ತಸ್ಯ ತಥೈವ ಚ ಪಿತಾಮಹಾಃ ॥೫೧॥**

ನಿಯತವಾದ ವ್ರತಾನುಷ್ಠಾನದಲ್ಲಿದ್ದುಕೊಂಡು ಯಾವನು ಈ ಭೂಮಿ ಪರ್ವವನ್ನು ಪರ್ವಕಾಲಗಳಲ್ಲಿ ಶ್ರದ್ಧೆಯಿಂದ ಕೇಳುತ್ತಾನೆಯೋ–ಅವನ ಪಿತೃಗಳೂ ಮತ್ತು ಪಿತಾಮಹರೂ ಸಹ ಸುಪ್ರೀತರಾಗುತ್ತಾರೆ.

**ಇದಂ ತು ಭಾರತಂ ವರ್ಷಂ ಯತ್ರ ವರ್ತಾಮಹೇ ವಯಮ್ ।**
**ಪೂರ್ವೈಃ ಪ್ರವರ್ತಿತಂ ಪುಣ್ಯಂ ತತ್ಸರ್ವಂ ಶ್ರುತವಾನಸಿ ॥೫೨॥**

ಈಗ ನಾವು ಎಲ್ಲಿದ್ದೇವೆಯೋ ಮತ್ತು ನಮ್ಮ ಪೂರ್ವಜರು ಪುಣ್ಯ ಕರ್ಮಗಳನ್ನು ಎಲ್ಲಿ ಮಾಡಿದ್ದಾರೆಯೋ–ಅಂತಹ ಭಾರತವರ್ಷವೇ ಇದಾಗಿದೆ. ನೀನಿದರ ವರ್ಣನೆಯನ್ನು ಪೂರ್ಣವಾಗಿ ಕೇಳಿರುವೆ.”

(ಮುಂದೆ ಯುದ್ಧವು ಪ್ರಾರಂಭವಾಗುತ್ತದೆ. ಹತ್ತು ದಿವಸಗಳು ಯುದ್ಧನಡೆದು ಭೀಷ್ಮರ ಪತನವಾದನಂತರ ಸಂಜಯನು ಧೃತರಾಷ್ಟ್ರನ ಸಮೀಪಕ್ಕೆ ಬಂದು ಯುದ್ಧದ ವರದಿಯನ್ನು ಒಪ್ಪಿಸುತ್ತಾನೆ.)

೧೨ನೆಯ ಅಧ್ಯಾಯವು ಮುಗಿಯಿತು.

೧೩ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ

## ಸಂಜಯನು ಯುದ್ಧಭೂಮಿಯಿಂದ ಓಡಿಬಂದು ಭೀಷ್ಮನು ಮೃತನಾದನೆಂಬ ವಾರ್ತೆಯನ್ನು ಧೃತರಾಷ್ಟ್ರನಿಗೆ ತಿಳಿಸಿದುದು

ವೈಶಂಪಾಯನರು ಜನಮೇಜಯನಿಗೆ ಹೇಳುತ್ತಾರೆ :

ಜನಮೇಜಯ! ಹಿಂದೆ ನಡೆದಿದ್ದು, ಈಗ ನಡೆಯುತ್ತಿರುವುದು ಮತ್ತು ಮುಂದೆ ನಡೆಯುವುದು–ಇವುಗಳನ್ನು ಪೂರ್ಣವಾಗಿ ತಿಳಿದುಕೊಂಡಿದ್ದ, ಸರ್ವವಿಷಯಗಳಲ್ಲಿಯೂ ಪ್ರತ್ಯಕ್ಷದರ್ಶಿಯಾದ, ವಿದ್ವಾಂಸನಾದ, ಗವಲ್ಗಣನ ಮಗನಾದ ಸಂಜಯನು, ಚಿಂತಾಮಗ್ನನಾಗಿದ್ದ ಧೃತರಾಷ್ಟ್ರನ ಸಮೀಪಕ್ಕೆ ಓಡುತ್ತಲೇ ಬಂದು ಬಹುದುಃಖಿತನಾಗಿ ಭಾರತರ ಪಿತಾಮಹನಾದ ಭೀಷ್ಮನು ನಿಹತನಾದನೆಂಬ ಶೋಕವಾರ್ತೆಯನ್ನು ಧೃತರಾಷ್ಟ್ರನಿಗೆ ತಿಳಿಸಿದನು.



**ಸಂಜಯೋಽಹಂ ಮಹಾರಾಜ ನಮಸ್ತೇ ಭರತರ್ಷಭ ।**
**ಹತೋ ಭೀಷ್ಮಃ ಶಾನ್ತನವೋ ಭರತಾನಾಂ ಪಿತಾಮಹಃ ॥೩॥**

“ಮಹಾರಾಜ! ಭರತರ್ಷಭ! ನಾನು ಸಂಜಯ. ನಿನಗೆ ನಮಸ್ಕರಿಸುತ್ತೇನೆ. ಭಾರತರ ಪಿತಾಮಹನಾದ, ಶಾಂತನುವಿನ ಮಗನಾದ ಭೀಷ್ಮನು ಹತನಾದನು. ಸಮಸ್ತಯೋಧರಿಗೂ ಶ್ರೇಷ್ಠನಾದ, ಸಕಲಧನುಷ್ಮಂತರಿಗೂ ಆಶ್ರಯನಾದ, ಕುರುಕುಲಪಿತಾಮಹನಾದ ಆ ಭೀಷ್ಮನೀಗ ಶರತಲ್ಪದಲ್ಲಿ ಮಲಗಿದ್ದಾನೆ. ಧೃತರಾಷ್ಟ್ರ! ಯಾವನ ಪರಾಕ್ರಮವನ್ನವಲಂಬಿಸಿ ನಿನ್ನ ಮಗನು ಪಾಂಡವರೊಡನೆ ದುರ್ದ್ಯೂತವಾಡಿದನೋ ಅಂತಹ

ಭೀಷ್ಮನು ಶಿಖಂಡಿಯಿಂದ ಪ್ರಹತನಾಗಿ ಶರತಲ್ಪದಲ್ಲಿ ಮಲಗಿದ್ದಾನೆ. ಮಹಾರಥನಾದ ಯಾವ ಭೀಷ್ಮನು ಕಾಶೀರಾಜನ ಪಟ್ಟಣದಲ್ಲಿ ಸ್ವಯಂವರಕ್ಕಾಗಿ ಸೇರಿದ್ದ ಭೂಮಂಡಲದ ಸಕಲರಾಜರನ್ನೂ ಏಕಾಕಿಯಾಗಿ ರಥದಲ್ಲಿ ಕುಳಿತು ಮಹಾಯುದ್ಧದಲ್ಲಿ ಪರಾಜಯಗೊಳಿಸಿದನೋ, ಸ್ವಲ್ಪಕಾಲವಾದರೂ ಭಯಪಡದೇ ಯಾವನು ಮಹಾಪರಾಕ್ರಮಿಯಾದ ಪರಶುರಾಮನೊಡನೆ ಯುದ್ಧ ಮಾಡಿದನೋ–ಅಂತಹ ಭೀಷ್ಮನು,

**ನ ಹತೋ ಜಾಮದಗ್ನ್ಯೇನ ಸ ಹತೋಽದ್ಯ ಶಿಖಣ್ಡಿನಾ ॥೭॥**

ಜಮದಗ್ನಿಯ ಮಗನಾದ ಪರಶುರಾಮನಿಂದ ಹತನಾಗಲಿಲ್ಲ ; ಆದರೆ ಇಂದವನು ಶಿಖಂಡಿಯಿಂದ ಹತನಾಗಿಹೋದನು.

**ಮಹೇನ್ದ್ರಸದೃಶಃ ಶೌರ್ಯೇ ಸ್ಥೈರ್ಯೇ ಚ ಹಿಮವಾನಿವ ।**
**ಸಮುದ್ರ ಇವ ಗಾಮ್ಭೀರ್ಯೇ ಸಹಿಷ್ಣುತ್ವೇ ಧರಾಸಮಃ ॥೮॥**

ಮಹಾರಾಜ! ನಿಜವಾಗಿಯೂ ಭೀಷ್ಮನು ಶೌರ್ಯದಲ್ಲಿ ಮಹೇಂದ್ರ ಸದೃಶನಾಗಿದ್ದನು. ಸ್ಥೈರ್ಯದಲ್ಲಿ ಹಿಮವಂತನಿಗೆ ಸಮಾನನಾಗಿದ್ದನು. ಗಾಂಭೀರ್ಯದಲ್ಲಿ ಸಮುದ್ರರಾಜನಿಗೆ ಸಾಟಿಯಾಗಿದ್ದನು. ಸೈರಣೆಯಲ್ಲಿ ಭೂದೇವಿಗೆ ಅನುರೂಪನಾಗಿದ್ದನು.

**ಶರದಂಷ್ಟ್ರೋ ಧನುರ್ವಕ್ತ್ರಃ ಖಡ್ಗಜಿಹ್ವೋ ದುರಾಸದಃ ।**
**ನರಸಿಂಹಃ ಪಿತಾ ತೇಽದ್ಯ ಪಾಞ್ಚಾಲ್ಯೇನ ನಿಪಾತಿತಃ ॥೯॥**

ಯಾವನಿಗೆ ಬಾಣಗಳೇ ಕೋರೆದಾಡೆಗಳ ರೂಪದಲ್ಲಿದ್ದುವೋ, ಧನುಸ್ಸೇ ಮುಖವಾಗಿದ್ದಿತೋ, ಖಡ್ಗವೇ ನಾಲಿಗೆಯಾಗಿದ್ದಿತೋ, ಈ ಕಾರಣದಿಂದಲೇ ಯಾವನು ದುರಾಸದನಾಗಿದ್ದನೋ–ಅಂತಹ ನರಸಿಂಹನಾದ ನಿನ್ನ ತಂದೆಯು ಪಾಂಚಾಲರಾಜಕುಮಾರನಾದ ಶಿಖಂಡಿಯಿಂದ ಕೆಳಕ್ಕೆ ಬೀಳಿಸಲ್ಪಟ್ಟನು.

ಯುದ್ಧದಲ್ಲಿ ಧನುಸ್ಸನ್ನೆತ್ತಿಕೊಂಡು ಬಂದ ಯಾವನನ್ನು ನೋಡಿದೊಡನೆಯೇ ಪಾಂಡವರ ಮಹಾಸೈನ್ಯವು ಸಿಂಹವನ್ನು ಕಂಡ ಗೋಸಮೂಹದಂತೆ–ಭಯದಿಂದ ಉದ್ವಿಗ್ನವಾಗಿ ನಡುಗುತ್ತಿದ್ದಿತೋ–ಅಂತಹ ಭೀಷ್ಮನು ಹತ್ತು ದಿನಗಳ ಪರ್ಯಂತವಾಗಿ ಶತ್ರುಸೈನ್ಯವನ್ನು ಸಂಹರಿಸಿ, ನಿನ್ನ ಸೈನ್ಯವನ್ನು ರಕ್ಷಿಸಿಕೊಂಡಿದ್ದು ಬಹುದುಷ್ಕರವಾದ ಕಾರ್ಯಮಾಡಿ ಕಡೆಯಲ್ಲಿ ಅಸ್ತಂಗತನಾದ ಸೂರ್ಯನಂತೆ–ಸಾವನ್ನಪ್ಪಿದನು. ಇಂದ್ರನಂತೆಯೇ ಕದಲಿಸಲು ಅಶಕ್ಯ

ನಾದ ಭೀಷ್ಮನು ಸಾವಿರಾರು ಬಾಣಗಳ ಮಳೆಗರೆಯುತ್ತಾ ಕೇವಲ ಹತ್ತು ದಿವಸಗಳ ಯುದ್ಧದಲ್ಲಿ ಅರ್ಬುದ (ಹತ್ತುಕೋಟಿ) ಸಂಖ್ಯಾಕರಾದ ಯೋಧರನ್ನು ಸಂಹರಿಸಿದನು. ಅವನಿಂದು ಹತನಾಗಿ ಚಂಡಮಾರುತದಿಂದ ಭಗ್ನವಾಗಿ ನೆಲದ ಮೇಲೆ ಬಿದ್ದಿರುವ ವೃಕ್ಷದಂತೆ-ಶರತಲ್ಪದ ಮೇಲೆ ಬಿದ್ದಿದ್ದಾನೆ. ಇದು ನಿನ್ನ ದುರ್ಮಂತ್ರದ (ದುರಾಲೋಚನೆಯ) ಪರಿಣಾಮ, ಮಹಾರಾಜ! ಹಾಗಿಲ್ಲದಿದ್ದರೆ ಭೀಷ್ಮನಿಗೆ ಇಂತಹ ದುರ್ದಶೆಯು ಪ್ರಾಪ್ತವಾಗುತ್ತಿರಲಿಲ್ಲ. ಇಂತಹ ದುರ್ದಶೆಗೀಡಾಗಲು ಭೀಷ್ಮನು ಖಂಡಿತವಾಗಿಯೂ ಅರ್ಹನಲ್ಲ. ಅವನಿಗೆ ಈ ದುರ್ದಶೆಯು ಪ್ರಾಪ್ತವಾಗಬಾರದಾಗಿತ್ತು."

೧೩ನೆಯ ಅಧ್ಯಾಯವು ಮುಗಿಯಿತು.

೧೪ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ಧೃತರಾಷ್ಟ್ರನ ವಿಲಾಪ : ಭೀಷ್ಮನ ಮರಣಕ್ಕೆ ಕಾರಣವನ್ನು ಸವಿಸ್ತರವಾಗಿ ಹೇಳುವಂತೆ ಧೃತರಾಷ್ಟ್ರನು ಸಂಜಯನನ್ನು ಕೇಳಿದುದು

"ಸಂಜಯ! ಪಿತಾಮಹನು ಯುದ್ಧದಲ್ಲಿ ಮಡಿದನೆಂಬ ವಾರ್ತೆಯು ನನಗೆ ಬಹಳ ದುಃಖವನ್ನುಂಟುಮಾಡಿದೆ. ಕುರುವೀರರಲ್ಲಿ ಋಷಭಪ್ರಾಯನಾಗಿದ್ದ, ಕುರುಕುಲದಲ್ಲಿಯೇ ಶ್ರೇಷ್ಠತಮನಾಗಿದ್ದ, ನಮ್ಮ ತಂದೆಯಾದ ಭೀಷ್ಮನು ಶಿಖಂಡಿಯಿಂದ ಹತನಾದುದು ಹೇಗೆ? ಇಂದ್ರನಿಗೆ ಸಮಾನನಾದ ನನ್ನ ತಂದೆಯು ರಥದಿಂದ ಹೇಗೆ ಕೆಳಕ್ಕೆ ಬಿದ್ದನು? ಅಯ್ಯೋ! ನನ್ನ ತಂದೆಯಾದ ಭೀಷ್ಮನ ಅನುಪಮವಾದ ಗುಣಗಳೆಷ್ಟೆಂದು ಹೇಳಲಿ? ತಂದೆಗೆ ಸಂತೋಷವನ್ನುಂಟುಮಾಡುವ ಸಲುವಾಗಿ ಜೀವಪರ್ಯಂತವಾಗಿ ಬ್ರಹ್ಮಚಾರಿಯಾಗಿಯೇ ಇದ್ದುಬಿಟ್ಟನು. ಬಲದಲ್ಲವನು ದೇವತೆಗಳಿಗೆ ಸಮಾನನಾಗಿದ್ದನು. ಇಂತಹ ಶ್ರೇಷ್ಠಯೋಧನಾದ ಭೀಷ್ಮನಿಂದ ಹೀನರಾದ ನನ್ನ ಯೋಧರೀಗ ಯಾವ ಅವಸ್ಥೆಯಲ್ಲಿದ್ದಾರೆ? ಹೇಳು, ಸಂಜಯ! ಮಹಾಪ್ರಾಜ್ಞನಾದ, ಮಹಾಧನುರ್ಧರನಾದ, ಮಹಾಬಲನಾದ, ಮಹಾಸತ್ತ್ವನಾದ, ನರವ್ಯಾಘ್ರನಾದ ಭೀಷ್ಮನು ಸತ್ತುಹೋಗಲಾಗಿ ನಿನ್ನ ಮನಸ್ಸಿನ ಮೇಲೆ ಆದ ಪರಿಣಾಮವೇನು? ಸಂಜಯ! ಮರೆಮಾಚದೇ ಹೇಳು. ಕುರುಗಳಿಗೆ

ಋಷಭಪ್ರಾಯನಾದ, ಯುದ್ಧದಲ್ಲಿ ಸುಸ್ಥಿರನಾಗಿ ನಿಲ್ಲುವ ಪುರುಷರ್ಷಭನಾದ ಭೀಷ್ಮನು ಹತನಾದನೆಂದು ನೀನು ಹೇಳಿದ ಈ ವಾರ್ತೆಯನ್ನು ಕೇಳಿ ದಾಗಿನಿಂದಲೂ ನನ್ನ ಮನಸ್ಸು ಬಹಳ ಸಂಕಟಕ್ಕೊಳಗಾಗಿದೆ. ಈ ದುಃಖವನ್ನು ತಡೆದುಕೊಳ್ಳಲು ನನಗೆ ಸಾಧ್ಯವಾಗುತ್ತಲೇ ಇಲ್ಲ. ಸಂಜಯ! ಹೇಳು, ವೀರ ಶಿಖಾಮಣಿಯಾದ ಭೀಷ್ಮನು ನನ್ನ ಸೈನ್ಯದ ದಂಡನಾಯಕತ್ವವನ್ನು ವಹಿಸಿ ಯುದ್ಧಮಾಡುತ್ತಿದ್ದಾಗ ಅವನನ್ನೇ ಅನುಸರಿಸಿ (ಅವನ ಹಿಂದೆ) ಯಾವ ಯೋಧರು ನಿಂತಿದ್ದರು? ಅವನ ಮುಂದೆ ಯಾರಿದ್ದರು? ಕಡೆಯವರೆಗೂ ಯುದ್ಧಮಾಡುತ್ತಾ ಅವನ ಸಂಗಡವೇ ಇದ್ದವರು ಯಾರು? ಆ ಸಮಯದಲ್ಲಿ ಯುದ್ಧಭೂಮಿಯನ್ನು ಬಿಟ್ಟು ಯಾರಾದರೂ ಓಡಿಹೋದರೇ? ಭೀಷ್ಮನನ್ನು ಯಾವಾಗಲೂ ಹಿಂಬಾಲಿಸಿಕೊಂಡೇ ಯಾರಿದ್ದರು? ರಥಿಗಳಲ್ಲಿ ಸಿಂಹಪ್ರಾಯನಾಗಿದ್ದ, ಅದ್ಭುತಪರಾಕ್ರಮಿಯಾದ, ಕ್ಷತ್ರಿಯರ್ಷಭನಾದ, ನಿರ್ಭಯವಾಗಿ ಶತ್ರುಸೈನ್ಯದೊಳಗೆ ನುಗ್ಗಿಹೋಗುತ್ತಿದ್ದ ಭೀಷ್ಮನ ಹಿಂಬದಿಯಲ್ಲಿ ನನ್ನ ಪಕ್ಷದ ಯಾವ ಶೂರಯೋಧರು ಹೋಗುತ್ತಿದ್ದರು? ಶತ್ರುಸೂದನನಾದ ಭೀಷ್ಮನು-ಸೂರ್ಯನು ಕತ್ತಲೆಯನ್ನು ಹೋಗಲಾಡಿಸುವಂತೆ- ಶತ್ರುಸೈನ್ಯವನ್ನು ಅಪಾರಸಂಖ್ಯೆಯಲ್ಲಿ ಹೇಗೆ ವಿನಾಶಮಾಡಿದನು? ಯಾವನು ಸಹಸ್ರರಶ್ಮಿಯಾದ ಸೂರ್ಯನಿಗೆ ಸಮಾನನಾಗಿದ್ದನೋ, ಶತ್ರುಗಳಿಗೆ ಭಯ ದಾಯಕನಾಗಿದ್ದನೋ, ಮಹಾವೀರರಾದ ಪಾಂಡುಪುತ್ರರ ಮಧ್ಯದಲ್ಲಿ ಯಾವನು ಬಹುದುಷ್ಕರವಾದ ಕಾರ್ಯಮಾಡಿದನೋ, ಯುದ್ಧದಲ್ಲಿ ಪಾಂಡ ವರ ಸೈನ್ಯಸಮೂಹವನ್ನೇ ನುಂಗುತ್ತಿದ್ದನೋ, ಯಾವನು ಅಸ್ತ್ರವಿದ್ಯೆಯಲ್ಲಿ ಪಾರಂಗತನೋ, ದುರಾಧರ್ಷನೋ ಅಂತಹ ಮಹಾನುಭಾವನಾದ ಭೀಷ್ಮ ನನ್ನು ಶತ್ರುಪಕ್ಷದ ಯಾವ ಯೋಧರು ಆಕ್ರಮಿಸಿದರು? ಸಂಜಯ! ನೀನು ಶಾಂತನವನ ಸಮೀಪದಲ್ಲಿಯೇ ಇದ್ದೆಯಾದುದರಿಂದ ನಿನಗೆ ಈ ವಿಷಯಗಳೆ ಲ್ಲವೂ ತಿಳಿದಿರಲೇಬೇಕು. ಘೋರವಿಕ್ರಮನಾದ ಶಾಂತನುವಿನ ಮಗನಾದ ಭೀಷ್ಮನನ್ನು ಪಾಂಡವರು ಯುದ್ಧದಲ್ಲಿ ಹೇಗೆ ತಡೆದರು? ಈ ವಿಷಯಗಳೆಲ್ಲ ವನ್ನೂ ವಿಶದವಾಗಿ ಹೇಳು ಸಂಜಯ. ನೀನು ಹೇಳಿದಂತೆಯೇ ಭೀಷ್ಮನು ಶರರೂಪವಾದ ಕೋರೆದಾಡೆಗಳನ್ನು ಹೊಂದಿದ್ದನು. ಶತ್ರುಸೇನೆಯನ್ನು ಪ್ರತಿಕ್ಷಣದಲ್ಲಿಯೂ ಕತ್ತರಿಸಿ-ಕತ್ತರಿಸಿಹಾಕುತ್ತಿದ್ದನು. ಅವನು ಶಸ್ತ್ರವಿದ್ಯಾ

ಪಾರಂಗತನಾಗಿದ್ದನು. ಅವನ ಧನುಸ್ಸಿನ ಬಾಯಿಯು ಯಾವಾಗಲೂ ತೆರೆದೇ ಇರುತ್ತಿದ್ದಿತು. (ನಿರಂತರವೂ ಧನುಸ್ಸನ್ನು ಸೆಳೆದೇ ಇರುತ್ತಿದ್ದನು.) ಶತ್ರುಗಳಿಗೆ ಬಹುಘೋರನಾಗಿ ಕಾಣುತ್ತಿದ್ದನು. ಕತ್ತಿಯೇ ಅವನ ನಾಲಿಗೆಯ ರೂಪ ದಲ್ಲಿದ್ದಿತು. ಶತ್ರುಗಳಿಗೆ ಅವನ ಸಮೀಪಕ್ಕೆ ಹೋಗಲೂ ಸಹ ಕಷ್ಟಸಾಧ್ಯ ವಾಗಿತ್ತು. ಅವನು ಪುರುಷವ್ಯಾಘ್ರನಾಗಿದ್ದನು. ಲಜ್ಜಾಶೀಲನಾಗಿದ್ದನು. ಸೋಲೆಂಬುದನ್ನೇ ಅರಿಯದವನಾಗಿದ್ದನು. ವಧೆಗೆ ಅನರ್ಹನಾಗಿದ್ದನು. ಇಂತಹ ಅಪರಾಜಿತನಾದ ಭೀಷ್ಮನನ್ನು ಅರ್ಜುನನು ಯುದ್ಧದಲ್ಲಿ ಹೇಗೆ ಕೆಳಕ್ಕೆ ಬೀಳಿಸಿದನು? ಹೇಳು, ಸಂಜಯ! ಭೀಷ್ಮನ ಸಾವೆಂದರೆ ನನಗೆ ನಂಬಲಸಾಧ್ಯವಾಗಿದೆ. ಶ್ರೇಷ್ಠವಾದ ರಥದಲ್ಲಿ ಕುಳಿತು, ಅತ್ಯುಗ್ರವಾದ ಧನು ಸ್ಸನ್ನು ಧರಿಸಿ ಉಗ್ರವಾದ ಬಾಣಗಳಿಂದ ಶತ್ರುಗಳ ಶಿರಸ್ಸುಗಳನ್ನು ಅಪರಿಮಿತ ಸಂಖ್ಯೆಯಲ್ಲಿ ಕತ್ತರಿಸಿ ಹಾಕುತ್ತಿದ್ದ ಭೀಷ್ಮನನ್ನು ಅರ್ಜುನನು ಹೇಗೆ ಸಂಹರಿ ಸಿದನು? ಯುದ್ಧಮಾಡುವ ಸಲುವಾಗಿ ಸಿದ್ಧನಾದ, ಉದಾಯುಧನಾದ, ದುರ್ಧರ್ಷನಾದ ಭೀಷ್ಮನನ್ನು ಕಂಡೊಡನೆಯೇ ಪ್ರಳಯಕಾಲದ ಅಗ್ನಿಯನ್ನು ಕಂಡಂತೆ ಪಾಂಡವರ ಮಹಾಸೈನ್ಯವು ಪ್ರತಿನಿತ್ಯವೂ ಭಯದಿಂದ ಕಂಪಿಸು ತ್ತಿದ್ದಿತು. ಅಂತಹವನನ್ನು ಶಿಖಂಡಿಯು ಹೇಗೆ ಸಂಹರಿಸಿದನು? ಸಂಜಯ! ಶತ್ರುಸೂದನನಾದ ಭೀಷ್ಮನು ಹತ್ತುದಿನಗಳಕಾಲ ಪಾಂಡವರ ಸೈನ್ಯವನ್ನು ಅಮಿತಸಂಖ್ಯೆಯಲ್ಲಿ ಸಂಹರಿಸಿ ಬಹುದುಷ್ಕರವಾದ ಕಾರ್ಯಮಾಡಿ ಸೂರ್ಯನು ಅಸ್ತಂಗತನಾಗುವಂತೆ ಅಸ್ತಂಗತನಾಗಿಹೋದನು. ನೀನು ಹೇಳಿದ್ದು ನಿಜ ಸಂಜಯ! ನಾನೂ ಅದನ್ನು ಮನಗಂಡಿದ್ದೇನೆ. ಯಾವನು ಸಾಕ್ಷಾತ್ ಇಂದ್ರನೋಪಾದಿಯಲ್ಲಿ ಶರರೂಪವಾಗಿ ಮಳೆಗರೆಯುತ್ತಾ ಹತ್ತು ದಿನಗಳಲ್ಲಿ ಹತ್ತು ಕೋಟಿ ಸೈನಿಕರನ್ನು ಸಂಹರಿಸಿದನೋ–ಅವನೀಗ ಬಿರು ಗಾಳಿಯಿಂದ ಭಗ್ನವಾದ ವೃಕ್ಷದಂತೆ–ಶತ್ರುಗಳಿಂದ ಸಂಹೃತನಾಗಿ ಭೂಮಿಯ ಮೇಲೆ ಮಲಗಿದ್ದಾನೆ. ಹೀಗೆ ಮಲಗಲು ಭೀಷ್ಮನು ಖಂಡಿತವಾಗಿಯೂ ಯೋಗ್ಯನಲ್ಲ. ಹೀಗವನು ಸಾಯಬಾರದಾಗಿತ್ತು. ಅವನಿಗೆ ಇಂತಹ ದುಃಸ್ಥಿತಿಯು ಬರಬಾರದಾಗಿತ್ತು. ಇದಕ್ಕೆ ನನ್ನ ದುರ್ಮಂತ್ರಿತವೇ ಕಾರಣ ಸಂಜಯ! ನನ್ನ ದುರ್ಮಂತ್ರಿತದಿಂದಲೇ ಅಜೇಯನಾದ ಭೀಷ್ಮನೂ ಯುದ್ಧದಲ್ಲಿ ಸಾವನ್ನಪ್ಪಿದನು.

ಸಂಜಯ! ಭೀಮಪರಾಕ್ರಮನಾದ ಶಾಂತನುವಿನ ಮಗನಾದ ಭೀಷ್ಮನನ್ನು ನೋಡಿದನಂತರ ಪಾಂಡವರ ಸೈನ್ಯವು ಅವನನ್ನು ಪ್ರಹರಿಸಲು ಹೇಗೆತಾನೇ ಸಮರ್ಥವಾಯಿತು? (ಅವನನ್ನು ಕಂಡೊಡನೆಯೇ ತರ-ತರನೆ ನಡುಗುತ್ತಿದ್ದ ಪಾಂಡವಸೈನ್ಯಕ್ಕೆ ಅವನನ್ನೆದುರಿಸಿ ನಿಂತು ಅವನನ್ನು ಪ್ರಹರಿಸಿ ಸಂಹರಿಸಲು ಹೇಗೆ ಸಾಧ್ಯವಾಯಿತು?) ಕುರುಕುಲಪಿತಾಮಹನಾದ ಸರ್ವಮಾನ್ಯನಾದ ಭೀಷ್ಮನೊಡನೆ ಪಾಂಡುನಂದನರು ಯುದ್ಧವನ್ನು ಹೇಗೆ ಮಾಡಿದರು? ಅತುಲಪರಾಕ್ರಮಿಗಳಾದ ದ್ರೋಣರಿನ್ನೂ ಜೀವಿಸಿರಲಾಗಿ ಭೀಷ್ಮನೇಕೆ ಈ ಯುದ್ಧದಲ್ಲಿ ಜಯಗಳಿಸಲಿಲ್ಲ? ಕೃಪರು ಮತ್ತು ಭರದ್ವಾಜರ ಮಕ್ಕಳಾದ ದ್ರೋಣರು ಭೀಷ್ಮನ ಸಮೀಪದಲ್ಲಿಯೇ ಇದ್ದರೂ ಸಹ ಯೋಧರಲ್ಲಿ ಶ್ರೇಷ್ಠನಾದ ಭೀಷ್ಮನು ಸತ್ತುದು ಹೇಗೆ? ಭೀಷ್ಮನು ದೇವತೆಗಳಿಗೂ ದುರಾಸದನಾಗಿದ್ದನು. ದೇವತೆಗಳಿಗೂ ಸಹ ಅವನೊಡನೆ ಯುದ್ಧಮಾಡಲು ಕಷ್ಟಸಾಧ್ಯವಾಗಿತ್ತು. ಮೇಲಾಗಿ ಭೀಷ್ಮನು ಅತಿರಥನೂ ಆಗಿದ್ದನು. ಇಂತಹವನು ಪಾಂಚಾಲಕುಮಾರನಾದ ಶಿಖಂಡಿಯಿಂದ ಹತನಾದುದು ಹೇಗೆ? ಯಾವನು ಜಮದಗ್ನಿಯ ಮಗನಾದ ಪರಶುರಾಮನೊಡನೆ ಸ್ಪರ್ಧಿಸಿದ್ದನೋ ಮತ್ತು ಯಾವನನ್ನು ಪರಶುರಾಮನೂ ಸಹ ಜಯಿಸಲು ಸಾಧ್ಯವಾಗಲಿಲ್ಲವೋ–ಅಂತಹ ಮಹಾಬಲನಾದ, ಇಂದ್ರತುಲ್ಯ ಪರಾಕ್ರಮಿಯಾದ, ಮಹಾಕುಲಪ್ರಸೂತನಾದ, ವೀರನಾದ, ಭೀಷ್ಮನು ಸಮರಭೂಮಿಯಲ್ಲಿ ಹೇಗೆ ಮರಣಹೊಂದಿದನೆಂಬುದನ್ನು ಸವಿಸ್ತರವಾಗಿ ಹೇಳು, ಸಂಜಯ! ಭೀಷ್ಮನು ಅಸುನೀಗಿದನೆಂಬ ಅತಿದುಃಖಕರವಾದ ವಾರ್ತೆಯನ್ನು ಕೇಳಿದಾಗಿನಿಂದಲೂ ನನ್ನ ಮನಸ್ಸಿಗೆ ಶಾಂತಿಯೆಂಬುದೇ ಇಲ್ಲವಾಗಿದೆ. ಯುದ್ಧದಲ್ಲಿ ಹಿಂದೆ ಸರಿಯದೇ ದೃಢವಾಗಿ ನಿಂತು ಯುದ್ಧ ಮಾಡುವ ಸ್ವಭಾವವುಳ್ಳ (ಅಚ್ಯುತನಾದ) ಭೀಷ್ಮನನ್ನು ತೊರೆಯದೇ ಕಡೆಯ ವರೆಗೂ ಅವನ ರಕ್ಷಣೆಯಲ್ಲಿಯೇ ನಿರತರಾಗಿದ್ದ ನನ್ನ ಕಡೆಯ ಮಹಾ ಧನುಷ್ಮಂತರಾದ ಯೋಧರು ಯಾರು? ದುರ್ಯೋಧನನಿಂದ ಆಜ್ಞಪ್ತರಾಗಿ ಯಾವ ರಣವೀರರು ಅವನನ್ನು ಸುತ್ತುವರಿದು ಅವನ ರಕ್ಷಣೆಯನ್ನು ಮಾಡು ತ್ತಿದ್ದರು? ಶಿಖಂಡಿಯನ್ನು ಮುಂದೆಮಾಡಿಕೊಂಡು ಎಲ್ಲ ಪಾಂಡವರೂ ಭೀಷ್ಮನನ್ನಾಕ್ರಮಿಸಲು ಮುಂದೆಬಂದ ಆ ಸಮಯದಲ್ಲಿ ಅಚ್ಯುತನಾದ ಭೀಷ್ಮನನ್ನು ಏಕಾಕಿಯಾಗಿಬಿಟ್ಟು ನನ್ನ ಕಡೆಯ ಯೋಧರು ಹೊರಟು

ಹೋಗಲಿಲ್ಲ ತಾನೇ? ನಿಶ್ಚಯವಾಗಿಯೂ ನನ್ನ ಹೃದಯವು ಕಬ್ಬಿಣದಿಂದಲೇ ಮಾಡಲ್ಪಟ್ಟಿದ್ದು ಸುದೃಢವಾಗಿದೆ. ಹೃದಯದಾರುಣವಾದ ಭೀಷ್ಮನ ಮರಣವಾರ್ತೆಯನ್ನು ಕೇಳಿದ ಮೇಲೂ ನನ್ನ ಹೃದಯವು ಸೀಳಿಹೋಗದೇ ಇದ್ದಹಾಗೆಯೇ ಇದೆಯಲ್ಲವೇ? ಯಾವ ದುರ್ಧರ್ಷನಲ್ಲಿ–ಭರತರ್ಷಭನಲ್ಲಿ ಸತ್ಯನಿಷ್ಠೆ, ಮೇಧಾಶಕ್ತಿ, ಸುನೀತಿ–ಇವುಗಳು ಅಳಿಯಲಾಗದಷ್ಟಿದ್ದುವೋ–ಅಂತಹ ಭೀಷ್ಮನು ಯುದ್ಧದಲ್ಲಿ ಮರಣವನ್ನು ಹೇಗೆತಾನೇ ಹೊಂದಿದನು?

ಸಂಜಯ! ಭೀಷ್ಮನು ಉನ್ನತವಾದ (ಎತ್ತರದಲ್ಲಿರುವ) ಮಹಾ ಮೇಘದಂತೆಯೇ ಇದ್ದನು. ಅವನು ಮೌರ್ವಿಯನ್ನು ಸೆಳೆಯುವಾಗ ಉಂಟಾಗುತ್ತಿದ್ದ ಶಬ್ದವು ಮೇಘದ ಗುಡುಗಿನ ಶಬ್ದದಂತಿದ್ದಿತು. ಅವನು ಬಿಡುತ್ತಿದ್ದ ಬಾಣಗಳು ಮೇಘದಿಂದ ಸುರಿಯುವ ಮಳೆಯಂತಿದ್ದುವು. ಅವನು ಆಗಿಂದಾಗ್ಗೆ ಮಾಡುತ್ತಿದ್ದ ಧನುಷ್ಟಂಕಾರವು ಸಿಡಿಲಿನ ರೂಪವಾಗಿದ್ದಿತು. ಇಂದ್ರನು ದಾನವರನ್ನು ಬಾಣಗಳ ಮಳೆಗರೆದು ಸಂಹರಿಸಿದಂತೆಯೇ ಭೀಷ್ಮನೂ ಸಹ ಕುಂತಿಯ ಮಕ್ಕಳನ್ನೂ (ಪಾಂಡವರ ಸೈನ್ಯವನ್ನೂ), ಪಾಂಚಾಲರನ್ನೂ, ಸೃಂಜಯರನ್ನೂ, ಬಾಣಗಳ ಮಳೆಗರೆದು ಧ್ವಂಸಮಾಡಿದನು. ಭೀಷ್ಮನು ಇಷ್ವಸ್ತ್ರ-ಶಸ್ತ್ರಗಳ ಘೋರವಾದ ಮತ್ತು ದುರಾಸದವಾದ ಸಮುದ್ರದಂತೆಯೇ ಇದ್ದನು. ಅವನ ಬಾಣಗಳು ಆ ಮಹಾಸಮುದ್ರದಲ್ಲಿ ಮೊಸಳೆಗಳಂತಿದ್ದುವು. ಅವನ ಧನುಸ್ಸು ಸಮುದ್ರದ ಅಲೆಯಂತಿದ್ದಿತು. ಇಷ್ವಸ್ತ್ರಗಳ ಮಹಾಸಮುದ್ರವು ಅಕ್ಷಯವಾಗಿದ್ದಿತು. ಅದರಲ್ಲಿ (ಆಶ್ರಯ ಪಡೆಯಲು) ದ್ವೀಪಗಳೇ ಇರಲಿಲ್ಲ. ದೋಣಿಗಳೂ ಇರಲಿಲ್ಲ. ಆ ಸಮುದ್ರವು ಎಲ್ಲ ಕಾಲದಲ್ಲಿಯೂ ಚಲಿಸುತ್ತಲೇ ಇದ್ದಿತು. ಗದೆ ಮತ್ತು ಕತ್ತಿಗಳು ಆ ಇಷ್ವಸ್ತ್ರಸಮುದ್ರದಲ್ಲಿ ದೊಡ್ಡ ದೊಡ್ಡ ಮೀನುಗಳಂತಿದ್ದುವು. ಕುದುರೆಗಳು ಆ ಸಮುದ್ರದ ಸುಳಿಗಳಂತಿದ್ದುವು. ಆನೆಗಳು ಇಷ್ವಸ್ತ್ರಸಮುದ್ರದ ನೀರಾನೆಗಳಂತಿದ್ದುವು. ಪದಾತಿಸೈನ್ಯಗಳು ಆ ಮಹಾಸಮುದ್ರದ ಸಣ್ಣ-ಸಣ್ಣ ಮೀನುಗಳಂತಿದ್ದುವು. ಶಂಖ ಮತ್ತು ದುಂದುಭಿಗಳ ನಿನಾದವು ಸಮುದ್ರದ ಗರ್ಜನೆಯಂತೆ ಕೇಳಿಬರುತ್ತಿತ್ತು. ಇಂತಹ ಇಷ್ವಸ್ತ್ರಸಮುದ್ರದಲ್ಲಿ ಶತ್ರುಪಕ್ಷದ ಕುದುರೆಗಳನ್ನೂ, ಆನೆಗಳನ್ನೂ, ಪದಾತಿಗಳನ್ನೂ, ರಥಗಳನ್ನೂ ಬಹುಶೀಘ್ರವಾಗಿ ಮುಳುಗಿಸುತ್ತಿದ್ದ ಶತ್ರುಪಕ್ಷದ ವೀರರ ಪ್ರಾಣಾಪಹಾರ

ಮಾಡುತ್ತಿದ್ದ ಭೀಷ್ಮನನ್ನು ತಡೆದು ನಿಲ್ಲಿಸಿದವರಾರು? ಸಂಜಯ! ಕೋಪದಿಂದಲೂ ಮತ್ತು ತೇಜಸ್ಸಿನಿಂದಲೂ ಜಾಜ್ವಲ್ಯಮಾನವಾಗಿ ಪ್ರಕಾಶಿಸುತ್ತಿದ್ದು ತನ್ನ ಆ ತೇಜಸ್ಸಿನಿಂದಲೇ ಶತ್ರುಗಳಿಗೆ ತಾಪವನ್ನುಂಟುಮಾಡುತ್ತಿದ್ದ ಭೀಷ್ಮನನ್ನು–ಸಮುದ್ರವನ್ನು ಸುತ್ತುವರಿದು ತಡೆಯುವ ತೀರಪ್ರದೇಶದಂತೆ–ಯಾವ ಯೋಧರು ಸುತ್ತುವರಿದು ತಡೆದು ನಿಂತಿದ್ದರು? ಸಂಜಯ! ಶತ್ರುಹಂತಕನಾದ ಭೀಷ್ಮನು ದುರ್ಯೋಧನನ ಹಿತಾರ್ಥವಾಗಿ ಮಾಡಿದ ಕೆಲಸವು ಅನುಪಮವಾದುದು. ಭೀಷ್ಮನು ಯುದ್ಧಮಾಡುತ್ತಿದ್ದಾಗ ಅವನ ಮುಂದುಗಡೆಯಲ್ಲಿದ್ದ ಯೋಧರು ಯಾರು? ಭೀಷ್ಮನ ರಥದ ಬಲಭಾಗದ ಚಕ್ರವನ್ನು ಯಾರು ರಕ್ಷಿಸುತ್ತಿದ್ದರು? ಅಮಿತತೇಜಸ್ವಿಯಾದ ಭೀಷ್ಮನ ಹಿಂಬದಿಯಲ್ಲಿದ್ದ ಯತವ್ರತರಾದ ಯಾವ ಕ್ಷತ್ರಿಯಯೋಧರು ಶತ್ರುಪಕ್ಷದ ಯೋಧರನ್ನು ತಮ್ಮ ಅಮಿತವಾದ ಬಲಪರಾಕ್ರಮಗಳಿಂದ ಹಿಂದಕ್ಕಟ್ಟುತ್ತಿದ್ದರು? ಸಮೀಪದಲ್ಲಿಯೇ ಇದ್ದು ಭೀಷ್ಮನನ್ನು ರಕ್ಷಿಸಲು ರಥದ ಮುಂಭಾಗದಲ್ಲಿದ್ದವರು ಯಾರು? ಯುದ್ಧಮಾಡುತ್ತಿದ್ದ ವೀರಭೀಷ್ಮನ ರಥದ ಉತ್ತರ ಭಾಗದ (ಎಡಭಾಗದ) ಚಕ್ರವನ್ನು ರಕ್ಷಿಸುತ್ತಿದ್ದವರು ಯಾರು? ಭೀಷ್ಮನ ರಥದ ಎಡಚಕ್ರದ ರಕ್ಷಣೆಯನ್ನೂ ಮಾಡುತ್ತಿದ್ದು ಸೃಂಜಯರೊಡನೆಯೂ ಯುದ್ಧಮಾಡಿ ಅವರನ್ನು ಧ್ವಂಸಮಾಡುತ್ತಿದ್ದ ಮಹಾವೀರರಾರು? ಭೀಷ್ಮನ ಸಮೀಪದಲ್ಲಿಯೇ ಇದ್ದು ದುರಾಸದನಾದ ಅವನನ್ನು ರಕ್ಷಣೆಮಾಡುತ್ತಾ ಎದುರುಗಡೆಯಿಂದ ನುಗ್ಗಿಬರುತ್ತಿದ್ದ ಶತ್ರುಯೋಧರನ್ನು ಎಡಬಿಡದೆ ಸಂಹರಿಸುತ್ತಿದ್ದವರು (ಮುಂಭಾಗದಲ್ಲಿದ್ದವರು ) ಯಾರು? ದುರ್ಗಮವಾದ ಯುದ್ಧದಲ್ಲಿ ಮುಂದುವರಿಯುತ್ತಾ ಭೀಷ್ಮನ ರಥದ ಎರಡು ಪಾರ್ಶ್ವಗಳಲ್ಲಿಯೂ ಇದ್ದುಕೊಂಡು ಅವನನ್ನೂ ಅವನ ರಥವನ್ನೂ ಯಾರು ಸಂರಕ್ಷಿಸುತ್ತಿದ್ದರು? ಸಾಮೂಹಿಕವಾಗಿ ಸೇರಿಕೊಂಡು ಶತ್ರುವೀರರನ್ನು ಸಾಮೂಹಿಕವಾಗಿಯೇ ಎದುರಿಸಿ ಯುದ್ಧಮಾಡುತ್ತಿದ್ದವರು ಯಾರು? ಈ ವಿಷಯಗಳೆಲ್ಲವನ್ನೂ ಸವಿಸ್ತರವಾಗಿ ಹೇಳು, ಸಂಜಯ! ನಮ್ಮ ಪಕ್ಷದ ವೀರಯೋಧರು ಭೀಷ್ಮನ ರಥದ ಸುತ್ತಲೂ ನಿಂತು ರಕ್ಷಿಸುತ್ತಿದ್ದರಲ್ಲವೇ? ಅಂತೆಯೇ ಭೀಷ್ಮನೂ ಸಹ ನಮ್ಮ ಕಡೆಯ ಯೋಧರನ್ನೂ ತನ್ನ ಭುಜಬಲ-

ಪರಾಕ್ರಮಗಳಿಂದ ಸಂರಕ್ಷಿಸುತ್ತಿದ್ದರೂ ದುರ್ಜಯರಾದ ಪಾಂಡವರ ಸೈನ್ಯ ಗಳನ್ನು ಯುದ್ಧದಲ್ಲಿ ಬಹುಶೀಘ್ರವಾಗಿ ಯಾವ ಕಾರಣದಿಂದ ಜಯಿಸಲಿಲ್ಲ? ಸಂಜಯ! ನಿಶ್ಚಯವಾಗಿ ಹೇಳುವುದಾದರೆ ನಮ್ಮ ಪಿತಾಮಹನಾದ ಭೀಷ್ಮನು ಸರ್ವಲೋಕೇಶ್ವರನಾದ ಪರಮೇಷ್ಠಿಪ್ರಜಾಪತಿಗೆ ಸಮಾನನಾದವನು. ಅಜೇಯನು. ಅಂತಹವನನ್ನು ಪಾಂಡವರು ಸಂಹರಿಸುವುದಿರಲಿ ; ಪ್ರಹರಿಸಲಾದರೂ ಹೇಗೆ ಸಮರ್ಥರಾದರೆಂದು ನಾನು ಸಂಶಯಿಸುತ್ತಿದ್ದೇನೆ. ದ್ವೀಪಪ್ರಾಯನಾದ ಯಾವ ಭೀಷ್ಮನಲ್ಲಿ ಆಶ್ರಯಪಡೆದು ಕೌರವರು ತಮ್ಮ ಶತ್ರುಗಳೊಂದಿಗೆ ನಿರ್ಭಯದಿಂದ ಯುದ್ಧಮಾಡುತ್ತಿದ್ದರೋ–ಅಂತಹ ನರವ್ಯಾಘ್ರನಾದ ಭೀಷ್ಮನು ಮರಣಹೊಂದಿದನೆಂದು (ಬೇರೆಯವರಿಗೆ ದ್ವೀಪ ದಂತಿದ್ದವನು ತಾನೇ ಮುಳುಗಿದನೆಂದು) ನೀನು ಹೇಳುತ್ತಿರುವೆ. ಇದೆಂತಹ ತಡೆದುಕೊಳ್ಳಲು ಸಾಧ್ಯವಾಗದ ದುಃಖದ ವಾರ್ತೆಯಾಗಿದೆಯೆಂಬುದನ್ನು ಬಲ್ಲೆಯಾ? ಸಂಜಯ! ಯಾವನ ಪರಾಕ್ರಮವನ್ನೇ ಅವಲಂಬಿಸಿ, ವಿಶಾಲ ಸೇನೆಯನ್ನು ಹೊಂದಿರುವ ನನ್ನ ಮಗ ದುರ್ಯೋಧನನು ಪಾಂಡವರ ವೀರ್ಯ-ಪರಾಕ್ರಮಗಳನ್ನು ಲಕ್ಷ್ಯಕ್ಕೇ ತೆಗೆದುಕೊಳ್ಳಲಿಲ್ಲವೋ–ಅಂತಹ ಭೀಷ್ಮನು ಶತ್ರುಗಳಿಂದ ಹೇಗೆ ಹತನಾದನು?

ಹಿಂದೊಮ್ಮೆ ದೇವತೆಗಳು ದಾನವರನ್ನು ಸಂಹಾರಮಾಡುವ ಸಲು ವಾಗಿ ನನ್ನ ತಂದೆಯಾದ, ಮಹಾವ್ರತನಾದ, ಯುದ್ಧದುರ್ಮದನಾದ ಭೀಷ್ಮನ ಸಹಾಯವನ್ನಪೇಕ್ಷಿಸಿದ್ದರು. ಪುತ್ರೋತ್ತಮನಾದ ಭೀಷ್ಮನು ಹುಟ್ಟಿದೊಡ ನೆಯೇ ಲೋಕವಿಖ್ಯಾತನಾದ ಶಾಂತನುಮಹಾರಾಜನ ಶೋಕವನ್ನೂ, ದೈನ್ಯ ವನ್ನೂ, ದುಃಖವನ್ನೂ ದೂರಮಾಡಿದ್ದನು. ಯಾವನನ್ನು ಸರ್ವರಿಗೂ ಆಶ್ರಯದಾತನೆಂದು ಹೇಳುತ್ತಾರೆಯೋ–ಪ್ರಾಜ್ಞ, ಸ್ವಧರ್ಮನಿರತ, ಪರಿ ಶುದ್ಧ, ವೇದ-ವೇದಾಂಗತತ್ತ್ವಜ್ಞ–ಮುಂತಾಗಿ ಹೊಗಳುತ್ತಾರೆಯೋ ಅಂತಹ ಮಹಾನುಭಾವನನ್ನು, ದೇವತೆಗಳಿಗೂ ಸಹಾಯಕನಾಗುವಷ್ಟು ಸಾಮರ್ಥ್ಯ ವಿದ್ದ ಮಹಾಪರಾಕ್ರಮಿಯನ್ನು, ಪಿತೃದುಃಖನಿವಾರಕನನ್ನು ಸತ್ತುಹೋದ ನೆಂದು ನೀನು ಹೇಗೆ ಹೇಳುತ್ತಿರುವೆ? ಅಂತಹವನು ಸಾಯುವುದಾದರೂ ಹೇಗೆ ಸಾಧ್ಯ? ಸರ್ವಾಸ್ತ್ರಗಳಲ್ಲಿಯೂ ಶಿಕ್ಷಣಪಡೆದಿದ್ದ, ಶಾಂತನಾಗಿದ್ದ,

ಜಿತೇಂದ್ರಿಯನಾಗಿದ್ದ, ವಿದ್ವಾಂಸನಾಗಿದ್ದ ಶಾಂತನವನು ಯುದ್ಧದಲ್ಲಿ ಹತನಾದನೆಂದು ಕೇಳಿದನಂತರ ಉಳಿದ ಯೋಧರ ವಿಷಯದಲ್ಲಿ ನನಗೆ ವಿಶ್ವಾಸವೇ ಉಳಿದಿಲ್ಲ. ಉಳಿದಿರುವ ನನ್ನ ಸಮಸ್ತಯೋಧರೂ ಹತರಾದರೆಂದೇ ಭಾವಿಸುತ್ತೇನೆ.

**ಧರ್ಮಾದಧರ್ಮೋ ಬಲವಾನ್ಸಮ್ಪ್ರಾಪ್ತ ಇತಿ ಮೇ ಮತಿಃ ।**
**ಯತ್ರ ವೃದ್ಧಂ ಗುರುಂ ಹತ್ವಾ ರಾಜ್ಯಮಿಚ್ಛನ್ತಿ ಪಾಣ್ಡವಾಃ ॥೪೯॥**

ಧರ್ಮಕ್ಕಿಂತಲೂ ಅಧರ್ಮವೇ ಬಲಿಷ್ಠವೆಂಬುದನ್ನು ಇಂದು ತಿಳಿದಂತಾಯಿತು. ವೃದ್ಧನಾದ ಗುರುವನ್ನಾದರೂ ಕೊಂದು ಪಾಂಡವರು ರಾಜ್ಯವನ್ನು ಪಡೆದುಕೊಳ್ಳಲಿಚ್ಛಿಸಿದ್ದಾರಲ್ಲವೇ? ಇದಕ್ಕಿಂತಲೂ ಅಧರ್ಮಮಾರ್ಗವು ಬೇರೆಯದೊಂದುಂಟೇ? ಭೀಷ್ಮನನ್ನು ಕೊಂದುದರಿಂದ ಅಧರ್ಮಕ್ಕೇ ವಿಜಯವು ಲಭಿಸಿದಂತಾಯಿತಲ್ಲವೇ? ಹಿಂದೊಮ್ಮೆ ಸರ್ವಾಸ್ತ್ರಗಳಲ್ಲಿಯೂ ಪಾರಂಗತನಾದ, ಸರ್ವಧನ್ವಿಗಳಲ್ಲಿಯೂ ಶ್ರೇಷ್ಠನಾದ, ಜಮದಗ್ನಿಯ ಮಗನಾದ ಪರಶುರಾಮನು ಅಂಬೆಯ ಸಲುವಾಗಿ ಭೀಷ್ಮನೊಡನೆ ಯುದ್ಧಮಾಡಲು ಬಂದು ಭೀಷ್ಮನಿಂದಲೇ ಪರಾಜಿತನಾಗಿಹೋದನು. ಇಂದ್ರನಿಗೆ ಸಮಾನವಾದ ಪರಾಕ್ರಮವಿದ್ದ, ಸರ್ವಧನುಷ್ಮಂತರಿಗೂ ಶ್ರೇಷ್ಠನಾಗಿದ್ದ ಅಂತಹ ಭೀಷ್ಮನೇ ಹತನಾದನೆಂದು ನೀನು ಹೇಳುತ್ತಿರುವೆಯಲ್ಲಾ? ಸಂಜಯ! ಇದಕ್ಕಿಂತಲೂ ದುಃಖತಮವಾದ ವಾರ್ತೆಯು ಬೇರಾವುದಿದೆ?

**ಅಸಕೃತ್ಕ್ಷತ್ರಿಯವ್ರಾತಾಃ ಸಂಖ್ಯೇ ಯೇನ ವಿನಿರ್ಜಿತಾಃ ।**
**ಜಾಮದಗ್ನ್ಯೇನ ವೀರೇಣ ಪರವೀರನಿಘಾತಿನಾ ।**
**ನ ಹತೋ ಯೋ ಮಹಾಬುದ್ಧಿಃ ಸ ಹತೋಽದ್ಯ ಶಿಖಣ್ಡಿನಾ ॥೫೦॥**

ಶತ್ರುಪಕ್ಷದ ವೀರರನ್ನು ಧ್ವಂಸಮಾಡುವ, ಜಮದಗ್ನಿಯ ಮಗನಾದ ರಾಮನು ಯುದ್ಧದಲ್ಲಿ ಅನೇಕ ಬಾರಿ ಅನೇಕ ಕ್ಷತ್ರಿಯಸಮೂಹಗಳನ್ನೇ ಪರಾಜಯಗೊಳಿಸಿದ್ದನು. ಅಂತಹವನಿಂದ ಮಹಾಬುದ್ಧಿವಂತನಾದ ಭೀಷ್ಮನು ಕೊಲ್ಲಲ್ಪಡಲಿಲ್ಲ. ಶಿಖಂಡಿಯಿಂದ ಇಂದು ಹತನಾದನು. ಇದನ್ನು ನೋಡಿದರೆ ನಿಶ್ಚಯವಾಗಿಯೂ ಮಹಾವೀರ್ಯವಂತನಾದ, ಯುದ್ಧದುರ್ಮದನಾದ ಭಾರ್ಗವನಿಗಿಂತಲೂ ದ್ರುಪದಪುತ್ರನಾದ ಶಿಖಂಡಿಯೇ ತೇಜೋ-ವೀರ್ಯ-ಬಲಗಳಲ್ಲಿ ಅಧಿಕನೆಂಬುದು ಸ್ಪಷ್ಟವಾಯಿತು. ಯಾವನು–ಶೂರನಾದ, ಕುಶಲಿ

ಯಾದ, ಸರ್ವಶಸ್ತ್ರವಿಶಾರದನಾದ, ಶ್ರೇಷ್ಠವಾದ ಅಸ್ತ್ರಗಳೆಲ್ಲವನ್ನೂ ತಿಳಿದಿದ್ದ, ಮಹಾವೀರನಾದ, ಭರತರ್ಷಭನಾದ ಭೀಷ್ಮನನ್ನೇ ಯುದ್ಧದಲ್ಲಿ ಸಂಹರಿಸಿದನೋ–ಅಂತಹ ಶಿಖಂಡಿಯು ಭಾರ್ಗವರಾಮನಿಗಿಂತಲೂ ಅತಿಶಯಬಲವುಳ್ಳವನೆಂಬುದರಲ್ಲಿ ಸಂಶಯವೇ ಇಲ್ಲ. ಅಲ್ಲವೇ? ಸಂಜಯ! ಶಸ್ತ್ರಗಳ ದೊಡ್ಡ ಕೋಠಿಯೇ ಇದ್ದ ಆ ಯುದ್ಧದಲ್ಲಿ ಯಾವ ವೀರರು ಶತ್ರುಹಂತಕನಾದ ಭೀಷ್ಮನನ್ನು ಅನುಸರಿಸಿ ಹೋಗುತ್ತಿದ್ದರು? ಪಾಂಡವರೊಡನೆ ಭೀಷ್ಮನ ಯುದ್ಧವು ಯಾವ ರೀತಿಯಲ್ಲಿ ನಡೆಯಿತೆಂಬುದನ್ನು ವಿಶದವಾಗಿ ಹೇಳು. ಅಂತಹ ಮಹಾವೀರನಾದ ದಂಡನಾಯಕನ ಮರಣವಾದನಂತರ ನನ್ನ ಮಗನ ಸೇನೆಯು ಪತಿಯನ್ನು ಕಳೆದುಕೊಂಡ ವಿಧವೆಯಂತೆಯೇ ಸರಿ. ಗೋಪನಿಲ್ಲದ ಗೋವುಗಳ ಸಮೂಹವು ಭ್ರಾಂತಿಹೊಂದಿ ಚದುರಿ ಚೆಲ್ಲಾ ಪಿಲ್ಲಿಯಾಗಿ ಓಡಿಹೋಗುವಂತೆ–ಭೀಷ್ಮನ ಅವಸಾನಾನಂತರದಲ್ಲಿ ನನ್ನ ಸೈನ್ಯವೂ ಸಹ ಭ್ರಾಂತಿಹೊಂದಿ ಅಸ್ತವ್ಯಸ್ತವಾಗಿಬಿಟ್ಟಿರಬಹುದು. ಮಹಾ ಯುದ್ಧವು ನಡೆಯುತ್ತಿದ್ದ ಕಾಲದಲ್ಲಿ–ಯಾವನಲ್ಲಿ ಸರ್ವಲೋಕದ ಪೌರು ಷವೂ ಮೂರ್ತಿಮತ್ತಾಗಿ ಕಾಣುತ್ತಿದ್ದಿತೋ ಅಂತಹ ಭೀಷ್ಮನು ಪರಲೋಕ ಪ್ರಿಯನಾಗಲಾಗಿ (ಅವಸಾನಹೊಂದಲಾಗಿ) ನಿಮ್ಮ ಮನಸ್ಸಿನಲ್ಲಿ ಯಾವ ವಿಧ ವಾದ ಪರಿಣಾಮವುಂಟಾಯಿತು? ಸೂತ! ನಾವೇನೋ ಜೀವಿಸಿದ್ದೇವೆ. ಆದರೆ ನಮ್ಮಲ್ಲೇನು ಸಾಮರ್ಥ್ಯವಿದೆ? (ನಮ್ಮಲ್ಲಿ ಬದುಕಿ-ಬಾಳಲು ಸಾಮರ್ಥ್ಯವಾದರೂ ಏನಿದೆ?) ಅಗಾಧವಾದ ಜಲರಾಶಿಯಲ್ಲಿ ಮುಳುಗುತ್ತಿರುವ ನಾವೆಯನ್ನು ನೋಡಿ ಅದರಲ್ಲಿರುವ ಪಥಿಕರು ದುಃಖಿಸುವಂತೆ–ಲೋಕಧಾರ್ಮಿಕನಾದ, ಮಹಾವೀರ್ಯನಾದ ತಂದೆಯನ್ನು ಸಾಯಗೊಟ್ಟು ನಾವಿಂದು ಶೋಕಿಸುತ್ತಿದ್ದೇವೆ. ಭೀಷ್ಮನು ಅವಸಾನಹೊಂದಲಾಗಿ ನನ್ನ ಮಕ್ಕಳು ಅತಿಯಾದ ದುಃಖದಿಂದ ಶೋಕಿಸುತ್ತಿದ್ದಾರೆಂದು ನಾನು ಭಾವಿಸಿದ್ದೇನೆ. ನಾನು ಹಿಂದೆಯೇ ಹೇಳಿದಂತೆ ನನ್ನ ಹೃದಯವು ಲೋಹದಿಂದಲೇ ಮಾಡಿದ್ದಾಗಿರಬೇಕು. ಪುರುಷವ್ಯಾಘ್ರನಾದ ಭೀಷ್ಮನು ಸತ್ತುಹೋದನೆಂಬ ವಾರ್ತೆಯನ್ನು ಕೇಳಿದಮೇಲೂ ಸಹ ಈ ನನ್ನ ಹೃದಯವು ಸೀಳಿಹೋಗಲೇ ಇಲ್ಲ. ಯಾವ ಪುರುಷರ್ಷಭನಲ್ಲಿ, ದುರ್ಧರ್ಷನಲ್ಲಿ ಅಸ್ತ್ರಗಳು, ಮೇಧಾಶಕ್ತಿ ಮತ್ತು ರಾಜನೀತಿ–ಇವುಗಳು ಅಪರಿಮಿತವಾಗಿದ್ದುವೋ ಅಂತಹವನು

ಯುದ್ಧದಲ್ಲಿ ಸತ್ತುದು ಹೇಗೆ? (ಅಪರಿಮಿತವಾದ ಅಸ್ತ್ರಗಳಿದ್ದುವು. ಯಾವ ಸಮಯದಲ್ಲಿ ಶತ್ರುವನ್ನು ಹೇಗೆ ಎದುರಿಸಬೇಕು? ಎಂತಹ ವ್ಯೂಹವನ್ನು ರಚಿಸಬೇಕು–ಎಂಬ ವಿಷಯದಲ್ಲಿ ಭೀಷ್ಮನಿಗೆ ಅಪಾರವಾದ ಮೇಧಾಶಕ್ತಿಯಿದ್ದಿತು. ಮೂರನೆಯದಾಗಿ : ಭೀಷ್ಮನು ರಾಜನೀತಿವಿಶಾರದನಾಗಿಯೂ ಇದ್ದನು. ಇವಿಷ್ಟು ಗುಣಗಳಿಂದ ಕೂಡಿರುವವನನ್ನು ಜಯಿಸಲು ದೇವೇಂದ್ರನಿಂದಲೂ ಸಾಧ್ಯವಿಲ್ಲದಿರುವಾಗ ಶಿಖಂಡಿಯಿಂದವನು ಹೇಗೆ ಸಂಹೃತನಾದನು?–ಎಂಬುದೇ ಧೃತರಾಷ್ಟ್ರನ ಸಹಜವಾದ ಚಿಂತೆ.) ಸಕಲಗುಣಸಂಪನ್ನನಾದ ಭೀಷ್ಮನೇ ಹತನಾದನೆಂದಮೇಲೆ ನಾವು ಹೀಗೆ ನಿಶ್ಚಯ ಮಾಡಬಹುದಾಗಿದೆ ; ಸಂಜಯ!

**ನ ಚಾಸ್ತ್ರೇಣ ನ ಶೌರ್ಯೇಣ ತಪಸಾ ಮೇಧಯಾ ನ ಚ ।**
**ನ ಧೃತ್ಯಾ ನ ಪುನಸ್ತ್ಯಾಗಾನ್ಮೃತ್ಯೋಃ ಕಶ್ಚಿದ್ವಿಮುಚ್ಯತೇ ॥೫೯॥**

ಶಸ್ತ್ರಾಸ್ತ್ರಗಳ ಕೌಶಲದಿಂದಾಗಲೀ, ಶೌರ್ಯದಿಂದಾಗಲೀ, ತಪಸ್ಸಿನಿಂದಾಗಲೀ, ಮೇಧಾಶಕ್ತಿಯಿಂದಾಗಲೀ, ಧೈರ್ಯದಿಂದಾಗಲೀ, ಸರ್ವಸಂಗ ಪರಿತ್ಯಾಗದಿಂದಲೇ ಆಗಲೀ–ಮೃತ್ಯುವಿನ ದವಡೆಯಿಂದ ಬಿಡಿಸಿಕೊಳ್ಳುವ ಸಾಧ್ಯತೆಯಿಲ್ಲ. (ಮೃತ್ಯುವು ಯಾರಿಗೂ ತಪ್ಪಿದ್ದಲ್ಲ.)

**ಕಾಲೋ ನೂನಂ ಮಹಾವೀರ್ಯಃ ಸರ್ವಲೋಕದುರತ್ಯಯಃ ।**
**ಯತ್ರ ಶಾನ್ತನವಂ ಭೀಷ್ಮಂ ಹತಂ ಶಂಸಸಿ ಸಂಜಯ ॥೬೦॥**

ನಾವಾರೂ ವೀರರೂ ಅಲ್ಲ, ಪರಾಕ್ರಮಿಗಳೂ ಅಲ್ಲ. ಕಾಲವೇ ನಿಶ್ಚಯವಾಗಿಯೂ ಮಹಾವೀರ್ಯವತ್ತಾದುದು. ಯಾವ ಲೋಕದವರಿಗೂ ಕಾಲವನ್ನುಲ್ಲಂಘಿಸಿ ನಡೆಯುವ ಸಾಧ್ಯತೆಯೇ ಇಲ್ಲ. (ಕಾಲವು ಸರ್ವಲೋಕದವರಿಗೂ ದುರತಿಕ್ರಮವಾದುದು.) 'ಭೀಷ್ಮನು ಹತನಾದನು'–ಎಂದು ಹೇಳುತ್ತಿರುವೆಯಲ್ಲವೇ? ಸಂಜಯ! ಕಾಲವು ದುರತಿಕ್ರಮವಾದುದೆಂಬುದಕ್ಕೆ ಇದೇ ಮುಖ್ಯನಿದರ್ಶನವಾಗಿದೆ. ಯುದ್ಧವಾಗುವ ಮೊದಲೇ ಯುದ್ಧದ ಪರಿಣಾಮವೇನಾಗುವುದೆಂಬುದನ್ನು ತಿಳಿದಿದ್ದ ನಾನು ಪುತ್ರಶೋಕದಿಂದ ಸಂತಪ್ತನಾಗಿ ಮಹಾದುಃಖವು ಪ್ರಾಪ್ತವಾಗುವುದೆಂದು ಚಿಂತಿಸುತ್ತಲೇ ಇದ್ದೆನು. ಆದರೆ ಶಾಂತನುವಿನ ಮಗನಾದ ಭೀಷ್ಮನು ನಮ್ಮ ಪಕ್ಷದಲ್ಲಿದ್ದ ಕಾರಣದಿಂದ

ಅವನಿಂದಲಾದರೂ ನಮ್ಮ ಪಕ್ಷವು ರಕ್ಷಿಸಲ್ಪಡುವುದೆಂದು ನಾನು ಆಶಿಸಿದ್ದೆನು. (ಆ ನನ್ನ ಆಶೆಯೂ ವ್ಯರ್ಥವಾಗಿ ಹೋಯಿತು.) ಸಾಕ್ಷಾತ್ ಸೂರ್ಯದೇವನೇ ಕೆಳಗೆ ಬೀಳುವ ರೀತಿಯಲ್ಲಿ ಯುದ್ಧೋದ್ಯುಕ್ತನಾಗಿದ್ದ ಭೀಷ್ಮನು ಶಿಖಂಡಿಯಿಂದ ಹತನಾಗಿ ಭೂಮಿಯ ಮೇಲೆ ಬೀಳಲಾಗಿ ಆ ಸಮಯದಲ್ಲಿ ದುರ್ಯೋಧನನೇನೆಂದು ಯೋಚಿಸಿದನು? ನಾನು ನನ್ನ ಬುದ್ಧಿಯಲ್ಲೇ ವಿಚಾರಮಾಡಿ ನೋಡಿದರೆ ನಮ್ಮ ಕಡೆಯ ರಾಜರ ಸೈನ್ಯ ದಲ್ಲಾಗಲೀ–ಶತ್ರುಪಕ್ಷದ ರಾಜರ ಸೈನ್ಯದಲ್ಲಾಗಲೀ ಸ್ವಲ್ಪವಾದರೂ ಶೇಷವು ಉಳಿಯುವುದೆಂದು ನನಗನಿಸುವುದಿಲ್ಲ. (ಯುದ್ಧದ ಕಡೆಯಲ್ಲಿ ಎರಡು ಪಕ್ಷದವರೂ ನಿಃಶೇಷವಾಗಿ ಹತರಾಗಿರುತ್ತಾರೆ.)

**ದಾರುಣಃ ಕ್ಷತ್ರಧರ್ಮೋಽಯಮೃಷಿಭಿಃ ಸಮ್ಪ್ರದರ್ಶಿತಃ ।**
**ಯತ್ರ ಶಾನ್ತನವಂ ಹತ್ವಾ ರಾಜ್ಯಮಿಚ್ಛನ್ತಿ ಪಾಣ್ಡವಾಃ ॥೬೪॥**

ಸಂಜಯ! ಋಷಿಗಳು ತೋರಿಸಿಕೊಟ್ಟಿರುವ ಈ ಕ್ಷತ್ರಧರ್ಮವು ಕ್ರೂರವಾದುದು. ಅದನ್ನು ಈಗ ಇಲ್ಲಿಯೇ ಪ್ರತ್ಯಕ್ಷವಾಗಿ ಕಂಡೂ ಆಯಿತು. ಪಿತಾಮಹನಾದ ಶಾಂತನವನನ್ನು ಕೊಂದಾದರೂ ಪಾಂಡವರು ರಾಜ್ಯ ವನ್ನಪೇಕ್ಷಿಸಿದರಲ್ಲವೇ?

ಅಥವಾ ಸಂಜಯ! ಹೀಗೂ ಹೇಳಬಹುದಲ್ಲವೇ? ಪಾಂಡವರು ಕೊಂದರೆಂದು ಹೇಳುವುದಕ್ಕಿಂತ ನಾವೇ ಅವನ ಸಾವಿಗೆ ಕಾರಣರೆಂದು ಹೇಳಿ ದರೂ ತಪ್ಪಾಗದಲ್ಲವೇ?

**ವಯಂ ವಾ ರಾಜ್ಯಮಿಚ್ಛಾಮೋ ಘಾತಯಿತ್ವಾ ಮಹಾವ್ರತಮ್ ॥೬೫॥**

ನಾವೂ ಸಹ ಅಖಂಡಸಾಮ್ರಾಜ್ಯವನ್ನು ಪಡೆದುಕೊಳ್ಳಬೇಕೆಂಬ ಆಶಯದಿಂದಲೇ ಮಹಾವ್ರತನಾದ ಭೀಷ್ಮನನ್ನು ಬಲಿಗೊಟ್ಟೆವು.

**ಕ್ಷತ್ರಧರ್ಮೇ ಸ್ಥಿತಾಃ ಪಾರ್ಥಾ ನಾಪರಾಧ್ಯನ್ತಿ ಪುತ್ರಕಾಃ ।**
**ಏತದಾರ್ಯೇಣ ಕರ್ತವ್ಯಂ ಕೃಚ್ಛ್ರಾಸ್ವಾಪತ್ಸು ಸಂಜಯ ॥೬೬॥**

ಕ್ಷತ್ರಧರ್ಮದಲ್ಲಿಯೇ ಸುಪ್ರತಿಷ್ಠಿತರಾಗಿರುವ ಪಾರ್ಥರು ಈ ವಿಷಯ ದಲ್ಲಿ ಅಪರಾಧವನ್ನೇನೂ ಮಾಡಿಲ್ಲವೆಂದೇ ಹೇಳಬೇಕಾಗಿದೆ. ದುಸ್ತರವಾದ ಆಪತ್ಕಾಲಗಳಲ್ಲಿ ಆರ್ಯನ (ಶ್ರೇಷ್ಠಪುರುಷನ) ಕರ್ತವ್ಯವೇ ಇದಾಗಿರುತ್ತದೆ.

ಸಮಯಗಳಲ್ಲಿ ಅಧಿಕಶಕ್ತಿಯಿಂದ ಶತ್ರುವಿನ ಮೇಲೆ ಬೀಳುವುದು ಕ್ಷತ್ರಿಯನ ಕರ್ತವ್ಯವಾಗಿದೆ. ಈ ಕ್ಷತ್ರಧರ್ಮನಿಷ್ಠೆಯು ಭೀಷ್ಮನಲ್ಲಿ ಸುಪ್ರತಿಷ್ಠಿತ ವಾಗಿದ್ದಿತು.

ಅನೇಕಾನೇಕ ಸೈನ್ಯಸಮೂಹಗಳನ್ನೇ ಸದೆಬಡಿಯುತ್ತಿದ್ದ, ಹ್ರೀಮಂತ ನಾದ, ಅಪರಾಜಿತನಾದ, ಶಾಂತನುವಿನ ಮಗನಾದ ಭೀಷ್ಮನನ್ನು ಪಾಂಡು ಪುತ್ರರು ಯಾವ ರೀತಿಯಲ್ಲಿ ತಡೆದರು? ಆ ಸಮಯದಲ್ಲಿ ಉಭಯಪಕ್ಷಗಳ ಸೈನ್ಯಗಳೂ ಯಾವ ರೀತಿಯಲ್ಲಿ ಸಂಘಟಿತವಾಗಿದ್ದುವು? ಮಹಾತ್ಮರಾದ ವೀರರಿಂದ ಯುದ್ಧವು ಹೇಗೆ ಮಾಡಲ್ಪಟ್ಟಿತು? ನನ್ನ ತಂದೆಯಾದ ಭೀಷ್ಮನು ಶತ್ರುಗಳಿಂದ ಹೇಗೆ ಹತನಾದನು? ಭೀಷ್ಮನು ಸತ್ತುಹೋಗಲಾಗಿ ನನ್ನ ಪಕ್ಷೀಯರಾದ ದುರ್ಯೋಧನ, ಕರ್ಣ, ಸುಬಲಪುತ್ರನಾದ ಜೂಜುಕೋರ ನಾದ ಶಕುನಿ ಮತ್ತು ದುಃಶಾಸನ–ಮೊದಲಾದವರು ಏನು ಹೇಳಿದರು? ನಿಜವಾಗಿ ಹೇಳುವುದಾದರೆ ಈ ಯುದ್ಧವು ಒಂದು ದ್ಯೂತವೇ ಸರಿ. ಈ ದ್ಯೂತದಲ್ಲಿ ಯಾರು ಯಾರು ಭಾಗವಹಿಸಿದ್ದರು? ಸಂಜಯ! ನರ-ಗಜಾಶ್ವಗಳ ಶರೀರಗಳಿಂದಲೇ ಪಗಡೆಹಾಸಿನ ರೂಪದಲ್ಲಿ ಹರಡಲ್ಪಟ್ಟಿರುವ ಶರ, ಶಕ್ತ್ಯಾಯುಧ, ಮಹಾಖಡ್ಗ ಮತ್ತು ತೋಮರಗಳೇ ಅಕ್ಷವಾಗಿ ಉಳ್ಳ (ಪಗಡೆಕಾಯಿಗಳಾಗಿ ಉಳ್ಳ ) ಯುದ್ಧದ ಕಾರಣದಿಂದ ದುರಾಸದವಾಗಿಯೂ ಮತ್ತು ಮಹಾಭಯಂಕರವಾಗಿಯೂ ಇರುವ ರಣಕ್ಷೇತ್ರರೂಪವಾದ ದ್ಯೂತ ಸಭೆಯನ್ನು ಮಂದರಾದ ಯಾವ ಯಾವ ಜೂಜುಕೋರರು ಪ್ರವೇಶಿಸಿ ದರು? ಯುದ್ಧದ್ಯೂತದಲ್ಲಿ ಪ್ರಾಣವನ್ನು ಮಾತ್ರವೇ ದ್ಯೂತದ ಪಣವಾಗಿ ಡಲು ಸಾಧ್ಯ. ಪ್ರಾಣಗಳನ್ನೇ ಪಣವಾಗಿಟ್ಟು ಆ ಭಯಂಕರವಾದ ಯುದ್ಧ ದ್ಯೂತವನ್ನು ಯಾವ ಯಾವ ಮಹಾವೀರರು ಆಡುತ್ತಿದ್ದರು, ಸಂಜಯ! ಶಾಂತನುವಿನ ಮಗನಾದ ಭೀಷ್ಮನ ಹೊರತಾಗಿ ಬೇರೆ ಯಾವ ಯೋಧರು ಪರಾಜಯದ ಹಾದಿಯಲ್ಲಿದ್ದರು? ಯಾರು ಪರಾಜಯಹೊಂದಿ ಯುದ್ಧ ದಿಂದ ಹಿಂದಕ್ಕೆ ಸರಿದರು ಮತ್ತು ಯಾವ ವೀರರು ಶತ್ರುಪಕ್ಷದ ಯೋಧರ ಬಾಣಕ್ಕೆ ಲಕ್ಷ್ಯರಾಗಿ ಕೆಳಕ್ಕುರುಳಿದರು?–ಈ ಎಲ್ಲ ವಿಷಯಗಳನ್ನೂ ವಿವರಿಸಿ ಹೇಳು ಸಂಜಯ! ಯುದ್ಧರಂಗಕ್ಕೆ ಶೋಭೆಯನ್ನುಂಟುಮಾಡುತ್ತಿದ್ದ, ಭಯಂಕರಕರ್ಮನಾದ, ದೇವವ್ರತನಾದ (ಆಜನ್ಮಬ್ರಹ್ಮಚಾರಿಯಾದ) ನನ್ನ

ತಂದೆಯಾದ ಭೀಷ್ಮನು ಹತನಾದನೆಂಬ ವಾರ್ತೆಯನ್ನು ಕೇಳಿದನಂತರ ನನ್ನ ಮನಸ್ಸಿನಲ್ಲಿ ಶಾಂತಿಯೆಂಬುದೇ ಉಡುಗಿಹೋಯಿತು. ಈ ಯುದ್ಧದಲ್ಲಿ ನನ್ನ ಪುತ್ರರ ಹಾನಿಯಾಗಿಬಿಡಬಹುದೆಂಬ (ಅವಸಾನವಾಗಿಬಿಡಬಹುದೆಂಬ) ಮಹಾಸಂಕಟವು ನನ್ನ ಹೃದಯದಲ್ಲಿ ಈ ಮೊದಲೇ ರೂಢಮೂಲವಾಗಿದ್ದಿತು. ನೀನೀಗ ಬಂದು ನಮ್ಮ ತಂದೆಯ ಮರಣವಾರ್ತೆಯನ್ನು ಹೇಳಿ–ಉರಿಯುತ್ತಿರುವ ಬೆಂಕಿಗೆ ಮತ್ತಷ್ಟು ತುಪ್ಪಸುರಿದಂತೆ–ನನ್ನ ಹೃದಯದಲ್ಲಿದ್ದ ಮಹಾಸಂಕಟವನ್ನು ಮತ್ತಷ್ಟು ಉದ್ದೀಪನಗೊಳಿಸಿದೆ. ಕೌರವಸೇನಾ ರಕ್ಷಣೆಯೆಂಬ ದೊಡ್ಡ ಭಾರವನ್ನು ಹೊತ್ತಿದ್ದ ಸರ್ವಲೋಕವಿಖ್ಯಾತನಾದ ಭೀಷ್ಮನು ಶತ್ರುಗಳಿಂದ ಸಂಹೃತನಾದುದನ್ನು ಕಂಡು ನನ್ನ ಮಕ್ಕಳೆಲ್ಲರೂ ಬಹುವಾಗಿ ದುಃಖಿಸುತ್ತಿದ್ದಾರೆಂದು ಭಾವಿಸುತ್ತೇನೆ. ಆ ಸಮಯದಲ್ಲಿ ನನ್ನ ಹಿರಿಯ ಮಗನು ಭೀಷ್ಮನ ಸಲುವಾಗಿ ಮಾಡಿದ ದುಃಖಾಲಾಪಗಳನ್ನು ನಾನೂ ಕೇಳಬೇಕೆಂದಿರುತ್ತೇನೆ, ಸಂಜಯ! ಆದುದರಿಂದ ನೀನು ನನಗೆ ಎಲ್ಲವನ್ನೂ ಹೇಳಬೇಕು. ಸಂಗ್ರಾಮದಲ್ಲಿ ಏನೇನು ನಡೆಯಿತು? ಮಂದಬುದ್ಧಿಯವನಾದ ದುರ್ಯೋಧನನ ಬುದ್ಧಿಹೀನತೆಯಿಂದ ಸಂಭವಿಸಿದ ಆಜ್ಞೆಯಿಂದಾಗಿ ಅನ್ಯಾಯವಾದ ಯಾವ ಕಾರ್ಯವು ನಡೆಯಿತು? ನ್ಯಾಯದ ಯಾವ ಕಾರ್ಯವು ನಡೆಯಿತು? ಈ ಎಲ್ಲ ವಿಷಯಗಳನ್ನು ಸಹ ನನಗೆ ಆಮೂಲಾಗ್ರವಾಗಿ ಹೇಳು. ಭೀಷ್ಮನು ಹತ್ತುದಿನಗಳ ಪರ್ಯಂತವಾಗಿ ಯುದ್ಧಮಾಡಿದ್ದೇನೋ ಸರಿ. ವಿಜಯೇಚ್ಛುವಾಗಿದ್ದ ಭೀಷ್ಮನು ಆ ಸಮಯದಲ್ಲಿ ಯಾವು ದನ್ನು ಸಾಧಿಸಿದನು? ಯಾವ ಮಹಾಕಾರ್ಯವನ್ನು ಮಾಡಿದನು? ಅಸ್ತ್ರ ವಿದ್ಯಾಪಾರಂಗತನಾದ ಅವನಿಂದ ತೇಜೋಯುಕ್ತವಾದ (ಹೇಳಿಸಿಕೊಳ್ಳು ವಂತಹ) ಯಾವ ಮಹಾಕಾರ್ಯವು ಮಾಡಲ್ಪಟ್ಟಿತು? ಈ ವಿಷಯವನ್ನೂ ಸಹ ನನಗೆ ಅಶೇಷವಾಗಿ (ಚಾಚೂಬಿಡದೇ) ಹೇಳುವವನಾಗು. ಕೌರವ-ಪಾಂಡವರ ಆ ಮಹಾಯುದ್ಧವು ಯಾವ ಕಾಲದಲ್ಲಿ, ಯಾರು-ಯಾರಿಗೆ, ಯಾವ ರೀತಿಯಲ್ಲಿ, ಯಾವ ಕ್ರಮವನ್ನನುಸರಿಸಿ ನಡೆಯಿತು–ಎಂಬುದೆಲ್ಲವನ್ನೂ ಅದು ಹೇಗೆ ನಡೆಯಿತೋ ಹಾಗೆಯೇ ಹೇಳಬೇಕು, ಸಂಜಯ!"

೧೪ನೆಯ ಅಧ್ಯಾಯವು ಮುಗಿಯಿತು.

# ಸಂಜಯನು ಯುದ್ಧದ ವೃತ್ತಾಂತವನ್ನು ಹೇಳಲು ಪ್ರಾರಂಭಿಸಿದುದು : ದಂಡನಾಯಕನಾಗಿದ್ದ ಭೀಷ್ಮನ ರಕ್ಷಣೆಗೆ ತಕ್ಕ ವ್ಯವಸ್ಥೆಮಾಡುವಂತೆ ದುರ್ಯೋಧನನು ದುಃಶಾಸನನಿಗೆ ಹೇಳಿದುದು

ಸಂಜಯನು ಧೃತರಾಷ್ಟ್ರನನ್ನು ಕುರಿತು ಹೇಳುತ್ತಾನೆ :

"ಮಹಾರಾಜ! ಒಂದು ಪ್ರಶ್ನೆಗೆ ಸಂಬಂಧಿಸಿದಂತೆ ಅನೇಕ ಪ್ರಶ್ನೆಗಳನ್ನು ಕೇಳುತ್ತಿರುವುದು ಯುಕ್ತವಾಗಿಯೇ ಇದೆ ಮತ್ತು ಇಂತಹ ಪ್ರಶ್ನೆಗಳನ್ನು ಕೇಳಲು ನೀನು ಅರ್ಹನಾಗಿಯೂ ಇರುವೆ. ಆದರೆ ಆಗಿರುವ ಪ್ರಮಾದಗಳೆಲ್ಲಕ್ಕೂ ದುರ್ಯೋಧನನೇ ಕಾರಣನೆಂದು ಅವನೊಬ್ಬನ ಮೇಲೆಯೇ ದೋಷಾರೋಪಣೆ ಮಾಡುವುದು ನಿನಗೆ ಯೋಗ್ಯವಲ್ಲ.

**ಯ ಆತ್ಮನೋ ದುಶ್ಚರಿತಾದಶುಭಂ ಪ್ರಾಪ್ನುಯಾನ್ನರಃ ।**
**ಏನಸಾ ತೇನ ನಾನ್ಯಂ ಸ ಉಪಾಶಙ್ಕಿತುಮರ್ಹತಿ ॥೨॥**

ಮನುಷ್ಯನು ತಾನು ಮಾಡಿದ ದುಷ್ಕರ್ಮಗಳಿಂದಲೇ ಅಶುಭಫಲ ಗಳನ್ನು ಪಡೆಯುತ್ತಾನೆ. ಇದು ಸಿದ್ಧಾಂತವಾಗಿಹೋಗಿದೆ. ಹೀಗಿರುವಾಗ 'ಬೇರೊಬ್ಬನು ಪಾಪಮಾಡಿದನು ; ನಾನು ಆ ಪಾಪದ ಫಲವನ್ನು ಅನುಭವಿ ಸುತ್ತಿದ್ದೇನೆ'–ಎಂದು ಹೇಳುವುದಾಗಲೀ, ತಾನೇ ಮಾಡಿದ ಕಾರ್ಯಕ್ಕೆ ಬೇರೆಯವರು ಕಾರಣರೆಂದು ಸಂದೇಹಿಸುವುದಾಗಲೀ ಸರಿಯಲ್ಲ.

**ಮಹಾರಾಜ ಮನುಷ್ಯೇಷು ನಿನ್ದ್ಯಂ ಯಃ ಸರ್ವಮಾಚರೇತ್ ।**
**ಸ ವಧ್ಯಃ ಸರ್ವಲೋಕಸ್ಯ ನಿನ್ದಿತಾನಿ ಸಮಾಚರನ್ ॥೩॥**

ಮಹಾರಾಜ! ಸಮಾಜದಲ್ಲಿ ಯಾವನು ಯಾವಾಗಲೂ ನಿಂದ್ಯವಾದ ಕಾರ್ಯಗಳನ್ನೇ ಮಾಡುತ್ತಿರುತ್ತಾನೆಯೋ–ಅವನು ನಿಂದಿತವಾದ ಕಾರ್ಯ ಗಳನ್ನು ಮಾಡುವ ಕಾರಣದಿಂದಲೇ–ಸರ್ವಲೋಕದ ಹಿತದೃಷ್ಟಿಯಿಂದ ವಧಾರ್ಹನಾಗುತ್ತಾನೆ.

**ನಿಕಾರೋ ನಿಕೃತಪ್ರಜ್ಞೈಃ ಪಾಣ್ಡವೈಸ್ತ್ವತ್ಪ್ರತೀಕ್ಷಯಾ ।**
**ಅನುಭೂತಃ ಸಹಾಮಾತ್ಯೈಃ ಕ್ಷಾನ್ತಶ್ಚ ಸುಚಿರಂ ವನೇ ॥೪॥**

ಮಹಾರಾಜ! ನೀನು ಮತ್ತು ನಿಮ್ಮ ಕಡೆಯವರು ಮಾಡಿದ ಮೋಸ, ವಂಚನೆ, ಅನ್ಯಾಯಗಳೆಲ್ಲವೂ ಪಾಂಡವರಿಗೆ ತಿಳಿದಿದ್ದುವು. ಆದರೂ ಸಹ ನಿನ್ನ ಮುಖವನ್ನು ನೋಡಿಕೊಂಡು ಅವರು ಮೋಸ-ವಂಚನೆಗಳ ಪರಿಣಾಮದಿಂದ ಪ್ರಾಪ್ತವಾದ ಅನೇಕ ಕಷ್ಟ-ನಷ್ಟಗಳನ್ನು ಅಮಾತ್ಯಸಹಿತರಾಗಿ ಅನುಭವಿಸಿದರು. ಅವೆಲ್ಲವನ್ನೂ ಸಹಿಸಿಕೊಂಡು ಅರಣ್ಯದಲ್ಲೂ ಬಹುಕಾಲ ವಿದ್ದರು. (ಕಡೆಯವರೆಗೂ ನೀನವರನ್ನು ಉಪೇಕ್ಷಿಸಿದ್ದರಿಂದಲೇ ಅದರ ಫಲ ವನ್ನು ಈಗ ಅನುಭವಿಸಬೇಕಾಗಿ ಬಂದಿದೆ. ಇದರಲ್ಲಿ ನಿನ್ನದೇ ಮುಖ್ಯಪಾತ್ರ ವೆಂಬುದನ್ನು ಮರೆಯಬೇಡ.) ಭೂಪಾಲ! ನಾನು ಆ ಮಹಾಯುದ್ಧದಲ್ಲಿ ಸಂಘಟಿತವಾಗಿರುವ ಕುದುರೆಗಳ, ಆನೆಗಳ, ಅಮಿತತೇಜಸ್ವಿಗಳಾದ ರಾಜರ ಚಲನ-ವಲನಗಳೆಲ್ಲವನ್ನೂ ಪ್ರತ್ಯಕ್ಷವಾಗಿಯೂ ನೋಡಿದ್ದೇನೆ ; ಪರೋಕ್ಷ ವಾದ ವಿಷಯಗಳನ್ನು ಯೋಗಶಕ್ತಿಯಿಂದಲೂ ನೋಡಿ ತಿಳಿದುಕೊಂಡಿರು ತ್ತೇನೆ. ಆ ಎಲ್ಲವನ್ನೂ ನಿನಗೆ ಯಥಾವತ್ತಾಗಿ ಹೇಳುತ್ತೇನೆ. ಕೇಳಿ ನೀನೇ ನಿರ್ಧರಿಸು. ಆದರೆ ಮನಸ್ಸನ್ನು ಶೋಕದಲ್ಲಿ ವಿಲೀನಗೊಳಿಸಬೇಡ. (ಈಗ ಶೋಕಿಸುವುದರಿಂದ ಯಾವ ಪ್ರಯೋಜನವೂ ಇಲ್ಲ.)

**ನಮಸ್ಕೃತ್ವಾ ಪಿತುಸ್ತೇಽಹಂ ಪಾರಾಶರ್ಯಾಯ ಧೀಮತೇ ।**
**ಯಸ್ಯ ಪ್ರಸಾದಾದ್ದಿವ್ಯಂ ತತ್ಪ್ರಾಪ್ತಂ ಜ್ಞಾನಮನುತ್ತಮಮ್ ॥೭॥**
**ದೃಷ್ಟಿಶ್ಚಾತೀನ್ದ್ರಿಯಾ ರಾಜನ್ದೂರಾಚ್ಛ್ರವಣಮೇವ ಚ ।**
**ಪರಚಿತ್ತಸ್ಯ ವಿಜ್ಞಾನಮತೀತಾನಾಗತಸ್ಯ ಚ ॥೮॥**
**ವ್ಯುತ್ಥಿತೋತ್ಪತ್ತಿವಿಜ್ಞಾನಮಾಕಾಶೇ ಚ ಗತಿಃ ಶುಭಾಃ ।**
**ಅಸ್ತ್ರೈರಸಂಗೋ ಯುದ್ಧೇಷು ವರದಾನಾನ್ಮಹಾತ್ಮನಃ ॥೯॥**
**ಶೃಣು ಮೇ ವಿಸ್ತರೇಣೇದಂ ವಿಚಿತ್ರಂ ಪರಮಾದ್ಭುತಮ್ ।**
**ಭಾರತಾನಾಮಭೂದ್ಯುದ್ಧಂ ಯಥಾ ತಲ್ಲೋಮಹರ್ಷಣಮ್ ॥೧೦॥**

ಮಹಾರಾಜ! ನಾನು ಮೊದಲು ನಿನ್ನ ತಂದೆಯವರಾದ, ಪರಾಶರರ ಮಕ್ಕಳಾದ, ಧೀಮಂತರಾದ ವ್ಯಾಸಮಹರ್ಷಿಗಳಿಗೆ ನಮಸ್ಕರಿಸಿ ಯುದ್ಧ ವಾರ್ತೆಯನ್ನು ಹೇಳಲುಪಕ್ರಮಿಸುತ್ತೇನೆ. ಅವರ ಪ್ರಸಾದದಿಂದ (ಅನುಗ್ರಹ ದಿಂದ) ನಾನು ದಿವ್ಯವಾದ, ಉತ್ತಮೋತ್ತಮವಾದ ಜ್ಞಾನವನ್ನು ಪಡೆದೆನು. ಅವರು ಅನುಗ್ರಹಿಸಿದ ಈ ದಿವ್ಯಜ್ಞಾನದಿಂದಾಗಿ ಅತೀಂದ್ರಿಯವಿಷಯ ಗಳನ್ನೂ ಸಹ ಪ್ರತ್ಯಕ್ಷವಾಗಿ ನೋಡಲು ಸಾಧ್ಯವಾಯಿತು. ಬಹುದೂರದ

ಶಬ್ದವನ್ನೂ ಸಹ ಕೇಳಿಸಿಕೊಳ್ಳಲು ಸಾಧ್ಯವಾಯಿತು. ಇತರರು ತಮ್ಮ ಮನಸ್ಸಿನಲ್ಲಿ ಏನು ಯೋಚಿಸುತ್ತಿದ್ದಾರೆಂಬುದನ್ನು ತಿಳಿಯಲು ಸಾಧ್ಯವಾಯಿತು. 'ಹಿಂದೇನಾಗಿತ್ತು, ಮುಂದೇನಾಗುವುದು'–ಎಂಬುದನ್ನು ತಿಳಿಯಲು ಶಕ್ಯವಾಯಿತು. ಶಾಸ್ತ್ರವಿಧಿಗೆ ವಿಪರೀತವಾಗಿ ನಡೆಯುವ ಮನುಷ್ಯನ ಹುಟ್ಟಿಗೆ ಕಾರಣಗಳನ್ನು ತಿಳಿದುಕೊಳ್ಳಲು ಸಾಧ್ಯವಾಯಿತು. ಆಕಾಶದಲ್ಲಿ ಸಂಚರಿಸಲು ಸಾಧ್ಯವಾಯಿತು. ಯುದ್ಧಸಮಯದಲ್ಲಿ ವಾರ್ತಾಸಂಗ್ರಹಕ್ಕಾಗಿ ತಿರುಗಾಡುತ್ತಿದ್ದರೂ ಶಸ್ತ್ರಗಳಿಂದ ಪೆಟ್ಟು ಬೀಳದಿರಲು ವ್ಯಾಸರ ದಿವ್ಯಾನುಗ್ರಹವೇ ಕಾರಣ. ಅವರ ಮಹಾವರಪ್ರಸಾದದಿಂದಾಗಿ ನಾನು ಯುದ್ಧರಂಗದಲ್ಲಿ ನಡೆದ ಎಲ್ಲ ವಿಷಯಗಳನ್ನೂ ಸಂಗ್ರಹಿಸಿಕೊಂಡು ಬಂದಿರುತ್ತೇನೆ. ಕೌರವ-ಪಾಂಡವರಿಗೆ ವಿಚಿತ್ರವೂ, ಪರಮಾದ್ಭುತವೂ, ರೋಮಾಂಚಕಾರಕವೂ ಆದ ಯುದ್ಧವು ನಡೆಯಿತು. ಅದು ಹೇಗೆ ನಡೆಯಿತೆಂಬುದನ್ನು ಯಥಾವತ್ತಾಗಿ ಹೇಳುವೆನು ; ಕೇಳು :

(ಯುದ್ಧವಾರ್ತಾಸಂಗ್ರಹವಿಜ್ಞಾನವು ನಮ್ಮ ಪೂರ್ವಜರಲ್ಲಿಯೂ ಇದ್ದಿತೆಂಬುದನ್ನು ಈ ಪ್ರಕರಣವು ಸ್ಪಷ್ಟಪಡಿಸುತ್ತದೆ. ಆದರೆ ಇಂದಿನ ವಿಜ್ಞಾನವನ್ನು ಅಂದಿನ ವಿಜ್ಞಾನಕ್ಕೆ ಹೋಲಿಸಿದರೆ ಇಂದಿನ ವಿಜ್ಞಾನವಿನ್ನೂ ಅಣುರೂಪವಾಗಿದೆಯೆಂದು ಸಮರ್ಥಿಸಿ ಹೇಳಬಹುದಾಗಿದೆ. ಸಂಜಯನಿಗೆ ವ್ಯಾಸರ ಅನುಗ್ರಹದಿಂದ (ಅನುಗ್ರಹವೆಂಬುದೂ ಸಹ ಒಂದು ಮಹಾ ವಿಜ್ಞಾನವೇ ಸರಿ.) ಅತೀಂದ್ರಿಯವಿಷಯಗಳನ್ನು ಪ್ರತ್ಯಕ್ಷವಾಗಿ ನೋಡುವ ಶಕ್ತಿಯಿದ್ದಿತು. ಅವನು ಆಶಿಸಿದ ವಿಷಯಗಳೆಲ್ಲವೂ ಅವನ ಹೃದಯವೆಂಬ ತೆರೆಯ ಮೇಲೆ ಕಾಣಿಸಿಕೊಳ್ಳುತ್ತಿದ್ದುವು. ಅಂತಹ ವಿಜ್ಞಾನವಿನ್ನೂ ಈಗ ಬೆಳೆದಿಲ್ಲ. ಮತ್ತೊಬ್ಬನು ಏನು ಯೋಚಿಸುತ್ತಿರುವನೆಂಬುದನ್ನು ಸಂಜಯನು ಧ್ಯಾನದಿಂದಲೇ ಅರಿತುಕೊಳ್ಳುತ್ತಿದ್ದನು. ಈಗಲೂ ಪರರ ಹೃದಯದಲ್ಲಿರುವ ಇಂಗಿತವನ್ನು ತಿಳಿದುಕೊಳ್ಳಬೇಕೆಂದು ಅನೇಕಸಾಧನಗಳನ್ನು ಕಲ್ಪಿಸುತ್ತಿದ್ದರೂ ಸಂಜಯನ ಮಟ್ಟಕ್ಕೆ ಬರಬೇಕಾದರೆ ಸಾಧ್ಯವಾಗದೆಂದೇ ಹೇಳಬಹುದಾಗಿದೆ. ಈಗಿನ ಕಾಲದಲ್ಲಿ ಯುದ್ಧದ ವಾರ್ತೆಯನ್ನು ಸಂಗ್ರಹಿಸಲು ವೃತ್ತಪತ್ರಿಕೆಗಳ ಪ್ರತಿನಿಧಿಗಳಿಗೆ ವಿಶೇಷವಾದ ಸವಲತ್ತನ್ನು ಒದಗಿಸುತ್ತಾರೆ. ಆದರೂ ಕೆಲವೊಂದು ವೇಳೆ ಅವರು ಅಪಾಯಕ್ಕೀಡಾಗುವುದುಂಟು.

ಆದರೆ ಸಂಜಯನು ವಾರ್ತೆಯನ್ನು ಸಂಗ್ರಹಿಸಲು ಯಾವ ಸಮಯದಲ್ಲಿ ಎಲ್ಲೇ ತಿರುಗಾಡಿದರೂ ಶಸ್ತ್ರಗಳು ಅವನನ್ನು ಸ್ಪರ್ಶಿಸುತ್ತಿರಲಿಲ್ಲ. ಇದೆಂತಹ ಮಹಾವಿಜ್ಞಾನವೆಂಬುದನ್ನು ಭಾರತೀಯರಾದ ನಾವು ಕ್ಷಣಕಾಲವಾದರೂ ಯೋಚಿಸುವ ಅಗತ್ಯವಿದೆ. ಸಂಜಯನು ಆಕಾಶದಲ್ಲಿಯೂ ನಿರಾತಂಕವಾಗಿ ಸಂಚರಿಸುತ್ತಿದ್ದನು. ಇವೆಲ್ಲವೂ ಭಾರತೀಯವಿಜ್ಞಾನಕ್ಕೆ ಸೇರಿದುವುಗಳಾಗಿವೆ. ಈ ಪ್ರಕರಣವು ಭಾರತೀಯವಿಜ್ಞಾನದ ಪರಾಕಾಷ್ಠೆಯನ್ನು ಸ್ಪಷ್ಟಪಡಿಸಿದೆ ಯೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.)

ಮಹಾರಾಜ! ಯಾವಾಗ ಸಕಲಸೈನ್ಯಗಳೂ ಶಾಸ್ತ್ರವಿಧ್ಯನುಸಾರವಾಗಿ ಕಲ್ಪಿಸಿದ ವ್ಯೂಹಗಳಲ್ಲಿ ಯುದ್ಧಸನ್ನದ್ಧವಾಗಿ ನಿಂತಿದ್ದುವೋ–ಆಗ ನಿನ್ನ ಹಿರಿಯ ಮಗನಾದ ದುರ್ಯೋಧನನು ದುಃಶಾಸನನೊಡನೆ ಹೇಳಿದನು :

"ದುಃಶಾಸನ! ಭೀಷ್ಮನ ರಕ್ಷಣಾರ್ಥವಾಗಿ ನೀನೀಗಲೇ ರಥಗಳನ್ನು ಸಜ್ಜುಗೊಳಿಸು. ಎಲ್ಲ ಸೈನಿಕಸಮೂಹಗಳಿಗೂ ಭೀಷ್ಮನ ರಕ್ಷಣೆಗೆ ಸಜ್ಜಾಗಿ ನಿಲ್ಲುವಂತೆ ಈ ಕೂಡಲೇ ನೀನು ಆಜ್ಞೆಮಾಡು. ನಾನು ಅನೇಕ ವರ್ಷಗಳಿಂದ ಸಂಚಿಂತಿಸುತ್ತಿದ್ದ ಪಾಂಡವರ ಮತ್ತು ಕೌರವರ ಸೈನ್ಯಸಮಾಗಮವು ನನ್ನ ಮುಂದೆಯೇ ಉಪಸ್ಥಿತವಾಗಿಬಿಟ್ಟಿದೆ. ಈಗ ನಮಗೆ ಭೀಷ್ಮನ ರಕ್ಷಣೆಗಿಂತ ಉತ್ತಮವಾದ ಬೇರೊಂದು ಕಾರ್ಯವೇ ಇಲ್ಲ. ಇವನನ್ನು ನಾವು ಜಾಗರೂಕತೆಯಿಂದ ಸಂರಕ್ಷಿಸಿದ್ದೇ ಆದರೆ ನಮ್ಮ ಪಿತಾಮಹನಾದ ಭೀಷ್ಮನು ಪಾರ್ಥರನ್ನೂ (ಪಾಂಡವರ ಸೈನ್ಯವನ್ನೂ), ಸೋಮಕರನ್ನೂ, ಸೃಂಜಯ ರನ್ನೂ ಅಪರಿಮಿತಸಂಖ್ಯೆಯಲ್ಲಿ ಸಂಹಾರಮಾಡಿಯಾನು. ಪರಿಶುದ್ಧಾತ್ಮನಾದ ಭೀಷ್ಮನು ಶಿಖಂಡಿಯನ್ನು ಸಂಹರಿಸುವುದಿಲ್ಲ.

**ಶ್ರೂಯತೇ ಸ್ತ್ರೀ ಹ್ಯಸೌ ಪೂರ್ವಂ ತಸ್ಮಾದ್ವರ್ಜ್ಯೋ ರಣೇ ಮಮ ॥**

'ಈ ಶಿಖಂಡಿಯು ಮೊದಲು ಸ್ತ್ರೀಯಾಗಿದ್ದನೆಂದು ನಾನು ಕೇಳಿದ್ದೇನೆ. ಆದುದರಿಂದ ಇವನನ್ನು ಯುದ್ಧದಲ್ಲಿ ನಾನು ವರ್ಜಿಸುತ್ತೇನೆ. (ಇವನೊಡನೆ ಯುದ್ಧಮಾಡುವುದಿಲ್ಲ.)'

ಎಂಬುದಾಗಿ ಭೀಷ್ಮನೇ ಹೇಳಿಬಿಟ್ಟಿದ್ದಾನೆ. ಈ ಕಾರಣದಿಂದ ನಾವು ಭೀಷ್ಮನನ್ನು ವಿಶೇಷವಾದ ಜಾಗರೂಕತೆಯಿಂದ ರಕ್ಷಿಸಬೇಕೆಂಬುದು ನನ್ನ ಅಭಿಮತವಾಗಿದೆ. ನಮ್ಮ ಕಡೆಯ ಯೋಧರೆಲ್ಲರೂ ಶಿಖಂಡಿಯ ಸಂಹಾರ

ಕ್ಕಾಗಿ ಸರ್ವಪ್ರಯತ್ನವನ್ನೂ ಮಾಡಲಿ. ಅದೇ ರೀತಿಯಲ್ಲಿ ಪೂರ್ವ-ಪಶ್ಚಿಮ-ದಕ್ಷಿಣೋತ್ತರದೇಶಗಳಿಂದ ಬಂದಿರತಕ್ಕ ಯೋಧರಲ್ಲಿ ಸರ್ವಾಸ್ತ್ರ ಕುಶಲರು ಯಾರು ಯಾರಿದ್ದಾರೆಯೋ ಅವರೆಲ್ಲರೂ ಭೀಷ್ಮನನ್ನು ರಕ್ಷಿಸಲಿ.

**ಅರಕ್ಷ್ಯಮಾಣಂ ಹಿ ವೃಕೋ ಹನ್ಯಾತ್ಸಿಂಹಂ ಮಹಾಬಲಮ್ ।**
**ಮಾ ಸಿಂಹಂ ಜಮ್ಬುಕೇನೇವ ಘಾತಯಾಮಃ ಶಿಖಣ್ಡಿನಾ ॥೧೮॥**

ಸಿಂಹವು ಎಷ್ಟೇ ಬಲಿಷ್ಠವಾಗಿದ್ದರೂ ಜಾಗರೂಕತೆಯಿಂದಿರದಿದ್ದ ಪಕ್ಷದಲ್ಲಿ (ತನ್ನ ರಕ್ಷಣೆಯನ್ನು ಸರಿಯಾಗಿ ಮಾಡಿಕೊಳ್ಳದಿದ್ದ ಪಕ್ಷದಲ್ಲಿ ) ಒಂದು ತೋಳವೇ ಅದನ್ನು ಸಂಹರಿಸಿಬಿಡಬಹುದು.

(ತೋಳದಿಂದ ಸಿಂಹವು ಹತವಾಯಿತೆಂದರೆ ಅದು ಅಷ್ಟೊಂದು ಹೀನಾಯವಾಗಿ ಅಥವಾ ಅಚ್ಚರಿಯಾಗಿ ಕಾಣುವುದಿಲ್ಲ. ಆದರೆ ಗುಳ್ಳೇನರಿ ಯೊಂದು ಸಿಂಹವನ್ನು ಕೊಂದುಬಿಟ್ಟರೆ ಸಿಂಹದ ಗೌರವಕ್ಕೇ ಅಪಾರವಾದ ಹಾನಿಯುಂಟಾದಂತಾಗುತ್ತದೆ.) ನಮ್ಮ ಪಿತಾಮಹನಾದ, ಮಹಾವೀರನಾದ, ಸಿಂಹಪ್ರಾಯನಾದ ಭೀಷ್ಮನನ್ನೇನಾದರೂ ಶಿಖಂಡಿಯು ಸಂಹರಿಸಿಬಿಟ್ಟರೆ ಗುಳ್ಳೇನರಿಯು ಸಿಂಹವನ್ನು ಸಂಹರಿಸಿದಂತೆಯೇ ಆಗಿಬಿಡುತ್ತದೆ. ಹಾಗಾಗಲು ಮಾತ್ರ ನಾವು ಖಂಡಿತವಾಗಿಯೂ ಅವಕಾಶವೀಯಬಾರದು. ಸರ್ವ ಪ್ರಕಾರದಿಂದಲೂ ನಾವು ಭೀಷ್ಮನನ್ನು ಶಿಖಂಡಿಯಿಂದ ರಕ್ಷಿಸಬೇಕು.

**ವಾಮಂ ಚಕ್ರಂ ಯುಧಾಮನ್ಯುರುತ್ತಮೌಜಾಶ್ಚ ದಕ್ಷಿಣಮ್ ।**
**ಗೋಪ್ತಾರೌ ಫಾಲ್ಗುನಂ ಪ್ರಾಪ್ತೌ ಫಾಲ್ಗುನೋऽಪಿ ಶಿಖಣ್ಡಿನಃ ॥೧೯॥**

ಅರ್ಜುನನ ರಥದ ಎಡಭಾಗದ ಚಕ್ರವನ್ನು ಯುಧಾಮನ್ಯುವು ರಕ್ಷಿಸುತ್ತಿದ್ದಾನೆ. ಬಲಭಾಗದ ಚಕ್ರವನ್ನು ಉತ್ತಮೌಜಸನು ರಕ್ಷಿಸುತ್ತಿದ್ದಾನೆ. ರಥಾರೂಢನಾಗಿರುವ ಫಾಲ್ಗುನನು ಶಿಖಂಡಿಯ ರಥವನ್ನು ರಕ್ಷಣೆಮಾಡುತ್ತಿದ್ದಾನೆ.

**ಸಂರಕ್ಷ್ಯಮಾಣಃ ಪಾರ್ಥೇನ ಭೀಷ್ಮೇಣ ಚ ವಿವರ್ಜಿತಃ ।**
**ಯಥಾ ನ ಹನ್ಯಾದ್ಗಾಙ್ಗೇಯಂ ದುಃಶಾಸನ ತಥಾ ಕುರು ॥೨೦॥**

ಭೀಷ್ಮನಿಂದ ಉಪೇಕ್ಷಿತನಾಗಿರುವ ಮತ್ತು ಪಾರ್ಥನಿಂದಲೇ ಸಂರಕ್ಷಿತ ನಾಗಿರತಕ್ಕ ಶಿಖಂಡಿಯು ಯಾವುದೇ ಸಮಯದಲ್ಲಿಯೂ ಗಂಗಾಪುತ್ರ

ನಾದ ಭೀಷ್ಮನನ್ನು ಸಂಹಾರಮಾಡದ ರೀತಿಯಲ್ಲಿ ಭೀಷ್ಮನಿಗೆ ರಕ್ಷಕರನ್ನು ನಿಯೋಜಿಸು."

೧೫ನೆಯ ಅಧ್ಯಾಯವು ಮುಗಿಯಿತು.

೧೬ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ದುರ್ಯೋಧನನ ಸೇನಾವರ್ಣನೆ

ಸಂಜಯನು ಧೃತರಾಷ್ಟ್ರನನ್ನು ಕುರಿತು ಹೇಳುತ್ತಾನೆ :

"ಮಹಾರಾಜ! ರಾತ್ರಿಯು ಕಳೆದೊಡನೆಯೇ ರಣರಂಗದಲ್ಲಿ ಸರ್ವತ್ರ ಕೋಲಾಹಲಶಬ್ದವುಂಟಾಯಿತು. 'ರಥಕ್ಕೆ ಕುದುರೆಗಳನ್ನು ಕಟ್ಟಿರಿ. ಯುದ್ಧಕ್ಕೆ ಸಿದ್ಧರಾಗಿ ನಿಲ್ಲಿರಿ'–ಇವೇ ಮೊದಲಾಗಿ ಕೂಗಿಕೊಳ್ಳುತ್ತಿದ್ದ ರಾಜರ ಕೋಲಾಹಲನಿನಾದವು ಸರ್ವತ್ರ ವ್ಯಾಪಿಸಿತು. ಶಂಖ-ದುಂದುಭಿಘೋಷ ಗಳಿಂದಲೂ, ವೀರಯೋಧರು ಮಾಡುತ್ತಿದ್ದ ಸಿಂಹನಾದಗಳಿಂದಲೂ, ಕುದುರೆಗಳ ಕೆನೆತಗಳಿಂದಲೂ, ರಥನೇಮಿಗಳ ಶಬ್ದದಿಂದಲೂ, ಆನೆಗಳು ಮಾಡುತ್ತಿದ್ದ ಘೀಂಕೃತಿಧ್ವನಿಗಳಿಂದಲೂ, ಯೋಧರ ವೀರಗರ್ಜನೆ ಗಳಿಂದಲೂ, ನೆಗೆಯುವುದು ; ಚಪ್ಪಾಳೆತಟ್ಟುವುದು ; ಭುಜಗಳನ್ನು ತಟ್ಟಿ ಕೊಳ್ಳುವುದು ; ಗಟ್ಟಿಯಾಗಿ ವೀರಘೋಷಮಾಡುವುದು ; ಜಯಕಾರ ಹೇಳು ವುದು–ಇತ್ಯಾದಿಗಳಿಂದಲೂ ಉಂಟಾದ ಗದ್ದಲವು ಸರ್ವತ್ರ ವ್ಯಾಪಿಸಿತು. ಸೂರ್ಯೋದಯವಾಗುತ್ತಲೇ ಕುರು-ಪಾಂಡವರ ವಿಶಾಲಸೇನೆಯು ಸರ್ವ ಪ್ರಕಾರದಿಂದಲೂ ಸಜ್ಜಾಗಿ (ಯಾವ ವಿಧವಾದ ನ್ಯೂನಾತಿರೇಕಗಳೂ ಇಲ್ಲದ ರೀತಿಯಲ್ಲಿ) ಎದುರು-ಬದುರಾಗಿ ನಿಂತುವು. ರಾಜೇಂದ್ರ! ಬೆಳಗಾಗುತ್ತಲೇ ನಿನ್ನ ಮಕ್ಕಳ ಮತ್ತು ಪಾಂಡವರ ದುರ್ದಮ್ಯವಾದ ಶಸ್ತ್ರಾಸ್ತ್ರಗಳು ಮತ್ತು ಕವಚಗಳು ಝಳಪಿಸತೊಡಗಿದುವು. ಸೂರ್ಯೋದಯದ ಪ್ರಕಾಶದಲ್ಲಿ ನಿನ್ನ ಮತ್ತು ನಿನ್ನ ಶತ್ರುಗಳ ಶಸ್ತ್ರಸಜ್ಜಿತಸೇನೆಯು ಅತ್ಯಂತವಿಶಾಲವಾಗಿರುವಂತೆ ಕಂಡುಬಂದಿತು. ಸುವರ್ಣದಿಂದ ವಿಭೂಷಿತವಾದ ಆನೆಗಳು ಮತ್ತು ರಥ ಗಳು ವಿದ್ಯುತ್ತಿನಿಂದ (ಮಿಂಚಿನಿಂದ) ಕೂಡಿದ ಕಾರ್ಮುಗಿಲುಗಳಂತೆ ಪ್ರಕಾಶಿಸಿದುವು. ಬಹುಸಂಖ್ಯಾತವಾದ ರಥವಾಹಿನಿಗಳು ನಗರಗಳಂತೆಯೇ ಕಾಣುತ್ತಿದ್ದುವು. ಆ ಸೈನ್ಯಾಕಾಶದ ಮಧ್ಯದಲ್ಲಿ ನಿನ್ನ ತಂದೆಯು ಪೂರ್ಣಚಂದ್ರ

ನಂತೆಯೇ ಬಹುವಾಗಿ ಪ್ರಕಾಶಿಸಿದನು. ನಿನ್ನ ಕಡೆಯ ಯೋಧರು ಧನುಸ್ಸು, ಋಷ್ಟಿ, ಖಡ್ಗ, ಗದೆ, ಶಕ್ತ್ಯಾಯುಧ, ತೋಮರ–ಇವೇ ಮೊದಲಾದ ಶುಭ ವಾದ ಅಸ್ತ್ರ-ಶಸ್ತ್ರಗಳನ್ನು ಧರಿಸಿ ಸೇನಾಸಮೂಹಗಳಲ್ಲಿ ಉಪಸ್ಥಿತರಾಗಿದ್ದರು. ಲಕ್ಷೋಪಲಕ್ಷಸಂಖ್ಯೆಯಲ್ಲಿ ಸೈನಿಕರೂ, ಆನೆಗಳೂ, ಕುದುರೆಗಳೂ, ರಥಿ ಕರೂ, ಶತ್ರುಗಳನ್ನು ಬಂಧಿಸುವ ಸಲುವಾಗಿ ಬಲೆಯಾಕಾರದಲ್ಲಿ ರಚಿತವಾದ ವ್ಯೂಹಗಳಲ್ಲಿ ಉಪಸ್ಥಿತರಾಗಿದ್ದರು. ನಿನ್ನ ಮತ್ತು ಶತ್ರುಪಕ್ಷದ ರಥಗಳಲ್ಲಿ ಅನೇಕವಿಧವಾದ ಮತ್ತು ಬಹಳ ಎತ್ತರದಲ್ಲಿದ್ದು ಪ್ರಕಾಶಮಾನವಾಗಿ ಕಾಣು ತ್ತಿದ್ದ ಸಾವಿರಾರು ಧ್ವಜಗಳು ಆ ಸೈನ್ಯಸಮೂಹದಲ್ಲಿ ಹಾರಾಡುತ್ತಿದ್ದುವು. ಸುವರ್ಣಮಯವಾದ ಆಭರಣಗಳಿಂದಲೂ ಮಣಿಗಳಿಂದಲೂ ಚಿತ್ರಾಂಗ ರಾಗಿ ಕಾಣುತ್ತಿದ್ದ ಸಾವಿರಾರು ಗಜಯೋಧರು ಜ್ವಾಲೆಯಿಂದ ಕೂಡಿದ ಯಜ್ಞೇಶ್ವರನೋಪಾದಿಯಲ್ಲಿ ಜಾಜ್ವಲ್ಯಮಾನರಾಗಿ ಪ್ರಕಾಶಿಸುತ್ತಿದ್ದರು. ಮಹೇಂದ್ರನ ಭವನದಲ್ಲಿ ಶುಭ್ರವಾದ ಇಂದ್ರನ ಧ್ವಜಗಳು ಹಾರಾಡುತ್ತಿರು ವಂತೆ–ಯುದ್ಧಸನ್ನದ್ಧರಾಗಿದ್ದ ಕೌರವ-ಪಾಂಡವರ ಧ್ವಜಗಳೂ ಸಹ ಹಾರಾಡು ತ್ತಿದ್ದುವು. ಯುದ್ಧಾಭಿಲಾಷಿಗಳಾಗಿದ್ದ ಆ ಮಹಾವೀರರು ಸರ್ವಪ್ರಕಾರ ಗಳಿಂದಲೂ ಯುದ್ಧಸನ್ನದ್ಧರಾಗಿರುವಂತೆ ಕಾಣುತ್ತಿದ್ದರು. ಆಯುಧಗಳನ್ನು ಎತ್ತಿಹಿಡಿದಿದ್ದುದರಿಂದ ಚಿತ್ರ-ವಿಚಿತ್ರವಾಗಿ ಕಾಣುತ್ತಿದ್ದ, ಅಂಗುಲಿತ್ರಗಳನ್ನು ತೊಟ್ಟಿದ್ದ, ಬತ್ತಳಿಕೆಯನ್ನು ಹೊಂದಿದ್ದ, ಎತ್ತಿನಂತೆ ವಿಶಾಲವಾದ ಕಣ್ಣುಗಳನ್ನು ಹೊಂದಿದ್ದ, ಸೈನ್ಯದ ಅಗ್ರಭಾಗದಲ್ಲಿ ನಿಂತಿದ್ದ ರಾಜರು ಬಹುವಾಗಿ ಪ್ರಕಾಶಿಸುತ್ತಿದ್ದರು. ಸುಬಲಪುತ್ರನಾದ ಶಕುನಿ, ಶಲ್ಯ, ಸಿಂಧುರಾಜನಾದ ಜಯದ್ರಥ, ವಿಂದಾನುವಿಂದರು, ಕೇಕಯರಾಜಕುಮಾರರು, ಕಾಂಬೋಜ ರಾಜನಾದ ಸುದಕ್ಷಿಣ, ಕಲಿಂಗರಾಜನಾದ ಶ್ರುತಾಯುಧ, ರಾಜನಾದ ಜಯ ತ್ಸೇನ, ಕೋಸಲನರೇಶನಾದ ಬೃಹದ್ಬಲ, ಮತ್ತು ಭೋಜವಂಶೀಯನಾದ ಕೃತವರ್ಮಾ–ಈ ಹತ್ತು ಜನರೂ ಪುರುಷವ್ಯಾಘ್ರರೂ, ಮಹಾಶೂರರೂ, ಪರಿಘಾಯುಧದಂತೆ ನೀಳವಾದ ಮತ್ತು ದಪ್ಪವಾದ ತೋಳುಗಳುಳ್ಳವರೂ, ಆಗಿದ್ದು ಒಬ್ಬೊಬ್ಬರೂ ಒಂದೊಂದು ಅಕ್ಷೌಹಿಣೀಸೈನ್ಯಕ್ಕೆ ಅಧಿಪತಿಗಳೂ ಆಗಿದ್ದರು. ಇವರೆಲ್ಲರೂ ಅನೇಕಾನೇಕ ಯಾಗಗಳನ್ನು ಮಾಡಿ ಬ್ರಾಹ್ಮಣರಿಗೆ ಯಥೇಚ್ಛವಾದ ಭೂರಿದಕ್ಷಿಣೆಗಳನ್ನು ಅರ್ಪಿಸಿದ್ದರು. ಇವರಲ್ಲದೇ ಇನ್ನೂ

ಅನೇಕ ಬಹುಸಂಖ್ಯಾತರಾದ, ದುರ್ಯೋಧನವಶಾನುವರ್ತಿಗಳಾದ, ನೀತಿ ಮಂತರಾದ, ಮಹಾರಥರಾದ ರಾಜರು ಮತ್ತು ರಾಜಪುತ್ರರು ಯುದ್ಧಸನ್ನದ್ಧ ರಾಗಿ ತಮ್ಮ ತಮ್ಮ ಸೈನಿಕರ ಜೊತೆಯಲ್ಲಿ ನಿಂತಿರುವುದು ಕಂಡುಬಂದಿತು. ಅವರೆಲ್ಲರೂ ಕೃಷ್ಣಾಜಿನವನ್ನು ತೊಟ್ಟಿದ್ದರು. (ವಿಜಯಗಳಿಸಬೇಕು ; ಇಲ್ಲವೇ ಯುದ್ಧದಲ್ಲಿ ಮಡಿಯಬೇಕು–ಎಂಬ ದೀಕ್ಷೆಯನ್ನು ತೊಟ್ಟಿದ್ದರು.) ಅವರೆಲ್ಲರೂ ಬಲಿಷ್ಠರಾಗಿದ್ದರು. ಯುದ್ಧಭೂಮಿಗೇ ಶೋಭಾಯಮಾನರಾಗಿದ್ದರು. ದುರ್ಯೋಧನನಿಗೆ ಹಿತವನ್ನುಂಟುಮಾಡುವುದಕ್ಕೋಸ್ಕರವೇ ಅವರು ಹರ್ಷೋಲ್ಲಾಸಯುಕ್ತರಾಗಿ ಬ್ರಹ್ಮಲೋಕಕ್ಕೆ ಹೋಗುವ (ಸಾವನ್ನಾದರೂ ಅಪ್ಪುವ) ದೀಕ್ಷೆಯನ್ನು ಕೈಗೊಂಡಿದ್ದರು. ನಾನು ಹಿಂದೆಯೇ ಹೇಳಿದಂತೆ ಸಮರ್ಥವಾದ ಹತ್ತು ಅಕ್ಷೌಹಿಣೀಸೈನ್ಯಗಳು ಆಯುಧಗಳನ್ನು ಹಿಡಿದುಕೊಂಡು ಯುದ್ಧಸನ್ನದ್ಧವಾಗಿ ನಿಂತಿದ್ದುವು. ಬಹುವಿಶಾಲವಾದ ಹನ್ನೊಂದನೆಯದಾದ ಸೇನಾಸಮೂಹವು ದುರ್ಯೋಧನನದಾಗಿದ್ದಿತು. ಆ ಸೈನ್ಯವು ಕೌರವರ ಎಲ್ಲ ಸೇನಾದಳಗಳಿಗಿಂತಲೂ ಅಗ್ರಭಾಗದಲ್ಲಿದ್ದಿತು. ಆ ಸೇನಾದಳಕ್ಕೆ ಶಾಂತನುವಿನ ಮಗನಾದ ಭೀಷ್ಮನೇ ಅಧಿಪತಿಯಾಗಿದ್ದನು. ಬಿಳಿಯ ಶಿರಸ್ತ್ರಾಣವನ್ನು ಧರಿಸಿದ್ದ, ಬಿಳಿಯ ಕುದುರೆಗಳಿಂದ ಯುಕ್ತವಾದ ರಥದಲ್ಲಿ ಕುಳಿತಿದ್ದ, ಬಿಳಿಯ ಬಟ್ಟೆಗಳನ್ನೇ ಧರಿಸಿದ್ದ, ಆಗ ತಾನೇ ಉದಯಿಸಿದ ಚಂದ್ರನಂತೆ ಬಹುಪ್ರಕಾಶಮಾನನಾಗಿದ್ದ ಭೀಷ್ಮನನ್ನು ಆ ಸಮರಾಂಗಣದಲ್ಲಿ ನೋಡಿದೆನು.

ಸುವರ್ಣಮಯವಾದ ತಾಲಧ್ವಜಯುಕ್ತವಾಗಿದ್ದ, ರಜತಮಯವಾದ ರಥ ದಲ್ಲಿ ಕುಳಿತಿದ್ದ, ಬಿಳಿಯ ಮೋಡದ ಮಧ್ಯದಲ್ಲಿ ಕಾಣುವ ಸೂರ್ಯನಂತೆಯೇ ಇದ್ದ ಭೀಷ್ಮನನ್ನು ಕುರು-ಪಾಂಡವರೂ, ಸೃಂಜಯರೂ, ಧೃಷ್ಟದ್ಯುಮ್ನನೇ ಮೊದಲಾದ ಪಾಂಚಾಲರೂ ಸಹ ನೋಡಿದರು. ಗರ್ಜಿಸುತ್ತಿರುವ ಸಿಂಹ ವನ್ನು ನೋಡಿ ಮೊಲವೇ ಮೊದಲಾದ ಕ್ಷುದ್ರಮೃಗಗಳು ಭಯಪಡುವಂತೆ– ರಥಸ್ಥನಾಗಿದ್ದ ಭೀಷ್ಮನನ್ನು ನೋಡಿ ಧೃಷ್ಟದ್ಯುಮ್ನಪ್ರಮುಖರಾದ ಪಾಂಡವ ಪಕ್ಷದ ಯೋಧರು ಒಡನೆಯೇ ಉದ್ವಿಗ್ನರಾದರು. ಮಹಾರಾಜ! ಆ ಕುರು ಕ್ಷೇತ್ರದ ಸಮರಾಂಗಣದಲ್ಲಿ ನಿನ್ನ ಪಕ್ಷದ ಹನ್ನೊಂದು ಸೇನಾದಳಗಳೂ ಪಾಂಡವರ ಕಡೆಯ ಏಳು ಸೇನಾದಳಗಳೂ ಮಹಾಪುರುಷರಿಂದ ಪರಿಪಾಲಿತ ವಾಗಿದ್ದು ಬಹುಶೋಭಾಯಮಾನವಾಗಿ ಕಾಣುತ್ತಿದ್ದುವು. ಆ ಸಮಯದಲ್ಲಿ

ಪಾಂಡವ-ಕೌರವರ ಆ ಎರಡು ಮಹಾಸೇನೆಗಳೂ ಪ್ರಳಯಕಾಲದಲ್ಲಿ ಮಾತ್ರವೇ ಒಂದಾಗುವ, ಮದಿಸಿದ ನೀರಾನೆಗಳಿಂದಲೂ ಮೊಸಳೆಗಳಿಂದಲೂ ದೊಡ್ಡ-ದೊಡ್ಡ ಸುಳಿಗಳಿಂದಲೂ ಕೂಡಿರುವ, ದೊಡ್ಡ-ದೊಡ್ಡದಾದ ತಿಮಿ-ತಿಮಿಂಗಿಲಗಳಿಂದಲೂ ಕೂಡಿರುವ ಎರಡು ಮಹಾಸಾಗರಗಳಂತೆಯೇ ಕಾಣುತ್ತಿದ್ದುವು. ಕುರುಕ್ಷೇತ್ರದಲ್ಲಿ ಕೌರವ-ಪಾಂಡವರ ಸೇನಾಸಮೂಹವು ಯಾವ ರೀತಿಯಲ್ಲಿ ಸೇರಿದ್ದಿತೋ–ಅದೇ ರೀತಿಯಲ್ಲಿ ಹಿಂದೆ ಯಾವಾಗಲಾದರೂ ಯಾವುದಾದರೂ ಸೇನಾಸಮೂಹವು ಸೇರಿದ್ದಿತೆಂಬುದನ್ನು ನಾವು ಕೇಳಿಯೂ ಇಲ್ಲ ; ನಮ್ಮ ಜೀವಿತಕಾಲದಲ್ಲಿ ಏತಾವತ್ಕಾಲಪರ್ಯಂತವಾಗಿ ಕಂಡೂ ಇಲ್ಲ.”

೧೬ನೆಯ ಅಧ್ಯಾಯವು ಮುಗಿಯಿತು.

೧೭ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ಕೌರವಮಹಾರಥರು ಯುದ್ಧಕ್ಕಾಗಿ ಮುಂದೆ ಹೋದುದು : ಅವರ ವ್ಯೂಹ, ವಾಹನ, ಧ್ವಜ-ಇತ್ಯಾದಿಗಳ ವರ್ಣನೆ

ಸಂಜಯನು ಹೇಳುತ್ತಾನೆ :

“ಮಹಾರಾಜ! ಯಾವ ರೀತಿಯಲ್ಲಿ ಭಗವಾನ್ ಕೃಷ್ಣದ್ವೈಪಾಯನ ವ್ಯಾಸರು ಹೇಳಿದ್ದರೋ ಅದೇ ರೀತಿಯಲ್ಲಿ ಭೂಮಂಡಲದ ರಾಜರೆಲ್ಲರೂ ಸಮ್ಮಿಳಿತರಾಗಿ ಕುರುಕ್ಷೇತ್ರಕ್ಕೆ ಆಗಮಿಸಿರುವರು. ಆ ದಿವಸ ಚಂದ್ರನು ಮಘಾ ನಕ್ಷತ್ರದಲ್ಲಿದ್ದನು. ಪ್ರಜ್ವಲಿಸುವ ಅಗ್ನಿಗೆ ಸಮಾನವಾಗಿ ಕಾಣುತ್ತಿದ್ದ ಏಳು ಮಹಾಗ್ರಹಗಳು ಆಕಾಶದಲ್ಲಿ ಕಾಣಿಸಿಕೊಂಡುವು.

(ಮಘಾನಕ್ಷತ್ರವು ಪಿತೃಸಂಬಂಧವಾದ ನಕ್ಷತ್ರ. ಮಘಾವಿಷಯಂ ಎಂದರೆ ಪಿತೃಲೋಕ. ಸೋಮನು ಪಿತೃಲೋಕಕ್ಕೆ ಹೋಗಿದ್ದನು–ಎಂದು ವ್ಯಾಖ್ಯಾನಕಾರರು ಅರ್ಥಮಾಡಿದ್ದಾರೆ. ಹಿಂದೆ ಜ್ಯೇಷ್ಠಾನಕ್ಷತ್ರದಲ್ಲಿ ಯುದ್ಧವು ಪ್ರಾರಂಭವಾಯಿತೆಂದು ಹೇಳಿರುವುದರಿಂದ ಚಂದ್ರನು ಜ್ಯೇಷ್ಠೆಯಲ್ಲಿರಲು ಸಾಧ್ಯ. ಮಘಾನಕ್ಷತ್ರದಲ್ಲಿರಲು ಸಾಧ್ಯವಿಲ್ಲ. ಚಂದ್ರನು ಆ ಸಮಯದಲ್ಲಿ ಪಿತೃಲೋಕಕ್ಕೆ ಯಾವ ಕಾರಣಕ್ಕಾಗಿ ಹೋಗಿದ್ದನು? ಅದರ ಪ್ರಸ್ತಾಪವನ್ನು ಇಲ್ಲೇಕೆ ಮಾಡಿದರು?–ಎಂಬುದಕ್ಕೆ ಸಮಾಧಾನಹೇಳುತ್ತಾ ವ್ಯಾಖ್ಯಾನಕಾರರು ಹೀಗೆ ಹೇಳಿದ್ದಾರೆ :

**ಯುದ್ಧೇ ಮೃತಾನಾಂ ಉತ್ತಮದೇಹಪ್ರದಾನಾರ್ಥಂ ಚನ್ದ್ರಸ್ತದಾ ಪಿತೃಲೋಕೇ ಸನ್ನಿಹಿತೋಽಭೂತ್ । ಸ್ವರ್ಗಿಣಾಂ ದಿವ್ಯದೇಹಲಾಭಃ ಚನ್ದ್ರಾಧೀನಃ ಇತಿ ಶಾಸ್ತ್ರಪ್ರಸಿದ್ಧೇಃ ।** ಯುದ್ಧದಲ್ಲಿ ಮಡಿದವರಿಗೆ ಉತ್ತಮ ದೇಹಗಳನ್ನು ದಯಪಾಲಿಸಲು ಚಂದ್ರನು ಮಹಾಭಾರತಯುದ್ಧಸಮಯ ದಲ್ಲಿ ಪಿತೃಲೋಕದಲ್ಲಿದ್ದನು. ಸ್ವರ್ಗಗಾಮಿಗಳಿಗೆ ದಿವ್ಯದೇಹಗಳನ್ನು ಕೊಡುವ ಅಧಿಕಾರವು ಚಂದ್ರನದೆಂಬುದು ಶಾಸ್ತ್ರಪ್ರಸಿದ್ಧವಾಗಿದೆ. ಸಪ್ತಮಹಾ ಗ್ರಹಗಳೆಂಬುದಕ್ಕೆ ವ್ಯಾಖ್ಯಾನಕಾರರು : ಛಾಯಾಗ್ರಹಗಳಾದ ರಾಹು-ಕೇತು ಗಳನ್ನು ಬಿಟ್ಟು ಉಳಿದ ಸೂರ್ಯಾದಿ ಸಪ್ತಗ್ರಹಗಳೆಂದು ಹೇಳಿರುತ್ತಾರೆ.)

ಪ್ರಾತಃಕಾಲದಲ್ಲಿ ಸೂರ್ಯನು ಎರಡು ಭಾಗಗಳಾಗಿ ಒಡೆದಿದ್ದಾನೆಯೋ ಎಂಬಂತೆ ಕಾಣುತ್ತಿದ್ದನು. ಅಂದವನು ಅತ್ಯಂತೋಜ್ವಲವಾದ ಜ್ವಾಲೆಗಳಿಂದ ಕೂಡಿದ್ದ ತನ್ನ ಕಿರಣಗಳಿಂದ ಕೂಡಿ ಹಿಂದಿನ ದಿನಗಳಿಗಿಂತಲೂ ಅತ್ಯಧಿಕವಾಗಿ ಪ್ರಕಾಶಿಸುತ್ತಾ ಉದಯಿಸಿದನು. ಪ್ರದೀಪ್ತವಾಗಿದ್ದ ನಾಲ್ಕು ದಿಕ್ಕುಗಳಲ್ಲಿಯೂ ಮಾಂಸ-ರಕ್ತಗಳನ್ನು ತಿಂದು ಜೀವಿಸುವ ಗುಳ್ಳೇನರಿ, ಕಾಗೆ, ಮುಂತಾದ ಮೃಗ-ಪಕ್ಷಿಗಳು ಮನುಷ್ಯರ ಮತ್ತು ಪ್ರಾಣಿಗಳ ಹೆಣಗಳನ್ನು ನಿರೀಕ್ಷಿಸುತ್ತಾ ಅಮಂಗಲಸೂಚಕವಾಗಿ ಶಬ್ದಮಾಡುತ್ತಿದ್ದುವು.

**ಅಹನ್ಯಹನಿ ಪಾರ್ಥಾನಾಂ ವೃದ್ಧಃ ಕುರುಪಿತಾಮಹಃ ।**
**ಭರದ್ವಾಜಾತ್ಮಜಶ್ಚೈವ ಪ್ರಾತರುತ್ಥಾಯ ಸಂಯತೌ ॥೫॥**

**ಜಯೋಽಸ್ತು ಪಾಣ್ಡುಪುತ್ರಾಣಾಮಿತ್ಯೂಚತುರರಿಂದಮೌ ।**
**ಯುಯುಧಾತೇ ತವಾರ್ಥಾಯ ಯಥಾ ಸ ಸಮಯಃ ಕೃತಃ ॥೬॥**

ಕುರುಕುಲಪಿತಾಮಹನಾದ ವೃದ್ಧನಾದ ಭೀಷ್ಮನೂ ಮತ್ತು ಭರದ್ವಾಜರ ಮಕ್ಕಳಾದ ದ್ರೋಣರೂ ಪ್ರತಿನಿತ್ಯವೂ ಪ್ರಾತಃಕಾಲದಲ್ಲೆದ್ದು ಸಮಾಹಿತ ಮನಸ್ಕರಾಗಿ–'ಪಾರ್ಥಾನಾಂ ಪಾಣ್ಡುಪುತ್ರಾಣಾಂ ಜಯೋಽಸ್ತು' 'ಪೃಥೆಯ ಮಕ್ಕಳಾದ ಪಾಂಡವರಿಗೆ ಜಯವಾಗಲಿ'–ಎಂದು ಹೇಳುತ್ತಿದ್ದರು. ಆದರೆ ಅರಿಂದಮರಾದ ಭೀಷ್ಮ-ದ್ರೋಣರು ನಿನಗೆ ಕೊಟ್ಟಿದ್ದ ಭಾಷೆಗೆ ಅನುಗುಣವಾಗಿ ನಿನ್ನ ಪಕ್ಷದಲ್ಲೇ ನಿಂತು ಶತ್ರುಗಳನ್ನೆದುರಿಸಿ ಯುದ್ಧಮಾಡು

ತ್ತಿದ್ದರು. ಸಕಲಧರ್ಮಗಳನ್ನೂ ವಿಶೇಷರೀತಿಯಿಂದ ತಿಳಿದಿದ್ದ (ಸರ್ವಧರ್ಮ ಗಳಲ್ಲಿಯೂ ವಿಶೇಷಪ್ರಾವೀಣ್ಯವನ್ನು ಹೊಂದಿದ್ದ) ನಿನ್ನ ತಾತನಾದ ದೇವ ವ್ರತನು ನಿನ್ನ ಪಕ್ಷದಲ್ಲಿದ್ದ ಸಕಲರಾಜರನ್ನೂ ಕರೆಯಿಸಿ ಅವರೊಡನೆ ಹೀಗೆಂದು ಹೇಳಿದನು :

**ಇದಂ ವಃ ಕ್ಷತ್ರಿಯಾ ದ್ವಾರಂ ಸ್ವರ್ಗಾಯಾಪಾವೃತಂ ಮಹತ್ ।**
**ಗಚ್ಛಧ್ವಂ ತೇನ ಶಕ್ರಸ್ಯ ಬ್ರಹ್ಮಣಃ ಸಹಲೋಕತಾಮ್ ॥೮॥**

"ಕ್ಷತ್ರಿಯವೀರರೇ! ಈ ಮಹಾಯುದ್ಧವು ನಿಮಗೆ ವಿಶಾಲವಾಗಿ ತೆರೆ ದಿರುವ ಸ್ವರ್ಗದ ಬಾಗಿಲಿನಂತಿದೆ. ನೀವು ಇದರ ಮೂಲಕವಾಗಿ ಇಂದ್ರನ ಅಥವಾ ಬ್ರಹ್ಮನ ಸಾಲೋಕ್ಯವನ್ನು ಪಡೆಯಿರಿ.

ಹಿಂದಿನವರಿಂದ ಬಹಳ ಹಿಂದೆಯೇ ತೋರಿಸಲ್ಪಟ್ಟ ಈ ಮಾರ್ಗವು ನಿಮಗೆ ಶಾಶ್ವತವಾದ ಮಾರ್ಗವಾಗಿದೆ. ನೀವೆಲ್ಲರೂ ಏಕಾಗ್ರತೆಯಿಂದ ಯುದ್ಧಮಾಡುತ್ತಾ, ಶತ್ರುವಿಗೆ ನಿಮ್ಮ ಶೌರ್ಯವನ್ನು ತೋರಿಸುತ್ತಾ, ಯಶ ಸ್ಸಿಗೂ ಆತ್ಮೋನ್ನತಿಗೂ ಭಾಗಿಗಳಾಗಿರಿ. ನಾಭಾಗ, ಯಯಾತಿ, ಮಾಂಧಾತ, ನಹುಷ–ಮುಂತಾದವರೆಲ್ಲರೂ ಇಂತಹುದೇ ಕರ್ಮಗಳಿಂದ ಸಿದ್ಧಿಯನ್ನು ಪಡೆದು ಪರಮೋತ್ಕೃಷ್ಟವಾದ ಲೋಕಗಳಿಗೆ ಹೋಗಿದ್ದಾರೆ.

**ಅಧರ್ಮಃ ಕ್ಷತ್ರಿಯಸ್ಯೈಷ ಯದ್ವ್ಯಾಧಿಮರಣಂ ಗೃಹೇ ।**
**ಯದಯೋನಿಧನಂ ಯಾತಿ ಸೋಽಸ್ಯ ಧರ್ಮಃ ಸನಾತನಃ ॥೧೧॥**

ಮನೆಯಲ್ಲೇ ಇದ್ದು ವ್ಯಾಧಿಯಿಂದ ಮರಣಹೊಂದುವುದು ಕ್ಷತ್ರಿಯ ನಾದವನಿಗೆ ಅಧರ್ಮವೆನಿಸುತ್ತದೆ. ಯುದ್ಧದಲ್ಲಿ ಲೋಹಮಯವಾದ ಶಸ್ತ್ರ ಗಳಿಂದ ನಿಧನಹೊಂದುವುದೇ ಧರ್ಮ. ಕ್ಷತ್ರಿಯನಿಗೆ ಅದೇ ಸನಾತನಧರ್ಮ ವಾಗಿದೆ."

ಮಹಾರಾಜ! ಭೀಷ್ಮನ ಸಮಯೋಚಿತವಾದ ಮಾತನ್ನು ಕೇಳಿ, ಸಮಸ್ತರಾಜರೂ ಹಾಗೆಯೇ ಆಗಲೆಂದು ಪ್ರತ್ಯುತ್ತರವಿತ್ತು, ಉತ್ತಮವಾದ ರಥಗಳಲ್ಲಿ ಕುಳಿತು ಪರಮೋತ್ಸಾಹದಿಂದ ಮುನ್ನಡೆಯುತ್ತಾ, ತಮ್ಮ ಉಪ ಸ್ಥಿತಿಯಿಂದ ತಮ್ಮ ಸೈನ್ಯವನ್ನು ಹೆಚ್ಚು ಶೋಭಾಯಮಾನವನ್ನಾಗಿ ಮಾಡುತ್ತಾ ಶತ್ರುವಿನೊಡನೆ ಯುದ್ಧಮಾಡಲು ಹೊರಟುಹೋದರು. ಭೀಷ್ಮನ ದಂಡನಾಯಕತ್ವದಲ್ಲಿ ನಡೆದ ಆ ಮಹಾಯುದ್ಧದಲ್ಲಿ ವೈಕರ್ತನ ಕರ್ಣ

ನೊಬ್ಬನು ಮಾತ್ರ ತನ್ನ ಅಮಾತ್ಯ-ಬಂಧುಗಳೊಡನೆ ಶಸ್ತ್ರಗಳನ್ನು ಕೆಳಗಿಟ್ಟನು. ಭೀಷ್ಮನೇ ಕರ್ಣನು ಶಸ್ತ್ರಾಸ್ತ್ರಗಳನ್ನು ಕೆಳಗಿಡುವಂತೆ ಮಾಡಿದನು. ಈ ಕಾರಣದಿಂದಾಗಿ ಕರ್ಣರಹಿತರಾದ ನಿನ್ನ ಮಕ್ಕಳು ಮತ್ತು ನಿನ್ನ ಕಡೆಯ ಇತರರಾಜರು ಸಿಂಹನಾದಗಳಿಂದ ಹತ್ತುದಿಕ್ಕುಗಳಲ್ಲಿಯೂ ಪ್ರತಿಧ್ವನಿ ಯನ್ನುಂಟುಮಾಡುತ್ತಾ ಯುದ್ಧಕ್ಕೆ ಹೊರಟರು.

ಶ್ವೇತಚ್ಛತ್ರಗಳಿಂದಲೂ, ಪತಾಕೆಗಳಿಂದಲೂ, ಧ್ವಜಗಳಿಂದಲೂ, ಆನೆ ಗಳಿಂದಲೂ, ಕುದುರೆಗಳಿಂದಲೂ, ರಥಗಳಿಂದಲೂ ಮತ್ತು ಪದಾತಿ ಗಳಿಂದಲೂ ಆ ಮಹಾಸೇನಾಸಮೂಹಗಳು ಬಹುವಾಗಿ ಶೋಭಿಸುತ್ತಿದ್ದುವು. ಭೇರೀ, ಪಣವ, ದುಂದುಭಿ–ಇವೇ ಮೊದಲಾದ ರಣವಾದ್ಯಗಳ ಶಬ್ದಗಳಿಂದಲೂ ರಥಚಕ್ರಗಳ ಗಡ-ಗಡಾಶಬ್ದಗಳಿಂದಲೂ ಭೂಮಿಯು ವ್ಯಾಪ್ತವಾಯಿತು. (ವ್ಯಾಕುಲಗೊಂಡಿತು.) ಸ್ವರ್ಣಮಯವಾದ ಅಂಗದ-ಕೇಯೂರಗಳಿಂದಲೂ ಮತ್ತು ಧನುಸ್ಸುಗಳಿಂದಲೂ ಮಹಾರಥರು ಬೆಂಕಿ ಹತ್ತಿಕೊಂಡ ಪರ್ವತಗಳಂತೆಯೇ ಜಾಜ್ವಲ್ಯಮಾನರಾಗಿ ಪ್ರಕಾಶಿಸಿದರು. ತಾಲವೃಕ್ಷದ ಚಿಹ್ನೆಯಿದ್ದ ಮತ್ತು ಪಂಚತಾರೆಗಳನ್ನೊಳಗೊಂಡಿದ್ದ ವಿಶಾಲ ವಾದ ಧ್ವಜದಿಂದ ಯುಕ್ತನಾಗಿದ್ದ, ನಿನ್ನ ಸೇನೆಯ ದಂಡನಾಯಕನಾಗಿದ್ದ ಭೀಷ್ಮನು ನಿರ್ಮಲಸೂರ್ಯಸದೃಶನಾಗಿ ಕುರುಸೈನ್ಯಗಳ ಅಗ್ರಭಾಗದಲ್ಲಿ ಉಪಸ್ಥಿತನಾಗಿದ್ದನು. ನಿನ್ನ ಕಡೆಯ ಮಹಾಧನುರ್ಧರರಾದ ರಾಜರು ಶಾಂತನವನ ನಿರ್ದೇಶಾನುಸಾರವಾಗಿ ತಮ-ತಮಗೆ ನಿಯೋಜಿತವಾದ ಸ್ಥಾನ ಗಳಿಗೆ ಹೋಗುತ್ತಿದ್ದರು. ಗೋವಾಸನದೇಶದ ರಾಜನಾದ ಶೈಬ್ಯನು ಸರ್ವ ರಾಜರಿಂದಲೂ ಕೂಡಿಕೊಂಡು ರಾಜೋಚಿತವಾದ ಮತ್ತು ಧ್ವಜಯುಕ್ತ ವಾಗಿದ್ದ ಗಜೇಂದ್ರನ ಮೇಲೆ ಕುಳಿತು ಯುದ್ಧಕ್ಕೆ ಹೋದನು. ಭೀಷ್ಮನ ನಿರ್ದೇಶದಂತೆ ಕಮಲದ ಬಣ್ಣಕ್ಕೆ ಸಮಾನವಾದ ಕಾಂತಿಯಿಂದ ಪರಿಶೋಭಿಸುತ್ತಿದ್ದ ಅಶ್ವತ್ಥಾಮನು, ಸಿಂಹದ ಬಾಲದ ಚಿಹ್ನೆಯಿಂದ ಕೂಡಿದ್ದ ಪತಾಕಾಯುಕ್ತನಾಗಿ, ನಿನ್ನ ಕಡೆಯ ಎಲ್ಲ ಸೈನಿಕರ ಮುಂಭಾಗದಲ್ಲಿ ಭೀಷ್ಮನು ನಿರ್ದೇಶಿಸಿದ್ದ ಸ್ಥಳಕ್ಕೆ ಸೇನೆಯೊಡನೆ ಹೋದನು.

ಶ್ರುತಾಯುಧ, ಚಿತ್ರಸೇನ, ಪುರುಮಿತ್ರ, ವಿವಿಂಶತಿ, ಶಲ್ಯ, ಭೂರಿಶ್ರವ ಮತ್ತು ಮಹಾರಥನಾದ ವಿಕರ್ಣ–ಈ ಏಳುಮಂದಿ ವೀರರೂ ದೊಡ್ಡ ದೊಡ್ಡ

ಧನುಸ್ಸುಗಳನ್ನು ಧರಿಸಿ, ಶ್ರೇಷ್ಠವಾದ ಕವಚಗಳನ್ನು ತೊಟ್ಟು, ರಥಗಳಲ್ಲಿ ಕುಳಿತು, ದ್ರೋಣಪುತ್ರನಾದ ಅಶ್ವತ್ಥಾಮನನ್ನು ಮುಂದೆಮಾಡಿಕೊಂಡು ಭೀಷ್ಮನ ಅಗ್ರಭಾಗದಲ್ಲಿ ಹೋಗುತ್ತಿದ್ದರು. ಆ ಏಳುಮಂದಿ ಮಹಾವೀರರ ರಥಗಳ ಮೇಲೆ ಎತ್ತರದಲ್ಲಿ ಹಾರಾಡುತ್ತಿದ್ದ ಸ್ವರ್ಣಮಯಧ್ವಜಗಳು ಆ ಶ್ರೇಷ್ಠರಥಗಳನ್ನು ಶೋಭಾಯಮಾನಗೊಳಿಸುತ್ತಾ ಸಮರಾಂಗಣದಲ್ಲಿ ಮಹೋಜ್ಜ್ವಲವಾಗಿ ಪ್ರಕಾಶಿಸಿದುವು. ಆಚಾರ್ಯಮುಖ್ಯರಾದ ದ್ರೋಣರ ಧ್ವಜದಲ್ಲಿ ಕಮಂಡಲುಸಹಿತವಾದ ಸ್ವರ್ಣವೇದಿಕೆಯ ಚಿಹ್ನೆಯೂ ಧನುಸ್ಸಿನ ಚಿಹ್ನೆಯೂ ಇದ್ದಿತು. ಅನೇಕಲಕ್ಷಸೈನಿಕರನ್ನು ತನ್ನೊಡನೆ ಕರೆದುಕೊಂಡು ಹೋಗುತ್ತಿದ್ದ ದುರ್ಯೋಧನನ ಧ್ವಜದಲ್ಲಿ ಮಣಿಮಯವಾದ ದೊಡ್ಡ ನಾಗದ ಚಿಹ್ನೆಯಿದ್ದಿತು. ಪೌರವ, ಕಲಿಂಗರಾಜನಾದ ಶ್ರುತಾಯುಧ, ಕಾಂಬೋಜ ರಾಜನಾದ ಸುದಕ್ಷಿಣ, ಕ್ಷೇಮಧನ್ವಾನ ಮತ್ತು ಸುಮಿತ್ರ–ಈ ಐವರು ರಥಿಗಳೂ ದುರ್ಯೋಧನನ ಮುಂಭಾಗದಲ್ಲಿದ್ದರು. ಎತ್ತಿನ ಗುರುತಿದ್ದ ಧ್ವಜದಿಂದ ಕೂಡಿದ್ದ ಬಹುಮೂಲ್ಯವಾದ ರಥದಲ್ಲಿ ಕೃಪಾಚಾರ್ಯರು ಕುಳಿತು ಮಗಧ ಸೈನ್ಯವನ್ನು ತಮ್ಮೊಡನೆ ಕರೆದುಕೊಂಡು ಹೋಗುತ್ತಿದ್ದರು. (ಮಗಧಸೇನೆಗೆ ನಾಯಕರಾಗಿ ಅದನ್ನು ತಮ್ಮೊಡನೆ ಕರೆದುಕೊಂಡು ಹೋಗುತ್ತಿದ್ದರು.)

ಅಂಗರಾಜನಿಂದಲೂ ಮನನಶೀಲರಾದ ಕೃಪಾಚಾರ್ಯರಿಂದಲೂ ಸಂರಕ್ಷಿತವಾಗಿದ್ದ ಪೂರ್ವದೇಶಗಳ ಕ್ಷತ್ರಿಯರ ಆ ಮಹಾಸೇನೆಯು ಶರದೃತುವಿನ ಮಹಾಮೇಘದಂತೆಯೇ ಪ್ರಕಾಶಿಸುತ್ತಿದ್ದಿತು. ಮಹಾಸೇನೆಯೊಂದರ ಅಗ್ರಭಾಗದಲ್ಲಿ ನಿಂತಿದ್ದ ಮಹಾಯಶೋವಂತನಾದ ಜಯದ್ರಥರಾಜನು, ರಜತಮಯವಾದ ವರಾಹದ ಚಿಹ್ನೆಯಿಂದ ಕೂಡಿದ್ದ ಪತಾಕೆಯಿಂದ ಬಹುವಾಗಿ ಶೋಭಿಸಿದನು. ಮಹಾವೀರನಾದ ಜಯದ್ರಥನ ಅಧೀನದಲ್ಲಿ ಒಂದು ಲಕ್ಷ ರಥಗಳಿದ್ದುವು. ಎಂಟು ಸಾವಿರ ಆನೆಗಳಿದ್ದುವು. ಅರುವತ್ತು ಸಾವಿರ ಕುದುರೆಗಳಿದ್ದುವು. ಸಿಂಧುದೇಶಕ್ಕೆ ಒಡೆಯನಾದ ಜಯದ್ರಥರಾಜನಿಂದ ಸಂರಕ್ಷಿತವಾಗಿದ್ದ, ಅಸಂಖ್ಯಾತವಾದ ರಥ-ಗಜ-ತುರಗ-ಪದಾತಿಗಳಿಂದ ಕೂಡಿದ್ದ ಆ ಮಹಾಸೇನೆಯು ಬಹುವಾಗಿ ಪ್ರಕಾಶಿಸುತ್ತಿದ್ದಿತು. ಕಲಿಂಗ ದೇಶದ ಅಧಿಪತಿಯಾದ ಶ್ರುತಾಯುಧನು ತನ್ನ ಮಿತ್ರನಾದ ಕೇತುಮಂತನೊಡನೆ ಕೂಡಿಕೊಂಡು, ಆರುಸಾವಿರ ರಥಗಳೊಡನೆಯೂ–ಹತ್ತುಸಾವಿರ

ಆನೆಗಳೊಡನೆಯೂ ಯುದ್ಧಕ್ಕೆ ಹೊರಟನು. ಯಂತ್ರ, ತೋಮರ, ತೂಣೀರ ಮತ್ತು ಪತಾಕೆಗಳಿಂದ ಸುಶೋಭಿತವಾಗಿದ್ದ ಅವನ ದೊಡ್ಡ ದೊಡ್ಡ ಆನೆಗಳು ದೊಡ್ಡ ದೊಡ್ಡ ಪರ್ವತಗಳಂತೆಯೇ ಕಾಣುತ್ತಿದ್ದುವು. ಕಲಿಂಗರಾಜನು ಅಗ್ನಿಯ ಚಿಹ್ನೆಯಿದ್ದ ಪತಾಕೆಯಿಂದಲೂ, ಶ್ವೇತಚ್ಛತ್ರದಿಂದಲೂ, ಕಂಠಾಭರಣದಿಂದಲೂ, ಚಾಮರ-ವ್ಯಜನಗಳಿಂದಲೂ ಕೂಡಿ ಬಹುವಾಗಿ ಪ್ರಕಾಶಿಸುತ್ತಿದ್ದನು. ಕೇತುಮಂತನೂ ಸಹ ವಿಚಿತ್ರವಾಗಿದ್ದ ಮತ್ತು ದೊಡ್ಡದಾಗಿದ್ದ ಅಂಕುಶದಿಂದ ಕೂಡಿದ್ದ ಆನೆಯ ಮೇಲೆ ಕುಳಿತು ಕಪ್ಪಾದ ಮೋಡದ ಮೇಲ್ಭಾಗದಲ್ಲಿ ಕಾಣುವ ಸೂರ್ಯನಂತೆಯೇ ಪ್ರಕಾಶಿಸುತ್ತಿದ್ದನು. ಇದೇ ರೀತಿಯಲ್ಲಿ ಭಗದತ್ತನು ಉತ್ತಮೋತ್ತಮವಾದ ಆನೆಯ ಮೇಲೆ ಕುಳಿತು ಸಾಕ್ಷಾತ್ ಶಚೀಪತಿಯಂತೆಯೇ ಉಜ್ಜ್ವಲವಾದ ತೇಜಸ್ಸಿನಿಂದ ಪ್ರಕಾಶಿಸುತ್ತಾ ಯುದ್ಧಕ್ಕೆ ಹೊರಟನು. ಭಗದತ್ತನಿಗೆ ಸಮಾನಬಲರಾದ ಅವಂತೀದೇಶದ ರಾಜಕುಮಾರರಾದ ವಿಂದ ಮತ್ತು ಅನುವಿಂದರೂ ಸಹ ಆನೆಗಳ ಮೇಲೆ ಕುಳಿತು ಕೇತುಮಂತನ ಹಿಂದೆ ಹೋಗುತ್ತಿದ್ದರು. ರಥ ಮತ್ತು ಸೈನ್ಯಗಳಿಂದ ಕೂಡಿದ್ದ ಆ ವ್ಯೂಹವು ಸರ್ವತೋಮುಖವಾಗಿಯೂ ಅತ್ಯುಗ್ರವಾಗಿಯೂ ಇದ್ದಿತು. ಆನೆಗಳೇ ಅವಯವಪ್ರಾಯವಾಗಿಯೂ, ರಾಜರೇ ಶಿರಃಪ್ರಾಯವಾಗಿಯೂ ಮತ್ತು ಕುದುರೆಗಳೇ ರೆಕ್ಕೆಯ ರೂಪದಲ್ಲಿಯೂ ಇದ್ದ ಆ ವ್ಯೂಹಪಕ್ಷಿಯು ನಗು-ನಗುತ್ತಲೇ ಶತ್ರುಗಳ ಮೇಲೆ ಬೀಳುವುದರಲ್ಲಿದ್ದಿತು. ದ್ರೋಣಾಚಾರ್ಯರು, ಶಾಂತನುವಿನ ಮಗನಾದ ಭೀಷ್ಮ, ಆಚಾರ್ಯಪುತ್ರನಾದ ಅಶ್ವತ್ಥಾಮ, ಬಾಹ್ಲಿಕ ಮತ್ತು ಕೃಪ—ಇವರಿಂದ ಆ ಮಹಾಸೇನೆಯು ನಿಯಂತ್ರಿಸಲ್ಪಡುತ್ತಿದ್ದಿತು."

೧೭ನೆಯ ಅಧ್ಯಾಯವು ಮುಗಿಯಿತು.

೧೮ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ಕೌರವಸೈನ್ಯದ ಕೋಲಾಹಲ : ಭೀಷ್ಮನ ಸಂರಕ್ಷಕರ ವರ್ಣನೆ

ಸಂಜಯನು ಮುಂದುವರಿಸುತ್ತಾ ಹೇಳುತ್ತಾನೆ :

"ಮಹಾರಾಜ! ಮುಹೂರ್ತಕಾಲದಲ್ಲಿ ರಣೋತ್ಸಾಹಿಗಳಾಗಿದ್ದ

ಯೋಧರ ಹೃದಯವನ್ನು ಕಂಪನಗೊಳಿಸುವ (ಭಯಂಕರವಾದ) ಕೋಲಾಹಲಶಬ್ದವು ಕೇಳಿಬಂದಿತು. ಶಂಖ-ದುಂದುಭಿಘೋಷಗಳಿಂದಲೂ, ಆನೆಗಳ ಘೀಂಕಾರಗಳಿಂದಲೂ, ರಥನೇಮಿಗಳ ನಿರ್ಘೋಷದಿಂದಲೂ ಕೂಡಿದ್ದ ಆ ಮಹಾಕೋಲಾಹಲಶಬ್ದದಿಂದ ಭೂಮಿಯೇ ಸೀಳಿಹೋಗುತ್ತದೆಯೋ ಎಂಬ ಭ್ರಾಂತಿಯುಂಟಾಗುತ್ತಿತ್ತು. ಕುದುರೆಗಳ ಕೆನೆತಗಳಿಂದಲೂ ಮತ್ತು ಯೋಧರ ವೀರಗರ್ಜನೆಗಳಿಂದಲೂ ಉಂಟಾದ ಮಹಾಶಬ್ದವು ಕ್ಷಣಮಾತ್ರ ದಲ್ಲಿ ಭೂಮ್ಯಾಕಾಶಗಳಲ್ಲಿ ತುಂಬಿಕೊಂಡಿತು. ಸಮುದ್ರಪ್ರಾಯವಾಗಿದ್ದ ಎರಡು ಮಹಾಸೇನೆಗಳ ಸಮಾಗಮವಾಗುತ್ತಲೇ ನಿನ್ನ ಮತ್ತು ಪಾಂಡವರ ಸೈನ್ಯಗಳು ಪ್ರತ್ಯೇಕ-ಪ್ರತ್ಯೇಕವಾಗಿ ನಡುಗಿಹೋದುವು. ಮಹಾಸೈನ್ಯಸಮೂಹದಲ್ಲಿ ಆನೆಗಳೂ ಮತ್ತು ಸ್ವರ್ಣಮಾಲೆಗಳಿಂದ ವಿಭೂಷಿತವಾಗಿದ್ದ ರಥಗಳೂ ಮಿಂಚುಗಳಿಂದ ಕೂಡಿದ ಮೇಘಗಳಂತೆ ಪ್ರಕಾಶಿಸಿದುವು. ಮಹಾರಾಜ! ನಿನ್ನ ಸೇನಾಸಮೂಹದಲ್ಲಿದ್ದ ನಾನಾವರ್ಣಗಳ, ನಾನಾಚಿಹ್ನೆಗಳ, ನಾನಾ ಆಕಾರಗಳ ಧ್ವಜಗಳೂ ಮತ್ತು ಸ್ವರ್ಣಮಯವಾದ ಭುಜಕೀರ್ತಿಗಳನ್ನು ಧರಿಸಿದ್ದ ಸೈನಿಕರೂ ಪ್ರಜ್ವಲಿಸುವ ಯಜ್ಞೇಶ್ವರನಂತೆಯೇ ಪ್ರಕಾಶಿಸಿದರು. ಯಜ್ಞೇಶ್ವರನ ಜ್ವಾಲೆಗಳಂತಿದ್ದ ಉಭಯಪಕ್ಷಗಳ ಧ್ವಜಗಳು ಇಂದ್ರಭವನಗಳಲ್ಲಿ ಹಾರಾಡುವ ಶುಭ್ರವಾದ ಮಹೇಂದ್ರಧ್ವಜಗಳಂತೆಯೇ ಕಾಣುತ್ತಿದ್ದುವು. ಅಗ್ನಿ ಮತ್ತು ಸೂರ್ಯರಿಗೆ ಸಮಾನವಾದ ಪ್ರಭೆಯಿಂದ ಕೂಡಿದ್ದ, ಸ್ವರ್ಣಮಯವಾದ ಕವಚಗಳನ್ನು ತೊಟ್ಟುಕೊಂಡು ಯುದ್ಧಸನ್ನದ್ಧರಾಗಿದ್ದ ವೀರಯೋಧರು ಅಗ್ನಿ ಮತ್ತು ಸೂರ್ಯರಿಗೆ ಸಮಾನವಾದ ಪ್ರಭೆಯಿಂದ ಕೂಡಿರುವರೋ ಎಂಬಂತೆ ಪ್ರಕಾಶಿಸುತ್ತಿದ್ದರು. ಶ್ರೇಷ್ಠರಾದ ಕುರುಯೋಧರು ಚಿತ್ರ-ವಿಚಿತ್ರವಾದ ಆಯುಧಗಳನ್ನೂ ಮತ್ತು ಧನುಸ್ಸುಗಳನ್ನೂ ಧರಿಸಿದ್ದರು. ಎಡಗೈ ಮೇಲೆ ತೊಗಲಿನ ಪಟ್ಟಿಯನ್ನು ಧರಿಸಿದ್ದರು. ನಾನಾವಿಧವಾದ ಧ್ವಜಗಳನ್ನು ಹೊಂದಿದ್ದರು. ಇಂತಹ ವೀರಯೋಧರು ಯುದ್ಧಸನ್ನದ್ಧರಾಗಿ ವಿಚಿತ್ರತರವಾದ ಆಯುಧಗಳನ್ನು ಮೇಲೆತ್ತಿ ನಿಂತಿದ್ದರು.

ಎತ್ತಿನ ಕಣ್ಣುಗಳಂತೆ ವಿಶಾಲವಾದ ಕಣ್ಣುಗಳಿಂದ ಕೂಡಿದ್ದ, ಮಹಾಧನುಷ್ಮಂತರಾದ ಆ ವೀರಯೋಧರು ಸೈನ್ಯದ ಮುಂಭಾಗದಲ್ಲಿ ಬಹುವಾಗಿ

ಶೋಭಿಸಿದರು. ನರೇಶ್ವರ! ಭೀಷ್ಮನ ರಕ್ಷಣೆಮಾಡುತ್ತಾ ನಿನ್ನ ಮಕ್ಕಳು ಅವನ ಹಿಂಬದಿಯಲ್ಲೇ ನಿಂತಿದ್ದರು. ದುಃಶಾಸನ, ದುರ್ವಿಷಹ, ದುರ್ಮುಖ, ದುಃಸಹ, ವಿವಿಂಶತಿ, ಚಿತ್ರಸೇನ, ಮಹಾರಥನಾದ ವಿಕರ್ಣ, ಸತ್ಯವ್ರತ, ಪುರುಮಿತ್ರ, ಜಯ, ಭೂರಿಶ್ರವ, ಶಲ–ಇವರೆಲ್ಲರೂ ರಥಗಳಲ್ಲಿ ಕುಳಿತು ಭೀಷ್ಮನನ್ನು ರಕ್ಷಣೆಮಾಡುತ್ತಿದ್ದರು. ಅವರನ್ನನುಸರಿಸಿ ಇಪ್ಪತ್ತು ಸಾವಿರ ರಥಿಕರಿದ್ದರು. ಅಭೀಷಾಹರು, ಶೂರಸೇನರು, ಶಿಬಿಗಳು, ವಸಾತಿಗಳು, ಶಾಲ್ವರು, ಮತ್ಸ್ಯರು, ಅಂಬಷ್ಠರು, ತ್ರಿಗರ್ತರು, ಕೇಕಯರು, ಸೌವೀರರು, ಪೂರ್ವ-ಕೈತವರು, ಪಶ್ಚಿಮೋತ್ತರದೇಶೀಯರು ಈ ಹನ್ನೆರಡು ದೇಶವಾಸಿಗಳು ಮಹಾಶೂರರಾಗಿಯೂ ಪ್ರಾಣದ ಹಂಗನ್ನೂ ತೊರೆದು ಯುದ್ಧಮಾಡುವವರಾಗಿಯೂ ಇದ್ದರು. ಅವರೆಲ್ಲರೂ ದೊಡ್ಡದಾದ ರಥಸಮುದಾಯದೊಡನೆ ಪಿತಾಮಹನಾದ ಭೀಷ್ಮನನ್ನು ರಕ್ಷಿಸುತ್ತಿದ್ದರು. ವೇಗಯುಕ್ತವಾಗಿದ್ದ ಹತ್ತು ಸಾವಿರ ಗಜಸೇನೆಯು ಮಗಧರಾಜನ ನಾಯಕತ್ವದಲ್ಲಿದ್ದ ರಥಿಕಸೇನೆಯನ್ನು ಹಿಂಬಾಲಿಸಿಹೋಯಿತು. ಆ ಮಹಾಸೈನ್ಯದ ಮಧ್ಯದಲ್ಲಿ ಅಸಂಖ್ಯಾತ ರಥಗಳ ಚಕ್ರಗಳನ್ನು ಸಂರಕ್ಷಿಸಲು ಮತ್ತು ಅಸಂಖ್ಯಾತಗಜಗಳ ಪಾದಗಳನ್ನು ಸಂರಕ್ಷಿಸಲು ಆರು ಲಕ್ಷ ಸೈನಿಕರು ಸಿದ್ಧರಾಗಿ ನಿಂತಿದ್ದರು. ಲಕ್ಷೋಪಲಕ್ಷ ಪದಾತಿ ಸೈನಿಕರು ಧನುಸ್ಸು, ಕತ್ತಿ, ಗುರಾಣಿಗಳನ್ನು ಧರಿಸಿ ಮಹಾಸೇನೆಯ ಅಗ್ರಭಾಗದಲ್ಲಿ ಹೋಗುತ್ತಿದ್ದರು. ಅವರೆಲ್ಲರೂ ಹುಲಿಯುಗುರುಗಳಿಂದಲೂ ಪ್ರಾಸಾಯುಧಗಳಿಂದಲೂ ಯುದ್ಧಮಾಡುವ ಕುಶಲತೆಯನ್ನು ಹೊಂದಿದ್ದರು. ಭಾರತ! ನಿನ್ನ ಮಗನ ಹನ್ನೊಂದು ಅಕ್ಷೌಹಿಣೀಸೈನ್ಯವು ಯಮುನೆಯಿಂದ ಕೂಡಿದ ಗಂಗಾನದಿಯೋಪಾದಿಯಲ್ಲಿ ಪರಮಾದ್ಭುತವಾಗಿ ಕಾಣುತ್ತಿದ್ದಿತು."

೧೮ನೆಯ ಅಧ್ಯಾಯವು ಮುಗಿಯಿತು.

೧೯ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ವ್ಯೂಹನಿರ್ಮಾಣದ ವಿಷಯದಲ್ಲಿ ಯುಧಿಷ್ಠಿರಾರ್ಜುನರ ಮಾತುಕತೆ : ಅರ್ಜುನನು ವಜ್ರವ್ಯೂಹವನ್ನು ರಚಿಸಿದುದು : ಭೀಮನ ಮುಂದಾಳುತನದಲ್ಲಿ ಪಾಂಡವಸೈನ್ಯವು ಮುನ್ನಡೆದುದು

ತನ್ನ ಅಪಾರಸೈನ್ಯದ ವರ್ಣನೆಯನ್ನು ಸಂಜಯನಿಂದ ಕೇಳಿದನಂತರ

ಧೃತರಾಷ್ಟ್ರನು ಪಾಂಡವರ ಅಲ್ಪಸೈನ್ಯದ ವಿವರಣೆಯನ್ನು ತಿಳಿದುಕೊಳ್ಳಲಿಚ್ಛಿಸಿ ಸಂಜಯನನ್ನು ಪ್ರಶ್ನಿಸಿದನು :

"ಸಂಜಯ! ನಮ್ಮ ಹನ್ನೊಂದು ಅಕ್ಷೌಹಿಣೀಸೈನ್ಯವೂ ವ್ಯೂಹಕ್ರಮದಲ್ಲಿ ಯುದ್ಧಕ್ಕೆ ಸಿದ್ಧವಾಗಿದ್ದುದನ್ನು ನೋಡಿದನಂತರ ಕೇವಲ ಏಳು ಅಕ್ಷೌಹಿಣೀಸೈನ್ಯವನ್ನು ಹೊಂದಿದ್ದ ಯುಧಿಷ್ಠಿರನು ದುರ್ಯೋಧನನ ಹನ್ನೊಂದು ಅಕ್ಷೌಹಿಣೀಸೈನ್ಯಕ್ಕೆ ಪ್ರತಿವ್ಯೂಹವನ್ನು ಹೇಗೆ ರಚಿಸಿದನು? (ಯುಧಿಷ್ಠಿರನಲ್ಲಿಯೂ ಹನ್ನೊಂದು ಅಕ್ಷೌಹಿಣೀಸೈನ್ಯವೇ ಇದ್ದಿದ್ದರೆ ಕೌರವ ಪಕ್ಷದ ಸೈನ್ಯಕ್ಕೆ ಪ್ರತಿಯಾಗಿ ವ್ಯೂಹರಚಿಸಲು ಸಾಧ್ಯವಾಗುತ್ತಿದ್ದಿತು. ಕೇವಲ ಏಳು ಅಕ್ಷೌಹಿಣಿಯನ್ನಿಟ್ಟುಕೊಂಡು ಹನ್ನೊಂದು ಅಕ್ಷೌಹಿಣಿಯನ್ನು ಎದುರಿಸಿದ್ದು ಹೇಗೆ? ಎದುರಿಸಲು ಪಾಂಡವರು ಸಿದ್ಧಗೊಳಿಸಿದ ವ್ಯೂಹಕ್ರಮವು ಯಾವುದು?) ಯಾವನು ದೈವ-ಮಾನುಷ-ಗಂಧರ್ವಾಸುರವ್ಯೂಹಗಳನ್ನೂ ಬಲ್ಲವನಾಗಿದ್ದನೋ ಅಂತಹ ಮಹಾವೀರನಾದ ಭೀಷ್ಮನು ರಚಿಸಿದ್ದ ವ್ಯೂಹಕ್ಕೆ ಪ್ರತಿಯಾಗಿ ಯುಧಿಷ್ಠಿರನು ಯಾವ ವ್ಯೂಹವನ್ನು ರಚಿಸಿದ್ದನು? ಹೇಳು, ಸಂಜಯ!"

"ಮಹಾರಾಜ! ದುರ್ಯೋಧನನ ಸೇನೆಗಳು ಭೀಷ್ಮನ ನಿರ್ದೇಶದಂತೆ ವ್ಯೂಹಗಳಲ್ಲಿ ಯುದ್ಧಸನ್ನದ್ಧವಾಗಿರುವುದನ್ನು ನೋಡಿ ಧರ್ಮಾತ್ಮನಾದ, ಪಾಂಡುಪುತ್ರನಾದ ಧರ್ಮರಾಜನು ಧನಂಜಯನೊಡನೆ ಹೇಳಿದನು :

"ಅರ್ಜುನ! ಮಹರ್ಷಿಯಾದ ಬೃಹಸ್ಪತಿಯ ಮಾತು (ನೀತಿಯು) ಪಕ್ಷ-ಪ್ರತಿಪಕ್ಷಸೈನ್ಯಗಳ ಸಂಖ್ಯಾಬಲವು ಏರು-ಪೇರಿನಿಂದ ಕೂಡಿರುವಾಗ ವ್ಯೂಹ-ಪ್ರತಿವ್ಯೂಹಗಳ ರಚನಾಕ್ರಮವು ಹೀಗಿರಬೇಕೆಂದು ತಿಳಿಸುತ್ತದೆ :

**ಸಂಹತಾನ್ಯೋಧಯೇದಲ್ಪಾನ್ಕಾಮಂ ವಿಸ್ತಾರಯೇದ್ಬಹೂನ್ ॥೪॥**

ಎದುರುಪಕ್ಷದ ಸೈನ್ಯವು ನಮ್ಮ ಸೈನ್ಯಕ್ಕಿಂತಲೂ ಕಡಿಮೇ ಇದ್ದ ಪಕ್ಷ ದಲ್ಲಿ ನಾವು ಗುಂಪು-ಗುಂಪಾಗಿ ಸೇನಾವ್ಯೂಹಗಳನ್ನು ರಚಿಸಿ ಯುದ್ಧಮಾಡ ಬೇಕು. ಎದುರಾಳಿಯ ಸೈನ್ಯಕ್ಕಿಂತ ನಮ್ಮ ಸೈನ್ಯವೇ ಕಡಿಮೆಯಾಗಿದ್ದಲ್ಲಿ

ನಮ್ಮ ಸೇನೆಯು ವಿಸ್ತಾರವಾಗಿರುವಂತೆ ವ್ಯೂಹಗಳನ್ನು ರಚಿಸಿ ಶತ್ರುವಿನೊಡನೆ ಯುದ್ಧಮಾಡಬೇಕು.

**ಸೂಚೀಮುಖಮನೀಕಂ ಸ್ಯಾದಲ್ಪಾನಾಂ ಬಹುಭಿಃ ಸಹ ।**
**ಅಸ್ಮಾಕಂ ಚ ತಥಾ ಸೈನ್ಯಮಲ್ಪೀಯಃ ಸುತರಾಂ ಪರೈಃ ॥೫॥**

ಅಲ್ಪಸಂಖ್ಯಾತರು ಬಹುಸಂಖ್ಯಾತರೊಡನೆ ಯುದ್ಧಮಾಡುವಾಗ ಸೂಚೀಮುಖವ್ಯೂಹವನ್ನೇ ರಚಿಸಬೇಕು. ನಾವೂ ಸಹ ಹೀಗೆಯೇ ಮಾಡಬೇಕಾಗಿದೆ. ಏಕೆಂದರೆ : ನಮ್ಮ ಸೈನ್ಯವು ಶತ್ರುಗಳಲ್ಲಿರುವ ಸೈನ್ಯಕ್ಕಿಂತಲೂ ಕಡಿಮೆಯಾಗಿದೆ. ಅರ್ಜುನ! ಬೃಹಸ್ಪತಿಯ ಈ ಮಾತನ್ನು ಸ್ಮರಿಸಿಕೊಂಡು ನೀನೂ ಸಹ ನಮ್ಮ ಸೈನ್ಯದ ವ್ಯೂಹವನ್ನು ರಚಿಸುವವನಾಗು."

ಧೃತರಾಷ್ಟ್ರ! ಧರ್ಮರಾಜನ ಮಾತನ್ನು ಕೇಳಿ ಧನಂಜಯನು ಉತ್ತರಿಸಿದನು :

"ಅಣ್ಣ! ನೀನು ಹೇಳಿದುದು ಸರಿಯೇ. ಆದರೆ ನಾನು ನಿನಗಾಗಿ ದುರ್ಜಯವಾದ ಮತ್ತೊಂದು ವ್ಯೂಹವನ್ನು ರಚಿಸಬೇಕೆಂದಿರುತ್ತೇನೆ. ವಜ್ರಪಾಣಿಯಾದ ಇಂದ್ರನಿಂದಲೇ ಆವಿಷ್ಕೃತವಾದ 'ವಜ್ರ' ಎಂಬ ಹೆಸರಿನ ಅಚಲವಾದ ವ್ಯೂಹವನ್ನು ರಚಿಸುತ್ತೇನೆ. ಚಂಡಮಾರುತದಂತೆ ಈ ವ್ಯೂಹವು ಎದ್ದುನಿಂತಿರುತ್ತದೆ. ಚಂಡಮಾರುತವು ಹೇಗೆ ದುಃಸಹವಾಗಿರುತ್ತದೆಯೋ–ಅದೇ ರೀತಿಯಲ್ಲಿ ವಜ್ರವ್ಯೂಹವೂ ಸಹ ಶತ್ರುಗಳಿಗೆ ದುಃಸಹವಾಗಿರುತ್ತದೆ. ಈ ವ್ಯೂಹದ ಮುಂಭಾಗದಲ್ಲಿ ನಮ್ಮ ಯೋಧಶ್ರೇಷ್ಠನಾದ ಭೀಮನು ನಿಂತು ಯುದ್ಧಮಾಡುತ್ತಾನೆ. ಪುರುಷಶ್ರೇಷ್ಠನಾದ ಯುದ್ಧನೀತಿವಿಚಕ್ಷಣನಾದ ಭೀಮಸೇನನು ನಮ್ಮ ಸೇನೆಯಲ್ಲಿ ಅಥವಾ ವಜ್ರವ್ಯೂಹದಲ್ಲಿ ಅಗ್ರೇಸರನಾಗಿ ನಿಂತು, ಶತ್ರುಸೈನ್ಯಗಳ ತೇಜಸ್ಸನ್ನು (ಪರಾಕ್ರಮವನ್ನು) ಬಗ್ಗುಬಡಿಯುತ್ತಾ ಯುದ್ಧಮಾಡುತ್ತಾನೆ. ಇವನನ್ನು ನೋಡಿದೊಡನೆಯೇ ದುರ್ಯೋಧನಪ್ರಮುಖರಾದ ಎಲ್ಲ ರಾಜರೂ ಸಹ ಸಿಂಹವನ್ನು ಕಂಡ ಕ್ಷುದ್ರಮೃಗಗಳಂತೆ–ಭಯಪಟ್ಟುಕೊಂಡು ಓಡುತ್ತಾರೆ. ದೇವತೆಗಳು ದೇವರಾಜನನ್ನಾಶ್ರಯಿಸಿ ಸುರಕ್ಷಿತರಾಗುವಂತೆ–ನಾವು ಪ್ರಾಕಾರ

ರೂಪನಾದ ಯೋಧಶ್ರೇಷ್ಠನಾದ ಭೀಮನನ್ನು ಆಶ್ರಯಿಸೋಣ. ಇವನನ್ನು ಆಶ್ರಯಿಸುವುದರಿಂದ ನಮಗೆ ಭಯವೆಂಬುದೇ ಇಲ್ಲವಾಗುತ್ತದೆ. ನರರ್ಷಭನಾದ, ಉಗ್ರಕರ್ಮನಾದ, ಸಂಕ್ರುದ್ಧನಾದ ವೃಕೋದರನನ್ನು ಒಮ್ಮೆ ದಿಟ್ಟಿಸಿನೋಡುವ ಮನುಷ್ಯನೇ ಈ ಲೋಕದಲ್ಲಿರುವುದಿಲ್ಲ. (ಹೀಗಿರುವಾಗ ಅವನ ಎದುರಾಗಿ ನಿಂತು ಯಾರು ತಾನೇ ಯುದ್ಧಮಾಡಿಯಾರು? )

ಭೀಮಸೇನನು ವಜ್ರಸಾರಮಯವಾದ ದೃಢವಾದ ಗದೆಯನ್ನು ಹೆಗಲಿನಲ್ಲಿಟ್ಟುಕೊಂಡು ಮಹಾವೇಗದಿಂದ ಅತ್ತಲಿಂದಿತ್ತ-ಇತ್ತಲಿಂದತ್ತ ಸಂಚರಿಸುತ್ತಾ ಸಮುದ್ರವನ್ನಾದರೂ ಶೋಷಿಸಿಬಿಟ್ಟಾನು. ನಮ್ಮ ಪಕ್ಷದಲ್ಲಿ ವೀರ್ಯವಂತರಾದ ಕೇಕಯರಾಜಕುಮಾರ, ಧೃಷ್ಟಕೇತು, ಚೇಕಿತಾನರಿದ್ದಾರೆ. ಧೃತರಾಷ್ಟ್ರನ ಮಕ್ಕಳೆಲ್ಲರೂ ಅಮಾತ್ಯಸಹಿತರಾಗಿ ಭೀಮಸೇನನ ಪರಾಕ್ರಮದ ಪ್ರೇಕ್ಷಕರಾಗಿ ನಿಂತಿರುತ್ತಾರೆ"–ಹೀಗೆಂಬುದಾಗಿ ಅರ್ಜುನನು ಯುಧಿಷ್ಠಿರನಿಗೆ ಹೇಳಿದನಂತರ ಭೀಮಸೇನನ ಕಡೆಗೆ ತಿರುಗಿ ಹೇಳಿದನು : 'ಭೀಮಸೇನ! ನೀನು ಈ ಸಮಯದಲ್ಲಿ ನಿನ್ನ ಮಹಾಬಲವನ್ನು ತೋರಿಸಬೇಕು.'

ಯುಧಿಷ್ಠಿರನೊಡನೆಯೂ ಭೀಮಸೇನನೊಡನೆಯೂ ಉತ್ತೇಜಕವಾದ ಮಾತುಗಳನ್ನಾಡಿದ ಪಾರ್ಥನನ್ನು ಯುದ್ಧಸ್ಥಳದಲ್ಲಿ ಅನುಕೂಲವಾದ (ಹೊಗಳಿಕೆಯ) ಮಾತುಗಳಿಂದ ಎಲ್ಲ ಸೈನಿಕರೂ ಅಭಿನಂದಿಸಿದರು. ಯುಧಿಷ್ಠಿರನೊಡನೆ ಹೇಳಿದ್ದಂತೆ ಧನಂಜಯನು ಸೇನೆಯನ್ನು ವಜ್ರವ್ಯೂಹ ಕ್ರಮದಲ್ಲಿ ನಿಲ್ಲಿಸಿ ತಾನೂ ಯುದ್ಧಮಾಡಲು ಹೋದನು. ಕುರುಸೇನೆಯು ತಮ್ಮ ಕಡೆಗೆ ಬರುತ್ತಿರುವುದನ್ನು ನೋಡಿ ಪಾಂಡವರ ಮಹಾಸೈನ್ಯವು ಕ್ಷಣಕಾಲ ಗಂಗಾನದಿಯಂತೆ ಪೂರ್ಣವಾಗಿಯೂ ಸ್ತಿಮಿತವಾಗಿಯೂ (ಅಚಂಚಲವಾಗಿಯೂ) ಇದ್ದಿತು. ಅನಂತರದಲ್ಲಿ ಸ್ವಲ್ಪ-ಸ್ವಲ್ಪವಾಗಿ ಚಲಿಸು ತ್ತಿರುವಂತೆ ಕಾಣುತ್ತಿದ್ದಿತು. ಭೀಮಸೇನನು ಆ ಮಹಾಸೇನೆಯ ಅಗ್ರಭಾಗ ದಲ್ಲಿದ್ದನು. ಅವನ ಜೊತೆಯಲ್ಲಿ ವೀರ್ಯವಂತನಾದ ಧೃಷ್ಟದ್ಯುಮ್ನ, ನಕುಲ, ಸಹದೇವ, ಧೃಷ್ಟಕೇತು–ಇವರೂ ಇದ್ದರು. ಅನಂತರ ವಿರಾಟರಾಜನು ತನ್ನ ಸಹೋದರರಿಂದಲೂ ಪುತ್ರರಿಂದಲೂ ಕೂಡಿಕೊಂಡು ಒಂದು ಅಕ್ಷೌಹಿಣೀಸೈನ್ಯದೊಡನೆ ಭೀಮಸೇನನ ಹಿಂಬದಿಯಲ್ಲಿ ನಿಂತು ಅವನನ್ನು

ರಕ್ಷಿಸುತ್ತಿದ್ದನು. ಮಹಾದ್ಯುತಿಮಂತರಾದ ಮಾದ್ರಿಯ ಮಕ್ಕಳಾದ ನಕುಲ-ಸಹದೇವರು ಭೀಮಸೇನನ ರಥಚಕ್ರಗಳನ್ನು ರಕ್ಷಿಸುತ್ತಿದ್ದರು. ವೇಗವಂತರಾದ ದ್ರೌಪದಿಯ ಮಕ್ಕಳು ಸುಭದ್ರೆಯ ಮಗನಾದ ಅಭಿಮನ್ಯುವಿನೊಡನೆ ಭೀಮಸೇನನ ರಥದ ಹಿಂಭಾಗವನ್ನು ರಕ್ಷಿಸುತ್ತಿದ್ದರು. ಪಾಂಚಾಲರಾಜಕುಮಾರನಾದ, ಮಹಾರಥನಾದ ಧೃಷ್ಟದ್ಯುಮ್ನನು ತನ್ನ ಸೇನೆಯಲ್ಲಿದ್ದ ಶೂರರೊಡನೆ ಮತ್ತು ರಥಮುಖ್ಯರಾದ ಪ್ರಭದ್ರಕರೊಡನೆ ಸೇರಿಕೊಂಡು ನಕುಲ-ಸಹದೇವ-ದ್ರೌಪದೇಯ-ಸೌಭದ್ರರನ್ನು ರಕ್ಷಿಸುತ್ತಿದ್ದನು. ಅವರೆಲ್ಲರ ಹಿಂಭಾಗದಲ್ಲಿ ಅರ್ಜುನನಿಂದ ಸಂರಕ್ಷಿತನಾಗಿದ್ದ ಶಿಖಂಡಿಯು ಭೀಷ್ಮನನ್ನು ವಿನಾಶಗೊಳಿಸುವ ಸಲುವಾಗಿ ಮುಂದೆ-ಮುಂದೆ ಹೋಗುತ್ತಿದ್ದನು. ಅರ್ಜುನನ ರಥದ ಹಿಂಭಾಗದಲ್ಲಿ ಮಹಾಬಲನಾದ ಯುಯುಧಾನನಿದ್ದನು. ಪಾಂಚಾಲದೇಶೀಯರಾದ ಯುಧಾಮನ್ಯು ಮತ್ತು ಉತ್ತಮೌಜಸರು ಅರ್ಜುನನ ರಥದ ಚಕ್ರಗಳನ್ನು ಸಂರಕ್ಷಿಸುತ್ತಿದ್ದರು. ಕುಂತೀಪುತ್ರನಾದ ಯುಧಿಷ್ಠಿರರಾಜನು ಸಂಚರಿಸುವ ಪರ್ವತಗಳೋಪಾದಿಯಲ್ಲಿದ್ದ ದೊಡ್ಡ ದೊಡ್ಡ ಆನೆಗಳ ಸೈನ್ಯದೊಡನೆ ಮಹಾಸೇನೆಯ ಮಧ್ಯಭಾಗದಲ್ಲಿದ್ದನು. ಮಹಾತ್ಮನಾದ, ಪರಾಕ್ರಮಿಯಾದ ಪಾಂಚಾಲರಾಜನಾದ ದ್ರುಪದನು ಪಾಂಡವರ ಸಹಾಯಕ್ಕಾಗಿ ಒಂದು ಅಕ್ಷೌಹಿಣೀಸೈನ್ಯದೊಡನೆ ವಿರಾಟರಾಜನನ್ನನುಸರಿಸಿ ಅವನ ಹಿಂದೆ ಹೋಗುತ್ತಿದ್ದನು. ಪಾಂಡವರ ಪಕ್ಷದಲ್ಲಿದ್ದ ರಥಗಳ ತುದಿಯಲ್ಲಿ ಸೂರ್ಯ-ಚಂದ್ರರಿಗೆ ಸಮಾನವಾದ ಕಾಂತಿಯಿಂದ ವಿರಾಜಿಸುತ್ತಿದ್ದ, ಸ್ವರ್ಣಾಭರಣಗಳಿಂದ ವಿಭೂಷಿತವಾಗಿದ್ದ, ಚಿತ್ರ-ವಿಚಿತ್ರವಾಗಿದ್ದ ಮಹಾಧ್ವಜಗಳಿದ್ದುವು. ಅನಂತರ ಮಹಾರಥನಾದ ಧೃಷ್ಟದ್ಯುಮ್ನನು ಯುಧಿಷ್ಠಿರನ ಸುತ್ತಲೂ ಇದ್ದವರನ್ನು ಪಕ್ಕಕ್ಕೆ ನಿಲ್ಲಿಸಿ ತನ್ನ ತಮ್ಮಂದಿರೊಡನೆಯೂ, ಮಕ್ಕಳೊಡನೆಯೂ ಯುಧಿಷ್ಠಿರನನ್ನು ರಕ್ಷಿಸಲು ಸಜ್ಜಾಗಿ ನಿಂತನು. ನಿನ್ನ ಪಕ್ಷದ ಮತ್ತು ಶತ್ರುಪಕ್ಷದ ಅಸಂಖ್ಯಾತರಥಗಳಲ್ಲಿದ್ದ ಅಸಂಖ್ಯಾತಧ್ವಜಗಳನ್ನೂ ಸಹ ತಿರಸ್ಕರಿಸಿ ಅರ್ಜುನನ ರಥದಲ್ಲಿದ್ದ ಒಂದೇ ಒಂದು ಕಪಿಧ್ವಜವು ಆ ರಣಾಂಗಣದ ಮಧ್ಯದಲ್ಲಿ ದೇದೀಪ್ಯಮಾನವಾಗಿ ಕಾಣುತ್ತಿದ್ದಿತು. (ಆ ಅಪಾರಸೈನ್ಯಸಮೂಹದಲ್ಲಿ ಅರ್ಜುನನ ಕಪಿಧ್ವಜವೊಂದೇ ಎದ್ದು ಕಾಣುತ್ತಿದ್ದಿತು.) ಭೀಮಸೇನನ ರಕ್ಷಣೆಗಾಗಿ

ಕೈಗಳಲ್ಲಿ ಖಡ್ಗಗಳನ್ನೂ, ಶಕ್ತ್ಯಾಯುಧಗಳನ್ನೂ, ಋಷ್ಟಿಗಳನ್ನೂ ಹಿಡಿದು ಅನೇಕ ಲಕ್ಷ ಪದಾತಿಸೈನ್ಯಗಳು ಭೀಮನ ಮುಂಭಾಗದಲ್ಲಿ ಹೋಗುತ್ತಿದ್ದುವು. ಗಂಡಸ್ಥಳಗಳಿಂದ ಮದೋದಕವನ್ನು ಸುರಿಸುತ್ತಿದ್ದ, ಬಹುಶಕ್ತಿಯುಕ್ತವಾಗಿದ್ದ, ಸ್ವರ್ಣಮಯವಾದ ಬಲೆಗಳ ಆಚ್ಛಾದನೆಯಿಂದ ದೇದೀಪ್ಯಮಾನವಾಗಿ ಕಾಣುತ್ತಿದ್ದ, ಪರ್ವತೋಪಮವಾಗಿದ್ದ, ಮೋಡಗಳು ಮಳೆಗರೆಯುವಂತೆ ಮದೋದಕವನ್ನು ಸುರಿಸುತ್ತಿದ್ದ, ಬಹುಮೂಲ್ಯಗಳಾದ, ಕಮಲದ ಸುವಾಸನೆಗೆ ಸಮಾನವಾದ ಸುಗಂಧದಿಂದ ಕೂಡಿದ್ದ ಹತ್ತುಸಾವಿರ ಆನೆಗಳು ವರ್ಷಾಕಾಲದ ಮೇಘಗಳಂತೆ ಯುಧಿಷ್ಠಿರನ ಹಿಂದೆ ಹೋಗುತ್ತಿದ್ದುವು. ದುರಾಧರ್ಷನಾದ, ಮಹಾತ್ಮನಾದ ಭೀಮಸೇನನು ಪರಿಘೋಪಮವಾಗಿದ್ದ ಮತ್ತು ಭಯಂಕರವಾಗಿದ್ದ ತನ್ನ ಗದೆಯನ್ನೆತ್ತಿಕೊಂಡು ಮಹಾಸೈನ್ಯವನ್ನು ಕರೆದುಕೊಂಡು ಯುದ್ಧಕ್ಕಾಗಿ ಹೋಗುತ್ತಿದ್ದನು. ಧೃತರಾಷ್ಟ್ರ! ಆ ಸಮಯದಲ್ಲಿ ಭೀಮಸೇನನು ಸೂರ್ಯನಂತೆಯೇ ಕಾಣುತ್ತಿದ್ದನು. ಅವನನ್ನು ದಿಟ್ಟಿಸಿ ನೋಡಲು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ. ಆ ಭೀಮನು ನಿನ್ನ ಅಪಾರವಾದ ಸೈನ್ಯವನ್ನೂ ಸೂರ್ಯನ ತೇಜಸ್ಸಿಗೆ ಸಮಾನವಾದ ತನ್ನ ತೇಜಸ್ಸಿನಿಂದ ಪರಿತಾಪಗೊಳಿಸುತ್ತಿರುವನೋ ಎಂಬಂತೆಯೇ ಕಾಣುತ್ತಿದ್ದನು. ಅವನು ಹತ್ತಿರಕ್ಕೆ ಬರುತ್ತಿರಲಾಗಿ ಸರ್ವಯೋಧರೂ ಅವನನ್ನು ಕತ್ತೆತ್ತಿನೋಡಲು ಕೂಡ ಅಸಮರ್ಥರಾದರು.

ಅರ್ಜುನನಿಂದ ನಿರ್ಮಿತವಾಗಿದ್ದ ವಜ್ರವೆಂಬ ವ್ಯೂಹವು ಭಯರಹಿತ ವಾಗಿದ್ದಿತು. ವಿದ್ಯುತ್ತಿನಂತೆ ಪ್ರಕಾಶಿಸುತ್ತಿದ್ದ ಧನುಸ್ಸು ವಜ್ರವ್ಯೂಹದ ಧ್ವಜದಲ್ಲಿದ್ದಿತು. ಬಹುಭಯಂಕರವಾಗಿದ್ದ ಆ ವ್ಯೂಹವನ್ನು ಅರ್ಜುನನೇ ರಕ್ಷಿಸುತ್ತಿದ್ದನು. ಯಾವ ನಿನ್ನ ಸೈನ್ಯದ ವ್ಯೂಹಕ್ಕೆ ಪ್ರತಿಯಾದ ಯಾವ ವ್ಯೂಹವನ್ನು ರಚಿಸಿ ಪಾಂಡವರು ಯುದ್ಧಸನ್ನದ್ಧರಾಗಿದ್ದರೋ, ಪಾಂಡವರಿಂದ ಸಂರಕ್ಷಿತವಾಗಿದ್ದ ಆ ವ್ಯೂಹವು (ವಜ್ರವ್ಯೂಹವು) ಮನುಷ್ಯಲೋಕದಲ್ಲಿಯೇ ಯಾರಿಂದಲೂ ಜಯಿಸಲು ಅಸಾಧ್ಯವಾಗಿದ್ದಿತು.

ಸೂರ್ಯೋದಯವಾಗುತ್ತಲೇ ಸೈನಿಕರು ಸಂಧ್ಯೋಪಾಸನೆಯನ್ನು ಮಾಡುತ್ತಿರಲಾಗಿ ತುಂತುರುಮಳೆಯೊಡನೆ ಗಾಳಿಯು ಬೀಸುತ್ತಿ

ದ್ದಿತು. ಮೋಡವೇ ಇಲ್ಲದಿದ್ದ ಆಕಾಶದಿಂದ ಮೇಘಗಳ ಗರ್ಜನೆಯೂ ಕೇಳಿ ಬರುತ್ತಿದ್ದಿತು. ಕೆಳಭಾಗಗಳಿಂದ (ಭೂಮಿಯಿಂದ) ಸಣ್ಣ-ಸಣ್ಣ ಕಲ್ಲುಗಳನ್ನು ಮಳೆಯಂತೆ ಸುರಿಸುವ ಸುಂಟರಗಾಳಿಗಳು ಬೀಸತೊಡಗಿದುವು. ಇದರಿಂದಾಗಿ ಭೂಮಿಯಿಂದ ದಟ್ಟವಾದ ಧೂಳು ಸರ್ವತ್ರ ವ್ಯಾಪಿಸಿತು. ಆ ಮಹಾಧೂಳಿನಿಂದಾಗಿ ಪ್ರಪಂಚಕ್ಕೇ ಕತ್ತಲೆಯು ಕವಿಯಿತು. ಪೂರ್ವಾಭಿ ಮುಖವಾಗಿ ದೊಡ್ಡದಾದೊಂದು ಉಲ್ಕೆಯು ಬಿದ್ದಿತು. ಅದು ಆಗ ತಾನೇ ಹುಟ್ಟುತ್ತಿದ್ದ ಸೂರ್ಯನನ್ನು ಅಪ್ಪಳಿಸಿ (ಸೂರ್ಯನ ಮೇಲೆ ಬಿದ್ದು) ಮಹಾರವದೊಡನೆ ನುಚ್ಚುನೂರಾಗಿ ಹೋಯಿತು.

ಭರತರ್ಷಭನೇ! ಎರಡು ಪಕ್ಷಗಳ ಸೈನ್ಯಗಳೂ ಯುದ್ಧಕ್ಕೆ ಸಿದ್ಧವಾಗು ತ್ತಿರಲಾಗಿ ಸೂರ್ಯನು ಕಾಂತಿಹೀನನಾದನು. ಘೋರಶಬ್ದದೊಡನೆ ಭೂಮಿಯೇ ಕಂಪಿಸಿತು. ಗಟ್ಟಿಯಾಗಿ ಶಬ್ದಮಾಡುತ್ತಾ ಭೂಮಿಯು ಅನೇಕಕಡೆಗಳಲ್ಲಿ ಸೀಳಿಹೋಯಿತು. ಎಲ್ಲ ದಿಕ್ಕುಗಳಲ್ಲಿಯೂ ಅನೇಕಾನೇಕ ಸಿಡಿಲುಗಳ ಶಬ್ದವು ಕೇಳಿಬಂದಿತು. ಬಿರುಗಾಳಿಯಿಂದಾಗಿ ಎಲ್ಲ ಕಡೆಗಳ ಲ್ಲಿಯೂ ಧೂಳು ಆವರಿಸಿತು. ಎಲ್ಲಿ ಏನಿದೆಯೆಂಬುದೇ ತಿಳಿಯುತ್ತಿರಲಿಲ್ಲ. ಗಾಳಿಯ ಹೊಡೆತದಿಂದಾಗಿ ಧ್ವಜಪಟಗಳು ಹಾರಾಡತೊಡಗಿದುವು. ಸಣ್ಣ-ಸಣ್ಣ ಗಂಟೆಗಳ ಸಮೂಹದಿಂದ ನಿಬದ್ಧವಾಗಿದ್ದ, ಸ್ವರ್ಣಮಾಲೆಗಳಿಂದಲೂ ಶ್ರೇಷ್ಠವಾದ ಬಟ್ಟೆಗಳಿಂದಲೂ ವಿಭೂಷಿತವಾಗಿದ್ದ, ಸೂರ್ಯನ ಕಾಂತಿಗೆ ಸಮಾನವಾದ ಕಾಂತಿಯಿಂದ ಕೂಡಿದ್ದ ಆ ಧ್ವಜಗಳು ಗಾಳಿಯ ಬಡಿತ ದಿಂದಾಗಿ ತಾಳೇಮರದ ವನದಲ್ಲಿ ಆಗುವ ಶಬ್ದದಂತೆ ಝಣ-ಝಣಾ ಎಂದು ಶಬ್ದಮಾಡುತ್ತಿದ್ದುವು. ಸರ್ವತ್ರ ಆ ಶಬ್ದವೊಂದು ಕೇಳುತ್ತಿದ್ದಿತೇ ಹೊರತು ಮತ್ತೇನೂ ಕಾಣುತ್ತಿರಲಿಲ್ಲ.

ಈ ಪ್ರಕಾರವಾಗಿ ಯುದ್ಧನಂದಿಗಳಾದ ಪುರುಷಸಿಂಹರಾದ ಪಾಂಡ ವರು, ನಿನ್ನ ಮಗನ ಸೇನಾವ್ಯೂಹಕ್ಕೆ ಪ್ರತಿವ್ಯೂಹವನ್ನು ರಚಿಸಿ ನಮ್ಮ ಪಕ್ಷದಯೋಧರ ರಕ್ತ ಮತ್ತು ಮೇದಸ್ಸುಗಳನ್ನು ಹೀರುತ್ತಿದ್ದಾರೆಯೋ ಎಂಬಂತೆ ಯುದ್ಧಸನ್ನದ್ಧರಾಗಿ ನಿಂತಿದ್ದರು. ಅವರ ಸೇನೆಯ ಅಗ್ರಭಾಗದಲ್ಲಿ ಗದಾ

ಪಾಣಿಯಾಗಿ ನಿಂತಿದ್ದ ಭೀಮಸೇನನನ್ನು ನೋಡಿ ಸೈನಿಕರು ಭೀತರಾದರು."

೧೯ನೆಯ ಅಧ್ಯಾಯವು ಮುಗಿಯಿತು.

೨೦ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ಎರಡು ಸೈನ್ಯಗಳ ಸ್ಥಿತಿ-ಗತಿಗಳು : ಕೌರವಸೇನೆಯ ಅಭಿಯಾನ

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ಸೂರ್ಯೋದಯದ ಸಮಯದಲ್ಲಿ ನೀನು ಅವಲೋಕಿಸಿದ್ದರಲ್ಲಿ ಭೀಷ್ಮಪ್ರಮುಖರಾದ ಮತ್ತು ಅವನ ಸಮೀಪದಲ್ಲಿದ್ದ ನನ್ನ ಸೈನಿಕರು ಯುದ್ಧೋತ್ಸಾಹಿಗಳಾಗಿ, ಹರ್ಷಯುಕ್ತರಾಗಿ ಕಾಣುತ್ತಿದ್ದರೋ ಅಥವಾ ಭೀಮಪ್ರಮುಖರಾದ ಪಾಂಡವರು ಯುದ್ಧೋತ್ಸಾಹಿಗಳಾಗಿ, ಹರ್ಷಯುಕ್ತರಾಗಿ ಕಾಣುತ್ತಿದ್ದರೋ? ಒಂದುವೇಳೆ ಎರಡು ಪಕ್ಷದವರೂ ಯುದ್ಧೋತ್ಸಾಹಿಗಳಾಗಿಯೂ, ಹರ್ಷಯುಕ್ತರಾಗಿಯೂ ಇದ್ದರು–ಎನ್ನುವುದಾದರೆ ತಾರತಮ್ಯದೃಷ್ಟಿಯಿಂದ ಅಧಿಕವಾದ ಉತ್ಸಾಹವೂ, ಹರ್ಷವೂ ಯಾವ ಪಕ್ಷೀಯರದಾಗಿದ್ದಿತೆಂಬುದನ್ನು ಹೇಳು. ಜಗತ್ತಿಗೇ ನೇತ್ರಸ್ವರೂಪರಾದ ವಾಯುಸಮೇತರಾದ ಸೂರ್ಯ-ಚಂದ್ರರು ಯಾರಿಗೆ ಪ್ರತಿಕೂಲರಾಗಿದ್ದರು? ಯಾವ ಪಕ್ಷದ ಸೇನೆಗೆ ಅಭಿಮುಖವಾಗಿ ನಿಂತು ಮಾಂಸಾಶಿಗಳಾದ ಪ್ರಾಣಿಗಳು ಭಯಂಕರವಾಗಿ ಶಬ್ದಮಾಡುತ್ತಿದ್ದುವು? ಯಾವ ಪಕ್ಷದ ನವ ಯುವಕಯೋಧರ ಮುಖಗಳು ಕಾಂತಿಯುಕ್ತವಾಗಿಯೂ ಪ್ರಸನ್ನವಾಗಿಯೂ ಇದ್ದುವು?–ಈ ಎಲ್ಲ ವಿಷಯಗಳನ್ನೂ ನೀನು ನನಗೆ ಯಥಾವತ್ತಾಗಿ ಹೇಳು."

"ನರೇಂದ್ರ! ಎರಡು ಪಕ್ಷಗಳ ಸೇನೆಗಳೂ ಏಕರೂಪವಾಗಿ ಮುಂದೆ-ಮುಂದೆ ಹೋಗುತ್ತಿದ್ದುವು. ಎರಡೂ ಪಕ್ಷಗಳ ವ್ಯೂಹಗಳಲ್ಲಿದ್ದ ಸೈನಿಕರೂ ಸಂಪ್ರಹೃಷ್ಟರಾಗಿಯೇ ಇದ್ದರು. ಎರಡು ಸೇನೆಗಳೂ ಅರಣ್ಯಸಮೂಹದಂತೆ ಪ್ರಕಾಶಮಾನವಾಗಿಯೂ ಚಿತ್ರ-ವಿಚಿತ್ರವಾಗಿಯೂ ಕಾಣುತ್ತಿದ್ದುವು. ಅದೇ ರೀತಿಯಲ್ಲಿ ಉಭಯಪಕ್ಷಗಳ ಸೈನ್ಯಗಳೂ ಆನೆ, ರಥ ಮತ್ತು ಕುದುರೆಗಳಿಂದ ಸಮೃದ್ಧವಾಗಿದ್ದುವು. ಎರಡು ಸೈನ್ಯಗಳೂ ವಿಶಾಲವಾಗಿಯೂ, ನೋಡಲು

ಭಯಂಕರವಾಗಿಯೂ, ಎದುರಿಸಲು ಅಸಾಧ್ಯವಾಗಿಯೂ ಇದ್ದುವು. ಎರಡು ಸೈನ್ಯಗಳೂ ಸ್ವರ್ಗವನ್ನು ಜಯಿಸಲೋಸುಗವೇ (ಸ್ವರ್ಗಪ್ರಾಪ್ತಿಗಾಗಿಯೇ) ಹೃಷ್ಟವಾಗಿದ್ದುವು ಮತ್ತು ಸತ್ಪುರುಷಭೂಯಿಷ್ಠವಾಗಿಯೂ ಇದ್ದುವು. ದುರ್ಯೋಧನನ ಸೈನಿಕರು ಪಶ್ಚಿಮಾಭಿಮುಖವಾಗಿಯೂ–ಅವರೊಡನೆ ಯುದ್ಧಸನ್ನದ್ಧರಾಗಿದ್ದ ಪಾಂಡವರ ಸೈನಿಕರು ಪೂರ್ವಾಭಿಮುಖವಾಗಿಯೂ ನಿಂತಿದ್ದರು. ಆ ಸಮಯದಲ್ಲಿ ಕೌರವಸೇನೆಯು ರಾಕ್ಷಸರಾಜನ ಸೇನೆ ಯಂತೆಯೂ ಪಾಂಡವಸೇನೆಯು ದೇವಸೇನೆಯಂತೆಯೂ ಕಾಣುತ್ತಿದ್ದಿತು. ಗಾಳಿಯು ಪಾಂಡವರ ಹಿಂಬದಿಯಿಂದ (ಪೂರ್ವ-ಪಶ್ಚಿಮವಾಗಿ) ಬೀಸುತ್ತಿ ದ್ದಿತು. ನಿನ್ನ ಮಕ್ಕಳ ಕಡೆಗೇ ತಿರುಗಿಕೊಂಡು ಹಿಂಸ್ರಪ್ರಾಣಿಗಳು ಕೂಗಿಕೊಳ್ಳು ತ್ತಿದ್ದುವು. ಪಾಂಡವರ ಪಕ್ಷದಲ್ಲಿದ್ದ ಗಜೇಂದ್ರಗಳ (ಸಲಗಗಳ) ಕಪೋಲಗಳಿಂದ ಹರಿಯುತ್ತಿದ್ದ ಮದೋದಕದ ತೀಕ್ಷ್ಣವಾದ ವಾಸನೆಯನ್ನು ನಿನ್ನ ಮಗನ ಕಡೆಯಲ್ಲಿದ್ದ ಆನೆಗಳು ಸಹಿಸುತ್ತಿರಲಿಲ್ಲ. ನಿನ್ನ ಮಗನಾದ ದುರ್ಯೋಧನನು ಮದೋದಕವನ್ನು ಸುರಿಸುತ್ತಿದ್ದ, ಕಮಲದ ಕಾಂತಿಯಂತೆ ಪ್ರಕಾಶಮಾನವಾಗಿ ಕಾಣುತ್ತಿದ್ದ, ಸ್ವರ್ಣಮಯವಾದ ಹಗ್ಗದಿಂದ ನಿಬದ್ಧವಾಗಿದ್ದ, ಸುವರ್ಣಮಯವಾದ ಬಲೆಯಿಂದ ಕೂಡಿದ್ದ ಆನೆಯ ಮೇಲೆ ಕುಳಿತು ವಂದಿ-ಮಾಗಧರಿಂದ ಸಂಸ್ತೂಯಮಾನನಾಗಿ ಕುರುಗಳ ಮಧ್ಯದಲ್ಲಿದ್ದನು. ಕುರುರಾಜನಾದ ದುರ್ಯೋಧನನ ತಲೆಯ ಮೇಲೆ ಚಂದ್ರನ ಕಾಂತಿಗೆ ಸಮಾನವಾಗಿದ್ದ ಶ್ವೇತಚ್ಛತ್ರಿಯನ್ನು ಹಿಡಿದಿದ್ದರು. ಅವನ ಕಂಠದಲ್ಲಿ ಸುವರ್ಣಮಯವಾದ ಹಾರವು ಪ್ರಕಾಶಿಸುತ್ತಿದ್ದಿತು. ಗಾಂಧಾರರಾಜನಾದ ಶಕುನಿಯು ಪರ್ವತಪ್ರದೇಶದ ಗಾಂಧಾರಸೈನಿಕರಿಂದ ಕೂಡಿ ದುರ್ಯೋಧನನನ್ನು ಅನುಸರಿಸಿಕೊಂಡು ಮುನ್ನಡೆಯುತ್ತಿದ್ದನು. ನಿನ್ನ ಸರ್ವಸೈನ್ಯದ ಅಗ್ರಭಾಗದಲ್ಲಿ ವೃದ್ಧನಾದ ಭೀಷ್ಮನಿದ್ದನು. ಅವನ ತಲೆಯ ಮೇಲೆ ಶ್ವೇತಚ್ಛತ್ರಿಯಿದ್ದಿತು. ಬಿಳಿಯ ಧನುಸ್ಸನ್ನೂ ಬಿಳಿಯ ಶಿರಸ್ತ್ರಾಣವನ್ನೂ ಧರಿಸಿದ್ದನು. ಕೈಯ್ಯಲ್ಲಿ ಖಡ್ಗವಿದ್ದಿತು. ಬಿಳಿಯ ಧ್ವಜದಿಂದ ಪ್ರಕಾಶಿಸುತ್ತಿ ದ್ದನು. ಅವನ ರಥವು ಶ್ವೇತಪರ್ವತಪ್ರಕಾಶಕ್ಕೆ ಸಮಾನವಾದ ಪ್ರಕಾಶದಿಂದ ಕೂಡಿದ ಶ್ವೇತಾಶ್ವಗಳಿಂದ ಕೂಡಿದ್ದಿತು. ಅವನ ಸೈನ್ಯದಲ್ಲಿ ನಿನ್ನ ಎಲ್ಲ ಮಕ್ಕಳೂ ಇದ್ದರು. ಬಾಹ್ಲೀಕಸೈನ್ಯದ ಒಂದು ಭಾಗವು ಮಾತ್ರವಿದ್ದಿತು.

ಶಲನೂ ಸಹ ಭೀಷ್ಮನ ಸೇನೆಯಲ್ಲೇ ಇದ್ದನು. ಅಂಬಷ್ಠರು, ಸಿಂಧು ದೇಶೀಯರು, ಸೌವೀರರು ಮತ್ತು ಪಂಚನದಪ್ರದೇಶದ ಶೂರರಾದ ಮತ್ತು ವೀರರಾದ ಕ್ಷತ್ರಿಯರೂ ಅವನ ಸೈನ್ಯದಲ್ಲಿದ್ದರು. ಭೀಷ್ಮನ ಹಿಂಬದಿಯಲ್ಲಿ ಧನುಷ್ಪಾಣಿಗಳಾದ, ಮಹಾಸತ್ತ್ವರಾದ ಮತ್ತು ಮಹಾತ್ಮರಾದ ಪ್ರಾಯಶಃ ಸರ್ವರಾಜರಿಗೂ ಗುರುಗಳಾದ ದ್ರೋಣಾಚಾರ್ಯರಿದ್ದರು. ಅವರು ರುಕ್ಮ ರಥರಾಗಿದ್ದರು. (ಸುವರ್ಣಮಯವಾದ ರಥದಲ್ಲಿ ಕುಳಿತಿದ್ದರು.) ಆ ರಥವು ಕೆಂಪುಕುದುರೆಗಳಿಂದ ಯುಕ್ತವಾಗಿದ್ದಿತು. ಆ ಸಮಯದಲ್ಲವರು ಭೂಮಿ ಪಾಲರಂತೆಯೇ ಪ್ರಕಾಶಿಸುತ್ತಿದ್ದರು. ವೃದ್ಧಕ್ಷತ್ರನ ಮಗನಾದ ಜಯದ್ರಥ, ಭೂರಿಶ್ರವ, ಪುರುಮಿತ್ರ, ಜಯ, ಶಾಲ್ವರು, ಮತ್ಸ್ಯದೇಶೀಯರು, ಕೇಕಯ ಸಹೋದರರು–ಇವರೆಲ್ಲರೂ ಯುದ್ಧಮಾಡುವ ಉತ್ಕಟೇಚ್ಛೆಯಿಂದ ಗಜ ಸೈನ್ಯಸಹಿತರಾಗಿ ಮಹಾಸೇನೆಯ ಮಧ್ಯಭಾಗದಲ್ಲಿ ಮುನ್ನಡೆಯುತ್ತಿದ್ದರು. ಮಹಾಧನುರ್ಧರರಾದ, ಗೌತಮವಂಶೀಯರಾದ, ಮಹಾತ್ಮರಾದ, ಗುರು ತರವಾದ ಕಾರ್ಯವನ್ನೂ ಸಹ ಸಾಧಿಸಲು ಸಮರ್ಥರಾದ ಕೃಪಾಚಾರ್ಯರು ಶಕರಿಂದಲೂ, ಕಿರಾತರಿಂದಲೂ, ಯವನರಿಂದಲೂ, ಪಲ್ಲವರಿಂದಲೂ ಕೂಡಿಕೊಂಡು ಮಹಾಸೇನೆಯ ಎಡಪಾರ್ಶ್ವದಲ್ಲಿ ಹೋಗುತ್ತಿದ್ದರು. ಕೈಗಳಲ್ಲಿ ಆಯುಧಗಳನ್ನು ಹಿಡಿದಿದ್ದ, ಸುಶಿಕ್ಷಿತರಾಗಿದ್ದ, ಸುರಾಷ್ಟ್ರದೇಶೀಯರಿಂದಲೂ ವೃಷ್ಣಿ-ಭೋಜವಂಶಗಳ ಮಹಾರಥರಿಂದಲೂ ಸುರಕ್ಷಿತವಾಗಿದ್ದ ವಿಶಾಲಸೇನೆಯು ಕೃತವರ್ಮನಿಂದ ರಕ್ಷಿಸಲ್ಪಡುತ್ತಿದ್ದು ನಿನ್ನ ವಿಶಾಲಸೈನ್ಯದ ದಕ್ಷಿಣಭಾಗದಲ್ಲಿ ಹೋಗುತ್ತಿದ್ದಿತು. ಸಂಶಪ್ತಕರೆಂಬ ಹೆಸರಿನ ಹತ್ತು ಸಾವಿರ ಯೋಧರು–ಅರ್ಜುನನು ಎಲ್ಲಿದ್ದನೋ ಆ ದಿಕ್ಕನ್ನು ಕುರಿತು ಹೋಗುತ್ತಿದ್ದರು. 'ಅರ್ಜುನನನ್ನು ಜಯಿಸಬೇಕು ಅಥವಾ ಅರ್ಜುನನಿಂದ ಹತರಾಗ ಬೇಕು'-ಎಂಬುದೇ ಅವರ ಯುದ್ಧಪ್ರಣಾಳಿಕೆಯಾಗಿದ್ದಿತು. ಅರ್ಜುನನೊಡನೆ ಯುದ್ಧಮಾಡುವ ಸಲುವಾಗಿಯೇ ಅವರು ಹುಟ್ಟಿದ್ದರು. ಸಂಶಪ್ತಕರೊಡನೆ ಅಸ್ತ್ರಪಾರಂಗತರಾದ ಶೂರರಾದ ತ್ರಿಗರ್ತರೂ ಸಹ ಹೋಗುತ್ತಿದ್ದರು.

ಮಹಾರಾಜ! ನಿನ್ನ ಸೇನೆಯಲ್ಲಿ ಲಕ್ಷಕ್ಕೂ ಮೀರಿ ಆನೆಗಳಿದ್ದುವು. ಒಂದೊಂದು ಆನೆಯೊಡನೆಯೂ ನೂರು-ನೂರು ರಥಗಳಿದ್ದುವು.

ಒಂದೊಂದು ರಥದ ಹಿಂಬದಿಯಲ್ಲಿಯೂ ನೂರು-ನೂರು ಕುದುರೆಗಳಿದ್ದುವು. ಒಂದೊಂದು ಅಶ್ವದ (ಅಶ್ವಸೈನ್ಯದ) ಹಿಂಬದಿಯಲ್ಲಿಯೂ ಹತ್ತು- ಹತ್ತು ಮಂದಿ ಧನುಷ್ಪಾಣಿಗಳಾದ ಯೋಧರಿದ್ದರು. ಒಬ್ಬೊಬ್ಬ ಧನುರ್ಧಾರಿಯಾದ ಯೋಧನ ಹಿಂಬದಿಯಲ್ಲಿಯೂ ಅವನಿಗೆ ಬೆಂಬಲಿಗರಾಗಿ ನೂರು-ನೂರು ಮಂದಿ ಪದಾತಿಗಳಿದ್ದರು. ಈ ರೀತಿಯಲ್ಲಿ ನಿನ್ನ ಸೇನೆಯ ದಂಡನಾಯಕನಾಗಿದ್ದ ಭೀಷ್ಮನು ಸೈನ್ಯದ ವ್ಯೂಹಗಳನ್ನು ರಚಿಸಿದ್ದನು. ಸೇನಾಪತಿಯಾಗಿದ್ದ ಭೀಷ್ಮನು ವ್ಯೂಹರಚನಾಕ್ರಮವನ್ನು ಅನುದಿನವೂ ಬದಲಾವಣೆ ಮಾಡುತ್ತಿದ್ದನು. ಒಂದು ದಿನ ಮಾನುಷಕ್ರಮದಲ್ಲಿ ವ್ಯೂಹರಚಿಸಿದರೆ, ಮರುದಿನ ದೈವವ್ಯೂಹವನ್ನು ರಚಿಸುತ್ತಿದ್ದನು. ಅದೇ ರೀತಿಯಲ್ಲಿ ಗಂಧರ್ವಾಸುರ ವ್ಯೂಹಗಳನ್ನೂ ಸಹ ಒಂದೊಂದು ದಿನ ಭೀಷ್ಮನು ರಚಿಸುತ್ತಿದ್ದನು. ಭೀಷ್ಮನಿಂದ ಅನುದಿನವೂ ರಚಿಸಲ್ಪಡುತ್ತಿದ್ದ ಧಾರ್ತರಾಷ್ಟ್ರಸೈನ್ಯವ್ಯೂಹವು ಮಹಾರಥಗಳ ಸಮೂಹದಿಂದ ಸಮೃದ್ಧವಾಗಿದ್ದು ಅನೇಕಪ್ರವಾಹಗಳು ಬಂದು ಸೇರುವ ಸಮುದ್ರದಂತೆಯೇ ಭೋರ್ಗರೆಯುತ್ತಿದ್ದಿತು. ನಾನು ಹಿಂದೆಯೇ ಹೇಳಿದಂತೆ ಯುದ್ಧಸಮಯದಲ್ಲಿ ನಿನ್ನ ಸೇನೆಯು ಪಶ್ಚಿಮಾಭಿಮುಖವಾಗಿದ್ದಿತು. ನರೇಂದ್ರ! ನಿಶ್ಚಯವಾಗಿ ಹೇಳುವುದಾದರೆ ನಿನ್ನ ಸೇನೆಯು ಅಗಣಿತವಾಗಿದ್ದಿತು. ಅಂತೆಯೇ ಬಹುಭಯಂಕರವಾಗಿಯೂ ಇದ್ದಿತು. ಪಾಂಡವರ ಸೇನೆಯು ಅಷ್ಟು ಅಗಾಧವಾಗಿರಲಿಲ್ಲ. ಆದರೂ ಸಹ ಯಾವ ಸೇನೆಯು ಕೇಶವಾರ್ಜುನರಿಂದ ನಿಯಂತ್ರಿತವಾಗಿದ್ದಿತೋ ಆ ಪಾಂಡವರ ಸೇನೆಯನ್ನೇ ದೊಡ್ಡದೆಂದೂ-ಎದುರಿಸಲು ಅಸಾಧ್ಯವಾದುದೆಂದೂ ನಾನು ಈ ಹಿಂದೆಯೇ ಭಾವಿಸಿದ್ದೆನು. (ಯದ್ಯಪಿ ನಿನ್ನ ಸೈನ್ಯವು ಬಹುಸಂಖ್ಯಾತವಾಗಿದ್ದರೂ ಪಾಂಡವಸೇನೆಯು ಕೃಷ್ಣಾರ್ಜುನರಿಂದ ಕೂಡಿರುವುದರಿಂದ ಅದೇ ಬಲಿಷ್ಠವೆಂಬುದಾಗಿ ನಾನು ಭಾವಿಸುತ್ತೇನೆ.” )

೨೦ನೆಯ ಅಧ್ಯಾಯವು ಮುಗಿಯಿತು.

## ಯುದ್ಧೋದ್ಯತವಾದ ಕೌರವರ ಬೃಹತ್ಸೇನೆಯನ್ನು ನೋಡಿ ಯುಧಿಷ್ಠಿರನು ವಿಷಾದಪಟ್ಟುದು : ಶ್ರೀಕೃಷ್ಣನ ಕೃಪೆಯಿಂದಲೇ ತಮಗೆ ವಿಜಯವು ಲಭಿಸುತ್ತದೆಯೆಂದು ಅರ್ಜುನನು ಧರ್ಮಜನಿಗೆ ಆಶ್ವಾಸನೆ ನೀಡಿದುದು

ಸಂಜಯನು ಧೃತರಾಷ್ಟ್ರನನ್ನು ಕುರಿತು ಹೇಳುತ್ತಾನೆ :

"ರಾಜೇಂದ್ರ! ಯುದ್ಧಸನ್ನದ್ಧವಾಗಿದ್ದ ದುರ್ಯೋಧನನ ವಿಶಾಲವಾದ ಸೇನೆಯನ್ನು ನೋಡಿ ಕುಂತೀಪುತ್ರನಾದ ಯುಧಿಷ್ಠಿರನು ವಿಷಾದಿಸಿದನು. ಅವನು ವಿಷಾದಿಸಲು ಕಾರಣವಿಲ್ಲದಿರಲಿಲ್ಲ. ಭೀಷ್ಮನಿಂದ ರಚಿತವಾಗಿದ್ದ, ಅಭೇದ್ಯವಾದ, ಕ್ಷೋಭೆಗೊಳಿಸಲು ಸಾಧ್ಯವಾಗದ (ಚದುರಿಸಲು ಸಾಧ್ಯವಾಗದ) ವ್ಯೂಹವನ್ನು ನೋಡಿ ಕಳೆಗುಂದಿದ ಯುಧಿಷ್ಠಿರನು ಅರ್ಜುನನನ್ನು ಕುರಿತು ಹೇಳಿದನು :

"ಧನಂಜಯ! ಧೃತರಾಷ್ಟ್ರನ ಮಕ್ಕಳೊಡನೆ ಯುದ್ಧಮಾಡಲು ನಮ್ಮಿಂದ ಹೇಗೆ ತಾನೇ ಸಾಧ್ಯವಾಗುತ್ತದೆ? ಮಿಗಿಲಾಗಿ ಪಿತಾಮಹನೇ ಈ ಮಹಾಸೇನೆಯ ಮುಖ್ಯ ಯೋದ್ಧಾರನಾಗಿ ನಿಂತಿದ್ದಾನೆ. ಮಹಾತೇಜಸ್ವಿಯಾದ, ಶತ್ರುಸೂದನನಾದ, ಭೀಷ್ಮನಿಂದ ಶಾಸ್ತ್ರವಿಧ್ಯುಕ್ತವಾಗಿ ನಿರ್ಮಿತವಾಗಿರುವ ಈ ವ್ಯೂಹವು ಕದಲಿಸಲಸಾಧ್ಯವಾಗಿಯೂ, ಅಭೇದ್ಯವಾಗಿಯೂ ಇದೆ. ಶತ್ರುನಿಷೂದನನೇ! ಅರ್ಜುನ! ಈ ಮಹಾವ್ಯೂಹವನ್ನು ಎದುರಿಸುವ ಸಸೈನ್ಯರಾದ ನಾವೆಲ್ಲರೂ ಮಹಾಸಂಕಟಕ್ಕೊಳಗಾಗಿದ್ದೇವೆ. ಯಾವ ರೀತಿಯಲ್ಲಿ ಈ ಮಹಾವ್ಯೂಹವನ್ನೆದುರಿಸಿ ನಾವು ಉದ್ಧಾರವಾದೇವು? (ಜೀವದಿಂದುಳಿದೇವು) ಎಂಬುದೇ ನಮ್ಮ ಇಂದಿನ ಸಂಕಟವಾಗಿದೆ."

ಶತ್ರುಹಂತಕನಾದ ಪಾರ್ಥನು ತನ್ನಣ್ಣನಾದ ಯುಧಿಷ್ಠಿರನು ನಿನ್ನ ವಿಶಾಲವಾದ ಸೈನ್ಯವನ್ನು ನೋಡಿ ವಿಷಾದಿಸುತ್ತಿರುವುದನ್ನು ಕಂಡು ಅವನನ್ನು ಕುರಿತು ಹೇಳಿದನು :

**ಪ್ರಜ್ಞಯಾಭ್ಯಧಿಕಾಞ್ಛೂರಾನ್ಗುಣಯುಕ್ತಾನ್ಬಹೂನಪಿ ।**
**ಜಯನ್ತ್ಯಲ್ಪತರಾ ಯೇನ ತನ್ನಿಬೋಧ ವಿಶಾಮ್ಪತೇ ॥೭॥**

"ಅಣ್ಣ! ನೀನು ಕೌರವರ ಮಹಾಸೇನೆಯನ್ನು ನೋಡಿ ವಿಷಾದಿ

ಸುವ ಕಾರಣವಿಲ್ಲ. ಮಹಾಬುದ್ಧಿವಂತರೂ, ಗುಣಿಗಳೂ ಆದ ಶೂರರೇ ಬಹುಸಂಖ್ಯೆಯಲ್ಲಿದ್ದರೂ ಸಹ ಅವರನ್ನು ಅಲ್ಪಸಂಖ್ಯಾತರೂ ಹೇಗೆ ಜಯಿಸುವರೆಂಬುದನ್ನು ಹೇಳುವೆನು ಕೇಳು. ಅಸೂಯಾರಹಿತನಾದ ನಿನಗೆ ಇದರ ಕಾರಣವನ್ನು ಹೇಳುತ್ತೇನೆ. ಈ ರಹಸ್ಯವಿಷಯವನ್ನು ನಾರದರು ತಿಳಿದುಕೊಂಡಿರುತ್ತಾರೆ.



ಭೀಷ್ಮ-ದ್ರೋಣರಿಗೂ ಸಹ ಈ ವಿಷಯವು ತಿಳಿದಿದೆ.

ದೇವಾಸುರರಿಗೆ ಯುದ್ಧವಾಗುತ್ತಿದ್ದ ಸಮಯದಲ್ಲಿ ಪಿತಾಮಹ ಬ್ರಹ್ಮನು ಮಹೇಂದ್ರಾದಿ ದೇವತೆಗಳನ್ನು ಉದ್ದೇಶಿಸಿ ಇದೇ ವಿಷಯವಾಗಿಯೇ ಹೇಳಿದನು :

(ಅಸುರರು ಅಪಾರಸಂಖ್ಯೆಯಲ್ಲಿದ್ದರು. ದೇವತೆಗಳು ಅಲ್ಪಸಂಖ್ಯಾತ ರಾಗಿದ್ದರು. ಆ ಸಮಯದಲ್ಲಿ ಅಸುರರೊಡನೆ ಯುದ್ಧಮಾಡಿ ಜಯಗಳಿಸು ವುದು ಹೇಗೆಂಬ ವಿಷಯವಾಗಿ ಇಂದ್ರಾದಿಗಳನ್ನು ಕುರಿತು ಬ್ರಹ್ಮನು ಹೇಳಿದನು.)

**ನ ತಥಾ ಬಲವೀರ್ಯಾಭ್ಯಾಂ ಜಯನ್ತಿ ವಿಜಿಗೀಷವಃ ।**
**ಯಥಾ ಸತ್ಯಾನೃಶಂಸ್ಯಾಭ್ಯಾಂ ಧರ್ಮೇಣೈವೋದ್ಯಮೇನ ಚ ॥೧೦॥**

**ತ್ಯಕ್ತ್ವಾ ಧರ್ಮಂ ಚ ಲೋಭಂ ಚ ಮೋಹಂ ಚೋದ್ಯಮಮಾಸ್ಥಿತಾಃ ।**
**ಯುದ್ಧ್ಯಧ್ವಮನಹಂಕಾರಾ ಯತೋ ಧರ್ಮಸ್ತತೋ ಜಯಃ ॥೧೧॥**

"ವಿಜಯೇಚ್ಛುಗಳು ಕೇವಲ ಬಲ-ವೀರ್ಯಗಳಿದ್ದ ಮಾತ್ರದಿಂದಲೇ ಜಯಿಸಲಾರರು. ಸತ್ಯನಿಷ್ಠೆ, ದಯಾಪರತೆ, ಧರ್ಮನಿಷ್ಠೆ ಮತ್ತು ಉದ್ಯಮ (ಪ್ರಯತ್ನಶೀಲತೆ) ಇವುಗಳ ಅವಲಂಬನೆಯಿಂದ ವಿಜಯವನ್ನು ಪಡೆದು ಕೊಳ್ಳಬಹುದು. (ಸತ್ಯ-ಧರ್ಮಗಳ ಅವಲಂಬನೆಯಿಂದ ಜಯವನ್ನು ಪಡೆದುಕೊಳ್ಳುವಷ್ಟು ಸುಲಭವಾಗಿ ಬಲ-ವೀರ್ಯಗಳ ಅವಲಂಬನೆಯಿಂದ ಜಯವನ್ನು ಪಡೆದುಕೊಳ್ಳಲಾಗುವುದಿಲ್ಲ.) ಅಧರ್ಮ, ಲೋಭ, ಮೋಹ ಮತ್ತು ಅಹಂಕಾರ–ಇವುಗಳನ್ನು ಸಂಪೂರ್ಣವಾಗಿ ತ್ಯಜಿಸಿ ಉತ್ಸಾಹಶೀಲ ರಾಗಿ ಯುದ್ಧವನ್ನಾರಂಭಿಸಿರಿ. ಧರ್ಮವು ಯಾವ ಕಡೆಯಲ್ಲಿದೆಯೋ ಆ ಪಕ್ಷಕ್ಕೇ ಜಯವೆಂಬುದು ಕಟ್ಟಿಟ್ಟಬುತ್ತಿ. ಯುಧಿಷ್ಠಿರ! ನಾವು ಧರ್ಮಾವ ಲಂಬಿಗಳಾಗಿದ್ದೇವೆ. ನಮ್ಮ ಕಡೆಯಲ್ಲಿ ಧರ್ಮದ ಅಧಿಷ್ಠಾನವಿದೆ. ಈ ಕಾರಣದಿಂದ **ಧ್ರುವೋಽಸ್ಮಾಕಂ ರಣೇ ಜಯಃ** ಯುದ್ಧದಲ್ಲಿ ನಮಗೆ ಜಯವು ನಿಶ್ಚಯ. ಇದೂ ಅಲ್ಲದೆ ಮತ್ತೊಂದು ರಹಸ್ಯವಿಷಯವನ್ನೂ ನಾರದರು ಹೇಳಿದ್ದಾರೆ. **ಯತಃ ಕೃಷ್ಣಸ್ತತೋ ಜಯಃ** ಶ್ರೀಕೃಷ್ಣನು ಯಾವ ಪಕ್ಷದಲ್ಲಿದ್ದಾನೆಯೋ ಆ ಪಕ್ಷಕ್ಕೇ ಜಯವು ಲಭಿಸುತ್ತದೆ.

**ಗುಣಭೂತೋ ಜಯಃ ಕೃಷ್ಣೇ ಪೃಷ್ಠತೋಽಭ್ಯೇತಿ ಮಾಧವಮ್ ।**
**ತದ್ಯಥಾ ವಿಜಯಶ್ಚಾಸ್ಯ ಸನ್ನತಿಶ್ಚಾಪರೋ ಗುಣಃ ॥೧೩॥**

ವಿಜಯವೆಂಬುದು ಶ್ರೀಕೃಷ್ಣನ ಒಂದು ಗುಣವೇ ಆಗಿದೆ. ಆದುದರಿಂದ ವಿಜಯವೆಂಬುದು ಶ್ರೀಕೃಷ್ಣನ ಹಿಂದೆ-ಹಿಂದೆಯೇ ಹೋಗುತ್ತಿರುತ್ತದೆ. ವಿಜಯವು ಯಾವ ರೀತಿಯಲ್ಲಿ ಶ್ರೀಕೃಷ್ಣನ ಸ್ವಾಭಾವಿಕಗುಣವಾಗಿದೆಯೋ ಹಾಗೆಯೇ ವಿನಯವೂ ಸಹ ಶ್ರೀಕೃಷ್ಣನಲ್ಲಿರುವ ಎರಡನೆಯ ಸ್ವಾಭಾವಿಕ ಗುಣವಾಗಿದೆ.

**ಅನನ್ತತೇಜಾ ಗೋವಿನ್ದಃ ಶತ್ರುಪೂಗೇಷು ನಿರ್ವ್ಯಥಃ ।**
**ಪುರುಷಃ ಸನಾತನಮಯೋ ಯತಃ ಕೃಷ್ಣಸ್ತತೋ ಜಯಃ ॥೧೪॥**

ಅಣ್ಣ! ಗೋವಿಂದನು ಅನಂತವಾದ ತೇಜಸ್ಸುಗಳಿಂದ ಕೂಡಿರುವವನು. ಮಹಾಶೂರಾಧಿಶೂರರಾದ ಶತ್ರುಗಳ ಮಧ್ಯದಲ್ಲಿಯೂ ಸಹ ಇವನು ವ್ಯಥೆಯೇ ಇಲ್ಲದೇ ಸ್ಥಿರಚಿತ್ತನಾಗಿರತಕ್ಕವನು. ಸನಾತನನಾದ ಪರಮಪುರುಷನೇ ಇವನಾಗಿದ್ದಾನೆ. ಆದುದರಿಂದ ಶ್ರೀಕೃಷ್ಣನು ಯಾವ ಪಕ್ಷದಲ್ಲಿದ್ದರೆ ಆ ಪಕ್ಷಕ್ಕೇ ಜಯವು ಲಭಿಸುತ್ತದೆ.

**ಪುರಾ ಹ್ಯೇಷ ಹರಿರ್ಭೂತ್ವಾ ವಿಕುಣ್ಠೋಽಕುಣ್ಠಸಾಯಕಃ ।**
**ಸುರಾಸುರಾನವಸ್ಫೂರ್ಜನ್ನಬ್ರವೀತ್ಕೇ ಜಯನ್ತ್ವಿತಿ ॥೧೫॥**

ಈ ಶ್ರೀಕೃಷ್ಣನೇ ಅಪ್ರತಿಹತವಾದ ಆಯುಧವನ್ನು (ಚಕ್ರಾಯುಧ ವನ್ನು ) ಧರಿಸಿರುವ ವಿಕುಂಠನಾಗಿದ್ದಾನೆ. (ಮಹಾವಿಷ್ಣುವಾಗಿದ್ದಾನೆ.) ಒಮ್ಮೆ ಇವನು ಶ್ರೀಹರಿಯ ರೂಪದಲ್ಲಿದ್ದಾಗ (ಮೂಲರೂಪದಲ್ಲಿದ್ದಾಗ) ಸಿಡಿಲಿನ ಶಬ್ದಕ್ಕೆ ಸಮಾನವಾದ ಧ್ವನಿಯಿಂದ ಸುರಾಸುರರನ್ನು ಕುರಿತು 'ನಿಮ್ಮಲ್ಲಿ ಯಾರಿಗೆ ವಿಜಯವು ಬೇಕಾಗಿದೆ?'–ಎಂದು ಕೇಳಿದನು. ಅದಕ್ಕೆ ಪ್ರತ್ಯುತ್ತರವಾಗಿ ಇಂದ್ರಪ್ರಮುಖರಾದ ದೇವತೆಗಳು '**ಕಥಂ ಕೃಷ್ಣ ಜಯೇಮ (ತ್ವಯಾ ವಿನಾ)** ನಿನ್ನನ್ನು ಬಿಟ್ಟು ನಾವು ವಿಜಯವನ್ನು ಹೇಗೆ ತಾನೇ ಪಡೆದೇವು?' ಎಂದು ಹೇಳಿದರು. ಯಾರು ಇವನ ಸಹಾಯವನ್ನು ಪಡೆದರೋ–ಅವರಿಗೇ ವಿಜಯವು ಲಭಿಸಿತು. ಈ ರೀತಿಯಾಗಿ ಕೇವಲ ಶ್ರೀಕೃಷ್ಣನ ಕೃಪಾವಿಶೇಷದಿಂದಲೇ ಶಕ್ರಾದಿ ದೇವತೆಗಳು ಸ್ವರ್ಗವನ್ನು ಪಡೆದುಕೊಂಡರು.

**ತಸ್ಯ ತೇ ನ ವ್ಯಥಾಂ ಕಾಞ್ಚಿದಿಹ ಪಶ್ಯಾಮಿ ಭಾರತ ।**
**ಯಸ್ಯ ತೇ ಜಯಮಾಶಾಸ್ತೇ ವಿಶ್ವಭುಕ್ ತ್ರಿದಿವೇಶ್ವರಃ ॥೧೬॥**

ಅಣ್ಣ! ನಾನಂತೂ ನಿನ್ನ ವಿಷಾದಕ್ಕೆ ಯಾವುದೊಂದು ಕಾರಣವನ್ನೂ ಸಹ ಕಾಣದವನಾಗಿದ್ದೇನೆ. ನೀನು ವ್ಯಥೆಪಡಬೇಕಾದ ಕಾರಣವೇ ಇಲ್ಲ. ಏಕೆಂದರೆ: ಮೂರು ಲೋಕಗಳಿಗೂ ಈಶ್ವರನಾದ ವಿಶ್ವಂಭರನಾದ ಶ್ರೀಕೃಷ್ಣನೇ ನಿನಗೆ ಜಯವನ್ನು ಹಾರೈಸುತ್ತಿದ್ದಾನೆ."

೨೧ನೆಯ ಅಧ್ಯಾಯವು ಮುಗಿಯಿತು.

## ಯುಧಿಷ್ಠಿರನ ರಣಯಾತ್ರೆ: ಅರ್ಜುನ ಮತ್ತು ಭೀಮಸೇನರ ಪ್ರಶಂಸೆ: ಕೌರವಸೇನೆಯನ್ನು ಸಂಹರಿಸುವಂತೆ ಶ್ರೀಕೃಷ್ಣನು ಅರ್ಜುನನಿಗೆ ನಿರ್ದೇಶಿಸಿದುದು

ಸಂಜಯನು ಧೃತರಾಷ್ಟ್ರನೊಡನೆ ಹೇಳುತ್ತಾನೆ :

"ಮಹಾರಾಜ! ಅರ್ಜುನನು ಸಮಾಧಾನಪಡಿಸಿದನಂತರದಲ್ಲಿ ಯುಧಿಷ್ಠಿರರಾಜನು, ಭೀಷ್ಮನು ರಚಿಸಿದ್ದ ವ್ಯೂಹಕ್ಕೆ ಪ್ರತಿವ್ಯೂಹವನ್ನು ರಚಿಸುವ ವ್ಯವಸ್ಥೆಮಾಡಿ ತನ್ನ ಕಡೆಯ ಸೈನಿಕರಿಗೆ ಯುದ್ಧಸನ್ನದ್ಧರಾಗುವಂತೆ ಪ್ರಚೋದಿಸಿದನು. ಕುರುವಂಶಧುರಂಧರರಾದ ಪಾಂಡವರು ಧರ್ಮ ಯುದ್ಧದ ಮೂಲಕವಾಗಿ ಶ್ರೇಷ್ಠವಾದ ಸ್ವರ್ಗಲೋಕವನ್ನಾಶಿಸಿ ಶಾಸ್ತ್ರವಿಧ್ಯನು ಸಾರವಾಗಿ ಶತ್ರುಪಕ್ಷದವರು ರಚಿಸಿದ್ದ ವ್ಯೂಹಗಳಿಗೆ ಪ್ರತಿಯಾದ ವ್ಯೂಹಗಳನ್ನು ರಚಿಸಿದರು. ವ್ಯೂಹದ ಮಧ್ಯಭಾಗದಲ್ಲಿ ಸವ್ಯಸಾಚಿಯಿಂದ ರಕ್ಷಿಸಲ್ಪಡುತ್ತಿದ್ದ ಶಿಖಂಡಿಯ ಸೈನ್ಯವಿದ್ದಿತು. ಅಗ್ರಭಾಗದಲ್ಲಿ ಸಂಚರಿಸುತ್ತಿದ್ದ ಧೃಷ್ಟದ್ಯುಮ್ನನು ಭೀಮಸೇನನಿಂದ ರಕ್ಷಿಸಲ್ಪಡುತ್ತಿದ್ದನು. ಯುಧಿಷ್ಠಿರನ ಸೇನೆಯ ದಕ್ಷಿಣಭಾಗವನ್ನು ಸಾತ್ವತಾಗ್ರಣಿಯಾದ, ಶ್ರೀಮಂತನಾದ, ಧನುಷ್ಮಂತನಾದ ಯುಯುಧಾನನು–ಇಂದ್ರನು ದೇವಸೇನೆಯನ್ನು ರಕ್ಷಿಸು ವಂತೆಯೇ–ರಕ್ಷಿಸುತ್ತಿದ್ದನು. ಯುಧಿಷ್ಠಿರರಾಜನು ಗಜಸೈನ್ಯದ ಮಧ್ಯ ಭಾಗದಲ್ಲಿದ್ದನು. ಅವನು ಕುಳಿತಿದ್ದ ರಥವು ಮಹೇಂದ್ರನ ರಥಕ್ಕೆ ಸಮಾನ ವಾಗಿದ್ದಿತು. ಯುದ್ಧಕ್ಕೆ ಬೇಕಾದ ಸಕಲಸಾಮಗ್ರಿಗಳೂ ಆ ರಥದಲ್ಲಿದ್ದುವು. ಆ ರಥವು ಸ್ವರ್ಣಮಯವಾಗಿದ್ದಿತು. ನಾನಾರತ್ನಸಮೂಹಗಳಿಂದ ಚಿತ್ರ-ವಿಚಿತ್ರವಾಗಿ ಕಾಣುತ್ತಿದ್ದಿತು. ಆ ರಥದಲ್ಲಿ ಒಂದು ಚಿನ್ನದ ಕೊಡವೂ ಮತ್ತು ಹಗ್ಗವೂ ಇದ್ದಿತು. ಆ ಸಮಯದಲ್ಲಿ ಅವನ ತಲೆಯಮೇಲೆ ಆನೆಯ ದಂತದಿಂದ ಮಾಡಿದ ಹಿಡಿಯಿದ್ದ ಶ್ವೇತಚ್ಛತ್ರಿಯು ಬಹುವಾಗಿ ಪ್ರಕಾಶಿಸುತ್ತಿದ್ದಿತು. ಮಹರ್ಷಿಗಳು ನಾನಾವಿಧವಾದ ಸ್ತೋತ್ರಗಳಿಂದ ಮಹೇಂದ್ರನಾದ ಯುಧಿಷ್ಠಿರನನ್ನು ಪ್ರಶಂಸೆಮಾಡುತ್ತಾ ಅವನ ಬಲಭಾಗ ದಲ್ಲಿ ಪ್ರದಕ್ಷಿಣಾಕಾರವಾಗಿ ಹೋಗುತ್ತಿದ್ದರು. ಶಾಸ್ತ್ರಾಧ್ಯಯನಸಂಪನ್ನರಾದ

ಪುರೋಹಿತರೂ, ಬ್ರಹ್ಮರ್ಷಿಗಳೂ ಮತ್ತು ಸಿದ್ಧಗಣಗಳೂ ಜಪ-ಮಂತ್ರೌಷಧಿಗಳಿಂದ ಕೂಡಿ ಯುಧಿಷ್ಠಿರನ ಸುತ್ತಲೂ ನಿಂತು ಶತ್ರುಗಳ ಸಂಹಾರವಾಗಲೆಂದು ಹೇಳುತ್ತಾ ಸ್ವಸ್ತಿವಾಚನಮಾಡುತ್ತಾ ಆಶೀರ್ವದಿಸುತ್ತಿದ್ದರು.

ಆ ಸಮಯದಲ್ಲಿ ದೇವರಾಜಸಮಪ್ರಭನಾದ ಕುರುಶ್ರೇಷ್ಠನಾದ ಯುಧಿಷ್ಠಿರನು ವಸ್ತ್ರಗಳನ್ನೂ, ಗೋವುಗಳನ್ನೂ, ಫಲ-ಪುಷ್ಪಗಳನ್ನೂ, ಸುವರ್ಣನಾಣ್ಯಗಳನ್ನೂ ಬ್ರಾಹ್ಮಣರಿಗೆ ದಾನಮಾಡುತ್ತಾ ಮುಂದೆ-ಮುಂದೆ ಹೋಗುತ್ತಿದ್ದನು. ಮಹಾರಾಜ! ಅರ್ಜುನನ ರಥವು ಹೇಗಿತ್ತೆಂಬುದನ್ನು ಹೇಳುವೆನು ಕೇಳು : ಅಗ್ನಿದತ್ತವಾಗಿದ್ದ ಅರ್ಜುನನ ರಥವು ಸಹಸ್ರ ಸೂರ್ಯರ ಪ್ರಕಾಶವುಳ್ಳದ್ದಾಗಿದ್ದಿತು. ರಥದ ಸುತ್ತಲೂ ನೂರಾರು ಚಿಕ್ಕ-ಚಿಕ್ಕ ಗಂಟೆಗಳಿದ್ದುವು. ಬಹುಮೂಲ್ಯವಾದ ಜಾಂಬೂನದವೆಂಬ ಚಿನ್ನದಿಂದ ಆ ರಥವು ಚಿತ್ರ-ವಿಚಿತ್ರವಾಗಿ ಅಲಂಕರಿಸಲ್ಪಟ್ಟಿದ್ದಿತು. ಅಗ್ನಿಯಂತೆ ಅವನ ರಥವೂ ದಿವ್ಯಜ್ವಾಲೆಯಿಂದ ಕೂಡಿದ್ದಿತು. ಸುದೃಢವಾದ ಚಕ್ರಗಳಿಂದಲೂ ಮತ್ತು ಬಿಳಿಯ ಕುದುರೆಗಳಿಂದಲೂ ಕೂಡಿದ್ದ ಆ ರಥವು ಬಹುವಾಗಿ ಶೋಭಿಸುತ್ತಿದ್ದಿತು. ಗಾಂಡೀವಧನುರ್ಧರನಾದ, ಬಾಣಪಾಣಿಯಾದ, ಕಪಿಧ್ವಜನಾದ ಅರ್ಜುನನು ಕೇಶವನಿಂದ (ಕಡಿವಾಣಗಳ ಗ್ರಹಣದಿಂದ) ನಿಯಂತ್ರಿತವಾಗಿದ್ದ ಆ ರಥದಲ್ಲಿ ಕುಳಿತಿದ್ದನು. ಧೃತರಾಷ್ಟ್ರ! ನನಗೆ ತಿಳಿದಿರುವಂತೆ ಅರ್ಜುನನಿಗೆ ಸಮಾನನೆನಿಸಿದ ಧನುರ್ಧರನು ಈಗ ಪೃಥ್ವಿಯಲ್ಲೇ ಬೇರೊಬ್ಬನಿಲ್ಲ. ಅವನಿಗೆ ಸಮಾನನೆನಿಸಿಕೊಳ್ಳುವವನು ಮುಂದೆಯೂ ಹುಟ್ಟಲಾರನು. ಸುಂದರವಾದ ಭುಜಗಳುಳ್ಳ ಯಾವನು ಆಯುಧಗಳಿಲ್ಲದೆಯೇ ಕೇವಲ ತನ್ನೆರಡು ಭುಜಗಳಿಂದಲೇ ಆನೆ, ಕುದುರೆ, ಕಾಲಾಳುಗಳನ್ನು ಭಸ್ಮಮಾಡಿಬಿಡಬಲ್ಲನೋ–ಅಂತಹ ಭೀಮಸೇನನು ನಿನ್ನ ಮಕ್ಕಳ ವಿಶಾಲಸೇನೆಯನ್ನು ನಿರ್ಮೂಲಮಾಡಬೇಕೆಂಬ ಛಲದಿಂದ ಬಹು ಭಯಂಕರವಾದ ರೂಪವನ್ನು ಧರಿಸಿದ್ದನು. ಭೀಮಸೇನನು ನಕುಲ-ಸಹದೇವರೊಡನೆ ವೀರರಥನಾದ ಧೃಷ್ಟದ್ಯುಮ್ನನ ರಕ್ಷಕನಾಗಿದ್ದನು. ಸಿಂಹದಂತೆ ಮತ್ತು ಗೂಳಿಯಂತೆ ಮದೋನ್ಮತ್ತನಾಗಿ ರಣರಂಗದಲ್ಲಿ ಆಟವಾಡುತ್ತಿರುವನೋ ಎಂಬಂತಿದ್ದ, ಮಹೇಂದ್ರಸಮಪರಾಕ್ರಮನಾಗಿದ್ದ, ದುರಾಸದನಾಗಿದ್ದ, ಪಾಂಡವಸೇನೆಯ ಅಗ್ರಭಾಗದಲ್ಲಿದ್ದ, ಗಜೇಂದ್ರನಂತೆ ಬಹು

ದರ್ಪಿತನಾಗಿದ್ದ ವೃಕೋದರನನ್ನು ನೋಡಿದ ನಿನ್ನ ಸೈನಿಕರು ಭಯೋದ್ವಿಗ್ನ ಚಿತ್ತರಾಗಿ ಕೆಸರಿನಲ್ಲಿ ಸಿಕ್ಕಿಕೊಂಡ ಆನೆಗಳೋಪಾದಿಯಲ್ಲಿ ಬಹುವಾಗಿ ದುಃಖಿಸಿದರು. ಆ ಸಮಯದಲ್ಲಿ ಅರ್ಜುನಸಾರಥಿಯಾದ ಶ್ರೀಕೃಷ್ಣನು ಸೈನ್ಯದ ಮಧ್ಯಭಾಗದಲ್ಲಿದ್ದ, ದುರಾಸದನಾದ, ರಾಜಪುತ್ರನಾದ, ಭರತಶ್ರೇಷ್ಠನಾದ, ಗುಡಾಕೇಶನಾದ (ನಿದ್ರೆಯನ್ನು ಜಯಿಸಿದ್ದ) ಅರ್ಜುನನನ್ನು ಕುರಿತು ಹೇಳಿದನು:



"ಅರ್ಜುನ! ಯಾವನು ತನ್ನ ಸೇನೆಯ ಅಗ್ರಭಾಗದಲ್ಲಿ ನಿಂತು ಕೋಪದಿಂದ ಕಿಡಿ-ಕಿಡಿಯಾಗಿ ನಮ್ಮ ಸೇನೆಯನ್ನು ಸಿಂಹದಂತೆಯೇ ದುರುಗುಟ್ಟಿಕೊಂಡು ನೋಡುತ್ತಿದ್ದಾನೆಯೋ–ಅವನೇ ಕುರುವಂಶಕ್ಕೆ ಧ್ವಜಪ್ರಾಯನಾದ ಭೀಷ್ಮನು. ಅವನು ಇದುವರೆಗೆ ಮುನ್ನೂರು ಅಶ್ವಮೇಧಯಾಗಗಳನ್ನು ಮಾಡಿರುತ್ತಾನೆ. ಈ ಮಹಾನುಭಾವನನ್ನು ಮೇಘಗಳು ಸೂರ್ಯನನ್ನು ಮುಚ್ಚುವಂತೆ–ಕೌರವಸೈನ್ಯಗಳು ಮುಚ್ಚಿಕೊಂಡಿವೆ. (ನಾಲ್ಕು ಕಡೆಗಳಲ್ಲಿಯೂ ನಿಂತು ರಕ್ಷಿಸುತ್ತಿವೆ.) ಅವನ ಸುತ್ತಲೂ ಇರುವ ಸೈನಿಕರನ್ನು ಸಂಹರಿಸಿ ಭರತರ್ಷಭನಾದ ಭೀಷ್ಮನೊಡನೆ ಯುದ್ಧವನ್ನಪೇಕ್ಷಿಸು ಅರ್ಜುನ!"

೨೨ನೆಯ ಅಧ್ಯಾಯವು ಮುಗಿಯಿತು.

೨೩ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ಅರ್ಜುನನು ದುರ್ಗಾದೇವಿಯನ್ನು ಸ್ತೋತ್ರಮಾಡಿದುದು : ವರಪ್ರದಾನ : ದುರ್ಗಾಸ್ತೋತ್ರಪಠನದ ಫಲಶ್ರುತಿ

"ಧೃತರಾಷ್ಟ್ರ! ಯುದ್ಧಸನ್ನದ್ಧರಾಗಿದ್ದ ನಿನ್ನ ಮಕ್ಕಳ ಅಪಾರವಾದ ಸೇನಾಸಮೂಹವನ್ನು ನೋಡಿ ಅರ್ಜುನನ ಹಿತಾರ್ಥವಾಗಿ ಶ್ರೀಕೃಷ್ಣನು ಅವನೊಡನೆ ಹೇಳಿದನು :

**ಶುಚಿರ್ಭೂತ್ವಾ ಮಹಾಬಾಹೋ ಸಂಗ್ರಾಮಾಭಿಮುಖೇ ಸ್ಥಿತಃ ।**
**ಪರಾಜಯಾಯ ಶತ್ರೂಣಾಂ ದುರ್ಗಾಸ್ತೋತ್ರಮುದೀರಯ ॥೨॥**

"ಮಹಾಬಾಹೋ! ಅರ್ಜುನ! ಸಂಗ್ರಾಮಾಭಿಮುಖನಾಗಿರುವ (ಯುದ್ಧವನ್ನು ಉಪಕ್ರಮಿಸುವುದರಲ್ಲಿರುವ) ನೀನು ಶತ್ರುಗಳನ್ನು ಪರಾಜಯ ಗೊಳಿಸುವ ಸಲುವಾಗಿ ಶುಚೀಭೂತನಾಗಿ ಪರಮಪವಿತ್ರವಾದ ದುರ್ಗಾ ಸ್ತೋತ್ರವನ್ನು ಹೇಳು." ಮಹಾರಾಜ! ಧೀಮಂತನಾದ ವಾಸುದೇವನು ಹೀಗೆಂದು ಹೇಳಿದಕೂಡಲೇ ಪಾರ್ಥನು ರಥದಿಂದಿಳಿದು ಬದ್ಧಾಂಜಲಿಯಾಗಿ ದುರ್ಗೆಯನ್ನು ಸ್ತೋತ್ರಮಾಡಿದನು.

**ನಮಸ್ತೇ ಸಿದ್ಧಸೇನಾನಿ ಆರ್ಯೇ ಮನ್ದರವಾಸಿನಿ ।**
**ಕುಮಾರಿ ಕಾಲಿ ಕಾಪಾಲಿ ಕಪಿಲೇ ಕೃಷ್ಣಪಿಙ್ಗಲೇ ॥೪॥**

**ಭದ್ರಕಾಲಿ ನಮಸ್ತುಭ್ಯಂ ಮಹಾಕಾಲಿ ನಮೋಽಸ್ತು ತೇ ।**
**ಚಣ್ಡಿ ಚಣ್ಡೇ ನಮಸ್ತುಭ್ಯಂ ತಾರಿಣಿ ವರವರ್ಣಿನಿ ॥೫॥**

**ಕಾತ್ಯಾಯನಿ ಮಹಾಭಾಗೇ ಕರಾಲಿ ವಿಜಯೇ ಜಯೇ ।**
**ಶಿಖಿಪಿಚ್ಛಧ್ವಜಧರೇ ನಾನಾಭರಣಭೂಷಿತೇ ॥೬॥**

**ಅಟ್ಟಶೂಲಪ್ರಹರಣೇ ಖಡ್ಗಖೇಟಕಧಾರಿಣಿ ।**
**ಗೋಪೇನ್ದ್ರಸ್ಯಾನುಜೇ ಜ್ಯೇಷ್ಠೇ ನನ್ದಗೋಪಕುಲೋದ್ಭವೇ ॥೭॥**

**ಮಹಿಷಾಸೃಕ್ಪ್ರಿಯೇ ನಿತ್ಯಂ ಕೌಶಿಕಿ ಪೀತವಾಸಿನಿ ।**
**ಅಟ್ಟಹಾಸೇ ಕೋಕಮುಖೇ ನಮಸ್ತೇಽಸ್ತು ರಣಪ್ರಿಯೇ ॥೮॥**

ಉಮೇ ಶಾಕಮ್ಭರಿ ಶ್ವೇತೇ ಕೃಷ್ಣೇ ಕೈಟಭನಾಶಿನಿ ।
ಹಿರಣ್ಯಾಕ್ಷಿ ವಿರೂಪಾಕ್ಷಿ ಸುಧೂಮ್ರಾಕ್ಷಿ ನಮೋಽಸ್ತು ತೇ ॥೯॥

ವೇದಶ್ರುತಿ ಮಹಾಪುಣ್ಯೇ ಬ್ರಹ್ಮಣ್ಯೇ ಜಾತವೇದಸಿ ।
ಜಮ್ಬೂಕಟಕಚೈತ್ಯೇಷು ನಿತ್ಯಂ ಸನ್ನಿಹಿತಾಲಯೇ ॥೧೦॥

ತ್ವಂ ಬ್ರಹ್ಮವಿದ್ಯಾ ವಿದ್ಯಾನಾಂ ಮಹಾನಿದ್ರಾ ಚ ದೇಹಿನಾಮ್ ।
ಸ್ಕನ್ದಮಾತರ್ಭಗವತಿ ದುರ್ಗೇ ಕಾನ್ತಾರವಾಸಿನಿ ॥೧೧॥

ಸ್ವಾಹಾಕಾರಃ ಸ್ವಧಾ ಚೈವ ಕಲಾ ಕಾಷ್ಠಾ ಸರಸ್ವತೀ ।
ಸಾವಿತ್ರಿ ವೇದಮಾತಾ ಚ ತಥಾ ವೇದಾನ್ತ ಉಚ್ಯತೇ ॥೧೨॥

ಸ್ತುತಾಸಿ ತ್ವಂ ಮಹಾದೇವಿ ವಿಶುದ್ಧೇನಾನ್ತರಾತ್ಮನಾ ।
ಜಯೋ ಭವತು ಮೇ ನಿತ್ಯಂ ತ್ವತ್ಪ್ರಸಾದಾದ್ರಣಾಜಿರೇ ॥೧೩॥

ಕಾನ್ತಾರಭಯದುರ್ಗೇಷು ಭಕ್ತಾನಾಂ ಚಾಲಯೇಷು ಚ ।
ನಿತ್ಯಂ ವಸಸಿ ಪಾತಾಲೇ ಯುದ್ಧೇ ಜಯಸಿ ದಾನವಾನ್ ॥೧೪॥

ತ್ವಂ ಜಮ್ಭನೀ ಮೋಹಿನೀ ಚ ಮಾಯಾ ಹ್ರೀಃ ಶ್ರೀಸ್ತಥೈವ ಚ ।
ಸಂಧ್ಯಾ ಪ್ರಭಾವತೀ ಚೈವ ಸಾವಿತ್ರೀ ಜನನೀ ತಥಾ ॥೧೫॥

ತುಷ್ಟಿಃ ಪುಷ್ಟಿರ್ಧೃತಿರ್ದೀಪ್ತಿಶ್ಚನ್ದ್ರಾದಿತ್ಯವಿವರ್ಧಿನೀ ।
ಭೂತಿರ್ಭೂತಿಮತಾಂ ಸಂಖ್ಯೇ ವೀಕ್ಷ್ಯಸೇ ಸಿದ್ಧಚಾರಣೈಃ ॥೧೬॥

"ಹೇ ಅಂಬ! ಯೋಗಿಗಣನಾಯಕಿಯೇ! ಆರ್ಯಳೇ! ಮಂದರಗಿರಿ ವಾಸಿನಿಯೇ! ನಿನಗೆ ನಮಸ್ಕಾರಮಾಡುತ್ತೇನೆ. ನೀನು ಅವಿಪ್ಲುತಬ್ರಹ್ಮ ಚರ್ಯೆಯಲ್ಲಿರತಕ್ಕವಳು, ಜರಾ-ಮರಣರಹಿತಳು, ಕಾಲಶಕ್ತಿಯು, ರುದ್ರ ಪತ್ನಿಯು, ಕಪಿಲವರ್ಣದವಳು (ಕಂದುಬಣ್ಣದವಳು) ಅರ್ಥಾತ್ ಕೃಷ್ಣ ಪಿಂಗಳವರ್ಣದವಳು. ಭದ್ರಕಾಳಿಯೇ ನೀನು. (ಭಕ್ತರಿಗೆ ಮಂಗಳ ವನ್ನುಂಟುಮಾಡತಕ್ಕವಳು) ನಿನಗೆ ನಮಸ್ಕಾರಮಾಡುತ್ತೇನೆ. ಕಾಲರೂಪಳಾದ ಮಹಾಕಾಳಿಯು ನೀನು. ನಿನಗೆ ನಮಸ್ಕಾರಮಾಡುತ್ತೇನೆ. ಚಂಡನ (ಕಾಲಾಂತಕನ ) ಪತ್ನಿಯಾದ ಚಂಡಿಯೂ ನೀನೇ ಆಗಿರುವೆ. ದುಷ್ಟರ ಮೇಲೆ ಪ್ರಚಂಡಕೋಪತಾಳುವುದರಿಂದ ನಿನ್ನನ್ನು ಚಂಡಾ ಎಂದೂ ಕರೆಯು ತ್ತಾರೆ. ನೀನು ಪ್ರೌಢೆಯು. (ಸರ್ವಸಮರ್ಥಳು.) ನಿನಗೆ ನಮಸ್ಕಾರಮಾಡು

ತ್ತೇನೆ. ನೀನು ಭವತಾರಿಣಿಯಾಗಿರುವೆ. ವರವರ್ಣಿನಿಯಾಗಿರುವೆ. ಸರ್ವ ಸೌಭಾಗ್ಯಲಕ್ಷಣೋಪೇತಳಾದ ಸ್ತ್ರೀಯಾಗಿರುವೆ. ದಿವ್ಯವಾದ ಶರೀರಕಾಂತಿ ಯನ್ನು ಹೊಂದಿರುವೆ. ಕತಗೋತ್ರೋದ್ಭವಳಾಗಿರುವುದರಿಂದ ನಿನ್ನನ್ನು ಕಾತ್ಯಾಯಿನೀ ಎಂದೂ ಕರೆಯುತ್ತಾರೆ. ನೀನು ಮಹಾಭಾಗಳು. (ಪರಮ ಪೂಜ್ಯಳು.) ಕರಾಲೀ (ಮಹಾಕ್ರೂರಳು), ಜಯಪ್ರದಳು, ಜಯಸ್ವರೂಪಳು. ನೀನು ನವಿಲುಗರಿಯ ಧ್ವಜವನ್ನು ಹೊಂದಿರುವೆ. ನಾನಾಭರಣ ಭೂಷಿತಳಾಗಿರುವೆ. ನೀನು ಭಯಂಕರವಾದ ತ್ರಿಶೂಲಾಯುಧವನ್ನು ಧರಿ ಸಿರುವೆ. ಖಡ್ಗವನ್ನೂ, ಗುರಾಣಿಯನ್ನೂ ಧರಿಸಿರುವೆ. ನಂದಗೋಪವಂಶದಲ್ಲಿ ನೀನು ಅವತರಿಸಿದ್ದೆ. ಆದುದರಿಂದಲೇ ನೀನು ಗೋಪೇಂದ್ರನಾದ ಶ್ರೀಕೃಷ್ಣನ ತಂಗಿಯಾಗಿರುವೆ. ಮಹಿಷಾಸುರನ ಶರೀರದಿಂದ ಹರಿಯುತ್ತಿರುವ ರಕ್ತವನ್ನು ನೋಡಿದ ನೀನು ಪ್ರಸನ್ನಳಾದೆ. ಕುಶಿಕವಂಶದಲ್ಲಿ ಒಮ್ಮೆ ನೀನು ಹುಟ್ಟಿದ್ದೆಯಾದುದರಿಂದ ನಿನ್ನನ್ನು ಕೌಶಿಕೀ ಎಂದೂ ಕರೆಯುತ್ತಾರೆ. (ಪಾರ್ವತಿಯ ದೇಹಕೋಶದಿಂದ ಹೊರಬಂದವಳಾದುದರಿಂದಲೂ ಕೌಶಿಕೀ ಎಂಬ ಹೆಸರು ಬಂದಿದೆ.) ನೀನು ಪೀತಾಂಬರವನ್ನು ಧರಿಸಿರುವೆ. ನೀನು ಅಟ್ಟಹಾಸದಿಂದ ಕೂಡಿರತಕ್ಕವಳು. ನಿನ್ನ ಮುಖಾರವಿಂದವು ಯಾವಾಗಲೂ ವಿಕಸಿತವಾಗಿಯೇ ಇರುವುದು. ಕೋಕಮುಖಳು. (ಕೋಕ ಎಂದರೆ ಚಕ್ರವಾಕ, ಚಕ್ರದಂತೆ ದುಂಡಾದ ಮುಖವುಳ್ಳವಳು.) ನೀನು ರಣಪ್ರಿಯಳು. ಅಂತಹ ನಿನಗೆ ನಮಸ್ಕಾರಮಾಡುತ್ತೇನೆ. ಉಮಾದೇವಿಯೂ ನೀನೇ ಆಗಿರುತ್ತೀಯೆ. ನಿನ್ನನ್ನು ಶಾಕಂಭರೀ ಎಂದೂ ಕರೆಯುತ್ತಾರೆ. ಮಹೇಶ್ವರಸ್ವರೂಪಳು, ವಾಸುದೇವನ ರೂಪವೂ ಸಹ ನಿನಗಿರುವುದು. ಕೈಟಭಾಸುರನನ್ನು ಸಂಹಾರಮಾಡಿದ ಮಹಾಶಕ್ತಿಶಾಲಿನಿಯೂ ನೀನೇ ಆಗಿರುತ್ತೀಯೆ. ನೀನು ಹಿರಣ್ಯಾಕ್ಷಿಯೂ (ಪೀತನೇತ್ರಳು) ವಿರೂಪಾಕ್ಷಿಯೂ (ವಿವಿಧ ರೂಪ ಯುಕ್ತನೇತ್ರೆಯೂ) ಆಗಿರುವೆ. ಧೂಮ್ರಾಕ್ಷಿಯೂ (ಬೂದುಬಣ್ಣದ ಕಣ್ಣು ಗಳುಳ್ಳವಳೂ) ಆದ ನಿನಗೆ ನಮಸ್ಕಾರಮಾಡುತ್ತೇನೆ. ನೀನು ವೇದಶ್ರುತಿ ಸ್ವರೂಪಳಾಗಿರುವೆ. ನಿನ್ನ ಸ್ವರೂಪವು ಅತ್ಯಂತಪವಿತ್ರವಾದುದು. ವೇದ ಪ್ರಿಯಳೂ ಬ್ರಾಹ್ಮಣಪ್ರಿಯಳೂ ಆಗಿರುವೆ. ಜಾತವೇದಾಗ್ನಿಯಲ್ಲಿರುವ ಶಕ್ತಿಯು ನಿನ್ನಲ್ಲಿಯೂ ಇದೆ. ಜಂಬೂದ್ವೀಪದ ರಾಜಧಾನಿಗಳಲ್ಲಿ, ದೇವಾ

ಲಯಗಳಲ್ಲಿ ನಿನಗೆ ಶಾಶ್ವತವಾದ ಸ್ಥಾನವಿದೆ. ನೀನು ವಿದ್ಯೆಗಳಲ್ಲಿ ಬ್ರಹ್ಮ ವಿದ್ಯೆಯಾಗಿರುವೆ. ಭಗವತಿ! ನೀನು ದೇವಸೇನಾನಿಯಾದ ಸ್ಕಂದನ ತಾಯಿ. ದುರ್ಗಮವಾದ ಕಾಡುಪ್ರದೇಶದಲ್ಲಿ ನೀನು ವಾಸಮಾಡುವುದರಿಂದ ನಿನ್ನನ್ನು ದುರ್ಗಾ ಎಂದೂ ಕರೆಯುತ್ತಾರೆ. ನೀನು ಸ್ವಾಹಾಕಾರ-ಸ್ವಧಾಕಾರ ಸ್ವರೂಪಳಾಗಿರುವೆ. (ಸರ್ವಕರ್ಮಸ್ವರೂಪಿಣಿಯಾಗಿರುವೆ.) ಕಲಾ-ಕಾಷ್ಠಾ ಸ್ವರೂಪಿಣಿಯೂ ಆಗಿರುವೆ. (ಸರ್ವಸ್ಥೂಲ-ಸೂಕ್ಷ್ಮ-ಕಾಲರೂಪಳಾಗಿರುವೆ.) ಸರಸ್ವತೀ, ಸಾವಿತ್ರೀ, ವೇದಮಾತೇ—ಎಲ್ಲವೂ ನೀನೇ ಆಗಿರುವೆಯೆಂದು ವೇದಾಂತಗಳು ಉದ್ಘೋಷಿಸುತ್ತವೆ. (ಸರ್ವವಾಙ್ಮಯರೂಪಳೂ ನೀನೇ ಆಗಿರುವೆ.) ಮಹಾದೇವಿ! ನಿನ್ನನ್ನು ನಾನು ವಿಶುದ್ಧವಾದ ಅಂತರಂಗದಿಂದ ಸ್ತೋತ್ರಮಾಡುತ್ತಿದ್ದೇನೆ. ನಿನ್ನ ಅನುಗ್ರಹದಿಂದಾಗಿ ಯುದ್ಧರಂಗದಲ್ಲಿ ನನಗೆ ಅನುದಿನವೂ ಜಯವು ಲಭಿಸುವಂತಾಗಲಿ. ನೀನು ಘೋರವಾದ ಅರಣ್ಯಗಳಲ್ಲಿಯೂ, ಭಯಂಕರವಾದ ದುರ್ಗಗಳಲ್ಲಿಯೂ, ಭಕ್ತರ ಮನೆಗಳ ಲ್ಲಿಯೂ ಅಥವಾ ಭಕ್ತರ ಹೃದಯಗಳಲ್ಲಿಯೂ, ಪಾತಾಲದಲ್ಲಿಯೂ– ನಿತ್ಯವೂ ವಾಸಮಾಡುವೆ. ಯುದ್ಧದಲ್ಲಿ ದಾನವರನ್ನು ಪರಾಜಯಗೊಳಿಸುವೆ. ನೀನು ಜಂಭನಿಯಾಗಿರುವೆ. ತಂದ್ರಾ (ತೂಕಡಿಕೆ) ರೂಪಳಾಗಿರುವೆ. ಮೋಹಿನಿಯಾಗಿರುವೆ. (ನಿದ್ರಾರೂಪಳಾಗಿರುವೆ.) ಮಾಯಾರೂಪಳಾಗಿ ರುವೆ. (ಅದ್ಭುತದರ್ಶನಳಾಗಿರುವೆ.) ಹ್ರೀಸ್ವರೂಪಳಾಗಿರುವೆ. (ಲಜ್ಜಾರೂಪ ಳಾಗಿರುವೆ.) ಶ್ರೀ (ಲಕ್ಷ್ಮೀ) ಸ್ವರೂಪಳಾಗಿರುವೆ. (ವಿದ್ಯಾತಪೋದಮಾದಿ ಸಮೃದ್ಧಿರೂಪಳಾಗಿರುವೆ.) ಸಂಧ್ಯಾ ಎಂದರೆ ಆದಿಯಲ್ಲಿಯೂ ಮತ್ತು ಅಂತ್ಯ ದಲ್ಲಿಯೂ ಹುಟ್ಟತಕ್ಕವಳು ನೀನು. (ಸೃಷ್ಟಿ-ಪ್ರಳಯಗಳನ್ನು ಮಾಡುವವಳು ನೀನೇ.) ಪ್ರಭಾವತೀ, ಚಂದ್ರ-ಸೂರ್ಯಪ್ರಭಾಯುಕ್ತವಾದ ಅಹೋ ರಾತ್ರಸ್ವರೂಪಳು. ಸಾವಿತ್ರಿಯು, ಸೂರ್ಯಸಂಬಂಧಿಯಾದ ಪ್ರಭಾ ರೂಪಳು, ಪ್ರಕಾಶನಶಕ್ತಿರೂಪಳು. ನೀನೇ ಲೋಕಜನನಿಯು. ತಾಯಿಯಂತೆ ಸಕಲಪ್ರಾಣಿಗಳನ್ನೂ ಪರಿಪಾಲಿಸತಕ್ಕವಳು. ತುಷ್ಟಿರೂಪಿಣಿಯು. (ಸಂತೋಷಸ್ವರೂಪಳು.) ಪುಷ್ಟಿ (ವೃದ್ಧಿ) ಸ್ವರೂಪಳು. ಧೃತಿ (ಧೈರ್ಯ) ಸ್ವರೂಪಳು. ದೀಪ್ತಿ (ಜ್ಯೋತಿ) ಸ್ವರೂಪಳು. ಚಂದ್ರಾದಿತ್ಯರ ದೀಪ್ತಿ ಯನ್ನು ಹೆಚ್ಚಿಸತಕ್ಕವಳು. ಭೂತಿಮಂತರಾದ (ಐಶ್ವರ್ಯವಂತರಾದ)

ಮಹೇಶ್ವರಾದಿಗಳಿಗೂ ನೀನು ಐಶ್ವರ್ಯಸ್ವರೂಪಳು. ಯುದ್ಧಸಮಯದಲ್ಲಿ ನಿನ್ನನ್ನು ನೋಡಿ ಸಿದ್ಧ-ಚಾರಣರು ಸ್ತೋತ್ರಮಾಡುತ್ತಾರೆ. (ವ್ಯಾಖ್ಯಾನಕಾರರ ರೀತ್ಯಾ : **ಸಂಖ್ಯೇ=ಸಮ್ಯಕ್‌ಖ್ಯಾನಂ ಪ್ರಕಾಶನಂ ಯತ್ರ-ತಸ್ಮಿನ್ ಆತ್ಮಾನಾತ್ಮವಿವೇಕರೂಪೇ ಸಮಾಧೌ**-ಸಮ್ಯಕ್ಪ್ರಕಾಶವು ಎಲ್ಲಿರುತ್ತದೆಯೋ ಅದು ಸಂಖ್ಯ ಅರ್ಥಾತ್ ಸಮಾಧಿಭಾವ. ಸಮಾಧಿಭಾವದಲ್ಲಿ ಸಿದ್ಧರು ಎಂದರೆ ಜೀವನ್ಮುಕ್ತರು, ಚಾರಣರು, ಆಜಾನಸಿದ್ಧರು ನಿನ್ನನ್ನು ನೋಡುತ್ತಾರೆ.")

ಧೃತರಾಷ್ಟ್ರ! ಮಾನವರ ಮೇಲೆ ಅಗಾಧವಾದ ವಾತ್ಸಲ್ಯವನ್ನಿಟ್ಟಿರುವ ದುರ್ಗಾದೇವಿಯು, ಪಾರ್ಥನು ವಿಶುದ್ಧವಾದ ಅಂತರಾತ್ಮದಿಂದ ಮಾಡಿದ ಸ್ತೋತ್ರದಿಂದ ಅವನಲ್ಲಿದ್ದ ಅಪಾರಭಕ್ತಿಯನ್ನು ಕಂಡುಕೊಂಡು, ಶ್ರೀಕೃಷ್ಣನ ಮುಂಭಾಗದಲ್ಲಿ ಅಂತರಿಕ್ಷದಲ್ಲಿಯೇ ಪ್ರತ್ಯಕ್ಷಳಾಗಿ ನಿಂತು ಪಾರ್ಥನನ್ನು ಕುರಿತು ಹೇಳಿದಳು :

**ಸ್ವಲ್ಪೇನೈವ ತು ಕಾಲೇನ ಶತ್ರೂಞ್ಜೇಷ್ಯಸಿ ಪಾಣ್ಡವ ।**
**ನರಸ್ತ್ವಮಸಿ ದುರ್ಧರ್ಷ ನಾರಾಯಣಸಹಾಯವಾನ್ ।**
**ಅಜೇಯಸ್ತ್ವಂ ರಣೇಽರೀಣಾಮಪಿ ವಜ್ರಭೃತಃ ಸ್ವಯಮ್ ॥೧೮॥**

"ಪಾಂಡುನಂದನ! ನೀನು ಅತ್ಯಲ್ಪಕಾಲದಲ್ಲಿಯೇ ಶತ್ರುಗಳನ್ನು ಪರಾಜಯಗೊಳಿಸುವೆ. ದುರ್ಧರ್ಷನೇ! ನೀನು ಸಾಕ್ಷಾತ್ ನರನೇ ಆಗಿರುವೆ. ಶ್ರೀಕೃಷ್ಣನೇ ನಾರಾಯಣನು. ಅವನೇ ಇಂದು ನಿನಗೆ ಸಹಾ ಯಕನಾಗಿದ್ದಾನೆ. ಯುದ್ಧದಲ್ಲಿ ನೀನು ಯಾವಾಗಲೂ ಶತ್ರುಗಳಿಂದ ಜಯಿ ಸಲ್ಪಡತಕ್ಕವನಲ್ಲ. ಸಾಕ್ಷಾತ್ ಇಂದ್ರನೇ ನಿನ್ನೊಡನೆ ಯುದ್ಧಕ್ಕೆ ಬಂದರೂ ಸಹ ನಿನ್ನನ್ನವನು ಪರಾಜಯಗೊಳಿಸಲಾರನು."

ಮಹಾರಾಜ! ಹೀಗೆಂದು ಹೇಳಿ ವರದೆಯಾದ ದುರ್ಗಾದೇವಿಯು ಅಂತರ್ಹಿತಳಾದಳು. ದೇವಿಯು ದಯಪಾಲಿಸಿದ ಆ ವರದಿಂದಾಗಿ ಅರ್ಜುನನು ತಾನು ವಿಜಯಿಯಾದೆನೆಂದೇ ಭಾವಿಸಿದನು. ಅನಂತರದಲ್ಲಿ ಪಾರ್ಥನು ಪರಮಸುಂದರವಾದ ತನ್ನ ರಥವನ್ನು ಪುನಃ ಹತ್ತಿ ಕುಳಿತನು. ಒಂದೇ

ರಥದಲ್ಲಿ ಕುಳಿತಿದ್ದ ಕೃಷ್ಣಾರ್ಜುನರು ತಮ್ಮಲ್ಲಿದ್ದ ದಿವ್ಯವಾದ ಶಂಖಗಳನ್ನು ಊದಿದರು.

**ಯ ಇದಂ ಪಠತೇ ಸ್ತೋತ್ರಂ ಕಲ್ಯ ಉತ್ಥಾಯ ಮಾನವಃ ।**
**ಯಕ್ಷರಕ್ಷಃಪಿಶಾಚೇಭ್ಯೋ ನ ಭಯಂ ವಿದ್ಯತೇ ಸದಾ ॥೨೨॥**

ಪ್ರಾತಃಕಾಲದಲ್ಲೆದ್ದು ಯಾವನು ಅರ್ಜುನಕೃತವಾದ ಈ ದುರ್ಗಾ ಸ್ತೋತ್ರವನ್ನು ಪಠಿಸುತ್ತಾನೆಯೋ ಅವನಿಗೆ ಯಕ್ಷ-ರಾಕ್ಷಸ-ಪಿಶಾಚರಿಂದ ಯಾವಾಗಲೂ ಯಾವ ವಿಧವಾದ ಭಯವೂ ಇರುವುದಿಲ್ಲ.

**ನ ಚಾಪಿ ರಿಪವಸ್ತೇಭ್ಯಃ ಸರ್ಪಾದ್ಯಾ ಯೇ ಚ ದಂಷ್ಟ್ರಿಣಃ ।**
**ನ ಭಯಂ ವಿದ್ಯತೇ ತಸ್ಯ ಸದಾ ರಾಜಕುಲಾದಪಿ ।**
**ವಿವಾದೇ ಜಯಮಾಪ್ನೋತಿ ಬದ್ಧೋ ಮುಚ್ಯೇತ ಬನ್ಧನಾತ್ ॥೨೩॥**

ದುರ್ಗಾಸ್ತೋತ್ರವನ್ನು ಪಠನಮಾಡುವವರಿಗೆ ಶತ್ರುಗಳೇ ಇರುವು ದಿಲ್ಲ. ಸರ್ಪವೇ ಮೊದಲಾದ ವಿಷದ ಹಲ್ಲುಗಳಿರುವ ಪ್ರಾಣಿಗಳಿಂದಲೂ ಭಯವಿರುವುದಿಲ್ಲ. ರಾಜರಿಂದಲೂ ಭಯವಿರುವುದಿಲ್ಲ. ಸ್ತೋತ್ರಪಾಠಕನು ವಿವಾದದಲ್ಲಿ ಜಯಗಳಿಸುತ್ತಾನೆ. ಯಾವುದಾದರೂ ಕಾರಣದಿಂದ ಬಂಧಿತನಾಗಿದ್ದಲ್ಲಿ ಈ ದುರ್ಗಾಸ್ತೋತ್ರವನ್ನು ಪಠಿಸುವುದರಿಂದ ಬಂಧ ಮುಕ್ತನಾಗುತ್ತಾನೆ.

**ದುರ್ಗಂ ತರತಿ ಚಾವಶ್ಯಂ ತಥಾ ಚೌರೈರ್ವಿಮುಚ್ಯತೇ ।**
**ಸಂಗ್ರಾಮೇ ವಿಜಯೇನ್ನಿತ್ಯಂ ಲಕ್ಷ್ಮೀಂ ಪ್ರಾಪ್ನೋತಿ ಕೇವಲಾಮ್ ॥೨೪॥**

ದುರ್ಗಾಸ್ತೋತ್ರದ ಪಠನವನ್ನು ಅನನ್ಯಭಕ್ತಿಯಿಂದ ಮಾಡತಕ್ಕವನು ಅತಿದುರ್ಗಮವಾದ ಸಂಕಷ್ಟದಿಂದಲೂ ಪಾರಾಗುತ್ತಾನೆ. ಕಳ್ಳರಿಂದಲೂ ಡಕಾ ಯಿತರಿಂದಲೂ ಪಾರಾಗುತ್ತಾನೆ. ದುರ್ಗೆಯನ್ನು ಸ್ತುತಿಸಿ ಯುದ್ಧಮಾಡು ವವನಿಗೆ ವಿಜಯವು ನಿಶ್ಚಯ. ದುರ್ಗಾದೇವಿಯ ಅನುಗ್ರಹದಿಂದಾಗಿ ವಿಶುದ್ಧ ಲಕ್ಷ್ಮಿಯನ್ನೂ (ದೋಷರಹಿತವಾದ ಐಶ್ವರ್ಯವನ್ನು ) ಪಡೆಯುತ್ತಾನೆ.

**ಆರೋಗ್ಯಬಲಸಮ್ಪನ್ನೋ ಜೀವೇದ್ವರ್ಷಶತಂ ತಥಾ ।**
**ಏತದ್ದೃಷ್ಟಂ ಪ್ರಸಾದಾತ್ತು ಮಯಾ ವ್ಯಾಸಸ್ಯ ಧೀಮತಃ ॥೨೫॥**

ದುರ್ಗಾದೇವಿಯ ಸ್ತೋತ್ರವನ್ನು ಅನುದಿನವೂ ಪಠನಮಾಡುವವನು ಆರೋಗ್ಯಬಲಸಂಪನ್ನನಾಗಿ ನೂರು ವರ್ಷಗಳ ಪರ್ಯಂತವಾಗಿ ಬದುಕಿರುತ್ತಾನೆ. ಧೀಮಂತರಾದ ವ್ಯಾಸರ ಅನುಗ್ರಹದಿಂದಾಗಿ ನಾನು ಅರ್ಜುನನು ದೇವಿಯನ್ನು ಸ್ತೋತ್ರಮಾಡಿದ ದೃಶ್ಯವನ್ನು ಮಾತ್ರವಲ್ಲದೇ–ದೇವಿಯನ್ನೂ ಸಂದರ್ಶಿಸಿದೆನು, ಮಹಾರಾಜ! ಕೋಪಾವಿಷ್ಟರಾಗಿರುವ, ದುರಾತ್ಮರಾದ ನಿನ್ನ ಮಕ್ಕಳು ಕೇವಲ ಮೋಹಪರವಶರಾಗಿರುವುದರಿಂದ ಕೃಷ್ಣಾರ್ಜುನರು ಸಾಕ್ಷಾತ್ ನರ-ನಾರಾಯಣಋಷಿಗಳೆಂಬುದನ್ನು ಮನಗಂಡಿಲ್ಲ. ಕಾಲಪಾಶದಿಂದ ಬಂಧಿತರಾಗಿರುವ ಕಾರಣ ನಿನ್ನ ಮಕ್ಕಳು ಆಪ್ತವಾಕ್ಯವನ್ನು ಕೇಳುವ ಇಚ್ಛೆಯುಳ್ಳವರಾಗಲಿಲ್ಲ. ವ್ಯಾಸರು, ನಾರದರು, ಕಣ್ವರು, ಪರಶುರಾಮ ಮುಂತಾದವರು ಅನೇಕ ಬಗೆಯಲ್ಲಿ ಸಮಾಧಾನ ಹೇಳಿ ನಿನ್ನ ಮಗನನ್ನು ಪಾಂಡವರೊಡನೆ ಯುದ್ಧಮಾಡಕೂಡದೆಂದು ತಡೆದರು. ಆದರೆ ಅವರ ಆಪ್ತವಾಕ್ಯಗಳನ್ನು ನಿನ್ನ ಮಗನು ಪರಿಗ್ರಹಿಸಲಿಲ್ಲ. ಈ ಒಂದು ಮಾತು ನಿಶ್ಚಯ, ಧೃತರಾಷ್ಟ್ರ!

**ಯತ್ರ ಧರ್ಮೋ ಧೃತಿಃ ಕಾನ್ತಿರ್ಯತ್ರ ಹ್ರೀಃ ಶ್ರೀಸ್ತಥಾ ಮತಿಃ ।**
**ಯತೋ ಧರ್ಮಸ್ತತಃ ಕೃಷ್ಣೋ ಯತಃ ಕೃಷ್ಣಸ್ತತೋ ಜಯಃ ॥**

ನ್ಯಾಯೋಚಿತವಾದ ವ್ಯವಹಾರ, ತೇಜಸ್ಸು, ಕಾಂತಿ, ಲಜ್ಜೆ, ಸಂಪತ್ತು, ಒಳ್ಳೆಯ ಬುದ್ಧಿ ಮತ್ತು ಧರ್ಮ–ಇವುಗಳು ಎಲ್ಲಿರುತ್ತವೆಯೋ ಅಲ್ಲಿ ಶ್ರೀಕೃಷ್ಣನ ಸಾನ್ನಿಧ್ಯವಿರುತ್ತದೆ. ಯಾವ ಪಕ್ಷದಲ್ಲಿ ಶ್ರೀಕೃಷ್ಣನಿರುತ್ತಾನೆಯೋ ಆ ಪಕ್ಷಕ್ಕೇ ಜಯವು ಲಭಿಸುತ್ತದೆ. (ಧರ್ಮವಿದ್ದಲ್ಲಿ ಧೈರ್ಯ-ಕಾಂತಿಗಳಿರುತ್ತವೆ. ಲಜ್ಜೆಯಿರುವ ಕಡೆಯಲ್ಲಿ ಸಂಪತ್ತು-ಬುದ್ಧಿಗಳಿರುತ್ತವೆ. ಎಲ್ಲಿ ಧರ್ಮವಿರುವುದೋ ಶ್ರೀಕೃಷ್ಣನೂ ಆ ಪಕ್ಷದಲ್ಲಿಯೇ ಇರುತ್ತಾನೆ. ಶ್ರೀಕೃಷ್ಣನಿರುವ ಪಕ್ಷಕ್ಕೇ ಜಯವಾಗುತ್ತದೆ.)"

೨೩ನೆಯ ಅಧ್ಯಾಯವು ಮುಗಿಯಿತು.

# ಸೈನಿಕರ ಹರ್ಷೋತ್ಸಾಹಗಳ ವಿಷಯದಲ್ಲಿ ಧೃತರಾಷ್ಟ್ರ-ಸಂಜಯರ ಸಂವಾದ

ಧೃತರಾಷ್ಟ್ರನು ಸಂಜಯನನ್ನು ಪ್ರಶ್ನಿಸುತ್ತಾನೆ :

"ಸಂಜಯ! ಆ ಸಮಯದಲ್ಲಿ ಯಾವ ಪಕ್ಷದ ಸೈನಿಕರು ಬಹಳ ಪ್ರಹೃಷ್ಟರಾಗಿ ಯುದ್ಧಮಾಡಲು ಮುನ್ನುಗ್ಗಿ ಬರುತ್ತಿದ್ದರು? ಯುದ್ಧಮಾಡಲು ಉತ್ಸಾಹವಿದ್ದೂ ಕಾರ್ಯೋನ್ಮುಖರಾಗದಿದ್ದವರು ಯಾರು? ಮತ್ತು ಯುದ್ಧಮಾಡುವುದರಲ್ಲಿ ನಿರುತ್ಸಾಹಿಗಳಾಗಿದ್ದವರಾರು? ಹೃದಯ ಕಂಪಿಯಾಗಿದ್ದ ಆ ಯುದ್ಧದಲ್ಲಿ ಮೊದಲು ಶಸ್ತ್ರಪ್ರಯೋಗಮಾಡಿದವರು ನನ್ನವರೇ ಅಥವಾ ಪಾಂಡವರೇ? ಯುದ್ಧವು ಮೊದಲು ಯಾರಿಂದ ಪ್ರಾರಂಭವಾಯಿತು? ಯಾರ ಸೇನೆಯ ಮಧ್ಯದಲ್ಲಿ ಸುಗಂಧಮಯವಾದ ವಾತಾವರಣವಿದ್ದಿತು? ಯಾವ ಸೇನೆಯ ಮೇಲೆ ಪುಷ್ಪವೃಷ್ಟಿಯಾಯಿತು? ಗರ್ಜನೆಮಾಡುತ್ತಿದ್ದ ಯಾವ ಯೋಧರ ಮಾತುಗಳು ಉತ್ಸಾಹಪೂರ್ಣವಾಗಿಯೂ, ಸುದೃಢವಾಗಿಯೂ, ಉದಾರವಾಗಿಯೂ ಇದ್ದಿತು?"

"ಮಹಾರಾಜ! ಆ ಸಮಯದಲ್ಲಿ ಉಭಯಪಕ್ಷಗಳ ಸೇನೆಗಳೂ ಪ್ರಹೃಷ್ಟವಾಗಿಯೇ ಇದ್ದುವು. ಉಭಯಪಕ್ಷಗಳ ಸೇನಾವಲಯಗಳಲ್ಲಿಯೂ ಸುಗಂಧಯುಕ್ತವಾತಾವರಣವೇ ಇದ್ದಿತು. ಉಭಯಪಕ್ಷಗಳ ಸೇನೆಗಳ ಮೇಲೂ ಪುಷ್ಪವೃಷ್ಟಿಯಾಗುತ್ತಿದ್ದಿತು. ಸಂಘಟಿತರಾದ, ವ್ಯೂಹಬದ್ಧರಾದ, ಯುದ್ಧೋತ್ಸಾಹಿಗಳಾದ ಉಭಯಪಕ್ಷಗಳ ಯೋಧರ ಸಂಘರ್ಷಣೆ ಯಿಂದಾಗಿ ಆ ಸಮಯದಲ್ಲಿ ದೊಡ್ಡ ವಿನಾಶವೇ ಸಂಭವಿಸಿತು. ಶಂಖ, ಭೇರಿ–ಇವೇ ಮೊದಲಾದ ವಾದ್ಯಗಳ ಭಯಂಕರಘೋಷವು ರಣವೀರರಾದ ಶೂರಕ್ಷತ್ರಿಯರ ಸಿಂಹಗರ್ಜನೆಗಳೊಡನೆ ಸಮ್ಮಿಳಿತವಾದೊಡನೆಯೇ ಎರಡು ಪಕ್ಷಗಳ ಸೈನ್ಯಗಳಿಗೂ ದೊಡ್ಡ ಘರ್ಷಣೆಯಾಯಿತು. ಅದುವರೆಗೂ ಅನ್ಯೋನ್ಯವಾಗಿ ದುರುಗುಟ್ಟಿಕೊಂಡು ನೋಡುತ್ತಿದ್ದ ಯೋಧರಿಗೂ, ಘೀಂಕರಿಸುತ್ತಿದ್ದ ಆನೆಗಳಿಗೂ, ಪ್ರಹೃಷ್ಟರಾಗಿದ್ದ ಉಭಯಪಕ್ಷಗಳ ಸೈನಿಕರಿಗೂ ಪರಸ್ಪರ ಘರ್ಷಣೆಯಾಯಿತು."

೨೪ನೆಯ ಅಧ್ಯಾಯವು ಮುಗಿಯಿತು.

# ಶ್ರೀಮದ್ಭಗವದ್ಗೀತಾ-೧ನೆಯ ಅಧ್ಯಾಯ



## ಉಭಯಪಕ್ಷಗಳ ಪ್ರಧಾನಸೇನಾನಿಗಳ ವರ್ಣನೆ : ಶಂಖಧ್ವನಿಗಳ ವಿವರಣೆ : ಸ್ವಜನಹತ್ಯಾಪಾಪದಿಂದ ಭಯಪಟ್ಟ ಅರ್ಜುನನ ವಿಷಾದ

(ಯುದ್ಧದಲ್ಲಿ ನಡೆದುದನ್ನು ಯಥಾವತ್ತಾಗಿ ಧೃತರಾಷ್ಟ್ರನಿಗೆ ವರದಿ ಮಾಡಲು ವ್ಯಾಸಮಹರ್ಷಿಗಳಿಂದ ನಿಯಮಿತನಾಗಿದ್ದ ಸಂಜಯನನ್ನು ಧೃತರಾಷ್ಟ್ರನು ಪ್ರಶ್ನಿಸುತ್ತಾನೆ.)

**ಓಂ ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ ।**
**ಮಾಮಕಾಃ ಪಾಣ್ಡವಾಶ್ಚೈವ ಕಿಮಕುರ್ವತ ಸಂಜಯ ॥೧॥**



"ಓ ಸಂಜಯ! ಯುದ್ಧಮಾಡಬೇಕು–ಎಂಬ ತವಕದಿಂದ ಧರ್ಮ ಭೂಮಿಯಾದ ಕುರುಕ್ಷೇತ್ರದಲ್ಲಿ ನೆರೆದಿದ್ದ ನನ್ನ ಮಕ್ಕಳೂ ಮತ್ತು ಪಾಂಡುವಿನ ಮಕ್ಕಳೂ ಏನು ಮಾಡಿದರು? ಹೇಳು."

* * *

(ಆಮೂಲಾಗ್ರವಾಗಿ ಮಹಾಭಾರತವನ್ನು ಭಾಷಾಂತರಮಾಡಿಕೊಂಡು ಬಂದಿರುವ ನಮಗೆ ಈ ಶ್ಲೋಕದಲ್ಲಿ ಹೆಚ್ಚಿನ ಮಹತ್ತ್ವವೇನೂ ಕಂಡುಬರುವುದಿಲ್ಲ. ಭಗವದ್ಗೀತಾಪರ್ವವು ಭೀಷ್ಮಪರ್ವದ ೧೩ನೆಯ ಅಧ್ಯಾಯದಿಂದಲೇ ಪ್ರಾರಂಭವಾಗಿದೆ. ಈ ೨೫ನೆಯ ಅಧ್ಯಾಯದಿಂದ 'ಭಗವದ್ಗೀತೆಯು' ಪ್ರಾರಂಭವಾಗಿದೆ. ಯದ್ಯಪಿ ಭಗವದ್ಗೀತೆಯ ಈ ಮೊದಲನೆಯ ಅಧ್ಯಾಯದಲ್ಲಿ ಭಗವದ್ವಾಣಿಯಿಲ್ಲದಿದ್ದರೂ ಸಹ ಈ ಅಧ್ಯಾಯ ಮೊದಲ್ಗೊಂಡು 'ಭಗವದ್ಗೀತಾ' ಎಂದೇಕೆ ಹೇಳಿದರು?–ಎಂಬುದನ್ನು ವಿಮರ್ಶಿಸಬೇಕಾಗಿದೆ. ವ್ಯಾಸರು 'ಭಗವದ್ಗೀತಾಪರ್ವ' ಎಂದು ಹೇಳಿರುವರೇ ಹೊರತು ೨೫ನೆಯ ಅಧ್ಯಾಯದಿಂದ ೪೩ನೇ ಅಧ್ಯಾಯದವರೆಗಿನ ೧೮ ಅಧ್ಯಾಯಗಳಿಗೇ 'ಭಗವದ್ಗೀತಾ' ಎಂಬ ನಾಮನಿರೂಪಣೆಮಾಡಿಲ್ಲ. ಆದರೆ ಶ್ರೀ ಶಂಕರಾಚಾರ್ಯರೇ ಆದಿಯಾಗಿ ಎಲ್ಲ ಮತಾಚಾರ್ಯರೂ ಸಹ ಭಗವದ್ಗೀತಾಪರ್ವದಲ್ಲಿರುವ ೪೨ ಅಧ್ಯಾಯಗಳಲ್ಲಿ ೨೫ನೆಯ ಅಧ್ಯಾಯ ಮೊದಲ್ಗೊಂಡು ೪೨ನೇ ಅಧ್ಯಾಯದವರೆಗಿನ ಏಳು ನೂರು ಶ್ಲೋಕಗಳನ್ನೊಳಗೊಂಡ ೧೮ ಅಧ್ಯಾಯಗಳಿಗೆ 'ಭಗವದ್ಗೀತಾ' ಎಂದು ನಾಮನಿರ್ದೇಶನಮಾಡಿದ್ದಾರೆ. ಈ ಭಾಗಕ್ಕೆ ಶ್ರೀ ಮಧುಸೂದನಸರಸ್ವತಿಗಳು ಪಾರ್ಥಾಯ ಪ್ರತಿಬೋಧಿತಾಂ– ಎಂಬ ಶ್ಲೋಕದಿಂದ ಮೊದಲ್ಗೊಂಡು ಒಂಬತ್ತು ಪ್ರಾರ್ಥನಾಶ್ಲೋಕಗಳನ್ನೂ ಮಾಡಿದ್ದಾರೆ. ಮುಂದೆ ಅಂಗನ್ಯಾಸ, ಕರನ್ಯಾಸ, ಪಾರಾಯಣಕ್ರಮ ಎಲ್ಲವೂ ಬೆಳೆಯುತ್ತಾ ಹೋಗಿದೆ. ಈ ಭಗವದ್ಗೀತೆಯ ಪ್ರತಿಯೊಂದು ಅಧ್ಯಾಯದ ಕೊನೆಯಲ್ಲಿಯೂ ಶ್ರೀಮದ್ಭಗವದ್ಗೀತಾಸು ಉಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ....ಎಂಬುದಾಗಿ ಇದೆ. ಮಹಾಭಾರತದಲ್ಲಿ ಇದರ ಉಲ್ಲೇಖನವಿಲ್ಲ. ವಾಚಕರ ಅನುಕೂಲಕ್ಕಾಗಿ ಈ ಎಲ್ಲವನ್ನೂ ನಾವು ಅಳವಡಿಸಿದ್ದೇವೆ.

ಈ ಅಧ್ಯಾಯದಲ್ಲಿ ಬರುವ ಅರ್ಜುನನ ವಿಷಾದವೇ ಮುಂದೆ ಭಗವತ್ಪ್ರವಚನಕ್ಕೆ ಕಾರಣಭೂತವಾದುದರಿಂದ ಈ ೨೫ನೆಯ ಅಧ್ಯಾಯವನ್ನೂ ಸಹ ಅಷ್ಟಾದಶಾಧ್ಯಾಯೀ ಭಗವದ್ಗೀತೆಯಲ್ಲಿ ಸೇರಿಸಲಾಗಿದೆಯೆಂದು ತರ್ಕಿಸಬಹುದಾಗಿದೆ.

ಕೇವಲ ಗೀತಾವ್ಯಾಖ್ಯಾನವನ್ನೇ ಮಾಡಿರುವ ಅನೇಕಮಹನೀಯರು

ಈ ಮೊದಲನೆಯ ಶ್ಲೋಕದಲ್ಲಿಯೂ ಸಹ ವೈಶಿಷ್ಟ್ಯವನ್ನು ಕಂಡುಹಿಡಿಯಲು ಯತ್ನಿಸಿದ್ದಾರೆ. ಕೆಲವನ್ನು ಇಲ್ಲಿ ಕೊಡಲಾಗಿದೆ :

1) "ಯುದ್ಧಮಾಡುವುದಕ್ಕೆ ಕೌರವರು-ಪಾಂಡವರು ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ನೆರೆದರು. ಕುರುಕ್ಷೇತ್ರ ಹಿಂದಿನಿಂದಲೂ ತಪಃಕ್ಷೇತ್ರ. ಬ್ರಹ್ಮರ್ಷಿದೇಶವೆಂದು ಪ್ರಖ್ಯಾತವಾಗಿತ್ತು. ಮುನಿಗಳು ಹಿಂದೆ ತಪಸ್ಸನ್ನು ಮಾಡಲು ಆ ಸ್ಥಳಗಳನ್ನು ಆರಿಸಿಕೊಳ್ಳುತ್ತಿದ್ದರು. ಈಗ 'ಕೊಲೆಗೆ' ಆರಿಸಿಕೊಂಡಿರುವರು. ಹಿಂದಿನಿಂದ ಅದು ತಪೋಭೂಮಿಯಾಗಿದ್ದುದರಿಂದ ತನ್ನ ಸಾತ್ವಿಕವಾತಾವರಣವನ್ನು ಅಲ್ಲಿ ನೆರೆದಿರುವವರ ಮೇಲೆ ಬೀರಿ ಅವರ ಮನಸ್ಸನ್ನು ಬದಲಾಯಿಸಬಹುದೇನೋ–ಎಂದು ಧೃತರಾಷ್ಟ್ರನು ಭಾವಿಸಿದ್ದಿರಬೇಕು."

2) "ಕೌರವರೇನೋ ಭಂಡರು. ಯಾರ ಮಾತನ್ನೂ ಕೇಳುವವರಲ್ಲ. ಆದರೆ ಪಾಂಡವರು ಮೊದಲಿನಿಂದಲೂ ಕೊಲೆಗೆ, ಹಿಂಸೆಗೆ ಹಿಂದೆಗೆಯುವವರು. ಅವರು ಮನಸ್ಸುಮಾಡಿದ್ದರೆ ಬೇರೆಲ್ಲಿಯಾದರೂ ತಮ್ಮ ಅಸೀಮ ಸಾಹಸದಿಂದ ಒಂದು ಚಕ್ರಾಧಿಪತ್ಯವನ್ನು ಕಟ್ಟಬಹುದಾಗಿತ್ತು. ಹಾಗೇ ನಾದರೂ ಮಾಡುವರೇ?–ಎಂಬ ಅನುಮಾನವೂ ಧೃತರಾಷ್ಟ್ರನಿಗಿದ್ದಿರ ಬಹುದು."

3) "ಸಮರವನ್ನು ಹೇಗೆ ಮಾಡಿದೆವೆಂದು ಕೇಳದೇ ಧೃತರಾಷ್ಟ್ರನು ನಮ್ಮವರೂ ಮತ್ತು ಪಾಂಡವರೂ ಏನು ಮಾಡಿದರೆಂದು ಕೇಳುವನು. 'ಧರ್ಮಕ್ಷೇತ್ರವಾದ ಕುರುಕ್ಷೇತ್ರಕ್ಕೆ ತಲುಪಿದಕೂಡಲೇ ಧಾರ್ಮಿಕರಾದ ಪಾಂಡವರಲ್ಲಿ ಧಾರ್ಮಿಕಪ್ರವೃತ್ತಿಯು ಜಾಗೃತವಾಗಿ ಯುದ್ಧವು ಬೇಡವೆಂದು ರಾಜ್ಯವನ್ನೆಲ್ಲಾ ನಮ್ಮವರಿಗೆ ನೀಡಿದರೇ?' ಎಂಬ ಸ್ವಾರ್ಥಪೂರ್ಣ ಆಶಂಕೆಯಿಂದ ಧೃತರಾಷ್ಟ್ರನು 'ಅಲ್ಲಿ ಏನು ಮಾಡಿದರು?' ಎಂದು ಪ್ರಶ್ನಿಸುವನು."

4) ``The blind old King is certainly conscious of the palpable injustice that he had done to his nephews, the Pandavas. Dhrutharastra knows that the relative-strength of the two armies and therefore was fully confident of the larger strength of his son's army. And

yet viciousness of his past and the consciousness of the crimes perpetrated, seem to be weighing heavy upon the heart of the blind King and so he has his own doubts on the outcome of this war. He asks Sanjaya to explain to him what is happening in the battle-field in Kurukshetra. Vyasa had given Sanjaya the powers to see distant vision and listen the happenings in the far off Kurukshetra even when he was sitting beside Dhrutharastra in the palace at Hastinapura."

ಸುವಿಖ್ಯಾತವಿದ್ವಾಂಸರು ಈ ಮೊದಲನೆಯ ಶ್ಲೋಕವನ್ನು ಹೇಳಿದ ಧೃತರಾಷ್ಟ್ರನ ಹೃದಯದಲ್ಲಿರಬಹುದೆಂದು ಊಹಿಸಿರುವ ಅಭಿಪ್ರಾಯಗಳನ್ನೇ ಮೇಲೆ ಉದ್ಧರಿಸಲಾಗಿದೆ. ಆದರೆ ಮಹಾಭಾರತದ ಕಥಾಭಾಗವನ್ನು ಆಮೂಲಾಗ್ರವಾಗಿ ಪರಿಶೀಲಿಸಿದರೆ ಧೃತರಾಷ್ಟ್ರನಿಗೆ ಆ ಸಮಯದಲ್ಲಿ ಯಾವ ವಿಧವಾದ ಆಶೋತ್ತರಗಳೂ ಉಳಿಯುವುದಕ್ಕೆ ಸಾಧ್ಯವೇ ಇಲ್ಲ. ಸಂಜಯನು ಹತ್ತು ದಿವಸಗಳ ಪರ್ಯಂತವಾಗಿ ಯುದ್ಧಭೂಮಿಯಲ್ಲಿ ಪರ್ಯಟನ ಮಾಡುತ್ತಿದ್ದು, ವ್ಯಾಸರ ವರಪ್ರಸಾದದಿಂದ ಎಲ್ಲ ವಿಷಯಗಳನ್ನೂ ಯಥಾ ವತ್ತಾಗಿ ಗ್ರಹಿಸಿ, ಭೀಷ್ಮನ ಪತನವಾದೊಡನೆಯೇ ಬಹುದುಃಖಿತನಾಗಿ ಸಮರ ಭೂಮಿಯಿಂದ ಧೃತರಾಷ್ಟ್ರನ ಅರಮನೆಗೆ ಬರುತ್ತಾನೆ. ಇದೇ ಪರ್ವದ ಹದಿ ಮೂರನೆಯ ಅಧ್ಯಾಯದಲ್ಲಿ ಈ ವಿಷಯವು ಸುಸ್ಪಷ್ಟವಾಗಿದೆ.

ವೈಶಂಪಾಯನರು ಜನಮೇಜಯನನ್ನು ಕುರಿತು ಹೇಳುತ್ತಾರೆ :

ಅಥ ಗಾವಲ್ಗಣಿರ್ವಿದ್ವಾನ್ಸಂಯುಗಾದೇತ್ಯ ಭಾರತ ।
ಪ್ರತ್ಯಕ್ಷದರ್ಶೀ ಸರ್ವಸ್ಯ ಭೂತಭವ್ಯಭವಿಷ್ಯವಿತ್ ॥೧॥

ಧ್ಯಾಯತೇ ಧೃತರಾಷ್ಟ್ರಾಯ ಸಹಸೋತ್ಪತ್ಯ ದುಃಖಿತಃ ।
ಆಚಷ್ಟ ನಿಹತಂ ಭೀಷ್ಮಂ ಭಾರತಾನಾಂ ಪಿತಾಮಹಮ್ ॥೨॥

"ಜನಮೇಜಯ! ವಿದ್ವಾಂಸನಾದ, ಹಿಂದೆ ನಡೆದುದು, ಈಗ ನಡೆಯುತ್ತಿರುವುದು ಮತ್ತು ಮುಂದೆ ನಡೆಯುವುದು–ಇವುಗಳನ್ನು ಸಂಪೂರ್ಣವಾಗಿ ತಿಳಿದುಕೊಂಡಿದ್ದ, ಸರ್ವವಿಷಯಗಳ ಪ್ರತ್ಯಕ್ಷದರ್ಶಿಯಾದ, ಗವಲ್ಗಣನ ಮಗನಾದ ಸಂಜಯನು, ಚಿಂತಾಮಗ್ನನಾಗಿದ್ದ ಧೃತರಾಷ್ಟ್ರನ ಸಮೀಪಕ್ಕೆ ಓಡೋಡುತ್ತಲೇ ಬಂದು ಬಹುದುಃಖಿತನಾಗಿ ಭಾರತರ ಪಿತಾಮಹನಾದ ಭೀಷ್ಮನು ನಿಹತನಾದನೆಂಬ ಶೋಕವಾರ್ತೆಯನ್ನು ಧೃತ ರಾಷ್ಟ್ರನಿಗೆ ತಿಳಿಸಿದನು."

ಈ ಕಥನದಿಂದ ನಾವು ಹೀಗೆ ನಿಶ್ಚಯಿಸಬಹುದಾಗಿದೆ. ೨೫ನೆಯ ಅಧ್ಯಾಯದಲ್ಲಿ ಧೃತರಾಷ್ಟ್ರನು 'ಧರ್ಮಕ್ಷೇತ್ರೇ ಕುರುಕ್ಷೇತ್ರೇ'–ಎಂಬ ಶ್ಲೋಕವನ್ನು ಹೇಳುವ ಮೊದಲೇ ಅವನಿಗೆ ಭೀಷ್ಮನ ವಧೆಯ ವಿಷಯವು ತಿಳಿದುಹೋಗಿತ್ತು. "ಧರ್ಮಕ್ಷೇತ್ರದಲ್ಲಿ ಯುದ್ಧನಡೆಯಲಿದ್ದು ಯುದ್ಧವು ನಿಂತರೂ ನಿಂತುಬಿಡಬಹುದು. ಪಾಂಡವರು ಧಾರ್ಮಿಕರಾಗಿರುವುದರಿಂದ ಯುದ್ಧಮಾಡದೆಯೂ ಇರಬಹುದು"–ಇವೇ ಮುಂತಾದ ಸಂಶಯಗಳಿಗೆ ಭೀಷ್ಮವಧವೃತ್ತಾಂತವನ್ನು ಕೇಳಿ ನೊಂದ ಧೃತರಾಷ್ಟ್ರನ ಹೃದಯದಲ್ಲಿ ಅವಕಾಶವೇ ಇರಲಿಲ್ಲ. ಮೇಲಾಗಿ ಸಂಜಯನದು ಹತ್ತು ದಿವಸಗಳ ಯುದ್ಧದ ಯಥಾವತ್ತಾದ ವರದಿಯೇ ಹೊರತು ಪ್ರತ್ಯಕ್ಷವಿವರಣೆ (Running commentary) ಅಲ್ಲ.

ಗೀತೆಯು ಬ್ರಹ್ಮವಿದ್ಯೆಯನ್ನು ಪ್ರತಿಪಾದಿಸುವುದಾಗಿರುವುದರಿಂದ ಈ ಶ್ಲೋಕಕ್ಕೆ ಕೇವಲ ಅಧ್ಯಾತ್ಮಪರವಾದ ಅರ್ಥಮಾಡುವವರೂ ಇದ್ದಾರೆ.

"ಇದು ಮನುಷ್ಯನ ಒಳಗೆ ನಡೆಯುವ ಯುದ್ಧವನ್ನು ವರ್ಣಿಸುವುದೇ ಆಗಿದೆ. ಅದರಲ್ಲಿ ಈ ಯುದ್ಧಕ್ಕೆ ಮೂಲಕಾರಣನಾದ ಧೃತರಾಷ್ಟ್ರನೆಂಬ ಲೋಭಾಭಿಮಾನಿದೇವತೆಯ ಪ್ರಶ್ನೆಯಿದಾಗಿದೆ.

ಧರ್ಮಕ್ಷೇತ್ರವೂ ಕುರುಕ್ಷೇತ್ರವೂ ಆದ ಮನುಷ್ಯಶರೀರದಲ್ಲಿ ಯುಯುತ್ಸುಗಳಾಗಿರುವ ಮಮತಾದಿ ದುರ್ವೃತ್ತಿಗಳೂ–ಧರ್ಮಾದಿಸದ್ವೃತ್ತಿ ಗಳೂ ಏನೂ ಮಾಡಿದುವು? ಮನುಷ್ಯಶರೀರದೊಳಗೆ ಎರಡು ಪಕ್ಷಗಳಿವೆ. ರಾಗ, ದ್ವೇಷ–ಮೊದಲಾದ ದುರ್ಬುದ್ಧಿಗಳದು ಒಂದು ಪಕ್ಷ. ಧರ್ಮ,

ಉಪಾಸನೆ, ವೈರಾಗ್ಯ, ತಿತಿಕ್ಷೆ–ಮುಂತಾದ ಸದ್ಬುದ್ಧಿಗಳದು ಒಂದು ಪಕ್ಷ. ಈ ಎರಡೂ ಪಕ್ಷಗಳಲ್ಲಿ ಉಂಟಾಗುವ ಘರ್ಷಣೆಯೇ ಭಾರತಯುದ್ಧವಾಗಿದೆ.

ಇಲ್ಲಿ ಮಾಮಕಾಃ ಎಂಬುದಕ್ಕೆ "**ಮಮತಾ** =ನನ್ನದು ಎಂಬ ಭಾವನೆಯುಳ್ಳವರು" ಎಂಬರ್ಥವು ಬರುತ್ತದೆ. **ಮಮೇತಿ ಕಾಯಂತೀತಿ ಮಮಕಾಃ।** ತ ಏವ ಮಾಮಕಾಃ–ನನ್ನದೆಂದು ಹೇಳುವವರು ಮಮ ಕರು; ಅವರೇ ಮಾಮಕರು–ಎಂಬ ವ್ಯುತ್ಪತ್ತಿಯಂತೆ ಲೋಭದಿಂದ ಉಂಟಾದ ವೃತ್ತಿಗಳಿಗೂ ಈ ಹೆಸರು ಹೊಂದುತ್ತದೆ. ವೃತ್ತಿಗಳಲ್ಲಿ ಮನಃಕಾಮನೆ ಎಂಬ ಕರ್ಣನೂ ದ್ವೇಷವೆಂಬ ದುರ್ಯೋಧನನೂ ಮುಖ್ಯರಾಗಿದ್ದಾರೆ. ಆದುದರಿಂದ **ಮಾಮಕಾಃ** ಎಂದರೆ ಲೋಭಕ್ಕೆ ಒತ್ತಾಸೆನೀಡುವ ರಾಗ-ದ್ವೇಷಗಳು ಎಂದಾಯಿತು.

'**ಪಾಣ್ಡವಾಃ** ' ಎಂದರೆ ಸ್ವಚ್ಛವಾದ ಸದ್ವೃತ್ತಿಗಳು ಎಂದು ಅರ್ಥವಾಗುತ್ತದೆ. ಪಣ್ಡಾ = ಆತ್ಮವಿಷಯಾ ಬುದ್ಧಿಃ ಎಂದು ಭಗವತ್ಪಾದರು ವ್ಯಾಖ್ಯಾನಮಾಡಿರುತ್ತಾರೆ. ಆದುದರಿಂದ ಪಣ್ಡಾಶಬ್ದಕ್ಕೆ ಆತ್ಮವಿಷಯವಾದ ಬುದ್ಧಿಯೆಂದೂ, ವಿದ್ಯೆಯೆಂದೂ ಅರ್ಥವಾಗುತ್ತದೆ. ಪಣ್ಡಾಶಬ್ದಕ್ಕೆ ಸಂಬಂಧಾರ್ಥದ **ಅಣ್** ಪ್ರತ್ಯಯವನ್ನು ಸೇರಿಸಿದಾಗ **ಪಾಣ್ಡ** ಎಂದಾಗುತ್ತದೆ. ಇದಕ್ಕೆ **ವಾ ಗತಿಗನ್ಧನಯೋಃ** ಎಂಬ ಗತ್ಯರ್ಥದ ಧಾತುವಿನ 'ವ' ಎಂಬ ಶಬ್ದವನ್ನು ಸೇರಿಸಿದಾಗ 'ಪಾಣ್ಡವಾ' ಎಂಬ ಪದವು ನಿಷ್ಪನ್ನವಾಗುತ್ತದೆ. ಆದುದರಿಂದ ಇಲ್ಲಿ ಪಾಂಡವರೆಂದರೆ ಧರ್ಮ, ಉಪಾಸನೆ, ವೈರಾಗ್ಯ, ತಿತಿಕ್ಷೆ–ಇವೇ ಮೊದಲಾದುವುಗಳು.

**ಕೌ ರೌತೀತಿ ಕುರುಃ** ಭೂಮಿಯಲ್ಲಿ ಶಬ್ದಮಾಡುವುದು ಕುರು ಅರ್ಥಾತ್ ಜಂಗಮಪ್ರಾಣಿ. ಅದರ ಕ್ಷೇತ್ರ ಶರೀರ. ಪ್ರಾಣಿಯ ಶರೀರ.

**ಕುರುಕ್ಷೇತ್ರಂ ಕುಚಸ್ಥಾನೇ ಪ್ರಯಾಗಂ ಹೃತ್ಸರೋರುಹೇ ।** ಎಂಬುದಾಗಿ ಸೂತಸಂಹಿತೆಯ ಜ್ಞಾನಯೋಗಕಾಂಡದಲ್ಲಿ ಹೇಳಿದೆ. ಶರೀರಿಯ ಕುಚಸ್ಥಾನಗಳಿಗೂ ಕುರುಕ್ಷೇತ್ರವೆಂದು ಹೆಸರು. ಧರ್ಮಕ್ಷೇತ್ರ ಎಂದರೆ ಧರ್ಮಾನುಷ್ಠಾನಕ್ಕೆ ಅಧಿಕೃತವಾದ ಶರೀರ ; ಅದು ಮನುಷ್ಯಶರೀರವೇ ಆಗಿದೆ. ಇತರ ಪ್ರಾಣಿಗಳ ಶರೀರಗಳೂ, ದೇವತೆಗಳ ಶರೀರಗಳೂ ಸಹ

ಭೋಗಕ್ಷೇತ್ರಗಳೇ ಆಗಿದ್ದು ಅವುಗಳಿಗೆ ಪೂರ್ವಜನ್ಮಕೃತಕರ್ಮಫಲಗಳನ್ನು ಉಪಭೋಗಿಸುವ ಸಾಧ್ಯತೆಯಿದೆ. ಧರ್ಮಪ್ರದವಾದ ಕರ್ಮಗಳನ್ನು ಮಾಡಲು ಆ ಶರೀರಗಳಿಗೆ ಸಾಧ್ಯವಿಲ್ಲ. ಮನುಷ್ಯಶರೀರಕ್ಕೆ ಮಾತ್ರವೇ ಆ ಅಧಿಕಾರವಿದೆ. ಆದುದರಿಂದ ಧರ್ಮಕ್ಷೇತ್ರ, ಕುರುಕ್ಷೇತ್ರ ಶಬ್ದಗಳಿಂದ ಇಲ್ಲಿ ಧಾರ್ಮಿಕವಾದ ಮನುಷ್ಯಶರೀರದ ಪರಿಗ್ರಹವಾಗಿದೆ. ಇದರ ತಾತ್ಪರ್ಯ ವನ್ನು ಕ್ರೋಢೀಕರಿಸಿ ಹೀಗೆ ಹೇಳಬಹುದಾಗಿದೆ.

ಲೋಭಾಭಿಮಾನಿದೇವತೆಯು (ಧೃತರಾಷ್ಟ್ರನು) ಸಂಜಯನೆಂಬ ಸುಬುದ್ಧಿಯನ್ನುದ್ದೇಶಿಸಿ ಕೇಳುತ್ತದೆ : "ಧರ್ಮಕ್ಷೇತ್ರವಾದ ಈ ಶರೀರದಲ್ಲಿ ನನ್ನವರಾದ ರಾಗ-ದ್ವೇಷಾಭಿಮಾನಿದೇವತೆಗಳೂ ಮತ್ತು ಧರ್ಮ-ವೈರಾಗ್ಯಾಭಿ ಮಾನಿದೇವತೆಗಳೂ ಏನು ಮಾಡಿದರು?"

ಆಧ್ಯಾತ್ಮಿಕಪರವಾದ ಈ ಅರ್ಥವು ವಿದ್ವಾಂಸರ ಪಾಂಡಿತ್ಯವನ್ನು ತೋರಿಸುತ್ತದೆ.)

ಓಂ ದೃಷ್ಟ್ವಾ ತು ಪಾಣ್ಡವಾನೀಕಂ ವ್ಯೂಢಂ ದುರ್ಯೋಧನಸ್ತದಾ ।
ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥೨॥

"ಮಹಾರಾಜ! ವ್ಯೂಹಕ್ರಮದಲ್ಲಿ ನಿಂತುಕೊಂಡಿದ್ದ ಪಾಂಡವರ ಸೈನ್ಯವನ್ನು ಕಂಡು ದುರ್ಯೋಧನಮಹಾರಾಜನು ಆಚಾರ್ಯದ್ರೋಣರ ಸಮೀಪಕ್ಕೆ ಹೋಗಿ ಈ ಮಾತನ್ನು ಹೇಳಿದನು :

ಓಂ ಪಶ್ಯೈತಾಂ ಪಾಣ್ಡುಪುತ್ರಾಣಾಮಾಚಾರ್ಯ ಮಹತೀಂ ಚಮೂಮ್ ।
ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥೩॥

"ಆಚಾರ್ಯರೇ! ಬುದ್ಧಿಶಾಲಿಯೂ ತಮ್ಮ ಶಿಷ್ಯನೂ ಆಗಿರುವ ದ್ರುಪದನ ಮಗ ಧೃಷ್ಟದ್ಯುಮ್ನನು ವ್ಯೂಹರೂಪದಲ್ಲಿ ನಿಲ್ಲಿಸಿರುವ ಪಾಂಡವರ ಈ ದೊಡ್ಡ ಪಡೆಯನ್ನು ನೋಡಿರಿ.

ಓಂ ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ ।
ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥೪॥
ಓಂ ಧೃಷ್ಟಕೇತುಶ್ಚೇಕಿತಾನಃ ಕಾಶಿರಾಜಶ್ಚ ವೀರ್ಯವಾನ್ ।
ಪುರುಜಿತ್ಕುನ್ತಿಭೋಜಶ್ಚ ಶೈಬ್ಯಶ್ಚ ನರಪುಙ್ಗವಃ ॥೫॥

ಓಂ ಯುಧಾಮನ್ಯುಶ್ಚ ವಿಕ್ರಾನ್ತ ಉತ್ತಮೌಜಾಶ್ಚ ವೀರ್ಯವಾನ್ ।
ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥೬॥



ಪಾಂಡವರ ಈ ಸೈನ್ಯಸಮೂಹದಲ್ಲಿ ಶೂರರೂ, ಬಲು ದೊಡ್ಡ ಬಿಲ್ಗಾರರೂ, ಯುದ್ಧದಲ್ಲಿ ಭೀಮ ಮತ್ತು ಅರ್ಜುನರಿಗೆ ಸರಿಸಮಾನರೂ ಆದ ಯುಯುಧಾನ (ಸಾತ್ಯಕಿ), ವಿರಾಟ, ಮಹಾರಥನಾದ ದ್ರುಪದ ಮಹಾರಾಜ–ಇವರು ಇದ್ದಾರೆ. ಧೃಷ್ಟಕೇತು, ಚೇಕಿತಾನ, ಪರಾಕ್ರಮಿಯಾದ ಕಾಶೀರಾಜ, ಪುರುಜಿತ್, ಕುಂತಿಭೋಜ, ನರಶ್ರೇಷ್ಠನಾದ ಶೈಬ್ಯ, ಪರಾಕ್ರಮಿಯಾದ ಯುಧಾಮನ್ಯು, ವೀರ್ಯಶಾಲಿಯಾದ ಉತ್ತಮೌಜಸ, ಸುಭದ್ರೆಯ ಪುತ್ರ ಅಭಿಮನ್ಯು ಮತ್ತು ದ್ರೌಪದಿಯ ಮಕ್ಕಳಾದ ಪ್ರತಿವಿಂಧ್ಯ, ಸುತಸೋಮ, ಶ್ರುತಕರ್ಮಾ, ಶತಾನೀಕ, ಶ್ರುತಸೇನ–ಇವರೂ ಸಹ ಈ ಸೈನ್ಯದಲ್ಲಿದ್ದಾರೆ. ಇವರೆಲ್ಲರೂ ಮಹಾರಥರೇ ಆಗಿದ್ದಾರೆ.

ಓಂ ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।
ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ಬ್ರವೀಮಿ ತೇ ॥೭॥

ದ್ವಿಜವರ್ಯರೇ! ತಮ್ಮ ಜ್ಞಾಪಕಕ್ಕಾಗಿ ಇನ್ನು ನಮ್ಮ ಪಕ್ಷದಲ್ಲಿರುವ ಪ್ರಮುಖರಾದ ಸೇನಾನಾಯಕರು ಯಾರು ಯಾರಿದ್ದಾರೆಂಬುದನ್ನು ಹೇಳು ವೆನು, ಲಾಲಿಸಿರಿ.

**ಓಂ ಭವಾನ್ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।**
**ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ ॥೮॥**
**ಓಂ ಅನ್ಯೇ ಚ ಬಹವಃ ಶೂರಾ ಮದರ್ಥೇ ತ್ಯಕ್ತಜೀವಿತಾಃ ।**
**ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ॥೯॥**

ತಾವು, ಭೀಷ್ಮ, ಕರ್ಣ, ಯುದ್ಧದಲ್ಲಿ ಜಯಗಳಿಸುವ ಕೃಪಾ ಚಾರ್ಯರು, ಅಶ್ವತ್ಥಾಮ, ವಿಕರ್ಣ ಮತ್ತು ಸೋಮದತ್ತನ ಪುತ್ರ ಭೂರಿ ಶ್ರವಸ್ಸು–ಇವರಿದ್ದಾರೆ. ಇವರೇ ಅಲ್ಲದೇ ನನಗೋಸ್ಕರ ಪ್ರಾಣದ ಹಂಗನ್ನೇ ತೊರೆದಿರುವ ಇನ್ನೂ ಅನೇಕಶೂರರಿದ್ದಾರೆ. ಇವರೆಲ್ಲರೂ ಬಗೆ-ಬಗೆಯ ಶಸ್ತ್ರಗಳಿಂದ ಯುದ್ಧಮಾಡುವವರು. ಯುದ್ಧದಲ್ಲಿ ಪ್ರವೀಣರು.

**ಓಂ ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ।**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥೧೦॥**

(ಆದರೂ) ಭೀಷ್ಮನ ರಕ್ಷಣೆಯಲ್ಲಿರುವ ನಮ್ಮ ಸೈನ್ಯಕ್ಕೆ ಸಾಮರ್ಥ್ಯ ಸಾಲದು. ಭೀಮನ ರಕ್ಷಣೆಯಲ್ಲಿರುವ ಈ ಪಾಂಡವರ ಸೈನ್ಯವಾದರೋ ಸಮರ್ಥವಾಗಿದೆ.

* * *

(ಈ ಶ್ಲೋಕದಲ್ಲಿರುವ **ಪರ್ಯಾಪ್ತಂ** ಮತ್ತು ಅಪರ್ಯಾಪ್ತಂ ಶಬ್ದಗಳು ಎರಡು ವಿಧವಾದ ಅರ್ಥವನ್ನೂ ಕೊಡುತ್ತವೆ.

ಸಂಸ್ಕೃತ-ಕನ್ನಡ ಶಬ್ದಕೋಶದಲ್ಲಿ ಅಪರ್ಯಾಪ್ತಂ ಎಂಬುದಕ್ಕೆ ಅಪಾರ ವಾದ, ಅಪರಿಮಿತವಾದ, ಅಳತೆಯನ್ನು ಮೀರಿದ–ಎಂಬ ಅರ್ಥಗಳನ್ನು ಕೊಟ್ಟಿದ್ದಾರೆ. ಸಾಕಾಗದ, ಕಡಿಮೆಯಾದ, ಅಸಂಪೂರ್ಣವಾದ, ಅಸಮರ್ಥ ವಾದ, ಶಕ್ತಿಯಿಲ್ಲದ–ಎಂಬ ಅರ್ಥಗಳನ್ನೂ ಕೊಟ್ಟಿದ್ದಾರೆ. ಒಂದು ಅರ್ಥ ದಂತೆ 'ಭೀಷ್ಮನಿಂದ ರಕ್ಷಿತವಾದ ನಮ್ಮ ಸೈನ್ಯವು ಅಪರಿಮಿತವಾಗಿದೆ : ಭೀಮ ನಿಂದ ರಕ್ಷಿತವಾದ ಪಾಂಡವರ ಸೈನ್ಯವು ಪರಿಮಿತವಾಗಿದೆ'–ಎಂದೂ ಅರ್ಥ ಮಾಡಬಹುದಾಗಿದೆ.

ದುರ್ಯೋಧನನ ಪಕ್ಷದಲ್ಲಿ ಹನ್ನೊಂದು ಅಕ್ಷೌಹಿಣೀಸೈನ್ಯವಿರುವುದ ರಿಂದಲೂ ಪಾಂಡವರ ಕಡೆಯಲ್ಲಿ ಕೇವಲ ಏಳು ಅಕ್ಷೌಹಿಣೀಸೈನ್ಯವಿರುವುದ ರಿಂದಲೂ ಈ ವಿಧವಾದ ಅರ್ಥಮಾಡಿದರೆ ಸ್ವಲ್ಪ ಹೊಂದಿಕೆಯಾಗಬಹುದು.

ಆದರೆ ಧ್ವನಿಯನ್ನೇ ನಾವು ಪ್ರಧಾನವನ್ನಾಗಿಟ್ಟುಕೊಂಡರೆ ಅಪ ರ್ಯಾಪ್ತಂ ಎಂಬುದಕ್ಕೆ ಸಾಕಷ್ಟಿಲ್ಲದ್ದು–ಎಂದೇ ಅರ್ಥವು ತೋರುತ್ತದೆ. ಆದರೆ 'ಭೀಷ್ಮಾಭಿರಕ್ಷಿತವಾದ ತನ್ನ ಸೇನೆಯು ಅಪರ್ಯಾಪ್ತ–ಸಾಕಷ್ಟು ಸಮರ್ಥವಾಗಿಲ್ಲ' ಎಂದು ದುರ್ಯೋಧನನು ಹೇಳಿಕೊಂಡಾನೇ? ದುರಭಿ ಮಾನಿಯಾದ ಅವನಿಗೆ ಹಾಗೆ ಹೇಳಿಕೊಳ್ಳಲು ಸಾಧ್ಯವೇ?–ಎಂಬ ಪ್ರಶ್ನೆ ಯೇಳುತ್ತದೆ. ಮೇಲಾಗಿ ದುರ್ಯೋಧನನು ಉದ್ಯೋಗಪರ್ವದ ೫೫ನೆಯ ಅಧ್ಯಾಯದಲ್ಲಿ ತನ್ನ ತಂದೆಯಾದ ಧೃತರಾಷ್ಟ್ರನಿಗೆ ತನ್ನ ಸಾಮರ್ಥ್ಯದ ಬಗ್ಗೆ ಆಶ್ವಾಸನೆನೀಡುತ್ತಾ ಹೇಳುತ್ತಾನೆ :

**ನ ಭೇತವ್ಯಂ ಮಹಾರಾಜ ನ ಶೋಚ್ಯಾ ಭವತಾ ವಯಮ್ ।**
**ಸಮರ್ಥಾಃ ಸ್ಮ ಪರಾಞ್ಜೇತುಂ ಬಲಿನಃ ಸಮರೇ ವಿಭೋ ॥೧॥**

'ಮಹಾರಾಜ! ನೀನು ಭಯಪಡಬೇಡ. ಭಯಪಡುವ ಕಾರಣವಿಲ್ಲ. ನಮಗಾಗಿ ನೀನು ಶೋಚಿಸುವ ಕಾರಣವೂ ಇಲ್ಲ. ವಿಭುವೇ! ಯುದ್ಧದಲ್ಲಿ ಶತ್ರುಗಳನ್ನು ಜಯಿಸಲು ನಾವು ಬಲಿಷ್ಠರೂ ಸಮರ್ಥರೂ ಆಗಿರುತ್ತೇವೆ.'

'ಅಪರ್ಯಾಪ್ತಂ' ಎಂದರೆ 'ಸಾಕಾಗದ' ಎಂಬ ಅರ್ಥವನ್ನೇ ಪ್ರತಿಪಾದಿಸುತ್ತಾ ಶ್ರೀರಾಮಾನುಜರು ಈ ಶ್ಲೋಕಕ್ಕೆ ಹೀಗೆ ವ್ಯಾಖ್ಯಾನ ಮಾಡಿರುತ್ತಾರೆ.

**ದುರ್ಯೋಧನಃ ಸ್ವಯಮೇವ ಭೀಮಾಭಿರಕ್ಷಿತಂ ಪಾಣ್ಡ ವಾನಾಂ ಬಲಂ, ಆತ್ಮೀಯಂ ಚ ಭೀಷ್ಮಾಭಿರಕ್ಷಿತಂ ಬಲಮವಲೋಕ್ಯ ಆತ್ಮವಿಜಯೇ ತಸ್ಯ ಬಲಸ್ಯ ಪರ್ಯಾಪ್ತತಾಂ ಆತ್ಮೀಯಸ್ಯ ಬಲಸ್ಯ ತದ್ವಿಜಯೇ ಚಾಪರ್ಯಾಪ್ತತಾಮಾಚಾರ್ಯಾಯ ನಿವೇದ್ಯ ನಿರ್ವಿಷಣ್ಣೋಽಭೂತ್.**

ಹಿಂದೆ ದುರ್ಯೋಧನನು ತನ್ನ ವಿಜಯದ ವಿಷಯದಲ್ಲಿ ಹೆಚ್ಚಿನ ವಿಶ್ವಾಸವನ್ನು ಹೊಂದಿದ್ದರೂ ಸಹ ಸಮರವು ಪ್ರಾರಂಭವಾಗಲಿದ್ದಾಗ

ವಿಷಣ್ಣನಾದನು. ಅವನಾಡುವ ಮಾತೇ ಇದಕ್ಕೆ ಸಾಕ್ಷಿಯಾಗಿದೆ. ಹತಾಶನಾದ ಇವನು ಈ ಹಿಂದಿನ ಶ್ಲೋಕದಲ್ಲಿಯೇ ರಾಜರನ್ನು ಕುರಿತು ಹೇಳುವಾಗ '**ಮದರ್ಥೇ ತ್ಯಕ್ತ ಜೀವಿತಾಃ**' ಎಂದು ಹೇಳುತ್ತಾನೆ. 'ಪ್ರಾಣದ ಹಂಗನ್ನು ತೊರೆದವರು', ಎಂದು ಸಮಯೋಚಿತವಾಗಿ ಅರ್ಥಮಾಡಿದ್ದರೂ ಸಹ ಈ ವಾಕ್ಯದ ಅರ್ಥ 'ನನ್ನ ಸಲುವಾಗಿ ಪ್ರಾಣಬಿಟ್ಟವರು ; ಅಥವಾ ಅವರೆಲ್ಲರೂ ನನ್ನ ಸಲುವಾಗಿ ಸಾಯುವುದು ನಿಶ್ಚಯ' ಎಂಬ ಅಭಿಪ್ರಾಯವು ಬರುತ್ತದೆ. ಎರಡನೆಯದಾಗಿ ಈ ಶ್ಲೋಕದಲ್ಲಿ 'ಬಲಂ ಭೀಮಾಭಿರಕ್ಷಿತಮ್' ಎಂದು ಹೇಳಿದ್ದಾನೆ. ಪಾಂಡವರ ಪಡೆಯ ಸೇನಾನಾಯಕನು ಯದ್ಯಪಿ ಧೃಷ್ಟದ್ಯುಮ್ನನೇ ಆಗಿದ್ದರೂ ಅವನ ಹೆಸರನ್ನು ಹೇಳದೇ ಭೀಮನನ್ನು ಹೆಸರಿಸುತ್ತಾನೆ. 'ಭೀಮನೇ ತಮ್ಮೆಲ್ಲರ ವಿನಾಶಕನು' ಎಂಬ ಭಾವನೆಯು ದುರ್ಯೋಧನನ ಮನಸ್ಸಿನಲ್ಲಿ ನೆಟ್ಟಿದ್ದುದರಿಂದಲೇ ಈ ಮಾತನ್ನು ಅವನು ಹೇಳಿದನು. ಮುಂದೆ ಹನ್ನೆರಡನೆಯ ಶ್ಲೋಕದಲ್ಲಿ '**ತಸ್ಯ ಸಂಜನಯನ್ ಹರ್ಷಂ**' 'ಭೀಷ್ಮನು ದುರ್ಯೋಧನನಿಗೆ ಹರ್ಷವನ್ನುಂಟುಮಾಡುತ್ತಾ' ಎಂದು ಹೇಳಿರುವುದರಿಂದ ಅವನು ದ್ರೋಣರೊಡನೆ ಮಾತನಾಡುವಾಗ ವಿಷಣ್ಣನಾಗಿದ್ದನೆಂದು ಅರ್ಥವಾಗುತ್ತದೆ. ಮೂರನೆಯ ಶ್ಲೋಕದಲ್ಲಿ **ಪಾಣ್ಡುಪುತ್ರಾಣಾಂ ಮಹತೀಂ ಚಮೂಂ ಪಶ್ಯ** ಎಂದು ಹೇಳುತ್ತಾನೆ. ಇಲ್ಲಿ ಮಹತೀಂ ಎಂದು ದುರ್ಯೋಧನನೇ ಹೇಳಬೇಕಾದರೆ ಪಾಂಡವರ ಸೈನ್ಯಕ್ಕಿಂತಲೂ ತನ್ನ ೧೧ ಅಕ್ಷೌಹಿಣೀಸೈನ್ಯವು ಸಾಮರ್ಥ್ಯದಲ್ಲಿ ಮಹತ್ವಪೂರ್ಣವಾಗಿಲ್ಲ–ಎಂಬ ಅಭಿಪ್ರಾಯವಿರುವಂತೆ ಕಾಣುತ್ತದೆ. ಈ ಕಾರಣಗಳಿಂದ **ಅಪರ್ಯಾಪ್ತಂ** ಎಂಬ ಪದಕ್ಕೆ 'ಸಾಲದೇ ಇರುವುದು' ಎಂಬ ಅರ್ಥವೇ ಸಾಧುವಾಗಿ ಕಾಣುತ್ತದೆ. ನಾವೂ ಸಹ ಇದೇ ಅರ್ಥವನ್ನು ಕೊಟ್ಟಿದ್ದೇವೆ. ಡಾ|| ಡಿ.ವಿ.ಜಿ. ಮತ್ತು ಮಹಾತ್ಮಾಗಾಂಧಿಯವರೂ ಸಹ ಇದೇ ಅರ್ಥವನ್ನು ಕೊಟ್ಟಿದ್ದಾರೆ.)

**ಓಂ ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ ।**
**ಭೀಷ್ಮಮೇವಾಭಿರಕ್ಷನ್ತು ಭವನ್ತಃ ಸರ್ವ ಏವ ಹಿ ॥೧೧॥**

ಆದುದರಿಂದ ನೀವೆಲ್ಲರೂ ನಿಮ್ಮ ನಿಮ್ಮ ಅಯನ (ಆಯಕಟ್ಟಿನ ದ್ವಾರ ಪ್ರದೇಶ) ಗಳಲ್ಲಿದ್ದು ಭೀಷ್ಮನನ್ನೇ ಸರ್ವಪ್ರಕಾರದಿಂದಲೂ ಸಂರಕ್ಷಿಸಬೇಕು."

ಸಂಜಯನು ಧೃತರಾಷ್ಟ್ರನೊಡನೆ ಹೇಳುತ್ತಾನೆ :

**ಓಂ ತಸ್ಯ ಸಂಜನಯನ್ಹರ್ಷಂ ಕುರುವೃದ್ಧಃ ಪಿತಾಮಹಃ ।**
**ಸಿಂಹನಾದಂ ವಿನದ್ಯೋಚ್ಚೈಃ ಶಙ್ಖಂ ದಧ್ಮೌ ಪ್ರತಾಪವಾನ್ ॥೧೨॥**

"ದುರ್ಯೋಧನನು ವಿಷಣ್ಣನಾಗಿ ದ್ರೋಣಾಚಾರ್ಯರೊಡನೆ ಹೇಳಿದ ಮಾತುಗಳನ್ನು ಕೇಳಿಸಿಕೊಂಡ ಭೀಷ್ಮನು ಅವನಿಗೆ ಸಂತೋಷವನ್ನುಂಟು ಮಾಡುವ ಸಲುವಾಗಿಯೇ ಗಟ್ಟಿಯಾಗಿ ಸಿಂಹನಾದಮಾಡಿ ಶಂಖವನ್ನೂದಿ ದನು.

(ದುರ್ಯೋಧನನು ದ್ರೋಣರೊಡನೆ ಮಾತನಾಡಿದರೂ ದ್ರೋಣರೇಕೆ ಉತ್ತರಿಸಲಿಲ್ಲ? ಅವರಿಗೇನಾದರೂ ಅಸಮಾಧಾನವೇ? ಅಸಮಾಧಾನ ದಿಂದಲೇ ದ್ರೋಣರು ಮಾತನಾಡಲಿಲ್ಲವೆಂದು ಕೆಲವು ಟೀಕಾಕಾರರ ಅಭಿ ಪ್ರಾಯವಾಗಿದೆ. ಪಾಂಡವರೊಡನೆ ದುರ್ಯೋಧನನು ಸಂಧಾನಮಾಡಿ



ಕೊಳ್ಳದೇ ಇದ್ದುದಕ್ಕಾಗಿ ಭೀಷ್ಮ-ದ್ರೋಣರಿಬ್ಬರಿಗೂ ಮೊದಲಿನಿಂದಲೂ ಅಸ ಮಾಧಾನವಿದ್ದೇ ಇದೆ. ಆದರೆ ಪ್ರಸಕ್ತಸಂದರ್ಭದಲ್ಲಿ ತಮ್ಮ ಅಸಮಾಧಾನ ವನ್ನು ವ್ಯಕ್ತಪಡಿಸುವ ಸಲುವಾಗಿ ಉತ್ತರಕೊಡಲಿಲ್ಲವೆಂದು ಹೇಳುವುದು

ಸಮಂಜಸವಾಗಿ ಕಾಣುವುದಿಲ್ಲ. 'ಭೀಷ್ಮಮೇವಾಭಿರಕ್ಷನ್ತು' 'ನೀವೆಲ್ಲರೂ ಭೀಷ್ಮನನ್ನೇ ಸಂರಕ್ಷಿಸಿರಿ'–ಎಂಬ ದುರ್ಯೋಧನನ ಪ್ರಾರ್ಥನೆ ಅಥವಾ ಆಜ್ಞೆಯನ್ನು ದ್ರೋಣರು ಮೌನವಾಗಿದ್ದು ಅಂಗೀಕರಿಸಿದರು–ಎಂದು ಮಾತ್ರ ಹೇಳಬಹುದಾಗಿದೆ. ದುರ್ಯೋಧನನ ಮಾತು ಮುಗಿಯುತ್ತಲೇ ಭೀಷ್ಮರು ಸಿಂಹನಾದಮಾಡಿದುದರಿಂದ ಮಾತನಾಡುವುದಕ್ಕೆ ದ್ರೋಣರಿಗೆ ಅವಕಾಶವೂ ಇರಲಿಲ್ಲವೆಂದು ಊಹಿಸಬಹುದಾಗಿದೆ.)

**ಓಂ ತತಃ ಶಙ್ಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।**
**ಸಹಸೈವಾಭ್ಯಹನ್ಯನ್ತ ಸ ಶಬ್ದಸ್ತುಮುಲೋಽಭವತ್ ॥೧೩॥**

ಸೇನಾನಾಯಕನಾದ ಭೀಷ್ಮನು ಶಂಖನಿನಾದವನ್ನು ಮಾಡಿದೊಡನೆಯೇ ಕೌರವರ ಸೇನೆಯಲ್ಲಿ ಸಾವಿರಾರು ಶಂಖಗಳೂ, ರಣಭೇರಿಗಳೂ, ಪಣವ-ಆನಕ-ಗೋಮುಖಗಳೆಂಬ ರಣವಾದ್ಯಗಳೂ ಮೊಳಗಿಸಲ್ಪಟ್ಟುವು. ಆ ನಿನಾದವು ಅತಿಭೀಕರವಾಗಿದ್ದಿತು.



**ಓಂ ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯನ್ದನೇ ಸ್ಥಿತೌ ।**
**ಮಾಧವಃ ಪಾಣ್ಡವಶ್ಚೈವ ದಿವ್ಯೌ ಶಙ್ಖೌ ಪ್ರದಧ್ಮತುಃ ॥೧೪॥**

ಅನಂತರ ಬಿಳಿಯ ಕುದುರೆಗಳಿಂದ ಯುಕ್ತವಾಗಿದ್ದ, ಮಹಾವಿಖ್ಯಾತಿ ಯನ್ನು ಹೊಂದಿದ್ದ ರಥದಲ್ಲಿ ಕುಳಿತಿದ್ದ ಮಾಧವನೂ (ಶ್ರೀಕೃಷ್ಣನೂ) ಮತ್ತು ಪಾಂಡವನೂ (ಅರ್ಜುನನೂ) ತಮ್ಮ ದಿವ್ಯವಾದ ಶಂಖಗಳನ್ನು ಊದಿದರು.

ಓಂ ಪಾಞ್ಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।
ಪೌಣ್ಡ್ರಂ ದಧ್ಮೌ ಮಹಾಶಙ್ಖಂ ಭೀಮಕರ್ಮಾ ವೃಕೋದರಃ ॥೧೫॥

ಹೃಷೀಕೇಶನು ಪಾಂಚಜನ್ಯವೆಂಬ ಶಂಖವನ್ನೂ ಧನಂಜಯನು ದೇವದತ್ತವೆಂಬ ಶಂಖವನ್ನೂ ಊದಿದರು. ಭಯಂಕರವಾದ ಕರ್ಮಗಳನ್ನು ಮಾಡಬಲ್ಲ ಭೀಮಸೇನನು ಪೌಣ್ಡ್ರವೆಂಬ ಮಹಾಶಂಖವನ್ನು ಊದಿದನು.

ಓಂ ಅನನ್ತವಿಜಯಂ ರಾಜಾ ಕುನ್ತೀಪುತ್ರೋ ಯುಧಿಷ್ಠಿರಃ ।
ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ ॥೧೬॥

ಓಂ ಕಾಶ್ಯಶ್ಚ ಪರಮೇಷ್ವಾಸಃ ಶಿಖಣ್ಡೀ ಚ ಮಹಾರಥಃ ।
ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥೧೭॥

ಓಂ ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।
ಸೌಭದ್ರಶ್ಚ ಮಹಾಬಾಹುಃ ಶಙ್ಖಾನ್ದಧ್ಮುಃ ಪೃಥಕ್ಪೃಥಕ್ ॥೧೮॥

ಕುಂತೀಪುತ್ರನಾದ ಯುಧಿಷ್ಠಿರಮಹಾರಾಜನು ಅನಂತವಿಜಯವೆಂಬ ಶಂಖವನ್ನೂದಿದನು. ಸುಘೋಷವೆಂಬ ಶಂಖವನ್ನು ನಕುಲನೂ–ಮಣಿ ಪುಷ್ಪಕವೆಂಬ ಹೆಸರಿನ ಶಂಖವನ್ನು ಸಹದೇವನೂ ಊದಿದರು. ಮಹಾ ಧನುರ್ಧಾರಿಯಾದ ಕಾಶೀರಾಜನೂ, ಮಹಾರಥಿಯಾದ ಶಿಖಂಡಿಯೂ, ಧೃಷ್ಟದ್ಯುಮ್ನನೂ, ವಿರಾಟರಾಜನೂ, ಅಜಯ್ಯನಾದ ಸಾತ್ಯಕಿಯೂ ತಮ್ಮ-ತಮ್ಮ ಶಂಖಗಳನ್ನು ಊದಿದರು. ಅಂತೆಯೇ ದ್ರುಪದರಾಜನೂ, ದ್ರೌಪ ದಿಯ ಪುತ್ರರೂ, ಸುಭದ್ರೆಯ ಪುತ್ರನಾದ ಮಹಾಬಾಹುವಾದ ಅಭಿ ಮನ್ಯುವೂ ಎಲ್ಲರೂ ಬೇರೆ-ಬೇರೆಯಾಗಿ ತಮ್ಮ-ತಮ್ಮ ಶಂಖಗಳನ್ನೂದಿದರು.

ಓಂ ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।
ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ॥೧೯॥

ಭೂಮ್ಯಾಕಾಶಗಳನ್ನೂ ತುಂಬಿ ಮಾರ್ದನಿಗೊಟ್ಟ ಆ ಭಯಂಕರ ನಾದವು ಕೌರವರ ಎದೆಯನ್ನು ಸೀಳಿಬಿಟ್ಟಿತು.

ಓಂ ಅಥ ವ್ಯವಸ್ಥಿತಾನ್ದೃಷ್ಟ್ವಾ ಧಾರ್ತರಾಷ್ಟ್ರಾನ್ಕಪಿಧ್ವಜಃ ।
ಪ್ರವೃತ್ತೇ ಶಸ್ತ್ರಸಮ್ಪಾತೇ ಧನುರುದ್ಯಮ್ಯ ಪಾಣ್ಡವಃ ॥೨೦॥

ಓಂ ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ।

ಧೃತರಾಷ್ಟ್ರ! ಅನಂತರದಲ್ಲಿ ಕಪಿಧ್ವಜನಾದ–ಧನುಸ್ಸನ್ನೆತ್ತಿಹಿಡಿದಿದ್ದ ಅರ್ಜುನನು, ಕೌರವಸೈನ್ಯವು ಸಜ್ಜಾಗಿರುವುದನ್ನು ಕಂಡು, ಶಸ್ತ್ರಾಸ್ತ್ರಗಳ ಪ್ರಯೋಗವನ್ನು ಪರಸ್ಪರ ಪ್ರಾರಂಭಿಸಬೇಕೆಂದಿದ್ದ ಆ ಸಮಯದಲ್ಲಿ ಹೃಷೀಕೇಶನನ್ನು ಕುರಿತು ಈ ಮಾತುಗಳನ್ನು ಹೇಳಿದನು :

ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ॥೨೧॥

ಓಂ ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ ।
ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ರಣಸಮುದ್ಯಮೇ ॥೨೨॥

ಓಂ ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ ।
ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ॥೨೩॥

"ಅಚ್ಯುತ! ಎರಡೂ ಸೇನೆಗಳ ಮಧ್ಯದಲ್ಲಿ ನನ್ನ ರಥವನ್ನು ನಿಲ್ಲಿಸು. ಯುದ್ಧಮಾಡುವ ಇಷ್ಟದಿಂದ ಯಾರು ಯಾರು ಬಂದಿದ್ದಾರೆ?–ಎಂಬುದನ್ನು ನಾನು ನೋಡಬೇಕಾಗಿದೆ. ಈ ಯುದ್ಧದ ಹೋರಾಟದಲ್ಲಿ ನಾನು ಯಾರೊಡನೆ ಯುದ್ಧಮಾಡಬೇಕು? ದುಷ್ಟವಾದ ಬುದ್ಧಿಯುಳ್ಳ ದುರ್ಯೋಧನನಿಗೆ ಪ್ರಿಯವನ್ನುಂಟುಮಾಡುವ ಇಚ್ಛೆಯಿಂದ ಇಲ್ಲಿ ಬಂದು ಸೇರಿರುವ ಯೋಧರು ಯಾರು?–ಎಂಬುದನ್ನೂ ತಿಳಿದುಕೊಳ್ಳಬೇಕಾಗಿದೆ."

ಓಂ ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।
ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್ ॥೨೪॥

ಓಂ ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ ।
ಉವಾಚ ಪಾರ್ಥ ಪಶ್ಯೈತಾನ್ಸಮವೇತಾನ್ಕುರೂನಿತಿ ॥೨೫॥

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಭಾರತ! ಗುಡಾಕೇಶನು (ಅರ್ಜುನನು) ಹೃಷೀಕೇಶನನ್ನು ಕುರಿತು ಹೀಗೆಂದು ಹೇಳಿದೊಡನೆಯೇ ಶ್ರೀಕೃಷ್ಣನು ಎರಡೂ ಸೈನ್ಯಗಳ ಮಧ್ಯದಲ್ಲಿ ಎಲ್ಲ ರಾಜರ ಮತ್ತು ಭೀಷ್ಮ-ದ್ರೋಣರ ಮುಂದುಗಡೆಯಲ್ಲಿ ರಥವನ್ನು

ನಿಲ್ಲಿಸಿ ಹೇಳಿದನು : "ಪಾರ್ಥ! ಇಲ್ಲಿ ನಿನ್ನೊಡನೆ ಯುದ್ಧಮಾಡುವುದಕ್ಕಾಗಿ ನೆರೆದಿರುವ ಕುರುಗಳನ್ನು ನೋಡು."

ಓಂ ತತ್ರಾಪಶ್ಯತ್ಸ್ಥಿತಾನ್ಪಾರ್ಥಃ ಪಿತೄನಥ ಪಿತಾಮಹಾನ್ ।
ಆಚಾರ್ಯಾನ್ಮಾತುಲಾನ್ಭ್ರಾತೄನ್ಪುತ್ರಾನ್ಪೌತ್ರಾನ್ಸಖೀಂಸ್ತಥಾ ॥೨೬॥
ಓಂ ಶ್ವಶುರಾನ್ಸುಹೃದಶ್ಚೈವ ಸೇನಯೋರುಭಯೋರಪಿ ।

ಆದರೆ ಆ ಸಮಯದಲ್ಲಿ ಪಾರ್ಥನು ಆ ರಣರಂಗದಲ್ಲಿ ತಮಗೆಲ್ಲರಿಗೂ ಹದಿಮೂರು ವರ್ಷಗಳ ಪರ್ಯಂತವಾಗಿ ಸಲ್ಲದ ಉಪದ್ರವಕೊಟ್ಟ ಪರಮ ವೈರಿಯಾದ ದುರ್ಯೋಧನನನ್ನು ಕಾಣಲಿಲ್ಲ. ಸೋದರನಾದ ದುರ್ಯೋಧನನನ್ನು ಕಂಡನು. ಪಿತೃ-ಪಿತಾಮಹರನ್ನು ಕಂಡನು. ಆಚಾರ್ಯರನ್ನು ಕಂಡನು. ಸೋದರಮಾವಂದಿರನ್ನು ಕಂಡನು. ಸಹೋದರರರನ್ನೂ, ಪುತ್ರರನ್ನೂ, ಪೌತ್ರರನ್ನೂ ಮತ್ತು ಸ್ನೇಹಿತರನ್ನೂ ಕಂಡನು. ಮಾವಂದಿರನ್ನೂ ಹಿತೈಷಿಗಳಾದ ಸಮವಯಸ್ಕರಾದ ಸ್ನೇಹಿತರನ್ನೂ ಎರಡು ಸೈನ್ಯಗಳಲ್ಲಿಯೂ ಕಂಡನು.

ತಾನ್ಸಮೀಕ್ಷ್ಯ ಸ ಕೌನ್ತೇಯಃ ಸರ್ವಾನ್ಬನ್ಧೂನವಸ್ಥಿತಾನ್ ॥೨೭॥

ಓಂ ಕೃಪಯಾ ಪರಯಾವಿಷ್ಟೋ ವಿಷೀದನ್ನಿದಮಬ್ರವೀತ್ ।

ತನ್ನ ಎಲ್ಲ ಬಂಧುಗಳೂ ಪರಸ್ಪರವಾಗಿ ಯುದ್ಧಮಾಡಲು ಕುರುಕ್ಷೇತ್ರದಲ್ಲಿ ಉಪಸ್ಥಿತರಾಗಿರುವುದನ್ನು ಕಂಡು ನಿರತಿಶಯವಾದ ಕೃಪೆಯಿಂದ ವ್ಯಾಪ್ತನಾದ ಅರ್ಜುನನು ವಿಷಾದದಿಂದ ಶ್ರೀಕೃಷ್ಣನೊಡನೆ ಈ ಮಾತುಗಳನ್ನು ಹೇಳಿದನು :

ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್ ॥೨೮॥
ಓಂ ಸೀದನ್ತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ।
ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ॥೨೯॥
ಓಂ ಗಾಣ್ಡೀವಂ ಸ್ರಂಸತೇ ಹಸ್ತಾತ್ತ್ವಕ್ಚೈವ ಪರಿದಹ್ಯತೇ ।
ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ॥೩೦॥
ಓಂ ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ।
ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ॥೩೧॥

**ಓಂ ನ ಕಾಙ್ಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ।**
**ಕಿಂ ನೋ ರಾಜ್ಯೇನ ಗೋವಿನ್ದ ಕಿಂ ಭೋಗೈರ್ಜೀವಿತೇನ ವಾ ॥೩೨॥**

ಕೃಷ್ಣ! ಯುದ್ಧಮಾಡುವ ಇಚ್ಛೆಯಿಂದ ಇಲ್ಲಿ ಬಂದಿರುವ ಈ ಸ್ವಜನರನ್ನು ಕಂಡು ನನ್ನ ಅವಯವಗಳು ಶಿಥಿಲವಾಗುತ್ತಿವೆ. ಬಾಯಿ ಒಣಗುತ್ತಿದೆ. ಗಾಂಡೀವಧನುಸ್ಸು ಕೈಯಿಂದ ಕಳಚಿಬೀಳುತ್ತಿದೆ. ಚರ್ಮವು ತುಂಬ ಸುಡುತ್ತಿದೆ. ನಾನು ನಿಲ್ಲಲಾರೆ. ಮನಸ್ಸು ಭ್ರಮೆಗೆ ಒಳಗಾದಂತಿದೆ. ಇದಲ್ಲದೇ ವಿಪರೀತವಾದ ಅಪಶಕುನಗಳನ್ನೂ ಕಾಣುತ್ತಿದ್ದೇನೆ. (ಆದುದರಿಂದ ಸರ್ವವಿನಾಶವು ನಿಶ್ಚಯ.) ಯುದ್ಧದಲ್ಲಿ ಸ್ವಜನರನ್ನು ಕೊಂದುಹಾಕುವುದ ರಿಂದ ಯಾವ ಶ್ರೇಯಸ್ಸೂ ಉಂಟಾಗುವುದಿಲ್ಲ.

ಕೃಷ್ಣ! ನನಗೆ ವಿಜಯದ ಮೇಲೆ ಆಶೆಯಿಲ್ಲ. ರಾಜ್ಯವೂ ಬೇಡ ; ಸುಖಗಳೂ ಬೇಡ. ಹೇ ಗೋವಿಂದ! ರಾಜ್ಯದಿಂದಾಗಲೀ, ಭೋಗಗಳಿಂದಾಗಲೀ, ಬದುಕಿನಿಂದಲೇ ಆಗಲೀ–ನಮಗೇನು ಪ್ರಯೋಜನವಿದೆ?

**ಓಂ ಯೇಷಾಮರ್ಥೇ ಕಾಙ್ಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ ।**
**ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥೩೩॥**

**ಓಂ ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ ।**
**ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಮ್ಬನ್ಧಿನಸ್ತಥಾ ॥೩೪॥**

ಯಾರಿಗೋಸ್ಕರ ನಾವು ರಾಜ್ಯಭೋಗ ಮತ್ತು ಸುಖಗಳನ್ನು ಬಯಸಬೇಕೋ–ಅಂತಹ ಆಚಾರ್ಯರೂ, ಪಿತೃಜನರೂ, ಪುತ್ರರೂ, ಪಿತಾಮಹರೂ, ಸೋದರಮಾವಂದಿರೂ, ಮಾವಂದಿರೂ, ಮೊಮ್ಮಕ್ಕಳೂ, ಭಾವಮೈದುನರೂ ಹಾಗೂ ಇತರ ಸಂಬಂಧಿಗಳೂ ಪ್ರಾಣಗಳ ಹಂಗನ್ನೂ ಮತ್ತು ಐಶ್ವರ್ಯಗಳ ಆಸೆಯನ್ನೂ ಬಿಟ್ಟು ಈ ಯುದ್ಧಕ್ಕೆ ಬಂದಿದ್ದಾರೆ.

**ಓಂ ಏತಾನ್ನ ಹನ್ತುಮಿಚ್ಛಾಮಿ ಘ್ನತೋಽಪಿ ಮಧುಸೂದನ ।**
**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ॥೩೫॥**

ಅವರೇ ನನ್ನನ್ನು ಕೊಂದುಹಾಕಿದರೂ ನಾನವರನ್ನು ಸಂಹರಿಸಲು

ಬಯಸುವುದಿಲ್ಲ. ಮಧುಸೂದನ! ಮೂರು ಲೋಕಗಳ ಚಕ್ರಾಧಿಪತ್ಯವೇ ದೊರೆಯುವುದಾದರೂ ನನಗೆ ಅವರನ್ನು ಕೊಲ್ಲಲು ಇಷ್ಟವಿಲ್ಲ. ಇನ್ನು ಕೇವಲ ಭೂಮಿಗಾಗಿ ಅವರನ್ನು ಕೊಲ್ಲಲು ಬಯಸುವೆನೇ?

**ಓಂ ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ।**
**ಪಾಪಮೇವಾಶ್ರಯೇದಸ್ಮಾನ್ಹತ್ವೈತಾನಾತತಾಯಿನಃ ॥೩೬॥**

ಎಲೈ ಜನಾರ್ದನ! ಧೃತರಾಷ್ಟ್ರನ ಪುತ್ರರನ್ನು ಕೊಂದು ನಮಗಾಗುವ ಸಂತೋಷವಾದರೂ ಏನು? ಅವರು ಆತತಾಯಿ (ವಧಾರ್ಹರಾದ ಪಾಪಿಗಳು) ಗಳಾಗಿರುವುದರಿಂದ ಅವರನ್ನು ಕೊಲ್ಲುವುದರಿಂದ ನಮಗೆ ಪಾಪವೇ ಬರುವುದು.

**ಓಂ ತಸ್ಮಾನ್ನಾರ್ಹಾ ವಯಂ ಹನ್ತುಂ ಧಾರ್ತರಾಷ್ಟ್ರಾನ್ಸ್ವಬಾನ್ಧವಾನ್ ।**
**ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ॥೩೭॥**

ಆದುದರಿಂದ ನಮಗೆ ಬಂಧುಗಳೇ ಆಗಿರುವ ಈ ಕೌರವರನ್ನು ಕೊಲ್ಲು ವುದು ನಮಗೆ ಉಚಿತವಲ್ಲ. ಮಾಧವ! ಸ್ವಜನರನ್ನು ಕೊಂದು ನಾವು ಸುಖಿಗಳು ಹೇಗೆ ತಾನೇ ಆದೇವು?

**ಓಂ ಯದ್ಯಪ್ಯೇತೇ ನ ಪಶ್ಯನ್ತಿ ಲೋಭೋಪಹತಚೇತಸಃ ।**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ ॥೩೮॥**

**ಓಂ ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ ।**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥೩೯॥**

ಲೋಭದಿಂದ ಭ್ರಷ್ಟವಾದ ಬುದ್ಧಿಯುಳ್ಳ ಇವರಿಗೆ ಕುಲನಾಶದಿಂದ ಉಂಟಾಗುವ ದೋಷವಾಗಲೀ, ಮಿತ್ರದ್ರೋಹದಿಂದ ಉಂಟಾಗುವ ಪಾಪ ವಾಗಲೀ ಕಾಣಿಸದೇ ಇರಬಹುದು. ಆದರೆ ಕುಲನಾಶದಿಂದ ಉಂಟಾಗುವ ದೋಷವನ್ನು ಚೆನ್ನಾಗಿ ಬಲ್ಲ ನಾವಾದರೂ ಈ ಪಾಪಕಾರ್ಯದಿಂದ ಹಿಂದೆಗೆಯಬೇಕೆಂಬುದನ್ನು ತಿಳಿದುಕೊಳ್ಳಬೇಡವೇ?

**ಓಂ ಕುಲಕ್ಷಯೇ ಪ್ರಣಶ್ಯನ್ತಿ ಕುಲಧರ್ಮಾಃ ಸನಾತನಾಃ ।**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ॥೪೦॥**

ಕುಲನಾಶವಾದರೆ ಅದರಿಂದ ಸನಾತನವಾದ ಕುಲಧರ್ಮಗಳು ನಷ್ಟ

ಹೊಂದುತ್ತವೆ. ಧರ್ಮವು ನಾಶಹೊಂದುವುದರಿಂದ ಅಧರ್ಮವು ಎಲ್ಲ ಕುಲಗಳನ್ನೂ ಆಕ್ರಮಿಸಿಕೊಳ್ಳುತ್ತದೆ.

**ಓಂ ಅಧರ್ಮಾಭಿಭವಾತ್ಕೃಷ್ಣ ಪ್ರದುಷ್ಯನ್ತಿ ಕುಲಸ್ತ್ರಿಯಃ ।**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥೪೧॥**

ಕೃಷ್ಣ! ಅಧರ್ಮವು ವ್ಯಾಪಿಸುವುದರಿಂದ ಕುಲಸ್ತ್ರೀಯರು ದೂಷಿತ ರಾಗುತ್ತಾರೆ. ವಾರ್ಷ್ಣೇಯ! ಕುಲಸ್ತ್ರೀಯರು ಕೆಟ್ಟರೆಂದರೆ ವರ್ಣಗಳ ಕಲಬೆರಕೆಯಾಗಿಬಿಡುತ್ತದೆ.

**ಓಂ ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।**
**ಪತನ್ತಿ ಪಿತರೋ ಹ್ಯೇಷಾಂ ಲುಪ್ತಪಿಣ್ಡೋದಕಕ್ರಿಯಾಃ ॥೪೨॥**

ಈ ವರ್ಣಸಾಂಕರ್ಯವು ಕುಲನಾಶಕರನ್ನೂ ಮತ್ತು ಅವರ ಕುಲವನ್ನೂ ನರಕಕ್ಕೇ ತಳ್ಳುತ್ತದೆ. ಅವರ ಪಿತೃಗಳೂ ಪಿಂಡಪ್ರದಾನ-ಜಲತರ್ಪಣ ಕ್ರಿಯೆಗಳಿಲ್ಲದೇ ಪತಿತರಾಗುತ್ತಾರೆ.

**ಓಂ ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।**
**ಉತ್ಸಾದ್ಯನ್ತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥೪೩॥**

ವರ್ಣಸಾಂಕರ್ಯವನ್ನುಂಟುಮಾಡುವ ಕುಲಘಾತಕರ ಈ ದೋಷ ಗಳಿಂದ ಶಾಶ್ವತವಾದ ಜಾತಿಧರ್ಮಗಳೂ ಹಾಗೂ ಕುಲಧರ್ಮಗಳೂ ನಿರ್ಮೂಲವಾಗಿಬಿಡುತ್ತವೆ.

**ಓಂ ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।**
**ನರಕೇಽನಿಯತಂ ವಾಸೋ ಭವತೀತ್ಯನುಶುಶ್ರುಮ ॥೪೪॥**

ಕುಲಧರ್ಮಗಳು ನಾಶಹೊಂದಿದ ಮನುಷ್ಯರು ಖಂಡಿತವಾಗಿಯೂ ನರಕದಲ್ಲಿ ಅನಿಶ್ಚಿತಕಾಲದವರೆಗೆ ವಾಸಮಾಡಬೇಕಾಗುತ್ತದೆಂಬುದನ್ನು ನಾವು ಕೇಳಿದ್ದೇವೆ, ಜನಾರ್ದನ!

**ಓಂ ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್ ।**
**ಯದ್ರಾಜ್ಯಸುಖಲೋಭೇನ ಹನ್ತುಂ ಸ್ವಜನಮುದ್ಯತಾಃ ॥೪೫॥**

ಅಯ್ಯೋ! ರಾಜ್ಯಸುಖದ ಆಸೆಯಿಂದ ನಾವು ಸ್ವಜನರನ್ನೇ ಕೊಂದು ಹಾಕಲು ಸಿದ್ಧರಾಗಿ ಮಹಾಪಾಪವನ್ನು ಮಾಡಲು ಹೊರಟಿರುವೆವಲ್ಲಾ!

**ಓಂ ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।**
**ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ॥೪೬॥**

ಯಾವ ಪ್ರತೀಕಾರವನ್ನೂ ಮಾಡದೇ ಆಯುಧವನ್ನೇ ಹಿಡಿಯದೇ ನಿಂತಿರುವ ನನ್ನನ್ನು ಧೃತರಾಷ್ಟ್ರನ ಮಕ್ಕಳು ಶಸ್ತ್ರವನ್ನು ಧರಿಸಿ ಯುದ್ಧದಲ್ಲಿ ಸಂಹರಿಸಿದರೂ ಅದರಿಂದ ನನಗೆ ಹೆಚ್ಚು ಕ್ಷೇಮವೇ ಆದೀತು."

ಸಂಜಯನು ಧೃತರಾಷ್ಟ್ರನನ್ನು ಕುರಿತು ಹೇಳುತ್ತಾನೆ :

**ಓಂ ಏವಮುಕ್ತ್ವಾರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ ।**
**ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥೪೭॥**

"ಹೀಗೆ ಹೇಳಿ ಯುದ್ಧರಂಗದಲ್ಲಿ ದುಃಖದಿಂದ ವ್ಯಾಕುಲಗೊಂಡ ಮನಸ್ಸುಳ್ಳ ಅರ್ಜುನನು ಬಿಲ್ಲು-ಬಾಣಗಳನ್ನು ತೆಗೆದಿಟ್ಟು ರಥದಲ್ಲಿ ಕುಳಿತು ಬಿಟ್ಟನು."

* * *

(ದೃಷ್ಟ್ವೇಮಂ ಎಂಬ ಶ್ಲೋಕಾರ್ಧದಿಂದ ಯದಿ ಮಾಂ ಎಂಬ ಶ್ಲೋಕಾಂತ್ಯದವರೆಗಿರುವ 18½ ಶ್ಲೋಕಗಳು ಭಗವದ್ಗೀತೆಯ ಅವತಾರಕ್ಕೆ ಮೂಲಶ್ಲೋಕಗಳಾಗಿವೆ.

ಈ ಶ್ಲೋಕಗಳು ಅಥವಾ ಅರ್ಜುನನ ವಿಷಾದದ ಸಂದರ್ಭವು ಶ್ರೀಕೃಷ್ಣನ ಜ್ಞಾನಯೋಗ-ಕರ್ಮಯೋಗ-ಭಕ್ತಿಯೋಗಗಳ ಉಪದೇಶಕ್ಕೆ ಮೂಲವಾದುದರಿಂದ ಅರ್ಜುನನ ಈ ವಿಷಾದವನ್ನೂ ಸಹ ಆಚಾರ್ಯರು ಯೋಗವೆಂದೇ ಹೆಸರಿಸಿದ್ದಾರೆ. ಅರ್ಜುನನಿಗೆ ಪ್ರಕೃತ ಸಮಯದಲ್ಲಿ ವಿಷಾದ ವೇಕೆ ಉಂಟಾಯಿತು? ಹಿಂದವನು ಎಲ್ಲಿಯೂ ಯುದ್ಧಮಾಡಿರಲಿಲ್ಲವೇ? ಆಗೇಕೆ ಅವನಿಗೆ ಈ ವಿಧವಾದ ವಿಷಾದವುಂಟಾಗಿರಲಿಲ್ಲ?–ಎಂಬ ಪ್ರಶ್ನೆಗಳು ಸ್ವಾಭಾವಿಕವಾಗಿಯೇ ಉದ್ಭವಿಸುತ್ತವೆ. ಹಿಂದೆ ಅರ್ಜುನನು ಧರ್ಮರಾಯನು ಮಾಡಿದ ರಾಜಸೂಯಯಾಗದ ಕಾಲದಲ್ಲಿ ಅನೇಕರೊಡನೆ ಯುದ್ಧ ಮಾಡಿದ್ದನು. ಸಾಕ್ಷಾತ್ ಶಂಕರನೊಡನೆಯೇ ಯುದ್ಧಮಾಡಿದ್ದನು. ದೇವತೆ ಗಳ ಶತ್ರುಗಳಾದ ಕಾಲಕೇಯರೆಂಬ ದೈತ್ಯರನ್ನೂ ಸದೆಬಡಿದಿದ್ದನು. ಆ ಯುದ್ಧಕ್ಕೆ ಸ್ವಲ್ಪಹಿಂದೆ ವಿರಾಟನಗರದಲ್ಲಿದ್ದಾಗ ಏಕಾಕಿಯಾಗಿ ಇದೇ ಕೌರವ ಸೇನೆಯನ್ನೇ ಎದುರಿಸಿದ್ದನು. ಆ ಸಂದರ್ಭಗಳಲ್ಲಿ ಅವನಿಗೇಕೆ ಯುದ್ಧ

ಮಾಡಲು ವಿಷಾದವಾಗಲಿಲ್ಲ?—ಇದಕ್ಕುತ್ತರ ಗೀತೆಯಲ್ಲೇ ಇದೆ. ಅರ್ಜುನನ ಎದುರಾಗಿ ನಿಂತಿದ್ದವರು ಇಂದು ಅವನಿಗೆ ಶತ್ರುಗಳಂತೆ ಕಾಣಲಿಲ್ಲ. ಎರಡು ಕಡೆಗಳಲ್ಲಿಯೂ ಪಿತೃ-ಪಿತಾಮಹ, ಆಚಾರ್ಯ, ಮಾತುಲ, ಭ್ರಾತೃ, ಪುತ್ರ-ಪೌತ್ರರನ್ನು ಅವನು ಕಂಡನು. ಮೇಲಾಗಿ ಈ ಯುದ್ಧದಲ್ಲಿ ಅಳಿವು ಅಥವಾ ಉಳಿವು ಎಂಬುದು ನಿರ್ಧಾರವಾಗಬೇಕಾಗಿದ್ದಿತು. ವೀರಪ್ರಮುಖರಲ್ಲಿ ಯಾವನೊಬ್ಬನೂ ಉಳಿಯುವನೆಂಬ ಆಸೆಯಿರಲಿಲ್ಲ. ಹದಿನೆಂಟು ಅಕ್ಷೌಹಿಣೀಸೈನ್ಯದ ನಿರ್ನಾಮವಾದನಂತರವೇ ಜಯಾಪಜಯಗಳನ್ನು ನಿರ್ಧರಿಸುವುದಿತ್ತು. ಆದರೆ ವಿರಾಟನಗರದಲ್ಲಿ ನಡೆದುದು ಇಂತಹ ಯುದ್ಧವಲ್ಲ. ಮಮತ್ವವೆಂಬುದು ಬಂದುಬಿಟ್ಟರೆ ಎಂತಹವರಿಗೂ ಭ್ರಮೆಯಾಗುವುದು ಸ್ವಾಭಾವಿಕ. ಇಲ್ಲಿ ಅರ್ಜುನನು ಮಮಕಾರಕ್ಕೆ ಒಳಗಾಗಿದ್ದಾನೆ.

ತನ್ನಿಂದಲೇ ಎಲ್ಲವೂ ನಡೆಯುತ್ತಿದೆ ಎಂಬ ದುರಭಿಮಾನಕ್ಕೆ ಒಳಗಾಗಿದ್ದಾನೆ. 'ನಾನೊಬ್ಬನೇ ಇವರೆಲ್ಲರನ್ನೂ ಸಂಹರಿಸಲು ಸಮರ್ಥನಾದವನು. ಆದುದರಿಂದ ನಾನೊಬ್ಬನು ಹಿಮ್ಮೆಟ್ಟಿದರೆ ಸರ್ವನಾಶವು ದೂರವಾಗುವುದು' ಎಂಬ ಭಾವನೆಯನ್ನು ಅರ್ಜುನನು ಹೊಂದಿದಂತೆ ಕಾಣುತ್ತದೆ. ಈ ವಿಷಯವನ್ನು ಶ್ರೀಕೃಷ್ಣನು ಮಹಾಭಾರತದ ೪೨ನೆಯ ಅಧ್ಯಾಯದಲ್ಲಿ ಅಥವಾ ಗೀತೆಯ ೧೮ನೆಯ ಅಧ್ಯಾಯದಲ್ಲಿ ಹೇಳಿದ್ದಾನೆ :

**ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥೫೯॥**

"ದುರಭಿಮಾನವನ್ನು ತಳೆದು 'ನಾನು ಯುದ್ಧಮಾಡುವುದಿಲ್ಲ' ಎಂದು ನೀನು ಭಾವಿಸಿದರೆ ಅದು ಸುಳ್ಳಾಗುತ್ತದೆ. ನಿನ್ನ ಪ್ರಯತ್ನವು ನಿರರ್ಥಕವಾಗುತ್ತದೆ. ಪ್ರಕೃತಿಯೇ ನಿನ್ನನ್ನು ಈ ಕಾರ್ಯಕ್ಕೆ ಯೋಜಿಸುತ್ತದೆ"—ಎಂದು ಶ್ರೀಕೃಷ್ಣನು ಅರ್ಜುನನನ್ನು ಜರೆದಿದ್ದಾನೆ.

ಆದುದರಿಂದ ಈ ಸಂದರ್ಭದಲ್ಲಿ ಅರ್ಜುನನ ವಿಷಾದ ಅಥವಾ ಬಂಧುಗಳ ಮೇಲಿನ ಅನುಕಂಪವು ಅಹಂಕಾರಮೂಲವಾದುದು. ಈ ಹಿನ್ನೆಲೆಯಲ್ಲಿ ಅವನಾಡುವ ಮಾತುಗಳೇನೋ ಯುಕ್ತಿಯುಕ್ತವಾಗಿವೆ. ಅವನಾಡುವ ಮಾತುಗಳು ಅಸ್ವಾಭಾವಿಕಗಳಲ್ಲ. ತನ್ನ ಶರೀರವು ನಡುಗುತ್ತದೆಯೆಂದು

ಹೇಳಿದ್ದಾನೆ. ವ್ಯಾಮೋಹದಲ್ಲಿ ಹೀಗಾಗುವುದು ಸ್ವಾಭಾವಿಕ. ನೂರಾರು ಮಂದಿಗೆ ಶಸ್ತ್ರಚಿಕಿತ್ಸೆ ಮಾಡುವ ವೈದ್ಯನು ತನ್ನ ಮಗನಿಗೆ ಶಸ್ತ್ರಚಿಕಿತ್ಸೆ ಮಾಡಲಾರ. ಬೇರೆಯ ವೈದ್ಯರಿಂದ ಮಾಡಿಸುತ್ತಾನೆ. ತಾನೇ ಮಾಡಲು ಹೋದರೆ ಕೈನಡುಗುವುದು ಸ್ವಾಭಾವಿಕ. ದುಂಬಿಯು ಕಟ್ಟಿಗೆಯನ್ನೇ ಕೊರೆಯಬಲ್ಲುದು. ಆದರೆ ಕಮಲದೊಳಗೆ ಸಾಯಂಕಾಲವಾಗುತ್ತಲೇ ಸೇರಿ ಕೊಂಡ ದುಂಬಿಯು ಕಮಲದ ಮೊಗ್ಗನ್ನು ಕೊರೆದುಕೊಂಡು ಹೊರಬರುವ ಸಾಮರ್ಥ್ಯವಿದ್ದರೂ ಮಮತೆಯಿಂದ ಹಾಗೆ ಮಾಡದೇ ಸೂರ್ಯೋದಯ ವಾಗಿ ಕಮಲವು ಅರಳಿದ ನಂತರವೇ ಹೊರಕ್ಕೆ ಬರುತ್ತದೆ.

ದುಶ್ಶಕುನಗಳಾಗುತ್ತಿದ್ದುದನ್ನು ಈ ಹಿಂದೆಯೂ ವರ್ಣಿಸಿದ್ದಾರೆ. ಆದರೆ ಪಾಂಡವಪಕ್ಷದಲ್ಲಿ ಶುಭಶಕುನಗಳಾಗುತ್ತಿವೆಯೆಂದು ಹೇಳಿದ್ದಾರೆ. ಆದರೆ ಅರ್ಜುನನಿಗೆ ಎದುರುಪಕ್ಷದಲ್ಲಿ ದುಶ್ಶಕುನಗಳಾಗುವುದು ಕಾಣುತ್ತಿವೆ. ಸ್ವಜನರ ಹನನದಿಂದ ಶ್ರೇಯಸ್ಸಾಗದೆಂಬುದನ್ನು ಎಲ್ಲರೂ ಒಪ್ಪಲೇಬೇಕು. 'ಯಾರಿಗೋಸ್ಕರ ನಾವು ಬದುಕಬೇಕೋ ಅವರೇ ಪ್ರಾಣದ ಹಂಗನ್ನು ತೊರೆದು ಯುದ್ಧಕ್ಕೆ ಸಿದ್ಧರಾಗಿರುವಾಗ ನಾವೇಕೆ ಯುದ್ಧಮಾಡಬೇಕು? ನಾವೇಕೆ ಅವರನ್ನು ವಧಿಸಬೇಕು? ನಮಗೆ ಈ ರಾಜ್ಯದಿಂದ ಆಗತಕ್ಕದ್ದೇನು?' ಈ ಪರಿತಾಪವು ಸ್ಮಶಾನವೈರಾಗ್ಯವಿದ್ದಂತಿದೆ. ಆದರೆ ಸ್ಮಶಾನದಲ್ಲಿ ಸತ್ತವರಿಗಾಗಿ ಅಳುತ್ತಾರೆ. ಅವನಿಲ್ಲದ ಮೇಲೆ ನಾನೇಕೆ ಬದುಕಬೇಕೆನ್ನುತ್ತಾರೆ. ಆದರೆ ಇಲ್ಲಿ ತನ್ನವರು ಸಾಯುವುದನ್ನು ನೆನೆದೇ ಅರ್ಜುನನು ವಿರಾಗಿಯಾಗುತ್ತಾನೆ. ಸ್ಮಶಾನವೈರಾಗ್ಯದಂತೆಯೇ ಅರ್ಜುನನದೂ ಸಹ ಇಲ್ಲಿ ಅಹಂಪೂರ್ವಕವಾದ ತಾತ್ಕಾಲಿಕವಿರಾಗ.

'ಅವರಿಂದ ನಾನು ಹೊಡೆಯಲ್ಪಟ್ಟರೂ ನಾನವರನ್ನು ಸಂಹರಿಸುವು ದಿಲ್ಲ. ಮೂರು ಲೋಕಗಳ ಲಾಭದ ಕಾರಣಕ್ಕಾದರೂ ನಾನಿವರನ್ನು ಸಂಹರಿಸುವುದಿಲ್ಲ. ಕೇವಲ ಭೂಮಿಗಾಗಿ ಅಥವಾ ರಾಜ್ಯಕ್ಕಾಗಿ ನಾನವರನ್ನು ಸಂಹಾರಮಾಡುವುದಿಲ್ಲ?'

ಈ ಮಾತಿನಲ್ಲಿ ಒಂದು ಸ್ವಾರಸ್ಯವಿದೆ. 'ನೀನೇನೋ ಯುದ್ಧ ಮಾಡುವುದಿಲ್ಲ ಎನ್ನುತ್ತೀಯೆ. ಆದರೆ ಅವರೇ ನಿನ್ನನ್ನು ಪ್ರಹರಿಸಿದರೇನು

ಮಾಡುವೆ?'–ಎಂಬ ಪ್ರಶ್ನೆಯನ್ನು ತಾನೇ ಹಾಕಿಕೊಳ್ಳುತ್ತಾನೆ ಅರ್ಜುನ. 'ಅವರು ಹೊಡೆದರೂ ನಾನವರನ್ನು ಹೊಡೆಯುವುದಿಲ್ಲ.' ಎಂಬುದು ಅವನ ಉತ್ತರ. ಕೇವಲ ಮಾತಿನಲ್ಲಿಯೇ ಹೊರತು ಕೃತಿಯಲ್ಲಿ ತೋರಿಸಲಾಗದ ಮಾತು. ಈ ಮಾತುಗಳೆಲ್ಲವೂ ಅಹಂಭಾವಪೂರ್ವಕವಾದ ಅನು ಕಂಪದಿಂದಲೇ ಹೊರಟಿದ್ದು. ಪ್ರಕೃತಸಮಯದಲ್ಲಿ ಅರ್ಜುನನು ತನ್ನ ಹುಟ್ಟು ಸ್ವಭಾವವನ್ನು ತಾನೇ ಅರ್ಥಮಾಡಿಕೊಳ್ಳಲು ಅಸಮರ್ಥನಾಗಿದ್ದಾನೆ.

ಮುಂದಿನ ಶ್ಲೋಕದಲ್ಲಿ '**ಹತ್ವೈತಾನಾತತಾಯಿನಃ ಪಾಪಮೇವಾ-ಶ್ರಯೇದಸ್ಮಾನ್**'ಎಂದೂ ಹೇಳುತ್ತಾನೆ. ಇದೂ ಒಂದು ವಿಚಿತ್ರದ ಮಾತೇ ಆಗಿದೆ.

**ಅನ್ನದೋ ಗರದಶ್ಚೈವ ಶಸ್ತ್ರಪಾಣಿರ್ಧನಾಪಹಃ ।**
**ಕ್ಷೇತ್ರದಾರಹರಶ್ಚೈವ ಷಡೈತೇ ಹ್ಯಾತತಾಯಿನಃ ॥**

ವಸಿಷ್ಠಸ್ಮೃತಿಃ ೩-೧೯

ಬೆಂಕಿಯನ್ನು ಇಡುವವನು, ವಿಷವನ್ನು ಹಾಕುವವನು, ಕತ್ತಿಯನ್ನು ಹಿಡಿದು ಕೊಲ್ಲಲು ಬರುವವನು, ಹಣವನ್ನು ಅಪಹರಿಸುವವನು, ಭೂಮಿ ಯನ್ನು ಅಪಹರಿಸುವವನು, ಪತ್ನಿಯನ್ನು ಅಪಹರಿಸುವವನು–ಈ ಆರು ಮಂದಿಯೂ ಆತತಾಯಿಗಳೆನಿಸುತ್ತಾರೆ.

ಇಷ್ಟು ಅಕಾರ್ಯಗಳನ್ನೂ ಕೌರವರು ಮಾಡಿದ್ದಾರೆ.

ಪಾಂಡವರು ಮಲಗಿದ್ದ ಮನೆಗೆ ಬೆಂಕಿಯಿಟ್ಟಿದ್ದಾರೆ. ಭೀಮನಿಗೆ ವಿಷವುಣಿಸಿದ್ದಾರೆ. ಈಗ ಶಸ್ತ್ರಾಸ್ತ್ರಗಳನ್ನು ಹಿಡಿದು ಕೊಲ್ಲಲು ಸಿದ್ಧರಾಗಿದ್ದಾರೆ. ದ್ಯೂತದಲ್ಲಿ ಧನವನ್ನೂ ರಾಜ್ಯವನ್ನೂ ಅಪಹರಿಸಿದ್ದಾರೆ. ಆದುದರಿಂದ ಅವರನ್ನು ಆತತಾಯಿಗಳೆಂದು ಅರ್ಜುನನು ಕರೆದಿರುವುದೂ ಸಾಧು ವಾಗಿಯೇ ಇದೆ. ಆದರೆ ಅವರನ್ನು ಕೊಂದರೆ ಪಾಪವೇ ತಮಗೆ ಸಂಘಟಿಸು ವುದೆಂದು ಹೇಳುವುದರಲ್ಲಿ ಅರ್ಥವಿಲ್ಲ.

**ಆತತಾಯಿನಮಾಯಾಂತಂ ಹನ್ಯಾದೇವಾವಿಚಾರಯನ್ ।**
**ನಾತತಾಯಿವಧೇ ದೋಷೋ ಹನ್ತುರ್ಭವತಿ ಕಶ್ಚನ ॥**

ಆತತಾಯಿಯು ಎದುರಾಗಿ ಸಿಕ್ಕಿದೊಡನೆಯೇ ಯಾವುದನ್ನೂ ವಿವೇ

ಚಿಸ ಹೋಗದೇ ಅವನನ್ನು ಕೊಂದುಹಾಕಬೇಕು. ಆತತಾಯಿಯ ವಧೆಯಲ್ಲಿ ಯಾವ ವಿಧವಾದ ದೋಷವೂ ಇಲ್ಲ–ಎಂದು ಮನುಸ್ಮೃತಿಯಲ್ಲಿ ಸ್ಪಷ್ಟವಾಗಿ ಹೇಳಿದೆ.

ಯುದ್ಧಕ್ಕೆ ಸಿದ್ಧನಾಗಿ ಬರುವ ಕ್ಷತ್ರಿಯನನ್ನು ಯುದ್ಧದಲ್ಲಿ ಕೊಂದರೆ ದೋಷವಿಲ್ಲ. ಸತ್ತವನಿಗೂ ಸ್ವರ್ಗವು ಸಿಕ್ಕುತ್ತದೆ. ಹೀಗಿರುವಾಗ ಆತತಾಯಿಯನ್ನು ಕೊಂದರೆ ತಮಗೆ ದೋಷವುಂಟಾಗುವುದೆಂದು ಅರ್ಜುನನು ಹೇಗೆ ಬಗೆದನೋ ತಿಳಿಯದು.

ಮುಂದಿನ ಶ್ಲೋಕಗಳಲ್ಲವನು ತನ್ನ ಪ್ರಾಜ್ಞತ್ವವನ್ನು ಪ್ರತಿಪಾದಿಸಿಕೊಳ್ಳುತ್ತಾನೆ. ‘ಅವರಿಗೆ ಲೋಭದ ಕಾರಣದಿಂದಾಗಿ ವಿವೇಚನೆಯೇ ಹೋಗಿಬಿಟ್ಟಿರಬಹುದು. ಕುಲಕ್ಷಯದಿಂದುಂಟಾಗುವ ದೋಷವನ್ನವರು ಎಣಿಸದಿರಬಹುದು. ಮಿತ್ರದ್ರೋಹದಲ್ಲಿನ ಮಹಾಪಾಪವನ್ನೂ ಕಾಣದಿರಬಹುದು. ಆದರೆ ನಾವು–ಎಲ್ಲವನ್ನೂ ತಿಳಿದುಕೊಂಡಿರುವವರು–ತಪ್ಪೇಕೆ ಮಾಡಬೇಕು?’

ಅಲ್ಲಿಂದ ಮುಂದಕ್ಕೆ ಅರ್ಜುನನು ಹೇಳುವುದೆಲ್ಲವೂ ಯಥಾರ್ಥವಾದುವೇ. ಕುಲಕ್ಷಯವಾದರೆ ಕುಲಧರ್ಮಗಳೂ ನಾಶವಾಗುತ್ತವೆ. ಧರ್ಮವು ನಷ್ಟವಾದರೆ ಅಧರ್ಮದ ಪ್ರಾದುರ್ಭಾವವೂ ಆಗುತ್ತದೆ. ಅಧರ್ಮದ ಪ್ರಾದುರ್ಭಾವದಿಂದ ಕುಲಸ್ತ್ರೀಯರು ಹಾಳಾಗುತ್ತಾರೆ. ಸ್ತ್ರೀಯರು ಕೆಟ್ಟರೆಂದರೆ ವರ್ಣಸಂಕರವಾಗುತ್ತದೆ. ವರ್ಣಸಂಕರದಿಂದ ಕುಲಘ್ನರಾದವರಿಗೆ ನರಕ ಪ್ರಾಪ್ತಿಯಾಗುತ್ತದೆ. ಪಿತೃಗಳಿಗೆ ಪಿಂಡೋದಕಕ್ರಿಯೆಗಳು ನಿಂತುಹೋಗುತ್ತವೆ.

ಮಹಾಭಾರತಯುದ್ಧವಾದನಂತರ ಅಧರ್ಮದ ಪ್ರಾದುರ್ಭಾವವಾಯಿತೇ?–ಎಂಬುದಿಲ್ಲಿ ವಿಷಯವಲ್ಲ. ಇದೊಂದು ಸಾಮಾನ್ಯನಿಯಮ. ಯುದ್ಧವಾದನಂತರ ಈ ವಿಧವಾದ ವಿಪರ್ಯಾಸವುಂಟಾಗುವುದು ಸಹಜ. ಎರಡನೇ ಮಹಾಯುದ್ಧದ ನಂತರ ಜರ್ಮನಿ ಮುಂತಾದ ದೇಶಗಳಲ್ಲಿ ಇದೇ ಅವ್ಯವಸ್ಥೆಯೇ ಮೂಡಿದ್ದಿತು.

ಮುಂದೆ ಅರ್ಜುನನು ಜ್ಞಾನೋದಯವಾಯಿತೋ-ಎಂಬಂತೆ ಮಾತನಾಡುತ್ತಾನೆ.

**ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್ ।**

'ಮಹಾಪಾಪವನ್ನು ಮಾಡಲು ನಾವೀಗ ಸಿದ್ಧರಾಗಿಬಿಟ್ಟಿದ್ದೆವು. ಅಬ್ಬ! ಈಗಲಾದರೂ ತಿಳಿವಳಿಕೆ ಮೂಡಿತಲ್ಲ!'–ಎಂದು ಉದ್ಗಾರ ಹಾಕುತ್ತಾನೆ.

'ಅರ್ಜುನ! ಅವರು ಹೊಡೆದರೂ ಅವರನ್ನು ಕೊಲ್ಲುವುದಿಲ್ಲವೆಂಬುದೇನೋ ಸರಿ. ಆದರೆ ಅವರು ನಿನ್ನನ್ನು ಕೊಂದೇಬಿಟ್ಟರೇನು ಮಾಡುವೆ?'–ಎಂಬ ಪ್ರಶ್ನೆಯನ್ನು ತಾನೇ ಹಾಕಿಕೊಂಡು, 'ಒಳ್ಳೆಯದೇ ಆಯಿತು–ತನ್ಮೇ **ಕ್ಷೇಮತರಂ ಭವತ್**–ಅತ್ಯಂತಹಿತವೇ ಆದಂತಾಗುತ್ತದೆ'–ಎನ್ನುತ್ತಾನೆ.

ಅರ್ಜುನನ ಈ ಮಾತುಗಳೆಲ್ಲವೂ ಅಹಂಕಾರದಿಂದ ಕೂಡಿದ ಅನುಕಂಪೆಯ ಮಾತುಗಳೇ ಹೊರತು ಸಾಧನೀಯವಾದ ಮಾತುಗಳಲ್ಲ.

'ಅರ್ಜುನನು ಯುದ್ಧವನ್ನು ನಿಲ್ಲಿಸಲು ಯೋಚಿಸಿದ್ದು ತಪ್ಪೇ? ಅವನಿಗೆ ನಿಜವಾದ ಅನುಕಂಪವೇ ಏಕೆ ಬಂದಿರಬಾರದು?'–ಎಂಬ ಪ್ರಶ್ನೆಗಳೂ ಉದ್ಭವಿಸುತ್ತವೆ. ಯುದ್ಧವನ್ನು ಮಾಡುವುದರಲ್ಲಿ ಯುಧಿಷ್ಠಿರನಿಗೇ ಇಚ್ಛೆಯಿರಲಿಲ್ಲ. ಕೇವಲ ಐದು ಗ್ರಾಮಗಳನ್ನೇ ಕೊಟ್ಟರೆ ಸಾಕೆಂದು ಹೇಳುತ್ತಾನೆ. ಶ್ರೀಕೃಷ್ಣನು ಸಂಧಾನಕ್ಕೂ ಹೋಗುತ್ತಾನೆ. ಎಲ್ಲ ಸಂಧಾನಗಳೂ ದುರ್ಯೋಧನನ ಹಠಮಾರಿತನದಿಂದ ಮುರಿದುಬೀಳುತ್ತವೆ. ಈ ಹಿಂದೆ ೨೧ನೆಯ ಅಧ್ಯಾಯದಲ್ಲಿ :

**ಬೃಹತೀಂ ಧಾರ್ತರಾಷ್ಟ್ರಸ್ಯ ಸೇನಾಂ ದೃಷ್ಟ್ವಾ ಸಮುದ್ಯತಾಮ್ ।**
**ವಿಷಾದಮಗಮದ್ರಾಜಾ ಕುನ್ತೀಪುತ್ರೋ ಯುಧಿಷ್ಠಿರಃ ॥೧॥**

ಯುದ್ಧಸನ್ನದ್ಧವಾಗಿದ್ದ ದುರ್ಯೋಧನನ ಮಹಾಸೇನೆಯನ್ನು ನೋಡಿ ಯುಧಿಷ್ಠಿರರಾಜನು ವಿಷಾದಗೊಂಡನು.

ಆ ಸಮಯದಲ್ಲಿ ಅರ್ಜುನನೇ ಅವನಿಗೆ ಸಮಾಧಾನಹೇಳುತ್ತಾನೆ. ಮೇಲಾಗಿ ನಾವು (ಪಾಂಡವರು) ಧರ್ಮಮಾರ್ಗದಲ್ಲಿಯೇ ಇರುವೆವು ಎಂಬುದನ್ನು ಪ್ರತಿಪಾದಿಸುತ್ತಾ ನಾರದೋಕ್ತಿಯನ್ನೂ ಅಲ್ಲಿ ಉದ್ಧರಿಸುತ್ತಾನೆ.

**ನ ತಥಾ ಬಲವೀರ್ಯಾಭ್ಯಾಂ ಜಯನ್ತಿ ವಿಜಿಗೀಷವಃ ।**
**ಯಥಾ ಸತ್ಯಾನೃಶಂಸಾಭ್ಯಾಂ ಧರ್ಮೇಣೈವೋದ್ಯಮೇನ ಚ ॥**

'ವಿಜಯೇಚ್ಛುಗಳು ಕೇವಲ ತಮ್ಮ ಶೌರ್ಯ-ಪರಾಕ್ರಮಗಳಿಂದಲೇ ಜಯಗಳಿಸಲಾರರು. ಸತ್ಯ, ಧರ್ಮ, ದಯೆ ಮತ್ತು ಉತ್ಸಾಹ–ಇವುಗಳಿಂದ ಜಯಗಳಿಸುತ್ತಾರೆ.

**ತ್ಯಕ್ತ್ವಾಧರ್ಮಂ ಚ ಲೋಭಂ ಚ ಮೋಹಂ ಚೋದ್ಯಮಮಾಸ್ಥಿತಾಃ ।**
**ಯುದ್ಧ್ಯಧ್ವಮನಹಂಕಾರಾ ಯತೋ ಧರ್ಮಸ್ತತೋ ಜಯಃ ॥**

ಅಧರ್ಮವನ್ನೂ, ಲೋಭವನ್ನೂ, ಮೋಹವನ್ನೂ ಮತ್ತು ಅಹಂಕಾರ ವನ್ನೂ ಬಿಟ್ಟು ಯುದ್ಧಮಾಡಿರಿ. ಧರ್ಮವಿದ್ದಕಡೆಗೇ ಜಯವು ಲಭಿಸುತ್ತದೆ.'

ನಾರದರ ಈ ವಾಕ್ಯಗಳನ್ನುದ್ಧರಿಸಿ ಯುಧಿಷ್ಠಿರನಿಗೆ ಅರ್ಜುನನು ಸಮಾಧಾನಹೇಳುತ್ತಾನೆ. ಅಂತಹವನೇ ಈಗ ವಿಷಾದಪಡುತ್ತಿದ್ದಾನೆ. ತಾವು ಮಾಡುತ್ತಿರುವುದು ಧರ್ಮಯುದ್ಧವೆಂದು ನಿಶ್ಚಯಿಸಿದನಂತರವೂ ಅವನಿಗೆ ವಿಷಾದಪ್ರಾಪ್ತಿಯಾಗಿದೆ. ಮೇಲಾಗಿ ವಿಷಾದಪಡಲು ಅದು ಸಕಾಲವೂ ಆಗಿಲ್ಲ. ಈ ವಿಷಯವನ್ನೇ ಶ್ರೀಕೃಷ್ಣನು ಮುಂದೆ ಹೇಳುತ್ತಾನೆ.

'ಹದಿನೆಂಟು ಅಕ್ಷೌಹಿಣೀಸೈನ್ಯವಿನಾಶದ ಯುದ್ಧವನ್ನೇ ನಿಲ್ಲಿಸಬಹು ದಾಗಿತ್ತಲ್ಲಾ?' ಎಂದು ಕೆಲವು ಆಧುನಿಕರ ಪ್ರಶ್ನೆಯಿದೆ. ಯುದ್ಧವೆಂಬುದು Natural calamity–'ಪ್ರಾಕೃತಿಕದುರಂತ.' ಇದನ್ನು ತಪ್ಪಿಸುವ ಸಾಧ್ಯತೆ ಯಿಲ್ಲ. ಭೂಭಾರವು ಹೆಚ್ಚಾದಾಗ ಪ್ರಕೃತಿಯು ಸಮತೋಲನ ಗೊಳಿಸಿಕೊಳ್ಳಲು ಭೂಕಂಪನಾದಿಗಳನ್ನುಂಟುಮಾಡುತ್ತದೆ. ಹಲವಾರು ವರ್ಷಗಳಿಗೊಮ್ಮೆ ಯುದ್ಧವೂ ಆಗುತ್ತದೆ. ಇಂತಹ ಯುದ್ಧಗಳನ್ನು ತಪ್ಪಿಸುವ ಸಾಧ್ಯತೆಯಿಲ್ಲ. ಜೀವನಾಶವಂತೂ ಯಾವುದಾದರೂ ರೀತಿಯಲ್ಲಿ ಆಗಲೇಬೇಕಾಗುತ್ತದೆ. ಬಿರುಗಾಳಿಯೇಳುತ್ತದೆ. ಮಹಾನದಿಗಳು ಉಕ್ಕಿ-ಹರಿದು ಅನೇಕ ಊರುಗಳೇ ಕೊಚ್ಚಿಹೋಗುತ್ತವೆ. ಆದುದರಿಂದ ಪ್ರಾಕೃತಿಕ ದುರಂತಗಳು ಮಾತ್ರ ಯಾವುದೇ ಕಾಲಕ್ಕೂ ತಪ್ಪಿದ್ದಲ್ಲ. ಅವನ್ನು ತಪ್ಪಿಸಲು ಯಾವ ಶಾಂತಿದೂತನಿಂದಲೂ ಸಾಧ್ಯವಿಲ್ಲ. ಇದಕ್ಕೆ ಶ್ರೀಕೃಷ್ಣನ ದೌತ್ಯವೇ ಪ್ರತ್ಯಕ್ಷನಿದರ್ಶನ.

ಸಲ್ಲದ, ಅಕಾಲಿಕವಾದ, ದುರಭಿಮಾನಯುಕ್ತವಾದ ಅನುಕಂಪೆಯನ್ನು ಹೊಂದಿ ಅರ್ಜುನನು ಧನುಸ್ಸನ್ನು ಬದಿಗಿಟ್ಟು ಶೋಕದಿಂದ ಪೀಡಿತವಾದ

ಮನಸ್ಸನ್ನು ಹೊಂದಿ ಕುಳಿತುಬಿಡುತ್ತಾನೆ. ಇಲ್ಲಿ ಮತ್ತೊಂದು ವಿಶೇಷವೆಂದರೆ: ಶಸ್ತ್ರಸಂನ್ಯಾಸಮಾಡಿದನಂತರವೂ ಅವನಿಗೆ ಶೋಕ-ವಿಷಾದಗಳು ತಪ್ಪುವುದಿಲ್ಲ. ಮನಸ್ಸು ಡೋಲಾಯಮಾನವಾಗಿಯೇ ಉಳಿದಿರುತ್ತದೆ. ಆದರೆ ಈ ವಿಷಾದವೇ ಶ್ರೀಕೃಷ್ಣನ ಅಮೃತಧಾರಾಸಮಾನವಾದ ಗೀತೆಯ ಪ್ರವಚನಕ್ಕೆ ಕಾರಣವಾಯಿತೆಂಬುದನ್ನು ಮರೆಯಬಾರದು. ಮಹಾತ್ಮರ ಪ್ರತಿಯೊಂದು ಕಾರ್ಯವೂ ಶುಭಾಂತವೇ ಆಗುವುದು ಎಂಬುದಕ್ಕೆ ಇದೊಂದು ಸ್ಪಷ್ಟನಿದರ್ಶನ.

**ಇತಿ ಶ್ರೀಮನ್ಮಹಾಭಾರತೇ ಭೀಷ್ಮಪರ್ವಣಿ ಶ್ರೀಮದ್ಭಗವದ್ಗೀತಾ ಪರ್ವಣಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಅರ್ಜುನ ವಿಷಾದಯೋಗೋ ನಾಮ ಪ್ರಥಮೋऽಧ್ಯಾಯಃ**

(ಭಗವಂತನು ಹೇಳಿದ್ದರಿಂದ ಇದು ಭಗವದ್ಗೀತೆ. ಉಪನಿಷತ್ತುಗಳ ಸಾರವೇ ಆಗಿರುವುದರಿಂದ 'ಗೀತೋಪನಿಷತ್ತು' ಎಂಬ ಹೆಸರನ್ನೂ ಪಡೆದಿದೆ. ಬ್ರಹ್ಮವಸ್ತುವನ್ನೇ ಕುರಿತು ಹೇಳುವುದರಿಂದ ಬ್ರಹ್ಮವಿದ್ಯೆಯೆಂದೂ ಪ್ರಸಿದ್ಧವಾಗಿದೆ.)

೨೫ನೆಯ ಅಧ್ಯಾಯವು ಮುಗಿಯಿತು.

ಭಗವದ್ಗೀತೆಯ ೧ನೆಯ ಅಧ್ಯಾಯವು ಮುಗಿಯಿತು.

# ಭಗವದ್ಗೀತಾ-೨ನೆಯ ಅಧ್ಯಾಯ

೨೬ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ಅರ್ಜುನನಿಗೆ ಯುದ್ಧಮಾಡಲು ಪ್ರೋತ್ಸಾಹವನ್ನೀಯುವ ಸಲುವಾಗಿ ಶ್ರೀಕೃಷ್ಣನು ನಿತ್ಯಾನಿತ್ಯವಸ್ತುವಿವೇಚನಾಪೂರ್ವಕವಾಗಿ ಸಾಂಖ್ಯಯೋಗ, ಕರ್ಮಯೋಗ, ಸ್ಥಿತಪ್ರಜ್ಞನ ಸ್ಥಿತಿ ಇವುಗಳನ್ನು ವಿವರಿಸಿ ಹೇಳಿದುದು

ಸಂಜಯನು ಧೃತರಾಷ್ಟ್ರನನ್ನು ಕುರಿತು ಹೇಳುತ್ತಾನೆ :

**ಓಂ ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।**
**ವಿಷೀದನ್ತಮಿದಂ ವಾಕ್ಯಮುವಾಚ ಮಧುಸೂದನಃ ॥೧॥**

"ಮಹಾರಾಜ! ಈ ರೀತಿಯಾಗಿ, ಮುಂದೇನು ಮಾಡಬೇಕೆಂದು ತೋರದೇ ಕರುಣಾರಸಸಂಪೂರ್ಣನಾಗಿ ಕಂಬನಿದುಂಬಿದ ಕಣ್ಣುಗಳುಳ್ಳವನಾಗಿ ವ್ಯಥೆಪಡುತ್ತಿದ್ದ ಅರ್ಜುನನನ್ನು ಕುರಿತು ಮಧುಸೂದನನು ಹೇಳಿದನು."

* * *

(ಸಂತಜ್ಞಾನೇಶ್ವರರು ಅರ್ಜುನನ ಸ್ಥಿತಿಯನ್ನು ಬಲುಚೆನ್ನಾಗಿ ಚಿತ್ರಿಸಿದ್ದಾರೆ:

ಅವನ ಮನದಲ್ಲಿ ವಿಲಕ್ಷಣವಾದ ಮೋಹವುಂಟಾಯಿತು. ತತ್ಪರಿಣಾಮವಾಗಿ ಅವನ ಚಿತ್ತವು ಕರಗಿತು. ಆತನು ಮಹಾಧೀರನು. ಆದರೆ ನೀರಿನಲ್ಲಿ ಉಪ್ಪಿನ ಹರಳುಗಳು ಕರಗುವಂತೆ–ಗಾಳಿಯಿಂದ ಮೋಡಗಳು ಚದುರಿಹೋಗುವಂತೆ–ಅವನ ಹೃದಯವು ದ್ರವಿಸಿತು. ಸರೋವರದಲ್ಲಿ ಕ್ರೀಡಿಸುವ ರಾಜಹಂಸವು ಕೆಸರಿನಲ್ಲಿ ಸಿಕ್ಕಿಬಿದ್ದು ಮ್ಲಾನವಾಗಿ ತೋರುವಂತೆ ಅರ್ಜುನನು ಮಮತೆಯಿಂದ ವ್ಯಾಕುಲನಾಗಿ ತೀರಾ ಕಳೆಗುಂದಿದನು.)

ಆ ಸಮಯದಲ್ಲಿ ಸೂತ್ರಧಾರನಾಗಿದ್ದ (ಚಾವಟಿಯನ್ನು ಹಿಡಿದಿದ್ದ) ಭಗವಂತನ ಹೊಣೆಗಾರಿಕೆ ಅತಿಹೆಚ್ಚಿನದು. ಅವನು ಅರ್ಜುನನ ರಥಕ್ಕೆ ಮಾತ್ರವೇ ಸೂತ್ರಧಾರನಾಗಿರಲಿಲ್ಲ. ಮಹಾಭಾರತಯುದ್ಧಕ್ಕೇ ಅವನು ಸೂತ್ರಧಾರನಾಗಿದ್ದನು. ಯುದ್ಧಮಾಡುವುದಕ್ಕಾಗಿ ಶಿಕ್ಷಣಪಡೆದು ವೇತನವನ್ನೂ ಸ್ವೀಕರಿಸಿದ್ದ ಯೋಧನು ಸಾಕ್ಷಾತ್ತಾಗಿ ಯುದ್ಧಮಾಡಬೇಕಾಗಿ ಬಂದ ಸಂದರ್ಭದಲ್ಲಿ ಯಾವುದೋ ಕಾರಣದಿಂದ ಯುದ್ಧವು ಅನರ್ಥಕಾರಿಯೆಂದು ಹೇಳಿ ಹಿಂದೆಗೆಯುವಂತೆ ಅರ್ಜುನನದು ಹೊಣೆಗಾರಿಕೆಯಿಲ್ಲದ ವರ್ತನೆಯಾಗಿತ್ತು. ಮೇಲಾಗಿ ಅತಿರಥನಾದ ಅವನು ಯುದ್ಧದಲ್ಲಿ ಸಹಾಯಮಾಡುವನೆಂಬ ನಂಬಿಕೆಯಿಂದಲೇ ಸ್ವಯಂ ಶಾಂತಿಪ್ರಿಯನಾದ ಧರ್ಮರಾಜನೂ ಯುದ್ಧಕ್ಕೆ ಇಳಿದಿದ್ದನು. ಅಂತಹ ಸಂದರ್ಭದಲ್ಲಿ ಯುದ್ಧದಿಂದ ಹಿಂದೆಗೆದರೆ ವಿಶ್ವಾಸದ್ರೋಹ-ಭ್ರಾತೃದ್ರೋಹಗಳಾಗುತ್ತವೆಯೆಂಬುದನ್ನು ಅರ್ಜುನನು ಪರಿ

ಗಣಿಸಿಲ್ಲ. ಆದರೂ ಸುಲಭವಾಗಿ ಅರ್ಜುನನನ್ನು ತಿದ್ದಬಹುದೆಂದು ಭಾವಿಸಿ ಶ್ರೀಕೃಷ್ಣನು ಮೊದಲು ಮೊದಲು ಲೋಕರೂಢಿಯಾದ ಮಾತುಗಳನ್ನೇ ಆಡಿದನು.

**ಓಂ ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ।**
**ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥೨॥**

**ಓಂ ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥೩॥**

"ಅರ್ಜುನ! ಆರ್ಯರಿಂದ ಆಚರಿಸಲ್ಪಡದಿರುವುದೂ, ಸ್ವರ್ಗಕ್ಕೆ ಪ್ರತಿಕೂಲವೂ, ಅಪಕೀರ್ತಿಯನ್ನು ತರುವುದೂ ಆದ ಈ ಹೊಲಸು ವಿಚಾರವು ಈ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ನಿನಗೆ ಹೇಗೆ ಉಂಟಾಯಿತು? ಹೇಡಿತನಕ್ಕೆ ಈಡಾಗಬೇಡ ಪಾರ್ಥ! ಅದು ನಿನಗೆ ಯುಕ್ತವಲ್ಲ. ಈ ನೀಚವಾದ ಹೃದಯ ದೌರ್ಬಲ್ಯವನ್ನು ಕೊಡವಿಹಾಕಿ ಮೇಲೇಳು. ಶತ್ರುಗಳಿಗೆ ಸಂತಾಪವನ್ನುಂಟು ಮಾಡುವ ಪ್ರತಾಪಿಯಲ್ಲವೇ ನೀನು?"

* * *

(ಸ್ವಾಮಿ ವಿವೇಕಾನಂದರು ಈ ಎರಡು ಶ್ಲೋಕಗಳ ಪ್ರಾಮುಖ್ಯವನ್ನು ನಿರೂಪಿಸುತ್ತಾ ಹೀಗೆ ಹೇಳಿದ್ದಾರೆ : 'ನೀವು ಗೀತೆಯಲ್ಲಿ ಇನ್ನು ಏನನ್ನೂ ಓದಬೇಕಾಗಿಲ್ಲ. **'ಕುತಸ್ತ್ವಾ ಕಶ್ಮಲಮಿದಂ, ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ'** ಈ ಎರಡು ಶ್ಲೋಕಗಳನ್ನು ಪಾರಾಯಣಮಾಡಿ ಅದರಲ್ಲಿರುವ ಅರ್ಥವನ್ನು ಮನನಮಾಡಿದರೆ ಸಾಕು. ಇಡೀ ಗೀತೆಯ ಬೋಧನೆಯ ಸಾರವೇ ಈ ಎರಡು ಶ್ಲೋಕಗಳಲ್ಲಿ ಅಡಕವಾಗಿದೆ.' ಈ ಮಾತು ನಿಜ. ಅರ್ಜುನನು 18½ ಶ್ಲೋಕಗಳಲ್ಲಿ ಹೇಳಿದುದೆಲ್ಲವನ್ನು ಶ್ರೀಕೃಷ್ಣನು ಈ ಎರಡು ಶ್ಲೋಕಗಳಿಂದಲೇ ಖಂಡಿಸಿಬಿಟ್ಟಿದ್ದಾನೆ.

"ಈ ದುಃಖ, ಈ ಕರುಣೆ, ಈ ವಿಷಾದ–ನಿನಗೆಲ್ಲಿಂದ ಬಂದುವು? ಈಗ ನಾವು ಯಾವ ಸ್ಥಿತಿಯಲ್ಲಿದ್ದೇವೆ? ಕಾಲವೀಗ ವಿಷಮಿಸಿಬಿಟ್ಟಿದೆ. ಯಾವುದೇ ಕಾರಣದಿಂದಲೂ ಹಿಂದೆಗೆಯುವ ಪರಿಸ್ಥಿತಿಯಲ್ಲಿಲ್ಲ. ಅಥವಾ ಒಂದು ವೇಳೆ ಹಿಂದಿರುಗಬೇಕಾದರೆ ಅದಕ್ಕೆ ಧರ್ಮದ ಹಿನ್ನೆಲೆಯಾದರೂ ಇದೆಯೇ?

ಯೋಚಿಸಿರುವೆಯಾ? ನಿನ್ನ ಈಗಿನ ಈ ನಡವಳಿಕೆ ಅನಾರ್ಯರು ಆಚರಿಸು ವಂತಹುದು. ಅಸಂಭಾವಿತವಾದುದು. ನೀನು ಭಾವಿಸಿರುವಂತೆ ಯುದ್ಧ ಮಾಡುವುದರಿಂದ ನರಕಪ್ರಾಪ್ತಿಯಾಗುವುದಿಲ್ಲ. ಯುದ್ಧಮಾಡಲು ರಣರಂಗಕ್ಕೆ ಬಂದು ಹೇಡಿಯಂತೆ ಶತ್ರುವಿಗೆ ಬೆನ್ನುತೋರಿಸಿ ಓಡಿದರೆ ಅದರಿಂದ ನರಕಪ್ರಾಪ್ತಿಯಾಗುತ್ತದೆ. ನಿನ್ನ ಈ ಮೂಢನಿಶ್ಚಯವು ಸ್ವರ್ಗಕ್ಕೆ ಪ್ರತಿಕೂಲವಾದುದು. ಶತ್ರುಗಳ ವಿಷಯದಲ್ಲಿ ಅನುಕಂಪತೋರಿಸಿದ್ದರಿಂದ ನೀನು ಕೀರ್ತಿಮಂತನಾಗುವೆಯೆಂದು ಭಾವಿಸಿರುವೆಯಾ? ಹಾಗೆಂದಿಗೂ ಭಾವಿಸಬೇಡ. ನಿನ್ನ ಈಗಿನ ಅಸಮಯದ ಅನುಕಂಪವು ಅಥವಾ ವ್ಯಾಮೋ ಹವು ನಿನಗೆ ಹೆಚ್ಚಾದ ಅಪಕೀರ್ತಿಯನ್ನೇ ತಂದುಕೊಡುತ್ತದೆ. ಯುದ್ಧಕ್ಕೆ ಬಂದು ಹಿಂದಿರುಗಿದವನನ್ನು ಯಾರೂ ಹೊಗಳುವುದಿಲ್ಲ. ರಣಹೇಡಿಯೆಂದು ತೆಗಳುವರು. ನಪುಂಸಕತ್ವವನ್ನು ಹೊಂದಬೇಡ, ಪಾರ್ಥ! ನಿನಗಿದು ತಕ್ಕುದಲ್ಲ. ಪಾರ್ಥನು ನಪುಂಸಕನಂತೆ ವರ್ತಿಸಿದನೆಂದರೆ ಕತ್ತಲೆಯೇ ಸೂರ್ಯನನ್ನು ನುಂಗಿತೆಂದು ಹೇಳಬೇಕಾಗುತ್ತದೆ. ಗಾಳಿಯೇ ಮೋಡಕ್ಕೆ ಬೆದರಿತೆಂದು ಹೇಳಬೇಕಾಗುತ್ತದೆ. ಕಟ್ಟಿಗೆಯೇ ಬೆಂಕಿಯನ್ನು ನುಂಗಿತೆಂದು ಹೇಳಬೇಕಾಗುತ್ತದೆ. ಅರ್ಜುನ ಮತ್ತು ನಪುಂಸಕತೆ–ಇವೆರಡೂ ಸೇರಿರಲು ಸಾಧ್ಯವೇ ಇಲ್ಲ. ಆದರೆ ನಿನ್ನ ಇಂದಿನ ಸ್ಥಿತಿಯನ್ನು ನೋಡಿದರೆ ಅತ್ಯಾಶ್ಚರ್ಯ ಕರವಾದ ಸಂಘಟನೆಯುಂಟಾದಂತೆ ಕಾಣುತ್ತದೆ. ಹಾಗೆಂದಿಗೂ ಮಾಡಬೇಡ, ಅರ್ಜುನ! ನಿನಗಿದು ಯುಕ್ತವಲ್ಲ. ಹೃದಯದೌರ್ಬಲ್ಯವೆಂಬುದು ಬಲು ಕೆಟ್ಟುದು. ಹೃದಯದೌರ್ಬಲ್ಯದಿಂದ ಧರ್ಮಾಧರ್ಮವಿವೇಚನೆಯೇ ಸಂಪೂರ್ಣವಾಗಿ ಹೋಗಿಬಿಡುತ್ತದೆ. ಯುಕ್ತಾಯುಕ್ತವಿವೇಚನೆಯೇ ಇರು ವುದಿಲ್ಲ. ಎದೆಗೆಟ್ಟ ಕ್ಷತ್ರಿಯನು ಹಾಳಾಗುವನು. ಆದುದರಿಂದ ತಾತ್ಕಾಲಿಕವಾಗಿ ಉಂಟಾಗಿರುವ ಈ ಹೃದಯದೌರ್ಬಲ್ಯವನ್ನು ಪರಿತ್ಯಜಿಸು. ಒಡನೆಯೇ ಧೀರನಾಗಿ ಮೇಲೆದ್ದುನಿಲ್ಲು."

ಶ್ರೀಯಾಮುನಮುನಿಗಳು ಹೇಳುವಂತೆ ಅರ್ಜುನನು ಈಗ ತೋರಿಸು ತ್ತಿರುವುದು **ಅಸ್ಥಾನ ಸ್ನೇಹಕಾರುಣ್ಯ.**

ಇಲ್ಲಿ ಶ್ರೀಕೃಷ್ಣನು ಅರ್ಜುನನನ್ನು 'ಅನಾರ್ಯ' ಎನ್ನುವುದಿಲ್ಲ. **ಅನಾರ್ಯಜುಷ್ಟಂ** ಎಂದರೆ–'ಕೀಳುಜನರಿಂದ ಮಾಡಲ್ಪಡುವ ಕಾರ್ಯ

ವನ್ನು ಮಾಡುತ್ತಿರುವೆ'–ಎನ್ನುತ್ತಾನೆ. ಅರ್ಜುನನೆಂದಿಗೂ ಅನಾರ್ಯನಲ್ಲ. ಆರ್ಯಶಬ್ದದ ಅರ್ಥ ಹೀಗಿದೆ :

**ಕರ್ತವ್ಯಮಾಚರನ್ಕಾರ್ಯಮಕರ್ತವ್ಯಮನಾಚರನ್ ।**
**ತಿಷ್ಠತಿ ಪ್ರಕೃತಾಚಾರೇ ಸ ಆರ್ಯ ಇತಿ ವೈ ಸ್ಮೃತಃ ॥**

ಕರ್ತವ್ಯವನ್ನು ಬಿಡದೇ ನಿಷಿದ್ಧವಾದುದನ್ನು ಮಾಡದೇ ಧರ್ಮಸಮ್ಮತ ವಾದ ಆಚಾರ-ವ್ಯವಹಾರಗಳಲ್ಲಿರತಕ್ಕವನಿಗೆ 'ಆರ್ಯ' ಎಂದು ಹೆಸರು.)

ಶ್ರೀಕೃಷ್ಣನಿಷ್ಟು ನಿಷ್ಠುರವಾಗಿ ಸ್ಪಷ್ಟವಾಗಿ ಹೇಳಿದರೂ ಸಹ ಅರ್ಜುನನ ಮನಸ್ಸಿಗದು ನಾಟಲೇ ಇಲ್ಲ. ಪುನಃ ತನ್ನ ಹಿಂದಿನ ವಾದಸರಣಿಯನ್ನೇ ಪ್ರಾರಂಭಿಸಿದನು :

**ಓಂ ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ ।**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥೪॥**

"ಮಧುಸೂದನ! ಪೂಜೆಗೆ ಯೋಗ್ಯರಾಗಿರುವ ಭೀಷ್ಮ-ದ್ರೋಣರನ್ನು ಯುದ್ಧದಲ್ಲಿ ನಾನು ಬಾಣಗಳಿಂದ ಹೇಗೆ ಎದುರಿಸಿ ಕಾದಾಡಲಿ?

* * *

(ಕೃಷ್ಣ! ನೀನು ಹೇಳುತ್ತಿರುವುದೇ ನನಗೆ ಅರ್ಥವಾಗುತ್ತಿಲ್ಲ. ಭೀಷ್ಮ ನಮ್ಮ ಪಿತಾಮಹ. ನಮ್ಮ ತಂದೆಯು ಕಾಲವಾದನಂತರ ಇವನೇ ನಮ್ಮ ಯೋಗಕ್ಷೇಮಗಳನ್ನು ನೋಡಿಕೊಳ್ಳುತ್ತಿದ್ದವನು. ನಮ್ಮ ವಂಶದಲ್ಲೇ ಇವನಿಂದು ಹಿರಿಯವನಾಗಿದ್ದಾನೆ. ದ್ರೋಣಾಚಾರ್ಯರ ವಿಷಯವೂ ಸಹ ನಿನಗೆ ತಿಳಿಯದೇ ಇಲ್ಲ. ನನಗೆ ಅಸ್ತ್ರವಿದ್ಯಾಭ್ಯಾಸವನ್ನು ಮಾಡಿಸಿದ ನೆಚ್ಚಿನ ಗುರುಗಳಿವರು. ನನ್ನನ್ನಂತೂ ಇವರು ತಮ್ಮ ಮಗನಂತೆಯೇ ಕಾಣುತ್ತಾರೆ. ಮಗನ ಮೇಲಿರುವುದಕ್ಕಿಂತ ಹೆಚ್ಚಿನ ವಾತ್ಸಲ್ಯವು ಇವರಿಗೆ ನನ್ನ ಮೇಲಿದೆ ಯೆಂದರೂ ಅತಿಶಯೋಕ್ತಿಯಾಗಲಾರದು. ಇವರು ನನಗೆ ಪೂಜಾರ್ಹರು. ಅಲ್ಲವೇ ಕೃಷ್ಣ? ಇಂತಹ ಪೂಜ್ಯರನ್ನು ನಾನು ಈ ಯುದ್ಧದಲ್ಲಿ ಬಾಣಗಳ ಪ್ರಯೋಗದಿಂದ ಹೇಗೆ ತಾನೇ ಎದುರಿಸಲಿ? ನೀನೇ ಯೋಚಿಸಿ ಹೇಳು. ಯುದ್ಧಮಾಡಬೇಕೆಂಬುದು ಕ್ಷತ್ರಿಯನ ಧರ್ಮವಿರಬಹುದು. ಆದರೆ ಯುದ್ಧವನ್ನು ಯಾರೊಡನೆ ಮಾಡಬೇಕೆಂಬುದನ್ನೂ ವಿವೇಚಿಸಬೇಡವೇ?

ರಾಜ್ಯಭೋಗಾದಿ ಆಶಾಪಾಶಗಳಿಗೆ ಕಟ್ಟುಬಿದ್ದು ಗುರುಗಳನ್ನೂ ವಂಶಕ್ಕೇ ಹಿರಿಯರಾದವರನ್ನೂ ಕೊಲೆಮಾಡಬಹುದೇ? )

**ಓಂ ಗುರೂನಹತ್ವಾ ಹಿ ಮಹಾನುಭಾವಾ-**
**ಞ್ಛ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ ।**
**ಹತ್ವಾರ್ಥಕಾಮಾಂಸ್ತು ಗುರೂನಿಹೈವ**
**ಭುಞ್ಜೀಯ ಭೋಗಾನ್ರುಧಿರಪ್ರದಿಗ್ಧಾನ್ ॥೫॥**

ಮಹಾನುಭಾವರಾದ ಗುರುಗಳನ್ನು ಕೊಲ್ಲದೇ ಭಿಕ್ಷಾನ್ನವನ್ನು ಮೆಲ್ಲುವುದು ಕೂಡ ಈ ಲೋಕದಲ್ಲಿ ಒಳ್ಳೆಯದು. ಆದರೆ ಪ್ರಯೋಜನಾಪೇಕ್ಷಿಗಳಾದ ಗುರುಗಳನ್ನು ಕೊಂದು ಅವರ ರಕ್ತದಿಂದ ಸಿಕ್ತವಾದ ಭೋಗಗಳನ್ನು ಹೇಗೆ ತಾನೇ ಅನುಭವಿಸಲಿ?

* * *

(ಮಹಾನುಭಾವರಾದ ಗುರುಜನರನ್ನು ಕೊಲ್ಲದಿದ್ದರೇನಾಗಬಹುದು? ನಮಗೆ ರಾಜ್ಯವು ಸಿಕ್ಕುವುದಿಲ್ಲ. ಅಷ್ಟೇ ತಾನೇ? ಚಿಂತೆಯಿಲ್ಲ. ಭಿಕ್ಷಾಟನೆಯಿಂದಾದರೂ ಜೀವಿಸಿರಬಹುದಲ್ಲವೇ?

'ಹಿರಿಯರು ; ಗುರುಗಳು ಎಂದರೆ ಅವರು ವಿರಕ್ತರಲ್ಲ. ನೀನು ಅವರ ವಿಷಯದಲ್ಲಿ ಭಕ್ತಿಭಾವನೆಯಿಂದಿರುವೆಯೇ ಹೊರತು ಅವರಿಗೆ ನಿನ್ನ ಮೇಲೆ ಯಾವ ವಿಧವಾದ ವಿಶ್ವಾಸವೂ ಇಲ್ಲ. ಅವರು ಕೇವಲ ಅರ್ಥಕಾಮರು. ಈ ಕಾರಣದಿಂದಲೇ ಅವರು ದುರ್ಯೋಧನನಿಗಾಗಿ ಪ್ರಾಣತೊರೆಯಲು ಸಿದ್ಧರಾಗಿ ನಿಂತಿದ್ದಾರೆ. ಇಂತಹವರೊಡನೆ ಏಕೆ ಯುದ್ಧಮಾಡಬಾರದು?' ಎಂದೂ ನೀನು ಹೇಳಬಹುದು, ಮಧುಸೂದನ! ಅವರು ಅರ್ಥಕಾಮರೇ ಇರಬಹುದು. ಆದರೆ ಅವರು ನನಗೆ ಪೂಜ್ಯಗುರುಜನರೆಂಬ ವಿಷಯದಲ್ಲಿ ಸಂಶಯವೇನೂ ಇಲ್ಲವಲ್ಲಾ! ಅಂತಹ ಪೂಜ್ಯಭಾವನೆಯನ್ನು ನಾನಿಟ್ಟು ಕೊಂಡಿರುತ್ತೇನೆ. ನಾವು ಯುದ್ಧಾನಂತರದಲ್ಲಿ ಪಡೆದುಕೊಳ್ಳಬಹುದಾದ ರಾಜ್ಯ-ಕೋಶಾದಿ ಭೋಗವಸ್ತುಗಳು ಈ ಗುರುಜನರ ಮೇಲೆ ಮಾಡಿದ ಶಸ್ತ್ರಘಾತದಿಂದ ಹೊರಟ ರಕ್ತದಿಂದ ಸಿಕ್ತವಾಗಿರುತ್ತವೆ. ಅವರ ರಕ್ತದಿಂದ ಸಿಕ್ತವಾದ ಭೋಗಗಳನ್ನು ನಾನು ಹೇಗೆ ತಾನೇ ಅನುಭವಿಸಲಿ?

(**ಅರ್ಥಕಾಮಾನ್** ಎಂಬ ಪದವನ್ನು **ಗುರೂನ್** ಎಂಬ ಪದಕ್ಕೆ

ವಿಶೇಷಣಮಾಡಿ ಅರ್ಥಮಾಡಲಾಗಿದೆ. **ಅರ್ಥಕಾಮಾನ್ ಭೋಗಾನ್** ಅರ್ಥ-ಕಾಮಸ್ವರೂಪಗಳಾದ ಭೋಗಗಳನ್ನು–ಎಂದೂ ಒಬ್ಬರು ಅರ್ಥ ಮಾಡಿರುತ್ತಾರೆ.)

**ಓಂ ನ ಚೈತದ್ವಿದ್ಮಃ ಕತರನ್ನೋ ಗರೀಯೋ**
**ಯದ್ವಾ ಜಯೇಮ ಯದಿ ವಾ ನೋ ಜಯೇಯುಃ ।**
**ಯಾನೇವ ಹತ್ವಾ ನ ಜಿಜೀವಿಷಾಮ-**
**ಸ್ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ॥೬॥**

ಇವೆರಡರಲ್ಲಿ ಯಾವುದು ಹೆಚ್ಚಿನದೋ ಇದನ್ನೂ ನಾವರಿಯೆವು. ನಾವು ಜಯಿಸುವೆವೋ ಅಥವಾ ನಮ್ಮನ್ನೇ ಅವರು ಜಯಿಸುವರೋ? ಯಾರನ್ನು ಕೊಂದು ಬಾಳಬೇಕೆಂದು ಇಚ್ಛೆಯಾಗುವುದಿಲ್ಲವೋ–ಆ ಧಾರ್ತರಾಷ್ಟ್ರರೇ ನಮ್ಮೆದುರಿಗೆ ನಿಂತಿರುವರು.

* * *

"ಕೃಷ್ಣ! ಇನ್ನೂ ಒಂದು ವಿಷಯವನ್ನು ಹೇಳುತ್ತೇನೆ. ಭಿಕ್ಷಾಚರ್ಯೆ-ಯುದ್ಧ ಇವೆರಡರಲ್ಲಿ ಯಾವುದು ಶ್ರೇಷ್ಠ ಎಂಬುದನ್ನು ನಾವು ತಿಳಿದವರಾಗಿದ್ದೇವೆ. ಜಯಾಪಜಯಗಳ ವಿಷಯವಾಗಿ ಹೇಳುವುದಾದರೆ ನಮ್ಮ ಕಡೆ ಅತಿರಥ-ಮಹಾರಥರನೇಕರಿದ್ದಾರೆ. ಆದರೆ ನಾವು ಏಳು ಅಕ್ಷೌಹಿಣೀಸೈನ್ಯವನ್ನು ಮಾತ್ರವೇ ಹೊಂದಿರುತ್ತೇವೆ. ದುರ್ಯೋಧನನ ಕಡೆಯಲ್ಲಿಯೂ ಅತಿರಥ-ಮಹಾರಥರಿದ್ದಾರೆ. ನಮ್ಮಲ್ಲಿರುವಷ್ಟು ಸಂಖ್ಯೆಯಲ್ಲಿಲ್ಲದಿದ್ದರೂ ಇದನ್ನು ತುಂಬಿಕೊಳ್ಳಲು ಅವರಲ್ಲಿ ನಾಲ್ಕು ಅಕ್ಷೌಹಿಣೀಸೈನ್ಯವು ನಮ್ಮಲ್ಲಿರುವುದಕ್ಕಿಂತಲೂ ಅಧಿಕವಾಗಿದೆ. ಹೀಗಿರುವಾಗ ಅವರೇ ನಮ್ಮನ್ನು ಜಯಿಸುವರೋ ಅಥವಾ ನಾವೇ ಅವರನ್ನು ಜಯಿಸುತ್ತೇವೆಯೋ ಎಂಬುದನ್ನೂ ನಾವು ನಿರ್ಧರಿಸಲಾರೆವು. ಒಂದು ವೇಳೆ ನಾವೇ ಗೆಲ್ಲುತ್ತೇವೆಂದೇ ಭಾವಿಸೋಣ. ಪ್ರಯೋಜನವೇನು? ಯಾವ ಗುರುಜನರನ್ನು ಕೊಂದನಂತರ ನಮಗೆ ಈ ಜೀವಿಕೆಯೇ ಬೇಕಾಗುವುದಿಲ್ಲವೋ, ಧೃತರಾಷ್ಟ್ರನ ಪಕ್ಷದಲ್ಲಿರುವ ಆ ಗುರುಜನರೇ ನಮ್ಮೆದುರಾಗಿ ಬಂದು ನಿಂತಿದ್ದಾರೆ. ಇವರನ್ನು ಸಂಹರಿಸದೇ ಜಯಾಪಜಯಗಳ ನಿಶ್ಚಯವಾಗುವುದಿಲ್ಲವಲ್ಲವೇ? ಇವರೆಲ್ಲರನ್ನೂ ಕೊಂದನಂತರ ನಾವೇಕೆ ಬದುಕಿರಬೇಕು? ಬಂಧು-ಬಳಗದವರೊಡನೆ ಕೂಡಿಕೊಂಡು ಬಾಳು

ವುದೇ ನಿಜವಾದ ಬಾಳು. ಬಂಧು-ಬಳಗದವರನ್ನು ಕಳೆದುಕೊಂಡ ಬಾಳು ನಿಶ್ಚಯವಾಗಿಯೂ ಒಳ್ಳೆಯ ಬಾಳೆನಿಸುವುದೇ? ರಾಜ್ಯ, ಲೌಕಿಕಸಂಪತ್ತು, ಬಟ್ಟೆಬರೆ, ಒಡವೆ, ಸೀರೆ–ಮುಂತಾದುವನ್ನು ಧರಿಸುವಾಗ ಅದನ್ನು ನೋಡುವುದಕ್ಕೆ, ಮೆಚ್ಚುವುದಕ್ಕೆ ಜನರಿರಬೇಕು. ಯಾರೂ ಇಲ್ಲದೇ ಹಾಳೂರಿಗೆ ರಾಜನಾಗಿ ವೈಭವದಿಂದ ಸಿಂಹಾಸನದ ಮೇಲೆ ಕುಳಿತರೆ ಅದನ್ನು ನೋಡುವುದಕ್ಕೆ ಯಾರಿರುತ್ತಾರೆ? (ನಾವು ಭಿಕ್ಷಾಚರಣೆಯಿಂದ ಜೀವಿಸಲು ಹೊರಟುಬಿಟ್ಟರೆ ಉಳಿದವರಾದರೂ ಸುಖ-ಸಂತೋಷಗಳಿಂದ ನಲಿಯುವು ದನ್ನಾದರೂ ನಾವು ನೋಡಬಹುದಾಗಿದೆ. ಗುರುಜನಹತ್ಯೆಯೆಂಬ ಮಹಾ ಪಾಪದಿಂದ ತಪ್ಪಿಸಿಕೊಳ್ಳಬಹುದಾಗಿದೆ.)"

ಇಷ್ಟು ಹೇಳಿದರೂ ಅರ್ಜುನನ ಮನಸ್ಸಿಗೆ ಶಾಂತಿಯು ಸಿಗಲಿಲ್ಲ. ರಥವನ್ನು ಹಿಂದಿರುಗಿಸೆಂದು ಹೇಳುವ ಧೈರ್ಯವೂ ಇಲ್ಲ. ಮದ-ಮೋಹಗಳ ಕಾರಣದಿಂದಾಗಿ ಮನಸ್ಸು ಡೋಲಾಯಮಾನವಾಗಿಬಿಟ್ಟಿದೆ. ಸಾರಥಿಯು ಬೇರೆಯವನಾಗಿದ್ದ ಪಕ್ಷದಲ್ಲಿ ಅರ್ಜುನನು ಏನೇನು ಮಾಡುತ್ತಿದ್ದನೋ ತಿಳಿಯದು. ತನ್ನ ಪ್ರಿಯಸಖನಾದ ಶ್ರೀಕೃಷ್ಣನೇ ಸಾರಥಿಯ ಸ್ಥಾನದಲ್ಲಿದ್ದಾನೆ. ಆದುದರಿಂದ ಧರ್ಮಮೂರ್ತಿಯಾದ ಶ್ರೀಕೃಷ್ಣನ ಅನುಶಾಸನದಂತೆಯೇ ನಡೆಯಬೇಕೆಂದು ಅರ್ಜುನನು ನಿರ್ಧರಿಸಿದನು. ಆದರೆ ಶ್ರೀಕೃಷ್ಣನು ತನ್ನೆಲ್ಲ ಸಮಸ್ಯೆಗಳಿಗೂ ಉತ್ತರಹೇಳಬೇಕು. 'ಹೃದಯದೌರ್ಬಲ್ಯವನ್ನು ಬಿಟ್ಟು ಎದ್ದೇಳು' ಇಷ್ಟುಮಾತ್ರ ಹೇಳಿದರೆ ಸಾಲದು. ಸಕಾರಣವಾಗಿ ತನ್ನ ಸಂಶಯವನ್ನೆಲ್ಲಾ ಪರಿಹರಿಸಿಕೊಡಬೇಕು. ಇದು ಅರ್ಜುನನ ಆಶಯ ವಾಗಿದ್ದಿತು.) ಅರ್ಜುನನು ಶ್ರೀಕೃಷ್ಣನಿಗೆ ಕೈಮುಗಿದು ಹೇಳುತ್ತಾನೆ :

**ಓಂ ಕಾರ್ಪಣ್ಯದೋಷೋಪಹತಸ್ವಭಾವಃ**
**ಪೃಚ್ಛಾಮಿ ತ್ವಾಂ ಧರ್ಮಸಮ್ಮೂಢಚೇತಾಃ ।**
**ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ**
**ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ॥೭॥**

"ಕಾರ್ಪಣ್ಯ (ದೈನ್ಯ )ದ ದೋಷದಿಂದ ನನ್ನ ಸ್ವಭಾವವು ದೂಷಿತ ವಾಗಿದೆ. ಧರ್ಮ (ಕರ್ತವ್ಯ )ದ ವಿಷಯದಲ್ಲಿ ಮೂಢನಾಗಿಬಿಟ್ಟಿದ್ದೇನೆ. ಆದ್ದ ರಿಂದ ನನಗೆ ಯಾವುದು ಹಿತಕರ–ಎಂಬುದನ್ನು ನಿಶ್ಚಯಿಸಿ ಹೇಳಬೇಕೆಂದು

ನಿನ್ನನ್ನೇ ಪ್ರಾರ್ಥಿಸುತ್ತೇನೆ. ನಾನು ನಿನ್ನ ಶಿಷ್ಯ ; ನಿನಗೆ ಶರಣುಬಂದ ವನು. ಏನು ಮಾಡಬೇಕೆಂಬುದನ್ನು ಆಜ್ಞಾಪಿಸು.

* * *

(ಅರ್ಜುನನಿಗೀಗ ತಾನು ಅಕಾಲಿಕದೈನ್ಯದೋಷದಿಂದ ಕೂಡಿದ್ದೇನೆಂಬುದು ಅರ್ಥವಾಗಿದೆ. ಈ ಕಾರಣದಿಂದಲೇ ತನಗೆ ಧರ್ಮಾಧರ್ಮವಿವೇಚನೆಯೂ ಹೋಗಿಬಿಟ್ಟಿರುವುದೆಂಬುದನ್ನು ಅರಿತುಕೊಂಡಿದ್ದಾನೆ. ಆದರೆ ಮನಸ್ಸಿನ ಸಂಶಯವಿನ್ನೂ ಸಂಪೂರ್ಣವಾಗಿ ಹೋಗಿಲ್ಲ. ತನ್ನ ಅನುಕಂಪಕ್ಕೆ ಮೂಲ ಯಾವುದೆಂಬುದನ್ನು ಅರ್ಜುನನಿನ್ನೂ ತಿಳಿದಿಲ್ಲ. ಅದು ತಿಳಿಯುವವರೆಗೂ ಧನುಸ್ಸನ್ನು ಹಿಡಿಯುವ ಇಚ್ಛೆಯೂ ಇಲ್ಲ. ಆದರೂ ಸಹ ತನಗೆ ಶ್ರೇಯಸ್ಸು ಯಾವುದರಿಂದ ಲಭಿಸುತ್ತದೆಂಬುದನ್ನು ಹೇಳಬೇಕೆಂದು ಅರ್ಜುನನು ಕೇಳಿಕೊಳ್ಳುತ್ತಾನೆ. ಇಲ್ಲಿಯೂ ಅರ್ಜುನನ ಮನಸ್ಸು ಡೋಲಾಯಮಾನವಾಗಿದೆ. 'ನಾನು ಅರಸಿದ್ದು ಶ್ರೇಯಸ್ಸಾಧನೆ. ಶ್ರೀಕೃಷ್ಣನು ಪ್ರೇಯಸ್ಸಿನ ಸಾಧನೆಗೆ ನನ್ನನ್ನು ನಿಯೋಜಿಸುತ್ತಿದ್ದಾನೆ'–ಎಂಬುದು ಅರ್ಜುನನ ಭಾವನೆ. ಶ್ರೇಯಸ್ಸೆಂದರೆ ಆಮುಷ್ಮಿಕಸೌಖ್ಯ. ಪ್ರೇಯಸ್ಸೆಂದರೆ ಐಹಿಕಸೌಖ್ಯ. ಗುರುಜನರನ್ನು ಕೊಲ್ಲದೇ ಐಹಿಕಸೌಖ್ಯವನ್ನು ತ್ಯಜಿಸಿ ಭಿಕ್ಷಾಟನೆಮಾಡುವುದು, ಶ್ರೇಯಸ್ಸಿಗೆ–ಆಮುಷ್ಮಿಕಸುಖಕ್ಕೆ ಕಾರಣವಾಗುವುದೆಂದು ಅರ್ಜುನನ ಭಾವನೆಯಾಗಿತ್ತು. ಯುದ್ಧಮಾಡಿ ರಾಜ್ಯಭೋಗಾದಿಗಳನ್ನು ಎಂದರೆ ಶ್ರೇಯಸ್ಸನ್ನು ಪಡೆಯಬಹುದು. ಅದು ಅರ್ಜುನನಿಗೆ ಇಷ್ಟವಿಲ್ಲ. ಪ್ರೇಯಸ್ಸನ್ನು ಪಡೆಯಬಹುದಾದ ಕಾರ್ಯಮಾಡಿ ಶ್ರೇಯಸ್ಸನ್ನು ಹೊಂದಲು ಸಾಧ್ಯವೇ? ಶ್ರೇಯಸ್ಸು ಆವಶ್ಯಕವಿಲ್ಲವೆಂದು ಶ್ರೀಕೃಷ್ಣನೂ ಹೇಳಲಾರ. ಈ ಕಾರಣದಿಂದಲೇ ಅರ್ಜುನನು ಯಾವುದರಿಂದ ಶ್ರೇಯಸ್ಸಾಗುವುದೆಂಬುದನ್ನು ಹೇಳಬೇಕೆಂದು ಶ್ರೀಕೃಷ್ಣನನ್ನು ಪ್ರಾರ್ಥಿಸುತ್ತಾನೆ–'ಶ್ರೇಯಸ್ಸು ಸಿಕ್ಕುವ ಮಾರ್ಗವನ್ನು ತೋರಿ ನನಗೆ ಈ ಸಮಯದಲ್ಲಿ ಏನು ಮಾಡಬೇಕೆಂಬುದನ್ನು ಆಜ್ಞಾಪಿಸು.'

ಅರ್ಜುನನು ಅದನ್ನೂ ನಿಶ್ಚಿತವಾಗಿ ಹೇಳಬೇಕೆನ್ನುತ್ತಾನೆ. 'ಯುದ್ಧಮಾಡುವುದರಿಂದ ನನಗೆ ಶ್ರೇಯಸ್ಸು ಲಭಿಸುವುದೆಂಬುದನ್ನು ನಾನು ಮನಗಾಣಬೇಕು. ಅದನ್ನು ತೋರಿಸಿಕೊಟ್ಟರೆ ನಿನ್ನ ಆಜ್ಞೆಯನ್ನು ಶಿರಸಾವಹಿಸಿ ಮಾಡಲು ಸಿದ್ಧನಿದ್ದೇನೆ.'

(ಪ್ರಪತ್ತಿ (ಶರಣಾಗತಿ) ಯೋಗದ ಐದು ಅಂಗಗಳೂ–ಕಾರ್ಪಣ್ಯ ಶಬ್ದ ದಿಂದಲೇ ಕಾರ್ಪಣ್ಯವೂ, ಶಿಷ್ಯಸ್ತೇSಹಂ ಎಂಬಲ್ಲಿ ಮಹಾವಿಶ್ವಾಸವೂ, ಶಾಧಿ ಮಾಂ ಎಂಬುದರಿಂದ ಗೋಪ್ತೃತ್ವವರಣರೂಪ ಮನೋಭಿಪ್ರಾಯವೂ, ಆನುಕೂಲ್ಯ-ಸಂಕಲ್ಪ-ಪ್ರಾತಿಕೂಲ್ಯವರ್ಜನಗಳೂ ಕೂಡ ಅರ್ಥಾತ್ ತೋರಿ ಬರುತ್ತವೆಂದು ಶ್ರೀವೈಷ್ಣವಸಂಪ್ರದಾಯದ ಅಭಿಪ್ರಾಯವಾಗಿದೆ.)

**ಓಂ ನ ಹಿ ಪ್ರಪಶ್ಯಾಮಿ ಮಮಾಪನುದ್ಯಾ-**
**ದ್ಯಚ್ಛೋಕಮುಚ್ಛೋಷಣಮಿನ್ದ್ರಿಯಾಣಾಮ್ ।**
**ಅವಾಪ್ಯ ಭೂಮಾವಸಪತ್ನಮೃದ್ಧಂ**
**ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ ॥೮॥**

ಏಕೆಂದರೆ : ನಿಷ್ಕಂಟಕವಾಗಿ ಲಭಿಸುವ ಸಮೃದ್ಧವಾಗಿರುವ ಈ ಭೂಲೋಕದ ರಾಜ್ಯವಾಗಲೀ, ದೇವತೆಗಳ ಮೇಲಿನ ಆಧಿಪತ್ಯವೇ ಆಗಲೀ (ಇಂದ್ರಪದವಿಯೇ ಆಗಲೀ) ದೊರೆತರೂ ಇಂದ್ರಿಯಗಳನ್ನು ಶೋಷಿಸು ತ್ತಿರುವ ಈ ದುಃಖವನ್ನು ನೀಗಿಸುವ ಉಪಾಯವು ನನಗೆ ಗೊತ್ತಿಲ್ಲ.

* * *

ಮಾಧವ! ನಾನು ಶ್ರೇಯಸ್ಸಿನ ಮಾರ್ಗವನ್ನು ತೋರೆಂದು ಕೇಳಿ ಕೊಳ್ಳುತ್ತಿರುವ ಕಾರಣವೇನೆಂದರೆ : ಪ್ರೇಯಸ್ಸಿನಿಂದ ನನ್ನ ಮನಸ್ಸಿಗೆ ಶಾಂತಿಯು ಸಿಗದು. ಶತ್ರುಗಳೇ ಇಲ್ಲದ ಸರ್ವಸಂಪತ್ಸಮೃದ್ಧವಾದ ರಾಜ್ಯ ವನ್ನೂ ಮತ್ತು ಇಂದ್ರಪದವಿಯನ್ನೂ ಪಡೆದುಕೊಂಡರೂ ಸಹ, ಈಗ ನನ್ನ ಇಂದ್ರಿಯಗಳಿಗೆ ಆಗುತ್ತಿರುವ ಪರಿತಾಪವು ಉಪಶಮನಹೊಂದುವುದೆಂದು ನಾನು ಭಾವಿಸುವುದಿಲ್ಲ. ಇಂದಿನ ನನ್ನ ಶೋಕವು ನನ್ನ ಇಂದ್ರಿಯಗಳಿಗೆ ಅತಿಯಾಗಿ ಪರಿತಾಪವನ್ನುಂಟುಮಾಡುತ್ತಿದೆ. ಈ ಪರಿತಾಪವು ಪ್ರೇಯಸ್ಸಿ ನಿಂದ ಪರಿಹಾರವಾಗದು. ಆದುದರಿಂದ ನನಗೆ ಶ್ರೇಯಸ್ಸಿನ ಮಾರ್ಗವನ್ನೇ ಉಪದೇಶಿಸು."

(ಕಠೋಪನಿಷತ್ತಿನಲ್ಲಿ ಶ್ರೇಯಸ್ಸು ಮತ್ತು ಪ್ರೇಯಸ್ಸಿನ ವಿಷಯವಾಗಿ ಈ ಮಂತ್ರವು ಹೇಳಲ್ಪಟ್ಟಿದೆ.

**ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತ-**
**ಸ್ತೌ ಸಂಪರೀತ್ಯ ವಿವಿನಕ್ತಿ ಧೀರಃ ।**

**ಶ್ರೇಯೋ ಹಿ ಧೀರೋಽಭಿಪ್ರೇಯಸೋ ವೃಣೀತೇ**
**ಪ್ರೇಯೋ ಮನ್ದೋ ಯೋಗಕ್ಷೇಮಾದ್ವೃಣೀತೇ ॥೨॥**

ಶ್ರೇಯಸ್ಸು ಎಂದರೆ ನಿಃಶ್ರೇಯಸ್ಸು ; ಮೋಕ್ಷಕ್ಕೆ ಕಾರಣವಾದ ಜ್ಞಾನ. ಪ್ರೇಯಸ್ಸು ಅವಿದ್ಯಾರೂಪವಾದುದು, ಸ್ವರ್ಗಾದಿ ಅನಿತ್ಯಫಲಗಳಿಗೆ ಕಾರಣ ವಾಗುತ್ತದೆ.

ಶ್ರೇಯಸ್ಸು ಮತ್ತು ಪ್ರೇಯಸ್ಸು ಮನುಷ್ಯನ ಸಮೀಪಕ್ಕೆ ಬರುತ್ತವೆ. ಧೀಮಂತನು ಅವುಗಳನ್ನು ಚೆನ್ನಾಗಿ ಪರಿಶೀಲಿಸಿ ವಿವೇಚಿಸುತ್ತಾನೆ. ಧೀಮಂತನು ಪ್ರೇಯಸ್ಸಿಗಿಂತ ಶ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ. ಅವಿ ವೇಕಿಯು ಯೋಗ-ಕ್ಷೇಮಗಳಿಗಾಗಿ ಪ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ.

ಶ್ರೇಯಸ್ಸು ಮತ್ತು ಪ್ರೇಯಸ್ಸುಗಳ ಶಬ್ದನಿಷ್ಪತ್ತಿಯೂ ಸ್ವಾರಸ್ಯವಾಗಿದೆ. ಶ್ರೇಯಸ್ಸಿನ ಶಬ್ದಾರ್ಥ ಪ್ರಶಸ್ತವಾದುದು. **ಪ್ರಶಸ್ತಸ್ಯ ಶ್ರಃ** ಎಂಬ ಸೂತ್ರದಿಂದ ಪ್ರಶಸ್ತಶಬ್ದಕ್ಕೆ ಶ್ರ–ಎಂಬ ಆದೇಶವು ಬಂದು **ಈಯಸುನ್** ಪ್ರತ್ಯಯವು ಸೇರಿ ಸಿದ್ಧವಾಗಿರುವ ಶಬ್ದವಿದು. ಪ್ರಿಯಶಬ್ದಕ್ಕೆ **ಈಯಸುನ್** ಪ್ರತ್ಯಯವು ಸೇರಿ 'ಪ್ರೇಯಃ' ಶಬ್ದವಾಗಿದೆ. ಅತ್ಯಂತಹಿತವೂ ಪ್ರಶಸ್ತವೂ ಆಗಿರುವುದೇ ಶ್ರೇಯಸ್ಸು. ಪ್ರಶಸ್ತವಾಗಿರುವುದು ಅಥವಾ ಹಿತವಾಗಿರುವುದು ಪ್ರಿಯವಾಗಿರಬೇಕೆಂಬ ನಿಯಮವಿಲ್ಲ. ಪ್ರಾಪಂಚಿಕಸುಖವು ಪ್ರಿಯವೇನೋ ಹೌದು. ಆದರೆ ಪ್ರಶಸ್ತವಲ್ಲ. ಯಾವುದು ಕೇವಲ ಪ್ರಿಯವಾಗಿದೆಯೋ ಅದು ಪ್ರೇಯಸ್ಸು. ಪ್ರಿಯವಾದುದೆಲ್ಲಾ ಪ್ರಶಸ್ತವೆಂದು ಹೇಳುವಹಾಗಿಲ್ಲ. ಮದ್ಯಪಾನವು ಪ್ರಿಯವಾಗಿರಬಹುದು ; ಪ್ರಶಸ್ತವಲ್ಲ.)

**ಸಂಜಯ ಉವಾಚ :**

**ಓಂ ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪಃ ।**
**ನ ಯೋತ್ಸ್ಯ ಇತಿ ಗೋವಿನ್ದಮುಕ್ತ್ವಾ ತೂಷ್ಣೀಂ ಬಭೂವ ಹ ॥೯॥**

ಸಂಜಯನು ಧೃತರಾಷ್ಟ್ರನಿಗೆ ಹೇಳುತ್ತಾನೆ :

"ಫಲಪ್ರಾಪಕವಾದ ಯುದ್ಧವನ್ನು ಮಾಡಿಯೂ ಸಹ ಶ್ರೇಯಸ್ಸನ್ನು ಪಡೆಯಬಹುದೆಂಬುದನ್ನು ನೀನು ತೋರಿಸಿಕೊಡಬೇಕು. ಅದುವರೆಗೂ ನಾನು ಯುದ್ಧಮಾಡುವುದಿಲ್ಲ"–ಎಂಬುದಾಗಿ ಶತ್ರುತಾಪಕನಾದ ಗುಡಾ ಕೇಶನು ಹೃಷೀಕೇಶನಾದ ಗೋವಿಂದನಿಗೆ ಹೇಳಿ ಸುಮ್ಮನೆ ಕುಳಿತುಬಿಟ್ಟನು.

**(ಗುಡಾಕ**–ಎಂದರೆ ನಿದ್ರೆ. ನಿದ್ರೆಯ ಮೇಲೆ ಹತೋಟಿ ಇರುವವನು **ಗುಡಾ ಕೇಶ**. ಪೊದೆಯಂತಹ ತಲೆಗೂದಲುಳ್ಳವನೆಂದೂ ಕೆಲವರು ಹೇಳುತ್ತಾರೆ.)

**ಓಂ ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।**
**ಸೇನಯೋರುಭಯೋರ್ಮಧ್ಯೇ ವಿಷೀದನ್ತಮಿದಂ ವಚಃ ॥೧೦॥**

ಭಾರತ! ಎರಡು ಸೇನೆಗಳ ಮಧ್ಯದಲ್ಲಿದ್ದ ರಥದಲ್ಲಿ ಕುಳಿತು ಶೋಕಿಸುತ್ತಿದ್ದ ಅರ್ಜುನನನ್ನು ಕುರಿತು ಹೃಷೀಕೇಶನು ನಗುತ್ತಿರುವನೋ ಎಂಬಂತೆ ತೋರಿಸಿಕೊಳ್ಳುತ್ತಾ ಈ ಮಾತನ್ನು ಹೇಳಿದನು. (ಹೃಷೀಕ ಎಂದರೆ ಇಂದ್ರಿಯಗಳಿಗೆ, **ಈಶ** ಒಡೆಯನಾದವನು **ಹೃಷೀಕೇಶ**. ಹೃಷ್ಟವಾಗಿ ನಿಮಿರಿ ನಿಂತಿರುವ ತಲೆಗೂದಲುಳ್ಳವನೆಂದೂ ಕೆಲವರು ಹೇಳುತ್ತಾರೆ.)

* * *

(ಅರ್ಜುನನು ಯುದ್ಧಮಾಡುವುದಿಲ್ಲವೆಂದು ಹಠಹಿಡಿದು ಕುಳಿತಿದ್ದಾನೆ. ವಿಷಣ್ಣನಾಗಿದ್ದಾನೆ. ನಿಸ್ತೇಜನಾಗಿದ್ದಾನೆ. ತನಗೆ ಶ್ರೇಯಸ್ಸಿನ ಮಾರ್ಗವನ್ನು ತಿಳಿಯಹೇಳಬೇಕೆಂದು ಪ್ರಾರ್ಥಿಸಿದ್ದಾನೆ. ದಯಾಮಯನಾದ ಶ್ರೀಕೃಷ್ಣನು–'ತ್ಯಕ್ತ್ವೋತ್ತಿಷ್ಠ ಪರಂತಪ'–ಎಂದು ಎಚ್ಚರಿಸಿದ್ದನು. ಈ ಎಚ್ಚರಿಕೆಯನ್ನೂ ಮನಸ್ಸಿಗೆ ತಂದುಕೊಳ್ಳದೆ ಅರ್ಜುನನು ಸುಮ್ಮನೆ ಕುಳಿತಿದ್ದುದಕ್ಕಾಗಿ ಶ್ರೀಕೃಷ್ಣನು ಸಿಟ್ಟಾಗಲಿಲ್ಲ. ಅರ್ಜುನನ ಪ್ರಾರ್ಥನೆಯಂತೆ ಶ್ರೇಯಸ್ಸಿನ ಮಾರ್ಗವನ್ನು ತಿಳಿಸಬೇಕೆಂದು ನಿಶ್ಚಯಿಸಿದನು. ಅರ್ಜುನನಿಗೆ ಶ್ರೇಯಸ್ಸಿನ ಮಾರ್ಗವನ್ನೂ ಹೇಳಬೇಕು. ಆದರವನು ಕರ್ತವ್ಯಪರಾಙ್ಮುಖನೂ ಆಗಬಾರದು. ಯುದ್ಧಫಲರೂಪವಾದ ಪ್ರೇಯಸ್ಸೂ ಲಭಿಸಿ ಶಿಷ್ಯನಿಗೆ ಶ್ರೇಯಸ್ಸೂ ಉಂಟಾಗಬೇಕು. ಈ ರೀತಿಯಲ್ಲವನಿಗೆ ಬೋಧಿಸಬೇಕು. ಇದು ಕೇವಲ ರಾಜನೀತಿಯ ಉಪದೇಶದಿಂದ ಸಾಧ್ಯವಾಗುವುದಿಲ್ಲ. ಅಖಂಡ ವಿಶ್ವವೇ ತನ್ನದಾಗುವುದೆಂದು ಶ್ರೀಕೃಷ್ಣನ ರಾಜನೀತಿಯುಕ್ತವಾದ ಮಾತಿನಿಂದ ಮನದಟ್ಟಾದರೂ ಸಹ ಅರ್ಜುನನಿಗೆ ಅದರಿಂದ ಮನಃಶಾಂತಿಯು ಲಭಿಸದು. ಅರ್ಜುನನಿಗೆ ಮನಃಶಾಂತಿಯೂ ಲಭಿಸಬೇಕು ; ಅವನು ಕಾರ್ಯಪ್ರವೃತ್ತನೂ ಆಗಬೇಕು. ಹೀಗಾಗಬೇಕಾದರೆ ಅಧ್ಯಾತ್ಮದ ಉಪದೇಶವೊಂದೇ ಏಕೈಕಮಾರ್ಗ. ಇದನ್ನೇ ಮನಸ್ಸಿನಲ್ಲಿ ನಿರ್ಧರಿಸಿದ ಶ್ರೀಕೃಷ್ಣನು ತೋರಿಕೆಯ ಮಂದಹಾಸವನ್ನು ಬೀರುತ್ತಾ ಈ ಮಾತುಗಳನ್ನು ಹೇಳಿದನು.

ಪ್ರಹಸನ್ನಿವ ಎಂಬುದಕ್ಕೆ ಶ್ರೀರಾಮಾನುಜರು ಹೀಗೆ ವ್ಯಾಖ್ಯಾನ ಮಾಡಿರುತ್ತಾರೆ. **'ದೇಹಾತ್ಮನೋಃ ಯಥಾರ್ಥಾತ್ಮಜ್ಞಾನನಿಮಿತ್ತ ಶೋಕಾವಿಷ್ಟಂ ದೇಹಾತಿರಿಕ್ತಮಾತ್ಮಜ್ಞಾನನಿಮಿತ್ತಂ ಚ ಧರ್ಮಂ ಭಾಷಮಾಣಂ ಪರಸ್ಪರವಿರುದ್ಧಗುಣಾನ್ವಿತಂ । ಉಭಯೋದ್ಯುಕ್ತ ಯೋರ್ಮಧ್ಯೇ ಅಕಸ್ಮಾನ್ನಿರುದ್ಯೋಗಂ ಪಾರ್ಥಮವಲೋಕ್ಯ ಪರಮ ಪುರುಷಃ ಪ್ರಹಸನ್ನಿವ ಇದಮುವಾಚ.** ದೇಹ ಮತ್ತು ಆತ್ಮಗಳ ಯಥಾರ್ಥ ಜ್ಞಾನವಿಲ್ಲದುದರಿಂದ ಉಂಟಾದ ಶೋಕದಿಂದ ತುಂಬಿದ್ದಾನೆ. ಆದರೆ ದೇಹಾತಿರಿಕ್ತವಾದ ಆತ್ಮಸ್ವರೂಪಜ್ಞಾನದಿಂದಲೇ ಉಂಟಾಗಬೇಕಾಗಿರುವ ಧರ್ಮದ ಮಾತನ್ನು ಆಡುತ್ತಿದ್ದಾನೆ. ಹೀಗೆ ಪರಸ್ಪರವಿರುದ್ಧವಾದ ಗುಣಗಳಿಂದ ಕೂಡಿದ್ದ ಮತ್ತು ಯುದ್ಧರಂಗದಲ್ಲಿ ವೀರಾವೇಶವನ್ನು ಹೊಂದುವುದಕ್ಕೆ ಬದಲಾಗಿ ನಿರುದ್ಯೋಗದಿಂದ ಕುಳಿತಿದ್ದ ಪಾರ್ಥನನ್ನು ಕಂಡು ನಗು ತ್ತಿರುವನೋ ಎಂಬಂತೆ ತೋರಿಸಿಕೊಳ್ಳುತ್ತಾ ಈ ಮಾತನ್ನು ಹೇಳಿದನು.'

('ನಗುವು ತೋರಿಕೆಯದೆಂದು ಹೇಳಿರುವುದರಿಂದ ಶ್ರೀಕೃಷ್ಣನು ಸಿಟ್ಟಿ ನಿಂದ ಮಾತನಾಡತೊಡಗಿದನು. ತಾಯಿಯ ಸಿಟ್ಟಿನಲ್ಲಿ ಪ್ರೇಮವು ಗುಪ್ತ ವಾಗಿರುತ್ತದೆ. ಔಷಧದ ಕಹಿಯಲ್ಲಿ ಜೀವನಶಕ್ತಿಯು ತುಂಬಿರುತ್ತದೆ. ಅದು ಮೇಲೆ ಕಾಣುವುದಿಲ್ಲ. ಗುಣದ ರೂಪದಿಂದ ಪ್ರಕಟವಾಗುವುದು. ಈ ಉದಾಹರಣೆಗಳಂತೆ ಭಗವಂತನು ಪರಿಣಾಮದಲ್ಲಿ ತೀರ ಹಿತಕರವಾಗು ವಂತೆ ಮೇಲ್ತೋರಿಕೆಯಲ್ಲಿ ಸಿಟ್ಟಿನ ಈ ಮಾತನ್ನು ಹೇಳಿದನು'–ಎಂದು ಸಂತ ಜ್ಞಾನೇಶ್ವರರು ವ್ಯಾಖ್ಯಾನಮಾಡಿರುತ್ತಾರೆ.)

**ಶ್ರೀಭಗವಾನುವಾಚ :**

**ಓಂ ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನಗತಾಸೂಂಶ್ಚ ನಾನುಶೋಚನ್ತಿ ಪಣ್ಡಿತಾಃ ॥೧೧॥**

ಭಗವಂತನು ಹೇಳಿದನು :

"ಯಾರನ್ನು ಕುರಿತು ಶೋಕಿಸಬಾರದೋ ಅವರಿಗಾಗಿ ನೀನು ಶೋಕಿ ಸುತ್ತಿರುವೆ. ಆದರೆ ಪ್ರಾಜ್ಞರಾಡುವ ಮಾತುಗಳನ್ನೂ ಹೇಳುತ್ತಿರುವೆ. ಸತ್ತವರಿ ಗಾಗಲೀ–ಬದುಕಿರುವವರಿಗಾಗಲೀ ಪಂಡಿತರಾದವರು ದುಃಖಿಸುವುದಿಲ್ಲ.

ಭೀಷ್ಮ-ದ್ರೋಣಾದಿಗಳ ವಿಷಯವಾಗಿ ನೀನು ಶೋಕಿಸಬೇಕಾದ ಆವಶ್ಯಕತೆಯಿಲ್ಲ. ನೀನು ಭ್ರಮೆಗೊಂಡ ಅಂತಃಕರಣದಿಂದ ಅಹಂಕಾರ ಯುಕ್ತನಾಗಿ–'ಇವರನ್ನು ನಾನು ಸಾಯಿಸಲು ಬಂದಿದ್ದೇನೆ. ಗುರುಜನರನ್ನು ಸಂಹರಿಸಬಹುದೇ?'–ಮುಂತಾಗಿ ಅಪಪ್ರಲಾಪಮಾಡಿಕೊಂಡು ದುಃಖಿಸುತ್ತಿರುವೆ. ಅವರು ನಿನಗಾಗಿ ಸಾಯುವುದಿಲ್ಲ. ಅವರು ಪಂಡಿತರು. ಹುಟ್ಟು-ಸಾವುಗಳ ರಹಸ್ಯವನ್ನರಿತವರು. ಈ ಕಾರಣದಿಂದಲೇ ಅವರು ಸ್ವಧರ್ಮ ವಾದ ಯುದ್ಧಕ್ಕೆ ಬಂದಿರುತ್ತಾರೆ. ಆದುದರಿಂದ ಅವರಿಗಾಗಿ ನೀನು ದುಃಖಿಸ ಬೇಕಾದ ಕಾರಣವಿಲ್ಲ. ಪ್ರಾಜ್ಞರಾಡುವ ಮಾತುಗಳನ್ನೇ ಆಡುವೆ. ತದ್ವಿರುದ್ಧ ವಾಗಿಯೇ ವರ್ತಿಸುತ್ತಿರುವೆ. '**ಕುಲಕ್ಷಯೇ ಪ್ರಣಶ್ಯನ್ತಿ ಕುಲಧರ್ಮಾಃ ಸನಾತನಾಃ**'–ಎಂಬುದಾಗಿ ವರ್ಣಸಾಂಕರ್ಯದ ವಿಷಯವಾಗಿ ಮಾತ ನಾಡಿದೆ. ವರ್ಣಸಂಕರವಾಗುವುದರ ಮೊದಲೇ ನಿನ್ನಲ್ಲಿ ಜಾತಿಧರ್ಮಗಳು ಹಾಳಾಗಿವೆ. ನಿನ್ನ ಜಾತಿಯ ಧರ್ಮವಾವುದೆಂಬುದನ್ನು ನೀನೀಗ ವಿವೇಚಿಸುತ್ತಿಲ್ಲ. ಸ್ವಜಾತಿಧರ್ಮವನ್ನು ಬಿಟ್ಟು ಭಿಕ್ಷಾಟನೆಮಾಡಲು ನಿಶ್ಚಯಿಸಿರುವೆ. ಇದೆಂತಹ ವಿಪರ್ಯಾಸ–ಅರ್ಜುನ! ಸತ್ತವರಿಗಾಗಲೀ– ಬದುಕಿರುವವರಿಗಾಗಲೀ ಪಂಡಿತರಾದವರು ಶೋಕಿಸುವುದಿಲ್ಲ. '**ಪಣ್ಡಾ ಆತ್ಮವಿಷಯಾ ಬುದ್ಧಿಃ ಯೇಷಾಂ ತೇ ಹಿ ಪಣ್ಡಿತಾಃ** ಆತ್ಮವಿಷಯವಾದ ಬುದ್ಧಿಯುಳ್ಳವರು ಅಥವಾ ಆತ್ಮಜ್ಞಾನವುಳ್ಳವರು ಪಂಡಿತರು.' ಸತ್ತವರಿಗಾಗಿ ಸಾಧಾರಣಮನುಷ್ಯರು ಅಳುತ್ತಾರೆ. ಆದರೆ ಆತ್ಮಜ್ಞರಾದ ಪಂಡಿತರು ಅಳುವುದಿಲ್ಲ. ಆತ್ಮನು ನಿತ್ಯನಾಗಿರುವುದರಿಂದ ಅವನಿಗೆ ನಿಶ್ಚಯವಾಗಿಯೂ ಮರಣವುಂಟಾಗಿಲ್ಲ–ಎಂಬ ವಿವೇಕವು ಜ್ಞಾನಿಗಳಿಗಿರುತ್ತದೆ. ಇದಲ್ಲದೇ ಹುಟ್ಟಿದವರೆಲ್ಲಾ ಮರಣಹೊಂದಲೇಬೇಕು–ಎಂಬ ಅರಿವೂ ಸಹ ಅವರಿಗಿರುತ್ತದೆ. ಆದುದರಿಂದ ಗತಾಸುಗಳ ವಿಷಯದಲ್ಲಿ ಪಂಡಿತರು ದುಃಖಪಡುವುದಿಲ್ಲ. 'ಅದೇನೋ ಸರಿ. ಬದುಕಿರುವವರಿಗೂ ಅಳುವುದಿಲ್ಲ' ಎಂಬುದರ ಅರ್ಥವೇನು? ಜೀವಿಯು ಬದುಕಿರುವಾಗ ತನ್ನ ಕರ್ಮಾನುಗುಣವಾಗಿ ಅನೇಕ ಕಷ್ಟ-ಕಾರ್ಪಣ್ಯಗಳನ್ನು ಅನುಭವಿಸುತ್ತಾನೆ. ಜೀವಿಯ ಆ ಕಷ್ಟವನ್ನು ನೋಡಿ ಪಂಡಿತನಾದವನು ಶೋಕಿಸುವುದಿಲ್ಲ. ಪ್ರಾಣವು ಒಂದು ದೇಹವನ್ನು ಬಿಟ್ಟಿದ್ದಕ್ಕಾಗಲೀ–ಒಂದು ದೇಹದಲ್ಲಿರುವುದಕ್ಕಾಗಲೀ ಶೋಕಿಸು

ವುದಿಲ್ಲ. ಶಾಶ್ವತನಾದ ಜೀವನು (ಮುಕ್ತಿಯಾಗುವವರೆಗೂ) ಎಲ್ಲಾದರೊಂದುಕಡೆ ಹುಟ್ಟಲೇಬೇಕೆಂಬುದೂ ಅವನು ನಾಶರಹಿತನೆಂಬುದೂ ಅವರ ಸಿದ್ಧಾಂತವಾಗಿರುತ್ತದೆ. ಆದುದರಿಂದ ಅವರು ಶೋಕಿಸುವುದಿಲ್ಲ.

**ಓಂ ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ನರಾಧಿಪಾಃ ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥೧೨॥**

ನಾನು ಯಾವ ಕಾಲದಲ್ಲಿಯೇ ಆದರೂ 'ಇರಲಿಲ್ಲ' ಎಂಬುದಿಲ್ಲ. ನೀನಾಗಲೀ ಈ ರಾಜರಾಗಲೀ 'ಇರಲಿಲ್ಲ' ಎಂಬುವುದಿಲ್ಲ. ನಾವು ಯಾರೂ ಇನ್ನು ಮುಂದೆ 'ಇರುವುದಿಲ್ಲ' ಎಂಬುವುದೂ ಇಲ್ಲ.

ಅರ್ಜುನ! ನಾನು ಈ ಹಿಂದೆಯೂ ಇದ್ದೆನು. ಈಗಲೂ ಇದ್ದೇನೆ. ಮುಂದೆಯೂ ಇರುತ್ತೇನೆ. ನೀನೂ ಸಹ ಹಿಂದೆಯೂ ಇದ್ದೆ. ಈಗಲೂ ಇರುತ್ತೀಯೆ. ಮುಂದೆಯೂ ಇರುವೆ. ಈ ರಾಜರು ಹಿಂದೆಯೂ ಇದ್ದರು, ಈಗಲೂ ಇದ್ದಾರೆ. ಮುಂದೆಯೂ ಇರುವರು. ನಾನಾಗಲೀ ನೀನಾಗಲೀ ಶರೀರವ್ಯತ್ಯಾಸದಿಂದ ಹಿಂದೆಯೂ ಇದ್ದೆವು. ಈಗ ಶರೀರಗಳನ್ನು ಧಾರಣೆಮಾಡಿರುತ್ತೇವೆ. ಮುಂದೆ ಮತ್ತಾವುದೋ ಶರೀರವನ್ನು ಧರಿಸಿ ಹುಟ್ಟುವೆವು. ಆದುದರಿಂದ ನಮಗಾರಿಗೂ ಅಳಿವೆಂಬುದೇ ಇಲ್ಲ.

* * *

(ಈ ಪ್ರಸಂಗ ಹಿಂದಿನ ಜನ್ಮವುಂಟೇ—ಇಲ್ಲವೇ?—ಎಂಬುದನ್ನು ಹೇಳುವ ಪ್ರಸಂಗವಲ್ಲದಿದ್ದರೂ ಭಗವಂತನು ಹಿಂದಿನ ಜನ್ಮವಿದೆಯೆಂಬುದನ್ನು ಇಲ್ಲಿ ಸುಸ್ಪಷ್ಟವಾಗಿ ಹೇಳುತ್ತಾನೆ. ನಾಸ್ತಿಕರು ಪುನರ್ಜನ್ಮವನ್ನಾಗಲೀ ಪೂರ್ವಜನ್ಮವನ್ನಾಗಲೀ ಒಪ್ಪುವುದಿಲ್ಲ. ಶರೀರವು ಭಸ್ಮವಾಯಿತೆಂದರೆ ಎಲ್ಲವೂ ಮುಗಿದಂತೆಯೇ ಎಂಬುದೇ ಅವರ ವಾದವಾಗಿರುತ್ತದೆ. ಆದರೆ ಇತ್ತೀಚೆಗೆ ನಡೆಯುತ್ತಿರುವ ಸಂಶೋಧನೆಗಳಲ್ಲಿ ಪುನರ್ಜನ್ಮ ಮತ್ತು ಹಿಂದಿನ ಜನ್ಮಗಳುಂಟೆಂಬುದು ಸ್ಪಷ್ಟವಾಗುತ್ತಿದೆ. ಹಲವಾರು ಮಂದಿಗೆ ಹಿಂದಿನ ಜನ್ಮದ ಸ್ಮರಣೆಯೂ ಇದ್ದು ತಕ್ಕ ಸಾಕ್ಷಿ-ಸಾಹಿತ್ಯಗಳಿಂದ ಅವರ ಸ್ಮರಣೆಯು ನಿಜವಾದುದೆಂದು ಸ್ಪಷ್ಟೀಕರಣವಾಗಿದೆ. ಹಿಂದಿನ ಜನ್ಮದ ಸ್ಮರಣೆಯಿಲ್ಲದಿರುವುದು ನಮಗೆ ದೇವರು ಕೊಟ್ಟಿರುವ ಒಂದು ವರ. ಈ ಜನ್ಮದಲ್ಲೇ ಹುಟ್ಟಿದಾಗಿನಿಂದ ಆದ ಅನುಭವಗಳನ್ನು ಸ್ಮರಿಸಿಕೊಂಡರೆ ನಾವು ಭ್ರಾಂತ

ರಾಗುತ್ತೇವೆ. ಹೀಗಿರುವಾಗ ಹಿಂದಿನ ಜನ್ಮದ ಸ್ಮರಣೆಯೂ ಇದ್ದುಬಿಟ್ಟಿದ್ದರೆ ಹುಚ್ಚರೇ ಆಗಿಬಿಡುತ್ತೇವೆ. ಮನುಷ್ಯನ ಹಿಂದಿನ ಜನ್ಮದ ಇತಿಹಾಸವನ್ನು ತಿಳಿಸುವ ಪವಾಡಪುರುಷರಿದ್ದಾರೆ.

ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮದಿಂದ ಈ ಜನ್ಮದ ರೋಗವನ್ನೂ ಸಹ ಅವರು ಗುರುತಿಸುತ್ತಾರೆ. ಈ ವಿಧವಾದ ದಾಖಲೆಗಳು ಸುಮಾರು ಮೂರು ಸಾವಿರಕ್ಕೂ ಹೆಚ್ಚು ಸಿಕ್ಕಿವೆ. ಈ ಕಾರಣಗಳಿಂದ ಜನ್ಮಾಂತರವೇ ಇಲ್ಲ ಎಂದು ಹೇಳುವ ಮತದವರೆಲ್ಲರೂ ದಿಗ್ಭ್ರಾಂತರಾಗುತ್ತಿದ್ದಾರೆ.)

'ದೇಹಭೇದಾನುವೃತ್ತ್ಯಾ ಬಹುವಚನಂ ನಾತ್ಮಭೇದಾಭಿಪ್ರಾಯೇಣ–ಬೇರೆ-ಬೇರೆ ದೇಹಗಳನ್ನು ಅನುಸರಿಸಿ ಬಹುವಚನವನ್ನು ಪ್ರಯೋಗಿಸಿದೆಯೇ ಹೊರತು ಆತ್ಮನಲ್ಲಿ ಭೇದವುಂಟೆಂಬ ಅಭಿಪ್ರಾಯದಿಂದಲ್ಲ.'–ಇದು ಶ್ರೀಶಂಕರರ ಅಭಿಮತ.

**ಯಥಾಹಂ ಸರ್ವೇಶ್ವರಃ ಪರಮಾತ್ಮಾ ನಿತ್ಯ ಇತಿ ನಾತ್ರ ಸಂಶಯಃ। ತಥೈವ ಭವನ್ತಃ ಕ್ಷೇತ್ರಜ್ಞಾ ಆತ್ಮಾನೋಽಪಿ ನಿತ್ಯಾಏವೇತಿ ಮನ್ತವ್ಯಾಃ । ಏವಂ ಗರ್ಭವತಃ ಸರ್ವೇಶ್ವರಾತ್ ಆತ್ಮನಾಂ ಪರಸ್ಪರಂ ಚ ಭೇದಃ ಪಾರಮಾರ್ಥಿಕ ಇತಿ ಭಗವತೈವೋಕ್ತಮಿತಿ ಪ್ರತೀಯತೇ.** ಸರ್ವೇಶ್ವರನಾಗಿ ಪರಮಾತ್ಮನಾದ ನಾನು ನಿತ್ಯನೆಂಬುದರಲ್ಲಿ ಹೇಗೆ ಸಂದೇಹವಿಲ್ಲವೋ–ಹಾಗೆಯೇ ಬದ್ಧಜೀವಿಗಳಾಗಿರುವ ದೇಹದಲ್ಲಿರುವ ಜ್ಞಾನಸ್ವರೂಪರಾದ ಆತ್ಮರೂ ಕೂಡ ನಿತ್ಯರೆಂದೇ ತಿಳಿಯಲ್ಪಡತಕ್ಕವರು. ಈ ಪ್ರಕಾರವಾಗಿ ಭಗವಂತನಾದ ಸರ್ವೇಶ್ವರನಿಗಿಂತಲೂ ಜೀವಾತ್ಮರುಗಳಿಗೆ ಪರಸ್ಪರ ಭೇದವಾದರೂ **'ಅಹಂ–ತ್ವಂ'** ಎಂಬ ಪದಪ್ರಯೋಗದಿಂದ ಸತ್ಯವಾದುದೆಂದು ಭಗವಂತನಿಂದಲೇ ಹೇಳಲ್ಪಟ್ಟಿತೆಂದು ವ್ಯಕ್ತವಾಗುತ್ತದೆ. ಇದು ಶ್ರೀರಾಮಾನುಜರ ಅಭಿಪ್ರಾಯ.)

**ಓಂ ದೇಹಿನೋಽಸ್ಮಿನ್ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾನ್ತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥೧೩॥**

ಜೀವನಿಗೆ ಈ ದೇಹದಲ್ಲಿ ಯಾವ ರೀತಿಯಲ್ಲಿ ಕೌಮಾರ, ಯೌವನ, ಮುಪ್ಪು–ಎಂಬ ಅವಸ್ಥಾಭೇದಗಳಾಗುತ್ತವೆಯೋ–ಅದೇ ರೀತಿಯಲ್ಲಿ ಜೀವ

ನಿಗೆ ದೇಹಾಂತರಪ್ರಾಪ್ತಿಯೂ ಆಗುತ್ತದೆ. ಈ ಕಾರಣದಿಂದಾಗಿ ಧೀರನಾದವನು ದೇಹಾಂತರಪ್ರಾಪ್ತಿಯನ್ನು ಕುರಿತು ಮೂಢನಾಗುವುದಿಲ್ಲ.

* * *

(ಮಗುವು ಹುಟ್ಟುತ್ತದೆ. ಅದು ಹುಟ್ಟಿದಂತೆಯೇ ಇರಬೇಕೆಂದು ಯಾರೂ ಆಶಿಸುವುದಿಲ್ಲ. ಅಂಬೆಗಾಲಿಡುತ್ತದೆ. ತೊದಲುಮಾತುಗಳನ್ನಾಡುತ್ತದೆ. ಅದರಿಂದ ತಾಯಿ-ತಂದೆಗಳಿಗೆ ಅನಿರ್ವಾಚ್ಯವಾದ ಸಂತೋಷವುಂಟಾಗುತ್ತದೆ. ಆದರೆ ಮಗುವು ಎಂದೆಂದಿಗೂ ತೊದಲಿಕೊಂಡೇ ಇರಬೇಕೆಂದು ಯಾವ ತಾಯಿಯೂ ಆಶಿಸುವುದಿಲ್ಲ. ನಮ್ಮ ಹುಡುಗ ಬೆಳೆಯಬೇಕು, ವಿದ್ಯಾವಂತನಾಗಬೇಕು-ಎಂಬುದೇ ಎಲ್ಲರ ಆಶಯವೂ ಆಗಿರುತ್ತದೆ. ಒಂದು ಅವಸ್ಥೆಯು ಕಳೆದು ಮತ್ತೊಂದು ಅವಸ್ಥೆಯು ಉಂಟಾದುದಕ್ಕಾಗಿ ಯಾರೂ ಪರಿತಪಿಸುವುದಿಲ್ಲ. ಎಂದಿನಿಂದ ಯಾವ ಅವಸ್ಥೆಯು ಹುಟ್ಟಿತೆಂಬುದನ್ನೂ ಯಾರೂ ಪರಿಗಣಿಸಹೋಗುವುದಿಲ್ಲ. ಯೌವನ ಕಳೆದು ಮುಪ್ಪು ಬರುತ್ತದೆ. ಇದು ಜೀವಿಗೆ ಬೇಡವಾದರೂ ಬರುತ್ತದೆ. ಶರೀರವು ಜೀರ್ಣವಾದನಂತರ ಮತ್ತೊಂದು ಹೊಚ್ಚಹೊಸ ಶರೀರವೂ ಪ್ರಾಪ್ತವಾಗುತ್ತದೆ. ಆದುದರಿಂದ ಧೀರನಾದವನು ಈ ವಿಷಯದಲ್ಲಿ ಮೋಹಗೊಳ್ಳುವುದಿಲ್ಲ. (ಧೀರ ಎಂದರೆ ಜ್ಞಾನೀ. **ಧಿಯಃ ರಾನ್ತೀತಿ ಧೀರಾಃ**–ಬುದ್ಧಿಯ ಮೇಲೆ ಪೂರ್ಣವಾದ ಅಧಿಕಾರವುಳ್ಳವನು. **ಅಜಾಯಮಾನೋ ಬಹುಧಾ ವಿಜಾಯತೇ। ತಸ್ಯ ಧೀರಾಃ ಪರಿಜಾನನ್ತಿ ಯೋನಿಮ್**–ಹುಟ್ಟದೆಯೇ ಇರುವವನು ಅನೇಕ ಪ್ರಕಾರವಾಗಿ ಹುಟ್ಟುತ್ತಾನೆ. ಇದರ ರಹಸ್ಯವನ್ನು ಜ್ಞಾನಿಗಳಾದವರು ತಿಳಿದುಕೊಂಡಿರುತ್ತಾರೆ. ಧೀರನೇಕೆ ಮೋಹಗೊಳ್ಳುವುದಿಲ್ಲ? ಮುಪ್ಪು ಯಾರಿಗೂ ಬೇಡವಾದರೂ ವ್ಯಕ್ತಿಯು ಮುದುಕನಾಗುವುದು ತಪ್ಪುವುದಿಲ್ಲ. ಆಗಲೂ ಅವನು ಮೃತ್ಯುವನ್ನಪ್ಪಲು ಭಯಪಡುತ್ತಾನೆ. ಇದಕ್ಕೆ ದೇಹಾತ್ಮಭಾವವೇ ಕಾರಣ. ನಾನು ಹೋಗಿಬಿಟ್ಟರೆ ನನ್ನ ಮಕ್ಕಳ ಗತಿಯೇನು? ನನ್ನ ಐಶ್ವರ್ಯ ಹೆಚ್ಚು ಕಾಲ ಉಳಿಯುವುದೇ? ನನ್ನ ಹೆಂಡತಿಯನ್ನು ಮಕ್ಕಳು ಚೆನ್ನಾಗಿ ನೋಡಿಕೊಳ್ಳುವರೇ?–ಇತ್ಯಾದಿ ಚಿಂತೆಗಳಲ್ಲಿಯೇ ಅವನ ಮನಸ್ಸು ನೆಟ್ಟಿರುತ್ತದೆ. ಅವಸಾನವೇ ಸನ್ನಿಹಿತವಾಗಿದ್ದರೂ ಸಹ ಇನ್ನೊಂದು ದಿನ ಹೆಚ್ಚು ಬದುಕುವ ಆಸೆಯಿಂದ ಚುಚ್ಚುಮದ್ದನ್ನು ಹಾಕಿಸಿಕೊಳ್ಳುತ್ತಾನೆ. ಕಟ್ಟಕಡೆಗೂ

ಅಶಾಂತಮನಸ್ಕನಾಗಿಯೇ ಪ್ರಾಣತೊರೆಯುತ್ತಾನೆ. ಆದರೆ ಜ್ಞಾನಿಯಾದವನು ಹಾಗಲ್ಲ. ಪರಾವಲಂಬನೆಯ ಈ ಹಳತಾದ ಶರೀರವು ಎಷ್ಟು ಬೇಗ ಹೋದರೆ ಅಷ್ಟು ಕ್ಷೇಮವೆಂದು ಭಾವಿಸುತ್ತಾನೆ. ಅವನಿಗೆ ದೇಹಾತ್ಮಭಾವನೆಯಿರುವುದಿಲ್ಲ. ಈ ಜನ್ಮದ ಸಂಸಾರನಾಟಕವು ಮುಗಿಯಿತೆಂದು ಭಾವಿಸುತ್ತಾನೆ. ಆತ್ಮಾನುಭವದ ಕಡೆಗೆ ಅವನ ಲಕ್ಷ್ಯವು ಪೂರ್ಣವಾಗಿರುತ್ತದೆ. ಅವನು ದೇಹತ್ಯಾಗವನ್ನು ಮರಣವೆಂದೇ ಭಾವಿಸುವುದಿಲ್ಲ. ಅಲ್ಪ-ಸ್ವಲ್ಪ ಕರ್ಮಫಲಗಳುಳಿದಿದ್ದು ದೇಹಾಂತರಪ್ರಾಪ್ತಿಯಾದರೂ ಕೊರಗುವುದಿಲ್ಲ. ದೇಹಾಂತರವನ್ನು ಹೊಂದಿಯೇ ತನ್ನ ಸಾಧನೆಯನ್ನು ಮುಂದುವರಿಸುತ್ತಾನೆ. ಈ ಕಾರಣಗಳಿಂದಾಗಿಯೇ ಧೀರನಾದವನು (ಜ್ಞಾನಿಯು) ಹುಟ್ಟು-ಸಾವುಗಳ ವಿಷಯವಾಗಿ ಮೋಹಗೊಳ್ಳುವುದಿಲ್ಲ.)

**ಓಂ ಮಾತ್ರಾಸ್ಪರ್ಶಾಸ್ತು ಕೌನ್ತೇಯ ಶೀತೋಷ್ಣಸುಖದುಃಖದಾಃ ।**
**ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥೧೪॥**

ಕೌನ್ತೇಯ! ಇಂದ್ರಿಯಗಳ ಮತ್ತು ಅದಕ್ಕೆ ಸಂಬಂಧಿಸಿದ ವಿಷಯಗಳ ಸಂಬಂಧದಿಂದ ಶೀತೋಷ್ಣ-ಸುಖ-ದುಃಖಗಳುಂಟಾಗುತ್ತವೆ. ಇವುಗಳು ಬಂದು ಹೋಗುತ್ತಿರುತ್ತವೆಯಾದ್ದರಿಂದ ಅನಿತ್ಯಗಳು. ಆದಕಾರಣ ನೀನು ಅವುಗಳನ್ನು ಸಹಿಸಿಕೊಳ್ಳಬೇಕು.

* * *

(ಹಿಂದಿನ ಶ್ಲೋಕದಲ್ಲಿ ದೇಹಾಂತರಪ್ರಾಪ್ತಿಗೆ ಧೀರನಾದವನು ವಿಮೋಹಿತನಾಗುವುದಿಲ್ಲ—ಎಂದು ಶ್ರೀಕೃಷ್ಣನು ಹೇಳಿದ್ದಾನೆ. ದೇಹಾಂತರಪ್ರಾಪ್ತಿಗೆ ಜ್ಞಾನಿಯಾದವನು ವಿಮೋಹಿತನಾಗದಿದ್ದರೆ ಈ ದೇಹದಲ್ಲಿ ಅನುಭವವಾಗುವ ಶೀತ, ಉಷ್ಣ, ಸುಖ, ದುಃಖ ಇವುಗಳಾವುವು? ಆತ್ಮಜ್ಞಾನಿಗೆ ಶೀತೋಷ್ಣಗಳ ಪರಿವೆಯೇ ಇರುವುದಿಲ್ಲವೇ?—ಈ ಸಂದೇಹಗಳಿಗೆ ಉತ್ತರವಾಗಿ ಶ್ರೀಕೃಷ್ಣನು ಹೇಳುತ್ತಾನೆ : **ಮಾತ್ರಾಸ್ಪರ್ಶಾಃ** ಎಂದರೆ ಇಂದ್ರಿಯಗಳು. ತನ್ಮಾತ್ರೆಗಳೆಂದರೆ ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳು ; ಇವುಗಳೊಡನೆ ಸ್ಪರ್ಶ ಅಥವಾ ಸಂಬಂಧವಿರತಕ್ಕುವುಗಳು ಅನುಕ್ರಮವಾಗಿ ಕಿವಿ, ತ್ವಕ್ ಅಥವಾ ಚರ್ಮ, ಕಣ್ಣು, ನಾಲಿಗೆ ಮತ್ತು ಮೂಗುಗಳು. ಪೃಥಿವ್ಯಾಪಸ್ತೇಜೋ-ವಾಯ್ವಾಕಾಶಗಳು ಪಂಚಭೂತಗಳು ; ಇವುಗಳ ಸಂಯೋಗದಿಂದ

ಹಲವಾರು ನಾನಾರೂಪಗಳುಳ್ಳ ವಸ್ತುಗಳಾಗಿವೆ. ಯಾವಾಗ ಆ ವಸ್ತುವಿಗೂ ಮತ್ತು ನಮ್ಮಲ್ಲಿರುವ ಅದಕ್ಕೆ ಸಂಬಂಧಿಸಿದ ಇಂದ್ರಿಯಕ್ಕೂ ಸಂಬಂಧ ವುಂಟಾಗುವುದೋ ಮತ್ತು ಅದು ಅಂತಃಕರಣಕ್ಕೆ ಯಾವಾಗ ತಲುಪುವುದೋ ಆಗಲೇ ಅನುಭವದ ಕಿಡಿ ಏಳುತ್ತದೆ. ಸುಖವೆಂಬುದು ಯಾವಾಗಲೂ ಸುಖವಾಗಿಯೇ ಇರಬೇಕು. ಒಂದು ವಸ್ತುವು ಇಂದು ಸುಖವನ್ನು ಕೊಡುವು ದಾಗಿದ್ದು ಅನಂತರ ದುಃಖವನ್ನು ಕೊಡುವುದಾದರೆ ಅಂತಹ ಸುಖಕ್ಕೆ ಸುಖವೆಂದು ಹೇಳಲಾಗುವುದಿಲ್ಲ. ಇಂದ್ರಿಯಸುಖದಲ್ಲಿನ ನ್ಯೂನತೆಯೇ ಇದು. ಜ್ವರಬಂದವನಿಗೆ ಸಾರು ಕಹಿಯಾಗಿರುತ್ತದೆ. ಆಗವನು ಸಾರನ್ನು ಚಪ್ಪರಿಸುವುದಿಲ್ಲ. ಸಾರು ಸುಖಪ್ರದವೋ–ದುಃಖಪ್ರದವೋ? ಪಂಚ ಭೂತಾತ್ಮಕವಾದ ಎಲ್ಲ ವಸ್ತುಗಳೂ ಸಹ ದೇಶ-ಕಾಲಗಳನ್ನನುಸರಿಸಿ ಸುಖ-ದುಃಖಗಳನ್ನು ಕೊಡುತ್ತಿರುತ್ತವೆ. ಆದರೆ ಸುಖವೇ ಆಗಲೀ–ದುಃಖವೇ ಆಗಲೀ ಶಾಶ್ವತವಾಗಿ ಉಳಿಯುವುದಿಲ್ಲ. ಈ ವಿಧವಾದ ಸುಖವೂ ಸುಳ್ಳು ಮತ್ತು ದುಃಖವೂ ಸುಳ್ಳು–ಎಂದು ಬೇಕಾದರೂ, ಕ್ಷಣಿಕ ಅಥವಾ ಅನಿತ್ಯಗಳೆಂದು ಬೇಕಾದರೂ ಹೇಳಬಹುದು. ಅಂತಃಕರಣದ ವ್ಯಾಪ್ತಿಯಿಲ್ಲದಿದ್ದರೆ ಇಂದ್ರಿಯ ಮತ್ತು ವಸ್ತುಸಂಬಂಧವು ಯಾವ ವಿಧವಾದ ಸುಖವನ್ನಾಗಲೀ– ದುಃಖವನ್ನಾ ಗಲೀ ಕೊಡಲಾರದು. ನಾವು ಅಂತಃಕರಣದಲ್ಲಿ ಏನನ್ನೋ ಯೋಚಿಸು ತ್ತಿರುವಾಗ ಸುಂದರದೃಶ್ಯವು ಕಣ್ಣುಮುಂದೆ ಹೋದರೂ ಕಾಣುವುದಿಲ್ಲ. ಪ್ರಾಪಂಚಿಕವಿಷಯಸುಖಗಳನ್ನು ಅಂತಃಕರಣಕ್ಕೆ ತೆಗೆದುಕೊಳ್ಳದೇ ಇರು ವವನಿಗೆ ವಿಷಯಸಂಬಂಧವಾದ ಸುಖ-ದುಃಖಗಳಾವುವೂ ಇರುವುದಿಲ್ಲ. ಇಂದ್ರಿಯಗಳು ಯಾವಾಗಲೂ ಸುಖವನ್ನೇ ಬಯಸುವುವಾದರೂ ದುಃಖ ವಿಷಯಗಳನ್ನೂ ಗ್ರಹಿಸದೇ ಇರಲಾರವು. ನಾಲಿಗೆ ಸಿಹಿಯನ್ನೂ–ಕಹಿಯನ್ನೂ ರುಚಿನೋಡುತ್ತದೆ. ಔಷಧಿಯನ್ನು ಕುಡಿಯುವುದು ಅಂತಃಕರಣಕ್ಕೆ ಬೇಡವೆನಿಸುತ್ತದೆ. ದುರ್ಗಂಧವು ಅಂತಃಕರಣಕ್ಕೆ ಬೇಡ. ಆದರೆ ಘ್ರಾಣೇಂದ್ರಿ ಯವು ದುರ್ಗಂಧವನ್ನು ತೆಗೆದುಕೊಳ್ಳದೇ ಇರುವುದಿಲ್ಲ. ಕಿವಿಗೆ ಸುಶ್ರಾವ್ಯವಾದ ಸಂಗೀತವೇ ಬೇಕು. ಆದರೆ ಗಲಾಟೆಯಾದರೆ ಅದು ಕೇಳುವುದಿಲ್ಲ ವೆನ್ನುವುದಿಲ್ಲ. ಆದುದರಿಂದ ಈ ಇಂದ್ರಿಯಗಳು ಜೀವನಿಗೆ ಬೇಕಾದ್ದು, ಬೇಡದ್ದು–ಎಲ್ಲವನ್ನೂ ಒದಗಿಸುತ್ತಾ ಹೋಗುತ್ತವೆ. ಆದರೆ ಗಲಾಟೆಯಾದರೆ

ಕಿವಿಮುಚ್ಚಿಕೊಳ್ಳಬಹುದು. ಕಹಿಯಾದರೆ ಉಗಿದುಬಿಡಬಹುದು. ಆದರೆ ಕೆಲವು ಬಾಹ್ಯಘಟನೆಗಳ ಮೇಲೆ ನಮ್ಮ ಹತೋಟಿ ಇರುವುದಿಲ್ಲ. ಅದನ್ನು ಕಷ್ಟವಾಗಲೀ, ಸುಖವಾಗಲೀ ಅನುಭವಿಸಲೇಬೇಕು. ಮಳೆ, ಚಳಿ, ಬಿಸಿಲು– ಇತ್ಯಾದಿಗಳು ಅನಿವಾರ್ಯ. ಜ್ಞಾನಿಯು ಹೊರಗಿನದನ್ನು ಬದಲಾಯಿಸಲು ಹೋಗುವುದಿಲ್ಲ. ಇದೇ ಸಂಸಾರವೆಂದು ಅದನ್ನನುಭವಿಸಲು ಸಿದ್ಧನಾಗು ವನು. ಅದನ್ನೇ ಶ್ರೀಕೃಷ್ಣನು ಅರ್ಜುನನಿಗೂ ಉಪದೇಶಿಸುವನು. ಶೀತೋಷ್ಣ-ಸುಖ-ದುಃಖಗಳು ಕೇವಲ ಇಂದ್ರಿಯಜನ್ಯವಾದುವುಗಳು, ಬಂದು–ಹೋಗತಕ್ಕುವುಗಳು. ಅಶಾಶ್ವತವಾದುವುಗಳು. ಅವುಗಳನ್ನು ನೀನು ಸಹಿಸು. (ಮಾತ್ರೆಗಳ ವಿಷಯವಾಗಿ ಪ್ರಶ್ನೋಪನಿಷತ್ತಿನಲ್ಲಿ ಹೀಗೆ ಹೇಳಿದೆ :

**ಪೃಥಿವೀ ಚ ಪೃಥಿವೀಮಾತ್ರಾ ಚಾಪಶ್ಚಾಪೋಮಾತ್ರಾ ಚ ತೇಜಶ್ಚ ತೇಜೋಮಾತ್ರಾ ಚ ವಾಯುಶ್ಚ ವಾಯುಮಾತ್ರಾ ಚಾಕಾಶಶ್ಚಾಕಾಶಮಾತ್ರಾ ಚ**-ಪೃಥಿವೀ ಮತ್ತು ಗಂಧತನ್ಮಾತ್ರೆ ; ನೀರು ಮತ್ತು ರಸತನ್ಮಾತ್ರೆ ; ತೇಜಸ್ಸು ಮತ್ತು ರೂಪತನ್ಮಾತ್ರೆ ; ವಾಯು ಮತ್ತು ಸ್ಪರ್ಶತನ್ಮಾತ್ರೆ ; ಆಕಾಶ ಮತ್ತು ಶಬ್ದತನ್ಮಾತ್ರೆ.)

**ಓಂ ಯಂ ಹಿ ನ ವ್ಯಥಯನ್ತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋऽಮೃತತ್ವಾಯ ಕಲ್ಪತೇ ॥೧೫॥**

ಪುರುಷರ್ಷಭನೇ! ಸುಖವನ್ನೂ ದುಃಖವನ್ನೂ ಸಮನಾಗಿ ಭಾವಿಸುವ ಯಾವ ಪುರುಷನನ್ನು ಶೀತೋಷ್ಣಾದಿಗಳು ವ್ಯಥೆಪಡಿಸುವುದಿಲ್ಲವೋ– ಅವನು ಅಮೃತತ್ವಕ್ಕೆ ಯೋಗ್ಯವಾಗುವನು.

* * *

(ಸುಖ-ದುಃಖಗಳೆರಡನ್ನೂ ಸಮನಾಗಿ ನೋಡುವುದೆಂದರೆ ಸಾಧಾರಣ ಕಾರ್ಯವಲ್ಲ. ಧೀರನಾದವನು (ಜ್ಞಾನಿಯಾದವನು) ಮಾತ್ರವೇ ಸುಖ-ದುಃಖಗಳೆರಡನ್ನೂ ಸಮನಾಗಿ ನೋಡಬಲ್ಲನು. ಪ್ರಾಣದ ಹಂಗನ್ನು ತೊರೆದು ಕಾರ್ಯಮಾಡುವುದರಿಂದಲೇ ಅವನು ಧೀರನೆನಿಸಿಕೊಳ್ಳುವು ದಿಲ್ಲ. ಅರ್ಜುನನು ಧೀರಾಧಿಧೀರ. ಮಹಾಪರಾಕ್ರಮೀ. ಅಂತಹವನೂ ಸಹ ಶೋಕವನ್ನು ತಡೆದುಕೊಳ್ಳಲು ಸಮರ್ಥನಾಗಲಿಲ್ಲ. ಶ್ರೀಕೃಷ್ಣನ ದೃಷ್ಟಿಯಲ್ಲಿ ಧೀರನಾಗಲಿಲ್ಲ. ಶೀತೋಷ್ಣಗಳನ್ನು ತಡೆದುಕೊಳ್ಳುವುದಾದರೂ

ಸ್ವಭಾವವಾಗಿಬಿಡಬಹುದು. ಆದರೆ ಸುಖ-ದುಃಖಗಳನ್ನೂ ಹರ್ಷ-ವಿಷಾದ ಗಳನ್ನೂ ಸಮಾನತೆಯಿಂದ ಕಾಣುವುದು ಬಹುಕಷ್ಟ. ಸುಖಬಂದಾಗ ಹಿಗ್ಗದವನೂ—ಕಷ್ಟಬಂದಾಗ ಕುಗ್ಗದವನೂ ಅತಿವಿರಳ. ಅವನೇ ಧೀರ. ಅಮೃತತ್ತ್ವವನ್ನು ಪಡೆಯಬೇಕಾದರೆ, ಮುಕ್ತಿಯನ್ನು ಪಡೆಯಬೇಕಾದರೆ ಇದು ಮೊದಲನೆಯ ಮೆಟ್ಟಿಲು. ಈ ಧೀರತ್ವವನ್ನು ಸಂಪಾದಿಸಿದರೆ ಆ ಮಾರ್ಗದಲ್ಲಿ ಮುಂದುವರಿಯಬಹುದು.)

**ಓಂ ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽನಸ್ತ್ವನಯೋಸ್ತತ್ತ್ವದರ್ಶಿಭಿಃ ॥೧೬॥**

ಅಸತ್ ಆದ ವಸ್ತುವಿಗೆ ಇರುವಿಕೆ ಇಲ್ಲ. ಸದ್ವಸ್ತುವಿಗೆ ಇಲ್ಲದೇ ಇರುವಿಕೆಯಿಲ್ಲ. ತತ್ತ್ವವನ್ನು ಕಂಡುಕೊಂಡವರು ಈ ಎರಡರ ಸ್ಥಿತಿಯನ್ನೂ ಆಮೂಲಾಗ್ರವಾಗಿ ತಿಳಿದುಕೊಂಡಿರುತ್ತಾರೆ.

* * *

(ದೇಹವು ಅಚಿದ್ವಸ್ತು. ಆದ್ದರಿಂದ ಅಸತ್ತ್ವವೇ (ವಿನಾಶವೇ) ಅದರ ಸ್ವಭಾವ. ಆತ್ಮವು ಚೇತನವಾದುದರಿಂದ ಸತ್ತ್ವವೇ (ಅವಿನಾಶವೇ) ಅದರ ಸ್ವರೂಪ—ಎಂಬ ನಿರ್ಣಯವನ್ನು ಜ್ಞಾನಿಗಳು ಮಾಡಿದ್ದಾರೆ.

**ಸತ್—ಅಸತ್** ಪದಗಳಿಗೆ ಎರಡು-ಮೂರು ಬಗೆಯ ಅರ್ಥಗಳುಂಟು.

೧) **ಸತ್ :** ಇರುವುದು ; ಸತ್ಯವಾದುದು

**ಅಸತ್ :** ಇರುವುದಲ್ಲದ್ದು ; ನಿಜವಾದ ಇರುವಿಕೆಯಿಲ್ಲದ್ದು ; ಸುಳ್ಳಾ ದದ್ದು. ಈ ಅರ್ಥದಲ್ಲಿ ಅಸತ್ ಎಂದರೆ 'ತೋರಿಕೆಯದು' ಎಂದೂ ಆಗು ತ್ತದೆ. ವಾಸ್ತವವಾಗಿ ಇರದೇ ಸ್ವಶಕ್ತಿಬಲದಿಂದ ಇಲ್ಲದೇ ಮತ್ತೊಂದರ ಆಶ್ರಯದಿಂದ ನಮ್ಮ ಕಣ್ಣು-ಕಿವಿಗಳಿಗೆ ಕಿಂಚಿತ್ಕಾಲಮಾತ್ರ ಯಾವುದು ತಿಳಿದುಬರುತ್ತದೆಯೋ ಅದು ಅಸತ್.

ಉದಾಹರಣೆ : ಮರವು ಸತ್ : ಮನುಷ್ಯನು ಸತ್ ; ಕನ್ನಡಿಯಲ್ಲಿ ಕಾಣುವ ಅವನ ಪ್ರತಿಬಿಂಬ ಅಸತ್. ಬ್ರಹ್ಮವು ಸತ್ ; ಜಗತ್ ಅಸತ್. ಅಸತ್ತೇ ಮಿಥ್ಯೆ ; ಸತ್ತೇ ತಥ್ಯ. ಅಸತ್ ಅಥವಾ ಮಿಥ್ಯೆ ಎಂದರೆ ಶೂನ್ಯವಲ್ಲ. ಅತ್ಯಂತಾಭಾವವೆಂದಲ್ಲ ; ಮೊಲದ ಕೊಂಬಿನಂತೆ ಕೇವಲ ಕಾಲ್ಪನಿಕವೆಂದಲ್ಲ. ತೋರಿಕೆ ; ಸ್ವಪ್ನದಂಥಾದ್ದು ಎಂಬ ಭಾವ.

೨) **ಸತ್ :** ಗೋಚರವಾಗಿರುವ ಪದಾರ್ಥ. ಯಾವುದು ಇದೆಯೆಂದು ನಮಗೆ ಗೊತ್ತಾಗಿದೆಯೋ ಅದು ಸತ್.

**ಅಸತ್ :** ಗೂಢವಾಗಿರುವ ಪದಾರ್ಥ ; ಯಾವುದು ವಾಸ್ತವದಲ್ಲಿ ಇರುವುದಾದರೂ ನಮ್ಮ ಪಾಲಿಗೆ ಇಲ್ಲವೆಂಬಂತಿದೆಯೋ ಅದು ಅಸತ್. **'ಅಸದ್ವಾ ಇದಮಗ್ರ ಆಸೀತ್'** ಅಸತ್ತೇ ಎಲ್ಲಕ್ಕಿಂತಲೂ ಮೊದಲು ಇದ್ದುದು. ಅಸತ್ತೆಂದರೆ ಅಗೋಚರ. ಈ ಅರ್ಥದಲ್ಲಿ ಅವ್ಯಕ್ತವೆಂದದ್ದು, 'ಅಸತ್.'

೩) **ಸತ್ :** ಒಳ್ಳೆಯದು ; ಸಾಧುವಾದದ್ದು.

**ಅಸತ್ :** ಸಾಧುವಾದದ್ದಲ್ಲ. ಕೆಟ್ಟದ್ದು.

ಹಾಲು-ನೀರುಗಳ ಮಿಶ್ರಣದಿಂದ ರಾಜಹಂಸವು ಹಾಲನ್ನೇ ಬೇರ್ಪ ಡಿಸಿ ಕುಡಿಯುವಂತೆ–ಚತುರನಾದ ಅಕ್ಕಸಾಲಿಗನು ಬೆಂಕಿಯ ಸಹಾಯದಿಂದ ಅಶುದ್ಧವಾದ ಲೋಹವನ್ನು ಕರಗಿಸಿ ಶುದ್ಧವಾದ ಬಂಗಾರವನ್ನು ಹೊರತೆಗೆ ಯುವಂತೆ–ಮೊಸರನ್ನು ಕಡೆದು ಬೆಣ್ಣೆಯನ್ನು ತೆಗೆಯುವಂತೆ–ತತ್ತ್ವದರ್ಶಿ ಗಳಾದ ಜ್ಞಾನಿಗಳು 'ಅಸತ್–ನಿಜವಾಗಿ ಇಲ್ಲದಿರುವಿಕೆಯ ವಸ್ತು ಯಾವುದು, ಸತ್–ಸತ್ಯವಾದುದು ಯಾವುದು'–ಎಂಬುದನ್ನು ತಿಳಿದುಕೊಳ್ಳುತ್ತಾರೆ.

ಈ ಶ್ಲೋಕದ **ನಾಸತೋ ವಿದ್ಯತೇ ಭಾವಃ** ಎಂಬ ಮೊದಲನೆಯ ಚರಣದಲ್ಲಿ **ವಿದ್ಯತೇಽಭಾವಃ** ಎಂಬಲ್ಲಿ **ವಿದ್ಯತೇ-ಅಭಾವಃ** ಎಂದು ಪದಚ್ಛೇದಮಾಡಿ, ಅಸತ್ ಎಂದರೆ ದಾರುಣವಾದ ಪ್ರಕೃತಿಗೆ ಅಭಾವ ಎಂದರೆ ನಾಶವಿಲ್ಲ. ಹಾಗೆಯೇ ಸತ್ ಆಗಿರುವ ಬ್ರಹ್ಮಕ್ಕೂ ಅಭಾವವಿಲ್ಲ. **ಅಸತಃ ಕಾರಣಸ್ಯ ಸತಃ ಬ್ರಹ್ಮಣಶ್ಚ ಅಭಾವಃ ನ ವಿದ್ಯತೇ**–ಎಂದು ಶ್ರೀಮಧ್ವಾಚಾರ್ಯರು ವ್ಯಾಖ್ಯಾನಮಾಡಿರುತ್ತಾರೆ.)

**ಓಂ ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥೧೭॥**

ಯಾವುದರಿಂದ ಈ ಎಲ್ಲವೂ ವ್ಯಾಪಿಸಿಕೊಂಡಿರುವುದೋ–ಅದು ನಾಶರಹಿತವಾದುದೆಂದು ತಿಳಿ. ವ್ಯಯರಹಿತವಾದ ಈ ಸರ್ವವ್ಯಾಪೀ ವಸ್ತು ವಿನ ವಿನಾಶವನ್ನು ಯಾರೂ ಮಾಡಲಾರರು.

* * *

ಹಿಂದಿನ ಶ್ಲೋಕದಲ್ಲಿ ಸತ್ ಎಂದು ಹೇಳಿರುವ ಶಬ್ದದ ವ್ಯಾಖ್ಯಾನವೇ ಈ ಶ್ಲೋಕವಾಗಿದೆ. ಅವನು ಅವಿನಾಶಿ-ನಾಶರಹಿತನು. ಅವನನ್ನು ನಾಶ ಗೊಳಿಸಲು ಯಾರಿಂದಲೂ ಸಾಧ್ಯವೇ ಇಲ್ಲ. ಅವನು ಅವ್ಯಯನಾದುದರಿಂದ ವಿನಾಶವಾಗುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಆದರೂ ಸಹ ಭಗವಂತನು ಮತ್ತಷ್ಟು ಸ್ಪಷ್ಟಪಡಿಸುವುದಕ್ಕಾಗಿ ಅವ್ಯಯನಾದ ಆತ್ಮನ ವಿನಾಶವನ್ನು ಯಾರೂ ಮಾಡಲಾರರೆಂದು ಹೇಳುತ್ತಾನೆ. ಅವನು ಸರ್ವತ್ರ ವ್ಯಾಪ್ತಿಯಾಗಿರತಕ್ಕವನು. **'ಸ ಭೂಮಿಂ ವಿಶ್ವತೋ ವೃತ್ವಾ । ಅತ್ಯತಿಷ್ಠದ್ದಶಾಂಗುಲಮ್**–ವಿಶ್ವವನ್ನೇ ಆವರಿಸಿರುವುದಲ್ಲದೇ ಅದನ್ನೂ ಮೀರಿ ಹತ್ತು ಅಂಗುಲಗಳಷ್ಟು ಎತ್ತರವಿದ್ದಾನೆ.' ಅವನು ಯಾರ ಕೈಗೂ ಸಿಕ್ಕುವವನಲ್ಲ. ಆದುದರಿಂದ ಅವನನ್ನು ಸಂಹರಿಸುವ ಪ್ರಶ್ನೆಯೇ ಉದ್ಭವಿಸುವುದಿಲ್ಲ.)

**ಓಂ ಅನ್ತವನ್ತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥೧೮॥**

ನಿತ್ಯನೂ, ಅವಿನಾಶಿಯೂ, ಅಪ್ರಮೇಯನೂ ಆಗಿರುವ ಜೀವಾತ್ಮನ ಈ ದೇಹಗಳು ಅಂತವಿರತಕ್ಕುವುಗಳು. ಆದಕಾರಣ ನಿಶ್ಚಿಂತನಾಗಿ ಯುದ್ಧಮಾಡು.

* * *

(ಆತ್ಮನು ಅವಿನಾಶೀ. ಅವನು ದೇಹದೊಳಗಿರುತ್ತಾನೆ. ಈ ದೇಹವು ಈಗ ಮಾತ್ರವಿದೆ ; ಹಿಂದೆಯೂ ಈ ದೇಹವಿರಲಿಲ್ಲ ; ಮುಂದೆಯೂ ಈ ದೇಹವಿರುವುದಿಲ್ಲ. ಇರುವಾಗಲೂ ಕ್ಷಣ-ಕ್ಷಣಕ್ಕೂ ವ್ಯತ್ಯಾಸಹೊಂದುತ್ತಲೇ ಇರುತ್ತದೆ. ಆದರೆ ಇದರೊಳಗಿರುವ ಆತ್ಮನು ಅವಿನಾಶಿ. ಅಪ್ರಮೇಯ. ಅಳತೆಗೋಲಿಗೆ ಸಿಕ್ಕುವವನಲ್ಲ. ಆತ್ಮನು ಸ್ವಯಂಪ್ರಮಾತೃವೇ ಆಗಿರುವುದ ರಿಂದ ಪ್ರಮೇಯನಾಗುವುದಿಲ್ಲ. ಪ್ರತ್ಯಕ್ಷಾದಿ ಪ್ರಮಾಣಗಳಿಂದ ಅವನ ಸ್ವರೂಪವನ್ನು ನಿಶ್ಚಯಿಸಲಾಗುವುದಿಲ್ಲ. ಅವನು ನಿತ್ಯ ಅಥವಾ ಶಾಶ್ವತ. ದೇಹವು ಬಾಲ್ಯ-ಯೌವನ-ವಾರ್ಧಕ್ಯಗಳನ್ನು ಅನುಭವಿಸಿದರೂ ಅದರಲ್ಲಿ ರುವ ಆತ್ಮನು ಯಾವ ವಿಧವಾದ ವ್ಯತ್ಯಾಸವನ್ನೂ ಹೊಂದದೇ ಹೇಗಿದ್ದನೋ ಹಾಗೆಯೇ ಇರುತ್ತಾನೆ. ಈ ದೇಹವು ಬಿದ್ದೊಡನೆಯೇ ಆತ್ಮನಿಗೆ ಹೊಚ್ಚ

ಹೊಸ ದೇಹದ ಪ್ರಾಪ್ತಿಯಾಗುತ್ತದೆ. **'ತಥಾ ದೇಹಾಂತರಪ್ರಾಪ್ತಿಃ'** ಆದುದರಿಂದ ಎಂದಾದರೊಂದು ದಿನ ವಿನಾಶಹೊಂದಲೇಬೇಕಾಗಿರುವ ದೇಹದ ವಿನಾಶವು ಮಾತ್ರವೇ ಈ ಯುದ್ಧದಲ್ಲಾಗುವುದೇ ಹೊರತು ನಿತ್ಯನಾದ, ಸತ್ಯನಾದ ಆತ್ಮನ ನಾಶವಾಗುವುದಿಲ್ಲ. ಆತ್ಮನು ಏಕರೂಪೀ, ವೃದ್ಧಿ ಹೊಂದತಕ್ಕವನಲ್ಲ. ಪ್ರಮಾತಾ ಮತ್ತು ವ್ಯಾಪಕ, ಅವಿನಾಶಿ. ದೇಹವು ಅನೇಕ ರೂಪಿ, ವೃದ್ಧಿಹೊಂದುವುದು, ಪ್ರಮೇಯ, ವ್ಯಾಪ್ಯ–ಅದರಿಂದ ವಿನಾಶಿ. ಆದುದರಿಂದ ಶೋಕ-ಮೋಹಗಳನ್ನು ತೊರೆದು ಯುದ್ಧಮಾಡು. **ನಿತ್ಯಸ್ಯ, ಅನಾಶಿನಃ** ಎಂಬಲ್ಲಿ ಅರ್ಥಪುನರುಕ್ತಿಯಾಗುವುದಿಲ್ಲವೇ?–ಎಂಬ ಆಶಂಕೆಗೆ ಶಂಕರಭಗವತ್ಪಾದರು ಹೀಗೆ ಪರಿಹಾರ ಹೇಳಿದ್ದಾರೆ : ದೇಹವು ಬೂದಿ ಯಾಗಿ ಕಾಣಿಸಿಕೊಳ್ಳದೇ ಹೋದಾಗ ಅದನ್ನು 'ನಾಶ' ಎನ್ನುತ್ತೇವೆ. ದೇಹವು ಇದ್ದಾಗಲೂ ಕೂಡ ರೋಗ ಮುಂತಾದುವುಗಳಿಂದ ವಿಪರೀತಪರಿಣಾಮ ಹೊಂದಿದರೆ ಅದನ್ನೂ 'ನಾಶ' ಎನ್ನುತ್ತೇವೆ. ಈ ಎರಡು ಬಗೆಯ ನಾಶದ ಸಂಬಂಧವೂ ಆತ್ಮನಿಗಿಲ್ಲ ಎಂದು ತೋರಿಸಲು **ನಿತ್ಯಸ್ಯ, ಅನಾಶಿನಃ** ಎಂಬ ಎರಡು ಶಬ್ದಗಳೂ ಉಕ್ತವಾಗಿವೆ.

**ಶರೀರಿಣಃ** ಪದದ ಪ್ರಯೋಜನ : ಈಶ್ವರನಿಂದ ಬೇರ್ಪಡಿಸಲು ಈ ಪದವನ್ನು ಹೇಳಿದೆ. **ನಿತ್ಯಸ್ಯ ದೇಹಾಃ ಅನ್ತವನ್ತಃ** ಎಂದು ಇಷ್ಟು ಮಾತ್ರವೇ ಹೇಳಿದ್ದರೆ ಈಶ್ವರನ ದೇಹಕ್ಕೂ ಅಂತವುಂಟೆಂದು ಭಾವಿಸುವ ಪ್ರಸಂಗ ಬರುತ್ತಿತ್ತು. ಅದನ್ನು ವ್ಯಾವೃತ್ತಿಮಾಡಲು 'ಶರೀರಿಣಃ' ಎಂಬ ವಿಶೇಷಣ ಕೊಟ್ಟಿದೆ. ಶರೀರಶಬ್ದವು 'ಜನ್ತುಜನ್ಯುಶರೀರಿಣಃ' ಎಂಬ ನಿಘಂಟಿನಂತೆ ಜೀವನಿಗೇ ಅನ್ವಯಿಸುತ್ತದೆ. [ಮಾಧ್ವ ಭಾಷ್ಯ] )

**ಓಂ ಯ ಏನಂ ವೇತ್ತಿ ಹನ್ತಾರಂ ಯಶ್ಚೈನಂ ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂ ಹನ್ತಿ ನ ಹನ್ಯತೇ ॥೧೯॥**

ಇವನನ್ನು (ಆತ್ಮನನ್ನು) ಹಂತಕನೆಂದು ಯಾರು ತಿಳಿಯುತ್ತಾರೆಯೋ ಮತ್ತು ಇವನಿಂದ ಇಂತಹವನು ಕೊಲ್ಲಲ್ಪಟ್ಟನೆಂದು ಯಾರೂ ತಿಳಿಯುತ್ತಾರೆಯೋ–ಅವರಿಬ್ಬರೂ ಅಜ್ಞರೇ ಸರಿ. ಇವನು ಕೊಲ್ಲುವುದೂ ಇಲ್ಲ ; ಇವನು ಕೊಲ್ಲಿಸಿಕೊಳ್ಳುವುದೂ ಇಲ್ಲ.

* * *

(ನೀನು ದ್ರೋಣಾದಿಗಳನ್ನು 'ನಾನು ಕೊಲ್ಲುವೆನು' ಎಂದು

ಭಾವಿಸಿದರೆ ನೀನು ಅಜ್ಞನೇ ಸರಿ. ದ್ರೋಣಾದಿಗಳೂ-'ಅರ್ಜುನನು ನಮ್ಮನ್ನು ಕೊಲ್ಲುತ್ತಾನೆ'-ಎಂದು ಭಾವಿಸುವುದಾದರೆ ಅವರೂ ಸಹ ಅಜ್ಞರೇ. ನೀನು ಅವರನ್ನು ಕೊಲ್ಲುವುದೂ ಇಲ್ಲ. ನಿನ್ನಿಂದ ಅವರು ಹತರಾಗುವುದೂ ಇಲ್ಲ.

'ಇವನು ಕೊಲ್ಲುವುದಿಲ್ಲ'-ಎಂದರೆ ಅರ್ಥವೇನು? ಅರ್ಜುನನು ದ್ರೋಣರ ಆತ್ಮವನ್ನು ಸಂಹರಿಸದೇ (ಸಂಹರಿಸಲು ಸಾಧ್ಯವಾಗದೇ) ದೇಹ ವನ್ನಾದರೂ ಸಂಹರಿಸಲಿ. ಆದರೆ ಸಂಹರಿಸುವವನು ಅರ್ಜುನನೇ ತಾನೇ? ಅವನ ಕೈಗಳು ತಾನೇ ಕತ್ತರಿಸುವುವು? ಕೈಗಳೇ ಕತ್ತರಿಸುವುದು ನಿಶ್ಚಯ. ಅರ್ಜುನನ ದೇಹವು ದ್ರೋಣರ ದೇಹವನ್ನು ಕತ್ತರಿಸುತ್ತದೆ. ಅರ್ಜುನನ ಆತ್ಮ ದ್ರೋಣರ ಆತ್ಮವನ್ನು ಕತ್ತರಿಸುವುದಿಲ್ಲ. ಆತ್ಮವು ದೇಹ, ಮನಸ್ಸು, ಬುದ್ಧಿ ಮತ್ತು ಇಂದ್ರಿಯಗಳ ಹಿಂದಿದೆ. ಅದು ಕೇವಲ ಸಾಕ್ಷಿಭೂತವಾಗಿದೆ. ತಾನು ಏನನ್ನೂ ಮಾಡುವುದಿಲ್ಲ. ಮಾಡುವುದನ್ನು ನೋಡುವುದು. ಹಾಗಾದರೆ ಒಬ್ಬ ಕೊಲೆಗಡುಕನು ಒಬ್ಬನನ್ನು ಕೊಂದು-'ನಾನು ಆತ್ಮನನ್ನು ಕೊಲ್ಲಲಿಲ್ಲ. ದೇಹವನ್ನು ಮಾತ್ರವೇ ಕೊಂದೆ. ಆದುದರಿಂದ ನಾನು ಕೊಲೆ ಪಾತಕನಲ್ಲ'-ಎಂದು ಹೇಳಬಹುದಲ್ಲವೇ? ಹೇಳಬಹುದು ; ಅಡ್ಡಿಯೇನೂ ಇಲ್ಲ.

ನ್ಯಾಯಾಧೀಶನೂ ಸಹ ಅವನ ಹೇಳಿಕೆಗೆ ಅನುಸಾರವಾಗಿ ಅವನ ಆತ್ಮಕ್ಕೆ ಶಿಕ್ಷೆಕೊಡದೇ (ಕೊಡಲು ಸಾಧ್ಯವೂ ಇಲ್ಲ) ಅಕೃತ್ಯಮಾಡಿದ ದೇಹಕ್ಕೇ ಯಥಾಯೋಗ್ಯವಾಗಿ ಶಿಕ್ಷೆಮಾಡಬಹುದಲ್ಲವೇ? ಈ ಕಾರಣದಿಂದ ಚೈತನ್ಯ ಅಥವಾ ಆತ್ಮವಿರುವ ಮಧ್ಯವರ್ತಿ (ಶರೀರ) ಹಾಳಾಯಿತೆಂದು ಹೇಳಬಹುದೇ ಹೊರತು 'ನಾನು ಕೊಂದೆ-ಇವನು ನನ್ನಿಂದ ಹತನಾದನು' ಎಂದು ಹೇಳುವುದು ಸರಿಯಲ್ಲ. ಅಜ್ಞರಾದವರು ಮಾತ್ರವೇ ಹೀಗೆ ಹೇಳುತ್ತಾರೆ.

ಈ ಶ್ಲೋಕವೇ ಕಠೋಪನಿಷತ್ತಿನಲ್ಲಿ ಸ್ವಲ್ಪ ವ್ಯತ್ಯಾಸವಾಗಿ ಬಂದಿದೆ.

**ಹನ್ತಾ ಚೇನ್ಮನ್ಯತೇ ಹನ್ತುಃ ಹತಶ್ಚೇನ್ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂ ಹನ್ತಿ ನ ಹನ್ಯತೇ ॥**

ತಾನು ಕೊಲ್ಲುವವನೆಂದು ದೇಹಾತ್ಮದೃಷ್ಟ್ಯಾ ಯಾವನಾದರೂ ಭಾವಿಸುವವನು ಮತ್ತು ಹೊಡೆಯಲ್ಪಟ್ಟ ದೇಹವುಳ್ಳವನಾಗಿ ದೇಹಾತ್ಮ

ದೃಷ್ಟಿಯಿಂದ–'ಅವನು ನನ್ನನ್ನು ಹೊಡೆದನು'–ಎಂದು ಭಾವಿಸುವುದಾದರೆ– ಅವರಿಬ್ಬರೂ ಅಜ್ಞರು. ಇವನು ಕೊಲ್ಲುವುದೂ ಇಲ್ಲ ; ಅವನು ಕೊಲ್ಲಲ್ಪಡು ವುದೂ ಇಲ್ಲ. )

**ಓಂ ನ ಜಾಯತೇ ಮ್ರಿಯತೇ ವಾ ಕದಾಚಿ-**
**ನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ ॥೨೦॥**

ಆತ್ಮನು ಹುಟ್ಟುವುದೂ ಇಲ್ಲ ; ಸಾಯುವುದೂ ಇಲ್ಲ. ಅವನಿಗೆ ಎಂದಿಗೂ ಯಾವ ವಿಕಾರವೂ ಇಲ್ಲ. ಅವನು ಮೊದಲು ಇದ್ದು ಆಮೇಲೆ ಇಲ್ಲದೇ ಹೋಗುವುದಿಲ್ಲ. ಹಾಗೆಯೇ ಹಿಂದೆ ಇಲ್ಲದೇ ಅನಂತರ ಹುಟ್ಟು ವವನೂ ಅಲ್ಲ. ಆತ್ಮನು ಅಜನೂ, ನಿತ್ಯನೂ, ಶಾಶ್ವತನೂ, ಪುರಾಣನೂ ಆಗಿದ್ದಾನೆ. ಶರೀರವು ಹತವಾಗಿ ಬಿದ್ದುಹೋದರೂ ಆತ್ಮನು ಹತನಾಗುವು ದಿಲ್ಲ.

* * *

(ಹುಟ್ಟುವುದು ಎಂದರೆ 'ಹಿಂದೆ ಇರಲಿಲ್ಲ ; ಈಗ ಇದೆ' ಎಂದರ್ಥ. ಇದು ದೇಹಕ್ಕೆ ಅನ್ವಯಿಸುವುದೇ ಹೊರತು ಆತ್ಮಕ್ಕೆ ಅನ್ವಯಿಸುವುದಿಲ್ಲ. ಮಗುವು ಹುಟ್ಟಿತು ಎನ್ನುತ್ತಾರೆ. ಶರೀರದ ಉದಯವಾಯಿತು. ಹುಟ್ಟಿದ ಶರೀರಕ್ಕೆ ಮರಣವುಂಟು. ಯಾವಾಗ ಒಂದು ವಸ್ತುವಿಗೆ ಹುಟ್ಟೇ ಇಲ್ಲವೋ ಅದಕ್ಕೆ ಮರಣವೂ ಇಲ್ಲ. ಆ ವಸ್ತುವೇ ಆತ್ಮವಸ್ತು. ಅದು ಹುಟ್ಟುವುದೂ ಇಲ್ಲ; ಸಾಯುವುದೂ ಇಲ್ಲ. ಹಾಗಾದರೆ ಅದು ಇಲ್ಲವೇ ಇಲ್ಲವೋ? ಎಂದರೆ ಹಾಗಲ್ಲ. ನ ಮ್ರಿಯತೇ ವಾ **ಕದಾಚಿತ್** ಹುಟ್ಟದಿದ್ದರೂ 'ಅದು ಇದೆ' ಎಂಬುದನ್ನು ಹೇಳುವ ಸಲುವಾಗಿ ಶ್ರೀಕೃಷ್ಣನು ಇದನ್ನು ಹೇಳಿದ್ದಾನೆ. ಶರೀರವು ಹೋದರೆ ಶರೀರಿಯು ನಾಶಹೊಂದುವುದಿಲ್ಲ. ಮಡಕೆಗಳು ಒಡೆದುಹೋಗಬಹುದು. ಮಡಕೆಗಳಲ್ಲಿರುವ ಆಕಾಶವು ನಾಶವಾಗುವುದಿಲ್ಲ. ದೇಹದೊಳಗೆ ಸೇರಿಕೊಂಡ ಆತ್ಮವು–ಇಂದ್ರಿಯ, ಬುದ್ಧಿ, ಮನಸ್ಸು– ಈ ಕರಣಗಳ ಮೂಲಕ ಕೆಲಸಮಾಡುತ್ತಿರುತ್ತದೆ. ಕರಣಗಳು ನಾಶವಾದರೂ (ಕಣ್ಣು ಕಾಣಿಸದಿದ್ದರೂ ಕಿವಿ ಕೇಳಿಸದಿದ್ದರೂ) ಆತ್ಮವು ಯಥಾರೂಪವಾಗಿ ಇದ್ದೇ ಇರುತ್ತದೆ. ಬೆಳಕು ನೀಡುವ ಉಪಕರಣ (ಬಲ್ಬ್ ) ಕೆಟ್ಟುಹೋಗಿರ

ಬಹುದು. ವಿದ್ಯುಚ್ಛಕ್ತಿಯು ನಾಶವಾಗಿರುವುದಿಲ್ಲ. ಅಂತೆಯೇ ದೇಹವು ವಿನಾಶಹೊಂದಬಹುದು. ಆತ್ಮವು ನಾಶವಾಗುವುದಿಲ್ಲ. ಹುಟ್ಟು, ಬಾಲ್ಯ, ಯೌವನ, ವಾರ್ಧಕ್ಯ, ಜನ್ಮಾಂತರ–ಇವೇ ಮುಂತಾಗಿ ಆತ್ಮನು ವೇಷವನ್ನು ಬದಲಾಯಿಸುತ್ತಾ ಹೋಗುವನು. ವೇಷಗಳಿಗೆ ಒಂದು ಆದಿ ಒಂದು ಅಂತ್ಯ ಎಂಬುದಿದೆ. ಆದರೆ ವೇಷಹಾಕಿಕೊಳ್ಳುವವನಿಗೆ ಆದಿಯೂ ಇಲ್ಲ, ಅಂತ್ಯವೂ ಇಲ್ಲ. ಅವನು ಪುರಾಣಪುರುಷ. ಬಹಳ ಹಿಂದಿನವನು. ಅವನಿಲ್ಲದ ಕಾಲವೇ ಇಲ್ಲ. ಕಾಲದ ಎಷ್ಟು ಹಿಂದೆ ಹೋದರೂ ಅವನಿರುವನು. ಅವನು ಮೊದಲು ; ಆಮೇಲೆ ಕಾಲ-ದೇಶಗಳು. ಆದುದರಿಂದಲೇ ಅವನನ್ನು ಕಾಲಾ ತೀತನೆಂದೂ ಕರೆಯುತ್ತಾರೆ. ನೀರಿನ ಮೇಲಿನ ಗುಳ್ಳೆಯಂತೆ ಈ ಶರೀರ. ಗುಳ್ಳೆಯ ಹಿಂದೆ ನೀರಿದೆ. ಶರೀರದ ಹಿಂದೆ ಆತ್ಮನಿದ್ದಾನೆ. ಗುಳ್ಳೆಗಳು ಹುಟ್ಟು ತ್ತಿರುತ್ತವೆ ; ಒಡೆದು ಹೋಗುತ್ತಿರುತ್ತವೆ. ಶರೀರವು ಹುಟ್ಟುತ್ತಿರುತ್ತದೆ, ಸಾಯುತ್ತಿರುತ್ತದೆ. ಗುಳ್ಳೆಯು ಒಡೆಯಿತೆಂದರೆ ನೀರು ಇಲ್ಲದೇ ಹೋಗುವು ದಿಲ್ಲ. ಶರೀರವು ಹೋಯಿತೆಂದರೆ, ಆತ್ಮನು ಹೋಗುವುದಿಲ್ಲ. (**ಅಸ್ಮಿನ್ ಮನ್ತ್ರೇ ಷಟ್ ಭಾವವಿಕಾರಾಃ ಲೌಕಿಕವಸ್ತುವಿಕ್ರಿಯಾಃ ಆತ್ಮನಿ ಪ್ರತಿಷಿಧ್ಯನ್ತೇ। ಸರ್ವಪ್ರಕಾರವಿಕ್ರಿಯಾರಹಿತಃ ಆತ್ಮಾ ಇತಿ ವಾಕ್ಯಾರ್ಥಃ**–ಈ ಮಂತ್ರದಲ್ಲಿ ಲೋಕದ ವಸ್ತುಗಳಿಗಾಗುವ ಆರು ಭಾವವಿಕಾರಗಳು ಆತ್ಮನಲ್ಲಿರುವುದಿಲ್ಲ ವೆಂದು ಹೇಳಿರುತ್ತದೆ. ಆತ್ಮನು ಯಾವ ವಿಧವಾದ ಭಾವವಿಕಾರಗಳೂ ಇಲ್ಲದವನೆಂದು ಶ್ರೀ ಶಂಕರರು ಹೇಳಿದ್ದಾರೆ. ಜಾಯತೇ (ಹುಟ್ಟುತ್ತದೆ), ಅಸ್ತಿ (ಇರುತ್ತದೆ), ವರ್ಧತೇ (ಬೆಳೆಯುತ್ತದೆ), ಪರಿಣಮತೇ (ಮಾರ್ಪಡುತ್ತದೆ), ಅಪಕ್ಷೀಯತೇ (ಸವೆಯುತ್ತದೆ), ವಿನಶ್ಯತಿ (ಹಾಳಾಗುತ್ತದೆ)–ಇವು ಆರು ಭಾವವಿಕಾರಗಳೆಂದು ಯಾಸ್ಕರು ಹೇಳಿದ್ದಾರೆ.

ಕಠೋಪನಿಷತ್ತಿನ ಎರಡನೆಯ ವಲ್ಲಿಯಲ್ಲಿ ಈ ಮಂತ್ರವೇ ಸ್ವಲ್ಪ ವ್ಯತ್ಯಾಸದಿಂದ ಹೇಳಲ್ಪಟ್ಟಿದೆ.

**ನ ಜಾಯತೇ ಮ್ರಿಯತೇ ವಾ ವಿಪಶ್ಚಿ-**
**ನ್ನಾಯಂ ಕುತಶ್ಚಿನ್ನ ಬಭೂವ ಕಶ್ಚಿತ್ ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ ॥೧೮॥**

ಆತ್ಮನು ಹುಟ್ಟುವುದೂ ಇಲ್ಲ ; ಸಾಯುವುದೂ ಇಲ್ಲ. ಇವನು ಯಾವುದರಿಂದಲೂ ಹುಟ್ಟಲಿಲ್ಲ. ಇವನಿಂದ ಯಾರೂ ಹುಟ್ಟಲಿಲ್ಲ. ಇವನು ಜನ್ಮರಹಿತನು, ನಿತ್ಯನು, ಶಾಶ್ವತನು, ಪುರಾಣನು. ಶರೀರವು ನಾಶವಾಗುತ್ತಿದ್ದರೂ ಇವನು ನಾಶವಾಗುವುದಿಲ್ಲ.

ಪುರಾಣಃ :- ಹಿಂದೆಯೂ ಹೊಸದಾಗಿದ್ದವನು, ಸದಾಕಾಲದಲ್ಲಿಯೂ ಅಪೂರ್ವನಾಗಿ ನಿತ್ಯನೂತನನೆಂದು ಅನುಭವಿಸಲ್ಪಡುವವನು. **ಪುರಾಪಿ ನವಃ ಸರ್ವದಾ ಅಪೂರ್ವವತ್ ಅನುಭಾವ್ಯಃ** ಎಂದು ಶ್ರೀರಾಮಾನುಜರು ವಿವರಣೆ ನೀಡಿದ್ದಾರೆ.)

**ಓಂ ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್ ।**
**ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹನ್ತಿ ಕಮ್ ॥೨೧॥**

ಪಾರ್ಥ! ಆತ್ಮನು ಅವಿನಾಶೀ, ನಿತ್ಯ, ಅಜ, ಅವ್ಯಯ–ಎಂದು ಯಾವನು ತಿಳಿದುಕೊಂಡಿರುವನೋ ಅವನು ಯಾರನ್ನು ಕೊಲ್ಲಿಸುತ್ತಾನೆ? ಯಾರನ್ನು ಕೊಲ್ಲುತ್ತಾನೆ?

* * *

(ಆತ್ಮನ ನಿಜಸ್ಥಿತಿಯನ್ನು ತಿಳಿದುಕೊಂಡವನು ಯಾರನ್ನು (ಯಾವ ಆತ್ಮನನ್ನು ) ಕೊಲ್ಲಿಸುತ್ತಾನೆ? ಯಾರನ್ನು (ಯಾವ ಆತ್ಮನನ್ನು ) ಕೊಲ್ಲುತ್ತಾನೆ? ಆತ್ಮಜ್ಞಾನಿಗೆ ಕೊಲ್ಲುವ, ಕೊಲ್ಲಿಸಿಕೊಳ್ಳುವ ಅಥವಾ ಕೊಲ್ಲಿಸುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಹುತ್ತವನ್ನು ಬಡಿದರೆ ಹಾವು ಸಾಯುವುದಿಲ್ಲ. ದೇಹವೇ ಒಂದು ಹುತ್ತ. ಅದನ್ನು ಬಡಿದರೆ ಆತ್ಮನು ಸಾಯುವುದಿಲ್ಲ. ಇದನ್ನು ಜ್ಞಾನಿಯು ಮನಗಂಡಿರುತ್ತಾನೆ. ಆತ್ಮನು ನಿತ್ಯನು. ನಾಮ-ರೂಪಗಳ ವೇಷಧರಿಸುವುದಕ್ಕೆ ಮುಂಚೆಯೂ ಇದ್ದ. ಹಾಕಿಕೊಂಡ ವೇಷವೆಲ್ಲಾ ಅಳಿಸಿಹೋದರೂ ಅವನು ಇನ್ನೂ ಇರುತ್ತಾನೆ. ಅವನು ಅಜ–'ಹುಟ್ಟು' ಇಲ್ಲದವನು. ಹುಟ್ಟು-ಸಾವುಗಳೆಂಬುದನ್ನು ವ್ಯಾವಹಾರಿಕವಾಗಿ ನಾವು ಉಪಯೋಗಿಸುತ್ತೇವೆ. ಸೂರ್ಯನು ಹುಟ್ಟಿದನು ಎನ್ನುತ್ತೇವೆ. ಮುಳುಗಿದನು ಎನ್ನುತ್ತೇವೆ. ಯದ್ಯಪಿ ಸೂರ್ಯನು ನಮಗೆ ಕಾಣದಿದ್ದರೂ ಅವನು ಇಲ್ಲವೆಂದಲ್ಲ. ಅವನು ವಿಶ್ವದ ಯಾವುದೋ ಭಾಗದಲ್ಲಿ ಬೆಳಗುತ್ತಲೇ ಇರುತ್ತಾನೆ.

ಹಾಗೆಯೇ ಹುಟ್ಟು-ಸಾವುಗಳೊಡನೆ ಆತ್ಮನು ನಾಶಹೊಂದುವುದಿಲ್ಲ. ಅವನು ಅವ್ಯಯ. ಕ್ಷಯಿಸುವವನಲ್ಲ. ಇದನ್ನು ಅರಿತವನು ಕೊಲ್ಲುವುದೂ ಇಲ್ಲ ; ಕೊಲ್ಲಿಸುವುದೂ ಇಲ್ಲ. ಈ ಭ್ರಾಂತಿಯನ್ನು ತೊರೆಯುವನು.)

**ಓಂ ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**
**ನವಾನಿ ಗೃಹ್ಣಾತಿ ನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾ-**
**ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥೨೨॥**

ಮನುಷ್ಯನು ಹೇಗೆ ಹರಿದುಹೋಗಿರುವ ಬಟ್ಟೆಗಳನ್ನು ಬಿಸುಟು ಹೊಸ ಬಟ್ಟೆಗಳನ್ನು ಧರಿಸುತ್ತಾನೆಯೋ–ಅದೇ ರೀತಿಯಲ್ಲಿ ದೇಹಿಯಾದ ಆತ್ಮನೂ ಸಹ ಜೀರ್ಣವಾದ ಶರೀರಗಳನ್ನು ಬಿಟ್ಟು ಹೊಸ-ಹೊಸದಾದ ಶರೀರಗಳನ್ನು ಹೊಂದುತ್ತಾನೆ.

* * *

(ಅತ್ಯಂತಸುಂದರವೂ ಉಚಿತವೂ ಆದ ಉಪಮಾನವಿದು. ಹಿಂದೆ ಹದಿಮೂರನೆಯ ಶ್ಲೋಕದಲ್ಲಿ (ದೇಹಿನೋಽಸ್ಮಿನ್ ) ಹೇಳಿರುವುದನ್ನೇ ಇಲ್ಲಿ ಪರ್ಯಾಯಾಂತರದಿಂದ ಶ್ರೀಕೃಷ್ಣನು ಹೇಳಿದ್ದಾನೆ. ಈ ಮಂತ್ರವನ್ನು ಮಾನವಕೋಟಿಗೆ ಉಪದೇಶಿಸಿ ಮರಣವೆಂಬ ಭಯವನ್ನೇ ತಪ್ಪಿಸಿಬಿಟ್ಟಿದ್ದಾನೆ. ಹರಿದುಹೋದ ಬಟ್ಟೆಯನ್ನು ತೆಗೆದು ಹೊಸಬಟ್ಟೆಯನ್ನು ಹಾಕಿಕೊಳ್ಳುವಾಗ ಮನುಷ್ಯನು ತಾನು ಅನೇಕವರ್ಷಗಳಿಂದ ಧರಿಸಿದ್ದ ಜೀರ್ಣವಸ್ತ್ರದ ಪರಿತ್ಯಾಗಕ್ಕಾಗಿ ಪರಿತಪಿಸುವುದಿಲ್ಲ. ಈ ದೇಹವು ದುಡಿದು-ದುಡಿದು ಕೃಶವಾಗಿರುವುದು. ಯಾವ ಸುಧಾರಣೆಯೂ ಇದಕ್ಕೆ ಸಲ್ಲದಾಗುತ್ತದೆ. ಆ ಸಮಯದಲ್ಲಿ ಜೀರ್ಣವಾಗಿಹೋದ ಈ ಶರೀರಕ್ಕಾಗಿ ಆತ್ಮನು ಪರಿತಪಿಸುತ್ತಾ ಕುಳಿತುಕೊಳ್ಳುವುದಿಲ್ಲ. ಜೀರ್ಣವಸ್ತ್ರವನ್ನು ಬದಲಾಯಿಸಿದಂತೆ ಜೀರ್ಣ ಶರೀರವನ್ನು ಬದಲಾಯಿಸುತ್ತಾನೆ. ನೂತನವಾದ ಶರೀರವನ್ನು ಪಡೆದು ಕೊಳ್ಳುತ್ತಾನೆ ; ಹಳೇಮನೆಯಿಂದ ಹೊಸಮನೆಗೆ ಹೋದಂತೆ ; ಹಾವು ಪೊರೆ ಬಿಟ್ಟಂತೆ, ಒಂದನ್ನು ಬಿಟ್ಟೊಡನೆಯೇ ಮತ್ತೊಂದು ಸಿದ್ಧವಾಗಿಬಿಡುತ್ತದೆ. ಆದರೆ ಪ್ರಪಂಚದಲ್ಲಿರುವ ಒಂದು ವೈಪರೀತ್ಯವನ್ನು ನಾವು ಗಮನಿಸಬೇಕಾ ಗಿದೆ. ಮಗು ಹುಟ್ಟುತ್ತದೆ. ಹುಟ್ಟಿದೊಡನೆಯೇ ಅಳುತ್ತದೆ. ಅಳದಿದ್ದರೆ ತಂದೆ-

ತಾಯಿಗಳಿಗೆ ಗಾಬರಿಯಾಗುತ್ತದೆ. ಮಗುವು ಹುಟ್ಟಿದೊಡನೆ ಅತ್ತರೇನೇ ತಂದೆ-ತಾಯಿಗಳಿಗೆ ಸಂತೋಷವಾಗುತ್ತದೆ. ಹುಟ್ಟಿದಾಗ 'ಅಯ್ಯೋ! ನಾನು ಪುನಃ ಪ್ರಪಂಚಕ್ಕೆ ಬರಬೇಕಾಯಿತಲ್ಲಾ!' ಎಂದು ಮಗುವು ಅಳುತ್ತದೆ. ಬಂಧುಗಳು ನಗುತ್ತಾರೆ. ಪುನಃ ದೇಹಬಿಡುವಾಗ 'ಸದ್ಯಃ ಈ ಜೀರ್ಣವಾದ ದೇಹವನ್ನು ಬಿಟ್ಟೆನಲ್ಲಾ!' ಎಂದು ಆತ್ಮನು ಸಂತೋಷಿಸುತ್ತಾನೆ. ಆತ್ಮಕ್ಕೆ ಪುನಃ ಹೊಸ ದೇಹವು ಸಿಕ್ಕುತ್ತದೆಯಲ್ಲವೇ! ಆದುದರಿಂದಲೇ ಸಂತೋಷ. ಆದರೆ ಆ ಸಮಯದಲ್ಲಿ ಬಂಧುಗಳು ಅಳುತ್ತಾರೆ. ಜನನ-ಮರಣಗಳು ಸ್ವಾಭಾವಿಕಘಟನೆಯೆಂಬುದನ್ನು ಯಾರೂ ಮನಗಾಣುವುದಿಲ್ಲ.

**ಧರ್ಮಯುದ್ಧೇ ಶರೀರಂ ತ್ಯಜತಾಂ ತ್ಯಕ್ತಶರೀರಾದಧಿಕತರ ಕಲ್ಯಾಣಶರೀರಗ್ರಹಣಂ ಶಾಸ್ತ್ರಾದವಗಮ್ಯತ ಇತಿ ಜೀರ್ಣಾನಿ ವಾಸಾಂಸಿ ವಿಹಾಯ ನವಾನಿ ಕಲ್ಯಾಣಾನಿ ವಾಸಾಂಸಿ ಗೃಹ್ಣತಾಮಿವ ಹರ್ಷನಿಮಿತ್ತ ಮೇವಾತ್ರೋಪಲಭ್ಯತೇ**—ಹಳೆಯ ಪೀತಾಂಬರವನ್ನೆಸೆದು ಹೊಸ ಗೋಣೀ ತಾಟನ್ನು ಯಾರೂ ಉಡಲು ಹೋಗುವುದಿಲ್ಲ. ಹಳೆಯ ಪೀತಾಂಬರವನ್ನು ಬಿಟ್ಟು ಹೊಸ ಹೊಸ ಪೀತಾಂಬರವನ್ನೇ ಉಟ್ಟಾರು. ಅಂತೆಯೇ ಇಲ್ಲಿಯೂ ಸಹ ಹಳೆಯ ಶರೀರವನ್ನು ತ್ಯಜಿಸಿ ಹೊಸ ಶರೀರವನ್ನು ಧರಿಸುತ್ತಾನೆಂದು ಶ್ರೀಕೃಷ್ಣನು ಹೇಳಿದ್ದಾನೆ. 'ಹೊಸ ಶರೀರವು ಯಾವುದಾದರೂ ಆಗ ಬಹುದೇ? ರಾಜನ ಶರೀರವನ್ನು ತೊರೆದು ನಾಯಿಯ ಶರೀರವನ್ನು ಗ್ರಹಿಸ ಬಹುದೇ? ನಾಯಿಯ ಶರೀರವೂ ನೂತನವಾಗಿಯೇ ಇರಬಹುದು. ಆದರೆ ಹಾಗೆ ಧರಿಸುವುದರಿಂದ ಹರ್ಷವಿಲ್ಲ. ಇಂತಹುದೇ ಶರೀರವು ಸಿಕ್ಕುವುದೆಂಬ ಸಿದ್ಧಾಂತವೇನು? ಹೊಸ ಶರೀರವೇನೋ ಸಿಕ್ಕಬಹುದು. ತಾನೀಗ ಇರು ವುದಕ್ಕಿಂತ ಶ್ರೇಷ್ಠಶರೀರವು ಸಿಕ್ಕುವುದೆಂಬುದಕ್ಕೆ ಆಧಾರವಿದೆಯೇ?' ಆಧಾರ ವಿದೆಯೆಂಬುದನ್ನು ಉಪಪಾದನೆಮಾಡುವ ಸಲುವಾಗಿಯೇ ಶ್ರೀ ರಾಮಾನು ಜರು ಈ ಶ್ಲೋಕಕ್ಕೆ ಮೇಲೆ ಹೇಳಿರುವಂತೆ ವ್ಯಾಖ್ಯೆಮಾಡಿರುತ್ತಾರೆ. ಇದು ಯುದ್ಧಪ್ರಸಂಗ. ಧರ್ಮಯುದ್ಧದಲ್ಲಿ ಶರೀರತ್ಯಾಗಮಾಡಬೇಕು. **ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ** ಎಂದು ಶ್ರೀಕೃಷ್ಣನೇ ಮುಂದೆ ೩೭ನೆಯ ಶ್ಲೋಕದಲ್ಲಿ ಹೇಳುತ್ತಾನೆ. ಆದುದರಿಂದ ಈ ಯುದ್ಧದಲ್ಲಿ ಜೀರ್ಣವಾದ ಶರೀರಗಳನ್ನು ಕಳೆದುಕೊಳ್ಳುವ ಭೀಷ್ಮ-ದ್ರೋಣಾದಿಗಳು (ಯೋಧರು)

ಉತ್ತಮವಾದ ನೂತನವಸ್ತ್ರಗ್ರಹಣದಂತೆ ಉತ್ತಮೋತ್ತಮವಾದ ಶರೀರ ಗಳನ್ನೇ ಪಡೆಯುತ್ತಾರೆ. ಆದುದರಿಂದ ಇಲ್ಲಿ ದುಃಖದ ವಿಷಯವೇನೂ ಇಲ್ಲ.)

**ಓಂ ನೈನಂ ಛಿನ್ದನ್ತಿ ಶಸ್ತ್ರಾಣಿ ನೈನಂ ದಹತಿ ಪಾವಕಃ I**
**ನ ಚೈನಂ ಕ್ಲೇದಯನ್ತ್ಯಾಪೋ ನ ಶೋಷಯತಿ ಮಾರುತಃ II೨೩II**

ಆತ್ಮನನ್ನು ಶಸ್ತ್ರಗಳು ಕತ್ತರಿಸಲಾರವು. ಅಗ್ನಿಯು ಸುಡಲಾರದು. ನೀರು ತೋಯಿಸಲಾರದು. ಗಾಳಿಯು ಒಣಗಿಸಲಾರದು.

* * *

(ಆತ್ಮಧರ್ಮವೇ ಬೇರೆ ; ದೇಹಧರ್ಮವೇ ಬೇರೆ. ದೇಹವನ್ನು ಕತ್ತರಿಸ ಬಹುದು ; ಸುಡಬಹುದು ; ತೋಯಿಸಬಹುದು ; ಒಣಗಿಸಬಹುದು. ಆದರೆ ನಿರವಯವನಾದ ಮತ್ತು ನಿರ್ಗುಣನಾದ ಆತ್ಮನನ್ನು ಶಸ್ತ್ರ, ಅಗ್ನಿ, ನೀರು, ಗಾಳಿ—ಇವುಗಳು ಏನೂ ಮಾಡಲಾರವು.

ಶ್ರೀರಂಗಗುರುಗಳು ಈ ಶ್ಲೋಕಕ್ಕೆ ಹೀಗೆ ಭಾವಾರ್ಥ ಹೇಳುತ್ತಿದ್ದರು : ಅರ್ಜುನನು ವರಬಲದಿಂದ ಪಡೆದಿರುವ ಅಮೋಘವಾದ ಅಗ್ನೇಯಾಸ್ತ್ರ ದಿಂದ ಆತ್ಮನನ್ನು ಸುಡಲಾಗುವುದಿಲ್ಲ. ವಾರುಣಾಸ್ತ್ರದಿಂದ ನೆನೆಸಲಾಗು ವುದಿಲ್ಲ. ವಾಯವ್ಯಾಸ್ತ್ರದಿಂದ ಶೋಷಿಸಲಾಗುವುದಿಲ್ಲ. ಖಡ್ಗದಿಂದ ಕತ್ತರಿಸ ಲಾಗುವುದಿಲ್ಲ.)

**ಓಂ ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ I**
**ನಿತ್ಯಃ ಸರ್ವಗತಸ್ಥಾಣುರಚಲೋಽಯಂ ಸನಾತನಃ II೨೪II**

ಆತ್ಮನು ಕತ್ತರಿಸಲಿಕ್ಕಾಗದವನು ; ಸುಡಲಿಕ್ಕಾಗದವನು ; ತೋಯಿಸ ಲಿಕ್ಕಾಗದವನು ; ನಿತ್ಯನು ; ಸರ್ವಾಂತರ್ಯಾಮಿಯಾದ ಸ್ಥಿರನು ; ಅಚಲನು ಮತ್ತು ಸನಾತನನು.

* * *

(ಪಂಚಭೂತಗಳು ಆತ್ಮನನ್ನು ಏನೂ ಮಾಡಲಾರವು. ಆತ್ಮನು ದೇಹವಲ್ಲ. ದೇಹವನ್ನು ಉಪಯೋಗಿಸಿಕೊಳ್ಳುವವನು. ದೇಹಕ್ಕೆ ಬಾಧೆ ಯಾದರೂ ಆತ್ಮಕ್ಕೆ ಬಾಧೆಯಾಗುವುದಿಲ್ಲ. ಅವನು ನಿತ್ಯ. ಬದಲಾವಣೆ ಯಿಲ್ಲದವನು. ಚಲನಚಿತ್ರದ ಬಿಳಿಯ ತೆರೆಗೆ ಅವನನ್ನು ಹೋಲಿಸಬಹುದು. ತೆರೆಯ ಮೇಲೆ ಬೀಳುವ ಚಿತ್ರದಲ್ಲಿ ಬೆಂಕಿಹೊತ್ತಿಕೊಳ್ಳುತ್ತದೆ. ಬಿರುಗಾಳಿ

ಏಳುತ್ತದೆ. ಜಲಪಾತವಿರುತ್ತದೆ. ಆದರೆ ತೆರೆಯು ಇವುಗಳಿಂದ ಬಾಧಿತ ವಾಗುವುದಿಲ್ಲ. ಅದು ಯಥಾಪೂರ್ವವಾಗಿಯೇ ಇರುತ್ತದೆ. ನಿತ್ಯನಾಗಿರು ವುದರಿಂದ ಅವನು ಸರ್ವಗತ. ಎಲ್ಲ ಕಡೆಯಲ್ಲೂ ಇರುವವನು. ಸರ್ವ ವ್ಯಾಪಕನು. ವಿಶ್ವವನ್ನೇ ವ್ಯಾಪಿಸಿಕೊಂಡಿರುವವನು. ಆದುದರಿಂದ ಸ್ಥಾಣು, ಮೋಟುಮರದಂತೆ ಸ್ಥಿರವಾಗಿರುವವನು. ಆದುದರಿಂದಲೇ ಅವನು ಅಚಲ ನಾಗಿದ್ದಾನೆ. ಆದುದರಿಂದ ಸನಾತನನೂ ಆಗಿದ್ದಾನೆ. ನಿತ್ಯನೂತನ ಮತ್ತು ಚಿರಪುರಾತನನಾಗಿದ್ದಾನೆ. ಯಾವುದೊಂದು ಕಾರಣದಿಂದಲೂ ಹುಟ್ಟಿದ ಹೊಸಬನಲ್ಲ.)

**ಓಂ ಅವ್ಯಕ್ತೋಽಯಮಚಿನ್ತ್ಯೋಽಯಮವಿಕಾರ್ಯೋಽಯಮುಚ್ಯತೇ ।**
**ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥೨೫॥**

ಆತ್ಮನು ಅವ್ಯಕ್ತ, ಅಚಿಂತ್ಯ, ವಿಕಾರವಿಲ್ಲದಿರುವವನು–ಎಂದು ಹೇಳಲ್ಪಟ್ಟಿರುವನು. ಆದುದರಿಂದ ಆತ್ಮನನ್ನು ಹೀಗೆ ತಿಳಿದುಕೊಂಡು ನೀನು ಶೋಕಿಸದಿರು.

* * *

(ಅವ್ಯಕ್ತ ಎಂದರೆ ಕಣ್ಣಿಗೆ ಕಾಣಿಸದೇ ಇರುವುದು. ನಾವು ದೇಹವನ್ನು ನೋಡಬಹುದು. ಆದರೆ ಅದರ ಹಿಂದಿರುವ ಆತ್ಮವನ್ನು ಕಾಣಲಾರೆವು. ವ್ಯಕ್ತಾವ್ಯಕ್ತಶಬ್ದಗಳ ಅರ್ಥವು ಮೋಕ್ಷಧರ್ಮಪರ್ವದಲ್ಲಿ ಹೀಗೆ ನಿರೂಪಿತ ವಾಗಿದೆ.

**ಇನ್ದ್ರಿಯೈರ್ಗೃಹ್ಯತೇ ಯದ್ಯತ್ತತ್ತದ್ವ್ಯಕ್ತಮಿತಿ ಸ್ಥಿತಿಃ ।**
**ಅವ್ಯಕ್ತಮಿತಿ ವಿಜ್ಞೇಯಂ ಲಿಙ್ಗಗ್ರಾಹ್ಯಮತೀನ್ದ್ರಿಯಮ್ ॥**

ಇಂದ್ರಿಯಗಳಿಂದ ಗ್ರಹಿಸಲ್ಪಡುವುದಕ್ಕೆ ವ್ಯಕ್ತವೆಂದೂ, ಇಂದ್ರಿಯಗಳಿಂದ ಗ್ರಹಿಸಲ್ಪಡದೇ ಅತೀಂದ್ರಿಯವಾಗಿ ಹೇತುಗಳಿಂದ ಗ್ರಹಿಸಲ್ಪಡುವುದಕ್ಕೆ ಅವ್ಯಕ್ತವೆಂದೂ ತಿಳಿದುಕೊಳ್ಳಬೇಕು. ಆತ್ಮನು ಅವ್ಯಕ್ತ. ಕಣ್ಣಿಗೆ ಕಾಣಿಸದೇ ಇರತಕ್ಕವನು. ಊಹೆಗಾದರೂ ಸಿಕ್ಕುವನೋ? ಯೋಚಿಸಿ ಅವನನ್ನು ತಿಳಿಯಲು ಸಾಧ್ಯವಾಗುವುದೋ?–ಇಲ್ಲ. ಚಿಂತನೆಗೂ ಅವನು ಸಿಕ್ಕದವನು. ಏನನ್ನು ಕುರಿತು ಚಿಂತಿಸಬೇಕು? ಯಾವುದಾದರೂ ವಿಷಯವನ್ನು ಚಿಂತಿಸ

ಬೇಕಾದರೆ ಎಲ್ಲಿಯಾದರೂ ಕೇಳಿದ್ದಾಗಿರಬೇಕು. ನೋಡಿದ್ದಾಗಿರಬೇಕು. ಮೂಸಿದ್ದಾಗಿರಬೇಕು. ರುಚಿನೋಡಿದ್ದಾಗಿರಬೇಕು. ಆದರೆ ಆತ್ಮನು ಇಂದ್ರಿಯಗಳಿಗೆ ಅತೀತನೆಂದಮೇಲೆ ಇವುಗಳಿಗವನು ವಿಷಯನೇ ಆಗುವುದಿಲ್ಲ. ಮನಸ್ಸಿಗೂ ನಿಲುಕದಂತಹವನು. **ಯತೋ ವಾಚೋ ನಿವರ್ತನ್ತೇ । ಅಪ್ರಾಪ್ಯ ಮನಸಾ ಸಹ ।** ಪರಮಪುರುಷನ ನಿಜಸ್ವರೂಪವನ್ನು ತಿಳಿಯಲಾಗದೇ ವೇದಗಳೂ ಸಹ ಮನಸ್ಸಿನೊಡನೆ ಹಿಂದಿರುಗುತ್ತವೆ.

ಅವಿಕಾರಿ : ವಿಕಾರರಹಿತನು. ಹಾಲನ್ನು ಹೆಪ್ಪುಹಾಕಿದರೆ ಮೊಸರಿನ ವಿಕಾರವನ್ನು ಹೊಂದುವಂತೆ ಇವನು ವಿಕಾರಹೊಂದುವುದಿಲ್ಲ. **ಯಥಾ ಕ್ಷೀರಂ ದಧ್ಯಾತಂಚನಾದಿನಾ ವಿಕಾರಿ ನ ತಥಾ ಅಯಂ ಆತ್ಮಾ**-ಬಾಲ್ಯ, ಯೌವನ, ವಾರ್ಧಕ್ಯ–ಇವುಗಳೆಲ್ಲವೂ ದೇಹದ ವಿಕಾರಗಳು. ಆತ್ಮನ ವಿಕಾರಗಳಲ್ಲ. ಆಕಾರವಿದ್ದರಲ್ಲವೇ ವಿಕಾರವಾಗುವುದು? ಆಕಾರವೇ ಇಲ್ಲವೆಂದಮೇಲೆ ವಿಕಾರದ ಪ್ರಶ್ನೆಯೇ ಇಲ್ಲ. ಆದುದರಿಂದ ಈ ರೀತಿಯಾಗಿ ಇದೆಲ್ಲವನ್ನೂ ತಿಳಿದುಕೊಂಡು ಶೋಚಿಸುವುದು ಉಚಿತವಲ್ಲ. ಶೋಕಕ್ಕೆ ಕಾರಣ ಅಜ್ಞಾನ. ಅಜ್ಞಾನದ ನಿರಸನವಾದನಂತರ ಶೋಕಪರಿಹಾರವಾಗುವುದು. ಭಗವಂತನು ಅರ್ಜುನನಿಗೆ ತತ್ತ್ವಜ್ಞಾನೋಪದೇಶಮಾಡಿದ್ದಾನೆ. ದೇಹಾತ್ಮಗಳ ನಿಜಸ್ಥಿತಿಯನ್ನು ವಿವರಿಸಿ ಹೇಳಿದ್ದಾನೆ. ಆತ್ಮಕ್ಕೆ ನಾಶವೇ ಇಲ್ಲವೆಂಬುದನ್ನು ಮನದಟ್ಟಾಗುವಂತೆ ಒತ್ತಿಯೊತ್ತಿ ಹೇಳಿದ್ದಾನೆ.

ಅರ್ಜುನನು ಶ್ರೇಯಸ್ಸಿನ ವಿಷಯವಾಗಿ ಕೇಳಿದ್ದನು. ಆದುದರಿಂದ ಅವನಿಗೆ ಅಧ್ಯಾತ್ಮಮಾರ್ಗದಲ್ಲಿಯೇ ಉತ್ತರನೀಡಿದ್ದಾನೆ. ಕಟ್ಟಕಡೆಗೆ ಈ ಪ್ರಕರಣವನ್ನು ಉಪಸಂಹಾರಮಾಡುತ್ತಾ ಹೇಳುತ್ತಾನೆ. "ಇಷ್ಟೆಲ್ಲಾ ಹೇಳಿದನಂತರವೂ ನೀನು ಶೋಕಿಸುತ್ತಾ ಕುಳಿತಿರುವುದು ಯುಕ್ತವಲ್ಲ."

ಈ ಶ್ಲೋಕಗಳಲ್ಲಿ ಕಂಡುಬರಬಹುದಾದ ಶಬ್ದಗಳ ಪುನರುಕ್ತಿ ಮತ್ತು ಅರ್ಥಪುನರುಕ್ತಿಗಳಿಗೆ ಚಮತ್ಕಾರದಿಂದ ಬೇರೆ-ಬೇರೆ ಅರ್ಥಗಳನ್ನು ಮಾಡಬೇಕಾಗಿಲ್ಲ. ಆತ್ಮವಸ್ತುವು ಅತ್ಯಂತಗಹನವಾದುದರಿಂದ ಆ ಒಂದೇ ವಿಷಯವನ್ನೇ ಮತ್ತೆ-ಮತ್ತೆ ಪ್ರಸಂಗಗಳನ್ನು ಕಲ್ಪಿಸಿಕೊಂಡು ಬೇರೆ-ಬೇರೆ ಶಬ್ದಗಳಿಂದ ಭಗವಂತನು ಉಪದೇಶಮಾಡುತ್ತಾನೆ. ಹೇಳಿದ್ದನ್ನೇ ಮತ್ತೊಮ್ಮೆ ಹೇಳುವುದು, ಬೇರೆ-ಬೇರೆ ಶಬ್ದಗಳನ್ನು ಪುನರಾವೃತ್ತಿಮಾಡುವುದು, ಪಾಠ

ಹೇಳುವ ಉಪಾಧ್ಯಾಯರ ಸಹಜವೂ ಪರಿಣಾಮಕಾರಿಯೂ ಆದ ವಿಧಾನವೇ ಆಗಿದೆ. Repeat and revise and revise and repeat that makes you a good teacher. ಶ್ರೀ ಶಂಕರರ ವ್ಯಾಖ್ಯಾನವೂ ಇದೇ ಅಭಿಪ್ರಾಯವನ್ನೇ ಸಮರ್ಥಿಸುತ್ತದೆ.

**ದುರ್ಬೋಧತ್ವಾತ್ ಆತ್ಮವಸ್ತುನಃ ಪುನಃ ಪುನಃ ಪ್ರಸಙ್ಗಂ ಆಪಾದ್ಯ ಶಬ್ದಾನ್ತರೇಣ ತದೇವ ವಸ್ತು ನಿರೂಪಯತಿ ಭಗವಾನ್ ವಾಸುದೇವಃ । ಕಥಂ ನು ನಾಮ ಸಂಸಾರಿಣಾಂ ಅವ್ಯಕ್ತಂ ತತ್ತ್ವಂ ಬುದ್ಧಿಗೋಚರತಾಂ ಆಪನ್ನಂ ಸತ್ ಸಂಸಾರನಿವೃತ್ತಯೇ ಸ್ಯಾತ್ ।)**

**ಓಂ ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ ।**
**ತಥಾಪಿ ತ್ವಂ ಮಹಾಬಾಹೋ ನೈವಂ ಶೋಚಿತುಮರ್ಹಸಿ ॥೨೬॥**

ಮಹಾಬಾಹೋ! ಒಂದು ವೇಳೆ ದೇಹಾತ್ಮಗಳು ಒಂದೇ ಎಂದು ಭಾವಿಸಿ, ಅವನು ಯಾವಾಗಲೂ ಹುಟ್ಟುತ್ತಿರುವನು, ಯಾವಾಗಲೂ ಸಾಯುತ್ತಿರುವನು–ಎಂದು ಭಾವಿಸಿದರೂ ಆಗಲೂ ಕೂಡ ನೀನು ಈ ವಿಧವಾಗಿ ಶೋಕಿಸಬಾರದು.

* * *

('ಆತ್ಮನು ನಿತ್ಯನೆಂದು ನಾವು ತಿಳಿದಿಲ್ಲವಾದ್ದರಿಂದ ನಿಮ್ಮ ಉಪಪತ್ತಿಯು ನಮಗೆ ಗ್ರಾಹ್ಯವಿಲ್ಲ'-ಎಂದು ಹೇಳಬಹುದಾದ್ದರಿಂದ ಅದಕ್ಕೆ ಸಮಾಧಾನರೂಪವಾದ ಈ ಮಾತನ್ನು ಶ್ರೀಕೃಷ್ಣನು ಹೇಳುತ್ತಾನೆ : 'ಆತ್ಮನು ನಿತ್ಯ ; ಅವನಿಗೆ ಸಾವಿಲ್ಲ. ದೇಹವು ಮಾತ್ರವೇ ವಿನಾಶಹೊಂದುತ್ತದೆ'–ಈ ಸಿದ್ಧಾಂತವನ್ನು ಸಾಮಾನ್ಯನು ಅರ್ಥಮಾಡಿಕೊಳ್ಳಲಾರ. ಗೀತೆಯು ಹುಟ್ಟಿ ಅನೇಕ ಸಾವಿರ ವರ್ಷಗಳಾದರೂ ಈ ತಿಳಿವಳಿಕೆಯು ಗೀತಾಪಾಠಕರಿಗಾದರೂ ಬಂದಿರುವುದೆಂದು ಭಾವಿಸಲೂ ಸಾಧ್ಯವಿಲ್ಲ. ಭಾರತೀಯರಾದ ನಾವು ಪುನರಪಿ ಜನನ ಪುನರಪಿ ಮರಣಗಳನ್ನು ಒಪ್ಪುತ್ತೇವೆ. ಹುಟ್ಟು- ಸಾವುಗಳು ನಿತ್ಯವಾದುವುಗಳು. 'ಹುಟ್ಟಿದವನು ಸಾಯುತ್ತಾನೆ'–ಇಷ್ಟನ್ನೇ ನೀನು ಮನಗಂಡರೂ ಸಹ ನೀನು ಶೋಕಿಸುವ ಕಾರಣವಿಲ್ಲ. ಎಂತಹ ಮೂಢನೂ ಸಹ ಹುಟ್ಟಿದ ನಂತರ ಸಾವಿಲ್ಲವೆಂದು ಹೇಳಲಾರನು. ಸಾವು ಎಂದು ಬರುವುದೆಂಬುದನ್ನು ಯಾವನೂ ತಿಳಿಯಲಾರನು. ಹೀಗಿರುವುದರಿಂದ ಹುಟ್ಟಿದವ

ನಿಗೆ ಸಾವೆಂಬುದು ನಿತ್ಯವಾದುದು. ಸಾಯಲು ಕಾರಣವು ಯಾವುದಾದರೂ ಆಗಬಹುದು. ಇದೇ ಕಾರಣದಿಂದಲೇ ಸಾಯಬೇಕೆಂಬ ನಿಯಮವೇನಿಲ್ಲ. ವಯಸ್ಸಾದನಂತರ ಸಾಯುವುದೆಂಬುದು ಸಾಧಾರಣನಿಯಮ. ಅಪಘಾತ ಗಳಿಗೆ ಒಳಗಾಗಿ ಸಾಯುವವರೂ ಅನೇಕರಿದ್ದಾರೆ. ಈಗ ಭೀಷ್ಮಾದಿಗಳು ಯುದ್ಧದಲ್ಲಿ ಸಾಯುತ್ತಾರೆ. ಅದಕ್ಕೇಕೆ ಶೋಕಿಸಬೇಕು.?' )

**ಓಂ ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥೨೭॥**

ಹುಟ್ಟಿದವನಿಗೆ ಸಾವು ನಿಶ್ಚಯ. ಸತ್ತವನು ಪುನಃ ಹುಟ್ಟುವುದೂ ನಿಶ್ಚಯ. ಹೀಗಿರುವಾಗ ಪರಿಹರಿಸಲಾಗದ ಈ ನಿತ್ಯವಾದ ಜನನ-ಮರಣಗಳ ವಿಷಯದಲ್ಲಿ ನೀನು ಶೋಕಿಸಬಾರದು.

* * *

(ಹುಟ್ಟಿದ ದೇಹವು ಅವಸಾನಹೊಂದಲೇಬೇಕು. ಅವಸಾನಹೊಂದಿದ ದೇಹವು ಹುಟ್ಟಲೇಬೇಕು. ಮನುಷ್ಯನಲ್ಲಿ ಹಲವಾರು ವಾಸನೆಗಳಿರುತ್ತವೆ. ಅದನ್ನು ತೃಪ್ತಿಪಡಿಸುವುದಕ್ಕೆ ಒಂದು ಬಾಗಿಲಿನಿಂದ ಹೋಗುತ್ತಾನೆ. ಮತ್ತೊಂದು ಬಾಗಿಲಿನಿಂದ ಬರುತ್ತಾನೆ. ಮರಣವೆಂಬುದು ಎರಡು ಜೀವನ ಗಳ ಮಧ್ಯದಲ್ಲಿ ಬರುವ ವಿರಾಮಕಾಲ. ಈ ಹುಟ್ಟು-ಸಾವುಗಳನ್ನು ಯಾವ ಕಾರಣದಿಂದಲೂ ಪರಿಹರಿಸಿಕೊಳ್ಳುವುದಕ್ಕಾಗುವುದಿಲ್ಲ. ಇದು ಅಪರಿ ಹಾರ್ಯ. ಇಂದು ಭೀಷ್ಮಾದಿಗಳು ಯುದ್ಧದಲ್ಲಿ ಮಡಿಯಬೇಕಾಗಿದೆ ; ಮಡಿಯುತ್ತಾರೆ. ಇದು ಅಪರಿಹಾರ್ಯ. ಇದಕ್ಕಾಗಿ ನೀನು ಶೋಕಿಸುವುದು ಯುಕ್ತವಲ್ಲ. )

**ಓಂ ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥೨೮॥**

ಪ್ರಾಣಿಗಳು ಹುಟ್ಟುವ ಮೊದಲೂ ಅದೃಶ್ಯವಾಗಿರುತ್ತವೆ. ಮಧ್ಯದಲ್ಲಿ (ಹುಟ್ಟಿದನಂತರ ) ವ್ಯಕ್ತವಾಗುತ್ತವೆ. ನಿಧನಹೊಂದಿದ ಮೇಲೆ ಪುನಃ ಅವ್ಯಕ್ತವಾಗಿಬಿಡುತ್ತವೆ. ಅವ್ಯಕ್ತದಿಂದ ಬಂದು ಪುನಃ ಅವ್ಯಕ್ತಕ್ಕೇ ಸೇರಿ ಹೋಗುತ್ತವೆ. ಇದರಲ್ಲಿ ಶೋಕಪಡುವ ಕಾರಣವೇನಿದೆ?

* * *

( 'ನೀರಮೇಲಿನ ಗುಳ್ಳೆಯಂದದಿ ತೋರಿಯಡಗುವ ದೇಹ'. ದೇಹ

ವೆಂಬುದು ನೀರಿನ ಮೇಲಿನ ಗುಳ್ಳೆಯಂತೆ, ಗುಳ್ಳೆಯು ಮೊದಲಿರುವುದಿಲ್ಲ. ಸ್ವಲ್ಪಕಾಲದವರೆಗಿರುತ್ತದೆ. ಪುನಃ ಹೊರಟುಹೋಗುತ್ತದೆ. ಅದೇ ರೀತಿಯಲ್ಲಿ ಈ ದೇಹವು ಹಿಂದಿರಲಿಲ್ಲ. ಈಗ ಕಾಣುತ್ತಿದೆ. ಪುನಃ ಕಾಣದಾಗುತ್ತದೆ. ಒಂದು ಗುಳ್ಳೆಯ ಜೊತೆಯಲ್ಲಿ ಅನೇಕ ಗುಳ್ಳೆಗಳು ಹುಟ್ಟಿಕೊಂಡಿರುತ್ತವೆ. ಆ ಗುಳ್ಳೆಗಳೇ ಮನುಷ್ಯನ ಬಳಗಗಳು. ಹರಿಯುವ ನೀರಿನಲ್ಲಿ ಈ ಗುಳ್ಳೆಗಳೂ ಸಹ ಸ್ವಲ್ಪದೂರದವರೆಗೆ ಜೊತೆಗೂಡಿಯೇ ಹೋಗುತ್ತವೆ. ಅದೇ ರೀತಿಯಲ್ಲಿ ಬಂಧು-ಬಳಗಗಳಿಂದ ಯುಕ್ತನಾದ ಮನುಷ್ಯನ ಸಂಸಾರವೂ ಸಾಗುತ್ತಿರುತ್ತದೆ. ಗುಳ್ಳೆಗಳು ಒಡೆದುಹೋಗುವಂತೆ ಬಂಧುಗಳೂ ಸಾಯುತ್ತಾರೆ. ಇವನೂ ಸಾಯುತ್ತಾನೆ. ಮನುಷ್ಯನು ತಾನು ಹಿಂದೇನಾಗಿದ್ದೆನೆಂಬುದನ್ನೂ ಯೋಚಿಸುವುದಿಲ್ಲ. ಮುಂದೇನಾಗುವೆನೆಂಬುದನ್ನೂ ಯೋಚಿಸುವುದಿಲ್ಲ. ತಾತ್ಕಾಲಿಕಸ್ಥಿತಿಯನ್ನೇ ಪರಮಸತ್ಯವೆಂದು ಭಾವಿಸುತ್ತಾ ಶೋಕ- ಮೋಹಗಳಿಗೆ ಒಳಗಾಗುತ್ತಾನೆ. ದೇಹಿಯಾಗುವ ಮುಂಚಿನ ಸ್ಥಿತಿ-ದೇಹಾನಂತರದ ಸ್ಥಿತಿ ಇವುಗಳನ್ನು ಯೋಚಿಸಿದರೆ ದೇಹಿಯಾಗಿ ಉಳಿಯುವುದು ಕ್ಷಣಕಾಲಮಾತ್ರ. ಆ ಕ್ಷಣದಲ್ಲಿ ಸಂಭವಿಸುವ ಆಗು-ಹೋಗುಗಳನ್ನು ಕುರಿತು ದೇಹಿಯು ಪರಿತಪಿಸುತ್ತಿರುತ್ತಾನೆ. ಹಾಗೆ ಪರಿತಪಿಸುವುದು ಯುಕ್ತವಲ್ಲವೆಂದು ಶ್ರೀಕೃಷ್ಣನು ಹೇಳುತ್ತಾನೆ. ಮಹಾಭಾರತದ ಸ್ತ್ರೀಪರ್ವದಲ್ಲಿಯೂ ಇದೇ ಅರ್ಥಬರುವ ಶ್ಲೋಕವನ್ನು ಶೋಕೋಪಶಮನಕ್ಕಾಗಿ ಹೇಳಿರುವುದನ್ನು ಶ್ರೀ ಶಂಕರರು ಭಾಷ್ಯದಲ್ಲಿ ಉದ್ಧರಿಸಿದ್ದಾರೆ.

**ಅದರ್ಶನಾದಾಪತಿತಃ ಪುನಶ್ಚಾದರ್ಶನಂ ಗತಃ ।**
**ನಾಸೌ ತವ ನ ತಸ್ಯ ತ್ವಂ ವೃಥಾ ಕಾ ಪರಿದೇವನಾ ॥**

ಹಿಂದೆ ಕಣ್ಣಿಗೆ ಕಾಣಿಸದೇ ಇದ್ದು ಎಂದರೆ ಅವ್ಯಕ್ತವಾಗಿದ್ದು ಈಗ ಕಾಣಿಸಿಕೊಂಡಿದ್ದನು. ಪುನಃ ಅವ್ಯಕ್ತನಾಗಿ ಹೊರಟುಹೋದನು. ಇವನು ನಿನ್ನವನೂ ಅಲ್ಲ. ನೀನು ಇವನಿಗೆ ಸೇರಿದವಳೂ ಅಲ್ಲ. ವೃಥಾ ಏಕೆ ಶೋಚಿಸುತ್ತೀಯೆ? )

**ಓಂ ಆಶ್ಚರ್ಯವತ್ಪಶ್ಯತಿ ಕಶ್ಚಿದೇನ-**
**ಮಾಶ್ಚರ್ಯವದ್ವದತಿ ತಥೈವ ಚಾನ್ಯಃ ।**

ಆಶ್ಚರ್ಯವಚ್ಚೈವಮನ್ಯಃ ಶೃಣೋತಿ
ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ॥೨೯॥

ಒಬ್ಬನು ಈತನನ್ನು ಆಶ್ಚರ್ಯದಂತೆ ಕಾಣುತ್ತಾನೆ. ಇನ್ನೊಬ್ಬನು ಆಶ್ಚರ್ಯದಂತೆ ಹೇಳುತ್ತಾನೆ. ಮತ್ತೊಬ್ಬನು ಆಶ್ಚರ್ಯದಂತೆ ಕೇಳುತ್ತಾನೆ. ಕೇಳಿದಮೇಲೂ ಯಾರೂ ಇವನನ್ನು ತಿಳಿಯಲಾರರು.

* * *

(ಹಿಂದಿನ ಶ್ಲೋಕದಲ್ಲಿ 'ಅವ್ಯಕ್ತಾದೀನಿ ಭೂತಾನಿ' ಎಂಬುದಾಗಿ ಪ್ರಾಣಿಗಳ ಅವ್ಯಕ್ತ, ವ್ಯಕ್ತ, ಪುನಃ ಅವ್ಯಕ್ತಸ್ಥಿತಿಯನ್ನು ಹೇಳಲಾಗಿದೆ. ಈ ಶ್ಲೋಕದಲ್ಲಿ 'ಏನಂ' ಎಂಬ ಪದವು ಆತ್ಮನನ್ನೇ ಕುರಿತು ಹೇಳುತ್ತದೆಯೆಂದು ಎಲ್ಲ ಆಚಾರ್ಯರೂ ವ್ಯಾಖ್ಯಾನಮಾಡಿರುತ್ತಾರೆ. ಕಠೋಪನಿಷತ್ತಿನಲ್ಲಿ ಆತ್ಮವಸ್ತುವನ್ನು ಕುರಿತು ಈ ಅರ್ಥಬರುವ ಶ್ಲೋಕವಿರುವುದೇ ಹೀಗೆ ಅರ್ಥಮಾಡಲು ಕಾರಣವಾಗಿರಬಹುದು.

ಒಬ್ಬ ಜ್ಞಾನಿಯು ಈ ಆತ್ಮವಸ್ತುವನ್ನು ಆಶ್ಚರ್ಯಚಕಿತನಾದವನಂತೆ ಹೃದಯಗುಹೆಯಲ್ಲಿ ಕಾಣುತ್ತಾನೆ. ಮೊದಲನೆಯ ಬಾರಿಗೆ ಆತ್ಮಾನುಭವ ವಾಗುವವನಿಗೆ ಅಚ್ಚರಿಯಾಗುವುದರಲ್ಲಿ ಸಂಶಯವೇ ಇಲ್ಲ. ಅಚ್ಚರಿಗೊಂಡ ವನೇ ಆಶ್ಚರ್ಯ ಎಂಬ ಅಭಿಪ್ರಾಯವೂ ಇಲ್ಲಿದೆ.

ಹಾ ೩ ವು ಹಾ ೩ ವು ಹಾ ೩ ವು । ಅಹಮನ್ನಮಹಮನ್ನಮಹ-
ಮನ್ನಮ್ ।
ಅಹಮನ್ನಾದೋ೨ ಹಮನ್ನಾದೋ೨ ಹಮನ್ನಾದಃ

ಆ ಸಮಯದಲ್ಲವನು ಆಶ್ಚರ್ಯಚಕಿತನಾದವನಂತೆ ಹೃದಯಾಂತ ರಾಳದಲ್ಲಿ ಅಹೋ! ಅಹೋ! ಅಹೋ! ಎಂದು ಕೂಗಿಕೊಳ್ಳುತ್ತಾನೆ. ನಾನೇ ಅನ್ನ ಎನ್ನುತ್ತಾನೆ. ನಾನೇ ಅನ್ನಾದ-ಅನ್ನವನ್ನು ತಿನ್ನುವವನು ಎನ್ನುತ್ತಾನೆ.

ಈ ರೀತಿಯಲ್ಲಿ ಅತ್ಯಾಶ್ಚರ್ಯಕರವಾದ ರೀತಿಯಲ್ಲಿ ಅವನಿಗೆ ಆತ್ಮಾನು ಭವವಾಗುತ್ತದೆ. ಮತ್ತೊಬ್ಬನು ಆಶ್ಚರ್ಯಚಕಿತನಾದಂತೆ ತನ್ನ ಆತ್ಮಾನು ಭವವನ್ನು ಹೇಳಲು ಪ್ರಯತ್ನಿಸುತ್ತಾನೆ. ಆತ್ಮಾನುಭವವು ಅವರ್ಣನೀಯ ವಾದುದು. ಅದನ್ನು ವಿವರಿಸಿ ಹೇಳುವ ಸಾಧ್ಯತೆಯಿಲ್ಲ. 'ಮಾವಿನ ಹಣ್ಣು

ರುಚಿಯಾಗಿದೆ'–ಎಂದಿಷ್ಟು ಹೇಳಬಹುದೇ ಹೊರತು–'ಹೀಗೇ ಇದೆ ಇದರ ರುಚಿ'–ಎಂದು ಮನದಟ್ಟಾಗುವಂತೆ ಹೇಳುವ ಸಾಧ್ಯತೆಯಿಲ್ಲ. 'ತಿಂದು ನೋಡು'–ಎನ್ನಬೇಕು. **ಮೂಕಾಸ್ವಾದನವತ್**–ಯಾವುದಾದರೂ ವಸ್ತುವನ್ನು ಆಸ್ವಾದಿಸಿದ ಮೂಗನಂತೆ–ಭಾಷೆಗೆ ಮೀರಿದ ಭಾವ–ಇದನ್ನು ಅನುಭವಿಸಿದವನು 'ಅನುಭಾವೀ' (ನಾರದಭಕ್ತಿಸೂತ್ರ.) ಆತ್ಮಾನುಭವದ ಸುಖವೂ ಅಷ್ಟೇ. ಕೇವಲ ಅನುಭವಿಸಬೇಕಾದ ವಿಷಯ. ಇದರ ವಿಷಯ ವನ್ನು ಕೇಳುವವನೂ ಸಹ ಆಶ್ಚರ್ಯಚಕಿತನಾದಂತೆಯೇ ಬಾಯಿಬಿಟ್ಟು ಕೊಂಡು ಕೇಳುತ್ತಾನೆ. **ಅಣೋರಣೀಯಾನ್**–ಅಣುವಿಗಿಂತಲೂ ಚಿಕ್ಕವನು ; **ಮಹತೋ ಮಹೀಯಾನ್**–ದೊಡ್ಡದಕ್ಕಿಂತಲೂ ದೊಡ್ಡವನು. ನಿತ್ಯ, ಸರ್ವಗತ, ಸ್ಥಾಣು, ಅಚಲ, ಅವ್ಯಕ್ತ, ಅಚಿಂತ್ಯ, ಅವಿಕಾರ್ಯ–ಇತ್ಯಾದಿ ಪದಗಳಿಂದ ವರ್ಣಿಸತೊಡಗಿದರೆ ಆಶ್ಚರ್ಯಪಡದಿರುವುದು ಹೇಗೆ? ಕೇಳಿದರೂ ಸಹ ಇವನನ್ನು (ಆತ್ಮನನ್ನು) ತಿಳಿಯುತ್ತಾನೆಯೋ? ಎಂದರೆ ತಿಳಿಯುವುದಿಲ್ಲ. ಕೇವಲ ಶ್ರವಣದಿಂದ ಆತ್ಮಾನುಭವವನ್ನು ಪಡೆಯುವ ಸಾಧ್ಯತೆಯಿಲ್ಲ. ಇದಕ್ಕೆ ಅಷ್ಟಾಂಗಯೋಗದ ಸಾಧನೆ ಬೇಕು.

(ಕಠೋಪನಿಷತ್ತಿನ ಎರಡನೇ ವಲ್ಲಿಯಲ್ಲಿ ಈ ಮಂತ್ರವು ಹೀಗೆ ಬಂದಿದೆ.

**ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ**
**ಶೃಣ್ವನ್ತೋಽಪಿ ಬಹವೋ ಯಂ ನ ವಿದ್ಯುಃ ।**
**ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾ-**
**ಶ್ಚರ್ಯೋ ಜ್ಞಾತಾ ಕುಶಲಾನುಶಿಷ್ಟಃ ॥೭॥**

ಈ ಆತ್ಮನು ಬಹುಜನರ ಶ್ರವಣಕ್ಕೂ ಲಭ್ಯನಲ್ಲ : ಶ್ರವಣಮಾಡಿದ ಮೇಲೂ ಈತನನ್ನು ಬಹುಜನರು ಮನಸ್ಸಿನ ಸಂಸ್ಕಾರವಿಲ್ಲದುದರಿಂದ ಅರಿಯರು. ಇವನನ್ನು ಹೇಳುವವನು ಆಶ್ಚರ್ಯನು, ಪಡೆಯುವವನು ಆಶ್ಚರ್ಯನು. ಕುಶಲನಿಂದ ಅನುಶಿಷ್ಟನಾಗಿ ತಿಳಿದುಕೊಳ್ಳುವವನೂ ಆಶ್ಚರ್ಯನು. (ಇಲ್ಲಿ ಬ್ರಹ್ಮಜ್ಞಾನಿಯನ್ನು ಆಶ್ಚರ್ಯನು ಎಂದೇ ಹೇಳಿದ್ದಾರೆ.) ಲಕ್ಷೋಪಲಕ್ಷ ಜನರಲ್ಲಿ ಯಾವನೋ ಒಬ್ಬನು ಆತ್ಮದರ್ಶನ ಮಾಡುತ್ತಾನೆ. ಅವನೇ ಆಶ್ಚರ್ಯನು. ಆಶ್ಚರ್ಯಕ್ಕೆ ವಿಷಯನಾದವನು. ಆಶ್ಚರ್ಯಕ್ಕೆ ಸಮಾನನು. ಹಾಗೆಯೇ ಹೇಳುವವನೂ ಕೇಳುವವನೂ ಆಶ್ಚರ್ಯನೇ ಸರಿ.)

ಹಿಂದೆಂದೂ ಕಂಡು ಕೇಳದ, ಊಹಿಸಲೂ ಆಗದ ಅದ್ಭುತವೂ ಆಗಿರುವ ವಸ್ತುವು ಅಕಸ್ಮಾತ್ ಕಂಡರೆ ಅದು ಆಶ್ಚರ್ಯ. ಅದೃಷ್ಟಪೂರ್ವಂ ಅದ್ಭುತಂ ಅಕಸ್ಮಾತ್ ದೃಶ್ಯಮಾನಂ ಆಶ್ಚರ್ಯಂ (ಶ್ರೀಶಂಕರರು)

**ಓಂ ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।**
**ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥೩೦॥**



(ಶ್ರೀಕೃಷ್ಣನು ಹಿಂದೆ ಹೇಳಿದುದನ್ನೇ ಪುನಃ ಪ್ರತಿಪಾದಿಸುತ್ತಾನೆ.) ಭಾರತ! ಎಲ್ಲರ ದೇಹಗಳಲ್ಲಿರುವ ಈ ಆತ್ಮನು ಎಂದಿಗೂ ನಾಶವಾಗುವುದಿಲ್ಲ. ಆದಕಾರಣ ನೀನು ಯಾವ ಪ್ರಾಣಿಗಳ ವಿಷಯದಲ್ಲಿಯೂ ವ್ಯಥೆಪಡುವ ಕಾರಣವಿಲ್ಲ.

* * *

(ದೇಹಿಯು ಎಂದರೆ ಶರೀರಿಯಾದ ಜೀವಾತ್ಮನು ಯಾವಾಗಲೂ ಯಾವ ಅವಸ್ಥೆಯಲ್ಲೂ ಅವಧ್ಯನು. ಏಕೆಂದರೆ : ಅವನು ಅವಯವಗಳಿಲ್ಲದವನಾಗಿರುತ್ತಾನೆ. ನಿತ್ಯನೂ ಆಗಿರುತ್ತಾನೆ. ಯಾವ ಪ್ರಾಣಿಯ ಶರೀರವು ಕೊಲ್ಲಲ್ಪಟ್ಟರೂ ಆ ಶರೀರಾಂತರ್ಗತನಾಗಿರುವ ಸರ್ವಗತನಾದ ಆತ್ಮನು ನಾಶಹೊಂದುವುದಿಲ್ಲ. ಆದುದರಿಂದ ಭೀಷ್ಮಾದಿಗಳ ವಿಷಯದಲ್ಲಿ ಮಾತ್ರವಲ್ಲ; ಯಾವ ಪ್ರಾಣಿಗಳ ವಿಷಯದಲ್ಲಿಯೂ ನೀನು ಶೋಕಪಡಬೇಕಾಗಿಲ್ಲ.)

(ಮುಂದೆ ಶ್ರೀಕೃಷ್ಣನು ಸ್ವಧರ್ಮದೃಷ್ಟಿಯಿಂದ ಮಾತನಾಡುವನು.)

**ಓಂ ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಮ್ಪಿತುಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ಕ್ಷತ್ರಿಯಸ್ಯ ನ ವಿದ್ಯತೇ ॥**

ಸ್ವಧರ್ಮದ ದೃಷ್ಟಿಯಿಂದ ನೋಡಿದರೂ ನೀನು ಹಿಂದೆ-ಮುಂದೆ ನೋಡುವ ಅಥವಾ ಭಯಪಡುವ ಕಾರಣವಿಲ್ಲ. ಕ್ಷತ್ರಿಯನಾದವನಿಗೆ ಧರ್ಮ ಯುದ್ಧಕ್ಕಿಂತ ಶ್ರೇಯಸ್ಕರವಾದುದು ಮತ್ತೊಂದಿಲ್ಲ.

* * *

(ಕ್ಷತ್ರಿಯನಾಗಿ ಹುಟ್ಟಿದ ಕಾರಣದಿಂದಲಾದರೂ ಹಿಂದೆ-ಮುಂದೆ ನೋಡದೆ ಈ ಯುದ್ಧವನ್ನು ಪ್ರಾರಂಭಿಸಬೇಕೆನ್ನುತ್ತಾನೆ ಶ್ರೀಕೃಷ್ಣ. ದುಷ್ಟಶಿಕ್ಷಣ; ಶಿಷ್ಟಪರಿಪಾಲನೆ ; ಪೀಡೆಯಿಂದ ಜನರನ್ನು (ಸಾಧುಗಳನ್ನು ) ಕಾಪಾಡುವವನು–ಎಂಬುದೇ ಕ್ಷತ್ರಿಯಶಬ್ದಾರ್ಥ. **ಕ್ಷತಾತ್ ತ್ರಾಯತೇ ಇತಿ ಕ್ಷತ್ರಿಯಃ** = ಧರ್ಮಪೀಡೆಯಾಗದಂತೆ ನೋಡಿಕೊಳ್ಳಬೇಕು. ಇದು ಕ್ಷತ್ರಿಯ ಧರ್ಮ. ಈಗ ದುಷ್ಟರನ್ನು ಶಿಕ್ಷಿಸಬೇಕಾದ ಕಾಲವೊದಗಿದೆ. ಅದರಲ್ಲಿಯೂ ಧರ್ಮಸಂಸ್ಥಾಪನೆಗಾಗಿ ಯುದ್ಧಮಾಡಬೇಕಾಗಿದೆ.

ಆದುದರಿಂದಲೇ ಇದು ಧರ್ಮಯುದ್ಧ. ಕ್ಷತ್ರಿಯನಿಗೆ ಧರ್ಮಯುದ್ಧ ಮಾಡಿ ಧರ್ಮಸಂಸ್ಥಾಪನೆ ಮಾಡುವುದಕ್ಕಿಂತಲೂ ಶ್ರೇಯಸ್ಕರವಾದ ಕಾರ್ಯವೇ ಮತ್ತೊಂದಿಲ್ಲ. ಮುಂದೆ ಶ್ರೀಕೃಷ್ಣನೇ ಹೀಗೆ ಹೇಳಿದ್ದಾನೆ :

**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ ।**
**ದಾನಮೀಶ್ವರಭಾವಶ್ಚ ಕ್ಷತ್ರಿಯಸ್ಯ ಸ್ವಭಾವಜಮ್ ॥**

ಯುದ್ಧದಲ್ಲಿ ನಿರ್ಭಯವಾಗಿ ಪ್ರವೇಶಿಸುವ ಸಾಮರ್ಥ್ಯ, ಶತ್ರುಗಳಿಂದ ಪರಾಜಯಹೊಂದದಿರುವುದು, ಪ್ರಾರಂಭಿಸಿದ ಕಾರ್ಯಕ್ಕೆ ವಿಘ್ನಗಳೊದಗಿ ದರೂ ಅವುಗಳನ್ನು ನಿವಾರಿಸಿ ಕಾರ್ಯವನ್ನು ಪೂರೈಸುವ ಧೈರ್ಯ, ಸಮಸ್ತ ಕಾರ್ಯಗಳನ್ನೂ ಸಾಧಿಸುವ ದಕ್ಷತೆ, ಯುದ್ಧದಲ್ಲಿ ಮರಣವು ನಿಶ್ಚಯವೆನಿಸಿ ದರೂ ಶತ್ರುವಿಗೆ ಬೆನ್ನುತೋರದೇ ಕಡೆಯವರೆಗೂ ಹೋರಾಡುವುದು, ದಾನಮಾಡುವುದು ಮತ್ತು ಪ್ರಭುತ್ವ–ಇವುಗಳು ಕ್ಷತ್ರಿಯನ ಸ್ವಭಾವಜನ್ಯ ವಾದ ಗುಣಗಳು. ಈ ಕಾರಣದಿಂದ ನೀನು ಯುದ್ಧಮಾಡಲೇ ಬೇಕು. ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ ಯಾವುದರಿಂದ

ಶ್ರೇಯಸ್ಸುಂಟಾಗುವುದೆಂದು ನೀನು ಕೇಳಿದೆಯಲ್ಲವೇ? ಕ್ಷತ್ರಿಯನಿಗೆ ಧರ್ಮ ಯುದ್ಧ ಮಾಡುವುದಕ್ಕಿಂತಲೂ ಶ್ರೇಯಸ್ಕರವಾದ ಮಾರ್ಗ ಇನ್ನೊಂದಿಲ್ಲ.)

**ಓಂ ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭನ್ತೇ ಯುದ್ಧಮೀದೃಶಮ್ ॥೩೨॥**

ಅರ್ಜುನ! ತಾನಾಗಿ ಬಂದಿರುವ, ತೆರೆದ ಸ್ವರ್ಗದ ಬಾಗಿಲಿನಂತಿರುವ ಇಂತಹ ಧರ್ಮಯುದ್ಧವನ್ನು ಅದೃಷ್ಟಶಾಲಿಗಳಾದ ಕ್ಷತ್ರಿಯರು ಮಾತ್ರವೇ ಪಡೆಯುತ್ತಾರೆ.

* * *

(ಈ ಯುದ್ಧವು ನೀನಾಗಿ ಬಯಸಿದ್ದಲ್ಲ. ಕೌರವರು ಅರ್ಧರಾಜ್ಯ ಕೊಟ್ಟಿದ್ದರೆ ನೀನು ಯುದ್ಧಮಾಡುತ್ತಲೇ ಇರಲಿಲ್ಲ. ಯುದ್ಧಕ್ಕೆ ಕಾರಣರು ಅವರು. ಈ ಕಾರಣದಿಂದ ತಾನೇ ತಾನಾಗಿ ಯುದ್ಧಮಾಡುವ ಸುಯೋಗವು ನಿನಗೆ ಒದಗಿ ಬಂದಿದೆ. ಯುದ್ಧದಲ್ಲಿ ಅಸುನೀಗುವ ಧರ್ಮನಿಷ್ಠರಾದ ಕ್ಷತ್ರಿಯರನ್ನು ಸ್ವಾಗತಿಸುವ ಸಲುವಾಗಿಯೇ ಸ್ವರ್ಗದ ಬಾಗಿಲು ವಿಶಾಲವಾಗಿ ತೆರೆದುಕೊಂಡಿದೆ. ಅದೃಷ್ಟಶಾಲಿಗಳಾದ ಕ್ಷತ್ರಿಯರಿಗೆ ಮಾತ್ರವೇ ಇಂತಹ ಸುಯೋಗ ಒದಗಿಬರುತ್ತದೆ. ಆದುದರಿಂದ ನೀನೂ ಸಹ ಇಂತಹ ಸದವಕಾಶವನ್ನು ಕಳೆದುಕೊಳ್ಳಬೇಡ.)

**ಓಂ ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।**
**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥೩೩॥**

ಒಂದು ವೇಳೆ ನೀನು ಈ ಧರ್ಮಯುದ್ಧವನ್ನು ಮಾಡದೆಯೇ ಹೋದರೆ ಸ್ವಧರ್ಮಭ್ರಷ್ಟನಾಗುವೆ ; ಕೀರ್ತಿಯನ್ನೂ ಕಳೆದುಕೊಳ್ಳುವೆ ; ಪಾಪಿಷ್ಠನೂ ಆಗುವೆ.

* * *

(ನಾಲ್ಕು ವರ್ಣಾಶ್ರಮಧರ್ಮಗಳವರೂ ತಮ್ಮ-ತಮ್ಮ ಧರ್ಮಾನುಸಾರ ವಾಗಿಯೇ ನಡೆಯಬೇಕೆಂಬ ವಿಷಯವಾಗಿ ಶ್ರೀಕೃಷ್ಣನ ಸ್ಪಷ್ಟನಿರ್ದೇಶವಿದು.

ಅರ್ಜುನನು 'ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ' 'ಭಿಕ್ಷೆಮಾಡುವುದೇ ಶ್ರೇಯಸ್ಕರ' ಎಂದು ಹೇಳಿದುದರಿಂದ ನೀನು ಬ್ರಾಹ್ಮಣನಾಗೆಂದು ಹೇಳಿಬಿಡುವುದಿಲ್ಲ. ನಿನ್ನ ಧರ್ಮ ನಿನಗೆ ಹೆಚ್ಚು ;

ನೀನು ಕ್ಷತ್ರಿಯನು ; ದುಷ್ಟಶಿಕ್ಷಣವನ್ನು ಮಾಡಬೇಕಾದುದು ನಿನ್ನ ಧರ್ಮ. ನೀನದನ್ನು ಮಾಡಲೇಬೇಕು.'–ಎಂದು ಕಡ್ಡಾಯಮಾಡುತ್ತಾನೆ.

ಸ್ವಧರ್ಮಾನುಸಾರವಾಗಿ ಯುದ್ಧಮಾಡದಿದ್ದರೆ ಆಗುವ ಪರಿಣಾಮ ವನ್ನೂ ಬಹುಸ್ಪಷ್ಟವಾಗಿ ಹೇಳುತ್ತಾನೆ. ಹಿತ್ವಾ ಪಾಪಮವಾಪ್ಸ್ಯಸಿ 'ಸ್ವಧರ್ಮ ವನ್ನು ಬಿಟ್ಟರೆ ಪಾಪಭೂಯಿಷ್ಠನಾಗುವೆ.' ಇಲ್ಲಿ ಶ್ರೀಕೃಷ್ಣನು ಕೀರ್ತಿಯ ವಿಷಯವನ್ನೂ ಹೇಳುತ್ತಾನೆ. ಮನುಷ್ಯಮಾತ್ರದವರಿಗೆ ಕೀರ್ತಿಬೇಕು. ಅರ್ಜುನನು ಸಾಕ್ಷಾತ್ ಮಹಾದೇವನನ್ನೇ ಯುದ್ಧದಲ್ಲಿ ಮೆಚ್ಚಿಸಿದ ಅತಿರಥ, ಮಹಾಧೀರಧೌರೇಯ–ಇತ್ಯಾದಿ ಪ್ರಶಸ್ತಿಗಳಿಂದ ಅದ್ಭುತವಾದ ಕೀರ್ತಿಯನ್ನು ಗಳಿಸಿದ್ದನು. ಈಗ ತನ್ನ ಧರ್ಮವನ್ನು ತೊರೆಯುವುದರಿಂದ ಧರ್ಮದ ಫಲ ವಾದ ನಿರತಿಶಯಸುಖವನ್ನು ಕಳೆದುಕೊಳ್ಳುತ್ತಾನೆ. ಇಲ್ಲಿಯವರೆಗೂ ಬಂದಿದ್ದ ಕೀರ್ತಿ ಮತ್ತು ಪ್ರಸಕ್ತಯುದ್ಧದ ವಿಜಯದಿಂದ ದೊರೆಯಬಹುದಾದ ಎಣೆ ಯಿಲ್ಲದ ಕೀರ್ತಿ–ಇವುಗಳನ್ನು ಕಳೆದುಕೊಂಡು ಪಾಪಭಾಜನನಾಗುತ್ತಾನೆ.)

**ಓಂ ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯನ್ತಿ ತೇಽವ್ಯಯಾಮ್ ।**
**ಸಮ್ಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥೩೪॥**

ಅಳಿಸಲಾಗದ ನಿನ್ನ ದುಷ್ಕೀರ್ತಿಯನ್ನು ಪ್ರಾಣಿಮಾತ್ರದವರು ಎಂದೆಂದಿಗೂ ಆಡಿಕೊಳ್ಳುವರು. ಸಂಭಾವಿತನಾದವನಿಗೆ ದುಷ್ಕೀರ್ತಿ ಯೆಂಬುದು ಸಾವಿಗಿಂತ ಹೆಚ್ಚಿನದು.

* * *

(ಗುರುಜನರ ಮತ್ತು ಬಂಧುಜನರ ಮೇಲಿನ ಅನುಕಂಪದಿಂದ ನೀನು ಯುದ್ಧದಿಂದ ವಿರತನಾದೆಯೆಂದು ಯಾರೂ ಭಾವಿಸುವುದಿಲ್ಲ. ನೀನು ಯಾರ ವಿಷಯವಾಗಿ ಅನುಕಂಪ ತೋರುತ್ತಿರುವೆಯೋ ಅವರೂ ನಿನ್ನ ವಿಷಯದಲ್ಲಿ ಜುಗುಪ್ಸೆ ಹೊಂದುವರು. ಅನುಕಂಪೆ, ಕರುಣೆ, ಎಲ್ಲಕ್ಕೂ ಒಂದು ಕಾಲವಿದೆ. ದೇಶವಿದೆ. 'ದಂಡಿನಲ್ಲಿ ಸೋದರಮಾವನೇ?' ಎಂಬ ಗಾದೆಯೂ ಇದೆ. ಯುದ್ಧಕ್ಕೆ ಬಂದು ನಿಂತು ಗುರುಜನರ ಮೇಲೆ ಅನುಕಂಪೆಯನ್ನು ಹೊಂದು ವುದು ಅಸಂಗತವಾಗುತ್ತದೆ–ಎಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳುತ್ತಾನೆ. ಶ್ರೀಕೃಷ್ಣನು ಮೊದಲನೆಯ ಮಾತಿನಲ್ಲಿಯೇ **'ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್'** (೨-೨) ಎನ್ನುತ್ತಾನೆ. ಅರ್ಜುನನು ಪ್ರತಿಪಾದಿಸಿದ ಅನುಕಂಪೆ ಅಥವಾ ಕರುಣೆಯನ್ನು ಕಶ್ಮಲವೆನ್ನುತ್ತಾನೆ.

ಸತ್ಕೀರ್ತಿ-ದುಷ್ಕೀರ್ತಿಗಳ ಪರಿವೆ ಸಾಧಾರಣಮನುಷ್ಯರಿಗೂ ಇರುವುದಿಲ್ಲ, ಜ್ಞಾನಿಗಳಿಗೂ ಇರುವುದಿಲ್ಲ. ಅರ್ಜುನನು ಸಾಮಾನ್ಯಮನುಷ್ಯನಲ್ಲ, ಧೀರ. ಇದುವರೆಗೆ ಸೋಲೆಂಬುದನ್ನೇ ಕಂಡಿದ್ದಿಲ್ಲ. ಅರ್ಜುನನಿದ್ದೆಡೆಯಲ್ಲಿ ಅಪಜಯಕ್ಕೆ ಅವಕಾಶವೇ ಇಲ್ಲ. ವಿಜಯ–ಎಂಬುದು ಅವನ ಅನ್ವರ್ಥವಾದ ಹೆಸರೂ ಆಗಿದೆ. ಇಂತಹ ಅಮೋಘಕೀರ್ತಿಯನ್ನು ಗಳಿಸಿದ್ದ ಪಾರ್ಥನು ಭಾರತಮಹಾಯುದ್ಧವು ಪ್ರಾರಂಭವಾಗಬೇಕೆನ್ನುವಾಗ ಯಾವುದೇ ಕಾರಣದಿಂದ ಹಿಂದಿರುಗಿದರೂ ಸಹ ಎಲ್ಲರೂ ಅವನನ್ನು 'ಹೇಡಿ' ಎನ್ನುತ್ತಾರೆ. ಕೇವಲ ಮನುಷ್ಯರು ಮಾತ್ರವಲ್ಲ. ಪ್ರಾಣಿಗಳೂ ಸಹ ಅವನನ್ನು ಹೇಡಿ ಎನ್ನುತ್ತವೆ. ಈ ಅಪಯಶಸ್ಸನ್ನು ಕಳೆದುಕೊಳ್ಳುವ ಸಾಧ್ಯತೆಯೇ ಇಲ್ಲ. ಒಡೆದುಹೋದ ಮಡಕೆಯನ್ನು ಬೆಸೆಯಲು ಸಾಧ್ಯವೇ? ಸಂಭಾವಿತನಾದವನಿಗೆ ದುಷ್ಕೀರ್ತಿಯು ಮರಣಕ್ಕಿಂತಲೂ ಹೆಚ್ಚಿನದು. ದುಷ್ಕೀರ್ತಿಯನ್ನು ಸಹಿಸಲಾಗದೇ ದೇಹತ್ಯಾಗಮಾಡಿಕೊಂಡಿರುವ ಸಂಭಾವಿತರ ನಿದರ್ಶನಗಳು ಅನೇಕವಿವೆ. ಇದು ರಾಜ್ಯಲೋಭದ ವಿಷಯವಲ್ಲ; ಧರ್ಮಯುದ್ಧದ ವಿಷಯ. ಜಯಾಪಜಯಗಳ ವಿಷಯವಾಗಿ ಸಂಶಯವಿದ್ದರೂ ಸಹ ಅರ್ಜುನನು ಈ ಸಮಯದಲ್ಲಿ ಯುದ್ಧಮಾಡಲೇಬೇಕು. ಇಲ್ಲದಿದ್ದರೆ ದುಷ್ಕೀರ್ತಿಗೆ ಭಾಗಿಯಾಗಬೇಕಾಗುತ್ತದೆ. ಬದುಕಿಯೂ ಸತ್ತವನಂತಿರಬೇಕಾಗುತ್ತದೆ. '**ಜೀವನ್ಭದ್ರಾಣಿ ಪಶ್ಯತಿ**–ಜೀವಿಸಿದ್ದರೆ ಎಂದಾದರೂ ಒಳ್ಳೆಯ ದಿನಗಳನ್ನು ಕಾಣಬಹುದು'–ಎಂಬುದು ಈ ಸಂದರ್ಭದಲ್ಲಿ ಪಾರ್ಥನಿಗೆ ಅನ್ವಯಿಸುವುದಿಲ್ಲ. ಏಕೆಂದರೆ : ತನ್ನ ಪ್ರಾಣಹೋಗುತ್ತದೆಂದು ಪಾರ್ಥನೀಗ ಚಡಪಡಿಸುತ್ತಿಲ್ಲ. ಬೇರೆಯವರನ್ನು ಕೊಲ್ಲಬೇಕಲ್ಲಾ–ಎಂದು ಚಡಪಡಿಸುತ್ತಿದ್ದಾನೆ. ಯುದ್ಧದಿಂದ ಹಿಂದಿರುಗಿದೊಡನೆಯೇ ಅಳಿಸಲಾಗದ ದುಷ್ಕೀರ್ತಿಯು ಅವನಿಗೆ ಅಂಟಿಕೊಳ್ಳುವುದರಿಂದ ಮುಂದೆ ಯಾವ ಕಾಲಕ್ಕೂ ಅವನು ಮಂಗಳವನ್ನು ನಿರೀಕ್ಷಿಸುವ ಸಾಧ್ಯತೆಯೇ ಇಲ್ಲ. ಅಕೀರ್ತಿಯು ನರಕಕ್ಕೆ ಕಾರಣ.

**ಅಕೀರ್ತಿರ್ಯಸ್ಯ ಗೀಯೇತ ಲೋಕೇ ಭೂತಸ್ಯ ಕಸ್ಯಚಿತ್ ।**
**ಪತತ್ಯೇವಾಧಮಾಂಲ್ಲೋಕಾನ್ಯಾವಚ್ಛಬ್ದಸ್ಯ ಕೀರ್ತ್ಯತೇ ॥**

ಶ್ರೀಮದ್ವಾಲ್ಮೀಕಿರಾಮಾಯಣ–ಉತ್ತರಕಾಂಡ.

ಯಾವನಾದರೂ ಒಬ್ಬನ ವಿಷಯದಲ್ಲಿ ಅಕೀರ್ತಿಯು ಲೋಕದಲ್ಲಿ

ಹರಡಿದರೆ ಆ ಅಕೀರ್ತಿಯು ಪ್ರಚಲಿತವಿರುವವರೆಗೂ ಅವನು ಅಧೋಗತಿ ಯನ್ನು ಹೊಂದುತ್ತಾನೆ.)

ಮುಂದಿನ ಶ್ಲೋಕದಲ್ಲಿ ಶ್ರೀಕೃಷ್ಣನು ಈ ವಿಷಯವನ್ನೇ ಮತ್ತೂ ಸ್ಪಷ್ಟವಾಗಿ ಹೇಳುತ್ತಾನೆ :

**ಓಂ ಭಯಾದ್ರಣಾದುಪರತಂ ಮಂಸ್ಯನ್ತೇ ತ್ವಾಂ ಮಹಾರಥಾಃ ।**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಮ್ ॥**

ಮಹಾರಥರು ನಿನ್ನನ್ನು ಭೀತಿಯಿಂದ ಯುದ್ಧವನ್ನು ಬಿಟ್ಟು ಹಿಂದೆಗೆದ ನೆಂದು ಭಾವಿಸುವರು. ಯಾವ ಶೂರರಿಗೆ ನೀನು ಬಹುಮಾನ್ಯನಾಗಿದ್ದೆಯೋ ಅವರ ದೃಷ್ಟಿಯಲ್ಲಿ ಇಂದು ನೀನು ಅಲ್ಪನಾಗುವೆ.

* * *

('ಗುರುಜನರನ್ನು ಮತ್ತು ಬಂಧುಜನರನ್ನು ಕೊಲ್ಲಬೇಕಾಗುವು ದಲ್ಲಾ!'–ಎಂಬ ಸಂಕಟದಿಂದ ನೀನು ಯುದ್ಧದಿಂದ ಹಿಂದಿರುಗಿದರೂ ಸಹ ದುರ್ಯೋಧನನೇ ಮುಂತಾದ ಮಹಾರಥರು 'ಕರ್ಣನೇ ಮೊದಲಾದವರಿಗೆ ಹೆದರಿ ಅರ್ಜುನನು ಯುದ್ಧದಿಂದ ವಿಮುಖನಾದನು'–ಎಂದೇ ಹೇಳುತ್ತಾರೆ. ಈ ನಿನ್ನ ನಿಜವಾದ ಆಶಯವನ್ನು ಅವರು ಗ್ರಹಿಸುವುದಿಲ್ಲ. 'ಶೂರನಾದ ವೈರಿ'–ಎಂದು ಅವರ ಬಹುಮಾನಕ್ಕೆ ಪಾತ್ರನಾಗಿದ್ದ ನೀನು ಅವರ ದೃಷ್ಟಿಯಲ್ಲಿ ತುಂಬ ಹಗುರನಾಗುವೆ. ಯುದ್ಧಧರ್ಮವು ಎಲ್ಲರಿಗೂ ಗೊತ್ತಿದೆ. ದಂಡಿನಲ್ಲಿ ಆಪ್ತಬಂಧುವೇ ಎದುರಾಗಿ ಬಂದರೂ ಸಹ ವಧಾರ್ಹನೆಂಬುದನ್ನು ಎಲ್ಲ ಕ್ಷತ್ರಿಯರೂ ಮನಗಂಡಿದ್ದಾರೆ. ಆದುದರಿಂದ ನಿನಗೆ 'ಸರಿ' ಎನಿಸಿರುವ ಕೃಪಣತೆಯ ಮಾತನ್ನು ಯಾರೂ ಒಪ್ಪುವುದಿಲ್ಲ. ಶತ್ರುಪಕ್ಷದವರೂ ಸಹ ನಿನ್ನ ಪರಾಕ್ರಮವನ್ನು ಮಾನ್ಯಮಾಡಿದ್ದರು. 'ನೀನು ಮಹಾಪರಾಕ್ರಮಿ ; ಅಜಯ್ಯ'–ಎಂಬುದನ್ನು ಒಪ್ಪಿಕೊಂಡಿದ್ದರು. ಅವರ ದೃಷ್ಟಿಯಲ್ಲಿ ನೀನಿಂದು ಅಲ್ಪನಾಗುವೆ. ಅವರು ಒಡನೆಯೇ ನಿನ್ನನ್ನು 'ಹೇಡಿ' ಎಂದು ಧಿಕ್ಕರಿಸುವರು.)

**ಓಂ ಅವಾಚ್ಯವಾದಾಂಶ್ಚ ಬಹೂನ್ವದಿಷ್ಯನ್ತಿ ತವಾಹಿತಾಃ ।**
**ನಿನ್ದನ್ತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ॥೩೬॥**

ನಿನಗೆ ಆಗದವರು ನಿನ್ನ ಸಾಮರ್ಥ್ಯವನ್ನು ನಿಂದಿಸುತ್ತಾ ಆಡಬಾರದ ಅನೇಕಮಾತುಗಳನ್ನಾಡುತ್ತಾರೆ. ಅದಕ್ಕಿಂತಲೂ ಹೆಚ್ಚು ದುಃಖಕರವಾದುದು ಯಾವುದಿದೆ?

* * *

(ನಿನಗೆ ಆಗದವರು ದುರ್ಯೋಧನಾದಿಗಳು. ಅವರು ಆಡಬಾರದುದನ್ನೆಲ್ಲಾ ಆಡುತ್ತಾರೆ. 'ಈ ಅರ್ಜುನನು ಬೃಹನ್ನಳೆಯಾಗಿರಲಿಲ್ಲವೇ? ಆ ನಪುಂಸಕತ್ವವೇ ಮುಂದುವರಿದುಬಿಟ್ಟಿದೆ. ಅಂಜುಬುರುಕನಾಗಿಬಿಟ್ಟಿದ್ದಾನೆ. ನಮ್ಮ ಮುಂದೆ ನಿಲ್ಲಲು ಅವನಿಗೆಲ್ಲಿಯ ಎದೆಗಾರಿಕೆ?'–ಇವೇ ಮುಂತಾಗಿ ನಿನ್ನನ್ನು ಹೀಯಾಳಿಸುವರು. ಪ್ರತ್ಯಕ್ಷವಾಗಿಯೇ ಮೂದಲಿಸುವರು. ನಿವಾತ ಕವಚರೊಡನೆ ಯುದ್ಧಮಾಡಿದೆಯೆಂಬುದನ್ನು ಅಲ್ಲಗಳೆಯುವರು. 'ಧರ್ಮ ಯುದ್ಧದಲ್ಲಿ ವೀರಾವೇಶದಿಂದ ಯುದ್ಧಮಾಡದೇ ಬೆನ್ನುತೋರಿಸಿಕೊಂಡು ಹಿಂದಿರುಗಿದ ಅರ್ಜುನನ ಅಸಾಮರ್ಥ್ಯಕ್ಕೆ ಧಿಕ್ಕಾರ!'–ಎಂದು ಕೂಗುವರು. ಈ ನಿಂದನೆಗಳನ್ನು ಕೇಳುವುದಕ್ಕಿಂತಲೂ ಅಧಿಕತರವಾದ ದುಃಖವು ಯಾವುದಿದೆ? ಶತ್ರುಗಳಾಡುವ ಈ ವಿಧವಾದ ನಿಂದೆಯ ಮಾತುಗಳನ್ನು ಪ್ರತ್ಯಕ್ಷವಾಗಿ ಕೇಳುವಾಗ ನೀನು ಬೆಂಕಿಯಲ್ಲಿ ಬಿದ್ದ ಹುಳುವಿನಂತೆ ಚಡಪಡಿಸುವೆ. ಆದುದರಿಂದ ಯಾವುದೇ ಕಾರಣದಿಂದಲೂ ಯುದ್ಧಮಾಡುವುದಿಲ್ಲವೆಂಬ ನಿರ್ಧಾರವನ್ನು ಕೈಗೊಳ್ಳಬೇಡ.)

**ಓಂ ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್ ।**
**ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥೩೭॥**

ಯುದ್ಧಮಾಡುತ್ತಾ ಸತ್ತುಹೋದರೆ ವೀರಸ್ವರ್ಗವನ್ನು ಪಡೆಯುವೆ. ಜಯಶಾಲಿಯಾದರೆ ರಾಜ್ಯವನ್ನು ಉಪಭುಂಜಿಸುವೆ. ಯುದ್ಧಮಾಡಲು ಸಂಕಲ್ಪಿಸಿ ಈ ಕೂಡಲೇ ಯುದ್ಧಕ್ಕೆ ಸಿದ್ಧನಾಗು, ಅರ್ಜುನ!

* * *

(ಆರನೆಯ ಶ್ಲೋಕದಲ್ಲಿ ಅರ್ಜುನನು (ನ ಚೈತದ್ವಿದ್ಮಃ) 'ಭಿಕ್ಷೆಬೇಡುವುದು ; ಯುದ್ಧಮಾಡುವುದು–ಈ ಎರಡರಲ್ಲಿ ಯಾವುದು ಶ್ರೇಷ್ಠವೆಂಬುದನ್ನು ನಾವು ತಿಳಿದವರಾಗಿಲ್ಲ. ನಾವೇ ಗೆಲ್ಲುವೆವೋ ; ಅವರೇ ನಮ್ಮನ್ನು ಗೆಲ್ಲುತ್ತಾರೋ ಎಂಬುದೂ ನನಗೆ ಗೊತ್ತಿಲ್ಲ' ಎನ್ನುತ್ತಾನೆ. ಹೇಗೇ ಆದರೂ

ಸತ್ತರೆ ಸ್ವರ್ಗ ; ಬದುಕಿದ್ದು ವಿಜಯಿಗಳಾದರೆ ರಾಜ್ಯೋಪಭೋಗಗಳು ಸಿಕ್ಕು ತ್ತವೆ–ಎನ್ನುತ್ತಾನೆ ಶ್ರೀಕೃಷ್ಣ. ಆದರೆ ಅರ್ಜುನನು ಎಂಟನೆಯ ಶ್ಲೋಕದಲ್ಲಿ **ರಾಜ್ಯಂ ಸುರಾಣಾಮಪಿ ಚಾಧಿಪತ್ಯಂ**....ದೇವಲೋಕದ ಆಧಿಪತ್ಯವನ್ನು ಪಡೆದುಕೊಂಡರೂ ಮನಸ್ಸಿನ ಶೋಕವು ಹೋಗಲಾರದೆಂದು ಹೇಳುವ ನಲ್ಲಾ? ಆ ಸಮಯದ ಮನಃಕ್ಲೇಶದಲ್ಲಿ 'ನನಗೆ ದೇವಲೋಕದ ಒಡೆತನವೂ ರುಚಿಸದು' ಎಂದು ಬೇಸರಿಕೆಯಿಂದ ಹೇಳುವನೇ ಹೊರತು ತನಗೆ ಯುದ್ಧ ಮಾಡಿದರೆ ದೇವಲೋಕದ ಒಡೆತನವು ಸಿಕ್ಕುವುದೆಂಬ ಅಭಿಪ್ರಾಯವಲ್ಲ.

ಐದನೆಯ ಶ್ಲೋಕದಲ್ಲಿ '**ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ**–ಲೋಕದಲ್ಲಿ ಭಿಕ್ಷಾನ್ನದಿಂದಲಾದರೂ ಜೀವಿಸುವುದು ಶ್ರೇಯ ಸ್ಕರ'–ಎಂದು ಗುರುಜನರನ್ನು ಕೊಲ್ಲಲಾರದ ಸಂಕಟದಿಂದ ಅರ್ಜುನನು ಹೇಳಿದ್ದಾನೆ. ತನಗೆ ರಾಜ್ಯಭೋಗಾದಿಗಳು ಬೇಡವೆಂದಲ್ಲ ಅಥವಾ ತಾನು ಸಂನ್ಯಾಸಿಯಾಗುವೆನೆಂದೂ ಅಲ್ಲ. ಅರ್ಜುನನು ರಾಜ್ಯವನ್ನೂ ರಾಜ್ಯಭೋಗ ವನ್ನೂ ಬೇಡವೆಂದಿದ್ದಕ್ಕೆ ಕಾರಣ ಗುರುಜನರ ಮೇಲಿನ ಅನುಕಂಪೆ ; ಕರುಣೆ. ಶ್ರೀಕೃಷ್ಣನ ದೃಷ್ಟಿಯಲ್ಲಿ ಇದು ಅಸ್ಥಾನಸ್ನೇಹವಾದ್ದರಿಂದ ಕಶ್ಮಲ. ಶ್ರೀಕೃಷ್ಣನು ಅರ್ಜುನನ ಮನಸ್ಸಿನ ಕಶ್ಮಲವನ್ನು ತೊಳೆಯಲು ಯತ್ನಿಸಿದ್ದಾನೆ. ನಾನಾ ಪ್ರಕಾರವಾದ ವಾದವನ್ನು ಮುಂದಿಟ್ಟು ಯಾವುದೇ ದೃಷ್ಟಿಯಿಂದಲೂ ಸಹ ಯುದ್ಧಮಾಡುವುದು ಅವನ ಕರ್ತವ್ಯವೆಂದು ಪ್ರತಿಪಾದಿಸಿದ್ದಾನೆ. 'ಯುದ್ಧ ಮಾಡಲು ದೃಢಸಂಕಲ್ಪಮಾಡಿ ಎದ್ದೇಳು'–ಎಂದು ಹೇಳಿ ಶ್ರೀಕೃಷ್ಣನು ತನ್ನ ಮಾತೆಂಬ ಚಾವಟಿಯಿಂದ ಅರ್ಜುನನನ್ನು ಹೊಡೆದೆಬ್ಬಿಸಲು ಪ್ರಯತ್ನಿ ಸುತ್ತಾನೆ.

ಶ್ರೀರಾಮಾನುಜರ ಅಭಿಪ್ರಾಯದಂತೆ ಸ್ವರ್ಗ ಎಂದರೆ ಇಂದ್ರಲೋಕ ವಲ್ಲ. ಪರಮಪದ. 'ಧರ್ಮಯುದ್ಧದಲ್ಲಿ ಶತ್ರುವಿಗೆ ಅಭಿಮುಖವಾಗಿ ಯುದ್ಧ ಮಾಡಿ ಪ್ರಾಣತೊರೆದ ಕರ್ಮಯೋಗಿಯು ಪರಿವ್ರಾಜಕಯೋಗಿಯಂತೆ ಉತ್ತಮಲೋಕಗಳನ್ನು ಹೊಂದುತ್ತಾನೆ'–ಎಂದು ಶಾಸ್ತ್ರಗಳು ಹೇಳುತ್ತವೆ.

**ದ್ವಾವಿಮೌ ಪುರುಷೌ ಲೋಕೇ ಸೂರ್ಯಮಣ್ಡಲಭೇದಿನೌ ।**
**ಪರಿವ್ರಾಡ್ಯೋಗಯುಕ್ತಶ್ಚ ರಣೇ ಚಾಭಿಮುಖೋ ಹತಃ ॥)**

ಶ್ರೀಕೃಷ್ಣನು ಮುಂದುವರಿದು ಹೇಳುತ್ತಾನೆ :

**ಓಂ ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥**

ಸುಖ-ದುಃಖ, ಲಾಭ-ನಷ್ಟ, ಜಯ-ಅಪಜಯ ಇವುಗಳನ್ನು ಸಮನಾಗಿ ಭಾವಿಸಿ ಯುದ್ಧಕ್ಕೆ ಸಿದ್ಧನಾಗು. ಆಗ ನೀನು ಈ ವಿಧವಾದ ಪಾಪವನ್ನು (ಕಶ್ಮಲವನ್ನು ) ಹೊಂದುವುದಿಲ್ಲ.

('ಧರ್ಮ್ಯವಾದ ಯುದ್ಧವನ್ನು ಆಚರಿಸುವಾಗ ಶಸ್ತ್ರಪಾತ ಮುಂತಾದುವುಗಳಿಂದ ದುಃಖವುಂಟಾಗಬಹುದು. ಜಯಾಪಜಯಗಳಿಂದ ಸುಖ-ದುಃಖಗಳುಂಟಾಗಬಹುದು. ಆದರೆ ಅವುಗಳಿಂದ ವಿಕಾರಗೊಳ್ಳದೇ, ರಾಗ-ದ್ವೇಷಗಳನ್ನು ಇಟ್ಟುಕೊಳ್ಳದೇ ಅವುಗಳು ಅನಿವಾರ್ಯವೆಂದು ಭಾವಿಸಿ ಸಾಮ್ಯಬುದ್ಧಿಯಿಂದ ಯುದ್ಧವನ್ನು ಮಾಡಿದರೆ ಪಾಪವು ಉಂಟಾಗುವುದಿಲ್ಲ. ದುಃಖರೂಪವಾದ ಸಂಸಾರವು ಒದಗುವುದಿಲ್ಲ'–ಎಂದು ಕರ್ಮಯೋಗಿ ಯಾದ ಕ್ಷತ್ರಿಯನು ಮಾಡಲೇಬೇಕಾಗಿರುವ ಯುದ್ಧಾನುಷ್ಠಾನಕ್ರಮವನ್ನು ಇಲ್ಲಿ ಭಗವಂತನು ಬೋಧಿಸಿದ್ದಾನೆ.

ಸುಖ-ದುಃಖಗಳು ಮನುಷ್ಯನಿಗೆ ಹಗಲು-ರಾತ್ರಿಗಳಂತೆ ಬಂದು ಹೋಗುತ್ತಿರುತ್ತವೆ. ಸುಖಬಂದಾಗ ಹಿಗ್ಗಬಾರದು ; ದುಃಖಬಂದಾಗ ಕುಗ್ಗಬಾರದು–ಇದು ಸಾಮಾನ್ಯವಾಗಿ ಎಲ್ಲರ ಉಪದೇಶವೂ ಆಗಿರುತ್ತದೆ. ಆದರೆ ಇದು ಆಚರಣೆಗೆ ಅಷ್ಟು ಸುಲಭವಲ್ಲ. ಬಹುದಿನಗಳ ಸಾಧನೆಬೇಕು. ವ್ಯಾಪಾರದಲ್ಲಿ ಲಾಭ-ನಷ್ಟಗಳೆರಡೂ ಆಗುತ್ತಿರುತ್ತವೆ. ಲಾಭಬಂದಾಗ ಹಿಗ್ಗ ಬಾರದು ; ನಷ್ಟವಾದಾಗ ಕುಗ್ಗಬಾರದು. ಯುದ್ಧದಲ್ಲಾಗಲೀ–ಪಂದ್ಯ ದಲ್ಲಾಗಲೀ ಜಯಾಪಜಯಗಳು ಅನಿಶ್ಚಿತ. ವಿಜಯದಂತೆಯೇ ಅಪಜಯ ವನ್ನೂ ಸ್ವಾಗತಿಸಬೇಕು. ಗೆದ್ದಾಗ ಅಹಂಕಾರಪಡಬಾರದು. ಸೋತಾಗ ಕಣ್ಣೀರಿಡಬಾರದು. ಈ ಸಮತ್ವವನ್ನು ಪ್ರತಿಯೊಬ್ಬರೂ ಪ್ರತಿಯೊಬ್ಬರ ಜೀವನದಲ್ಲಿಯೂ ಸಾಧಿಸಬೇಕು. ಸಮತ್ವವಿಲ್ಲದವನಿಗೂ ಸುಖ-ದುಃಖಗಳು, ಲಾಭಾಲಾಭಗಳು, ಜಯಾಪಜಯಗಳೂ ಇದ್ದೇ ಇರುತ್ತವೆ. ವ್ಯತ್ಯಾಸ ವೇನೆಂದರೆ ಸಮತ್ವವಿರುವವನ ಮನಸ್ಸಿನಲ್ಲಿ ಕಶ್ಮಲಕ್ಕೆ ಎಡೆಯಿಲ್ಲ. ಸಮತ್ವ ವಿಲ್ಲದವನು ದುಃಖ-ಅಲಾಭ-ಅಪಜಯಗಳನ್ನು ಕುರಿತು ಕೊರಗುತ್ತಾನೆ.

ಆದುದರಿಂದ 'ಸಮತ್ವವನ್ನು ಅಭ್ಯಸಿಸು. ಈ ಕಶ್ಮಲವು ಹೋಗುತ್ತದೆ. ಅನಂತರ ಯುದ್ಧಮಾಡು' ಎಂದು ಶ್ರೀಕೃಷ್ಣನು ಹೇಳುತ್ತಾನೆ.)

**ಓಂ ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು ।**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬನ್ಧಂ ಪ್ರಹಾಸ್ಯಸಿ ॥**

ಅರ್ಜುನ! ಈಗ ನಾನು ಹೇಳಿದುದು ಸಾಂಖ್ಯ (ಪರಮಾರ್ಥವಿವೇಕ) ವಿಷಯವಾದ ಬುದ್ಧಿಯು. ಈಗ ಅದಕ್ಕೆ ಉಪಾಯವಾದ ಕರ್ಮಯೋಗದ ತಿಳಿವಳಿಕೆಯನ್ನೂ ಕೊಡುವೆನು, ಕೇಳು. ಈ ಯೋಗವಿಷಯವಾದ ಜ್ಞಾನ ದಿಂದ ನೀನು ಕರ್ಮಮಾಡಿದರೆ ಸಂಸಾರಬಂಧನವನ್ನು ತೊರೆಯುವೆ.

* * *

(ಸಾಂಖ್ಯಶಬ್ದಕ್ಕೆ ಎರಡು ಅರ್ಥಗಳಿವೆ. ಮೊದಲನೆಯದು : ಕಪಿಲಾ ಚಾರ್ಯರಿಂದ ಹೇಳಲ್ಪಟ್ಟಿರುವ ಒಂದು ದರ್ಶನ. ಎರಡನೆಯದು : ಈ ವಿಶಿಷ್ಟವಾದ ಅರ್ಥವಲ್ಲದೇ ಎಲ್ಲ ಬಗೆಯ ತತ್ತ್ವಜ್ಞಾನಕ್ಕೂ 'ಸಾಂಖ್ಯ' ಎಂಬ ಶಬ್ದವನ್ನು ಸಾಮಾನ್ಯವಾಗಿ ಪ್ರಯೋಗಿಸುವ ಬಳಕೆಯಿದ್ದು ಅದರಲ್ಲಿ ವೇದಾಂತಶಾಸ್ತ್ರವೂ ಅಡಕವಾಗಿದೆ. ಸಾಂಖ್ಯನಿಷ್ಠೆ ಮತ್ತು ಸಾಂಖ್ಯಯೋಗ– ಈ ಶಬ್ದಗಳಲ್ಲಿ ಸಾಂಖ್ಯಶಬ್ದಕ್ಕೆ ಸಾಮಾನ್ಯವಾದ ಈ ಅರ್ಥವೇ ವಿವಕ್ಷಿತ ವಾಗಿದೆ. ಮುಂದೆ ಈ ನಿಷ್ಠೆಯುಳ್ಳ ಜ್ಞಾನಿಗೂ ಕೂಡ ಸಾಂಖ್ಯನೆಂದು ಗೀತೆ ಯಲ್ಲಿ ಹೆಸರುಕೊಟ್ಟಿದೆ. ಇಲ್ಲಿ ಸಾಂಖ್ಯನೆಂದರೆ ಕೇವಲ ಕಪಿಲಾಸಾಂಖ್ಯ ಮಾರ್ಗದವನೆಂಬ ಅರ್ಥವಲ್ಲ. ಸಾಂಖ್ಯ ಎಂಬ ಶಬ್ದವು ಸಂಖ್ಯಾ ಎಂಬ ಧಾತುವಿನಿಂದ ಹುಟ್ಟಿರುವ ಕಾರಣ ಅದರ ಮೂಲಾರ್ಥವು 'ಎಣಿಸುವವನು' ಎಂದಾಗುತ್ತದೆ. ಕಪಿಲಶಾಸ್ತ್ರದೊಳಗಿನ ಮೂಲತತ್ತ್ವಗಳು ಎಣಿಕೆಯಲ್ಲಿ ಇಪ್ಪತ್ತೈದೇ ಇರುವ ಕಾರಣದಿಂದ ಸಾಂಖ್ಯರು ಎಂದರೆ 'ಎಣಿಸುವವರು' ಎಂಬ ವಿಶಿಷ್ಟವಾದ ಹೆಸರು ಬಂದಿತು. ತತ್ತ್ವಗಳನ್ನು ಯಥಾರ್ಥವಾಗಿ ಪರಿಗಣನೆಮಾಡುವ ವೇದಾಂತಶಾಸ್ತ್ರವನ್ನು ಸಾಂಖ್ಯವೆಂದು ಕರೆಯಬಹುದು. ಈ ಗೀತಾಶ್ಲೋಕದಲ್ಲಿ ಸಾಂಖ್ಯವೆಂದರೆ ಪಾರಿಭಾಷಿಕವಾದ ಸಾಂಖ್ಯದರ್ಶನ ವಲ್ಲ. ಆತ್ಮತತ್ತ್ವಜ್ಞಾನವೆಂದೇ ಎಲ್ಲ ಆಚಾರ್ಯರೂ ಅಭಿಪ್ರಾಯಪಡುತ್ತಾರೆ. ಶ್ರೀಶಂಕರರು ಸಾಂಖ್ಯಶಬ್ದಕ್ಕೆ 'ಪರಮಾರ್ಥವಸ್ತುವಿವೇಕಃ' ಎನ್ನುತ್ತಾರೆ.

'ಸಂಖ್ಯಾ = ಬುದ್ಧಿಃ, ಬುದ್ಧ್ಯಾ ಅವಧಾರಣೀಯಂ ಆತ್ಮತತ್ತ್ವಂ = ಸಾಂಖ್ಯಂ' ಎಂದು ಶ್ರೀರಾಮಾನುಜರು ಹೇಳಿದ್ದಾರೆ.

ಸಾಂಖ್ಯ ಎಂದರೆ ಜ್ಞಾನ ಎಂದು ಹೇಳಿ ಅದಕ್ಕೆ ಪೋಷಕವಾದ **'ಶುದ್ಧಾತ್ಮತತ್ತ್ವವಿಜ್ಞಾನಂ ಸಾಂಖ್ಯಮಿತ್ಯಭಿಧೀಯತೇ ।'** ಎಂಬ ಪ್ರಮಾಣ ವಾಕ್ಯವನ್ನು ಶ್ರೀಮಧ್ವಾಚಾರ್ಯರು ಉದ್ಧರಿಸಿದ್ದಾರೆ.)

ಇಲ್ಲಿಯವರೆಗೂ ಉಪದೇಶಿಸಿದ ಮತ್ತು ಮುಂದೆ ಉಪದೇಶಿಸಲ್ಪಡುವ ಈ ಜ್ಞಾನದಿಂದ ಕೂಡಿದರೆ ನೀನು ಸಂಸಾರಬಂಧನವನ್ನು ಕಳೆದುಕೊಂಡು ನೆಮ್ಮದಿಯನ್ನು ಪಡೆಯುವೆ-ಎಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳುತ್ತಾನೆ :

**ಓಂ ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥**

ಇಲ್ಲಿ (ಈ ಕರ್ಮಯೋಗದಲ್ಲಿ) ಪ್ರಾರಂಭಿಸಿದ ಪ್ರಯತ್ನವು ವ್ಯರ್ಥ ವಾಗುವುದಿಲ್ಲ ; ನಡವಳಿಕೆಯ ನ್ಯೂನತೆಯಿಂದಾಗಿ ದೋಷವುಂಟಾಗುವು ದಿಲ್ಲ. ಈ ಧರ್ಮವನ್ನು ಸ್ವಲ್ಪವೇ ಅನುಷ್ಠಾನಮಾಡಿದರೂ ಅದು ಮಹಾ ಭಯದಿಂದ ಪಾರುಮಾಡುವುದು.

* * *

(ಇಲ್ಲಿ ಭಗವಂತನು ಕರ್ಮಯೋಗದ ವಿಶಿಷ್ಟತೆಯನ್ನು ಹೇಳುತ್ತಾನೆ :

ಈ ಕರ್ಮಯೋಗದಲ್ಲಿ ಪ್ರಾರಂಭಮಾಡಿದ್ದಕ್ಕೆ ನಾಶವಿಲ್ಲ. ಹೊಲದಲ್ಲಿ ಬೀಜಹಾಕಿ ಮಳೆಬಾರದಿದ್ದರೆ ಬೀಜವು ಮೊಳಕೆಯಾಗದಿರಬಹುದು. ಈ ಕರ್ಮಯೋಗವಿಷಯದ ಪ್ರಾರಂಭದ ಫಲವು ಹಾಗಲ್ಲ. ಅದು ಸಂಶಯ ಯುಕ್ತವಾದುದಲ್ಲ. ಪ್ರಾರಂಭವಾದುದು ಸಮಾಪ್ತವಾಗದಿದ್ದರೂ ನಿಷ್ಫಲ ವಾಗುವುದಿಲ್ಲ. ಚಿಕಿತ್ಸೆ ಮುಂತಾದುವುಗಳಲ್ಲಿ ಹೆಚ್ಚು-ಕಡಿಮೆಯಾದರೆ ಪ್ರತ್ಯ ವಾಯ (ವಿಪರೀತಫಲ) ಉಂಟಾಗುತ್ತದೆ. ಆದರೆ ಈ ಕರ್ಮಯೋಗದಲ್ಲಿ ಆ ದೋಷವಿಲ್ಲ. ಈ ಯೋಗಧರ್ಮವನ್ನು ಸ್ವಲ್ಪವೇ ಅನುಷ್ಠಾನಮಾಡಿದರೂ ಅದು ಜನ್ಮ-ಮರಣಾದಿರೂಪವಾದ ಸಂಸಾರಭಯದಿಂದ ಸಂರಕ್ಷಿಸುತ್ತದೆ. ಉಳಿದ ಲೌಕಿಕ ಅಥವಾ ವೈದಿಕಕರ್ಮಗಳು ವಿಚ್ಛಿನ್ನವಾದರೆ ಫಲವನ್ನು ಕೊಡುವುದಿಲ್ಲ. ವಿಪರೀತಫಲವನ್ನು ಕೊಡುತ್ತವೆ. **ಅನ್ಯಾನಿ ಹಿ ಲೌಕಿಕಾನಿ ವೈದಿಕಾನಿ ಚ ಸಾಧನಾನಿ ವಿಚ್ಛಿನ್ನಾನಿ ನ ಫಲಾಯ ಭವನ್ತಿ ಪ್ರತ್ಯವಾಯಾಯ ಭವನ್ತಿ.**

ಶ್ರೀಮದ್ವಾಲ್ಮೀಕಿರಾಮಾಯಣದಲ್ಲಿ ದಶರಥನು ಕಾಮ್ಯಕರ್ಮವಾದ ಪುತ್ರಕಾಮೇಷ್ಟಿಯ ವಿಷಯವಾಗಿ ಹೀಗೆ ಹೇಳುತ್ತಾನೆ :

**ಛಿದ್ರಂ ಹಿ ಮೃಗಯನ್ತೇಽತ್ರ ವಿದ್ವಾಂಸೋ ಬ್ರಹ್ಮರಾಕ್ಷಸಾಃ ।**
**ನಿಹತಸ್ಯ ಚ ಯಜ್ಞಸ್ಯ ಸದ್ಯಃ ಕರ್ತಾ ವಿನಶ್ಯತಿ ॥**
**ತದ್ಯಥಾ ವಿಧಿಪೂರ್ವಂ ಮೇ ಕ್ರತುರೇಷ ಸಮಾಪ್ಯತೇ ।**
**ತಥಾ ವಿಧಾನಂ ಕ್ರಿಯತಾಂ............**

"ಬ್ರಹ್ಮರಾಕ್ಷಸರು ಯಜ್ಞದ ಮಧ್ಯದಲ್ಲಿ ಏನಾದರೂ ಅಪರಾಧ ನಡೆದೀತೋ ಎಂದು ಹುಡುಕುತ್ತಿರುತ್ತಾರೆ. ಮಧ್ಯದಲ್ಲಿ ಯಾವುದಾದರೂ ಕಾರಣದಿಂದ ಯಜ್ಞವು ಹಾಳಾಗಿಹೋದರೆ ಯಜಮಾನನು ಒಡನೆಯೇ ಸಾಯುತ್ತಾನೆ. ಈ ಯಜ್ಞವು ಯಥಾಶಾಸ್ತ್ರವಾಗಿ ಪರಿಸಮಾಪ್ತಿಯನ್ನು ಹೊಂದುವಂತೆ ವಿಧಿಪೂರ್ವಕವಾಗಿ ಕರ್ಮಾಚರಣೆಮಾಡಿರಿ."

ಆದರೆ ಯೋಗಬುದ್ಧಿಯಿಂದ ಮಾಡಿದ ಕಾರ್ಯವು ಹೀಗಾಗುವುದಿಲ್ಲ. ಆರಂಭಿಸಿದ ಮಾತ್ರದಿಂದಲೇ ಫಲಪ್ರಾಪ್ತಿಯಾಗುತ್ತದೆ. ಮಧ್ಯದಲ್ಲಿ ನಿಂತರೂ ದೋಷವಿಲ್ಲ. ವಿವೇಕದಿಂದ ಕೂಡಿ ಈ ಧರ್ಮವನ್ನು ಸ್ವಲ್ಪವೇ ಅನುಷ್ಠಾನಮಾಡಿದರೂ ಕರ್ಮಬಂಧವೆಂಬ ಮಹಾಭಯದಿಂದ ಕಾಪಾಡುತ್ತದೆ. ಭಗವಂತನೇ ಮುಂದೆ ಹೇಳುವಂತೆ ಇಹದಲ್ಲಾಗಲೀ–ಪರದಲ್ಲಾಗಲೀ ಈ ಕರ್ಮಯೋಗಿಗೆ ಕಲ್ಯಾಣವೇ ಹೊರತು ನಾಶವಿಲ್ಲ. 'ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ')

**ಓಂ ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನನ್ದನ ।**
**ಬಹುಶಾಖಾಹ್ಯನನ್ತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥೪೧॥**

ಕುರುನಂದನ! ಅರ್ಜುನ! ವ್ಯವಸಾಯಾತ್ಮಿಕವಾದ (ನಿಶ್ಚಯ ಸ್ವಭಾವವಾದ) ಬುದ್ಧಿಯು ಏಕನಿಷ್ಠವಾಗಿರುತ್ತದೆ. ಅವ್ಯವಸಾಯಿಗಳ ಬುದ್ಧಿಗಳು ಅನೇಕಕವಲುಗಳಿಂದ ಕೂಡಿದ್ದು ಅನಂತವಾಗಿಯೂ ಇರುತ್ತವೆ.

* * *

(ಜೀವನದ ಪಾಠವನ್ನು ಕಂಡು ನಿಷ್ಕರ್ಷವನ್ನು ಪಡೆದಿರುವ ಬುದ್ಧಿಗೂ, ಹಾಗೆ ನಿಶ್ಚಯವನ್ನು ಪಡೆಯದೇ ಇರುವ ಅಜ್ಞಾನಿಗಳ ಬುದ್ಧಿಗಳಿಗೂ ಇರುವ ವ್ಯತ್ಯಾಸವನ್ನು ಭಗವಂತನು ಹೇಳುತ್ತಾನೆ.

ಆತ್ಮಸ್ವರೂಪದ ಯಾಥಾತ್ಮ್ಯದ ಅರಿವುಳ್ಳ ಜ್ಞಾನಿಯ ನಿಶ್ಚಯ ಪೂರ್ವಕವಾದ ಬುದ್ಧಿಯು ಏಕನಿಷ್ಠವಾಗಿರುತ್ತದೆ. ಮೋಕ್ಷವೆಂಬ ಅಥವಾ ಪರಮಾತ್ಮನೆಂಬ ಒಂದೇ ಫಲಕ್ಕೆ ಸಾಧನವಾಗಿರುವುದರಿಂದ, ಒಂದೇ ಲಕ್ಷ್ಯವನ್ನು ಹೊಂದಿರುವುದರಿಂದ, ಏಕನಿಷ್ಠವಾಗಿರುವುದರಿಂದ, ಅನುಭವೈಕ ವೇದ್ಯವಾಗಿರುವುದರಿಂದ ಅದು ಒಂದೇ ಆಗಿರುತ್ತದೆ. ಅಲ್ಲಿ ಶಾಸ್ತ್ರಾರ್ಥ ಗಳಿಗೂ ಏಕತೆ ಇರುತ್ತದೆ. ಸಮನ್ವಯವಿರುತ್ತದೆ. ಅಜ್ಞಾನಿಗಳ ಕಾಮ್ಯಬುದ್ಧಿ ಗಳು ಬೇರೆ-ಬೇರೆ ಫಲಗಳನ್ನು ಹೊಂದುವುದರಿಂದ ಅವುಗಳ ಸಂಖ್ಯೆಯೂ ಅನಂತವಾಗಿರುವುವು. ಅವುಗಳ ಶಾಖೋಪಶಾಖೆಗಳಿಗೂ ಕೂಡ ಲೆಕ್ಕವಿಲ್ಲ. ವ್ಯವಸಾಯ ಎಂಬುದಕ್ಕೆ 'ಅಧ್ಯವಸಾಯ' 'ನಿಶ್ಚಯ' ಎಂಬ ಅರ್ಥವನ್ನೂ ಇಲ್ಲಿ ನಾವು ತೆಗೆದುಕೊಂಡಿದ್ದೇವೆ. ಆಚಾರ್ಯರ ಭಾಷ್ಯಗಳಲ್ಲೂ ಇದೇ ಅರ್ಥವನ್ನೇ ವಿವರಿಸಿದ್ದಾರೆ.

ನಿಶ್ಚಯಸ್ವಭಾವಾ (ಶಂ.ಭಾ.)

ವ್ಯವಸಾಯಃ = ನಿಶ್ಚಯಃ (ರಾ.ಭಾ.)

ಬುದ್ಧಿ ಮತ್ತು ಮನಸ್ಸು ಎಂಬ ಅಂತಃಕರಣದ ಎರಡು ಭೇದಗಳಲ್ಲಿ ಬುದ್ಧಿಯು ವ್ಯವಸಾಯಾತ್ಮಕವಾಗಿಯೂ (ನಿಶ್ಚಯಾತ್ಮಕ) ಮತ್ತು ಮನಸ್ಸು ಸಂಕಲ್ಪವಿಕಲ್ಪಾತ್ಮಕವಾಗಿಯೂ ಇರುತ್ತದೆ. **ವ್ಯವಸಾಯಾತ್ಮಿಕಾ ಬುದ್ಧಿಃ ಮನೋವ್ಯಾಕರಣಾತ್ಮಕಮ್** ಎಂದು ಶಾಸ್ತ್ರಗಳು ಹೇಳುತ್ತವೆ. 'ವ್ಯವಸಾಯ' ಎಂಬ ಪದಕ್ಕೆ 'ಉತ್ಸಾಹ' ಎಂಬ ಅರ್ಥವೂ ಇದೆ. ಆದರೆ ಪ್ರಕೃತ ಶ್ಲೋಕದಲ್ಲಿ 'ವ್ಯವಸಾಯ' ಶಬ್ದಕ್ಕೆ ಕೊನೆಯ ಎರಡು ಅರ್ಥಗಳೂ ವಿವಕ್ಷಿತವಾಗಿಲ್ಲ. ಈ ಶ್ರೇಯೋಮಾರ್ಗದಲ್ಲಿ ನಿಶ್ಚಯಸ್ವಭಾವವುಳ್ಳ ಬುದ್ಧಿಯು ಒಂದೇ ಆಗಿದೆ. ಎಂದರೆ : ಯಥಾರ್ಥವಾದ ಪ್ರಮಾಣದಿಂದ ಉಂಟಾಗಿರುವುದರಿಂದ ಉಳಿದ ವಿಪರೀತಬುದ್ಧಿಗಳ ಶಾಖಾಭೇದಗಳಿಗೆ ಬಾಧಿತವಾಗಿದೆ. ಪ್ರಮಾಣಜನಿತ ವಾದ ವಿವೇಕಬುದ್ಧಿಯಿಲ್ಲದ ಇತರರ (ಅವ್ಯವಸಾಯಿಗಳ) ಬುದ್ಧಿಗಳಾದರೋ ಬಹುಭೇದವುಳ್ಳವುಗಳು ಮತ್ತು ಶಾಖಾಭೇದಗಳಿಗೆ ತಕ್ಕಂತೆ ಅನಂತವೂ ಆಗಿವೆ.

'ಒಂದು ಲೆಕ್ಕಕ್ಕೆ ಸರಿಯಾದ ಉತ್ತರವು ಎಷ್ಟು ಎಂದರೆ 'ಒಂದೇ' ಎಂದು ನಿಶ್ಚಯಬುದ್ಧಿಯುಳ್ಳ ಗಣಿತಶಾಸ್ತ್ರಜ್ಞನು ಹೇಳುತ್ತಾನೆ. ಗಣಿತ

ಶಾಸ್ತ್ರಜ್ಞಾನವಿಲ್ಲದವರು ಆ ಲೆಕ್ಕಕ್ಕೆ ಕೊಡುವ ಉತ್ತರಗಳು ನೂರಾರು' ಎಂಬ ಉದಾಹರಣೆಯನ್ನು ಶ್ರೀರಂಗಮಹಾಗುರುಗಳು ಇಲ್ಲಿ ಕೊಡುತ್ತಿದ್ದರು.)

**ಓಂ ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದನ್ತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥೪೨॥**
**ಓಂ ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್ ।**
**ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥೪೩॥**
**ಓಂ ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಮ್ ।**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥೪೪॥**

ವೇದಗಳ ತೋರಿಕೆಯ ಅರ್ಥಗಳನ್ನು ವಾದಿಸುವುದರಲ್ಲಿಯೇ ನಿರತರಾಗಿ ಅವುಗಳನ್ನು ಬಿಟ್ಟರೆ ಮತ್ತೇನೂ ಇಲ್ಲವೆಂದು ವಾದಿಸುವ ಅವಿವೇಕಿಗಳು ಇದ್ದಾರೆ. ಅವರು ಕಾಮಸ್ವಭಾವವುಳ್ಳವರು. ಸ್ವರ್ಗದಲ್ಲೇ ತತ್ಪರರಾದವರು. ಜನ್ಮ-ಕರ್ಮಗಳನ್ನು ಫಲವನ್ನಾಗಿ ಕೊಡುವ ಮಾತುಗಳನ್ನಾಡುತ್ತಾರೆ. ಭೋಗ ಮತ್ತು ಐಶ್ವರ್ಯಪ್ರಾಪ್ತಿಗಳಿಗೆ ಸಾಧನವಾದ ಕ್ರಿಯಾಕಲಾಪವಿಶೇಷಗಳಿಂದ ತುಂಬಿರುವ ಮಾತನ್ನಾಡುತ್ತಾರೆ. ಅವರ ಮಾತುಗಳು ಕೇವಲ ಹೂವಿನಂತೆ ಇರುತ್ತವೆ. (ಕೇಳುವುದಕ್ಕೆ ಮಾತ್ರ ರಮಣೀಯವಾಗಿರುತ್ತವೆ.) ಭೋಗ ಮತ್ತು ಐಶ್ವರ್ಯಗಳಲ್ಲಿ ಆಸಕ್ತಿಯುಳ್ಳವರಾಗಿ ಅದರಿಂದ ಅಪಹರಿಸಲ್ಪಟ್ಟ ಮನಸ್ಸುಳ್ಳ ಅವರ ಬುದ್ಧಿಯು ವ್ಯವಸಾಯಾತ್ಮಿಕವಾಗಿ ನಿಶ್ಚಯಾತ್ಮಕವಾಗಿ ಸಮಾಧಿಯಲ್ಲಿ ನೆಲೆಗೊಳ್ಳುವುದಿಲ್ಲ.

* * *

(ನಿಶ್ಚಯಾತ್ಮಿಕವಾದ ಬುದ್ಧಿಯಿಲ್ಲದ ಅವಿವೇಕಿಗಳ ಧೋರಣೆ, ಉಪದೇಶ ಮತ್ತು ಅವು ಹೊಂದುವ ಫಲವನ್ನು ಭಗವಂತನು ನಿರೂಪಿಸುತ್ತಾನೆ. ವೇದವಾದರತರೆಂದರೆ : ವೇದದ ಪರಮಾರ್ಥವನ್ನರಿಯದೇ ತೋರಿಕೆಯ ಅರ್ಥಗಳನ್ನು ವಾದಿಸುವವರು. ಫಲಸಾಧನಗಳೆಂದು ಹೇಳುವ ಅರ್ಥವಾದ ಭೂಯಿಷ್ಠವಾದ ಅನೇಕ ವೇದವಾಕ್ಯಗಳನ್ನು ಮೆಲುಕುಹಾಕುತ್ತಾ ಅವುಗಳನ್ನು ಕುರಿತೇ ವಾದಿಸುವವರು. ಬಗೆ-ಬಗೆಯ ಕರ್ಮಗಳಲ್ಲಿಯೇ ವೇದಕ್ಕೆ ತಾತ್ಪರ್ಯ. ಇದು ಬಿಟ್ಟು ಬೇರೆ ಏನೂ ಇಲ್ಲ ಎನ್ನುವವರು. **ಬಹ್ವರ್ಥಫಲಸಾಧನಪ್ರಕಾಶಕೇಷು ವೇದವಾಕ್ಯೇಷು ರತಾಃ (ಶಂ.ಭಾ.)**

**ವೇದೇಷು ಯೇ ಸ್ವರ್ಗಾದಿ ಫಲವಾದಾಃ ತೇಷು ಸಕ್ತಾಃ** (ರಾ.ಭಾ.)
**ಕಾಮಾದಿವಾಚಕವೇದವಾದರತಾಃ = ವೇದೈಃ ಯನ್ಮುಖತಃ ಉಚ್ಯತೇ ತತ್ರೈವ ರತಾಃ** (ಮ.ಭಾ.)

ಇವರ ಬುದ್ಧಿಯು ಕಾಮಾಸಕ್ತವಾದುದು. ಇವರು ಸ್ವರ್ಗಾದಿ ಲೋಕ ಗಳಲ್ಲಿ ಆಸಕ್ತರಾದವರು. ಆ ಲೋಕಗಳು ಮುಗಿದನಂತರ **'ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶನ್ತಿ'**–ಎಂಬಂತೆ ಮತ್ತೆ ಹುಟ್ಟುವ ಮತ್ತು ಕರ್ಮಗಳನ್ನು ಮಾಡಿಸುವ ಬಗೆ-ಬಗೆಯ ಕ್ರಿಯಾಕಲಾಪವುಳ್ಳವರು ಭೋಗ ಮತ್ತು ಐಶ್ವರ್ಯ ಇವುಗಳಿಗೆ ಮಾತ್ರ ಸಾಧನವಾದ ಮಾತುಗಳನ್ನಾಡುತ್ತಾರೆ. ಇವರ ಮಾತುಗಳು ಪರಿಣಾಮದಲ್ಲಿ ಒಳ್ಳೆಯ ಫಲವನ್ನು ಕೊಡುವುದಿಲ್ಲ. ಕೇಳುವುದಕ್ಕೆ ಮಾತ್ರ ರಮಣೀಯವಾಗಿರುತ್ತವೆ.

**'ಪುಷ್ಪಿತಾಂ ವಾಚಃ'** ಎಂಬುವುದಕ್ಕೆ ಮೋಕ್ಷವನ್ನು ಫಲವಾಗಿ ಭಾವಿಸಿದಾಗ–ಸ್ವರ್ಗವೇ ಮುಂತಾದ ಕಾಮೋಪಭೋಗಗಳ ಸಿದ್ಧಿಗಾಗಿ ಹೇಳುವ ಪುಷ್ಪದಂತಹ ಮಾತುಗಳು.

**ಮೋಕ್ಷಫಲಮಪೇಕ್ಷ್ಯ ಸ್ವರ್ಗಾದಿ ಪುಷ್ಪಯುಕ್ತಾಂ ವಾಚಂ** ಎಂದು ಶ್ರೀಮಧ್ವಾಚಾರ್ಯರು ವ್ಯಾಖ್ಯಾನಮಾಡಿರುತ್ತಾರೆ.

ಭೋಗ ಮತ್ತು ಐಶ್ವರ್ಯಗಳಿಂದ ಆವರಿಸಲ್ಪಟ್ಟ ವಿವೇಕವುಳ್ಳ ಇಂತಹ ಮೂರ್ಖರಿಗೆ ನಿಶ್ಚಯಾತ್ಮಕವಾದ ಜ್ಞಾನವುಂಟಾಗುವುದಿಲ್ಲ. ಸಾಂಖ್ಯ (ಜ್ಞಾನ) ಯೋಗದಲ್ಲಾಗಲೀ–ಯೋಗ (ಕರ್ಮಯೋಗ) ದಲ್ಲಾಗಲೀ ಬುದ್ಧಿಯು ನೆಲೆಗೊಳ್ಳುವುದಿಲ್ಲ. ಅವರಿಗೆ ನೆಮ್ಮದಿಯೂ ಉಂಟಾಗುವುದಿಲ್ಲ.

**ಸಮಾಧೌ ನ ವಿಧೀಯತೇ । ಸಮಾಧ್ಯರ್ಥೇ ಈಶ್ವರೇ ಮನಃ ಸಮಾಧಾನಂ ಸಮ್ಯಕ್ ನ ಭವತಿ**–ಎಂದು ಭಾಷ್ಯಮಾಡಿ **'ನ ತಸ್ಯ ತತ್ತ್ವಗ್ರಹಣಾಯ ಸಾಕ್ಷಾತ್ ವರೀಯಸೀರಪಿ ವಾಚಃ ಸಮಾಸನ್।'** ಎಂಬ ಪ್ರಮಾಣವಚನವನ್ನು ಶ್ರೀಮಧ್ವಾಚಾರ್ಯರು ಉದ್ಧರಿಸಿದ್ದಾರೆ.

ಸಮಾಧಿ ಎಂಬುದಕ್ಕೆ ಅನ್ತಃಕರಣಂ ಎಂದು ಶ್ರೀ ಶಂಕರರು ಅರ್ಥ ಮಾಡಿದ್ದಾರೆ.

**ಸಮಾಧೀಯತೇ ಅಸ್ಮಿನ್ ಪುರುಷೋಪಭೋಗಾಯ ಸರ್ವಂ**

**ಇತಿ ಸಮಾಧಿಃ ಅಂತಃಕರಣಂ ಬುದ್ಧಿಃ** ಸ್ವರ್ಗ ಪಶು ಮುಂತಾದ ಫಲಗಳಿಗೆ ಸಾಧನವಾದ ಕರ್ಮಗಳನ್ನು ಬಿಟ್ಟರೆ ಬೇರೆಯೇನೂ ಇಲ್ಲ' ಎಂಬ ಬುದ್ಧಿಯುಳ್ಳವರು. (ಶಂ.ಭಾ.)

**ಸಮಾಧೀಯತೇ ಅಸ್ಮಿನ್ ಆತ್ಮಾ ಜ್ಞಾನಮಿತಿ ಸಮಾಧಿಃ = ಮನಃ** ಇದರಲ್ಲಿ ಆತ್ಮಜ್ಞಾನವು ಇಡಲ್ಪಡುವುದರಿಂದ ಸಮಾಧಿ ಎಂದರೆ ಮನಸ್ಸು. (ರಾ.ಭಾ.)

ವೇದವಾದರತರು 'ದಾನಮಾಡಿರಿ, ಧರ್ಮಮಾಡಿರಿ, ಛತ್ರ ಕಟ್ಟಿಸಿರಿ, ಬಾವಿಗಳನ್ನು ತೋಡಿಸಿರಿ'–ಇವೇ ಮುಂತಾದ ಕಾಮ್ಯಕರ್ಮಗಳನ್ನು ಜನರಿಗೆ ಬೋಧಿಸುತ್ತಾರೆ. ಇಷ್ಟಾಪೂರ್ತಗಳೂ ಸಹ ಪುನರ್ಜನ್ಮಕ್ಕೆ ಕಾರಣಗಳಾಗುತ್ತವೆಂಬುದನ್ನು ಮುಂಡಕೋಪನಿಷತ್ತಿನ ಈ ಋಕ್ಕು ಹೇಳುತ್ತದೆ.

**ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ**
**ನಾನ್ಯಚ್ಛ್ರೇಯೋ ವೇದಯನ್ತೇ ಪ್ರಮೂಢಾಃ ।**
**ನಾಕಸ್ಯ ಪೃಷ್ಠೇ ತೇ ಸುಕೃತೇಽನುಭೂತ್ವಾ**
**ಇಮಂ ಲೋಕಂ ಹೀನತರಂ ವಾವಿಶನ್ತಿ ॥೧೨॥**

ಇಷ್ಟಾ-ಪೂರ್ತಗಳೇ ಹೆಚ್ಚಿನದೆಂದೂ ಬೇರೆ ಯಾವುದೂ ಶ್ರೇಯಸ್ಕರವಲ್ಲವೆಂದೂ ನಂಬುವ ಮೂಢರು ಸ್ವರ್ಗಲೋಕದಲ್ಲಿದ್ದುಕೊಂಡು ಸುಕೃತವನ್ನೆಲ್ಲಾ ಹಾಳುಮಾಡಿಕೊಂಡು ಈ ಲೋಕವನ್ನೂ ಇದಕ್ಕಿಂತಲೂ ಕೀಳಾದ ಲೋಕವನ್ನೂ ಪ್ರವೇಶಿಸುತ್ತಾರೆ.)

**ಓಂ ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।**
**ನಿರ್ದ್ವನ್ದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥**

ವೇದಗಳು ಸತ್ತ್ವರಜಸ್ತಮೋಗುಣಗಳನ್ನೇ ವಿಷಯಗಳನ್ನಾಗಿ ಹೊಂದಿವೆ. ಆದರೆ ನೀನು ಈ ಮೂರು ಗುಣಗಳನ್ನೂ ಮೀರುವವನಾಗು. ದ್ವಂದ್ವವಿಲ್ಲದವನಾಗು. ನಿತ್ಯಸತ್ತ್ವದಲ್ಲಿ ನೆಲೆಸು. ಯೋಗ-ಕ್ಷೇಮವನ್ನು ಬಯಸದವನೂ–ಆತ್ಮವಂತನೂ ಆಗು.

* * *

(ವೇದಗಳೇನೋ ಸತ್ತ್ವ-ರಜಸ್ಸು-ತಮಸ್ಸು ಎಂಬ ಮೂರು ಗುಣಗಳನ್ನು ಪ್ರಕಾಶಪಡಿಸುತ್ತವೆ. ಆದರೆ ವಿವೇಕಿಯಾದ ಅರ್ಜುನನು ಆ

ಮೂರು ಗುಣಗಳನ್ನೂ ದಾಟಿ ಸಮಾಧಿನಿಷ್ಠನಾಗಬೇಕು. ವೇದದ ಪರಮಾರ್ಥದಲ್ಲಿ ನೆಲೆಗೊಳ್ಳಬೇಕು. ಇದಕ್ಕೆ ಅನುಗುಣವಾದ ಜೀವನವನ್ನು ನಡೆಸಬೇಕು. ಶೀತೋಷ್ಣ, ಸುಖ-ದುಃಖ ಮುಂತಾದ ದ್ವಂದ್ವಗಳನ್ನು ಮೀರ ಬೇಕು. ಯೋಗ-ಕ್ಷೇಮಗಳ ಗೊಡವೆಯನ್ನು ಬಿಡಬೇಕು. ಯೋಗವೆಂದರೆ ದೊರಕದ ವಸ್ತುವನ್ನು ದೊರಕಿಸಿಕೊಳ್ಳುವುದು. ಕ್ಷೇಮವೆಂದರೆ ಅದನ್ನು ರಕ್ಷಿಸಿಕೊಳ್ಳುವುದು. ಈ ಯೋಗ-ಕ್ಷೇಮಗಳಲ್ಲಿ ತೊಡಗುವುದು ಪ್ರೇಯಸ್ಸು. ಈ ಪ್ರವೃತ್ತಿಯು ಶ್ರೇಯಸ್ಸಿಗೆ ವಿರೋಧವಾದುದು. ಆತ್ಮನಿಷ್ಠನಾಗಿ ಅಪ್ರಮತ್ತನಾಗಿರಬೇಕು.

ಆತ್ಮಸಾಧನೆಗೆ ಅತ್ಯಂತಾವಶ್ಯಕವಾದ ಪದಾರ್ಥಗಳ ವಿಷಯದ ಯೋಗ-ಕ್ಷೇಮಗಳನ್ನು ಮಾತ್ರ ಇಟ್ಟುಕೊಳ್ಳಬೇಕು. ಏಕೆಂದರೆ : ಯೋಗ-ಕ್ಷೇಮಗಳನ್ನು ಪೂರ್ಣವಾಗಿ ವ್ಯವಹಾರದಲ್ಲಿ ಬಿಟ್ಟಿರಲು ಯಾರಿಗೂ ಸಾಧ್ಯ ವಾಗುವುದಿಲ್ಲ. ಪರಮಹಂಸಸಂನ್ಯಾಸಿಯು ಕೂಡ ಭಿಕ್ಷೆಯನ್ನಾದರೂ ಮಾಡಬೇಕಾಗುವುದು. ಶ್ರೀರಾಮಾನುಜರ ಭಾಷ್ಯದಲ್ಲಿ 'ಯೋಗ-ಕ್ಷೇಮ' ಎಂಬ ಶಬ್ದಗಳಿಗೆ–'ಆತ್ಮಸ್ವರೂಪ ಮತ್ತು ಅದರ ಪ್ರಾಪ್ತಿಗೆ ಯಾವುದು ಉಪಾಯವಾಗಿದೆಯೋ ಅವುಗಳಿಗೆ ಹೊರತಾದ ಪದಾರ್ಥಗಳ ಯೋಗ-ಕ್ಷೇಮಗಳನ್ನು ಬಿಡಬೇಕು'–ಎಂದು ಅರ್ಥಮಾಡಿರುತ್ತಾರೆ.

**ಆತ್ಮಸ್ವರೂಪತತ್ಪ್ರಾಪ್ತ್ಯುಪಾಯಬಹಿರ್ಭೂತಾನಾಮರ್ಥಾನಾಂ ಯೋಗಂ, ಪ್ರಾಪ್ತಾನಾಂ ಚ ಕ್ಷೇಮಂ ಪರಿತ್ಯಜ್ಯ.....**

ವೇದಗಳು ಪರೋಕ್ಷಾರ್ಥವನ್ನು ಹೇಳುವುದರಿಂದ ತ್ರಿಗುಣಸಂಬಂಧಿ ಯಾದ ಸ್ವರ್ಗಾದಿಗಳನ್ನು ಹೇಳುವಂತೆ ಅರ್ಥವು ಮೇಲೆ-ಮೇಲೆ ತೋರು ತ್ತದೆ. ಈ ತೋರಿಕೆಯ ಅರ್ಥವನ್ನು ಗ್ರಹಿಸಿ ಭ್ರಾಂತರಾಗಬಾರದು.

**ವೇದಾನಾಂ ಪರೋಕ್ಷಾರ್ಥತ್ವಾತ್ ತ್ರಿಗುಣಸಮ್ಬನ್ಧಿ ಸ್ವರ್ಗಾದಿ ಪ್ರತೀತಃ ಅರ್ಥ ಇವ ಭಾತಿ ಅತಃ ಪ್ರಾತೀತಿಕೇ ಅರ್ಥೇ ಭ್ರಾನ್ತಿಂ ಮಾ ಕುರು.** ಇಲ್ಲಿ ವೇದಪಕ್ಷದ ನಿಷೇಧವಿಲ್ಲ–ಎಂದು ಶ್ರೀಮಧ್ವಾ ಚಾರ್ಯರು ಅಭಿಪ್ರಾಯಪಟ್ಟಿದ್ದಾರೆ. **ತ್ರೈಗುಣ್ಯವಿಷಯಾಃ** ಎಂಬುದಕ್ಕೆ ಸಂಸಾರವನ್ನು ಪ್ರಕಾಶಪಡಿಸುವುದು–ಎಂದೂ **ನಿಸ್ತ್ರೈಗುಣ್ಯಃ** ಎಂಬುದಕ್ಕೆ

'ನಿಷ್ಕಾಮ' ಎಂದೂ ಶ್ರೀಶಂಕರರು ವ್ಯಾಖ್ಯೆಮಾಡಿದ್ದಾರೆ. ಸದಾಕಾಲದಲ್ಲಿಯೂ ಸಾತ್ತ್ವಿಕನಾಗಿ ವ್ಯವಹರಿಸಬೇಕು. ವ್ಯವಹಾರದಲ್ಲಿ ತ್ರಿಗುಣಗಳನ್ನು ಬಿಡಲು ಅಸಾಧ್ಯವಾದುದರಿಂದ ಸತ್ತ್ವಗುಣಪ್ರಧಾನವಾದ ಜೀವನವನ್ನು ನಡೆಸಬೇಕು.

ಸತ್ತ್ವ-ರಜಸ್ತಮೋಗುಣಗಳುಳ್ಳವರು ತಮ-ತಮಗೆ ಬೇಕಾದ ಫಲ ಗಳನ್ನು ವೇದಗಳಿಂದ ಪಡೆದುಕೊಳ್ಳಬಹುದು. ತಮೋಗುಣಗಳನ್ನು ಪ್ರತಿನಿಧಿ ಸುವ ದ್ವೇಷಾಸೂಯೆಗಳಿಗೆ ತುತ್ತಾಗಿ ಶತ್ರುವಿನಾಶಕ್ಕಾಗಿ ಮಾರಣಹೋಮ ಮಾಡಬಹುದು. ಅದಕ್ಕೆ ವಿನಿಯೋಗಿಸಬೇಕಾದ ಮಂತ್ರಗಳೂ ವೇದಗಳಲ್ಲಿವೆ.

ಸ್ವಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಲು ಕೀರ್ತಿಕಾಮನಾಗಿ ಯಜ್ಞಮಾಡ ಬಹುದು. ರಜಸ್ತಮೋಗುಣಯುಕ್ತವಾದ ಎಲ್ಲ ವಿಧವಾದ ಕಾಮನೆಗಳನ್ನೂ ಬಿಟ್ಟು ನಿತ್ಯತೃಪ್ತನಾಗಿ ಸ್ವಧರ್ಮೋಚಿತವಾದ ವೇದೋಕ್ತವಾದ ಕರ್ಮಾನು ಷ್ಠಾನಗಳನ್ನು ಮಾಡುತ್ತಾ ಸಾತ್ತ್ವಿಕನಾಗಿಯೂ ಇರಬಹುದು. ಆದರೆ ಈ ಎಲ್ಲರಿಗೂ ಸತ್ತ್ವರಜಸ್ತಮೋಗುಣಗಳ ಮಿಶ್ರಣವಿರುತ್ತದೆ. ಯಾವ ಮನು ಷ್ಯನೂ ಒಂದೇ ಗುಣವನ್ನವಲಂಬಿಸಿ ಇರುವುದಿಲ್ಲ. ತಾಮಸನಿಗೂ ಸಹ ಕೆಲವು ಸಮಯದಲ್ಲಿ ರಜಸ್ಸತ್ತ್ವಗಳ ಆವಿರ್ಭಾವವಾಗಬಹುದು. ಆದರೆ ಅದು ಕ್ಷಣಕಾಲ ಮಾತ್ರ. ಅಂತೆಯೇ ಸಾತ್ತ್ವಿಕನೂ ಸಹ ಕದಾಚಿತ್ ಕೋಪ ಗೊಳ್ಳಲೂಬಹುದು. ಈ ವಿಧವಾದ ಸಮ್ಮಿಶ್ರಣದಿಂದ ಕೂಡಿರುವ ಮೂರು ಗುಣಗಳನ್ನೂ ಬಿಡಬೇಕೆಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳುತ್ತಾನೆ.)

**ಓಂ ಯಾವಾನರ್ಥ ಉದಪಾನೇ ಸರ್ವತಃ ಸಮ್ಪ್ಲುತೋದಕೇ ।**
**ತಾವಾನ್ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥೪೬॥**

ಸಣ್ಣ ಬಾವಿಯಲ್ಲಿ ಎಷ್ಟು ಪ್ರಯೋಜನವಿರುವುದೋ ಎಲ್ಲೆಲ್ಲಿಯೂ ನೀರು ತುಂಬಿರುವ ಜಲಾಶಯದಲ್ಲಿಯೂ ಅಷ್ಟೇ ಪ್ರಯೋಜನ ಇದ್ದೇ ಇರು ವುದು. ಎಲ್ಲ ವೇದಗಳಲ್ಲಿಯೂ ಎಷ್ಟು ಪ್ರಯೋಜನವಿರುವುದೋ ತತ್ತ್ವವನ್ನು ತಿಳಿದ ಬ್ರಾಹ್ಮಣನಿಗೆ ಅಷ್ಟು ಪ್ರಯೋಜನವು ಆಗಿಯೇ ಆಗುವುದು. ಅಥವಾ ಎಲ್ಲೆಲ್ಲಿಯೂ ನೀರು ತುಂಬಿರುವ ಜಲಾಶಯದಲ್ಲಿ ಪ್ರಯೋಜನಕ್ಕೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ಗ್ರಹಿಸುವಂತೆ ಜ್ಞಾನಿಯಾದ ಬ್ರಾಹ್ಮಣನು ವೇದಗಳಿಂದ ಪರಮಾರ್ಥಕ್ಕೆ ಬೇಕಾದುದನ್ನು ಮಾತ್ರ ಗ್ರಹಿಸುತ್ತಾನೆ.

* * *

(ಈ ಶ್ಲೋಕವು ನೋಡಲು ಬಹುಸುಲಭವಾಗಿ ಕಂಡರೂ ಈ ಶ್ಲೋಕಕ್ಕೆ ಒಬ್ಬೊಬ್ಬರೂ ಒಂದೊಂದು ವಿಧವಾಗಿ ವ್ಯಾಖ್ಯಾನಮಾಡಿರುತ್ತಾರೆ.

ಪರಿಮಿತವಾದ ನೀರುಳ್ಳ ದೊಡ್ಡ ಕೆರೆ-ಕುಂಟೆ ಮೊದಲಾದುವುಗಳಿಂದ ಆಗುವ ಪ್ರಯೋಜನವೆಲ್ಲವೂ ದೊಡ್ಡ ಜಲಾಶಯದಲ್ಲೂ ಆಗುವುದು, ಇನ್ನೂ ಹೆಚ್ಚಾಗಿಯೂ ಆಗುವುದು. ಅರ್ಥಾತ್ ಜಲಾಶಯಗಳಲ್ಲಾಗುವ ಪ್ರಯೋಜನದಲ್ಲಿ ಸಣ್ಣ ಕೆರೆ-ಕುಂಟೆಗಳಿಂದಾಗುವ ಪ್ರಯೋಜನವು ಅಂತ ರ್ಗತವಾಗುತ್ತದೆ. ಅದರಂತೆಯೇ ಪರಮಾರ್ಥತತ್ತ್ವವಿದನಾದ ಬ್ರಾಹ್ಮಣನಿಗೆ ಲಭಿಸುವ ಫಲದಲ್ಲಿ ವೇದೋಕ್ತಕರ್ಮಗಳಿಂದ ಲಭಿಸುವ ಫಲವೂ ಅಂತರ್ಗತವಾಗುತ್ತದೆ.

ಊರಿನಲ್ಲಿ ಬರಿಯ ಬಾವಿಯೊಂದೇ ಇರುವಾಗ ಜನರೆಲ್ಲರೂ ಅದನ್ನೇ ಅವಲಂಬಿಸಬೇಕಾಗುತ್ತದೆ. ಅದೇ ಊರಿನಲ್ಲಿ ದೊಡ್ಡ ಅಣೆಕಟ್ಟೆಯೊಂದನ್ನು ಕಟ್ಟಿಬಿಟ್ಟರೆ, ಆ ಅಣೆಕಟ್ಟೆಯಲ್ಲಿಯೇ ಆ ಸಣ್ಣ ಬಾವಿಯೂ ಮುಳುಗಿಹೋಗಿ ಬಿಟ್ಟರೆ ಬಾವಿಯನ್ನು ಕುರಿತು ಯಾರೂ ಯೋಚಿಸುವುದಿಲ್ಲ. ಅಧ್ಯಯನ-ಅಧ್ಯಾಪನಗಳಲ್ಲಿ ನಿರತನಾಗಿರುವವನು ವೇದೋಕ್ತವಾದ ಸಕಲಕರ್ಮ ಗಳನ್ನೂ ಮಾಡಲೇಬೇಕು. ವೇದಗಳೇ ಅಥವಾ ವೇದೋಕ್ತಕರ್ಮಗಳೇ ಮನುಷ್ಯನ ಐಹಿಕಾಮುಷ್ಮಿಕಫಲಗಳಿಗೆ ಸಾಧನಗಳಾಗಿರುತ್ತವೆ. ಆದರೆ ವೇದ ವಿದನಿಗೆ ಆತ್ಮಜ್ಞಾನವುಂಟಾಗಿಬಿಟ್ಟರೆ ಅವನಿಗೆ ಐಹಿಕಾಮುಷ್ಮಿಕಸುಖಗಳ ಕಡೆಗೆ ಗಮನವಿರುವುದಿಲ್ಲ. ಆತ್ಮಾನಂದದ ಮುಂದೆ ಐಹಿಕ ಮತ್ತು ಆಮುಷ್ಮಿಕ (ಸ್ವರ್ಗ)ಸುಖಗಳು ಅಲ್ಪ ಅಥವಾ ಕ್ಷಣಿಕಗಳೆಂದು ಪರಿಗಣಿತವಾಗುತ್ತವೆ. ಆ ಸಮಯದಲ್ಲಿ ಆತ್ಮಜ್ಞಾನಿಯು ವೇದೋಕ್ತವಾದ ಕರ್ಮಗಳ ಕಡೆಗೆ ಅಥವಾ ಕರ್ಮಫಲಗಳ ಕಡೆಗೆ ಲಕ್ಷ್ಯಕೊಡಬೇಕಾಗುವುದಿಲ್ಲ.

ಸುತ್ತಲೂ ಪರಿಪೂರ್ಣವಾಗಿರುವ ನೀರುಳ್ಳ ತಟಾಕದಲ್ಲಿ ನೀರಡಿಕೆ ಯಾದವನಿಗೆ ಎಷ್ಟುಮಟ್ಟಿಗೆ ಪ್ರಯೋಜನವೋ ಅಷ್ಟುಮಾತ್ರವೇ ಆ ತೃಷಾಪೀಡಿತ ನಿಂದ ಪರಿಗ್ರಹಿಸಲ್ಪಡುತ್ತದೆ. ಇರುವ ನೀರನ್ನೆಲ್ಲಾ ಅವನು ಉಪಯೋಗಿಸಿ ಕೊಳ್ಳುವುದಿಲ್ಲ. ಸಮಸ್ತವಾದ, ಅಪಾರವಾದ ವೇದಗಳಲ್ಲೂ ವೇದಾಧಿಕಾರಿ ಯಾದ ವಿಶಿಷ್ಟಜ್ಞಾನವಂತನಾದ ಮೋಕ್ಷಾರ್ಥಿಗೆ ವೇದದ ಯಾವ ಭಾಗವು ಮೋಕ್ಷಕ್ಕೆ ಸಾಧನಭೂತವೋ ಅಷ್ಟುಮಾತ್ರವೇ ಉಪಾಸನೆಗೆ ಗ್ರಾಹ್ಯವು. ಮಿಕ್ಕವು ಗ್ರಾಹ್ಯವಾಗುವುದಿಲ್ಲ. ಇದು ಶ್ರೀರಾಮಾನುಜರ ವ್ಯಾಖ್ಯಾನ.

**ಸರ್ವತಃ ಸಮ್ಪ್ಲುತೋದಕೇ ಉದಪಾನೇ ಪಿಪಾಸೋಃ ಯಾವಾನರ್ಥಃ = ಯಾವದೇವ ಪ್ರಯೋಜನಂ ತಾವದೇವ ತೇನೋಪಾದೀಯತೇ । ನ ಸರ್ವಂ । ಏವಂ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ = ವೈದಿಕಸ್ಯ ಮುಮುಕ್ಷೋಃ ಯಾವದೇವ ಮೋಕ್ಷಸಾಧ್ಯಂ ತದೇವೋಪಾದೇಯಂ ನಾನ್ಯತ್ ।**

**ಸರ್ವತಃ ಸಮ್ಪ್ಲುತೋದಕೇ ಸತಿ ಉದಪಾನೇ ಯಾವಾನರ್ಥಃ (ನ ಸ್ವಲ್ಪಮಪಿ ಪ್ರಯೋಜನಂ ವಿದ್ಯತೇ) ತಾವಾನ್ ವಿಜಾನತಃ ಬ್ರಾಹ್ಮಣಸ್ಯ ಸರ್ವೇಷು ವೇದೇಷು ।** ಎಲ್ಲ ಕಡೆಗಳಲ್ಲೂ ಸಂಪೂರ್ಣವಾಗಿ ನೀರು ತುಂಬಿರುವಾಗ ಬಾವಿಯಿಂದ ಯಾವ ಪ್ರಯೋಜನವೋ ಅದೇ ಪ್ರಯೋ ಜನವು ಮಹಾಜ್ಞಾನಿಯಾದ ಬ್ರಾಹ್ಮಣನಿಗೆ ಎಲ್ಲ ವೇದಗಳಿಂದಾಗುವುದು. ಅರ್ಥಾತ್ ದೊಡ್ಡ ಜಲಾಶಯವಿರುವಾಗ ಬಾವಿಗೆ ನೀರುಸೇದಲು ಯಾರೂ ಹೋಗುವುದಿಲ್ಲ. ಅದರಂತೆಯೇ ಮಹಾಜ್ಞಾನಿಯಾದ ಬ್ರಾಹ್ಮಣನಿಗೆ ವೇದ ಗಳಿಂದ ಯಾವ ಪ್ರಯೋಜನವೂ ಇಲ್ಲ-ಹೀಗೆ ಲೋಕಮಾನ್ಯತಿಲಕರು ಅರ್ಥಮಾಡಿರುತ್ತಾರೆ. ತಮ್ಮ ಅರ್ಥವನ್ನೇ ಪ್ರತಿಪಾದಿಸುತ್ತಾ ಅವರು ಹೀಗೆಯೇ ಅರ್ಥಮಾಡಿರುವ ಕೆಲವು ಸನ್ನಿವೇಶಗಳನ್ನೂ ನಿರೂಪಿಸಿದ್ದಾರೆ. ಶುಕಾನು ಪ್ರಶ್ನೆಯಲ್ಲಿ ಜ್ಞಾನ ಹಾಗೂ ಕರ್ಮಗಳ ತಾರತಮ್ಯದ ಪ್ರಸ್ತಾಪನಡೆ ದಾಗ, **ನ ತೇ ಕರ್ಮ ಪ್ರಶಂಸನ್ತಿ ಕೂಪಂ ನದ್ಯಾಂ ಪಿಬನ್ನಿವ ।** ನದಿಯಲ್ಲಿ ನೀರುಕುಡಿಯುತ್ತಿರುವವನು ಹೇಗೆ ಬಾವಿಯ ನೀರನ್ನು ಪ್ರಶಂಸಿಸುವು ದಿಲ್ಲವೋ–ಹಾಗೆಯೇ ಜ್ಞಾನಿಗಳು ಕರ್ಮವನ್ನು ಕೊಂಡಾಡುವುದಿಲ್ಲ.

ಮಹಾಭಾರತದ ಶಾಂತಿಪರ್ವದಲ್ಲಿ ವಾಸುದೇವನ ಹಿರಿಮೆಯನ್ನು ಹೇಳುವಾಗಲೂ ಇದೇ ಉದಾಹರಣೆಯೇ ಸೂಚಿತವಾಗಿದೆ.

**ತೃಷಿತೋ ಜಾಹ್ನವೀತೀರೇ ಕೂಪಂ ವಾಂಛತಿ ದುರ್ಮತಿಃ ।**

ವಾಸುದೇವನೇ ಸಮೀಪದಲ್ಲಿರುವಾಗ ಅವನನ್ನು ಬಿಟ್ಟು ಬೇರೆಯ ದೇವತೆಯನ್ನು ಅರಸಲು ಹೋಗುವವನು–ಮೂಢನೊಬ್ಬನು ಗಂಗಾತಟ ದಲ್ಲಿ ನಿಂತಿದ್ದು, ನೀರಡಿಕೆಯಾದಾಗ ಬಾವಿಯನ್ನು ಹುಡುಕಿಕೊಂಡು ಹೋದಂತೆಯೇ ಸರಿ.

ಹಾಗಾದರೆ ಶ್ರೀಕೃಷ್ಣನು ವೇದೋಕ್ತಕರ್ಮಗಳನ್ನು ಸಂಪೂರ್ಣವಾಗಿ

ನಿಷೇಧಿಸಿದ್ದಾನೆಯೇ?–ಎಂಬುದಕ್ಕೆ ಉತ್ತರಿಸುತ್ತಾ ಶ್ರೀತಿಲಕರು : 'ಈ ಅರ್ಥ ವನ್ನು ಅನುಮೋದಿಸುವ ಕೆಲವರು 'ಜ್ಞಾನಿಗಳು ಇಂತಹ ವೇದೋಕ್ತಕರ್ಮ ಗಳನ್ನು ಮಾಡಲಾಗದು. ಅವುಗಳನ್ನು ಸರ್ವಥಾ ತ್ಯಜಿಸಬೇಕು' ಎಂದು ವಾದಮಾಡುತ್ತಾರೆ. ಈ ವಾದವು ಗೀತೆಗೆ ಸಮ್ಮತವಲ್ಲ. ಏಕೆಂದರೆ– 'ಯಜ್ಞ-ಯಾಗಾದಿ ಕರ್ಮಗಳನ್ನೂ ನಿಃಸಂಗಬುದ್ಧಿಯಿಂದ ಜ್ಞಾನಿಗಳು ಮಾಡಿಯೇ ತೀರಬೇಕೆಂದು ಭಗವಂತನು ಸ್ಪಷ್ಟವಾಗಿ ಹೇಳಿದ್ದಾನೆ'–ಎಂದು ಹೇಳಿದ್ದಾರೆ.

ನೀಲಕಂಠರ ವ್ಯಾಖ್ಯಾನವು ಶ್ರೀರಾಮಾನುಜರ ವ್ಯಾಖ್ಯೆಯನ್ನೇ ಅನುಸರಿಸುತ್ತದೆ.

**ಸರ್ವತಃ ಸಂಪ್ಲುತೋದಕೇ ಮಹತಿ ಉದಪಾನೇ ಜಲಾಶಯೇ ಪುರುಷಸ್ಯ ಯಾವಾನ್ ಅರ್ಥಃ ತಾವತ್ ಸ್ನಾನಪಾನಾದಿ ಪ್ರಯೋ ಜನಮಾತ್ರಜಲನಿರ್ವರ್ತ್ಯಂ ಭವತಿ । ನ ಕೃತ್ಸ್ನಜಲಾಶಯವ್ಯಯ ನಿರ್ವರ್ತ್ಯಂ।ತಾವಾನೇವಾರ್ಥಂ ವಿಜಾನತೋ ವ್ಯುತ್ಪನ್ನಚಿತ್ತಸ್ಯ ಬ್ರಾಹ್ಮಣಸ್ಯ ಬ್ರಹ್ಮಬುಭೂಷೋಃ ಸರ್ವೇಷು ವೇದೇಷು ವೇದೈಕ ದೇಶೋಪನಿಷಚ್ಛ್ರವಣಮಾತ್ರಂ ನಿರ್ವರ್ತ್ಯೋ ಭವತಿ ನ ಕೃತ್ಸ್ನ ವೇದಾನುಷ್ಠಾನಂ ಸ್ವಸಿದ್ಧ್ಯರ್ಥಮಪೇಕ್ಷ್ಯತೇ'** ಸುತ್ತಲೂ ನೀರು ಚೆಲ್ಲಿ ಹರಿಯುತ್ತಿರುವ ದೊಡ್ಡದಾದೊಂದು ಕೆರೆಯಲ್ಲಿ ಒಬ್ಬ ಮನುಷ್ಯನಿಗೆ ಸ್ನಾನ-ಪಾನಾರ್ಥವಾಗಿ ಒಂದು ಕೊಡ ಮಾತ್ರ ನೀರು ಬೇಕಾಗಬಹುದು. ಜಲಾಶ ಯದ ನೀರು ಪೂರ್ಣವಾಗಿ ಬೇಕಾಗುವುದಿಲ್ಲ. ಅದರಂತೆಯೇ ಬ್ರಹ್ಮತತ್ತ್ವ ನಿಷ್ಠನಾದ ಬ್ರಾಹ್ಮಣನಿಗೆ ಎಲ್ಲ ವೇದಗಳಲ್ಲಿಯೂ ಬ್ರಹ್ಮತತ್ತ್ವವನ್ನು ಪ್ರತಿ ಪಾದಿಸುವ ವೇದೈಕದೇಶವಾದ ಉಪನಿಷತ್ತಿನ ಪಾಠವಾದರೆ ಸಾಕು. ಸರ್ವ ವೇದಗಳನ್ನೂ ಅಧ್ಯಯನಮಾಡುವ ಆವಶ್ಯಕತೆಯಿಲ್ಲ. ಒಂದು ಜನ್ಮದಲ್ಲಿ ಸಕಲವೇದಗಳನ್ನೂ ಅಧ್ಯಯನಮಾಡುವ ಸಾಧ್ಯತೆಯೂ ಇಲ್ಲ.

ಬಾವಿಯಿಂದ ಯಾವ ಪ್ರಯೋಜನವೋ ಅದು ಎಲ್ಲ ಕಡೆಯಲ್ಲೂ ನೀರು ತುಂಬಿರುವ ಮಹಾಜಲಾಶಯದಲ್ಲಿಯೂ ಆಗುತ್ತದೆ. ಹಾಗೆಯೇ ಎಲ್ಲ ವೇದಗಳಲ್ಲಿಯೂ ಯಾವ ಯಾವ ಫಲವೋ ಅದು ಜ್ಞಾನಿಯಾದ ಬ್ರಾಹ್ಮಣನ ಫಲದಲ್ಲಿ ಅಂತರ್ಭೂತವಾಗಿರುತ್ತದೆ–ಎಂಬ ಅಭಿಪ್ರಾಯವನ್ನೇ ಶ್ರೀಮಧ್ವಾಚಾರ್ಯರೂ ಹೇಳಿದ್ದಾರೆ. ಬ್ರಾಹ್ಮಣ ಎಂಬುವುದಕ್ಕೆ ಬ್ರಹ್ಮ

ವನ್ನು ಹೊಂದುವವನು ಅಪರೋಕ್ಷಜ್ಞಾನೀ–ಎಂಬ ಅರ್ಥವನ್ನು ಇವರು ಮಾಡಿದ್ದಾರೆ. **ಬ್ರಹ್ಮ ಅಣತೀತಿ ಬ್ರಾಹ್ಮಣಃ ಅಪರೋಕ್ಷಜ್ಞಾನೀ ಸಃ ಬ್ರಹ್ಮ ಗಚ್ಛತಿ** ಇವರ ವ್ಯಾಖ್ಯಾನದ ಮೇಲೆ ಶ್ರೀಟೀಕಾಚಾರ್ಯರು ಹೀಗೆ ಟೀಕೆ ಮಾಡಿರುತ್ತಾರೆ.

ಜ್ಞಾನಿಯು ಹೊಂದುವ ಫಲ ಕರ್ಮಿಗೆ ಇಲ್ಲ. ಕರ್ಮಿಯು ಹೊಂದುವ (ಸ್ವರ್ಗಾದಿ ಫಲ) ಜ್ಞಾನಿಗಿಲ್ಲ. ಆದುದರಿಂದ ಇಬ್ಬರೂ ಸಮ ಎಂದು ಹೇಳಬಾರದು. ಏಕೆಂದರೆ : ಜ್ಞಾನಿಯು ಹೊಂದುವ ಫಲವು ಮಹತ್ತಾದುದ ರಿಂದ ಸಮುದ್ರಜಲದಂತೆ. ಕರ್ಮಿಗಳ ಫಲವಾದರೋ ಕೂಪೋದಕದಂತೆ ಅತ್ಯಂತ ಅಲ್ಪವಾದುದು. ಆದುದರಿಂದ ಅಲ್ಪವೂ ಅಸ್ಥಿರವೂ ಆದ ಕರ್ಮವನ್ನು ನಿಂದೆಮಾಡಿ ಮಹಾನಂತಫಲಕೊಡುವ ಜ್ಞಾನಸಾಧ್ಯವಾದ ಯೋಗದಲ್ಲಿ ಪ್ರೇರಿಸುವುದು ಯುಕ್ತವೇ ಆಗಿದೆ.

**ತಸ್ಯಾಪರೋಕ್ಷಜ್ಞಾನಸ್ಯ ಪರೋಕ್ಷಜ್ಞಾನಿನಃ ಕರ್ಮಿಣಶ್ಚಾ ನ್ಯೋನ್ಯಫಲಾಭಾವಃ ತಥಾಪಿ ಜ್ಞಾನಿನಃ ಫಲಂ ಮಹಾಸಮುದ್ರೋದಕಮಿವ ಮಹತ್ತ್ವಾತ್ ।ಕರ್ಮಿಣಾಂ ಫಲಂ ತು ಕೂಪೋದಕಮಿವ ಅತ್ಯನ್ತಾಲ್ಪಂ । ಅತಸ್ತಯೋರ್ನ ಸಾಮ್ಯಂ ತಥಾ ಚಾಲ್ಪಸ್ಥಿರಕರ್ಮನಿನ್ದಯಾ ಮಹಾನನ್ತಫಲಸಾಧನೇ ಯೋಗೇ ಪ್ರೇರಣಂ ಯುಕ್ತಮೇವ)**

ಕರ್ಮಯೋಗದ ವಿಷಯವನ್ನು ಶ್ರೀಕೃಷ್ಣನು ಮುಂದುವರಿಸಿ ಹೇಳು ತ್ತಾನೆ. ಅದಕ್ಕೆ ಬುದ್ಧಿಯನ್ನು ಹೇಗೆ ಕೃಷಿಮಾಡಬೇಕೆಂಬುದನ್ನೂ ವಿವರಿಸುತ್ತಾನೆ:

**ಓಂ ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**
**ಮಾ ಕರ್ಮಫಲಹೇತುರ್ಭೂರ್ಮಾ ತೇ ಸಙ್ಗೋಽಸ್ತ್ವಕರ್ಮಣಿ ॥**

ನಿನಗೆ ಕರ್ಮದಲ್ಲಿಯೇ ಅಧಿಕಾರ. ಫಲಗಳಲ್ಲಿರುವುದಿಲ್ಲ. ಕರ್ಮಫಲಕ್ಕೆ ಕಾರಣನಾಗಬೇಡ. ಅಕರ್ಮದಲ್ಲಿ ನಿನಗೆ ಸಂಸರ್ಗವಿಲ್ಲದಿರಲಿ.

* * *

(ನಿನಗೆ ಕರ್ಮಮಾಡಲು ಅಧಿಕಾರವಿದೆ. ಹುಟ್ಟಿದಾಗಲೇ ನಿನಗೆ ನಿನ್ನ ವರ್ಣಾಶ್ರಮದ ಅನುಸಾರವಾಗಿ ಇಂತಹುದೇ ಕರ್ಮವನ್ನು ಮಾಡಬೇಕೆಂಬ ಅಧಿಕಾರವು ಪ್ರಾಪ್ತವಾಗಿಬಿಟ್ಟಿದೆ. ಕರ್ಮವನ್ನಾದರೂ ಹೇಗೆ ಮಾಡಬೇಕು?

ಅರ್ಜುನನಿಗೆ ಕರ್ಮಮಾಡುವ ಅಧಿಕಾರವಿದೆಯೇ ಹೊರತು ಫಲಗಳಲ್ಲಿ ಅಧಿಕಾರವಿಲ್ಲ. ಫಲದ ಮೇಲೆ ಅವನಿಗೆ ಹತೋಟಿಯಿಲ್ಲ. ಫಲವು ಸಿಕ್ಕಿದರೂ ಸಿಕ್ಕಬಹುದು-ಸಿಕ್ಕದೆಯೂ ಇರಬಹುದು. ಬೀಜಬಿತ್ತಿಬರುವುದು ರೈತರ ಕರ್ತವ್ಯವಾಗಿರುತ್ತದೆ. ಅದು ಅವನ ಕರ್ಮಾಧಿಕಾರ. ಬೀಜವು ಮಳೆ ಬಂದು ಮೊಳೆಯಲೂಬಹುದು–ಹುಸಿಯಾಗಲೂಬಹುದು. ಪರೀಕ್ಷೆಯಲ್ಲಿ ಉತ್ತರಪತ್ರಿಕೆಯನ್ನು ಬರೆದು ಬರುವುದು ವಿದ್ಯಾರ್ಥಿಯ ಕರ್ತವ್ಯ. ಫಲವು ಅನಿರೀಕ್ಷಿತ ವಾಗಿ ಏನಾದರೂ ಆಗಿಬಿಡಬಹುದು. ಪರೀಕ್ಷೆಯೇ ಮನ್ನಾ ಆಗಿಬಿಡಬಹುದು. ಆದುದರಿಂದ ಯಾವನಿಗೂ ನಿರೀಕ್ಷಿಸಿದಂತೆಯೇ ಫಲವು ಸಿಕ್ಕುವುದಿಲ್ಲ.

ಆದುದರಿಂದ ಕರ್ಮಮಾಡುವ ವಿಷಯದಲ್ಲಿ ಅರ್ಜುನನಿಗೆ ಅಧಿಕಾರವಿದೆಯೇ ಹೊರತು ಕರ್ಮಫಲದ ಮೇಲೆ ಹತೋಟಿಯಿಲ್ಲ ಎನ್ನುತ್ತಾನೆ, ಶ್ರೀಕೃಷ್ಣ. **ಮಾ ಕರ್ಮಫಲಹೇತುರ್ಭೂಃ** ಕರ್ಮಫಲಕ್ಕೆ ಹೇತುವಾಗಬೇಡ. ಹಿಂದೆ ಉದಾಹರಿಸಿರುವಂತೆ ಕೃಷಿ-ಪರೀಕ್ಷೆಗಳನ್ನೇ ತೆಗೆದುಕೊಂಡರೆ ಫಲಹೇತುವಾಗುವುದೆಂದರೆ ಉದ್ದಿಷ್ಟಫಲವು ಬಂದಿದ್ದರಿಂದ ಅಧಿಕಸಂತೋಷಪಡುವುದು ; ಫಲವು ಬರದಿದ್ದರೆ ದುಃಖಪಡುವುದು. ಇದಕ್ಕೆ ಈಡಾಗಬೇಡ. ನೀನು ಸ್ವತಂತ್ರನಲ್ಲವಾದುದರಿಂದ ಫಲವು ಈಶ್ವರಾಯತ್ತವಾದುದರಿಂದ ಯಾವ ಫಲವೇ ಸಿಕ್ಕಿದರೂ ಅದರಿಂದ ನೀನು ವಿಚಲಿತನಾಗಬೇಡ. **ಕರ್ಮಫಲಹೇತುಃ** ಎಂದರೆ ಕರ್ಮದ ಫಲಕ್ಕೆ ಕಾರಣನಾಗುವವನು. ಮಾ ಭೂಃ ಫಲಾನುಭಾವಿಯಾಗಬೇಡ. **ಮಾ ತೇ ಸಙ್ಗೋಽಸ್ತ್ವಕರ್ಮಣಿ** ಕರ್ಮ ಮತ್ತು ಫಲ ಎರಡೂ ಸಂಲಗ್ನವಾಗಿರುವುದರಿಂದ ಫಲವು ಬೇಡವಾದಲ್ಲಿ ಕರ್ಮವೂ ಬೇಡವೆನ್ನಬೇಡ. ಕರ್ಮವನ್ನು ಬಿಡುವುದರಲ್ಲಿ ನಿನ್ನ ಸಂಗವಿಲ್ಲದಿರಲಿ, ಅರ್ಥಾತ್ ಕರ್ಮವನ್ನು ಬಿಡಬೇಡ. ಫಲಾಭಿಸಂಧಾನವಿಲ್ಲದೇ ಕರ್ಮಮಾಡು.

**ತ್ಯಾಗೋ ನ ಯುಕ್ತ ಇಹ ಕರ್ಮಸು ನಾಪಿ ರಾಗಃ**

**(ಯೋಗವಾಸಿಷ್ಠ ೫-೫-೪)**

ಕರ್ಮದಲ್ಲಿ ತ್ಯಾಗವೂ ಸರಿಯಲ್ಲ. ಆಸಕ್ತಿಯೂ ಸರಿಯಲ್ಲ.

ಶ್ರೀತಿಲಕರು 1) **ಕರ್ಮಣ್ಯೇವಾಧಿಕಾರಸ್ತೇ ।** 2) **ಮಾ ಫಲೇಷು ಕದಾಚನ ।** 3) **ಮಾ ಕರ್ಮಫಲಹೇತುರ್ಭೂಃ ।** 4) **ಮಾ ತೇ ಸಙ್ಗೋಽಸ್ತ್ವಕರ್ಮಣಿ**

ಈ ನಾಲ್ಕು , ಕರ್ಮಯೋಗದ ನಾಲ್ಕು ಮಹಾಸೂತ್ರಗಳೆಂದೂ, ಇದರಲ್ಲಿಯೇ ಕರ್ಮಯೋಗದ ರಹಸ್ಯವು ಸಂಪೂರ್ಣವಾಗಿ ಅಡಗಿದೆ ಯೆಂದೂ ಹೇಳಿದ್ದಾರೆ.

ಅರ್ಜುನನಿಗೆ ಕರ್ಮದಲ್ಲೇ ಅಧಿಕಾರ ; ಜ್ಞಾನದಲ್ಲಿಲ್ಲ. **ಕರ್ಮಣಿ ಏವ ಅಧಿಕಾರಃ ನ ಜ್ಞಾನನಿಷ್ಠಾಯಾಂ ತೇ-ತವ.** ಇದು ಶ್ರೀಶಂಕರರ ಅಭಿಪ್ರಾಯವಾಗಿದೆ. **ಕರ್ಮಫಲಹೇತುಃ** ಎಂಬುದಕ್ಕೆ ಕರ್ಮದ ಫಲವಾದ ಜನ್ಮಕ್ಕೆ ಕಾರಣ–ಎಂದಿವರು ಹೇಳಿದ್ದಾರೆ.

ಅರ್ಜುನನು ಕರ್ಮ ಮತ್ತು ಫಲಗಳಿಗೆ ಕಾರಣನಾಗಬಾರದು. ನಿತ್ಯ ಸತ್ತ್ವಸ್ಥನಾಗಿ ಮುಮುಕ್ಷುವಾಗಿ ಕರ್ಮವನ್ನು ಆಚರಿಸುವಾಗ ತಾನು ಕರ್ತೃವಲ್ಲ; ಫಲಕ್ಕೂ ಕೂಡ ತಾನು ಕಾರಣನಲ್ಲ–ಎಂದು ಅನುಸಂಧಾನ ಮಾಡಿಕೊಳ್ಳಬೇಕು. ಫಲ ಮತ್ತು ಕರ್ಮ ಎರಡನ್ನೂ ಗುಣಗಳಲ್ಲಾಗಲೀ, ಸರ್ವೇಶ್ವರನಲ್ಲಾಗಲೀ ನ್ಯಾಸಮಾಡಿ ಕರ್ಮವನ್ನಾಚರಿಸಬೇಕು ಎಂದು '**ಕರ್ಮಫಲಹೇತುರ್ಭೂಃ**' ಎಂಬುದಕ್ಕೆ ಶ್ರೀ ರಾಮಾನುಜರು ವಿವರಣೆ ಕೊಟ್ಟಿದ್ದಾರೆ.

ಅರ್ಜುನನಂತಹ ಜ್ಞಾನಿಗೆ '**ಮಾ ಕರ್ಮಫಲಹೇತುರ್ಭೂಃ** ಫಲದ ಕಾಮನೆಯನ್ನಿಟ್ಟುಕೊಳ್ಳಬಾರದು' ಎಂದು ಶ್ರೀಕೃಷ್ಣನು ಹೇಳಿರುವಾಗ ಇತರರ ವಿಷಯದಲ್ಲಿ ಹೇಳತಕ್ಕದ್ದೇನಿದೆ?

**ತವ ಜ್ಞಾನಿನೋಽಪಿ ನ ಫಲಕಾಮಕರ್ತವ್ಯತಾ ಕಿಮು ಅನ್ಯೇಷಾಂ** ಎಂದು ಶ್ರೀಮಧ್ವಾಚಾರ್ಯರು ವ್ಯಾಖ್ಯಾನಮಾಡಿರುತ್ತಾರೆ. ಫಲ ಎಂಬುದಕ್ಕೆ ಅವರು ಫಲಕಾಮ ಎಂದು ಅರ್ಥಮಾಡಿರುತ್ತಾರೆ.

ಅರ್ಜುನನು ಜ್ಞಾನೀ ಎಂಬುದನ್ನು ಸಮರ್ಥಿಸುತ್ತಾ–'ಅವನು ನರನ ಅಂಶ. ಅವನೇ ಇಂದ್ರನು. ಮೋಹ-ಶೋಕಗಳು ಉಂಟಾಗಿರುವುದು ಪ್ರಬಲವಾದ ಪ್ರಾರಬ್ಧಕರ್ಮದಿಂದ. ಜ್ಞಾನವು ತಿರಸ್ಕೃತವಾಗಿರುವುದರಿಂದ' ಎಂದಿದ್ದಾರೆ.)

ಬುದ್ಧಿಯೋಗದ ವಿಷಯವಾಗಿಯೇ ಶ್ರೀಕೃಷ್ಣನು ಮುಂದುವರಿದು ಹೇಳುತ್ತಾನೆ :

**ಓಂ ಯೋಗಸ್ಥಃ ಕುರು ಕರ್ಮಾಣಿ ಸಙ್ಗಂ ತ್ಯಕ್ತ್ವಾ ಧನಂಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥**

ಧನಂಜಯ! ಯೋಗದಲ್ಲಿದ್ದುಕೊಂಡು ಸಂಗವನ್ನು ಬಿಟ್ಟು ಸಿದ್ಧಿ- ಅಸಿದ್ಧಿ ಇವೆರಡರಲ್ಲಿಯೂ ಸಮನಾಗಿದ್ದುಕೊಂಡು ಕರ್ಮಗಳನ್ನು ಮಾಡು. ಸಮತ್ವವು ಯೋಗವೆನಿಸುವುದು.

* * *

(ಯೋಗ ಎಂದರೆ ಕರ್ಮಯೋಗ. ಕರ್ಮಯೋಗದಲ್ಲಿದ್ದುಕೊಂಡು ಫಲಾಸಕ್ತಿಯನ್ನು ತೊರೆದು ಸಿದ್ಧಿ ಮತ್ತು ಅಸಿದ್ಧಿ–ಈ ಎರಡರಲ್ಲೂ ಸಮನಾಗಿದ್ದು ಈಶ್ವರಪ್ರೀತ್ಯರ್ಥವಾಗಿ ಕರ್ಮಮಾಡು. ಬುದ್ಧಿಯನ್ನು ನಿಯತವಾಗಿಟ್ಟುಕೊಂಡರೆ ಬುದ್ಧಿಯನ್ನು ಕೃಷಿಮಾಡಿದರೆ ಸಿದ್ಧಿ-ಅಸಿದ್ಧಿ ಅಥವಾ ಫಲಾಫಲಗಳನ್ನು ಸಮನಾಗಿ ಕಾಣಲು ಸಾಧ್ಯವಾಗುತ್ತದೆ. ಸಂಗ ಎಂದರೆ ಫಲಾಸಕ್ತಿ. ಫಲಾಸಕ್ತಿಯನ್ನು ತೊರೆದು ಕರ್ಮಮಾಡು. ಕರ್ಮಫಲಕ್ಕೆ ಅಂಟಿಕೊಳ್ಳಬೇಡ. ಕಾರ್ಯದ ಸಾಧನೆಯಾಗಲಿ–ಸಾಧನೆಯಾಗದಿರಲಿ ಯೋಚಿಸಹೋಗಬೇಡ. 'ಈಶ್ವರಪ್ರೀತಿಗಾಗಿ ಕರ್ಮಮಾಡಿದ್ದೇನೆ. ಕಾರ್ಯವು ಸಿದ್ಧಿಸುವುದು ಅಥವಾ ಸಿದ್ಧಿಸದಿರುವುದು ಅವನಿಗೆ ಸೇರಿದ್ದು. ಅದರ ಸಂಬಂಧ ನನಗಿಲ್ಲ. ಸಿದ್ಧಿಯಾದರೆ ಸಂತೋಷವಿಲ್ಲ. ಸಿದ್ಧಿಸದಿದ್ದರೆ ದುಃಖವಿಲ್ಲ.' ಈ ವಿಧವಾದ ಸಮತ್ವವನ್ನು ಅಭ್ಯಸಿಸು.

ಸಿದ್ಧಿ ಎಂಬುದಕ್ಕೆ ಜ್ಞಾನಪ್ರಾಪ್ತಿಯೆಂದೂ, ಅಸಿದ್ಧಿ ಎಂಬುದಕ್ಕೆ ಜ್ಞಾನ ಪ್ರಾಪ್ತಿಯಾಗದಿರುವುದು–ಎಂದೂ ಶ್ರೀಶಂಕರರು ವ್ಯಾಖ್ಯಾನಮಾಡಿರುತ್ತಾರೆ.

ಶ್ರೀರಾಮಾನುಜರು ಸಿದ್ಧಿ–ಅಸಿದ್ಧಿ ಎಂಬುದಕ್ಕೆ ಯುದ್ಧದಲ್ಲಿ ಉಂಟಾಗುವ ಜಯ-ಅಪಜಯ ಎಂದೂ 'ಸಙ್ಗಂ ತ್ಯಕ್ತ್ವಾ' ಎಂಬುದಕ್ಕೆ ರಾಜ್ಯ- ಬಂಧು ಮುಂತಾದುವುಗಳಲ್ಲಿ ಸಂಗವನ್ನು ತೊರೆದು–ಎಂದೂ ಅರ್ಥಮಾಡಿದ್ದಾರೆ.

ಯೋಗಸ್ಥಃ ಎಂಬುದಕ್ಕೆ ಉಪಾಯಸ್ಥಃ ಎಂದೂ ಸಙ್ಗಂ ಎಂಬುದಕ್ಕೆ ಫಲಸ್ನೇಹಂ ಎಂದೂ ಶ್ರೀಮಧ್ವಾಚಾರ್ಯರು ಅರ್ಥಮಾಡಿರುತ್ತಾರೆ.

ಈ ವಿಧವಾದ ಸಮತ್ವಸಾಧನೆಗೆ ಯೋಗವೆಂದು ಹೆಸರು. ಈ ಸಮತ್ವ ಸಾಧನೆಯು ಬುದ್ಧಿಯ ಕೌಶಲ್ಯದಿಂದ ಅಥವಾ ವ್ಯವಸಾಯದಿಂದ ಮಾತ್ರವೇ ಸಾಧ್ಯವಾಗುವುದು.)

**ಓಂ ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।**
**ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥೪೯॥**

ಧನಂಜಯ! ಕೀಳಾದ ಕರ್ಮವು ಜ್ಞಾನಯೋಗಕ್ಕಿಂತಲೂ ಬಹಳ ದೂರವಿರುತ್ತದೆ. ಬುದ್ಧಿಯನ್ನೇ ಶರಣುಹೊಂದು. ಫಲಹೇತುಗಳಾಗಿರುವವರು (ಫಲಾಶೆಯುಳ್ಳವರು) ಕೃಪಣರಾಗಿರುತ್ತಾರೆ.

* * *

(ಸಿದ್ಧಿ-ಅಸಿದ್ಧಿಗಳಲ್ಲಿ ಸಮಭಾವವುಳ್ಳ, ದ್ವಂದ್ವಾತೀತವಾದ, ವ್ಯವಸಾಯಾತ್ಮಿಕವಾದ ಯೋಗಬುದ್ಧಿಗಿಂತಲೂ ವಾಸನಾಮಯವಾದ ಕರ್ಮವು ಬಹಳ ಕೀಳಾದುದು. ಅಜಗಜಾಂತರ ವ್ಯತ್ಯಾಸವುಳ್ಳದ್ದು. ಯೋಗಬುದ್ಧಿಯು ಕರ್ಮಬಂಧನವನ್ನು ಬಿಡಿಸುತ್ತದೆ. ವಾಸನಾಬುದ್ಧಿಯುಳ್ಳ ಕರ್ಮವು ಜೀವಿಯನ್ನು ಬಂಧಿಸುತ್ತದೆ. ಯೋಗಬುದ್ಧಿಯು ಆತ್ಮಾನಂದಕ್ಕೆ ಹಾದಿಮಾಡಿಕೊಡುತ್ತದೆ. ವಾಸನಾಬುದ್ಧಿಯ ಕರ್ಮವು ಸಂಸಾರಸಾಗರದಲ್ಲಿ ಮುಳುಗಿಸುತ್ತದೆ. ಆದುದರಿಂದ ಸತ್ವನಿಷ್ಠವಾದ ಬುದ್ಧಿಗೆ ಮೊರೆಯಿಡು. ಇಂದ್ರಿಯಾನುವರ್ತಿಯಾದ ಮನಸ್ಸನ್ನು ಇಂದ್ರಿಯಗಳಿಂದ ಹೊರಸೆಳೆದು ಬುದ್ಧಿಯಲ್ಲಿ ಲೀನಗೊಳಿಸು. ಮನಸ್ಸು ಬುದ್ಧಿಯೊಡನೆ ಸೇರಿದರೆ ಆತ್ಮಕ್ಕೆ ಸಮೀಪವಾಗುತ್ತದೆ. ಇಂದ್ರಿಯಗಳೊಡನೆ ಸೇರಿದರೆ ಆತ್ಮಕ್ಕೆ ಬಹುದೂರವಾಗುತ್ತದೆ. ಆದುದರಿಂದ ಬುದ್ಧಿಗೆ ಶರಣಾಗೆಂದರೆ ಯೋಗಬುದ್ಧಿಯೊಳಗೆ, ಸಮತ್ವವಿರುವ ಬುದ್ಧಿಯೊಳಗೆ–ಮನಸ್ಸನ್ನು ವಿಲೀನಗೊಳಿಸು. ಫಲಹೇತುಗಳಾದವರು, ಫಲದಲ್ಲಿ ಆಶೆಯುಳ್ಳವರು–ಕೃಪಣರು, ದೀನರು, ಬಂಧನದಲ್ಲಿ ಸಿಕ್ಕಿಹಾಕಿಕೊಂಡಿರುವವರು. ಕೃಪಣ ಎಂಬ ಶಬ್ದವೇ ಲೋಭದ ಪರಾಕಾಷ್ಠೆಯನ್ನು ತೋರಿಸುತ್ತದೆ.

ಕೃಪಣಶಬ್ದಕ್ಕೆ ಸಂಸಾರಿಗಳೆಂದು ಶ್ರೀರಾಮಾನುಜರೂ, ದೀನರೆಂದು ಶ್ರೀಶಂಕರರೂ ವ್ಯಾಖ್ಯಾನಮಾಡಿರುತ್ತಾರೆ.

ಕೃಪಣರು ಎಂದರೆ ಪರಮಾತ್ಮನನ್ನರಿಯದೇ ಈ ಲೋಕವನ್ನು ಬಿಡುವವರು ; ಬಡಜೀವಿಗಳು.

**ಯೋ ವಾ ಏತದಕ್ಷರಂ ಗಾರ್ಗ್ಯವಿದಿತ್ವಾ ಅಸ್ಮಾಲ್ಲೋಕಾತ್ಪ್ರೈತಿ**
**ಸ ಕೃಪಣಃ** ಬೃ.೩-೮-೧೦)

**ಓಂ ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ।**
**ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಮ್ ॥**

ಬುದ್ಧಿಯಿಂದ ಕೂಡಿದವನು ಪುಣ್ಯ-ಪಾಪಗಳೆರಡನ್ನೂ ಇಲ್ಲಿಯೇ ಬಿಟ್ಟುಬಿಡುತ್ತಾನೆ. ಆದುದರಿಂದ ಯೋಗಯುಕ್ತನಾಗು. ಕರ್ಮಗಳಲ್ಲಿ ಯೋಗವು ಕೌಶಲವು.

* * *

(ಬುದ್ಧಿಯುಕ್ತನಾದವನು, ವ್ಯವಸಾಯಾತ್ಮಿಕವಾದ ಬುದ್ಧಿಯುಳ್ಳವನು ಅನಾದಿಕಾಲದಿಂದ ಸಂಚಿತವಾಗಿರುವ ಬಂಧನಕ್ಕೆ ಕಾರಣವಾದ ಪುಣ್ಯ-ಪಾಪಗಳೆರಡನ್ನೂ ಇಲ್ಲಿಯೇ ಬಿಡುತ್ತಾನೆ.

ಇದುವರೆಗೆ ಶ್ರೀಕೃಷ್ಣನು ಬಹಿರಂಗದ ಫಲಾಫಲಗಳ ವಿಷಯವಾಗಿ ಪ್ರಸ್ತಾಪಮಾಡಿದನು. **ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ.** 'ಸಿದ್ಧಿ ಮತ್ತು ಅಸಿದ್ಧಿ ಎರಡನ್ನೂ ಸಮನಾಗಿ ಕಾಣು. ಕೆಲಸವಾಯಿತೆಂದರೆ ಹಿಗ್ಗಬೇಡ, ಕೆಲಸವಾಗಲಿಲ್ಲವೆಂದರೆ ದುಃಖಿಸಬೇಡ. ಜಯಾಪಜಯಗಳನ್ನು ಒಂದಾಗಿ ಭಾವಿಸು.'

ಇದನ್ನು ಉಪದೇಶಿಸಿದನಂತರ ಪರೋಕ್ಷಫಲವಿಷಯದಲ್ಲಿ ಉಪದೇಶಿಸುತ್ತಾನೆ. ಪಾಪ-ಪುಣ್ಯಗಳು ಪರೋಕ್ಷಫಲಗಳು. ಅವು ಮನುಷ್ಯನಿಗೆ ತಿಳಿಯದಂತೆಯೇ ಸಂಚಿತವಾಗುತ್ತಿರುತ್ತವೆ. 'ಬುದ್ಧಿವಂತನಾದ ಮನುಷ್ಯನು ಪುಣ್ಯ-ಪಾಪಗಳೆರಡನ್ನೂ ಇಲ್ಲಿಯೇ ಬಿಡುತ್ತಾನೆ'—ಎಂದು ಶ್ರೀಕೃಷ್ಣನು ಹೇಳುತ್ತಾನೆ.

ನಮ್ಮ ಪೂರ್ವಜರು ನಮ್ಮ ಪ್ರತಿಯೊಂದು ಕರ್ಮಗಳಲ್ಲಿಯೂ ಈ ಬುದ್ಧಿಯೋಗವನ್ನು ಅಳವಡಿಸಿಬಿಟ್ಟಿದ್ದಾರೆ. ಪ್ರತಿಯೊಂದು ಕರ್ಮದ ಕಡೆಯಲ್ಲೂ ನಾವು **'ಕೃಷ್ಣಾರ್ಪಣಮಸ್ತು'** ಎನ್ನುತ್ತೇವೆ. ಆದರೆ ಹೀಗೆ ಹೇಳುವಾಗ ನಮ್ಮ ಬುದ್ಧಿಯು ಕೆಲಸಮಾಡುವುದಿಲ್ಲ. ಅಭ್ಯಾಸಬಲದಿಂದ ನಾಲಿಗೆಯು ಉಚ್ಚರಿಸಿಬಿಡುತ್ತದೆ. ಈ ಕಾರಣದಿಂದಲೇ ನಾವು ಬಂಧನಕ್ಕೆ ಒಳಗಾಗುತ್ತಿದ್ದೇವೆ. ಪಾಪ-ಪುಣ್ಯಗಳನ್ನು ಗಳಿಸುತ್ತಿದ್ದೇವೆ. 'ಶ್ರೀಕೃಷ್ಣಾರ್ಪಣಮಸ್ತು' ಎನ್ನುವಾಗ ಮನಃಪೂರ್ವಕವಾಗಿ (ಬುದ್ಧಿಪೂರ್ವಕವಾಗಿ) ಸರ್ವಾಂತರ್ಯಾಮಿಯಾದ ಸಚ್ಚಿದಾನಂದಮೂರ್ತಿಯನ್ನು ನೆನೆದು ಅವನ ದಿವ್ಯಪಾದಾರವಿಂದಗಳಲ್ಲಿ ನಾವು ಮಾಡಿದ ಕರ್ಮಫಲವನ್ನು ಸಮರ್ಪಿಸಿ

ಬಿಟ್ಟರೆ ನಮಗೆ ಪುಣ್ಯ-ಪಾಪಗಳ ಸೋಂಕೇ ಇರುವುದಿಲ್ಲ. ಪಾಪಕರ್ಮವನ್ನು ಮಾಡಿ 'ಶ್ರೀಕೃಷ್ಣಾರ್ಪಣಮಸ್ತು' ಎನ್ನಬಹುದೇ? ಸಮತ್ವವಿರುವ ಬುದ್ಧಿಯು ವಿಧಿ-ನಿಷೇಧಗಳನ್ನು ತರ್ಕಿಸಿ ಹೇಳುತ್ತದೆ. ಅದರಂತೆ ನಡೆದರೆ ಪಾಪಕರ್ಮಮಾಡಲು ಅವಕಾಶವೇ ಇರುವುದಿಲ್ಲ. ಆದುದರಿಂದ 'ಶ್ರೀಕೃಷ್ಣಾರ್ಪಣಮಸ್ತು' ಎಂಬುದು ಸತ್ಕರ್ಮಗಳಿಗೆ ಮಾತ್ರವೇ ಅನ್ವಯಿಸುವುದಾಗಿದೆ. ಈ ವಿಧವಾದ ಸಮತ್ವಬುದ್ಧಿಯಿಂದ ಸಂಚಿತಪಾಪಗಳನ್ನು ಈಗಲೇ ಕಳೆದುಕೊಳ್ಳುತ್ತಾನೆಂದೂ ಹೇಳಬಹುದಾಗಿದೆ. ಆದುದರಿಂದ ನಾವು ಮಾಡುತ್ತಿರುವ ನಿತ್ಯ-ನೈಮಿತ್ತಿಕಕರ್ಮಗಳನ್ನು ಭಾವನಾಪೂರ್ವಕವಾಗಿ ಮಾಡಬೇಕು. ಆಗ ನಾವು ಗೀತೆಯನ್ನು ನಿತ್ಯವೂ ಅನುಷ್ಠಾನದಲ್ಲಿಟ್ಟುಕೊಂಡಂತೆಯೇ ಆಗುತ್ತದೆ.

ಶ್ರೀಕೃಷ್ಣನು ಮುಂದುವರಿದು ಹೇಳುತ್ತಾನೆ. **ತಸ್ಮಾದ್ಯೋಗಾಯ ಯುಜ್ಯಸ್ವ**–ಆದುದರಿಂದ ಸಮತ್ವಬುದ್ಧಿಯ ಸಾಧನೆಗಾಗಿ ಪ್ರಯತ್ನಿಸು. ಹೀಗೆ ಶ್ರೀಕೃಷ್ಣನು ಹೇಳಿರುವುದರಿಂದಲೇ ಇದರ ಸಾಧನೆ ಬಹಳ ಕಷ್ಟವಾದುದೆಂದು ಅರ್ಥವಾಗುತ್ತದೆ. ಯಾವ ಕಾರ್ಯವೂ ಅಭ್ಯಾಸಮಾಡದೇ ಸಿದ್ಧಿಸುವುದಿಲ್ಲ. ಪ್ರಾಪಂಚಿಕವ್ಯವಹಾರದಲ್ಲಿಯೇ ಒಂದು ಕಾರ್ಯವನ್ನು ಸಾಧಿಸಿಕೊಳ್ಳಬೇಕಾದರೆ ಅನೇಕವರ್ಷಗಳವರೆಗೆ ಪ್ರಯತ್ನಮಾಡುತ್ತಲೇ ಇರಬೇಕಾಗುತ್ತದೆ. ಕೈಗೆ ಸಿಕ್ಕದ ಬುದ್ಧಿಯನ್ನು ನಿಯಂತ್ರಿಸಬೇಕಾದರೆ ಇನ್ನೆಷ್ಟು ವರ್ಷಗಳ ಸಾಧನೆ ಬೇಕಾಗಬಹುದು? ಆದರೂ ನಿರಾಶೆಹೊಂದುವ ಕಾರಣವಿಲ್ಲ. ಎಲ್ಲ ಆನಂದಗಳಿಗೂ ಕೋಟಿಪಾಲು ಮಿಗಿಲಾದ ಬ್ರಹ್ಮಾನಂದವನ್ನು ಅನುಭವಿಸಬೇಕಾದರೆ ಅದಕ್ಕಾಗಿ ಜನ್ಮ-ಜನ್ಮಾಂತರಗಳಲ್ಲಿಯೂ ಪ್ರಯತ್ನ ಮಾಡುತ್ತಲೇ ಇರಬೇಕಾಗುತ್ತದೆ. ಈ ಶ್ಲೋಕದಲ್ಲಿ ಕಡೆಯ ಮಾತಾಗಿ ಶ್ರೀಕೃಷ್ಣನು '**ಯೋಗಃ ಕರ್ಮಸು ಕೌಶಲಮ್**' ಎನ್ನುತ್ತಾನೆ. ಈ ವಾಕ್ಯಕ್ಕೆ ಒಬ್ಬೊಬ್ಬರು ಒಂದೊಂದು ವಿಧವಾಗಿ ಅರ್ಥಮಾಡುತ್ತಾರೆ. **ಕರ್ಮಸು ಕೌಶಲಂ–ಯೋಗ ಇತಿ ಉಚ್ಯತೇ** ಎಂದೊಬ್ಬರು ಹೇಳಿದರೆ ಮತ್ತೊಬ್ಬರು **ಕರ್ಮಸು ಯೋಗಃ ಕೌಶಲಂ** ಎಂದು ಹೇಳುತ್ತಾರೆ.

ಪರ್ಯಾಯತಃ ಎರಡೂ ಒಂದೇ ಅರ್ಥಕೊಡುತ್ತವೆ. '**ಸಮತ್ವಂ ಯೋಗ ಉಚ್ಯತೇ**' ಎಂದು ಯೋಗಶಬ್ದಾರ್ಥವನ್ನು ಈ ಹಿಂದೆ ೪೮ನೆಯ

ಶ್ಲೋಕದಲ್ಲಿ ಹೇಳಿರುವಾಗ ಪುನಃ ಅದೇ ಯೋಗಶಬ್ದಕ್ಕೆ **ಕರ್ಮಸು ಕೌಶಲಂ ಯೋಗಃ**ಎಂದು ಶ್ರೀಕೃಷ್ಣನೂ ನಿರೂಪಣೆಮಾಡಲು ಹೊರಟಿಲ್ಲ. ಆದುದರಿಂದ **ಕರ್ಮಸು** ಕರ್ಮಗಳಲ್ಲಿ **ಯೋಗಃ** ಸಮತ್ವಬುದ್ಧಿಯು **ಕೌಶಲಂ** ಚಾತುರ್ಯವು. 'ಮನುಷ್ಯನನ್ನು ಬಂಧನಕ್ಕೆ ಸಿಕ್ಕಿಸುವ ಕರ್ಮದ ಸ್ವಭಾವವನ್ನೇ ಬದಲಾಯಿಸುವ ಯೋಗಬುದ್ಧಿಯನ್ನು ಕರ್ಮಗಳಲ್ಲಿ ಯೋಜಿಸುವುದು ಕೌಶಲವಲ್ಲದೇ ಮತ್ತೇನು?' ಎಂದು ಒಬ್ಬರ ವ್ಯಾಖ್ಯಾನವಾಗಿದೆ.

'ಸಮಬುದ್ಧಿಯೇ ಶುದ್ಧವಾದ ಆಚರಣೆ ಎಂದರೆ ಕರ್ಮಯೋಗದ ಮೂಲಕವಾಗಿ ಕರ್ಮಮಾಡಿಯೂ ಕರ್ಮದ ಬಾಧೆಯು ನಿನಗಾಗದಂತಹ 'ಯೋಗ' (ಯುಕ್ತಿ) ವನ್ನು ಹೇಳುವೆನೆಂದು ಭಗವಂತನು ೩೯ನೆಯ ಶ್ಲೋಕದಲ್ಲಿ ಹೇಳಿದ ಮೇರೆಗೆ ಈ ಶ್ಲೋಕದಲ್ಲಿ–'ಕರ್ಮಮಾಡುವಾಗ ಬುದ್ಧಿಯನ್ನು ಸ್ಥಿರವಾಗಿಯೂ, ಸಮವಾಗಿಯೂ, ಪವಿತ್ರವಾಗಿಯೂ, ಶುದ್ಧವಾಗಿಯೂ ಇಡುವುದೇ ಆ ಯುಕ್ತಿ ಅಥವಾ ಕೌಶಲವು. ಆ ಕೌಶಲಕ್ಕೇ ಯೋಗವೆನ್ನುತ್ತಾರೆ'–ಎಂದು ಹೇಳಿ ಯೋಗಕ್ಕೆ ಎರಡನೆಯ ಬಾರಿಗೆ ಶ್ರೀಕೃಷ್ಣನು ವ್ಯಾಖ್ಯೆಮಾಡಿರುತ್ತಾನೆ.

ಏಕೆಂದರೆ : ಅರ್ಜುನನಿಗೆ ಸತ್ತ್ವಶುದ್ಧಿಯಿಂದ ಜ್ಞಾನಪ್ರಾಪ್ತಿಯಾಗಿರುತ್ತದೆ. ಜ್ಞಾನಾಗ್ನಿಯು ಎಲ್ಲ ಕರ್ಮಗಳನ್ನು ಧ್ವಂಸಮಾಡುತ್ತದೆ. **ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇಽರ್ಜುನ ।** ಆದುದರಿಂದ ಅರ್ಜುನನು ಆ ಸಮತ್ವಯೋಗಕ್ಕಾಗಿ ಪ್ರಯತ್ನಿಸಬೇಕು. ಕರ್ಮಗಳನ್ನು ಆಚರಿಸುವಾಗ ಯೋಗವು ದೊಡ್ಡ ಕೌಶಲವೇ ಆಗಿದೆ. **ತದ್ಧಿ ಕೌಶಲಂ ಯತ್ ಬನ್ಧಸ್ವಭಾವಾನ್ಯಪಿ ಕರ್ಮಾಣಿ ಸಮತ್ವಬುದ್ಧ್ಯಾ ಸ್ವಭಾವಾತ್** ನಿವರ್ತನ್ತೇ (ಶಂ.ಭಾ.)

'ಅತಿಸಾಮರ್ಥ್ಯದಿಂದ ಸತ್ತ್ವಶುದ್ಧಿಯು ಅರ್ಜುನನಿಗೆ ಸಾಧ್ಯವಾಗುವುದು'–ಎಂದು ಶ್ರೀರಾಮಾನುಜರು ಹೇಳಿದ್ದಾರೆ.)

**ಓಂ ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।**
**ಜನ್ಮಬನ್ಧವಿನಿರ್ಮುಕ್ತಾಃ ಪದಂ ಗಚ್ಛನ್ತ್ಯನಾಮಯಮ್ ॥೫೧॥**

ಬುದ್ಧಿಯುಳ್ಳವರು ಕರ್ಮಜವಾದ ಫಲವನ್ನು ಬಿಟ್ಟು ಜ್ಞಾನಿಗಳಾಗಿ

ಹುಟ್ಟು-ಸಾವುಗಳ ಬಂಧನದಿಂದ ವಿಮುಕ್ತರಾಗಿ ಆಮಯರಹಿತವಾದ (ಉಪದ್ರವರಹಿತವಾದ) ಪರಮಪದವನ್ನು ಹೊಂದುತ್ತಾರೆ.

* * *

(ವ್ಯವಸಾಯಾತ್ಮಿಕವಾದ ಬುದ್ಧಿಯುಳ್ಳ ದ್ವಂದ್ವಾತೀತರಾದ ಸಮತ್ವ ಬುದ್ಧಿಯುಳ್ಳ ಜ್ಞಾನಿಗಳು ಕರ್ಮಜನ್ಯವಾದ ಫಲವನ್ನು ಪರಿತ್ಯಜಿಸಿರುತ್ತಾರೆ. ಇಲ್ಲಿಯೂ ಸಹ ಭಗವಂತನು ಕರ್ಮವನ್ನು ತ್ಯಜಿಸುತ್ತಾರೆಂದು ಹೇಳಿಲ್ಲ. 'ಕರ್ಮದಿಂದ ಪ್ರಾಪ್ತವಾಗುವ ಶುಭಾಶುಭಫಲಗಳನ್ನು ಪರಿತ್ಯಜಿಸುತ್ತಾರೆ' ಎಂದು ಹೇಳಿದ್ದಾನೆ. ಒಳ್ಳೆಯ ಕರ್ಮಮಾಡಿದರೆ ಪುಣ್ಯದ ಆರ್ಜನೆ ಯಾಗುವುದಂತೂ ನಿಜ. ಕರ್ಮಕ್ಕೊಂದು ಫಲವಿದ್ದೇ ಇರುತ್ತದೆ. ಆ ಫಲ ವನ್ನೂ ಸಹ ಶ್ರೀಕೃಷ್ಣಾರ್ಪಣಬುದ್ಧಿಯಿಂದ ಪರಮಾತ್ಮನಿಗೇ ಸಮರ್ಪಿಸಿ ಬಿಡಬೇಕು. ಬಂದ ಹಣವನ್ನೆಲ್ಲಾ ಖರ್ಚುಮಾಡುತ್ತಿದ್ದರೆ ಲೆಕ್ಕವಿಡಬೇಕಾದ ಆವಶ್ಯಕತೆಯೇ ಇಲ್ಲ, ಅಲ್ಲವೇ? ಕರ್ಮಜನ್ಯವಾದ ಪುಣ್ಯವು ಬೇಡವೆನ್ನು ವವನು ನಿತ್ಯಶುದ್ಧನಾಗಿರುತ್ತಾನೆ. ಹಿಂದೆ ವಿವರಿಸಿದಂತೆ ಪುಣ್ಯವು ಹೇಗೆ ಪರೋಕ್ಷಫಲವೋ ಹಾಗೆಯೇ ಅದರ ಪರಿತ್ಯಾಗವೂ ಪರೋಕ್ಷವೇ. ಅದು ಬುದ್ಧಿಯಲ್ಲೇ ಆಗತಕ್ಕದ್ದು. ಕರ್ತವ್ಯಕ್ಕಾಗಿ ಕರ್ಮಮಾಡಿದ್ದೇನೆ. ಕರ್ತವ್ಯದೃಷ್ಟಿ ಯಿಂದ ಪೂಜೆಮಾಡಿದ್ದೇನೆ. ಪೂಜೆಯೂ ನಿನಗೇ ಸಲ್ಲಲಿ—ಪೂಜಾಫಲವೂ ನಿನಗೇ ಅರ್ಪಿತವಾಗಲಿ ಎಂಬ ವಿಶುದ್ಧಭಾವನೆಯಿಂದ ಶ್ರೀಕೃಷ್ಣಾರ್ಪಣಮಸ್ತು ಎಂಬ ಮಹಾಮಂತ್ರವನ್ನು ಹೇಳಿ ಪರಮಾತ್ಮನಿಗೇ ಅರ್ಪಿಸಿಬಿಡಬೇಕು. ಇದರ ಪ್ರಯೋಜನವೇನು? ಬಂಧನದಿಂದ ವಿಮುಕ್ತನಾಗುತ್ತಾನೆ. ಕರ್ಮದ ಫಲಗಳೇ ಮನುಷ್ಯನ ಜನನ-ಮರಣಗಳಿಗೆ ಕಾರಣಗಳಾಗುತ್ತವೆ. ಒಳ್ಳೆಯ ಕರ್ಮವನ್ನು ಮಾಡಿದವನು ಕರ್ಮಫಲವನ್ನು ತನಗಾಗಿಯೇ ಉಳಿಸಿಕೊಂಡಿದ್ದರೆ ಉತ್ತಮಯೋನಿಯಲ್ಲಿ ಜನ್ಮತಾಳುತ್ತಾನೆ. ಈ ವಿಷಯ ವನ್ನು ಶ್ರೀಕೃಷ್ಣನು ಮುಂದೆ ವಿವರಿಸಿ ಹೇಳುತ್ತಾನೆ. ನಾವು ಕರ್ಮಫಲ ವನ್ನುಳಿಸಿಕೊಳ್ಳದೇ ಪರಿತ್ಯಜಿಸಿಬಿಟ್ಟರೆ ಜನನ-ಮರಣಗಳಿಗೆ ಅವಕಾಶವೇ ಇರುವುದಿಲ್ಲ. ಜನನ-ಮರಣಬಂಧನದಿಂದ ನಿರ್ಮುಕ್ತರಾದ ಜ್ಞಾನಿಗಳು ಉಪದ್ರವ ರಹಿತವಾದ ವಿಷ್ಣುಪದವನ್ನು ಸೇರುತ್ತಾರೆ. ಕಠೋಪನಿಷತ್ತಿನಲ್ಲಿ ಫಲತ್ಯಾಗದ ವಿಷಯವಾಗಿ ಹೀಗೆ ಹೇಳಿದ್ದಾರೆ :

**ಯದಾ ಸರ್ವೇ ಪ್ರಮುಚ್ಯನ್ತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ ।**
**ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥**

ಈತನ ಬುದ್ಧಿಯನ್ನು ಆಶ್ರಯಿಸಿಕೊಂಡಿರುವ ಕಾಮಗಳೆಲ್ಲವೂ ಯಾವಾಗ ನಾಶವಾಗುವುವೋ–ಆಗ ಮರ್ತ್ಯನು ಅಮೃತನಾಗುತ್ತಾನೆ. ಇಲ್ಲಿಯೇ ಬ್ರಹ್ಮಜ್ಞಾನವನ್ನು ಪಡೆಯುತ್ತಾನೆ.)

**ಓಂ ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗನ್ತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥೫೨॥**

ಯಾವಾಗ ನಿನ್ನ ಬುದ್ಧಿಯು ಮೋಹರೂಪವಾದ ಅವಿವೇಕವೆಂಬ ಕಾಲುಷ್ಯವನ್ನು ದಾಟಿಬಿಡುವುದೋ–ಆಗ ಕೇಳಬೇಕಾಗಿರುವುದರ ವಿಷಯದಲ್ಲಿಯೂ–ಹಿಂದೆ ಕೇಳಿದ ವಿಷಯದಲ್ಲಿಯೂ ನಿರ್ವೇದವನ್ನು ಪಡೆಯುವೆ.

* * *

(ಈಗ ನಿನ್ನ ಬುದ್ಧಿಯು ಮೋಹಕಲಿಲವಾಗಿದೆ. ಅವಿವೇಕವೆಂಬ ಮೋಹದಿಂದ ಕಾಲುಷ್ಯವನ್ನು ಹೊಂದಿದೆ. ಆ ಬುದ್ಧಿಯೀಗ ವ್ಯವಸಾಯಾತ್ಮಿಕವಾಗಬೇಕು. ದ್ವಂದ್ವಾತೀತವಾಗಬೇಕು. ಸಮತ್ವವನ್ನು ಹೊಂದಬೇಕು. ವ್ಯವಸಾಯಾತ್ಮಿಕವಾದ ಈ ಶುದ್ಧಬುದ್ಧಿಯು ಮೋಹಕಲಿಲವನ್ನು ದಾಟಿದೊಡನೆಯೇ ಅದರ ಪರಿಣಾಮವೇನಾಗುವುದೆಂಬುದನ್ನು ಹೇಳುತ್ತೇನೆ. ಕೇಳಿದ ವಿಷಯದಲ್ಲಿ ಮತ್ತು ಕೇಳಬೇಕಾದ ವಿಷಯದಲ್ಲಿ ವೈರಾಗ್ಯವನ್ನು ಹೊಂದುವೆ. (ಔದಾಸೀನ್ಯವನ್ನು ಹೊಂದುವೆ.)

ಅನುಭವದಿಂದ ವಿಷಯವು ನೇರವಾಗಿ ಗೋಚರವಾಗುವುದರಿಂದ ಕೇಳಿ ತಿಳಿದುಕೊಳ್ಳಬೇಕಾದುದು ಅವನಿಗೆ ಏನೂ ಉಳಿಯುವುದಿಲ್ಲ. ಆನಂದಾನುಭವದಲ್ಲಿರುವುದರಿಂದ ಹಿಂದೆ ಕೇಳಿದುದರ ಸ್ಮೃತಿಯೂ ಅವನಿಗಿರುವುದಿಲ್ಲ. ಆ ಸ್ಥಿತಿಯಲ್ಲಿ ಕೇಳಬೇಕಾದ್ದು ; ಕೇಳಿದುದು–ಎಲ್ಲವೂ ನಿಷ್ಫಲವೇ ಸರಿ.

ಆತ್ಮಾರಾಮನಾಗಿ ಪೂರ್ಣತೃಪ್ತಿಯಲ್ಲಿರುವುದರಿಂದ ಬೇರೆ ಯಾವುದರ ಆವಶ್ಯಕತೆಯೂ ಇರುವುದಿಲ್ಲ ; ಬೇರೆ ಯಾವುದರ ಸ್ಮೃತಿಯೂ ಇರುವುದಿಲ್ಲ.

ಈ ಶ್ಲೋಕದ ಉತ್ತರಾರ್ಧಕ್ಕೆ ಶ್ರೀರಾಮಾನುಜಾಚಾರ್ಯರು ಹೀಗೆ ಅರ್ಥಮಾಡಿರುತ್ತಾರೆ :

ಇದಕ್ಕೆ ಹಿಂದೆ ಫಲವೇ ಮುಂತಾದ ಯಾವುದನ್ನು ತ್ಯಾಜ್ಯವೆಂದು

ನನ್ನಿಂದ ಕೇಳಿದೆಯೋ ಮತ್ತು ಮುಂದೆ ಕೇಳುವೆಯೋ ಅದರ ವಿಷಯದಲ್ಲಿ ಸಹಜವಾಗಿ ತಾನಾಗಿಯೇ ವಿರಕ್ತಿಯನ್ನು ಹೊಂದುವೆ.

**ಇತಃ ಪರಂ ತ್ಯಾಜ್ಯತಯಾ ಶ್ರುತಸ್ಯ ಫಲಾದೇಃ ಇತಃ ಪಶ್ಚಾತ್ ಶ್ರೋತವ್ಯಸ್ಯ ಚ ಕೃತೇ ಸ್ವಯಮೇವ ನಿರ್ವೇದಂ ಗನ್ತಾಸಿ.**

ಕೇಳಬೇಕಾಗಿರುವ ಮತ್ತು ಕೇಳಿರುವ ವಿಷಯಗಳಲ್ಲಿ ಉಪಾದೇಯ ವಾದ ಅಂಶವೂ ಉಂಟು. ಅದರ ಬಗ್ಗೆ ನಿರ್ವೇದ (ವೈರಾಗ್ಯ ) ಉಂಟಾಗು ವುದಿಲ್ಲ. ಅವುಗಳಲ್ಲಿ ತ್ಯಾಜ್ಯವೆಂದು ಹೇಳಲ್ಪಟ್ಟಿರುವ ಫಲ ಮುಂತಾದ ವಿಷಯಗಳಲ್ಲಿ ಮಾತ್ರ ನಿರ್ವೇದವುಂಟಾಗುತ್ತದೆ.

**ನಹಿ ಶ್ರೋತವ್ಯೇಷು ಶ್ರುತೇಷು ಚ ಉಪಾದೇಯಾಂಶಃ ನಿರ್ವೇದಹೇತುಃ** ಎಂದು ಶ್ರೀವೇದಾಂತದೇಶಿಕರು ವಿವರಣೆನೀಡಿದ್ದಾರೆ.

ಶ್ರೀಮಧ್ವಾಚಾರ್ಯರು ನಿರ್ವೇದ ಎಂಬ ಪದಕ್ಕೆ **'ನಿತರಾಂ ಲಾಭಃ'** ಹೇರಳವಾದ ಲಾಭ–ಎಂದು ಅರ್ಥಮಾಡಿದ್ದಾರೆ.

ಮುಮುಕ್ಷುವು ಕರ್ಮಗಳನ್ನು ಎಲ್ಲಿಯವರೆಗೆ ಮಾಡಬೇಕು?– ಎಂದರೆ ಬುದ್ಧಿಯು ಮೋಹದ ಕಾಲುಷ್ಯವನ್ನು ಕಳೆದುಕೊಂಡು ಭಗವಂತನಿಂದ ಕೇಳಬೇಕಾಗಿರುವ ವಿಷಯಗಳ ಲಾಭವನ್ನು ಚೆನ್ನಾಗಿ ಪಡೆಯುವವರೆಗೂ ಕರ್ಮಗಳನ್ನು ಮಾಡುತ್ತಿರಬೇಕು ಎಂದು ಅವರ ಭಾವ.

ನಿರ್ವೇದ ಎಂಬ ಶಬ್ದಕ್ಕೆ ಲಾಭ ಎಂಬ ಅರ್ಥವನ್ನು **ತಸ್ಮಾದ್ಬ್ರಾಹ್ಮಣಃ ಪಾಣ್ಡಿತ್ಯಂ ನಿರ್ವಿದ್ಯ** ಎಂಬ ಪ್ರಯೋಗದಲ್ಲಿಯೂ ಕಾಣಬಹುದೆಂದು ಅವರು ಹೇಳುತ್ತಾರೆ.

ಜ್ಞಾನಿಗಳಿಗೆ ಭಗವಂತನ ಮಹಿಮೆ ಮುಂತಾದುವುಗಳನ್ನು ಹೇಳುವುದ ರಲ್ಲಿ ವೈರಾಗ್ಯವು ಹೇಗೆ ಉಂಟಾದೀತು?

**ಆತ್ಮಾರಾಮಾ ಹಿ ಮುನಯೋ ನಿರ್ಗ್ರನ್ಥಾ ಅಪ್ಯುರುಕ್ರಮೇ ।**
**ಕುರ್ವನ್ತ್ಯಹೈತುಕೀಂ ಭಕ್ತಿಂ ಇತ್ಥಂ ಭೂತಗುಣೋ ಹರಿಃ ॥**

ಶ್ರೀಮದ್ಭಾಗವತ ೭-೧೦

ಆದುದರಿಂದ ನಿರ್ವೇದ ಎನ್ನುವ ಪದಕ್ಕೆ ವೈರಾಗ್ಯ ಎಂದು ಅರ್ಥ ಮಾಡಬಾರದು. ನಿತರಾಂ ಲಾಭಃ ಎಂದೇ ಅರ್ಥಮಾಡಬೇಕು, ಎಂದೂ ಅವರು ಉಪಪತ್ತಿಯನ್ನು ತೋರಿಸುತ್ತಾರೆ.)

**ಓಂ ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥೫೩॥**

ಅನೇಕವಿಷಯಗಳನ್ನು ಕೇಳಿ ವಿಕ್ಷೇಪಗೊಂಡಿರುವ ನಿನ್ನ ಬುದ್ಧಿಯು ಯಾವಾಗ ಸಮಾಧಿಯಲ್ಲಿ ನಿಶ್ಚಲವಾಗಿ ಅಲುಗಾಡದೇ ನಿಂತುಕೊಳ್ಳುತ್ತದೆಯೋ ಆಗ ನೀನು ಯೋಗವನ್ನು ಪಡೆಯುವೆ.

* * *

(ಬುದ್ಧಿಯು ಒಂದು ಸರೋವರವಿದ್ದಂತೆ. ಅದರಲ್ಲಿರುವ ನೀರು ತಿಳಿಯಾಗಿದ್ದರೆ ಅದರ ತಳಭಾಗವೂ ಸುಸ್ಪಷ್ಟವಾಗಿ ಕಾಣುತ್ತದೆ. ನೀರಿನಲ್ಲಿ ಅಲೆಗಳಿದ್ದರೆ ತಳಭಾಗವು ಕಾಣಿಸುವುದಿಲ್ಲ. ಅಲೆಗಳಿಗೆ ಕಾರಣ ಗಾಳಿಯ ಹೊಡೆತ. ಹಾಗೆಯೇ ನಮ್ಮ ಬುದ್ಧಿಯೂ ಸಹ ಸ್ವಚ್ಛವಾಗಿದ್ದರೆ ಬುದ್ಧಿಯ ಅಂತರಾಳದಲ್ಲಿರುವ ಆತ್ಮವಸ್ತುವನ್ನು ಕಾಣಬಹುದು. ಆದರೆ ಅನೇಕವಿಷಯಗಳ ಶ್ರವಣವೆಂಬ ಬಿರುಗಾಳಿಯು ಬೀಸುತ್ತಿದ್ದರೆ ಬುದ್ಧಿಯ ಅಲೆಗಳು ಚಲಿಸುತ್ತಿರುತ್ತವೆ. ಇದನ್ನೇ ಶ್ರೀಕೃಷ್ಣನು **ಶ್ರುತಿವಿಪ್ರತಿಪನ್ನಾ ತೇ ಮತಿಃ** ಎನ್ನುತ್ತಾನೆ.

ಅನೇಕವಿಧವಾದ ಸಾಧ್ಯ-ಸಾಧನಗಳನ್ನು ಹೊಗಳುವ ವೇದವಚನಗಳಿಂದ ನಿನ್ನ ಮನಸ್ಸು ಕದಡಿಹೋಗಿದೆ–ಎನ್ನುತ್ತಾನೆ ಶ್ರೀಕೃಷ್ಣ. ಸಾಧನವೆಂದರೆ ಜ್ಯೋತಿಷ್ಟೋಮಾದಿಗಳು. ಸಾಧ್ಯವೆಂದರೆ ಸ್ವರ್ಗಾದಿಗಳು. ಮುಖ್ಯವಾಗಿ ಕಾಮ್ಯಕರ್ಮಗಳೆಂದರ್ಥ. ಕಾಮ್ಯಕರ್ಮಗಳನ್ನೂ ಮತ್ತು ಅವುಗಳ ಫಲಗಳನ್ನೂ ಕೇಳುವಾಗ ಎಲ್ಲರ ಮನಸ್ಸೂ ಉತ್ಸುಕತೆಯಿಂದಲೇ ಕೂಡಿರುತ್ತದೆ. 'ಸಕಲೇಷ್ಟಪ್ರದವಾದ ಸತ್ಯನಾರಾಯಣವ್ರತವು ಲಕ್ಷಸಂಖ್ಯೆ ಯಲ್ಲಿ ನಡೆಯುತ್ತದೆ'–ಎಂಬುದನ್ನು ಪತ್ರಿಕೆಯಲ್ಲಿ ಓದಿದೊಡನೆಯೇ ನಾವು ಕಾಣಿಕೆಯನ್ನು ಕಳುಹಿಸಲು ತವಕಿಸುತ್ತೇವೆ.

'ಕಾಮ್ಯಕರ್ಮಾದಿಗಳ ಶ್ರವಣದಿಂದ ನಿನ್ನ ಮನಸ್ಸು ಅಲ್ಲೋಲ ಕಲ್ಲೋಲವಾಗಿಬಿಟ್ಟಿದೆ. ಇಂತಹ ವಿಪ್ರತಿಪನ್ನವಾದ, ಬಗೆ-ಬಗೆಯಾದ ತಿಳಿವಳಿಕೆಯುಳ್ಳದ್ದಾಗಿ ವಿಕ್ಷಿಪ್ತವಾಗಿರುವ, ಅತ್ತಲಿತ್ತ ಹೊಯ್ದಾಡುತ್ತಿರುವ ನಿನ್ನ ಬುದ್ಧಿಯು ಮೊದಲು ನಿಶ್ಚಲವಾಗಬೇಕು. ಅತ್ತಲಿತ್ತ ಹೊಯ್ದಾಡ

ಕೂಡದು. ಸರೋವರದಲ್ಲಿನ ತರಂಗಗಳು ಸುಪ್ತವಾಗಬೇಕು. ಅನಂತರ ನಿಶ್ಚಲವಾದ ವ್ಯವಸಾಯಾತ್ಮಿಕವಾದ ನಿನ್ನ ಬುದ್ಧಿಯು ಸಮಾಧಿಯಲ್ಲಿ ಅಚಲ ವಾಗಿ ನಿಲ್ಲಬೇಕು ; ಸ್ಥಿರವಾಗಿ ನಿಲ್ಲಬೇಕು-ಆಗ ನೀನು ಆತ್ಮಯೋಗವನ್ನು ಹೊಂದುವೆ. ಆತ್ಮದರ್ಶನವನ್ನು ಮಾಡುವೆ. ಆತ್ಮಸಾಕ್ಷಾತ್ಕಾರವಾಗುವುದು–ಎಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳುತ್ತಾನೆ.

**ಸಮಾಧಿಃ** ಎಂಬುದಕ್ಕೆ ಶ್ರೀಶಂಕರರು 'ಆತ್ಮಾ' ಎಂದು ಅರ್ಥ ಮಾಡಿದ್ದಾರೆ. **ಸಮಾಧೀಯತೇ ಅಸ್ಮಿನ್ ಚಿತ್ತಂ ಇತಿ ಸಮಾಧಿಃ–ಆತ್ಮಾ, ತಸ್ಮಿನ್ ಸಮಾಧೌ=ಆತ್ಮನಿ.**

**ಶ್ರುತಿವಿಪ್ರತಿಪನ್ನಾ ತೇ** ಎಂಬುದಕ್ಕೆ ಶ್ರೀ ರಾಮಾನುಜರು ಬೇರೆಯ ರೀತಿಯಲ್ಲಿ ವ್ಯಾಖ್ಯಾನಮಾಡಿರುತ್ತಾರೆ.

ನಮ್ಮಿಂದ ವಿಷಯಗಳನ್ನು ಕೇಳಿ ವಿಶೇಷವಾಗಿ ಪ್ರತಿಪತ್ತಿಯನ್ನು ಹೊಂದಿರುವ '**ಶ್ರುತಿಃ–ಶ್ರವಣಂ ಅಸ್ಮತ್ತಚ್ಛ್ರವಣೇನ ವಿಶೇಷತಃ ಪ್ರತಿಪನ್ನಾ ಸಕಲೇತರವಿಸಜಾತೀಯನಿತ್ಯನಿರತಿಶಯಸೂಕ್ಷ್ಮಾತ್ಮವಿಷಯಾ–** ಹೀಗೆ ವಿಶೇಷಪ್ರತಿಪತ್ತಿಯನ್ನು ಹೊಂದಿ ಏಕರೂಪವಾಗಿರುವ ಬುದ್ಧಿಯು ಫಲತ್ಯಾಗಬುದ್ಧಿಯಿಂದ ಕರ್ಮವನ್ನು ಆಚರಿಸಿ ನಿರ್ಮಲವಾದ ಮನಸ್ಸಿನಲ್ಲಿ ಯಾವಾಗ ನಿಶ್ಚಲವಾಗಿರುತ್ತದೆಯೋ–ಆಗ ಆತ್ಮಾವಲೋಕನವನ್ನು ಹೊಂದುವೆ. ಶಾಸ್ತ್ರದಿಂದುಂಟಾದ ಆತ್ಮಜ್ಞಾನರೂಪವಾದ ಕರ್ಮಯೋಗವು ಸ್ಥಿತಪ್ರಜ್ಞತೆ ಎಂಬ ಜ್ಞಾನನಿಷ್ಠೆಯನ್ನು ಉಂಟುಮಾಡುತ್ತದೆ. ಸ್ಥಿತಪ್ರಜ್ಞನಿಗಾದರೋ ಜ್ಞಾನನಿಷ್ಠಾರೂಪವಾದ ಯೋಗವೆಂಬ ಆತ್ಮಾವಲೋಕನ ವನ್ನುಂಟುಮಾಡುತ್ತದೆ–ಎಂದೂ ಅವರು ಶ್ಲೋಕಾರ್ಥವನ್ನು ವಿವರಿಸುತ್ತಾರೆ.)

ಇದುವರೆಗೂ ಶ್ರೀಕೃಷ್ಣನ ದಿವ್ಯೋಪದೇಶವನ್ನು ಏಕಾಗ್ರತೆಯಿಂದ ಗ್ರಹಿಸಿದ ಅರ್ಜುನನು ಶ್ರೀಕೃಷ್ಣನನ್ನು ಪ್ರಶ್ನಿಸುತ್ತಾನೆ :

**ಅರ್ಜುನ ಉವಾಚ :**

**ಓಂ ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।**
**ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್ ॥೫೪॥**

ಅರ್ಜುನನು ಹೇಳುತ್ತಾನೆ :

"ಕೇಶವ! ಸಮಾಧಿಸ್ಥಿತಿಯಲ್ಲಿರುವ ಸ್ಥಿತಪ್ರಜ್ಞನ ಭಾಷೆ ಯಾವುದು? ಸ್ಥಿರಬುದ್ಧಿಯಿರುವವನು ಏನು ಆಡುತ್ತಾನೆ? ಹೇಗೆ ಕುಳಿತಿರುತ್ತಾನೆ? ಹೇಗೆ ನಡೆಯುತ್ತಾನೆ?"

* * *

(ಅರ್ಜುನನು ಅಂದು ಶ್ರೀಕೇಶವನನ್ನು ಕೇಳಿದ ಪ್ರಶ್ನೆಯನ್ನೇ ಇಂದು ನಾವೂ ಕೇಳಬೇಕಾಗಿದೆ. ಅಂದು ಶ್ರೀಕೇಶವನು ಸ್ಥಿತಪ್ರಜ್ಞನ ವಿಷಯವಾಗಿ ಎಷ್ಟೇ ಹೇಳಿದ್ದರೂ ಸಹ ಇಂದು ಆ ಅಳತೆಗೋಲಿನಿಂದ ಸ್ಥಿತಪ್ರಜ್ಞ ರಾರೆಂಬುದನ್ನು ತಿಳಿಯಲು ಅಸಮರ್ಥರಾಗಿದ್ದೇವೆ. ವಿಶ್ವದಲ್ಲಿ ಸ್ಥಿತಪ್ರಜ್ಞರಂತೆ ತೋರಿಸಿಕೊಳ್ಳುವವರು ಬಹಳ ಜನರಿದ್ದಾರೆ. ಅವರ ಪ್ರಾಮಾಣಿಕತೆಯನ್ನು ಗುರುತಿಸುವುದು ಹೇಗೆಂಬುದೇ ಒಂದು ಮುಖ್ಯ ಪ್ರಶ್ನೆ.

ಶ್ರೀಶಾರದಾಮಣೀದೇವಿಯವರು ಒಮ್ಮೆ ಈ ವಿಷಯವಾಗಿಯೇ ಮಾತನಾಡುತ್ತಾ 'ಒಬ್ಬನಿಗೆ ಆತ್ಮಸಾಕ್ಷಾತ್ಕಾರವಾಗಿದೆಯೆಂದರೆ ಅವನಿಗೆ ಇತರರಿಗಿಲ್ಲದ ಒಂದು ಜೊತೆ ಕೊಂಬು ಬೆಳೆದಿರುವುದಿಲ್ಲ. ಅವನು ಈ ಪ್ರಪಂಚವನ್ನು ನೋಡುವ ದೃಷ್ಟಿಯು ಬದಲಾಗುತ್ತದೆ'–ಎಂದು ಹೇಳಿದ್ದರು. ಈ ರಹಸ್ಯವನ್ನೇ ತಿಳಿದುಕೊಳ್ಳಲು ಅರ್ಜುನನು ಶ್ರೀಕೃಷ್ಣನನ್ನು ಪ್ರಶ್ನಿಸುತ್ತಾನೆ.

ಸಮಾಧಿಸ್ಥನಾದ ಸ್ಥಿತಪ್ರಜ್ಞನ ಭಾಷೆ ಯಾವುದು? (ಅವನ ಮಾತು ಹೇಗಿರುತ್ತದೆ? ) ಅವನ ವಿಷಯವಾಗಿ ಬೇರೆಯವರು ಏನೆಂದು ಮಾತನಾಡಿ ಕೊಳ್ಳುವರು? ಅವನಾದರೂ ಇತರರಲ್ಲಿ ಹೇಗೆ ಮಾತನಾಡುವನು? ಸ್ಥಿರ ಮನಸ್ಕನಾದ ಅವನು ಯಾವಾಗಲೂ ಹೇಗೆ ಕುಳಿತುಕೊಳ್ಳುತ್ತಾನೆ? ಅವನ ನಡೆ-ನುಡಿಗಳೇನು? ಪ್ರಪಂಚದಲ್ಲಿ ಹೇಗೆ ವ್ಯವಹರಿಸುತ್ತಾನೆ?

**ಕಾ ಭಾಷಾ** ಎಂಬುದಕ್ಕೆ ಶ್ರೀ ರಾಮಾನುಜರು 'ಅವನ ಸ್ವರೂಪವೇನು? ವಾಚಕಶಬ್ದ ಯಾವುದು?'–ಎಂಬುದಾಗಿಯೂ ಶ್ರೀಮಧ್ವಾಚಾರ್ಯರು ಅವನ ಲಕ್ಷಣವೇನು? ಎಂದೂ ಅರ್ಥಮಾಡಿರುತ್ತಾರೆ.

**ಭಾಷ್ಯತೇ ಅನಯಾ ಇತಿ ಭಾಷಾ = ಲಕ್ಷಣಂ । ಸ್ಥಿತಪ್ರಜ್ಞಃ ಸ್ಥಿತಾ ಪ್ರಜ್ಞಾ (ಜ್ಞಾನಂ) ಯಸ್ಯ ಸಃ = ಸ್ಥಿತಪ್ರಜ್ಞಃ**

**ಪ್ರಭಾಷೇತ, ವ್ರಜೇತ ಮತ್ತು ಆಸೀತ** ಈ ಮೂರು ಅವನ

ವಾಚಿಕ-ಕಾಯಕ-ಮಾನಸಿಕ (ಧ್ಯಾನ) ಕ್ರಿಯೆಗಳನ್ನು ಕುರಿತಾದ ಪ್ರಶ್ನೆಗಳೆಂದು ಶ್ರೀ ವೇದಾಂತದೇಶಿಕರು ವಿವರಿಸಿದ್ದಾರೆ.)

ಈ ಶ್ಲೋಕದಿಂದ ಆರಂಭಿಸಿ ಅಧ್ಯಾಯದ ಕೊನೆಯವರೆಗೂ ಸ್ಥಿತ ಪ್ರಜ್ಞನ ಲಕ್ಷಣ ಮತ್ತು ಸಾಧನಗಳನ್ನು ಭಗವಂತನು ಉಪದೇಶಿಸುತ್ತಾನೆ :

**ಶ್ರೀಭಗವಾನುವಾಚ :**

**ಓಂ ಪ್ರಜಹಾತಿ ಯದಾ ಕಾಮಾನ್ಸರ್ವಾನ್ಪಾರ್ಥ ಮನೋಗತಾನ್ ।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥೫೫॥**

ಶ್ರೀಕೃಷ್ಣನು ಹೇಳುತ್ತಾನೆ :

"ಪಾರ್ಥ! ಮನಸ್ಸಿನಲ್ಲಿರುವ ಕಾಮನೆಗಳನ್ನು ಬಿಟ್ಟು ಯಾವಾಗ ಆತ್ಮನಲ್ಲಿಯೇ ಆತ್ಮನಿಂದಲೇ ತುಷ್ಟನಾಗುವನೋ–ಆಗ ಸ್ಥಿತಪ್ರಜ್ಞನೆನಿಸುವನು."

* * *

(ಇದುವರೆಗೆ ಶ್ರೀಕೃಷ್ಣನು ವ್ಯವಸಾಯಾತ್ಮಿಕವಾದ ಬುದ್ಧಿಯ ವಿಷಯವಾಗಿ ಹೇಳಿ ಕರ್ಮಜನ್ಯವಾದ ಫಲಗಳನ್ನು ಬುದ್ಧಿಯಿಂದ ತ್ಯಜಿಸಬೇಕೆಂದು ಹೇಳಿದನು. ಅಂತಹ ಪರಿಶುದ್ಧವಾದ ಬುದ್ಧಿಯು ಯಾವಾಗ ಸಮಾಧಿಯಲ್ಲಿ (ಆತ್ಮನಲ್ಲಿ) ಅಲುಗಾಡದೇ ನಿಂತುಕೊಳ್ಳುವುದೋ–ಆಗ ಯೋಗವನ್ನು ಪಡೆಯುವೆ ಎಂದು ೫೩ನೆಯ ಶ್ಲೋಕದಲ್ಲಿ ಹೇಳಿದ್ದಾನೆ. ಈ ಶ್ಲೋಕವು ಅಲ್ಲಿಂದಲೇ ಅನುವರ್ತಿತವಾಗಿದೆ.

ಪಾರ್ಥ! ನಾನು ಈ ಹಿಂದೆ ಹೇಳಿದಂತೆ ಯಾವಾಗ ಮನುಷ್ಯನು ಮನಸ್ಸಿನಲ್ಲಿರುವ ಸರ್ವಕಾಮನೆಗಳನ್ನೂ ಬಿಟ್ಟುಬಿಡುತ್ತಾನೆಯೋ, ಕಾಮನೆಗಳನ್ನು ತೊರೆದನಂತರ ಪ್ರಾಪ್ತವಾಗುವ ಸ್ಥಿರಬುದ್ಧಿಯನ್ನು ಆತ್ಮನಲ್ಲಿಯೇ ಲಯಹೊಂದಿಸಿ ಅದರಿಂದಲೇ ಆತ್ಮಾನಂದವನ್ನು ಪಡೆಯುತ್ತಾನೆಯೋ, ಆಗ 'ಸ್ಥಿತಪ್ರಜ್ಞ' ಎನಿಸಿಕೊಳ್ಳುತ್ತಾನೆ. ಮನೋಗತವಾದ ಸರ್ವಕಾಮನೆಗಳೆಂದರೆ ಆತ್ಮಾನಾತ್ಮಾವಿವೇಕದಿಂದ ಅನಾತ್ಮಕ್ಕೆ ಸಂಬಂಧಿಸಿದ ಸರ್ವಕಾಮನೆಗಳನ್ನೂ–ಎಂದು ಅರ್ಥಮಾಡಬೇಕು. ಸರ್ವಕಾಮನೆಗಳಲ್ಲಿ ಆತ್ಮದರ್ಶನ ಕಾಮನೆಯನ್ನೂ ಸೇರಿಸುವಂತಿಲ್ಲ. ದೇಹಕ್ಕೆ ಅಥವಾ ಇಂದ್ರಿಯಗಳಿಗೆ ಸಂಬಂಧಿಸಿದಂತೆ ಸಕಲಕಾಮನೆಗಳನ್ನೂ ತೊರೆಯಬೇಕೆಂದರ್ಥ. ಸರ್ವಕಾಮನೆಗಳನ್ನೂ ತೊರೆದನಂತರ ಮನಸ್ಸು ಅಥವಾ ಬುದ್ಧಿ ಹೇಗಿರುತ್ತದೆ?

ಇದನ್ನು ನಾವಂತೂ ಊಹಿಸಿಕೊಳ್ಳಲು ಸಾಧ್ಯವಾಗುವುದೇ ಇಲ್ಲ. ಇಂದ್ರಿಯ ಸಂಬಂಧವಾದ ಕಾಮನೆಗಳನ್ನೂ, ಕರ್ಮಫಲಗಳನ್ನೂ ಸಹ ಪರಿತ್ಯಜಿಸಿದ ಮೇಲೆ ಬುದ್ಧಿಯು ಏನು ಮಾಡಬೇಕು? ತನ್ನಲ್ಲಿಯೇ ತನ್ನನ್ನು ನೋಡಿ ಕೊಳ್ಳಬೇಕು. ಹೊರಗಿನ ವ್ಯವಹಾರಗಳೆಲ್ಲವೂ ಬಂಧನಕ್ಕೆ ಕಾರಣವೆಂದಾದ ಮೇಲೆ ಅಂತರ್ವ್ಯಾಪಾರವನ್ನು ಪ್ರಾರಂಭಿಸಬೇಕು. ಅಲೆಗಳಿಲ್ಲದ ಮತ್ತು ಕೆಸ ರಿಲ್ಲದ ಸ್ಫಟಿಕಸರೋವರದಲ್ಲಿ ಕೆಳಭಾಗವು ಬಹುಸ್ಪಷ್ಟವಾಗಿ ಕಾಣುವಂತೆ ವ್ಯವಸಾಯಾತ್ಮಿಕವಾದ, ವಾಸನಾರಹಿತವಾದ ಪರಿಶುದ್ಧಮನಸ್ಸಿಗೆ ಆತ್ಮನು ತಾನೇ ತಾನಾಗಿ ಕಾಣುವನು. ಆತ್ಮದರ್ಶನಮಾಡಿದರೆ ಅಮೃತಧಾರೆಯ ಅಭಿಷೇಕವಾಗುವುದು. ಅಮೃತಮಯನಾಗುವನು. ಆನಂದಮಯನಾಗು ವನು. ಆ ಒಂದು ಅನಿರ್ವಾಚ್ಯವಾದ ಆತ್ಮಾನಂದವನ್ನು ಪಡೆದು ತುಷ್ಟ ನಾಗಿರುವವನೇ ಸ್ಥಿತಪ್ರಜ್ಞನು.

ಕಠೋಪನಿಷತ್ತಿನಲ್ಲಿ ಸ್ಥಿತಪ್ರಜ್ಞನ ವಿಷಯದಲ್ಲಿ ಹೀಗೆ ಹೇಳಿದೆ :

**ಯದಾ ಸರ್ವೇ ಪ್ರಮುಚ್ಯನ್ತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ ।**
**ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥**

ಆತನ ಬುದ್ಧಿಯನ್ನು ಆಶ್ರಯಿಸಿಕೊಂಡಿರುವ ಕಾಮನೆಗಳೆಲ್ಲವೂ ಯಾವಾಗ ನಾಶವಾಗುವುವೋ—ಆಗ ಮರ್ತ್ಯನು ಅಮೃತನಾಗುತ್ತಾನೆ. ಇಲ್ಲಿಯೇ ಬ್ರಹ್ಮಜ್ಞಾನವನ್ನು ಪಡೆಯುತ್ತಾನೆ.

ಈ ಶ್ಲೋಕವು ಜ್ಞಾನನಿಷ್ಠೆಯ ಪರಾಕಾಷ್ಠೆಯನ್ನು ಹೇಳುತ್ತದೆ—ಎಂದು ಶ್ರೀರಾಮಾನುಜರು ಹೇಳುತ್ತಾರೆ.

ಶ್ರೀಮಧ್ವಾಚಾರ್ಯರು 'ಆತ್ಮನಾ' ಎಂಬುದಕ್ಕೆ 'ಪರಮಾತ್ಮನಾ' ಎಂದು ಅರ್ಥಮಾಡಿರುತ್ತಾರೆ. ನಾತ್ಮಾ = ಜೀವಃ.. **ಆತ್ಮಾಖ್ಯೇ ತಸ್ಮಿನ್ ಸ್ಥಿತಸ್ಯ ತತ್ಪ್ರಸಾದಾದೇವ ತುಷ್ಟಿರ್ಭವತಿ**—ಆತ್ಮವೆಂದು ಕರೆಯಲ್ಪಡುವ ಪರಮಾತ್ಮನಲ್ಲಿ ನೆಲಸಿದವನಿಗೆ ಅವನ ಅನುಗ್ರಹದಿಂದಲೇ ತುಷ್ಟಿಯುಂಟಾಗುತ್ತದೆ.)

**ಓಂ ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।**
**ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥೫೬॥**

ದುಃಖದಲ್ಲಿ ಕ್ಷೋಭೆಗೊಳ್ಳದ ಮನಸ್ಸುಳ್ಳವನೂ, ಸುಖದಲ್ಲಿ ಆಸೆಪಡ

ದವನೂ, ರಾಗ-ಭಯ-ಕ್ರೋಧಗಳನ್ನು ಬಿಟ್ಟವನೂ, ಸ್ಥಿತಮನಸ್ಕನೂ ಆದ ಮುನಿಯು ಸ್ಥಿತಪ್ರಜ್ಞ ಎಂದೆನಿಸಿಕೊಳ್ಳುತ್ತಾನೆ.

* * *

(ಹಿಂದೆ ಬುದ್ಧಿಯ ಸಮತ್ವವನ್ನು ಹೇಳುವಾಗ '**ಸುಖದುಃಖೇ ಸಮೇ ಕೃತ್ವಾ**' 'ಸುಖದುಃಖಗಳನ್ನು ಸಮವಾಗಿ ಕಾಣು'–ಎಂದು ನಿರ್ದ್ವಂದ್ವನಾಗಿರಬೇಕೆಂದು ಭಗವಂತನು ಹೇಳಿದ್ದಾನೆ. ಸ್ಥಿತಪ್ರಜ್ಞನ ಲಕ್ಷಣ ವನ್ನು ಹೇಳುವಾಗ ಶ್ರೀಕೃಷ್ಣನು ಅದನ್ನೇ ವಿಸ್ತರಿಸಿ ಹೇಳುತ್ತಾನೆ.

ಜನಸಾಮಾನ್ಯಕ್ಕೇ ದುಃಖವೆಂಬುದು ಉದ್ವಿಗ್ನತೆಯನ್ನುಂಟುಮಾಡುತ್ತದೆ. ದುಃಖವು ಪ್ರಾಪ್ತವಾದೊಡನೆಯೇ ಮನುಷ್ಯನು ಉದ್ವಿಗ್ನನಾಗುತ್ತಾನೆ. ತನಗೆ ಪ್ರಿಯರಾದವರು ಮೃತರಾದರೆಂಬ ವಾರ್ತೆಯನ್ನು ಕೇಳಿದೊಡನೆಯೇ ಕಂಗೆಟ್ಟು ಕಂಗಾಲಾಗುತ್ತಾನೆ. ಆಧ್ಯಾತ್ಮಿಕ–(ದೇಹದಲ್ಲಾಗುವ ದುಃಖ) ಆಧಿಭೌತಿಕ–(ಹೊರಗಿನ ಪ್ರಾಣಿಗಳಿಂದಾಗುವ ದುಃಖ) ಆಧಿದೈವಿಕ–(ಆಕ ಸ್ಮಿಕವಾದ ಸಿಡಿಲು ಮುಂತಾದುವುಗಳಿಂದ ಒದಗುವ ದುಃಖ) ಈ ಮೂರು ವಿಧವಾದ ದುಃಖಗಳು ಪ್ರಾಪ್ತವಾದರೂ ಸ್ಥಿತಪ್ರಜ್ಞನು ಉದ್ವಿಗ್ನನಾಗದೇ ಇರುತ್ತಾನೆ. ಹಾದಿಯಲ್ಲಿ ಹೋಗುವಾಗ ಅಪಘಾತಕ್ಕೆ ಸಿಕ್ಕಿ ಕಾಲೋ–ಕೈಯೋ ಮುರಿದರೆ ದುಃಖಿಸಬೇಡವೇ? ಅಂತಹ ಸಮಯಗಳಲ್ಲಿಯೂ ಸ್ಥಿತಪ್ರಜ್ಞನ ಮನಸ್ಸಿನಲ್ಲಿ ಉದ್ವಿಗ್ನತೆಯಿರುವುದಿಲ್ಲ. ಚಿತ್ತಸ್ವಾಸ್ಥ್ಯದಿಂದಿದ್ದು ಆ ನೋವನ್ನು ಸಹಿಸಿಕೊಳ್ಳುತ್ತಾನೆ. ಆತ್ಮಾನಾತ್ಮವಿವೇಕದಿಂದ–'ನಾನು ಕುಳಿತಿರುವ ರಥಕ್ಕೆ ಸ್ವಲ್ಪ ಜಖಂ ಆಗಿದೆ. ನನಗೇನೂ ಆಗಿಲ್ಲ' ಎಂದೇ ಭಾವಿಸುತ್ತಾನೆ. ಅಂತಹ ಸಂದರ್ಭದಲ್ಲಿ ಈ ಭಾವನೆಯೇ ಅತಿಮುಖ್ಯವಾದುದು. ಈ ಭಾವನೆಯು ವ್ಯವಸಾಯಾತ್ಮಿಕವಾದ ಬುದ್ಧಿಯಿಂದ ಮಾತ್ರವೇ ಪ್ರಾಪ್ತವಾಗುತ್ತದೆ.

ಮನುಷ್ಯನಿಗೆ ಸುಖ-ದುಃಖಗಳು ಒಂದಾದಮೇಲೆ ಮತ್ತೊಂದು ಬರು ತ್ತಲೇ ಇರುತ್ತವೆ. ಯಾವಾಗ ಮನುಷ್ಯನು ದುಃಖಬಂದಾಗ ಅನುದ್ವಿಗ್ನತೆಯನ್ನು ಅಭ್ಯಾಸಮಾಡುತ್ತಾನೆಯೋ ಅವನಿಗೆ ಸುಖಬಂದಾಗಲೂ ಅನುದ್ವಿಗ್ನತೆಯೇ ಇರುತ್ತದೆ. ದುಃಖದಲ್ಲಿಯೇ ಚಿತ್ತಸ್ವಾಸ್ಥ್ಯದಿಂದ ಸುಖವನ್ನು ಕಾಣುವ ಮನುಷ್ಯನು ಆಧ್ಯಾತ್ಮಿಕ-ಆಧಿಭೌತಿಕ-ಆಧಿದೈವಿಕಸುಖಗಳಲ್ಲಿ ವ್ಯತ್ಯಾಸ ವನ್ನೇನೂ ಕಾಣುವುದಿಲ್ಲ. ಸುಖ-ದುಃಖ ಎರಡೂ ಸಹ ಇಂತಹವನಿಗೆ ಸಮ

ನಾಗಿಬಿಟ್ಟಿರುತ್ತವೆ. ಪ್ರಾಪಂಚಿಕವಾದ ಕ್ಷಣಮಾತ್ರದ ಸುಖದ ಕಡೆ ಅವನಿಗೆ ಆಸೆಯೇ ಇರುವುದಿಲ್ಲ. ಆ ಸುಖಗಳನ್ನವನು ಸುಖಗಳೆಂದೇ ಭಾವಿಸುವುದಿಲ್ಲ. ಸುಖ-ದುಃಖಗಳೆರಡೂ ವಾಸನಾಮೂಲಕವಾದ ಬಂಧನಗಳೆಂದು ಭಾವಿಸುತ್ತಾನೆ. ಪ್ರೀತಿ-ಭಯ-ಕ್ರೋಧಗಳನ್ನು ತ್ಯಜಿಸಿರುತ್ತಾನೆ. ಒಬ್ಬರನ್ನು ಪ್ರೀತಿಸಿ ಮತ್ತೊಬ್ಬರನ್ನು ದ್ವೇಷಿಸಹೋಗುವುದಿಲ್ಲ. ಅವನಿಗೆ ಪ್ರೀತಿಕರವಾದ ವಸ್ತುವೆಂದರೆ ಆತ್ಮವೊಂದೇ. ಆತ್ಮವರ್ತಿಯಾಗಿರುತ್ತಾನೆ. ಅವನಿಗೆ ಭಯ ವೆಂಬುದೇ ಇಲ್ಲ. ಮನುಷ್ಯನಿಗೆ ಮಹಾಭಯವೆಂದರೆ ಮೃತ್ಯುವೊಂದೇ. ಆತ್ಮಾನಾತ್ಮವಿವೇಕದಿಂದ 'ನಾನು ಸಾಯುವುದಿಲ್ಲ. ನಾನು ಕುಳಿತಿರುವ ರಥವು ನಾಶವಾಗುತ್ತದೆ'–ಎಂಬ ರಹಸ್ಯವನ್ನರಿತವನಿಗೆ ಮೃತ್ಯುಭಯವೆಲ್ಲಿಯದು? ಅವನ ಹೃದಯದಲ್ಲಿ ಕೋಪಕ್ಕೆ ಅವಕಾಶವೇ ಇರುವುದಿಲ್ಲ. ಆಸೆ-ಆಕಾಂಕ್ಷೆ-ಸುಖಾಭಿಲಾಷೆ ಇವುಗಳು ಮನುಷ್ಯನಲ್ಲಿದ್ದರೆ ಅವುಗಳಿಗೆ ಆಘಾತವು ಸಂಭವಿಸಿದಾಗ ಕ್ರೋಧವು ತಾನಾಗಿಯೇ ಹುಟ್ಟಿಕೊಳ್ಳುತ್ತದೆ. ಸುಖದ ಇಚ್ಛೆಯನ್ನೇ ತ್ಯಜಿಸಿದವನೆಂದಮೇಲೆ ಅವನಲ್ಲಿ ಕ್ರೋಧವು ಉಳಿಯುವ ಕಾರಣವೇ ಇಲ್ಲ. ಯಾವಾಗಲೂ ಆತ್ಮನಲ್ಲಿಯೇ ಆತ್ಮವಿಚಾರದಲ್ಲಿಯೇ ಬುದ್ಧಿಯನ್ನು ಸ್ಥಿರೀಕರಿಸಿರುವವನು 'ಸ್ಥಿತಧೀಃ' ಸ್ಥಿರಬುದ್ಧಿಯವನು. ಇಂತಹವನನ್ನು ಮುನಿ ಅಥವಾ ಸ್ಥಿತಪ್ರಜ್ಞ–ಎನ್ನುತ್ತಾರೆ.

'ಈ ಶ್ಲೋಕವು ಜ್ಞಾನನಿಷ್ಠನ 'ಏಕೇನ್ದ್ರಿಯಸಂಜ್ಞಾ' ಎಂಬ ಮೂರನೆಯ ಅವಸ್ಥೆಯನ್ನು ಹೇಳುತ್ತದೆ'–ಎಂದು ಶ್ರೀರಾಮಾನುಜರ ಅಭಿಪ್ರಾಯ.

ಜ್ಞಾನಿಯ ಲಕ್ಷಣಗಳಾದ ಇವುಗಳೇ ಜ್ಞಾನಸಾಧನೆಯ ಉಪಾಯಗಳೂ ಆಗಿವೆ. ಜ್ಞಾನಿಗಳಿಗೆ ಯಾವುದು ಸ್ವಭಾವಸಿದ್ಧವಾದ ಲಕ್ಷಣಗಳಾಗಿರು ತ್ತವೆಯೋ ಅವು ಜಿಜ್ಞಾಸುಗಳಿಗೆ ಪ್ರಯತ್ನದಿಂದ ಸಾಧಿಸಬೇಕಾದ ವಿಷಯ ಗಳಾಗಿರುತ್ತವೆ. **ತದ್ವೈ ಜಿಜ್ಞಾಸುಭಿಃ ಸಾಧ್ಯಂ ಜ್ಞಾನಿನಾಂ ಯತ್ತು ಲಕ್ಷಣಂ** ಎಂಬುದನ್ನು ಶ್ರೀಮಧ್ವಾಚಾರ್ಯರು ಈ ಶ್ಲೋಕದಲ್ಲಿ ಗಮನಿಸಿದ್ದಾರೆ.)

**ಓಂ ಯಃ ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಮ್ ।**
**ನಾಭಿನನ್ದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೫೭॥**

ಯಾವಾತನು ಯಾವುದರಲ್ಲಿಯೂ ಸ್ನೇಹವಿಲ್ಲದವನಾಗಿರು ತ್ತಾನೆಯೋ, ಶುಭವನ್ನಾಗಲೀ–ಅಶುಭವನ್ನಾಗಲೀ ಪಡೆದಾಗ ಅವುಗಳನ್ನು ಅಭಿನಂದನೆಮಾಡದೆಯೂ–ದ್ವೇಷಮಾಡದೆಯೂ ಇರುವನೋ ಅವನ ಪ್ರಜ್ಞೆಯು ಸ್ಥಿರವಾದುದು. (ಅಂತಹವನು ಸ್ಥಿತಪ್ರಜ್ಞನು.)

* * *

(ಸ್ಥಿತಪ್ರಜ್ಞನಿಗೆ ಯಾರ ವಿಷಯದಲ್ಲಿಯೂ ಸ್ನೇಹವಿಲ್ಲ. ಅಂದರೆ ಎಲ್ಲರನ್ನೂ ದ್ವೇಷಿಸುತ್ತಾನೆಂಬ ಅರ್ಥವಲ್ಲ. ಸ್ನೇಹ ಎಂದರೆ ಎಣ್ಣೆ ಎಂದೂ ಆಗುತ್ತದೆ. ಎಣ್ಣೆಯಂತೆ ಅಂಟಿಕೊಂಡಿರುವವನು ಸ್ನೇಹಿತ. ಸ್ಥಿತಪ್ರಜ್ಞನು ಯಾರನ್ನೂ ಅಂಟಿಕೊಳ್ಳುವುದಿಲ್ಲ. ಅವನಿಗೆ ಎಲ್ಲರೂ ಒಂದೇ. ಅವನಿಗೆ ಸ್ವಶರೀರದಮೇಲೂ ವಿಶೇಷವಾದ ಆಸಕ್ತಿಯಿಲ್ಲ. ಉದಯಿಸಿದ ಸೂರ್ಯನು ಉಚ್ಚ-ನೀಚಗಳೆಂಬ ತಾರತಮ್ಯವಿಲ್ಲದೇ ಎಲ್ಲರ ಮೇಲೂ ಬೆಳಕುಚೆಲ್ಲುವಂತೆ ಸ್ಥಿತಪ್ರಜ್ಞನು ಯಾರನ್ನೂ ಪ್ರೀತಿಸುವುದೂ ಇಲ್ಲ–ದ್ವೇಷಿಸುವುದೂ ಇಲ್ಲ. ಎಲ್ಲರನ್ನೂ ಸಮಭಾವದಿಂದ ಕಾಣುತ್ತಾನೆ. ಶುಭಾಶುಭಗಳು ಪ್ರಾಣಿಮಾತ್ರಕ್ಕೆ ತಪ್ಪಿದ್ದಲ್ಲ. ಈ ಜನ್ಮದಲ್ಲಿ ಪಾಪ-ಪುಣ್ಯಗಳನ್ನು ಮಾಡಹೋಗದಿದ್ದರೂ ಪ್ರಾರಬ್ಧವಾದ ಕರ್ಮಫಲವಿದ್ದೇ ಇರುತ್ತದೆ. ಆ ಕರ್ಮಫಲಾನುಗುಣವಾಗಿ ಸ್ಥಿತಪ್ರಜ್ಞನಾದರೂ ಶುಭಾಶುಭಫಲಗಳನ್ನು ಅನುಭವಿಸಲೇಬೇಕಾಗುತ್ತದೆ. ಹಾಗೆ ಶುಭಾಶುಭಫಲಗಳು ಪ್ರಾಪ್ತವಾದಾಗ ಎರಡರಲ್ಲಿಯೂ ಅವನು ನಿರಾಸಕ್ತನಾಗಿರುತ್ತಾನೆ. ಶುಭಫಲಗಳು ಒದಗಿದಾಗ ಸಂತೋಷಿಸು ವುದಿಲ್ಲ. ಅಶುಭಫಲಗಳು ಒದಗಿದಾಗ ಅವನ್ನು ದ್ವೇಷಿಸುವುದೂ ಇಲ್ಲ. ಇಲ್ಲಿ 'ದ್ವೇಷಿಸುವುದಿಲ್ಲ'–ಎಂಬ ಪದವು ಸ್ವಾರಸ್ಯವಾಗಿದೆ. ದ್ವೇಷ ಎಂದರೆ ಅಶುಭಫಲವನ್ನು ಶತ್ರುವಿನಂತೆ ಕಾಣುವುದು. ಅರ್ಥಾತ್ ಅಶುಭಫಲವನ್ನು ಶತ್ರುವನ್ನು ನಿರಸನಗೊಳಿಸುವಂತೆ ಆತ್ಮಬಲದಿಂದ ಭಸ್ಮಮಾಡಲು ಯತ್ನಿಸು ವುದು. ಹೀಗೆ ಮಾಡಲು ಸ್ಥಿತಪ್ರಜ್ಞನು ಇಚ್ಛಿಸುವುದಿಲ್ಲ. ಪ್ರಾರಬ್ಧಫಲವನ್ನು ಅನುಭವಿಸಿಯೇ ಕಳೆದುಕೊಳ್ಳಬೇಕೆಂಬ ಅಭಿಲಾಷೆಯು ಅವನಿಗಿರುತ್ತದೆ. ಈ ವಿಷಯದಲ್ಲಿ ಎಷ್ಟೋ ನಿದರ್ಶನಗಳನ್ನು ನಾವು ಕೇಳಿದ್ದೇವೆ. ಯತಿವರ್ಯ ರೊಬ್ಬರಿಗೆ ನಾಲ್ಕರ ಚಳಿಯು ಬರುತ್ತಿತ್ತು. ಆಹ್ನಿಕಸಮಯದಲ್ಲಿ ಅದು ಬಂದುದಾದರೆ ಅದನ್ನು ದಂಡದಮೇಲೆ ಆವಾಹಿಸಿದ್ದು ಆಹ್ನಿಕವು ಮುಗಿದ

ನಂತರ ಅದನ್ನು ಪುನಃ ಪಡೆದುಕೊಳ್ಳುತ್ತಿದ್ದರು. ಪ್ರಾರಬ್ಧವನ್ನು ಅನುಭವಿಸಿಯೇ ಮುಗಿಸಬೇಕೆಂಬುದು ಯತಿವರ್ಯರ ಆಶಯವಾಗಿದ್ದಿತು. ಇಂತಹ ಅನೇಕದೃಷ್ಟಾಂತಗಳಿವೆ. ಇಂತಹ ಅನುಪಮವಾದ ಗುಣಗಳಿಂದ ಕೂಡಿರುವವನ ಪ್ರಜ್ಞೆಯು ಸ್ಥಿರವಾಗಿರುವುದು. ಇಂತಹ ಬುದ್ಧಿಯಿರುವವನಿಗೆ ಸ್ಥಿತಪ್ರಜ್ಞನೆಂದು ಹೆಸರು.

ಈ ಶ್ಲೋಕವು ವ್ಯತಿರೇಕಸಂಜ್ಞಾ ಎಂಬ ಜ್ಞಾನನಿಷ್ಠನ ಎರಡನೆಯ ಅವಸ್ಥೆಯನ್ನು ಹೇಳುತ್ತದೆ–ಎಂದು ಶ್ರೀರಾಮಾನುಜರು ಹೇಳಿದ್ದಾರೆ.)

**ಓಂ ಯದಾ ಸಂಹರತೇ ಚಾಯಂ ಕೂರ್ಮೋಽಙ್ಗಾನೀವ ಸರ್ವಶಃ ।**
**ಇನ್ದ್ರಿಯಾಣೀನ್ದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೫೮॥**

ಆಮೆಯು ತನ್ನ ಕೈಕಾಲುಗಳನ್ನು ಎಲ್ಲ ಕಡೆಗಳಿಂದಲೂ ಎಳೆದುಕೊಳ್ಳುವಂತೆ–ಯಾವಾಗ ಅವನು ತನ್ನ ಇಂದ್ರಿಯಗಳನ್ನು ಇಂದ್ರಿಯಾರ್ಥಗಳಿಂದ ಎಳೆದುಕೊಳ್ಳುವನೋ–ಆಗ ಅವನ ಪ್ರಜ್ಞೆಯು ಪ್ರತಿಷ್ಠಿತವಾಗಿರುವುದು. (ಸ್ಥಿರವಾಗಿರುವುದು.)

* * *

(ಈ ಶ್ಲೋಕದಲ್ಲಿ ಶ್ರೀಕೃಷ್ಣನು ಆತ್ಮನಲ್ಲಿ ಬುದ್ಧಿಯು ಲೀನವಾಗಿರುವ ಸ್ಥಿತಿಯನ್ನೇ ಕುರಿತು ಹೇಳುತ್ತಾನೆ. ಆಮೆಯು ಎಲ್ಲ ಕಡೆಗಳಿಂದಲೂ ತನ್ನ ಅಂಗಗಳನ್ನು ಒಳಗೆ ಸೇರಿಸಿಕೊಳ್ಳುವಂತೆ ಎಂದರೆ ಆಮೆಯು ತನ್ನ ಐದು ಅಂಗಗಳನ್ನೂ (ನಾಲ್ಕು ಕಾಲುಗಳು, ಒಂದು ತಲೆ) ಒಳಕ್ಕೆ ಸೆಳೆದುಕೊಳ್ಳುವಂತೆ ಪಂಚೇಂದ್ರಿಯಗಳನ್ನೂ ಇಂದ್ರಿಯವಿಷಯಗಳಿಂದ (ಕಣ್ಣನ್ನು ನೋಡುವಿಕೆಯಿಂದ, ಕಿವಿಯನ್ನು ಕೇಳುವಿಕೆಯಿಂದ, ನಾಲಿಗೆಯನ್ನು ರುಚಿ ನೋಡುವಿಕೆಯಿಂದ, ಮೂಗನ್ನು ವಾಸನೆಯನ್ನು ತೆಗೆದುಕೊಳ್ಳುವುದರಿಂದ, ತ್ವಚೆಯನ್ನು ಸ್ಪರ್ಶದಿಂದ) ಒಳಕ್ಕೆ ಸೆಳೆದುಕೊಳ್ಳುತ್ತಾನೆಯೋ–ಆಗ ಅವನ ಪ್ರಜ್ಞೆಯು ಪ್ರತಿಷ್ಠಿತವಾಗುವುದು. ಬುದ್ಧಿಯು ಆತ್ಮನಲ್ಲಿ ಲಯಗೊಳ್ಳಬೇಕಾದರೆ ಅದು ವ್ಯವಸಾಯಾತ್ಮಿಕವಾಗಿರಬೇಕು. ವಾಸನಾರಹಿತವಾಗಿರಬೇಕು. ಇಂದ್ರಿಯಗಳೆಲ್ಲವೂ ಮನಸ್ಸಿನಲ್ಲಿ ಸೇರಿ, ಮನಸ್ಸು ಬುದ್ಧಿಯಲ್ಲಿ ಸೇರಿ, ಬುದ್ಧಿಯು ಆತ್ಮನಲ್ಲಿ ಲೀನವಾಗಬೇಕು. ಆ ಸಮಯದಲ್ಲಿ ಕಣ್ಣು ನೋಡುವುದಿಲ್ಲ. ಕಿವಿಯು ಹೊರಗಿನ ಶಬ್ದವನ್ನು ಕೇಳುವುದಿಲ್ಲ. ಜಿಹ್ವೆಗೆ

ಚಾಪಲ್ಯವಿರುವುದಿಲ್ಲ. ಮೂಗಿಗೆ ಆಘ್ರಾಣಶಕ್ತಿಯಿರುವುದಿಲ್ಲ. ತ್ವಚೆಯು ಸ್ಪರ್ಶದಿಂದಾಗುವ ವಿಕಾರವನ್ನು ಕಳೆದುಕೊಂಡಿರುತ್ತದೆ. ಕಣ್ಣುಮುಚ್ಚಿ ಕುಳಿತು ದೃಷ್ಟಿಯನ್ನು ತಡೆಹಿಡಿಯಬಹುದು. ಬಾಯಿಮುಚ್ಚಿ ಕುಳಿತು ನಾಲಿಗೆಯನ್ನು ಹತೋಟಿಗೆ ತೆಗೆದುಕೊಳ್ಳಬಹುದು. ಏಕಾಂತದಲ್ಲಿ ಕುಳಿತು ತ್ವಚೆಗೆ ಸ್ಪರ್ಶಸುಖವೇ ಇಲ್ಲದಂತೆ ಮಾಡಿ ಅದನ್ನು ತಡೆಯಬಹುದು. ಆದರೆ ಕಿವಿ ಮತ್ತು ಮೂಗುಗಳ ವಿಷಯತತ್ಪರತೆಯನ್ನು ತಡೆಹಿಡಿಯಲು ಸಾಧ್ಯವಿಲ್ಲ. ಕಿವಿಗಳನ್ನೂ ಮತ್ತು ಮೂಗನ್ನೂ ಮುಚ್ಚಿಕೊಂಡು ಹೆಚ್ಚುಕಾಲ ಇರಲು ಸಾಧ್ಯವಿಲ್ಲ. ಹೀಗೆ ಬಲಾತ್ಕಾರದಿಂದ ಅವುಗಳನ್ನು ತಡೆಹಿಡಿಯಲು ಹೋದರೆ ಮನಸ್ಸು ಕ್ಷುಭಿತವಾಗುವುದೇ ಹೊರತು ಇಂದ್ರಿಯಗಳು ಒಳಸರಿದಂತಾಗು ವುದಿಲ್ಲ. ಇದು ಅನವರತವಾದ ಅಭ್ಯಾಸದಿಂದ ಸಾಧಿಸಬೇಕಾದುದು. ಹಲ ವಾರು ವರ್ಷಗಳು ಸಾಧನೆಮಾಡುತ್ತಾ ಹೋದರೆ ಇಂದ್ರಿಯಾರ್ಥ ಗಳನ್ನು–ಇಂದ್ರಿಯಗಳಲ್ಲಿಯೂ, ಇಂದ್ರಿಯಗಳನ್ನು–ಮನಸ್ಸಿನಲ್ಲಿಯೂ, ಮನಸ್ಸನ್ನು ಬುದ್ಧಿಯಲ್ಲಿಯೂ, ಬುದ್ಧಿಯನ್ನು–ಆತ್ಮನಲ್ಲಿಯೂ ಲೀನಗೊಳಿಸ ಬಹುದು. ಹೀಗೆ ಲೀನಗೊಳಿಸಿದಾಗ ಅವನ ಪ್ರಜ್ಞೆಯು (ಬುದ್ಧಿಯು) ಆತ್ಮನಲ್ಲಿ ಪ್ರತಿಷ್ಠಿತವಾಗಿರುತ್ತದೆ. ಅಂತಹವನಿಗೆ ಸ್ಥಿತಪ್ರಜ್ಞನೆಂದು ಹೆಸರು.

ಆಮೆಯು ಭಯದಿಂದ ತನ್ನ ಅಂಗಗಳನ್ನು ಉಪಸಂಹಾರಮಾಡಿ ಕೊಳ್ಳುತ್ತದೆ. ಜ್ಞಾನನಿಷ್ಠನು ತನ್ನ ಇಂದ್ರಿಯಗಳನ್ನು (ಪ್ರಕೃತಿಯ ಭಯವನ್ನು ತಪ್ಪಿಸಿಕೊಳ್ಳಲು) ಎಲ್ಲ ವಿಷಯಗಳಿಂದಲೂ ಒಳಕ್ಕೆ ಸೆಳೆದುಕೊಳ್ಳುತ್ತಾನೆ. ಎಂದು ಶ್ರೀಶಂಕರರು ವ್ಯಾಖ್ಯಾನಮಾಡಿರುತ್ತಾರೆ.

ಜ್ಞಾನನಿಷ್ಠನ 'ಯಾತಮಾನ' ಎಂಬ ಮೊದಲನೆಯ ಅವಸ್ಥೆಯನ್ನು ಈ ಶ್ಲೋಕವು ಹೇಳುತ್ತದೆಂದು ಶ್ರೀರಾಮಾನುಜರು ಹೇಳಿದ್ದಾರೆ.

**ಏವಂ ಚತುರ್ವಿಧಾ ಜ್ಞಾನನಿಷ್ಠಾ ಪೂರ್ವಪೂರ್ವಾ ಉತ್ತರೋತ್ತರನಿಷ್ಪಾದ್ಯಾ.**

ಆರೋಹಣಕ್ರಮದಲ್ಲಿ (೫೮, ೫೭, ೫೬, ೫೫) ಇವು ಜ್ಞಾನನಿಷ್ಠನ ಘಟ್ಟಗಳು.) (ರಾ.ಭಾ.)

**ಓಂ ವಿಷಯಾ ವಿನಿವರ್ತನ್ತೇ ನಿರಾಹಾರಸ್ಯ ದೇಹಿನಃ ।**
**ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥೫೯॥**

ದೇಹಿಯು ನಿರಾಹಾರನಾದರೆ ವಿಷಯಗಳು ಅವನಿಂದ ಹಿಂದಿರುಗುತ್ತವೆ. ಆದರೆ ರಸವು ಮಾತ್ರ ಹೋಗುವುದಿಲ್ಲ. ಪರವಸ್ತುವನ್ನು ಕಂಡುಕೊಂಡರೆ ಆ ರಸವೂ ಹೋಗಿಬಿಡುತ್ತದೆ.

* * *

(ಶಬ್ದ-ಸ್ಪರ್ಶ ಮೊದಲಾದ ವಿಷಯಗಳು (**ನಿರಾಹಾರಸ್ಯ**) ಅವುಗಳನ್ನು ಉಪಯೋಗಮಾಡದೇ ಹಠದಿಂದ ಬಿಡುವಂಥ ಪ್ರಾಣಿಮಾತ್ರಕ್ಕೆ ಹೋಗಿಬಿಡುತ್ತವೆ. ಆದರೆ ರಸವು ಮಾತ್ರ ಹೋಗಿರುವುದಿಲ್ಲ. ಜ್ಞಾನಿಗಾದರೋ **ಪರಂ**= ಪರಮಾತ್ಮಸ್ವರೂಪವನ್ನು ಕಂಡಮೇಲೆ **ರಸೋಽಪಿ** ಆ ರಾಗವೂ **ನಿವರ್ತತೇ** ಹಿಮ್ಮೆಟ್ಟುತ್ತದೆ.

ವಿಷಯಗಳನ್ನು ತೆಗೆದುಕೊಳ್ಳದೆ ಕಷ್ಟವಾದ ತಪಸ್ಸಿನಲ್ಲಿರುವವನನ್ನೂ ಕೂಡ ಇಂದ್ರಿಯವಿಷಯಗಳು ಬಿಟ್ಟುಹೋಗುತ್ತವೆ. ರೋಗಿಯನ್ನೂ ಸಹ ಬಿಟ್ಟುಹೋಗುತ್ತವೆ. ಆದರೆ ರಸವು ಮಾತ್ರ ಹೋಗುವುದಿಲ್ಲ. ರಸ ಎಂದರೆ ರಾಗ.

**ಸ್ವರಸೇನ ಪ್ರವೃತ್ತೋ ರಸಿಕೋ ರಸಜ್ಞಃ** ಎಂಬ ಉದಾಹರಣೆಯನ್ನು ಶ್ರೀಶಂಕರರು ಹೇಳಿದ್ದಾರೆ.

ಜ್ಞಾನೇಂದ್ರಿಯ–ಕರ್ಮೇಂದ್ರಿಯಗಳಿಗೆ ಬೇಕಾದ ಇಂದ್ರಿಯಾರ್ಥಗಳನ್ನು ಕೊಡದಿದ್ದರೆ ಅವುಗಳು ಇಂದ್ರಿಯಗಳಲ್ಲಿ ಉಂಟುಮಾಡಿರುವ ರಾಗವನ್ನು ಹಾಗೆಯೇ ಉಳಿಸಿ ಹಿಮ್ಮೆಟ್ಟುತ್ತವೆ. ಅರ್ಥಾತ್ ಇಂದ್ರಿಯಾರ್ಥಗಳ ಭೋಗವಿಲ್ಲದೇ ಇರುವುದರಿಂದ ಮಾತ್ರವೇ ಅವುಗಳ ಮೇಲಿನ ಆಸೆಯು ಇಂದ್ರಿಯಗಳಿಗೆ ಹೋಗಿರುವುದಿಲ್ಲ. ಆಸೆಯೆಂಬುದೇ ರಸ. ಪರಮಾತ್ಮನ ಸ್ವರೂಪವನ್ನು ಕಂಡೊಡನೆ ಇಂದ್ರಿಯಾರ್ಥಗಳ ಮೇಲಿನ ರಾಗವೂ ಸಹ ಇಂದ್ರಿಯಗಳಿಗೆ ಹೋಗಿಬಿಡುತ್ತದೆ.

ನಿರಾಹಾರ ಎಂಬ ಪದಕ್ಕೆ 'ನಾಲಿಗೆಗಳು ಆಹಾರತೆಗೆದುಕೊಳ್ಳದಿರುವಿಕೆ' ಎಂಬ ಅರ್ಥವನ್ನಿಟ್ಟುಕೊಂಡು ಈ ಶ್ಲೋಕಕ್ಕೆ ಮತ್ತೊಂದು ವಿಧವಾಗಿಯೂ ಅರ್ಥಮಾಡಿದ್ದಾರೆ.

ಅನ್ನದಿಂದ ಇಂದ್ರಿಯಗಳ ಪೋಷಣವಾಗುತ್ತದೆ. ನಿರಾಹಾರದಿಂದ ಇಂದ್ರಿಯಗಳು ಕ್ಷೀಣವಾಗಿ ತಮ್ಮ ತಮ್ಮ ವಿಷಯಸೇವನೆಗೆ ಅಸಮರ್ಥ

ವಾಗುತ್ತವೆ. ಅದು ಹೊರತಾಗಿ ಇಂದ್ರಿಯಗಳಿಗೆ ಇಂದ್ರಿಯಾರ್ಥಗಳಲ್ಲಿ ರಾಗವು ಅಥವಾ ಆಸಕ್ತಿಯು ಹೋಗುವುದಿಲ್ಲ. ಉಪವಾಸಮಾಡಿ ವಿಷಯಗಳನ್ನು ನಿರಾಕರಣಮಾಡುವುದರಿಂದ ದೇಹದ ಅಶಕ್ತತೆಗೆ ಮಾತ್ರವೇ ಸ್ಥಾನ ಮಾಡಿಕೊಟ್ಟಂತಾಗುತ್ತದೆ. ಇದರಿಂದ ಮನಸ್ಸಿನಲ್ಲಿರುವ ವಿಷಯವಾಸನೆಯು (ರಸವು) ಕಡಿಮೆಯಾಗಲಾರದು.

ಆದುದರಿಂದ ಈ ವಾಸನೆಯನ್ನು ನಿರ್ಮೂಲಮಾಡುವ ಬ್ರಹ್ಮಜ್ಞಾನ ವನ್ನು ಸಂಪಾದನೆಮಾಡಿಕೊಳ್ಳಬೇಕು. ಬ್ರಹ್ಮಜ್ಞಾನವಾದ ಬಳಿಕ, ಮನಸ್ಸು ಅದರೊಡನೆ ಇಂದ್ರಿಯಗಳೂ ತಮ್ಮಷ್ಟಕ್ಕೆ ತಾವೇ ನಮ್ಮ ಸ್ವಾಧೀನದಲ್ಲಿ ಉಳಿಯುವುವು.

ಪರಮಾತ್ಮಾನುಭವದನಂತರ ಇಂದ್ರಿಯರಾಗವೂ ಸಂಪೂರ್ಣವಾಗಿ ನಾಶವಾಗುತ್ತದೆ. ಹೇಗೆಂದರೆ–ಸಾಪೇಕ್ಷತೆಯಿಂದ. ಬ್ರಹ್ಮಾನುಭವದ ರಾಗವು ಇಂದ್ರಿಯರಾಗಕ್ಕಿಂತ ಅತ್ಯುತ್ಕೃಷ್ಟವಾದುದು ಮತ್ತು ನಿತ್ಯವಾದುದು ಎಂದು ಅನುಭವಸಿದ್ಧವಾದನಂತರ ಸಹಜವಾಗಿಯೇ ಮನಸ್ಸು ಯಾವ ಸುಖವು ಹೆಚ್ಚೋ ಅಲ್ಲಿಯೇ ಲೀನವಾಗುತ್ತದೆ. ಶ್ರೀ ಯಾಮುನಾಚಾರ್ಯರು ತಮ್ಮ ಸ್ತೋತ್ರರತ್ನದಲ್ಲಿ ಹೀಗೆ ಹೇಳಿದ್ದಾರೆ. **ಸ್ಥಿತೇಽರವಿನ್ದೇ ಮಕರನ್ದನಿರ್ಭರೇ ಮಧುವ್ರತೋ ನೇಕ್ಷುರಕಂ ಹಿ ವೀಕ್ಷತೇ ॥** ಮಧುವಿನಿಂದ ತುಂಬಿದ ಕಮಲವಿರಲು ದುಂಬಿಯು ಇಕ್ಷುರಕದ (ಕೊಳವಳಿಕೆ) ಹೂವಿನ ಕಡೆ ತಿರುಗಿಯೂ ಸಹ ನೋಡುವುದಿಲ್ಲ.

ಉಪವಾಸನಿಷ್ಠನಾದ ಸಾಧಕನಿಂದ ವಿಷಯಗಳು (ಇಂದ್ರಿಯವಿಷಯ ಗಳು) ಹಿಮ್ಮೆಟ್ಟುತ್ತವೆ. ಆದರೆ ಆಹಾರವಿಲ್ಲದೇ ಇಂದ್ರಿಯಪಟುತ್ವವಿಲ್ಲದಿರು ವುದರಿಂದ ನೋಡುವುದು, ಕೇಳುವುದು, ಆಘ್ರಾಣಿಸುವುದು ಮತ್ತು ಸ್ಪರ್ಶ–ಈ ವಿಷಯಗಳು ದೂರವಾದರೂ ಜಿಹ್ವಾಚಾಪಲ್ಯವು ಮಾತ್ರ ದೂರ ವಾಗುವುದಿಲ್ಲ. ನಾಲಿಗೆಯ ಆ ರಸವೂ ಸಹ ಪರಮಪುರುಷನನ್ನು ಹೃದ ಯಾಂತರಾಳದಲ್ಲಿ ಕಂಡ ನಂತರ ರಸರಹಿತವಾಗಿ ಹಿಂದಿರುಗುತ್ತದೆ. ಆತ್ಮ ಸಮಾಧಿಯಲ್ಲಿ ಜಿಹ್ವಾಚಾಪಲ್ಯವೂ ಹೋಗಿಬಿಡುತ್ತದೆ. ಜಿಹ್ವಾಚಾಪಲ್ಯದ ವಿಷಯವಾಗಿ ಭಾಗವತದಲ್ಲಿ (೧೧-೮) ಹೀಗೆ ಹೇಳಿದೆ :

**ಇನ್ದ್ರಿಯಾಣಿ ಜಯನ್ತ್ಯಾಶು ನಿರಾಹಾರಾ ಮನೀಷಿಣಃ ।**
**ವರ್ಜಯಿತ್ವಾ ತು ರಸನಂ ತನ್ನಿರನ್ನಸ್ಯ ವರ್ಧತೇ ॥೨೦॥**

**ತಾವಜ್ಜಿತೇನ್ದ್ರಿಯೋ ನ ಸ್ಯಾದ್ವಿಜಿತಾನ್ಯೇನ್ದ್ರಿಯಃ ಪುಮಾನ್ ।**
**ನ ಜಯೇದ್ರಸನಂ ಯಾವಜ್ಜಿತಂ ಸರ್ವಂ ಜಿತೇ ರಸೇ ॥೨೧॥**

ಉಪವಾಸನಿಷ್ಠರಾದ ಮನೀಷಿಗಳು ಇಂದ್ರಿಯಗಳನ್ನು ಬಹುಬೇಗ ಜಯಿಸುತ್ತಾರೆ. ಆದರೆ ಅವರು ನಾಲಿಗೆಯನ್ನು ಮಾತ್ರ ಜಯಿಸಲಾರರು. ಏಕೆಂದರೆ : ಉಪವಾಸಮಾಡಿದಷ್ಟೂ ಜಿಹ್ವಾಚಾಪಲ್ಯವು ಹೆಚ್ಚುತ್ತಲೇ ಇರುತ್ತದೆ. ಒಬ್ಬನು ಎಲ್ಲ ಇಂದ್ರಿಯಗಳನ್ನೂ ಜಯಿಸಿರಬಹುದು. ಆದರೂ ಸಹ ನಾಲಿಗೆಯನ್ನು ಜಯಿಸದಿದ್ದರೆ ಅವನು ಯಾವ ಇಂದ್ರಿಯಗಳನ್ನೂ ಜಯಿಸಿದಂತಾಗುವುದಿಲ್ಲ. ನಾಲಿಗೆಯನ್ನು ಜಯಿಸಿದರೆ ಅವನು ಎಲ್ಲ ಇಂದ್ರಿಯಗಳನ್ನೂ ಜಯಿಸಿದಂತೆಯೇ ಸರಿ.

ಆದರೆ ಇಲ್ಲಿ ಆಹಾರಶಬ್ದವು ಎಲ್ಲ ಇಂದ್ರಿಯಗಳ ಆಹಾರದ ವಿಷಯಗಳನ್ನು ಕುರಿತು ಹೇಳಿದೆ–ಎಂದು ಆಚಾರ್ಯರುಗಳ ಅಭಿಪ್ರಾಯ. ಇದಕ್ಕೆ ಪ್ರಮಾಣವಾಗಿ ಶ್ರೀವೇದಾಂತದೇಶಿಕರು : **ದಶೈತಾನೀನ್ದ್ರಿಯೋಕ್ತಾನಿ ದ್ವಾರಾಣ್ಯಾಹಾರಸಿದ್ಧಯೇ ।**–ಎಂಬ ಮೋಕ್ಷಧರ್ಮದ ವಚನವನ್ನು ಉದಾಹರಿಸಿದ್ದಾರೆ.

ರಸ, ರಾಗ–ಇವುಗಳು ಪರ್ಯಾಯಪದಗಳು. **ರಸೋ ರಾಗಸ್ತಥಾ ರಕ್ತಿಃ ಶೋಭನಾಧ್ಯಾಸ ಇಷ್ಯತೇ)** (ಮ.ಭಾ.)

**ಓಂ ಯತತೋ ಹ್ಯಪಿ ಕೌನ್ತೇಯ ಪುರುಷಸ್ಯ ವಿಪಶ್ಚಿತಃ ।**
**ಇನ್ದ್ರಿಯಾಣಿ ಪ್ರಮಾಥೀನಿ ಹರನ್ತಿ ಪ್ರಸಭಂ ಮನಃ ॥೬೦॥**

ಕೌಂತೇಯ! (ಇಂದ್ರಿಯಜಯಕ್ಕೆ) ಪ್ರಯತ್ನಮಾಡುತ್ತಿರುವ ಪುರುಷನು ಮೇಧಾವಿಯಾಗಿದ್ದರೂ ಕೂಡ ಕ್ಷೋಭೆಯನ್ನುಂಟುಮಾಡುವ ಅವನ ಇಂದ್ರಿಯಗಳು ಮನಸ್ಸನ್ನು ಬಲಾತ್ಕಾರವಾಗಿ ಅಪಹರಿಸುತ್ತವೆ.

* * *

(ಪುರುಷನೆಂದರೆ ಸಾಧಾರಣಮನುಷ್ಯನಲ್ಲ. ವಿದ್ವಾಂಸ. ಸದಸದ್ವಿವೇಕಗಳನ್ನು ಚೆನ್ನಾಗಿ ತಿಳಿದವನು. ಇಂದ್ರಿಯಗಳಲ್ಲಿನ ದೋಷಗಳನ್ನು ತಿಳಿದುಕೊಂಡಿರುವವನು. ಇವನದು ಕೇವಲ ಪುಸ್ತಕಪಾಂಡಿತ್ಯವಲ್ಲ. ಕೆಲವು

ವಿಪಶ್ಚಿತರು ಪುಸ್ತಕಪಾಂಡಿತ್ಯವನ್ನು ಪಡೆದು ಮತ್ತೊಬ್ಬರಿಗೆ ಬೋಧನೆ ಮಾಡುವುದರಲ್ಲಿಯೇ ಆಸಕ್ತರಾಗಿರುತ್ತಾರೆ. ಆದರೆ ಇವನು ಇನ್ನೊಬ್ಬರಿಗೆ ಹೇಳಿದಂತೆ ತಾನು ನಡೆದುಕೊಳ್ಳಲು ಸತತವಾಗಿ ಪ್ರಯತ್ನಿಸುತ್ತಿರುತ್ತಾನೆ. ಆದರೆ ಇಂದ್ರಿಯಗಳು ಬಹುಬಲಿಷ್ಠವಾದುವುಗಳು. ಮನುಷ್ಯನ ಮನಸ್ಸನ್ನು ಕ್ಷಣ-ಕ್ಷಣಕ್ಕೂ ಮಥಿಸುತ್ತಲೇ ಇರುತ್ತವೆ. ಕಣ್ಣು ಯಾವುದನ್ನೋ ನೋಡ ಬೇಕೆಂದು ಮನಸ್ಸಿಗೆ ಹೇಳುತ್ತಿರುತ್ತದೆ. ಕಿವಿಯು ಏನನ್ನೋ ಕೇಳಬೇಕೆಂದು ಮನಸ್ಸಿಗೆ ಸಲಹೆ ನೀಡುತ್ತಿರುತ್ತದೆ. ಒಂದೊಂದು ಇಂದ್ರಿಯವೂ ಮನಸ್ಸನ್ನು ಹಿಂದು-ಮುಂದಕ್ಕೆ ಎಳೆದಾಡುತ್ತಿರುತ್ತವೆ. ಪ್ರಯತ್ನಶೀಲನಾದ ವಿದ್ವಾಂಸನ ಮನಸ್ಸನ್ನೂ ಸಹ ಹೀಗೆ ಕಲಕುವ ಸ್ವಭಾವವುಳ್ಳ ಇಂದ್ರಿಯಗಳು (ತಿಳಿನೀರಿನ ಸರೋವರವನ್ನು ಗಾಳಿಯು ಕಲಕುವಂತೆ) ಬಲಾತ್ಕಾರವಾಗಿ ಅಪಹರಿಸಿಬಿಡು ತ್ತವೆ. ಇಂದ್ರಿಯಗಳನ್ನು ತನ್ನ ವಶಕ್ಕೆ ತೆಗೆದುಕೊಳ್ಳಬೇಕೆಂದು ಪ್ರಯತ್ನಿಸುವ ವಿದ್ವಾಂಸನನ್ನು ಎಲ್ಲ ಇಂದ್ರಿಯಗಳೂ ಒಟ್ಟಾಗಿ ಸೇರಿ ಅವನ ಮೇಲೆ ಮುತ್ತಿಗೆ ಹಾಕಿ ತಮ್ಮ ವಶಕ್ಕೇ ತೆಗೆದುಕೊಂಡುಬಿಡುತ್ತವೆ.

ಇಂದ್ರಿಯಗ್ರಾಮವು ಎಷ್ಟು ಬಲವತ್ತರವೆಂಬುದನ್ನು ಸಮರ್ಥಿಸುತ್ತಾ ಮನುವು ಹೀಗೆ ಹೇಳಿದ್ದಾನೆ :

**ಮಾತ್ರಾ ಸ್ವಸ್ರಾ ದುಹಿತ್ರಾ ವಾ ನ ವಿವಿಕ್ತಾಸನೋ ಭವೇತ್ ।**
**ಬಲವಾನಿನ್ದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ ॥**

ತಾಯಿಯೊಡನೆಯೇ ಆಗಲೀ, ಸೊಸೆಯೊಡನೆಯೇ ಆಗಲೀ, ಮಗಳೊಡನೆಯೇ ಆಗಲೀ–ಏಕಾಂತದಲ್ಲಿ ಪ್ರತ್ಯೇಕವಾಗಿರಬಾರದು. ಏಕೆಂದರೆ : ಬಹುಬಲಿಷ್ಠವಾದ ಇಂದ್ರಿಯಸಮೂಹವು ಶಾಸ್ತ್ರಜನ್ಯಜ್ಞಾನ ವಿರುವ ವಿದ್ವಾಂಸನನ್ನೂ ದುರ್ಮಾರ್ಗಕ್ಕೆ ಸೆಳೆದುಬಿಡುತ್ತದೆ. ಇದೇ ವಿಷಯ ವನ್ನು ಮತ್ತೊಂದು ರೀತಿಯಲ್ಲಿ ಭಾಗವತದಲ್ಲಿ ಹೀಗೆ ಹೇಳಿದೆ :

**ಜಿಹ್ವೈಕತೋಽಮುಮಪಕರ್ಷತಿ ಕರ್ಹಿ ತರ್ಷಾ**
**ಶಿಶ್ನೋಽನ್ಯತಸ್ತ್ವಗುದರಂ ಶ್ರವಣಂ ಕುತಶ್ಚಿತ್ ।**
**ಘ್ರಾಣೋಽನ್ಯತಶ್ಚಪಲದೃಕ್ಕ್ವಚಕರ್ಮಶಕ್ತಿ-**
**ರ್ಬಹ್ವ್ಯಃ ಸಪತ್ನ್ಯ ಇವ ಗೇಹಪತಿಂ ಲುನನ್ತಿ ॥**

ಇವನನ್ನು ನಾಲಿಗೆಯು ಒಂದು ಕಡೆಗೆ ಸೆಳೆಯುತ್ತದೆ. ಬಾಯಾರಿ

ಕೆಯು ಮತ್ತೊಂದು ಕಡೆಗೆ ಸೆಳೆಯುತ್ತದೆ. ಜನನೇಂದ್ರಿಯವು ಮಗದೊಂದು ಕಡೆಗೆ ಸೆಳೆಯುತ್ತದೆ. ಹೀಗೆಯೇ ತ್ವಕ್, ಹೊಟ್ಟೆ, ಕಿವಿ, ಮೂಗು, ಕಣ್ಣು–ಇವುಗಳೂ ಸಹ ಒಂದೊಂದು ಕಡೆಗೆ ಸೆಳೆಯುತ್ತಿರುತ್ತವೆ. ಒಬ್ಬ ಗೃಹಸ್ಥನ ಬಹುಪತ್ನಿಯರಲ್ಲಿ ಒಬ್ಬೊಬ್ಬಳೂ ಪತಿಯನ್ನು ತನ್ನ ಕಡೆಗೇ ಸೆಳೆದುಕೊಳ್ಳಲು ಯತ್ನಿಸುವಂತೆ–ದೇಹಿಯನ್ನು ಪ್ರತಿಯೊಂದು ಇಂದ್ರಿಯಗಳೂ ತಮ್ಮ-ತಮ್ಮ ಕಡೆಗೆ ಸೆಳೆದುಕೊಳ್ಳಲು ಪ್ರಯತ್ನಿಸುತ್ತಲೇ ಇರುತ್ತವೆ.

ಬಲಿಷ್ಠವಾದ ಪಿಶಾಚಿಯು ಮಾಂತ್ರಿಕನನ್ನು ಮೋಸಗೊಳಿಸುವಂತೆ ಋದ್ಧಿ-ಸಿದ್ಧಿಗಳ ನಿಮಿತ್ತದಿಂದ ದೊರೆತ ವಿಷಯಗಳು ಇಂದ್ರಿಯಗಳ ದ್ವಾರ ಗಳಿಂದ ಯೋಗಿಗಳ ಮನಸ್ಸನ್ನೂ ಭ್ರಷ್ಟಗೊಳಿಸುವುವು.

ಒಂದು ಸಲ ಶಿಷ್ಯನೊಬ್ಬ ಶಾರದಾದೇವಿಯವರ ಹತ್ತಿರ ಮಾತನಾಡು ತ್ತಿದ್ದಾಗ 'ಈಗ ನನ್ನ ಮನಸ್ಸು ಪರಿಶುದ್ಧವಾಗಿದೆ. ಅಪಾಯದಿಂದ ಪಾರಾದೆ'–ಎಂದು ಹೇಳಿದ. ಒಡನೆಯೇ ಶಾರದಾದೇವಿಯವರು ಹೀಗೆಂದು ಹೇಳಿದರು :

'ಹಾಗೇ ಹೇಳಬೇಡ. ಆಕಾಶವು ಈಗ ನೋಡಲು ಸ್ವಚ್ಛವಾಗಿಯೇ ಕಾಣಬಹುದು. ಮರುಕ್ಷಣದಲ್ಲಿಯೇ ಮೋಡಗಳು ಕವಿದು ಮಳೆಗರೆಯುವು ದನ್ನು ನಾವು ಕಂಡಿದ್ದೇವೆ. ಹಾಗೆಯೇ ಪೂರ್ವಸಂಸ್ಕಾರವೆಂಬ ಮೋಡಗಳು ನಮ್ಮ ಮನಸ್ಸೆಂಬ ಆಕಾಶದ ಮೇಲೆ ಯಾವಾಗ ಬೇಕಾದರೂ ಕವಿಯ ಬಹುದು. ಆದುದರಿಂದ ಇಂದ್ರಿಯಗಳನ್ನು ಜಯಿಸಿಬಿಟ್ಟೆನೆಂದು ಅಹಂಕಾರ ಪಡಬಾರದು' ಎಂದರು.

ಇಂದ್ರಿಯಜಯವು ಆತ್ಮದರ್ಶನಕ್ಕೆ ಅಧೀನ. ಆತ್ಮದರ್ಶನವು ಇಂದ್ರಿಯಜಯಕ್ಕೆ ಅಧೀನ. ಹೀಗೆ ಅನ್ಯೋನ್ಯಾಶ್ರಯವಿರುವುದರಿಂದ ಜ್ಞಾನ ನಿಷ್ಠೆಯನ್ನು ಪಡೆಯುವುದು ಬಹುಕಷ್ಟ. ಇದಕ್ಕೆ ಸರ್ವಪ್ರಯತ್ನವನ್ನೂ ಮಾಡಬೇಕು. **ಏವಂ ಇನ್ದ್ರಿಯಜಯಃ ಆತ್ಮದರ್ಶನಾಧೀನಃ ಆತ್ಮದರ್ಶನಂ ಇನ್ದ್ರಿಯಜಯಾಧೀನಂ ಇತಿ ಜ್ಞಾನನಿಷ್ಠಾ ದುಷ್ಪ್ರಾಪಾ**

(ರಾಂ.ಭಾ.)

ಅಪರೋಕ್ಷಜ್ಞಾನವಿಲ್ಲದ ಜ್ಞಾನಿಯ (ವಿದ್ಯಾವಂತನ) ಮತ್ತು ಸಾಧಾರಣಪ್ರಯತ್ನವುಳ್ಳವನ ಮನಸ್ಸನ್ನು ಇಂದ್ರಿಯಗಳು ಅಪಹರಿಸುತ್ತವೆ.

ಹಾಗೆಂದು ಇಂದ್ರಿಯಗಳ ಜಯವು ಸರ್ವಥಾ ಅಶಕ್ಯವೆಂದು ತಿಳಿಯ ಬಾರದು. ಪರಮಾತ್ಮನಲ್ಲಿ ಮನೋಯೋಗವನ್ನು ಹೊಂದಬೇಕು. **ಅಪರೋಕ್ಷಜ್ಞಾನರಹಿತಜ್ಞಾನಿನೋಽಪಿ ಸಾಧಾರಣಯತ್ನವತೋಽಪಿ ಮನಃ ಹರನ್ತಿ ಇನ್ದ್ರಿಯಾಣಿ** (ಮ.ಭಾ.)

**ತರ್ಹಿ ಅಶಕ್ಯಾನ್ಯೇವ ಇತ್ಯತ ಆಹ ;**

**ಓಂ ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।**
**ವಶೇ ಹಿ ಯಸ್ಯೇನ್ದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೬೧॥**

ಅವುಗಳನ್ನೆಲ್ಲಾ ವಶಪಡಿಸಿಕೊಂಡು ನನ್ನಲ್ಲಿ ಪರಾಯಣನಾಗಿ ಸಮಾಹಿತನಾಗಿರಬೇಕು. ಯಾವನಿಗೆ ಇಂದ್ರಿಯಗಳು ವಶದಲ್ಲಿರುವುವೋ ಅವನ ಪ್ರಜ್ಞೆಯು ಸುಸ್ಥಿರವಾಗಿರುವುದು. ಅವನೇ ಸ್ಥಿತಪ್ರಜ್ಞನು.

* * *

(ಎಲ್ಲ ಇಂದ್ರಿಯಗಳನ್ನೂ ನಿಗ್ರಹಿಸಬೇಕು. ಒಂದನ್ನು ನಿಗ್ರಹಿಸಿ ಮತ್ತೊಂದನ್ನು ನಿಗ್ರಹಿಸದಿದ್ದರೆ ಪ್ರಯೋಜನವಿಲ್ಲ. ಬಿಂದಿಗೆಯಲ್ಲಿರುವ ಐದು ತೂತುಗಳಲ್ಲಿ ನಾಲ್ಕನ್ನು ಮುಚ್ಚಿದರೂ ಸಹ ಉಳಿದೊಂದು ತೂತಿನಿಂದ ನೀರೆಲ್ಲವೂ ಸೋರಿಹೋಗುವುದು. ಆದುದರಿಂದಲೇ **ತಾನಿ ಸರ್ವಾಣಿ ಸಂಯಮ್ಯ :** ಎಲ್ಲ ಇಂದ್ರಿಯಗಳನ್ನೂ ಸಂಯಮನಮಾಡಬೇಕೆಂದು ಶ್ರೀಕೃಷ್ಣನು ಹೇಳುತ್ತಾನೆ.

**ಯುಕ್ತಃ** ಎಂದರೆ ಬುದ್ಧಿಯೋಗಯುಕ್ತನಾಗಿ, ವ್ಯವಸಾಯಾತ್ಮಿಕವಾದ ಬುದ್ಧಿಯಿಂದ ಕೂಡಿದವನಾಗಿ, ಸಮತ್ವಬುದ್ಧಿಯಿಂದ ಕೂಡಿ–ಎಂದರ್ಥವಾಗುತ್ತದೆ. **ಮತ್ಪರಃ** ಎಂದು ಹೇಳಿ ಮೊದಲನೆಯದಾಗಿ ಶ್ರೀಕೃಷ್ಣನು ಗೀತೆಯಲ್ಲಿ ಭಕ್ತಿಯೋಗದ ಅಂಕುರವನ್ನಿಟ್ಟಿದ್ದಾನೆ. ಇಂದ್ರಿಯಗಳಿಂದ ಇಂದ್ರಿಯಾರ್ಥಗಳನ್ನು ದೂರಮಾಡಿದನಂತರ ಅವು ಅವುಗಳ ಮೂಲಕ ಹರಿದುಹೋಗುತ್ತಿದ್ದ ಶಕ್ತಿಯನ್ನು ಭಗವಂತನ ಕಡೆಗೆ ತಿರುಗಿಸಬೇಕು. ಭಗವಂತನ ಮೇಲೆ ಮನಸ್ಸಿಟ್ಟಾಗ ಮಾತ್ರ ನಾವು ಇಂದ್ರಿಯಗಳ ಉಪಟಳದಿಂದ ಪಾರಾಗುತ್ತೇವೆ.

'ಮನಸ್ಸನ್ನು ಪ್ರಬಲವಾದ ಇಂದ್ರಿಯಗಳು ಬಲಾತ್ಕಾರವಾಗಿ ಸೆಳೆಯುವುವು'-ಎಂದು ಹೇಳಿದನಂತರ ಅವುಗಳನ್ನು ಸಂಯಮನಮಾಡು, ಮತ್ಪರಮ

ನಾಗಿರು. ಮತ್ಪರಾಯಣನಾಗಿರು. ವಾಸುದೇವನೇ ಸರ್ವವೆಂದೂ ಭಾವಿಸು. ನನ್ನನ್ನೇ ಚಿಂತಿಸು. ಹೀಗೆ ಮಾಡುವುದರಿಂದ ಇಂದ್ರಿಯಗಳು ನಿನ್ನ ವಶವಾಗುವುವು. ಯಾರಿಗೆ ಇಂದ್ರಿಯಗಳು ವಶವಾಗಿರುವುವೋ–ಅವನ ಪ್ರಜ್ಞೆಯು ಸ್ಥಿರವಾಗಿರುವುದು. ಅವನು ಸ್ಥಿರಪ್ರಜ್ಞನಾಗಿರುವನು. ಇದರ ಮಥಿತಾರ್ಥವು ಹೀಗಾಗುತ್ತದೆ–ಇಂದ್ರಿಯಗಳನ್ನು ಜಯಿಸಲು ಅವುಗಳನ್ನು ಸಂಯಮನಮಾಡಬೇಕು. ವಾಸುದೇವಪರಾಯಣವಾಗಿಸಬೇಕು. ಹೀಗೆ ಮಾಡುವುದರಿಂದ ಇಂದ್ರಿಯಗಳು ವಶವಾಗುತ್ತವೆ. ಆತ್ಮಸಾಕ್ಷಾತ್ಕಾರವಾಗುತ್ತದೆ. ಸ್ಥಿತಪ್ರಜ್ಞನಾಗುತ್ತಾನೆ.)

**ಓಂ ಧ್ಯಾಯತೋ ವಿಷಯಾನ್ಪುಂಸಃ ಸಙ್ಗಸ್ತೇಷೂಪಜಾಯತೇ ।**
**ಸಙ್ಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿಜಾಯತೇ॥೬೨॥**

**ಓಂ ಕ್ರೋಧಾದ್ಭವತಿ ಸಮ್ಮೋಹಃ ಸಮ್ಮೋಹಾತ್ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ॥೬೩॥**

ವಿಷಯಗಳನ್ನು ಧ್ಯಾನಿಸುತ್ತಿರುವ ಮನುಷ್ಯನಿಗೆ ಅವುಗಳಲ್ಲಿ ಸಂಗವುಂಟಾಗುತ್ತದೆ. ಸಂಗದಿಂದ ಕಾಮವುಂಟಾಗುತ್ತದೆ. ಕಾಮದಿಂದ ಕ್ರೋಧವುಂಟಾಗುತ್ತದೆ. ಕ್ರೋಧದಿಂದ ಅವಿವೇಕವುಂಟಾಗುತ್ತದೆ. ಅವಿವೇಕದಿಂದ ಸ್ಮೃತಿಯು ಜಾರುತ್ತದೆ. ಸ್ಮೃತಿಯ ಭ್ರಂಶದಿಂದ ಬುದ್ಧಿನಾಶವಾಗುತ್ತದೆ. ಬುದ್ಧಿನಾಶದಿಂದ ಆ ಪುರುಷನು ನಾಶವನ್ನು ಹೊಂದುತ್ತಾನೆ.

* * *

(ಇಂದ್ರಿಯಗಳು ತಮ್ಮ ಚೇಷ್ಟೆಯನ್ನು ಹೇಗೆ ಆರಂಭಿಸುವುವು ಮತ್ತು ಅದರ ಪರಿಣಾಮವೇನಾಗುವುದು–ಎಂಬುದನ್ನು ಶ್ರೀಕೃಷ್ಣನು ಎಲ್ಲರಿಗೂ ಮನದಟ್ಟಾಗುವಂತೆ ಹೇಳಿದ್ದಾನೆ. ಶ್ರೀಕೃಷ್ಣನು ಹೇಳುವ ಈ ವಿಷಯವು ಎಲ್ಲರ ಅನುಭವದಲ್ಲಿಯೂ ಇದೆ. ಆದರೆ ಈ ಅನುಭವದಿಂದ ಬುದ್ಧಿ ಕಲಿಯುವವರು ಅಪರೂಪ.

ವಿಷಯಗಳನ್ನು ಚಿಂತಿಸುತ್ತಿರುವ ಮನುಷ್ಯನಿಗೆ ಆ ವಿಷಯಗಳಲ್ಲಿ ಆಸಕ್ತಿಯು ಹುಟ್ಟುತ್ತದೆ. ವಿಷಯಗಳೆಂದರೆ ದಶೇಂದ್ರಿಯಗಳಿಗೆ ಸಂಬಂಧಿಸಿದಂತೆ ಯಾವ ವಿಷಯವಾದರೂ ಆಗಬಹುದು. ಕಣ್ಣು ಬೀದಿಯಲ್ಲಿ ಹೋಗು

ತ್ತಿರುವ ಆಕರ್ಷಕರೂಪವೊಂದನ್ನು ಕ್ಷಣಕಾಲ ನೋಡುತ್ತದೆ. ಒಡನೆಯೇ ಆ ರೂಪವು ಮನಸ್ಸಿನೊಳಗೆ ಪ್ರವೇಶಿಸುತ್ತದೆ. ಆ ವಿಷಯವಾಗಿಯೇ ಆಲೋಚಿಸುತ್ತಿದ್ದಂತೆ ಅದನ್ನು ಪಡೆದುಕೊಳ್ಳಬೇಕೆಂಬ ಆಸೆಯು ಮೂಡು ತ್ತದೆ. 'ತಾನು ಅದನ್ನು ಆಶಿಸಬಹುದೇ? ಅದು ತನಗೆ ಸಿಕ್ಕೀತೇ?'–ಎಂದು ಮನಸ್ಸಿನಲ್ಲಿ ಅನೇಕವಿಧವಾದ ತರ್ಕ-ವಿತರ್ಕಗಳಾದರೂ ಆ ಆಕಾರವು ಮನಸ್ಸಿನಲ್ಲಿ ಬಲವಾಗಿ ಬೇರೂರಿರುವುದರಿಂದ ಅದನ್ನು ಕಿತ್ತೊಗೆಯಲು ಸಾಧ್ಯವಾಗುವುದಿಲ್ಲ. ಅದನ್ನು ಪಡೆದುಕೊಳ್ಳಲು ಪ್ರಯತ್ನಮಾಡುತ್ತಾನೆ. ಆಗ ಅನೇಕ ಎಡರು-ತೊಡರುಗಳು ಬರುವುದೂ ಸಹಜ. ತನ್ನ ಇಷ್ಟಪ್ರಾಪ್ತಿಗೆ ಅಡ್ಡಬಂದವರ ಮೇಲೆ ಕೋಪವೂ ಬರುತ್ತದೆ. ಕೋಪಗೊಂಡ ಮನುಷ್ಯನು ಯಾವ ಕಾರ್ಯಮಾಡುತ್ತಾನೆ? ಯಾವ ಕಾರ್ಯವನ್ನು ಬಿಡುತ್ತಾನೆ?– ಎಂಬುದೇನೂ ಇಲ್ಲ.

ವಾಲ್ಮೀಕಿರಾಮಾಯಣದ ಸುಂದರಕಾಂಡದಲ್ಲಿ ಆಂಜನೇಯನು ಹೀಗೆ ಹೇಳುತ್ತಾನೆ :

**ಕ್ರುದ್ಧಃ ಪಾಪಂ ನ ಕುರ್ಯಾತ್ಕಃ ಕ್ರುದ್ಧೋ ಹನ್ಯಾದ್ಗುರೂನಪಿ ।**
**ಕ್ರುದ್ಧಃ ಪರುಷಯಾ ವಾಚಾ ನರಃ ಸಾಧೂನಧಿಕ್ಷಿಪೇತ್ ॥**
**ವಾಚ್ಯಾವಾಚ್ಯಂ ಪ್ರಕುಪಿತೋ ನ ವಿಜಾನಾತಿ ಕರ್ಹಿಚಿತ್ ।**
**ನಾಕಾರ್ಯಮಸ್ತಿ ಕ್ರುದ್ಧಸ್ಯ ನಾವಾಚ್ಯಂ ವಿದ್ಯತೇ ಕ್ವಚಿತ್ ॥**

"ಕೋಪವು ಬಂದಾಗ ಪಾಪಮಾಡದಿರುವವನು ಯಾವನಿದ್ದಾನೆ? ಕೋಪಗೊಂಡವನು ಗುರುಗಳನ್ನು ಕೂಡ ಕೊಲ್ಲಬಹುದು. 'ಈ ಮಾತನ್ನು ಹೇಳಬಹುದು ; ಈ ಮಾತನ್ನು ಹೇಳಕೂಡದು'–ಎಂಬ ವಿವೇಕವೇ ಅವನಿ ಗಿರುವುದಿಲ್ಲ. ಅವನು ಮಾಡದ ಕ್ರೂರಕೃತ್ಯವಾಗಲೀ, ಹೇಳದ ಕ್ರೂರವಾಕ್ಯ ವಾಗಲೀ ಇರುವುದಿಲ್ಲ. (ಅವನಿಗೆ ಮಾಡಬಾರದೆಂಬ ಕೆಲಸವೇ ಇರುವುದಿಲ್ಲ; ಹೇಳಬಾರದೆಂಬ ಮಾತೇ ಇರುವುದಿಲ್ಲ.)"

ಇಲ್ಲಿ ಹೇಳಿರುವಂತೆ ಕೋಪಗೊಂಡವನಿಗೆ ಸಮ್ಮೋಹವುಂಟಾಗುವುದು. ಮಾಡಬಾರದ ಕೆಲಸ-ಮಾಡಬಹುದಾದ ಕೆಲಸ–ಎಂಬ ವಿವೇಚನೆಯೇ ಇರುವುದಿಲ್ಲ. ಸಮ್ಮೋಹದಿಂದ ಸ್ಮೃತಿವಿಭ್ರಮವಾಗುವುದು. ಗುರುಗಳ ಉಪ ದೇಶದಿಂದಲೂ ಶಾಸ್ತ್ರಾಭ್ಯಾಸದಿಂದಲೂ ಪಡೆದುಕೊಂಡಿದ್ದ ಜ್ಞಾನವು ವಿಸ್ಮೃತಿ

ಹೊಂದುವುದು. ಸ್ಮೃತಿಭ್ರಂಶದಿಂದ ಬುದ್ಧಿನಾಶವಾಗುವುದು. ಬುದ್ಧಿಯು ಯಾವಾಗಲೂ ಒಳ್ಳೆಯದು ಅಥವಾ ಕೆಟ್ಟದ್ದು–ಎಂಬುದನ್ನು ವಿವೇಚಿಸಿ ಮನಸ್ಸಿಗೆ ತಿಳಿಸುತ್ತಲೇ ಇರುತ್ತದೆ. ಕಳ್ಳನಿಗೆ ಕಳ್ಳತನಮಾಡಬೇಡವೆಂದು ಅವನ ಬುದ್ಧಿಯು ಹೇಳುತ್ತದೆ. ಕಳ್ಳತನಮಾಡದಿದ್ದರೆ ಹೆಂಡತಿ-ಮಕ್ಕಳನ್ನು ಹೇಗೆ ಸಾಕಲಿ ?–ಎಂದು ವಿಷಯಾಸಕ್ತವಾದ ಮನಸ್ಸು ಬುದ್ಧಿಗೆ ಸವಾಲು ಹಾಕುತ್ತದೆ. ಬುದ್ಧಿಯು ಸುಮ್ಮನಿದ್ದುಬಿಡುತ್ತದೆ. ಆದರೆ ಕ್ರೋಧಾಭಿಭೂತನಾದ ಮನುಷ್ಯನ ಬುದ್ಧಿಯು ಯಾವ ಸೂಚನೆಯನ್ನೂ ಕೊಡಲು ಹೋಗುವುದಿಲ್ಲ. ಏಕೆಂದರೆ : ಸ್ಮೃತಿಭ್ರಂಶದಿಂದ ಬುದ್ಧಿಯು ತನ್ನ ವಿವೇಚನಾಶಕ್ತಿಯನ್ನೇ ಕಳೆದುಕೊಂಡುಬಿಟ್ಟಿರುತ್ತದೆ.

ಬುದ್ಧಿಯು ನಾಶವಾದೊಡನೆಯೇ ಮನುಷ್ಯನು ನಾಶಹೊಂದುತ್ತಾನೆ. 'ಸಾಯುತ್ತಾನೆ' ಎಂದಲ್ಲ. ಅವನು ಮನುಷ್ಯನಾಗಿ ಉಳಿಯುವುದಿಲ್ಲ. ಪುರುಷಾರ್ಥಸಾಧನೆಗೆ ತಕ್ಕವನಲ್ಲದೇ ಹೋಗುತ್ತಾನೆ ಎಂದರ್ಥ. ಅರಣ್ಯದಲ್ಲಿನ ಒಂದು ಬೆಂಕಿಯ ಕಿಡಿಯು ಅರಣ್ಯವನ್ನೇ ಭಸ್ಮಮಾಡಿಬಿಡುವಂತೆ–ಕಣ್ಣು ಒಂದು ಕ್ಷಣದಲ್ಲಿ ಮಾಡಿದ ಕೆಲಸ ಒಬ್ಬ ಮನುಷ್ಯನ ಜೀವನವನ್ನೇ ಹಾಳುಮಾಡಿಬಿಡುತ್ತದೆ. ಇಂದ್ರಿಯಗಳ ಪ್ರಚೋದನೆಯಿಂದಲೇ ಹಾಳಾದವರು ಅನೇಕಲಕ್ಷ ಮಂದಿ ಇದ್ದಾರೆ. ಇನ್ನೂ ಹಾಳಾಗುತ್ತಲೇ ಇದ್ದಾರೆ. ಒಂದು ವೈಚಿತ್ರ್ಯವೇನೆಂದರೆ : ಯಾರೂ ಸಹ ಇದು ಇಂದ್ರಿಯಗಳ ಕೃತ್ಯವೆಂದು ಭಾವಿಸುವುದಿಲ್ಲ. ಎಲ್ಲರೂ 'ನಾನು, ನನ್ನದು' ಎಂಬುದರಿಂದ ವಿಮೋಹಿತರಾಗಿಬಿಟ್ಟಿರುತ್ತಾರೆ. ಇಂದ್ರಿಯಗಳಿಂದಾಗುವ ಈ ಅಪಘಾತಗಳನ್ನು ತಪ್ಪಿಸಬೇಕೆಂಬುದೇ ಶ್ರೀಕೃಷ್ಣನ ಆಶಯ.

ವಿಷಯಾನುರಾಗವನ್ನು ಬಿಡದವನು ಪರಮಾತ್ಮನಲ್ಲಿ ಮನಸ್ಸನ್ನಿಡದೇ ಇಂದ್ರಿಯಗಳನ್ನು ಸಂಯಮಮಾಡಿಕೊಂಡಿದ್ದರೂ ಅನಾದಿಪಾಪವಾಸನೆಯಿಂದ ವಿಷಯಧ್ಯಾನವು ಅನಿವಾರ್ಯವಾಗಿ ಬಂದು ಅವನು ಸಂಸಾರಮಗ್ನನಾಗುತ್ತಾನೆ–ಎಂಬ ಭಾವವನ್ನು ಶ್ರೀರಾಮಾನುಜರು ಹೇಳುತ್ತಾರೆ.

**ಸಮ್ಮೋಹಃ ಕೃತ್ಯಾಕೃತ್ಯವಿವೇಕಶೂನ್ಯತಾ** (ರಾ.ಭಾ.)

ಶ್ರೀಮಧ್ವಾಚಾರ್ಯರು **ಸಮ್ಮೋಹಃ** ಎಂಬುದಕ್ಕೆ ಅಧರ್ಮೇಚ್ಛಾ

ಎಂದು ವ್ಯಾಖ್ಯಾನಮಾಡಿ ಅದಕ್ಕೆ ಪ್ರಮಾಣವಾಗಿ ಈ ಶ್ಲೋಕವನ್ನು ಉದ್ಧರಿಸಿದ್ದಾರೆ :

**...........................ಮೋಹಲಕ್ಷಣಮ್ ।**
**ಅಧರ್ಮಲಕ್ಷಣಂ ಚೈವ ನಿಯತಂ ಪಾಪಕರ್ಮಸು ॥**

**ಪ್ರಣಶ್ಯತಿ = ಪುರುಷಾರ್ಥಕ್ಕೆ ಯೋಗ್ಯನಾಗುವುದಿಲ್ಲ. ಪುನರಪಿ ಸಂಸಾರೇ ವಿಮಗ್ನೋ ಭವತಿ (ಶಂ.ಭಾ.)**

ನರಕವೇ ಮೊದಲಾದ ಅನರ್ಥಗಳನ್ನು ಹೊಂದುತ್ತಾನೆ.

**ನರಕಾದ್ಯನರ್ಥಂ ಪ್ರಾಪ್ನೋತಿ**
**ಅಧರ್ಮಕಾಮಿನಃ ಶಾಸ್ತ್ರೇ ವಿಸ್ಮೃತಿರ್ಜಾಯತೇ ಯದಾ ।**
**ದೋಷಾದ್ದೃಷ್ಟೇಽಸತ್ಕೃತೇಶ್ಚ ನರಕಂ ಪ್ರತಿಪದ್ಯತೇ ॥** (ಮ.ಭಾ.)

**ಓಂ ರಾಗದ್ವೇಷವಿಯುಕ್ತೈಸ್ತು ವಿಷಯಾನಿನ್ದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥೬೪॥**

ರಾಗ-ದ್ವೇಷಗಳನ್ನು ತೊರೆದು ತನ್ನ ವಶದಲ್ಲಿರುವ ಇಂದ್ರಿಯಗಳಿಂದ ವಿಷಯಸುಖಗಳನ್ನು ಅನುಭವಿಸುತ್ತಿರುವ ವಿಧೇಯಾತ್ಮನು–ವಿಧೇಯವಾದ ಅಂತಃಕರಣವುಳ್ಳವನು–ಪ್ರಸನ್ನತೆಯನ್ನು ಪಡೆಯುವನು.

* * *

(ರಾಗ-ದ್ವೇಷಗಳೇ ಸಂಸಾರಕ್ಕೆ ಮೂಲಕಾರಣಗಳು. ರಾಗ ಎಂದರೆ ಅನುರಾಗ, ಪ್ರೀತಿ. ಈ ಅನುರಾಗವೇ ಅಥವಾ ಪ್ರೀತಿಯೇ ನಮ್ಮನ್ನು ಸಂಸಾರ ದಲ್ಲಿ ಬಂಧಿಸಿದೆ. ಪತ್ನೀ-ಪುತ್ರ-ಪುತ್ರೀ-ಭ್ರಾತೃ-ಭಗಿನೀ-ಸುಹೃದ ಇವರೆ ಲ್ಲರೂ ಈ ರಾಗಕ್ಕೆ ಅಥವಾ ಪ್ರೀತಿಗೆ ವಿಷಯರಾದವರು. ಈ ರಾಗದಿಂದ ಬಿಡುಗಡೆ ಹೊಂದುವುದು ಬಹಳ ಕಷ್ಟವೇ ಸರಿ. ರಾಗದಂತೆ ದ್ವೇಷವೂ ಸಹ ನಮ್ಮನ್ನು ಬಂಧನದಲ್ಲಿ ಕಟ್ಟಿಹಾಕುವುದೇ ಆಗಿದೆ. ಒಬ್ಬ ಮನುಷ್ಯನ ಮೇಲಿನ ದ್ವೇಷವು ಜನ್ಮಾಂತರಕ್ಕೂ ವ್ಯಾಪಿಸಿರುವುದನ್ನು ನಾವು ಪುರಾಣಗಳಲ್ಲಿ ಕೇಳಿದ್ದೇವೆ. ಒಬ್ಬ ಮನುಷ್ಯನ ಮೇಲೆ–ಮನಸ್ಸಿನಲ್ಲಿ ದ್ವೇಷವು ಅಂಕುರಿಸಿತೆಂದರೆ–ಅದನ್ನು ಕಿತ್ತುಹಾಕುವ ಮಾರ್ಗವೇ ತೋರುವುದಿಲ್ಲ. ಅದು ದಿನ-ದಿನಕ್ಕೂ ಬೆಳೆಯುತ್ತಲೇ ಹೋಗುತ್ತದೆ. ದುರ್ಯೋಧನನಿಗೆ ಪಾಂಡವರ ಮೇಲಿನ ದ್ವೇಷವನ್ನು ಮರಣಪರ್ಯಂತವೂ ಬಿಡಲು ಆಗಲೇ

ಇಲ್ಲ. ರಾಗ-ದ್ವೇಷಗಳನ್ನು ಬಿಡುವುದೆಂದರೆ ಬೇಕಾದವರನ್ನು ಪ್ರೀತಿಸದೇ ಇರುವುದು. ಬೇಡದವರನ್ನು ದ್ವೇಷಿಸದೇ ಇರುವುದು. ಬೇಕಾದವರು ; ಬೇಡದವರು—ಎಂಬ ಭಾವನೆಯನ್ನೇ ಮನಸ್ಸಿನಿಂದ ತೊಡೆದುಹಾಕಬೇಕು. ರಾಗ-ದ್ವೇಷಗಳು ಹೊರಸೂಸುವುದು ಇಂದ್ರಿಯಗಳ ಮೂಲಕವಾಗಿ. ನಾಲಿಗೆಯು ಬೇಕಾದವರೊಡನೆ ನಯ-ವಿನಯದಿಂದ ಮಾತನಾಡುವುದು. ಬೇಡದವರೊಡನೆ ಕಠಿಣತೆಯಿಂದ ಮಾತನಾಡುವುದು. ಬೇಕಾದವರನ್ನು ಹೊಗಳುವುದು. ಬೇಡದವರನ್ನು ನಿಂದಿಸುವುದು. ಈ ಇಂದ್ರಿಯಗಳು ರಾಗ-ದ್ವೇಷಗಳಿಂದ ವಿಮುಕ್ತವಾಗಬೇಕಾದರೆ ಅವು ದೇಹಿಯ ಸ್ವಾಧೀನದಲ್ಲಿರಬೇಕು ; ಹತೋಟಿಯಲ್ಲಿರಬೇಕು. ಇಂದ್ರಿಯಗಳನ್ನು ನಿಗ್ರಹಿಸುವುದೆಂದರೆ ಹತೋಟಿಯಲ್ಲಿಟ್ಟುಕೊಳ್ಳುವುದು ಎಂದೇ ಅರ್ಥ. ಇಂದ್ರಿಯಗಳು ಆತ್ಮಜ್ಞಾನಿಗೂ ಬೇಕು. ಭಜನೆಮಾಡಲು ನಾಲಿಗೆ ಇರಬೇಕು. ಹರಿಕಥಾಶ್ರವಣ ಮಾಡಲು ಕಿವಿಗಳಿರಬೇಕು. ಶ್ರೀಕೃಷ್ಣನ ದಿವ್ಯಮಂಗಳವಿಗ್ರಹವನ್ನು ನೋಡಲು ಕಣ್ಣುಗಳೂ ಇರಬೇಕು. ಆದರೆ ಇಂದ್ರಿಯಗಳು ಇನ್ನಾವುದೋ ವಸ್ತುವನ್ನು ಬಯಸುತ್ತವೆ. ಹಾಗೆ ಬಯಸಿದಾಗ ಆ ವಸ್ತುವಿನೊಡನೆ ಇಂದ್ರಿಯಗಳನ್ನು ಕೂಡಿಸಲು ಹೋಗಬಾರದು. ಹಾಗೆ ಅವುಗಳನ್ನು ನಿಯಂತ್ರಿಸಬೇಕು. ಆದುದರಿಂದಲೇ ಶ್ರೀಕೃಷ್ಣನು 'ವಿಧೇಯಾತ್ಮನಾದವನು' ಎಂದು ಹೇಳಿದ್ದಾನೆ. ಇಲ್ಲಿ ಆತ್ಮಶಬ್ದಕ್ಕೆ ಮನಸ್ಸೆಂದರ್ಥ. ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡಿರುವವನು. ಮನಸ್ಸು ಹತೋಟಿಯಲ್ಲಿದ್ದರೆ ಉಳಿದ ಇಂದ್ರಿಯಗಳೂ ಅವನ ಹತೋಟಿಗೆ ಸಿಕ್ಕಿದಂತೆಯೇ ಸರಿ. ಅವುಗಳೂ ರಾಗ-ದ್ವೇಷಗಳಿಂದ ವಿಮುಕ್ತವಾಗುತ್ತವೆ. ವಿಧೇಯಾತ್ಮನು ರಾಗ-ದ್ವೇಷಗಳಿಂದ ವಿಮುಕ್ತವಾದ, ತನ್ನ ಸ್ವಾಧೀನಕ್ಕೆ ಸಿಕ್ಕಿದ ಇಂದ್ರಿಯಗಳಿಂದ ವಿಷಯಗಳ ವ್ಯಾಪಾರವನ್ನು ನಡೆಸುತ್ತಾ ಚಿತ್ತಶುದ್ಧಿಯ ಲಕ್ಷಣವಾದ ಪ್ರಸನ್ನತೆಯನ್ನು ಪಡೆಯುತ್ತಾನೆ.

**ವಿಷಯಾನ್....ಚರನ್** ಅನಿವಾರ್ಯವಾದ ವಿಷಯಗಳನ್ನು ಗ್ರಹಿಸುತ್ತಾ **ಅವರ್ಜನೀಯಾನ್ ಉಪಲಭಮಾನಃ** (ಶಂ.ಭಾ.) ವಿಷಯಗಳನ್ನು ತಿರಸ್ಕರಿಸಿ ನಡೆಯುತ್ತಾ (ಅನಾದರಿಸುತ್ತಾ ) **ವಿಷಯಾನ್ ತಿರಸ್ಕೃತ್ಯ ವರ್ತಮಾನಃ** (ರಾ.ಭಾ.) **ವಿಷಯಾನ್....ವಿಧೇಯಾತ್ಮಾ**

ವಿಷಯಗಳನ್ನು ಅನುಭವಿಸುತ್ತಿದ್ದರೂ ಕೂಡ ವಿಧೇಯವಾದ ಮನಸ್ಸುಳ್ಳವನು ವಿಷಯಾನನುಭವನ್ನಪಿ ವಿಧೇಯಃ ಆತ್ಮಾ ಯಸ್ಯ ಸಃ (ಜಿತಾತ್ಮಾ) (ಮ.ಭಾ.)]

**ಓಂ ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।**
**ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ॥೬೫॥**

ಪ್ರಸನ್ನತೆಯುಂಟಾದರೆ ಅದರ ಪರಿಣಾಮವೇನು? ಎಂಬುದಕ್ಕೆ ಶ್ರೀಕೃಷ್ಣನು ಹೇಳುತ್ತಾನೆ.

ಪ್ರಸನ್ನತೆಯುಂಟಾದರೆ ಅವನ ಸರ್ವದುಃಖಗಳೂ ನಾಶಹೊಂದುತ್ತವೆ. ಏಕೆಂದರೆ ಪ್ರಸನ್ನಚಿತ್ತನಿಗೆ ಬಲುಬೇಗ ಬುದ್ಧಿಯು ನಿಲುಗಡೆಗೆ ಬರುತ್ತದೆ.

* * *

(ವಿಧೇಯಾತ್ಮನು ಚಿತ್ತಶುದ್ಧಿಯ ಲಕ್ಷಣವಾದ ಪ್ರಸನ್ನತೆಯನ್ನು ಹೊಂದುತ್ತಾನೆ. ಈ ಪ್ರಸನ್ನತೆಯಿಂದ ಅವನಿಗೆ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ–ಈ ಎಲ್ಲ ದುಃಖಗಳೂ ನಿವಾರಣೆಹೊಂದುತ್ತವೆ. ಮನಃಪ್ರಸನ್ನತೆಯ ಮತ್ತೊಂದು ಪ್ರಯೋಜನವೆಂದರೆ ಇದನ್ನು ಪಡೆದವನ ಬುದ್ಧಿಯು ಕೂಡಲೇ ಆತ್ಮನಲ್ಲಿ ಸ್ಥಿರವಾಗುತ್ತದೆ. ಹೀಗೆ ಮನಸ್ಸಿನ ಪ್ರಸನ್ನತೆಯನ್ನು ಪಡೆದು ಪರಮಾತ್ಮನಲ್ಲಿ ಸ್ಥಿರವಾದ ಬುದ್ಧಿಯುಳ್ಳವರು ಕೃತಕೃತ್ಯರಾಗುತ್ತಾರೆ.

ಆದುದರಿಂದ ಸಾಧಕರು ರಾಗ-ದ್ವೇಷರಹಿತವಾದ ಇಂದ್ರಿಯಗಳ ಮೂಲಕ ಶಾಸ್ತ್ರಕ್ಕೆ ವಿರೋಧವಲ್ಲದ ಅನಿವಾರ್ಯವಾದ ವಿಷಯಗಳನ್ನು ಮಾತ್ರ ಸೇವಿಸುತ್ತಾ ಸದಾಚಾರಸಂಪನ್ನರಾಗಿರಬೇಕು.

**ಸರ್ವದುಃಖಾನಾಂ** = ಪ್ರಕೃತಿಸಂಸರ್ಗದಿಂದುಂಟಾದ ಎಲ್ಲ ದುಃಖಗಳ. **ಪ್ರಸಾದಃ** = ಪ್ರಯತ್ನವಿಲ್ಲದೆ ತಾನಾಗಿಯೇ ಮನಸ್ಸು ವಿಷಯಗಳಲ್ಲಿ ಪ್ರವೃತ್ತಿಹೊಂದದೇ ಇರುವಿಕೆ. **ಪ್ರಸಾದೋ ನಾಮ ಸತಃ ಪ್ರಾಯೋ ವಿಷಯಾಗತಿಃ** (ಮ.ಭಾ.) ]

**ಓಂ ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।**
**ನ ಚಾಭಾವಯತಃ ಶಾನ್ತಿರಶಾನ್ತಸ್ಯ ಕುತಃ ಸುಖಮ್ ॥೬೬॥**

ಯುಕ್ತನಲ್ಲದವನಿಗೆ ಬುದ್ಧಿಯಿರುವುದಿಲ್ಲ. ಯುಕ್ತನಲ್ಲದವನಿಗೆ ಭಾವ

ನೆಯೂ ಇರುವುದಿಲ್ಲ. ಭಾವಿಸದವನಿಗೆ ಶಾಂತಿಯಿಲ್ಲ. ಶಾಂತಿಯಿಲ್ಲದವನಿಗೆ ಸುಖವೆಲ್ಲಿಯದು?

* * *

(ಯುಕ್ತನಲ್ಲದವನಿಗೆ ; ಸಮಾಹಿತವಾದ ಅಂತಃಕರಣವಿಲ್ಲದವನಿಗೆ ಬುದ್ಧಿಯು ಶುದ್ಧವಾಗಿರುವುದಿಲ್ಲ. ವಾಸನಾಮಯವಾಗಿರುತ್ತದೆ. ಆಸೆ-ಆಕಾಂಕ್ಷೆಗಳಿಂದ ತುಂಬಿರುತ್ತದೆ. ವಿಧೇಯಾತ್ಮನಲ್ಲದವನಿಗೆ ಆತ್ಮಾನುಗುಣ ವಾದ ಭಾವನೆಯು ಇರುವುದಿಲ್ಲ. ಭಾವನೆಗಳಲ್ಲಿ **ಮೈತ್ರಿ, ಕರುಣ, ಮುದಿತ, ಉಪೇಕ್ಷೆ**–ಇವುಗಳು ಮುಖ್ಯವಾದುವುಗಳು. **ಮೈತ್ರಿಃ** ಸದ್ಭಾವನೆ ಯಿರುವ ಮನುಷ್ಯನಲ್ಲಿ ನಾವು ಮೈತ್ರೀಭಾವವನ್ನು ಕಾಣುತ್ತೇವೆ. ಎಲ್ಲವನ್ನೂ ಅವನು ಪ್ರೀತಿಸುವನು. ತನ್ನವರು-ಬೇರೆಯವರು ಎಂಬ ಭೇದ-ಭಾವನೆಯೇ ಅವನಿಗಿರುವುದಿಲ್ಲ. ಪ್ರೀತಿಯೇ ಅವನ ಸ್ವಭಾವಗುಣವಾಗಿರು ವುದು. ಯಾರ ಹೃದಯದಲ್ಲಿ ಅಂತಹ ಪ್ರೀತಿಯು ಅಡಕವಾಗಿದೆಯೋ ಅವನ ಹೃದಯದಲ್ಲಿ ದ್ವೇಷಕ್ಕೆ ಅವಕಾಶವಿಲ್ಲ. **ಕರುಣೆ :** ಕಷ್ಟದಲ್ಲಿ ಯಾರೇ ಸಿಕ್ಕಿದ್ದರೂ ಅವರಿಗಾಗಿ ಅವನು ಮರುಗುವನು. 'ದೇವರು ಅವರಿಗೆ ಒಳ್ಳೆಯದನ್ನು ಮಾಡಲಿ'–ಎಂದು ಆಶಿಸುವನು. **ಮುದಿತಃ :** ಯಾರು ಒಳ್ಳೆಯವರೋ (ಸತ್ಪುರುಷರೋ) ಅವರನ್ನು ಕೊಂಡಾಡುವನು. ಅವರನ್ನು ಗೌರವಿಸುವನು. ಅವರನ್ನು ನೋಡಿ ಆನಂದಪಡುವನು. 'ಭಗವಂತನ ಹೂದೋಟದಲ್ಲಿ ವಿಕಸಿತವಾದ ಪುಷ್ಪಗಳಿವು'–ಎಂದು ಭಾವಿಸುವನು. **ಉಪೇಕ್ಷೆ :** ತನ್ನನ್ನು ಯಾರಾದರೂ ನಿಂದಿಸಿದರೆ ಉಪೇಕ್ಷೆಯಿಂದಿದ್ದುಬಿಡು ವನು. ಪ್ರತೀಕಾರಮಾಡಲು ಹೋಗುವುದಿಲ್ಲ. ಇಂತಹ ಸದ್ಭಾವನೆಗಳು ಬರ ಬೇಕಾದರೆ ಅವನು ಯುಕ್ತನಾಗಬೇಕು. ಪ್ರಸನ್ನಚಿತ್ತನಾಗಬೇಕು. ಪ್ರಸನ್ನಚಿತ್ತ ನಲ್ಲದವನಿಗೆ ಇಂತಹ ಭಾವನೆಯೂ ಅರ್ಥಾತ್ ಆತ್ಮಜ್ಞಾನವನ್ನು ಪಡೆದು ಕೊಳ್ಳಬೇಕೆಂಬ ಆಸಕ್ತಿಯೂ ಉಂಟಾಗುವುದಿಲ್ಲ. ಒಳ್ಳೆಯ ಭಾವನೆ ಇಲ್ಲದ ವನಿಗೆ, ಆತ್ಮಜ್ಞಾನದಲ್ಲಿ ಆಸಕ್ತಿಯಿಲ್ಲದವನಿಗೆ ಮನಃಶಾಂತಿಯಿಲ್ಲ. ಇತರರನ್ನು ನೋಡಿ ಕರುಬುತ್ತಿದ್ದರೆ, ಇತರರಿಗೆ ಅನ್ಯಾಯಮಾಡುತ್ತಿದ್ದರೆ, ನಮಗೆ ಇತರರಿಂದ ಆದ ಅನ್ಯಾಯವನ್ನೇ ನೆನೆಸಿಕೊಳ್ಳುತ್ತಿದ್ದರೆ–ಮನಸ್ಸಿಗೆ ಶಾಂತಿ ಯೆಂಬುದು ಹೇಗೆ ತಾನೇ ಲಭಿಸೀತು? ಶಾಂತಮನಸ್ಕನಲ್ಲದವನಿಗೆ ಸುಖ ವೆಂಬುದೆಲ್ಲಿಯದು? ಒಬ್ಬನಿಗೆ ಪ್ರಾಪಂಚಿಕವಾದ ಅನೇಕ ಸೌಲಭ್ಯಗಳಿರ

ಬಹುದು. ಹಂಸತೂಲಿಕಾತಲ್ಪ, ಅರಮನೆ, ಅಪಾರಧನ–ಏನು ಬೇಕಾದರೂ ಇರಬಹುದು. ಆದರೆ ಮನಸ್ಸಿಗೆ ಶಾಂತಿಯಿಲ್ಲದಿದ್ದರೆ ಈ ಕಾಮೋಪಭೋಗ ವಸ್ತುಗಳಿಂದ ಮನುಷ್ಯನು ಯಾವ ಸುಖವನ್ನೂ ಪಡೆಯಲಾರನು.

ಈ ಶ್ಲೋಕಕ್ಕೆ ರಾಮಾನುಜರ ವ್ಯಾಖ್ಯೆಯು ಈ ರೀತಿಯಾಗಿದೆ : **ಅಯುಕ್ತಸ್ಯ** ಎಂದರೆ ಪರಮಾತ್ಮನಲ್ಲಿ ಮನಸ್ಸಿಡದೇ ಸ್ವತಃ ಇಂದ್ರಿಯಜಯಕ್ಕಾಗಿ ಪ್ರವರ್ತಿಸಿದವನಿಗೆ ಪ್ರಕೃತಿಗಿಂತ ಆತ್ಮನು ಬೇರೆ ಎಂಬ ಬುದ್ಧಿಯು ಉಂಟಾಗುವುದಿಲ್ಲ. ಹಾಗೆ ಪರಮಾತ್ಮನಲ್ಲಿ ಮನಸ್ಸಿಡದವನಿಗೆ **ಭಾವನಾ ಚ ನ** ಎಂದರೆ ಆತ್ಮದರ್ಶನವೂ ಆಗುವುದಿಲ್ಲ. ಆತ್ಮದರ್ಶನವಿಲ್ಲದವನಿಗೆ ವಿಷಯಾನುರಾಗದ ಶಾಂತಿಯೂ ಇಲ್ಲ. ವಿಷಯಾನುರಾಗದ ಶಾಂತಿ ಯಿಲ್ಲದವನಿಗೆ ನಿರತಿಶಯಸುಖರೂಪವಾದ ಮೋಕ್ಷವು ಹೇಗೆ ತಾನೇ ಸಿಕ್ಕುತ್ತದೆ?

**ಅಯುಕ್ತಸ್ಯ ಬುದ್ಧಿಃ** ಯುಕ್ತನಲ್ಲದವನಿಗೆ ಸಮ್ಯಕ್‌ಜ್ಞಾನವು ಇರುವುದಿಲ್ಲ.

**ಅಯುಕ್ತಸ್ಯ ಬುದ್ಧಿಃ ಸಮ್ಯಕ್ ಜ್ಞಾನಂ ಚ ನಾಸ್ತಿ**

ಶಾನ್ತಿಃ = **ಮುಕ್ತಿಃ**; ಶಾನ್ತಿರ್ಮೋಕ್ಷೋಽಥ ನಿರ್ವಾಣಂ ಎಂಬ ಪ್ರಮಾಣವಚನವನ್ನು ಶ್ರೀಮಧ್ವಾಚಾರ್ಯರು ಉದ್ಧರಿಸಿರುತ್ತಾರೆ.

'ಶಾಂತಿ' ಎಂದರೆ 'ಪ್ರಸಾದ' ಎಂದು ಸಾಮಾನ್ಯವಾಗಿ ಅರ್ಥವಾಗು ತ್ತದೆ. ಅದು ಜ್ಞಾನಸಾಧನವೆಂದು ಹಿಂದೆ ಹೇಳಿರುವುದರಿಂದ ಜ್ಞಾನಾಂತರ ದಲ್ಲಿ ಈ ಶ್ಲೋಕವು ಹೇಳಲ್ಪಟ್ಟಿರುವುದರಿಂದ ಇಲ್ಲಿ ಬರುವ ಶಾಂತಿ ಶಬ್ದಕ್ಕೆ ಮುಕ್ತಿ ಎಂದೇ ಅರ್ಥಮಾಡಬೇಕು ಎಂಬುದು ಶ್ರೀಟೀಕಾಚಾರ್ಯರ ಅಭಿ ಪ್ರಾಯವಾಗಿದೆ.)

**ಓಂ ಇನ್ದ್ರಿಯಾಣಾಂ ಹಿ ಚರತಾಂ ಯನ್ಮನೋಽನು ವಿಧೀಯತೇ ।**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಮ್ಭಸಿ ॥೬೭॥**

ಮನಸ್ಸು ಸಂಚರಿಸುತ್ತಿರುವ ಇಂದ್ರಿಯಗಳ ಹಿಂದೆ ನಡೆದರೆ ಅದು, ಬಿರುಗಾಳಿಯು ನೀರಿನಲ್ಲಿರುವ ಹಡಗನ್ನು ಹೇಗೋ ಹಾಗೆ ಮನುಷ್ಯನ ಪ್ರಜ್ಞೆಯನ್ನು ಅನಿರ್ದಿಷ್ಟಸ್ಥಳಕ್ಕೆ ಒಯ್ದುಬಿಡುತ್ತದೆ.

* * *

(ಮನಸ್ಸು ಇಂದ್ರಿಯಗಳಿಗೆ ವಶವಾಗುವುದರಿಂದ ಭವಬಂಧನಕ್ಕೆ ಕಾರಣವಾಗುತ್ತದೆ. ಇಂದ್ರಿಯಗಳು ಮನಸ್ಸಿಗೆ ವಶವಾಗಿದ್ದು ಮನಸ್ಸು ಭಗವಂತನಲ್ಲಿ ನೆಲೆಗೊಂಡಿದ್ದರೆ ಮೋಕ್ಷಕ್ಕೆ ಕಾರಣವಾಗುತ್ತದೆ.

ಈ ಶ್ಲೋಕದಲ್ಲಿ ಶ್ರೀಕೃಷ್ಣನು ಮನಸ್ಸು ಇಂದ್ರಿಯಗಳಿಗೆ ವಶವಾಗುವುದರ ಪರಿಣಾಮವನ್ನು ಹೇಳುತ್ತಾನೆ. ಇಂದ್ರಿಯಗಳು ಯಾವಾಗಲೂ ಚಲಿಸುತ್ತಲೇ ಇರುತ್ತವೆ. ನಿಂತಲ್ಲಿ ನಿಲ್ಲುವುದಿಲ್ಲ. ಚಲಿಸುತ್ತಿರುವುದು ಮಾತ್ರವಲ್ಲದೇ ಇಂದ್ರಿಯಾರ್ಥಗಳನ್ನು, ಅವುಗಳಿಗೆ ಸಂಬಂಧಿಸಿದ ವಿಷಯಗಳನ್ನು ಅಪೇಕ್ಷಿಸುತ್ತಲೂ ಇರುತ್ತವೆ. ಅವುಗಳ ಇಚ್ಛೆಯು ನೆರವೇರಬೇಕಾದರೆ ಮನಸ್ಸು ನಿಶ್ಚಯಿಸಬೇಕು. ಇಲ್ಲಿ ಬುದ್ಧಿಯೂ ಕಾರ್ಯವನ್ನು ನಡೆಸುತ್ತದೆ. ಇಂದ್ರಿಯಗಳ ಅಪೇಕ್ಷೆಯು ಸಾಧು, ಅಸಾಧು–ಎಂಬುದನ್ನು ಹೇಳುತ್ತದೆ. ಆದರೆ ಮನಸ್ಸು ಅದನ್ನು ಕೇಳಬೇಕೆಂಬುದಿಲ್ಲ. ಇಂದ್ರಿಯಗಳ ವಶವಾಗಿರುವ ಮನಸ್ಸು ಇಂದ್ರಿಯಗಳು ಹೇಳಿದಂತೆ ಕೇಳಿ ಅದನ್ನು ಕಾರ್ಯಗತಗೊಳಿಸಲು ಅನುವಾಗುತ್ತದೆ. ಇಂದ್ರಿಯಗಳು ಒಂದು ಕಾಮನೆಯನ್ನು ಪೂರೈಸಿಕೊಂಡ ನಂತರ ಮತ್ತೊಂದನ್ನು ಅಪೇಕ್ಷಿಸುತ್ತವೆ. ಈ ಕಾರ್ಯವು ಮನುಷ್ಯನು ಸಾಯುವ ಪರ್ಯಂತವೂ ನಡೆಯುತ್ತಾ ಹೋಗುತ್ತದೆ. ಸತ್ತ ಮೇಲೂ ವಾಸನಾರೂಪದಲ್ಲಿ ಜೀವದೊಡನೆ ಸೇರಿಯೇಹೋಗುತ್ತದೆ. ಇಂದ್ರಿಯಗಳ ಆಸೆಗೆ ಮಿತಿಯೆಂಬುದೇ ಇಲ್ಲ.

**ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।**

ಕಾಮಗಳ ಉಪಭೋಗದಿಂದ ಅಭಿಲಾಷೆಯು ಶಾಂತವಾಗಿಬಿಡುವುದಿಲ್ಲ. ಕಾಮಾಭಿಲಾಷೆಯು ಬೆಳೆಯುತ್ತಲೇ ಹೋಗುತ್ತದೆ. ಕಾಮೋಪಭೋಗಗಳು ಇನ್ನೂ ಹೆಚ್ಚು-ಹೆಚ್ಚು ಬೇಕೆಂದು ಇಂದ್ರಿಯಗಳು ಬಯಸುತ್ತಲೇ ಇರುತ್ತವೆ. ಕಾಮೋಪಭೋಗಗಳಿಗಾಗಿಯೇ ಹಾತೊರೆಯುತ್ತಿರುವ ಇಂದ್ರಿಯಗಳನ್ನು ಹಿಂಬಾಲಿಸಿರುವ ಮನಸ್ಸುಳ್ಳ ಮನುಷ್ಯನ ಪಾಡೇನು?

ಸಮುದ್ರದಲ್ಲಿ ಪ್ರಯಾಣಮಾಡುತ್ತಿರುವ ನಾವೆಯನ್ನು ಬಿರುಗಾಳಿಯು ಹೇಗೆ ಅನಿರ್ದಿಷ್ಟಸ್ಥಳಕ್ಕೆ ಕೊಂಡೊಯ್ಯುವುದೋ ಹಾಗೆಯೇ ಇಂದ್ರಿಯಗಳನ್ನನುಸರಿಸಿದ ಸಾಧಕನ ಮನಸ್ಸು ಅವನ ಪ್ರಜ್ಞೆಯನ್ನು ದುರ್ಮಾರ್ಗದಲ್ಲಿ ಎಳೆದು ವಿಷಯಗಳಲ್ಲಿ ಸೇರಿಸಿಬಿಡುತ್ತದೆ.

ಪ್ರಜ್ಞಾಂ ಹರತಿ = ವಿಷಯಪ್ರವಣಾಂ ಕರೋತಿ–ಪ್ರಜ್ಞೆಯನ್ನು ವಿಷಯಗಳಲ್ಲಿ ಆಸಕ್ತವನ್ನಾಗಿ ಮಾಡುತ್ತದೆ. (ರಾ.ಭಾ.) ಅನು ವಿಧೀಯತೇ ಎಂಬುದಕ್ಕೆ ಶ್ರೀಮಧ್ವಾಚಾರ್ಯರು ಕ್ರಿಯತೇ ನನು ಈಶ್ವರೇಣ ಈಶ್ವರನಿಂದ ಅನುಸರಿಸುವಂತೆ ಮಾಡಲ್ಪಡುತ್ತದೆ ಎಂದು ಅರ್ಥಮಾಡಿದ್ದಾರೆ.)

**ಓಂ ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।**
**ಇನ್ದ್ರಿಯಾಣೀನ್ದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥೬೮॥**

ಆದುದರಿಂದ ಮಹಾಬಾಹುವಾದ ಅರ್ಜುನನೇ! ಯಾವಾತನ ಇಂದ್ರಿಯಗಳು ಎಲ್ಲ ಪ್ರಕಾರದಿಂದಲೂ ಇಂದ್ರಿಯಾರ್ಥಗಳಿಂದ ಹಿಡಿದಿಡಲ್ಪಟ್ಟಿರುವುವೋ–ಅವನ ಪ್ರಜ್ಞೆಯು ಪ್ರತಿಷ್ಠಿತವಾಗಿರುವುದು. (ಅವನೇ ಸ್ಥಿತ ಪ್ರಜ್ಞನು.)

* * *

(೬೦ನೇ ಶ್ಲೋಕದಲ್ಲಿ ಶ್ರೀಕೃಷ್ಣನು ಪ್ರಾರಂಭಿಸಿದ ಇಂದ್ರಿಯನಿಗ್ರಹದ ವಿಷಯವನ್ನು ಅನಂತರದ ೨ ಶ್ಲೋಕಗಳಲ್ಲಿ ಸಮರ್ಥಿಸಿ ಈ ಶ್ಲೋಕದಲ್ಲಿ ಅದನ್ನು ಉಪಸಂಹರಿಸುತ್ತಾನೆ.

ಎಲ್ಲ ಕಡೆಗಳಿಂದಲೂ ವಿಷಯವಸ್ತುಗಳಿಂದ ಇಂದ್ರಿಯಗಳನ್ನು ಹಿಮ್ಮೆಟ್ಟಿಸಬೇಕೆಂದು ಹೇಳುತ್ತಾನೆ. ಎಲ್ಲ ಕಡೆಗಳೆಂದರೆ ಹೊರಗೂ-ಒಳಗೂ ಹಿಮ್ಮೆಟ್ಟಿಸಬೇಕೆಂಬ ಅಭಿಪ್ರಾಯ. ಒಬ್ಬನಿಗೆ ಪ್ರತ್ಯಕ್ಷವಾಗಿ ವಿಷಯಗಳು ಇಂದ್ರಿಯಗಳಿಗೆ ಸಿಗದಿರಬಹುದು. ಮನಸ್ಸಿನಲ್ಲಿಯೇ ವಿಷಯಗಳನ್ನು ಕಲ್ಪಿಸಿಕೊಂಡು ಉಪಭೋಗಿಸುತ್ತಾನೆ. ಇದಕ್ಕೆ ಮನಸ್ಸಿನ ವ್ಯಭಿಚಾರವೆನ್ನುತ್ತಾರೆ. ಅನೇಕರು ಜನಾಪವಾದಕ್ಕೋ, ಸಾಧಿಸಿಕೊಳ್ಳಲಾಗದಿರುವುದಕ್ಕೋ–ಇಂದ್ರಿಯಗಳನ್ನು ನಿಗ್ರಹಿಸಿರುವಂತೆ ತೋರಿಸಿಕೊಳ್ಳುತ್ತಾರೆ. ಆದರೆ ಮನಸ್ಸಿ ನಲ್ಲಿ ಆಸೆ-ಆಕಾಂಕ್ಷೆಗಳು ಅಪರಿಮಿತವಾಗಿರುತ್ತವೆ. ಮನಸ್ಸಿನಲ್ಲೇ ಮಂಡಿಗೆ ಯನ್ನು ಮಾಡಿ ತಿನ್ನುತ್ತಾರೆ. ಸರ್ವಶಃ ಎಂಬುದಕ್ಕೆ ಬಹಿರಂಗನಿಗ್ರಹವಲ್ಲದೇ ಅಂತರಂಗದಲ್ಲಿಯೂ ನಿಗ್ರಹಿಸಬೇಕು–ಎಂಬ ಅಭಿಪ್ರಾಯ.

ಹೀಗೆ ಅಂತರಂಗ ಮತ್ತು ಬಹಿರಂಗಗಳೆರಡರಲ್ಲಿಯೂ ಇಂದ್ರಿಯಾರ್ಥವಿಷಯವಸ್ತುಗಳಿಂದ ಇಂದ್ರಿಯಗಳನ್ನು ಹಿಮ್ಮೆಟ್ಟಿಸಿದವನ ಪ್ರಜ್ಞೆಯು ಆತ್ಮನಲ್ಲಿ ಪ್ರತಿಷ್ಠಿತವಾಗಿರುತ್ತದೆ. ಅವನೇ ಸ್ಥಿತಪ್ರಜ್ಞನು.

ಯಸ್ಯ ಎನ್ನುವುದಕ್ಕೆ ಶುಭಾಶ್ರಯನಾದ ನನ್ನಲ್ಲಿ ನಿರ್ವಿಷ್ಟವಾದ ಮನಸ್ಸುಳ್ಳ ಯಾವನ–ಶುಭಾಶ್ರಯೇ ಮಯಿ ನಿವಿಷ್ಟಮನಸಃ ಎಂದು ಶ್ರೀರಾಮಾನುಜರು ವಿವರಣೆ ನೀಡಿದ್ದಾರೆ.)

**ಓಂ ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।**
**ಯಸ್ಯಾಂ ಜಾಗರ್ತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥೬೯॥**

ಸರ್ವಭೂತಗಳಿಗೂ ಯಾವುದು ರಾತ್ರಿಯೋ ಅದರಲ್ಲಿ ಸಂಯಮಿಯು ಎಚ್ಚರವಾಗಿರುತ್ತಾನೆ. ಯಾವುದರಲ್ಲಿ ಪ್ರಾಣಿಗಳು ಎಚ್ಚರವಾಗಿರುವುವೋ ಅದು ನೋಡುತ್ತಿರುವ ಮುನಿಗೆ ರಾತ್ರಿಯಾಗಿರುವುದು.

* * *

(ಈ ಶ್ಲೋಕವು ಒಂದು ಒಗಟೆಯಿದ್ದಂತೆ ಇದೆ.

ಸರ್ವಪ್ರಾಣಿಗಳಿಗೂ ಯಾವುದು ರಾತ್ರಿಯೋ ಆ ರಾತ್ರಿಯಲ್ಲಿ ಸಂಯಮಿಯು ಅಂದರೆ ಮುನಿಯು ; ಸ್ಥಿತಪ್ರಜ್ಞನು ಎದ್ದಿರುತ್ತಾನೆ. ಈ ಶ್ಲೋಕದಲ್ಲಿ–ರಾತ್ರಿಯಲ್ಲಿ ಪ್ರಾಣಿಗಳು ಎದ್ದಿರುತ್ತವೆ ; ಸಂಯಮಿಯು ಅಥವಾ ಆತ್ಮಜ್ಞಾನಿಯು ಎದ್ದಿರುತ್ತಾನೆ–ಎಂದು ಮುಖ್ಯಾರ್ಥದಲ್ಲಿ ರಾತ್ರಿಶಬ್ದವನ್ನು ಹೇಳಿಲ್ಲ. ಸರ್ವಪ್ರಾಣಿಗಳಿಗೂ ಸಹ ಹಗಲು-ರಾತ್ರಿಗಳು ಒಂದೇ ಆಗಲಾರದು. ಇಲ್ಲಿ ನಮಗೆ ರಾತ್ರಿಯಾಗಿರುವಾಗ ವಿದೇಶದಲ್ಲಿ ಹಗಲಾಗಿರುತ್ತದೆ. ಆದುದರಿಂದ ಇಲ್ಲಿ ನಿಶಾ ಎಂಬುದಕ್ಕೆ ರಾತ್ರಿ ಎಂಬ ಅರ್ಥವು ಹೊಂದುವುದಿಲ್ಲ. ರಾತ್ರಿ ಎಂದರೆ ಅಂಧಕಾರ ; ಏನೂ ಕಾಣಿಸದೇ ಇರುವುದು. ಸರ್ವಪ್ರಾಣಿಗಳಿಗೂ ಯಾವುದು ಅಂಧಕಾರರೂಪವಾಗಿದೆಯೋ, ಕಾಣಿಸದೇ ಇದೆಯೋ ಅಂತಹ ಆತ್ಮವಿಷಯಕವಾದ ಬುದ್ಧಿಯಲ್ಲಿ ಸಂಯಮಿಯಾದವನು ಜಾಗ್ರತನಾಗಿರುತ್ತಾನೆ. ಯಾವ ವಿಷಯಾನುಗತವಾದ ಬುದ್ಧಿಯಲ್ಲಿ ಸರ್ವಪ್ರಾಣಿಗಳೂ ಎಚ್ಚರಗೊಂಡಿರುತ್ತವೆಯೋ ಆ ವಿಷಯಾನುಗತವಾದ ಬುದ್ಧಿಯು ಆತ್ಮಸ್ವರೂಪವನ್ನು ಕಾಣುತ್ತಿರುವ ಮುನಿಗೆ ಕಾಣದಾಗುತ್ತದೆ. ಸರ್ವಪ್ರಾಣಿಗಳೂ ಎಂದರೆ ಆತ್ಮಸಂಯಮಿಗಳನ್ನು ಬಿಟ್ಟು ಉಳಿದ ಪ್ರಾಣಿಗಳು ಎಂದರ್ಥ.

ಎಲ್ಲ ಪ್ರಾಣಿಗಳಿಗೂ ಆತ್ಮಜ್ಞಾನದ ವಿಷಯದಲ್ಲಿ ಅಂಧಕಾರ-ಅಜ್ಞಾನವಿರುತ್ತದೆ. ಆತ್ಮಜ್ಞಾನಿಗೆ ಪ್ರಾಪಂಚಿಕವಿಷಯದಲ್ಲಿ ಅಂಧಕಾರವಿರುತ್ತದೆ.

ವ್ಯವಹಾರದಲ್ಲಿ ಪ್ರಪಂಚವನ್ನು ನೋಡುತ್ತಿದ್ದರೂ ಕೂಡ ಅದು ಕ್ಷಣಿಕ ಮತ್ತು ಅವಿದ್ಯಾಮಯ–ಎಂದು ಆತ್ಮಜ್ಞಾನಿಯು ಭಾವಿಸುತ್ತಾನೆ.

ಎಂದರೆ ಪರಮಾತ್ಮನ ಸಮಾಧಿಯಲ್ಲಿರುವುದರಿಂದ ಜಗತ್ತು ಅವನ ದರ್ಶನಕ್ಕೆ ಬರುವುದಿಲ್ಲ.

**ಪ್ರಕಾಶಮಾನೇ ಪರಮಾತ್ಮಭಾನೌ**
**ನಶ್ಯತ್ಯವಿದ್ಯಾತಿಮಿರೇ ಸಮಸ್ತೇ ।**
**ಅಹೋ ಬುಧಾಃ ನಿರ್ಮಲದೃಷ್ಟಯೋಽಪಿ**
**ಕಿಂಚಿನ್ನ ಪಶ್ಯನ್ತಿ ಜಗತ್ಸಮಗ್ರಮ್ ॥**

ಬ್ರಾಹ್ಮೀಸ್ಥಿತಿಯಲ್ಲಿರುವಾಗ ಪರಮಾತ್ಮನೆಂಬ ಸೂರ್ಯನು ಪ್ರಕಾಶಿಸುತ್ತಿರಲು ಅವಿದ್ಯೆಯೆಂಬ ಕತ್ತಲೆಯೆಲ್ಲವೂ ನಾಶಹೊಂದುವುದು ಮತ್ತು ಆಗ ಜ್ಞಾನಿಗಳು ನಿರ್ಮಲವಾದ ದೃಷ್ಟಿಯುಳ್ಳವರಾದರೂ ಕೂಡ ಈ ಇಡೀ ಜಗತ್ತು ಅವರಿಗೆ ಕಾಣುವುದಿಲ್ಲ–ಎಂಬ ಶ್ರೀಶಂಕರರ ಸೂಕ್ತಿಯನ್ನು ಇಲ್ಲಿ ನೆನೆಯಬಹುದಾಗಿದೆ.

**ಯಾ ನಿಶಾ ಸರ್ವಭೂತಾನಾಂ** = ಯಾವ ಪರಮಾತ್ಮಸ್ವರೂಪ ಲಕ್ಷಣವಾದ ವಿಷಯವು ಎಲ್ಲ ಭೂತಗಳಿಗೂ ಕತ್ತಲೆಯಾಗಿರುವುದೋ ಯಾ **ಸರ್ವಭೂತಾನಾಂ ನಿಶಾ ಪರಮೇಶ್ವರಸ್ವರೂಪಲಕ್ಷಣಾ** (ಮ.ಭಾ.)

**ಜಾಗರ್ತಿ** ಪ್ರಸನ್ನಮನಸ್ಕನಾಗಿ ಎಚ್ಚರವಾಗಿರುತ್ತಾನೆ. ಆತ್ಮನನ್ನು ನೋಡುತ್ತಿರುತ್ತಾನೆ. **ಪ್ರಸನ್ನಮನಾಃ ಜಾಗರ್ತಿ । ಆತ್ಮಾನಮವಲೋಕಯನ್ನಾಸ್ತೇ** (ರಾ.ಭಾ.)

ಗೂಬೆ ಮುಂತಾದ ರಾತ್ರಿಯಲ್ಲಿ ಸಂಚರಿಸುವ ಪ್ರಾಣಿಗಳಿಗೆ ಇತರ ಪ್ರಾಣಿಗಳ ಹಗಲು ರಾತ್ರಿಯಾಗಿರುತ್ತದೆ. ಹಾಗೆಯೇ ಪರಮಾರ್ಥವಿಷಯವಾದ ಬುದ್ಧಿಯಿಲ್ಲದ ಅಜ್ಞಾನಿಗಳಿಗೆ ಪರಮಾರ್ಥತತ್ತ್ವವು ರಾತ್ರಿಯಂತೆ ಇರುತ್ತದೆ.) (ಶಂ.ಭಾ.)

**ಓಂ ಆಪೂರ್ಯಮಾಣಮಚಲಪ್ರತಿಷ್ಠಂ**
**ಸಮುದ್ರಮಾಪಃ ಪ್ರವಿಶನ್ತಿ ಯದ್ವತ್ ।**
**ತದ್ವತ್ಕಾಮಾ ಯಂ ಪ್ರವಿಶನ್ತಿ ಸರ್ವೇ**
**ಸ ಶಾನ್ತಿಮಾಪ್ನೋತಿ ನ ಕಾಮಕಾಮೀ ॥೭೦॥**

ನೀರಿನಿಂದ ತುಂಬಿಕೊಳ್ಳುತ್ತಿದ್ದರೂ ಅಲ್ಲಾಡದೇ ಸುಪ್ರತಿಷ್ಠಿತವಾಗಿರುವ ಸಮುದ್ರದಲ್ಲಿ ಹೇಗೆ ನದಿಯ ಪ್ರವಾಹಗಳು ಪ್ರವೇಶಿಸುತ್ತಿರುವುವೋ– ಹಾಗೆ ಕಾಮನೆಗಳೆಲ್ಲವೂ ಯಾವಾತನನ್ನು ಪ್ರವೇಶಿಸುವುವೋ ಅವನಿಗೆ ಶಾಂತಿಯು ಸಿಕ್ಕುತ್ತದೆ. ಕಾಮವನ್ನು ಬಯಸುತ್ತಿರುವವನಿಗೆ ಶಾಂತಿಯು ಸಿಕ್ಕುವುದಿಲ್ಲ.

* * *

(ನೂರಾರು ನದಿಗಳ ನೀರು ಹಗಲು-ರಾತ್ರಿಗಳೆನ್ನದೇ ಸದಾಕಾಲ ದಲ್ಲಿಯೂ ಸಮುದ್ರಕ್ಕೆ ಸೇರುತ್ತಲೇ ಇರುತ್ತದೆ. ಆದರೆ ಆ ನೀರಿನಿಂದ ಸಮುದ್ರವು ವಿಚಲಿತವಾಗುವುದಿಲ್ಲ. ಉಕ್ಕಿ ಹರಿಯುವುದಿಲ್ಲ. ಇದ್ದಂತೆಯೇ ಸುಪ್ರತಿಷ್ಠಿತವಾಗಿರುತ್ತದೆ. ನದಿಗಳು ಬಂದು ಸೇರಿದುದರಿಂದ ಸಮುದ್ರದಲ್ಲಿ ಯಾವ ವಿಧವಾದ ವ್ಯತ್ಯಾಸವೂ ಕಾಣುವುದಿಲ್ಲ. ಮೇಲಾಗಿ ಸಮುದ್ರದಲ್ಲಿ ಸೇರಿದ ನದಿಗಳೂ ಸಹ ನಾಮ-ರೂಪ-ವರ್ಣಗಳನ್ನೆಲ್ಲಾ ತೊರೆದು ಸಮುದ್ರ ದೊಡನೆ ಒಂದಾಗಿ ಹೋಗುತ್ತವೆ. ಅದೇ ರೀತಿಯಲ್ಲಿ ಕಾಮನೆಗಳು ಯಾರನ್ನು ಪ್ರವೇಶಿಸುವುವೋ ಅವನು ಶಾಂತಿಯನ್ನು ಹೊಂದುತ್ತಾನೆ. ಎಲ್ಲ ಕಾಮನೆಗಳೂ ಆತ್ಮಾರಾಮದ ಸುಖದಲ್ಲಿ ಒಂದಾಗಿ ಸೇರಿಬಿಟ್ಟಿರುತ್ತವೆ. ಎಲ್ಲವನ್ನೂ ಅವನು ಸಮುದ್ರದಂತೆ ಪರಿಗ್ರಹಿಸುತ್ತಾನೆ. ಅಚಲಪ್ರತಿಷ್ಠನಾಗಿರುತ್ತಾನೆ. ಅವನಲ್ಲಿ ಪ್ರವೇಶಿಸಿದ ಕಾಮನೆಗಳು ಮನಸ್ಸಿಗೆ ಪ್ರತಿಕ್ರಿಯೆಯನ್ನುಂಟುಮಾಡುವ ಸ್ವಾಭಾವಿಕಗುಣಗಳನ್ನೇ ಕಳೆದುಕೊಂಡುಬಿಡುತ್ತವೆ. ಮೃಷ್ಟಾನ್ನವನ್ನೂ ಒಂದು ಹಿಡಿ ಅವಲಕ್ಕಿಯನ್ನೂ 'ಅನ್ನಂ ಬ್ರಹ್ಮ' ಎಂಬ ಒಂದೇ ದೃಷ್ಟಿಯಿಂದ ನೋಡುತ್ತಾನೆ. ಯಾವ ವಿಧವಾದ ಕಾಮನೆಗಳೂ ಸಹ ಅವನ ಮೇಲೆ ಯಾವ ವಿಧವಾದ ಪ್ರತಿಕ್ರಿಯೆಯನ್ನೂ ಉಂಟುಮಾಡುವುದಿಲ್ಲ. ಅಂತಹ ಮಹಾನುಭಾವನು ಮನಶ್ಶಾಂತಿಯನ್ನು ಪಡೆದುಕೊಳ್ಳುತ್ತಾನೆ. ಪ್ರಪಂಚದಲ್ಲಿ ಮನಶ್ಶಾಂತಿಯು ಸಿಗಬೇಕಾದರೆ ಆತ್ಮಜ್ಞಾನದಿಂದಲೇ ಎಂಬುದನ್ನು ಎಲ್ಲರೂ ಮನಗಾಣಬೇಕಾಗಿದೆ. ಕಾಮಗಳನ್ನು ಬಯಸುವವನು, ಅಜಿತೇಂದ್ರಿಯನು, ವಿಷಯಾಸಕ್ತನು, ಇಂದ್ರಿಯಗಳಿಗೆ ವಶನಾದವನು ಶಾಂತಿಯನ್ನು ಹೊಂದುವುದಿಲ್ಲ. ಅಂತಹವನಿಗೆ ಮನಶ್ಶಾಂತಿಯೆಂಬುದೇ ಇಲ್ಲ.

**ಕಾಮಾಃ** = ವಿಷಯಗಳು. **ಕಾಮ್ಯನ್ತೇ ಇತಿ ಕಾಮಾಃ** (ಶಂ.ಭಾ.)
**ಶಾನ್ತಿಮಾಪ್ನೋತಿ** = ಶಬ್ದಾದಿ ವಿಷಯಗಳು ಇಂದ್ರಿಯಗೋಚರವಾಗಲಿ ಆಗ ದಿರಲಿ–ಆತ್ಮಾವಲೋಕನತೃಪ್ತಿಯಲ್ಲಿದ್ದು ವಿಕಾರವನ್ನು ಹೊಂದುವುದಿಲ್ಲ. (ರಾ.ಭಾ.)

ಸಮುದ್ರವು ನದಿಗಳ ಪ್ರವೇಶವೆಂಬ ಕಾರಣದಿಂದ ವೃದ್ಧಿಯನ್ನಾಗಲೀ ಶೋಷಣೆಯನ್ನಾಗಲೀ ಬಹುವಾಗಿ ಹೊಂದುವುದಿಲ್ಲ. ಈ ಬಗ್ಗೆ ಪ್ರಯತ್ನ ವನ್ನೂ ಮಾಡುವುದಿಲ್ಲ. ಹಾಗೆಯೇ ವಿಷಯಗಳಿಂದ ತುಂಬಿಡುತ್ತಿದ್ದರೂ ಕೂಡ ಯಾವನು ಅಚಲವಾದ ನೆಲೆಯನ್ನು ಹೊಂದಿದ್ದಾನೆಯೋ ಉತ್ಸೇಕ ಹೊಂದುವುದಿಲ್ಲವೋ ಪ್ರಯತ್ನವನ್ನು ಮಾಡುವುದಿಲ್ಲವೋ ಅವನು ಮುಕ್ತಿ ಯನ್ನು ಹೊಂದುತ್ತಾನೆ.) (ಮ.ಭಾ.)

**ಓಂ ವಿಹಾಯ ಕಾಮಾನ್ಯಃ ಸರ್ವಾನ್ಪುಮಾಂಶ್ಚರತಿ ನಿಃಸ್ಪೃಹಃ ।**
**ನಿರ್ಮಮೋ ನಿರಹಂಕಾರಃ ಸ ಶಾನ್ತಿಮಧಿಗಚ್ಛತಿ ॥೭೧॥**

ಯಾವ ಪುರುಷನು ಕಾಮನೆಗಳನ್ನೆಲ್ಲ ಬಿಟ್ಟು ನಿಃಸ್ಪೃಹನಾಗಿ ಜೀವನ ಯಾತ್ರೆಯನ್ನು ನಡೆಸುತ್ತಾನೆಯೋ ಮಮಕಾರ-ಅಹಂಕಾರಗಳಿಲ್ಲದೇ ಇರು ವನೋ ಅವನು ಶಾಂತಿಯನ್ನು ಪಡೆದುಕೊಳ್ಳುವನು.

*   *   *

(ಯಾವ ಪುರುಷನು ಇಂದ್ರಿಯಗಳಿಗೂ–ವಿಷಯಗಳಿಗೂ ಸಂಬಂಧ ವಾಗುವುದರಿಂದುಂಟಾಗುವ ಸಕಲಕಾಮನೆಗಳನ್ನೂ ಬಿಟ್ಟು ಸ್ವರ್ಗಪ್ರಾಪ್ತಿ ಯಾಗಬೇಕೆಂಬ ಅಥವಾ ಈ ದೇಹದಲ್ಲಿಯೇ ಉಳಿದುಕೊಳ್ಳಬೇಕೆಂಬ ಸ್ಪೃಹೆಯೂ ಇಲ್ಲದವನಾಗಿ ನಿರ್ಮಮನಾಗಿ 'ನಾನು-ನನ್ನದು' ಎಂಬುದೆಲ್ಲ ವನ್ನೂ ಸಂಪೂರ್ಣವಾಗಿ ಪರಿತ್ಯಜಿಸಿ ನಿರಹಂಕಾರನಾಗಿ ತಾನು ಜ್ಞಾನಿಯಾಗಿ ದ್ದರೂ ಜ್ಞಾನಿಯಾಗಿರುವೆನೆಂಬ ಸ್ವಾಭಿಮಾನವಿಲ್ಲದವನಾಗಿ ತನ್ನ ಜೀವನ ಯಾತ್ರೆಯನ್ನು ನಡೆಸುತ್ತಿರುತ್ತಾನೆಯೋ ಅವನು ಆತ್ಮಜ್ಞಾನಿಯು. ಸಂಸಾರದ ಸರ್ವದುಃಖಗಳೂ ನಾಶವಾಗುವ ಸ್ವರೂಪದ ಶಾಂತಿಯನ್ನು ಪಡೆಯುತ್ತಾನೆ.

ವಿಹಾಯ–(ಶಬ್ದಾದಿ ವಿಷಯಗಳಲ್ಲಿ) ನಿಃಸ್ಪೃಹನಾಗಿ (ರಾ.ಭಾ.)

ಯಾವನು ವಿಷಯಗಳನ್ನು ನಿಃಸ್ಪೃಹತೆಯಿಂದ ತೊರೆದು ಅವುಗಳನ್ನು

ತಿಂದುಹಾಕಿಬಿಡುತ್ತಾನೆಯೋ ಹಾಗೆ ತಿಂದುಹಾಕುತ್ತೇನೆಂಬ ಅಹಂಕಾರ-ಮಮಕಾರವಿಲ್ಲದೇ ಇರುವನೋ–ಅವನೇ ಮುಕ್ತಿಯನ್ನು ಹೊಂದುತ್ತಾನೆ. **ಚರತಿ–ಭಕ್ಷಯತಿ)** (ಮ.ಭಾ.)

**ಓಂ ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಸ್ಯಾಮನ್ತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥೭೨॥**



ಪಾರ್ಥ! ಇದೇ ಬ್ರಾಹ್ಮೀಸ್ಥಿತಿಯು. ಇದನ್ನು ಪಡೆದುಕೊಂಡವನು ಮೋಹವನ್ನು ಹೊಂದುವುದಿಲ್ಲ. ಈ ಸ್ಥಿತಿಯು ಕಡೆಗಾಲದಲ್ಲಿ ಪ್ರಾಪ್ತವಾದರೂ ಬ್ರಹ್ಮನಿರ್ವಾಣವನ್ನು ಪಡೆಯುತ್ತಾನೆ.

* * *

(ಅರ್ಜುನ! ಇದು ಬ್ರಹ್ಮಸ್ವರೂಪದಲ್ಲಿಯೇ ನೆಲೆಗೊಂಡಿರುವ ಬ್ರಹ್ಮನಿಷ್ಠೆಯು. ಆತ್ಮಸಾಕ್ಷಾತ್ಕಾರವು. ಈ ಆತ್ಮಜ್ಞಾನವನ್ನು ಪಡೆದುಕೊಂಡರೆ ಸಂಸಾರಬಂಧನವು ಉಂಟಾಗುವುದಿಲ್ಲ. ಆದರೆ ಸಾಧಕನು ಈ ಬ್ರಾಹ್ಮೀ ಸ್ಥಿತಿಯು ಪ್ರಾಪ್ತವಾಗಲಿಲ್ಲವೆಂದು ನಿರಾಶನಾಗುವ ಕಾರಣವಿಲ್ಲ. ಈಗಿ

ನಿಂದಲೂ ದ್ವಂದ್ವವಿಮುಕ್ತಿಗಾಗಿ, ವ್ಯವಸಾಯಾತ್ಮಿಕವಾದ ಬುದ್ಧಿಯನ್ನು ಪಡೆಯಲು ಅಭ್ಯಾಸಮಾಡುತ್ತಿದ್ದರೆ ಅಂತ್ಯಕಾಲದಲ್ಲಿ ಈ ಸ್ಥಿತಿಯು ಲಭ್ಯ ವಾದರೂ ಸಹ ಬ್ರಹ್ಮಭಾವವನ್ನು ಪಡೆಯುತ್ತಾನೆ.

'ನ ತಸ್ಯ ಪ್ರಾಣಾ ಉತ್ಕ್ರಾಮನ್ತ್ಯತ್ರೈವ ಸಮವಲೀಯನ್ತೇ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ' ಎಂಬ ಶ್ರುತಿವಚನದಂತೆ ಅವನ ಪ್ರಾಣಗಳು ಇಲ್ಲಿಂದ ಬಿಟ್ಟುಹೊರಡುವುದಿಲ್ಲ. ಇಲ್ಲಿಯೇ ಅಡಗಿಹೋಗುವುವು. ಅವನು ಬ್ರಹ್ಮವನ್ನು ಪಡೆಯುವನು.

ಬ್ರಾಹ್ಮೀ ಸ್ಥಿತಿಃ = ಬ್ರಹ್ಮಣಿ ಭವಾ ಇಯಂ ಸ್ಥಿತಿಃ ಬ್ರಹ್ಮದಲ್ಲಿ ಉಂಟಾಗುವ ಸ್ಥಿತಿ. (ಶಂ.ಭಾ.)

ಬ್ರಹ್ಮಪ್ರಾಪಿಕಾ ಸ್ಥಿತಿಃ = ಬ್ರಹ್ಮವನ್ನು ಹೊಂದಿಸುವ ಸ್ಥಿತಿ. (ರಾ.ಭಾ.)

ಬ್ರಹ್ಮವಿಷಯಾ ಸ್ಥಿತಿಃ = ಬ್ರಹ್ಮವಿಷಯವಾದ ಸ್ಥಿತಿಯು (ಮ.ಭಾ.)

ಅನ್ತಕಾಲೇಽಪಿ-ಅನ್ತಿಮೇ ವಯಸಿ ಎಂದು ಶ್ರೀರಾಮಾನುಜರು ವ್ಯಾಖ್ಯಾನಮಾಡಿ ಉತ್ತಮೇ ಚೇದ್ವಯಸಿ ಸಾಧುವೃತ್ತಃ ಎಂಬ ಬೋಧಾಯನಸೂತ್ರವನ್ನೂ ಉದ್ಧರಿಸಿದ್ದಾರೆ.

ಅಂತ್ಯಸಮಯದಲ್ಲಿ ಈ ಬ್ರಾಹ್ಮೀಸ್ಥಿತಿಯಲ್ಲಿದ್ದರೆ ಬ್ರಹ್ಮವನ್ನು ಹೊಂದುತ್ತಾನೆ. ಇಲ್ಲದಿದ್ದರೆ ಜನ್ಮಾಂತರವುಂಟು. ಜ್ಞಾನಿಗಳಿಗೂ ಕೂಡ ಪ್ರಾರಬ್ಧಕರ್ಮವಿದ್ದರೆ ಶರೀರಾಂತರವುಂಟಾಗಬಹುದು. (ಮ.ಭಾ.)

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಸಾಂಖ್ಯಯೋಗೋ ನಾಮ ದ್ವಿತೀಯೋಽಧ್ಯಾಯಃ**

ಭಗವದ್ಗೀತೆಯಲ್ಲಿ ೨ನೆಯ ಅಧ್ಯಾಯವು ಮುಗಿಯಿತು.

ಭೀಷ್ಮಪರ್ವದಲ್ಲಿ-೨೬ನೆಯ ಅಧ್ಯಾಯವು ಮುಗಿಯಿತು.

# ಭಗವದ್ಗೀತಾ-೩ನೆಯ ಅಧ್ಯಾಯ

೨೭ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ಜ್ಞಾನಯೋಗ-ಕರ್ಮಯೋಗಗಳೇ ಮೊದಲಾದ ಸಮಸ್ತ ಸಾಧನೆಗಳಿಗೆ ಅನುಗುಣವಾಗಿ ಕರ್ತವ್ಯಕರ್ಮಗಳನ್ನು ಮಾಡಬೇಕೆಂಬ ಪ್ರತಿಪಾದನೆ : ಸ್ವಧರ್ಮಪಾಲನೆಯ ಮಹಿಮೆ : ಕಾಮನಿರೋಧದ ಉಪಾಯವರ್ಣನೆ

'ಹಿಂದಿನ ಅಧ್ಯಾಯದಲ್ಲಿ ಶ್ರೀಕೃಷ್ಣನು, ಮೊದಲು ಆತ್ಮಾನಾತ್ಮ ವಿವೇಕವನ್ನು ಹೇಳಿರುತ್ತಾನೆ. ಅನಂತರ ಜನನ-ಮರಣಗಳ ನಿತ್ಯತ್ವವನ್ನು ಹೇಳಿದ್ದಾನೆ. ಕ್ಷತ್ರಿಯಧರ್ಮಾನುಸಾರವಾಗಿಯಾದರೂ ಯುದ್ಧಮಾಡಲೇ ಬೇಕೆನ್ನುತ್ತಾನೆ. ಯುದ್ಧಮಾಡದೇ ಇರುವುದರಿಂದಾಗುವ ಪರಿಣಾಮವನ್ನು ಮನಮುಟ್ಟುವಂತೆ ಹೇಳಿರುತ್ತಾನೆ. ಅನಂತರ ಬುದ್ಧಿಯೋಗವನ್ನು ಹೇಳಿದ್ದಾನೆ. ಬುದ್ಧಿಯನ್ನು ಸಮತ್ವದಲ್ಲಿಟ್ಟುಕೊಂಡು ದ್ವಂದ್ವವನ್ನು ದಾಟಿ ಕಾರ್ಯಮಾಡಿದರೆ ಕಶ್ಮಲವಿರುವುದಿಲ್ಲವೆನ್ನುತ್ತಾನೆ.

ಸ್ಥಿತಪ್ರಜ್ಞನ ಲಕ್ಷಣ, ನಡೆ-ನುಡಿಗಳು, ಆ ಸ್ಥಿತಿಯನ್ನು ಹೊಂದುವ ಸಾಧನಗಳು, ಅದನ್ನು ಹೊಂದುವುದಕ್ಕಿರುವ ವಿಘ್ನಗಳು, ಬ್ರಾಹ್ಮೀಸ್ಥಿತಿಯ ಮಹಾಲಾಭ–ಇವುಗಳನ್ನು ಹೃದಯಂಗಮವಾಗಿ ನಿರೂಪಿಸಿರುತ್ತಾನೆ. ಅಲ್ಲಿ ಸ್ಥಿತಪ್ರಜ್ಞನು ಹೇಗೆ ಮಾತನಾಡುತ್ತಾನೆ? ಹೇಗೆ ಕೂರುತ್ತಾನೆ? ಹೇಗೆ ನಡೆಯುತ್ತಾನೆ?–ಎಂಬ ಅರ್ಜುನನ ಪ್ರಶ್ನೆಗಳಿಗೆ ಉತ್ತರವು ಬಂದಿಲ್ಲವೆಂದು ಕೆಲವರು ಶಂಕಿಸುತ್ತಾರೆ. ಆದರೆ ಭಗವಂತನು ಸ್ಥಿತಪ್ರಜ್ಞನ ಸ್ವರೂಪವನ್ನು ವಿವರಿಸಿ, ಅವನು ನಿಃಸ್ಪೃಹನಾಗಿ ಜೀವನದಲ್ಲಿ ಸಂಚರಿಸುತ್ತಾನೆ. **'ಪುಮಾಂಶ್ಚರತಿ ನಿಃಸ್ಪೃಹಃ'** ಎಂದು ಹೇಳಿರುವುದರಿಂದ ಬ್ರಾಹ್ಮೀಸ್ಥಿತಿಯ ಹಿನ್ನೆಲೆಯಲ್ಲಿ ಅವನ ಮೇಲ್ಕಂಡ ಕಾಯಿಕ-ವಾಚಿಕ-ಮಾನಸಿಕ ಕ್ರಿಯೆಗಳು ನಡೆಯುತ್ತವೆ–ಎಂಬ ಉತ್ತರವು ಬಂದೇ ಇದೆ ಎಂಬುದನ್ನು ಗಮನಿಸಬೇಕು.

ಹೀಗೆ ಸಾಂಖ್ಯಬುದ್ಧಿ, ಯೋಗಬುದ್ಧಿ–ಎಂಬ ಹೆಸರಿನಿಂದ ಜ್ಞಾನಯೋಗ

ಮತ್ತು ಕರ್ಮಯೋಗಗಳಿಗೆ ಸಂಬಂಧಪಟ್ಟಿರುವ ಎರಡು ಬುದ್ಧಿಗಳನ್ನು ಭಗವಂತನು ತಿಳಿಸಿರುತ್ತಾನೆ. 'ಪ್ರಜಹಾತಿ ಯದಾ ಕಾಮಾನ್' (೨-೫೫) ಎಂಬ ಶ್ಲೋಕದಿಂದ ಹಿಡಿದು ಅಧ್ಯಾಯವು ಮುಗಿಯುವವರೆಗೂ ಸಾಂಖ್ಯ ಬುದ್ಧಿಯನ್ನಾಶ್ರಯಿಸಿದವರಿಗೆ ವೈರಾಗ್ಯವು ಮುಖ್ಯಕರ್ತವ್ಯವೆಂದು ಹೇಳಿ ಅವರು ಆ ನಿಷ್ಠೆಯಲ್ಲಿರುವುದರಿಂದಲೇ ಕೃತಾರ್ಥರಾಗುವರೆಂದೂ ಅದೇ ಶ್ರೇಷ್ಠವಾದ ಯೋಗವೆಂದೂ ಕಡೆಯ ಶ್ಲೋಕದಲ್ಲಿ ಹೇಳಿರುತ್ತಾನೆ. ಅರ್ಜುನನಿಗೆ ಭಗವಂತನು **ಕರ್ಮಣ್ಯೇವಾಧಿಕಾರಸ್ತೇ....ಮಾ ತೇ ಸಂಗೋಽಸ್ತ್ವಕರ್ಮಣಿ ।** (೨-೪೭) ಎಂದು ಹೇಳಿ ಕರ್ಮಯೋಗವನ್ನೇ ಆಚರಿಸಬೇಕೆಂದು ಒತ್ತಿ ಹೇಳಿದ್ದಾನೆ. ವಿಷಯವು ಸರಿಯಾಗಿ ಅರ್ಥವಾಗದೇ ಕಳವಳಗೊಂಡ ಅರ್ಜುನನು ಮುಂದಿನ ಪ್ರಶ್ನೆಯನ್ನು ಕೇಳುತ್ತಾನೆ.)

**ಅರ್ಜುನ ಉವಾಚ :**

**ಓಂ ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ ।**
**ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥೧॥**

ಅರ್ಜುನನು ಹೇಳುತ್ತಾನೆ :

"ಜನಾರ್ದನ! ಕರ್ಮಕ್ಕಿಂತಲೂ ಬುದ್ಧಿಯೇ ಹೆಚ್ಚಿನದೆಂದು ನಿನ್ನ ಅಭಿಪ್ರಾಯವಾದರೆ–ಕೇಶವ! ಘೋರವಾದ ಕರ್ಮದಲ್ಲಿ ನನ್ನನ್ನೇಕೆ ನಿಯಮಿಸುತ್ತಿದ್ದೀಯೆ?

* * *

(ನಾನು ಸ್ಥಿತಪ್ರಜ್ಞನ ಲಕ್ಷಣಗಳನ್ನು ಹೇಳಬೇಕೆಂದು ಕೇಳಿದಾಗ ನೀನು ಅವನ ಹಿರಿಮೆಯನ್ನು ಹೇಳಿದೆಯಲ್ಲವೇ? ಆತ್ಮಜ್ಞಾನವನ್ನೂ ಬಹುವಾಗಿ ಹೊಗಳಿದೆ. ನನ್ನ ವಿಷಯವಾಗಿ ಮಾತ್ರ ನೀನು '**ಕರ್ಮಣ್ಯೇವಾಧಿಕಾರಸ್ತೇ**' ಎಂದು ಹೇಳುವೆ. ನಿನ್ನ ಮಾತಿನಲ್ಲಿ ಕರ್ಮಕ್ಕಿಂತಲೂ ಬುದ್ಧಿಯೇ (ಜ್ಞಾನವೇ) ಶ್ರೇಷ್ಠವೆಂಬ ಅಭಿಪ್ರಾಯವಿರುವಂತೆ ಕಾಣುತ್ತದೆ. ಹಾಗಾದರೆ ನನ್ನನ್ನೇಕೆ ಯುದ್ಧವೆಂಬ ಈ ಘೋರಕರ್ಮದಲ್ಲಿ ತೊಡಗಿಸುವೆ? ನಾನೂ ಸಹ ಜ್ಞಾನಮಾರ್ಗವನ್ನೇಕೆ ಅವಲಂಬಿಸಬಾರದು?

ಅರ್ಜುನನಿಗೆ ಯುದ್ಧದಿಂದ ಜಾರಿಕೊಳ್ಳಬೇಕೆಂಬ ಮನಸ್ಸೇ ಇನ್ನೂ ಇದ್ದುದರಿಂದ ಯುದ್ಧಮಾಡುವುದು ಸ್ವಧರ್ಮೋಚಿತವಾದುದು–ಎಂದು

ಶ್ರೀಕೃಷ್ಣನು ಹೇಳಿದ್ದರೂ ಸಹ 'ಘೋರಕರ್ಮದಲ್ಲಿ ನನ್ನನ್ನೇಕೆ ನಿಯೋಜಿ ಸುತ್ತಿರುವೆ?' ಎಂದು ಆಕ್ಷೇಪಿಸುತ್ತಿದ್ದಾನೆ.)

**ಓಂ ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।**
**ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್ ॥**

ಕಲಬೆರಕೆಯಾದಂತಿರುವ ಈ ವಾಕ್ಯದಿಂದ ನನ್ನ ಬುದ್ಧಿಯನ್ನು ಮೋಹ ಗೊಳಿಸುತ್ತಿರುವಂತೆ ಕಾಣುತ್ತಿದೆ. ಆದುದರಿಂದ ಯಾವುದರಿಂದ ನಾನು ಶ್ರೇಯಸ್ಸನ್ನು ಪಡೆದುಕೊಳ್ಳಬಹುದೋ ಅಂತಹ ಒಂದನ್ನು ನಿಶ್ಚಯಿಸಿ ಹೇಳು."

* * *

(ಕೃಷ್ಣ! ನೀನೇನೋ ನನ್ನ ಮನಸ್ಸಿನ ಕಶ್ಮಲವನ್ನು ದೂರಮಾಡಲು ಸುಸ್ಪಷ್ಟವಾಗಿ ವಿಷಯಪ್ರತಿಪಾದನೆಯನ್ನು ಮಾಡಿದ್ದರೂ ಸಹ ಎರಡರ್ಥ ಗಳನ್ನು ಕೊಡುವ ನಿನ್ನ ಮಾತಿನಿಂದ ನನ್ನ ಮನಸ್ಸನ್ನು ಭ್ರಾಂತಿಗೊಳಿಸು ತ್ತಿರುವೆಯೋ ಎಂಬಂತೆ ಭಾಸವಾಗುತ್ತಿದೆ. ಇದಕ್ಕೆ ಕಾರಣವಿಲ್ಲದಿಲ್ಲ. ನೀನೊಮ್ಮೆ–**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ।** ಕ್ಷತ್ರಿಯನಿಗೆ ಧರ್ಮಯುದ್ಧಕ್ಕಿಂತಲೂ ಶ್ರೇಯಸ್ಕರವಾದುದು ಬೇರೊಂದು ಇಲ್ಲವೇ ಇಲ್ಲ–ಎಂದು ಹೇಳಿದೆ. ಅನಂತರ ನೀನು–**ತ್ರೈಗುಣ್ಯ ವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।** ವೇದಗಳು ತ್ರಿಗುಣಾತ್ಮಕವಾಗಿವೆ. ನೀನು ತ್ರಿಗುಣಾತೀತನಾಗು–ಎಂದೂ ಹೇಳಿದೆ. ನೀನು ಹೀಗೆ ಹೇಳಿದುದನ್ನು 'ಕರ್ಮಮಾಡಬೇಡವೆಂದು ಶ್ರೀಕೃಷ್ಣನು ಹೇಳುತ್ತಿದ್ದಾನೆ' ಎಂದು ನಾನು ಭಾವಿಸಿಕೊಂಡೆ. ಪುನಃ ನೀನು–**ಕರ್ಮಣ್ಯೇವಾಧಿಕಾರಸ್ತೇ** ಕರ್ಮ ಮಾಡುವುದರಲ್ಲಿಯೇ ನಿನಗೆ ಅಧಿಕಾರ–ಎಂದೂ ಹೇಳಿದೆ. 'ಇದೇನು ಪುನಃ ಕರ್ಮಮಾಡಲು ಹೇಳುತ್ತಿರುವನಲ್ಲಾ' ಎಂದುಕೊಂಡೆ. ಸ್ಥಿತಪ್ರಜ್ಞನ ಲಕ್ಷಣಗಳನ್ನು ಹೇಳೆಂದು ಕೇಳಿದನಂತರ ನೀನು ಸ್ಥಿತಪ್ರಜ್ಞನನ್ನೂ ಮತ್ತು ಜ್ಞಾನ-ವೈರಾಗ್ಯಗಳನ್ನೂ ಬಹುವಾಗಿ ಹೊಗಳಿದೆ.

ಇದರಿಂದ ನನ್ನ ಮನಸ್ಸು ಡೋಲಾಯಮಾನವಾಗಿಬಿಟ್ಟಿದೆ. ಆದುದ ರಿಂದ ನೀನೀಗ ನಿಶ್ಚಯಮಾಡಿ ಹೇಳು. ಯಾವುದರ ಅವಲಂಬನೆಯಿಂದ ನಾನು ಶ್ರೇಯಸ್ಸನ್ನು (ಮೋಕ್ಷವನ್ನು) ಪಡೆದೇನೆಂಬುದನ್ನು ದಯಮಾಡಿ ಹೇಳು.

ಆತ್ಮಾವಲೋಕನಕ್ಕೆ ಸಾಧನವಾದುದು ಜ್ಞಾನನಿಷ್ಠೆ. ಅದು ಎಲ್ಲ ಇಂದ್ರಿಯವಿಷಯವ್ಯಾಪಾರಗಳ ವಿರಾಮರೂಪವಾದುದು. ಕರ್ಮನಿಷ್ಠೆಯು ಸರ್ವೇಂದ್ರಿಯವ್ಯಾಪಾರರೂಪವಾದುದು. ಆತ್ಮಾವಲೋಕನಕ್ಕೆ ವಿರೋಧಿಯಾದುದು. ಹೀಗಿರುವಾಗ ನನ್ನನ್ನೇಕೆ ಕರ್ಮಮಾಡಲು ಪ್ರೇರಿಸುತ್ತಿರುವೆ? ಎಂಬುದು ಅರ್ಜುನನ ಅಭಿಪ್ರಾಯವೆಂದು ಶ್ರೀರಾಮಾನುಜರು ವಿವರಿಸಿದ್ದಾರೆ.

ಈ ಶ್ಲೋಕದಲ್ಲಿ ಬಂದಿರುವ ಕರ್ಮಶಬ್ದವು ಕಾಮ್ಯಕರ್ಮಗಳನ್ನು ಕುರಿತದ್ದು–ಎಂದು ಶ್ರೀವಿಜಯತೀರ್ಥರು ಹೇಳಿದ್ದಾರೆ.

**ಅತ್ರ ಉಭಯತ್ರ ಕರ್ಮಶಬ್ದೇನ ಕಾಮ್ಯಕರ್ಮ ಅಭಿಪ್ರೇತಂ)**

**ಶ್ರೀಭಗವಾನುವಾಚ :**

**ಓಂ ಲೋಕೇಽಸ್ಮಿನ್ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ ।**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್ ॥೩॥**

ಭಗವಂತನು ಹೇಳುತ್ತಾನೆ :

"ಪಾಪರಹಿತನಾದ ಅರ್ಜುನನೇ! ಈ ಲೋಕದಲ್ಲಿ ಎರಡು ಬಗೆಯ ನಿಷ್ಠೆಯನ್ನು ನಾನು ಹಿಂದೆ ಹೇಳಿರುವೆನು. ಜ್ಞಾನಯೋಗದಿಂದ ಸಾಂಖ್ಯರಿಗೂ (ಜ್ಞಾನಿಗಳಿಗೂ) ಕರ್ಮಯೋಗದಿಂದ ಯೋಗಿಗಳಿಗೂ (ಕರ್ಮಯೋಗಿಗಳಿಗೂ) ಎರಡು ವಿಧವಾದ ನಿಷ್ಠೆಗಳನ್ನು ಹೇಳಿರುವೆನು.

* * *

(ಪುರಾ ಎಂದರೆ ಸೃಷ್ಟಿಯ ಆರಂಭದಲ್ಲಿಯೇ ಪರಮಾತ್ಮನು ಮಾನವರ ಶ್ರೇಯಸ್ಸಿಗಾಗಿ ಎರಡು ನಿಷ್ಠೆಗಳನ್ನು ಹೇಳಿರುವನು. ಒಂದು–ಜ್ಞಾನನಿಷ್ಠೆ ; ಮತ್ತೊಂದು–ಕರ್ಮನಿಷ್ಠೆ. ಜ್ಞಾನನಿಷ್ಠೆ ಮತ್ತು ಕರ್ಮನಿಷ್ಠೆಗಳು ಬೇರೆ ಬೇರೆ ಎಂದು ಕೆಲವರ ಅಭಿಪ್ರಾಯ. ಒಂದು ಮತ್ತೊಂದಕ್ಕೆ ಪೂರಕವೆಂದು ಕೆಲವರು ಹೇಳುತ್ತಾರೆ. ಇಲ್ಲಿ ಶ್ರೀಕೃಷ್ಣನು ಎರಡು ಬಗೆಯ ನಿಷ್ಠೆಗಳೆಂದು ಸ್ಪಷ್ಟವಾಗಿ ಹೇಳಿದ್ದಾನೆ. ಸಾಂಖ್ಯರಿಗೆ ಅರ್ಥಾತ್ ವೇದಾಂತಿಗಳಿಗೆ ಜ್ಞಾನಯೋಗ ಅಥವಾ ಜ್ಞಾನನಿಷ್ಠೆ. ಯೋಗಿಗಳಿಗೆ ಕರ್ಮನಿಷ್ಠೆ.

ಜ್ಞಾನನಿಷ್ಠೆಗೆ ಕರ್ಮದ ಸಂಬಂಧವೇ ಬೇಕಿಲ್ಲವೆಂದು ಶ್ರೀಶಂಕರರ ಸಿದ್ಧಾಂತವಾಗಿದೆ. ಮೇಲಾಗಿ ಜ್ಞಾನಯೋಗವು ಕೇವಲ ಸಂನ್ಯಾಸಿಗಳಿಗೆ

ಮೀಸಲಾದುದೆಂದೂ ಅವರು ಹೇಳುತ್ತಾರೆ. ಜ್ಞಾನಯೋಗವನ್ನವರು ಸಂನ್ಯಾಸಯೋಗವೆಂದೇ ಕರೆಯುತ್ತಾರೆ. ತೈತ್ತರೀಯೋಪನಿಷತ್ತಿನ ನಾಲ್ಕನೆಯ ಪ್ರಶ್ನೆಯಲ್ಲಿನ ಈ ಮಂತ್ರವು ಶ್ರೀಶಂಕರರ ಸಿದ್ಧಾಂತಕ್ಕೆ ಆಧಾರವಾಗಿದೆ.

**ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವ ಮಾನಶುಃ। ಪರೇಣ ನಾಕಂ ನಿಹಿತಂ ಗುಹಾಯಾಂ ವಿಭ್ರಾಜದೇತ ದ್ಯತಯೋ ವಿಶನ್ತಿ। ವೇದಾನ್ತವಿಜ್ಞಾನಸುನಿಶ್ಚಿತಾರ್ಥಾಸ್ಸಂನ್ಯಾಸ ಯೋಗಾದ್ಯತಯಃ ಶುದ್ಧಸತ್ತ್ವಾಃ। ತೇ ಬ್ರಹ್ಮಲೋಕೇ ತು ಪರಾನ್ತಕಾಲೇ ಪರಾಮೃತಾತ್ಪರಿಮುಚ್ಯನ್ತಿ ಸರ್ವೇ।**

ಕರ್ಮದಿಂದಲೂ ಅಲ್ಲ ; ಮಕ್ಕಳನ್ನು ಪಡೆಯುವುದರಿಂದಲೂ ಅಲ್ಲ ; ಧನದಿಂದಲೂ ಅಲ್ಲ ; ಕೇವಲ ತ್ಯಾಗದಿಂದಲೇ ಅಮೃತತ್ತ್ವವನ್ನು ಪಡೆಯುತ್ತಾರೆ. ಆತ್ಮಾನಾತ್ಮಗಳ ವಿಷಯವನ್ನು ವಿಂಗಡಿಸಿ ತಿಳಿದುಕೊಂಡು (ಕರ್ಮ) ಸಂನ್ಯಾಸವನ್ನು ಮಾಡಿ ವೇದಾಂತವಿಜ್ಞಾನದಿಂದ ಪರಮಾರ್ಥವನ್ನು ಚೆನ್ನಾಗಿ ನಿಶ್ಚಯಿಸಿಕೊಂಡು ಪರಮಹಂಸಪರಿವ್ರಾಜಕರಾಗಿ ಶುದ್ಧಸತ್ತ್ವರಾಗಿರುತ್ತಾರೆ.

ಮತ್ತೊಬ್ಬರು ಜ್ಞಾನನಿಷ್ಠೆಯನ್ನು ಅಂತರ್ಮುಖವೆಂದೂ–ಕರ್ಮನಿಷ್ಠೆಯನ್ನು ಬಹಿರ್ಮುಖವೆಂದೂ ಕರೆದಿದ್ದಾರೆ. ಜ್ಞಾನನಿಷ್ಠೆಯಲ್ಲಿ ಮುಂದೆ ಜ್ಞಾನ, ಹಿಂದೆ ಕರ್ಮ. ಕರ್ಮನಿಷ್ಠೆಯಲ್ಲಿ ಮುಂದೆ ಕರ್ಮ, ಹಿಂದೆ ಜ್ಞಾನ. ಪ್ರಪಂಚದಲ್ಲಿ ಎರಡು ಬಗೆಯ ಜನರಿದ್ದಾರೆ. ಇಬ್ಬರಿಗೂ ಒಂದೇ ಮಾರ್ಗವನ್ನು ತೋರಿಸುವುದಕ್ಕಾಗುವುದಿಲ್ಲ. ಪ್ರತಿಯೊಬ್ಬರಿಗೂ ಅವರವರು ತಿಳಿದುಕೊಳ್ಳುವಂತಹ ಮಾರ್ಗವನ್ನು ಮುಂದಿಡಬೇಕಾಗಿದೆ. ಆದುದರಿಂದ ಪರಮಾತ್ಮನು ಎರಡು ವಿಧವಾದ ನಿಷ್ಠೆಗಳನ್ನು ಹೇಳಿದ್ದಾನೆ ಎಂಬುದು ಕೆಲವರ ಅಭಿಪ್ರಾಯವಾಗಿದೆ.

ಮೊದಲನೆಯ ಶ್ಲೋಕದಲ್ಲಿ ಅರ್ಜುನನು 'ಕರ್ಮಕ್ಕಿಂತಲೂ ಜ್ಞಾನವೇ ಹೆಚ್ಚಿನದೆಂದು ನಿನ್ನ ಅಭಿಪ್ರಾಯವಾದರೆ' ಎನ್ನುತ್ತಾನೆ. ಉತ್ತರರೂಪವಾಗಿ ಈ ಶ್ಲೋಕದಲ್ಲಿ ಶ್ರೀಕೃಷ್ಣನು ಎರಡು ನಿಷ್ಠೆಗಳಿವೆಯೆಂದು ಹೇಳಿದ್ದಾನೆಯೇ ಹೊರತು 'ಹೆಚ್ಚಿನದೆಂದು ನಿನ್ನ ಅಭಿಪ್ರಾಯವಿರುವುದಾದರೆ' ಎಂಬುದಕ್ಕೆ ನೇರವಾಗಿ ಉತ್ತರಕೊಟ್ಟಿಲ್ಲ. ಅರ್ಥಾತ್ 'ಕರ್ಮಕ್ಕಿಂತಲೂ ಜ್ಞಾನವು ಹೆಚ್ಚಿನದಲ್ಲ ; ಎರಡೂ ಸಮಾನವಾದುವು' ಎಂದೂ ಹೇಳಿರುವುದಿಲ್ಲ. ಆದುದ

ರಿಂದ ಜ್ಞಾನನಿಷ್ಠೆಯೇ ಹೆಚ್ಚಿನದೆಂಬುದನ್ನು ಶ್ರೀಕೃಷ್ಣನು ಒಪ್ಪಿದ್ದಾನೆಂದು ಒಬ್ಬರು ವ್ಯಾಖ್ಯಾನಮಾಡಿರುತ್ತಾರೆ.

ಸಂಖ್ಯಾ ಎಂದರೆ ಬುದ್ಧಿ. ಅದುಳ್ಳವರು ಸಾಂಖ್ಯರು. **ಸಂಖ್ಯಾ = ಬುದ್ಧಿಃ, ತದ್ಯುಕ್ತಾಃ ಸಾಂಖ್ಯಾಃ** ಆತ್ಮೈಕವಿಷಯವಾದ ಬುದ್ಧಿಯುಳ್ಳವರು. ಅದಕ್ಕೆ ಅರ್ಹರಲ್ಲದ ಕರ್ಮಯೋಗಾಧಿಕಾರಿಗಳು ಯೋಗಿಗಳು.

'ವಿಷಯವ್ಯಾಕುಲವಾದ ಬುದ್ಧಿಯುಳ್ಳವರಿಗೆ ಕರ್ಮಯೋಗದಲ್ಲಿಯೇ ಅಧಿಕಾರ ; ಅವ್ಯಾಕುಲವಾದ ಬುದ್ಧಿಯುಳ್ಳವರಿಗೆ ಜ್ಞಾನಯೋಗದಲ್ಲಿ ಅಧಿಕಾರ' ಎಂದು ಭಗವಂತನು ಹೇಳಿರುವುದರಿಂದ ಅವನ ಮಾತಿನಲ್ಲಿ ಕಲಬೆರಕೆಯೇ ಇಲ್ಲ. **ವಿಷಯವ್ಯಾಕುಲಬುದ್ಧಿಯುಕ್ತಾನಾಂ ಕರ್ಮಯೋಗೇ ಅಧಿಕಾರಃ ಅವ್ಯಾಕುಲಬುದ್ಧೀನಾಂ ತು ಜ್ಞಾನಯೋಗೇ ಅಧಿಕಾರಃ ಉಕ್ತಃ** (ರಾ.ಭಾ.)

ಸಾಂಖ್ಯಶಬ್ದಕ್ಕೆ ಶ್ರೀಟೀಕಾಚಾರ್ಯರು 'ಜ್ಞಾನಿಗಳು' ಎಂದೇ ಅರ್ಥ ಮಾಡಿದ್ದಾರೆ. ವ್ಯುತ್ಪತ್ತಿಮಾಡಿರುವುದರಲ್ಲಿ ಮಾತ್ರವೇ ವ್ಯತ್ಯಾಸ. **ಸಮ್ಯಕ್ ಖ್ಯಾತಿಃ ಜ್ಞಾನಂ–ಸಂಖ್ಯಾ. ತತ್ರ ಭವಾಃ ಸಾಂಖ್ಯಾಃ**

ಜ್ಞಾನಯೋಗವು ಶ್ರೇಷ್ಠವಾಗಿದ್ದರೂ ಕೂಡ ಅರ್ಜುನನು ಕರ್ಮಯೋಗಕ್ಕೇ ಅಧಿಕಾರಿಯಾದ್ದರಿಂದ ಅವನನ್ನು ಅದರಲ್ಲಿ ನಿಯಮಿಸಲಾಗಿದೆ. **ಜ್ಯಾಯಸ್ತ್ವೇಪಿ ಬುದ್ಧೇಃ ಅಧಿಕಾರಿತ್ವಾತ್ ಕರ್ಮಣ್ಯಧಿಕೃತಃ ಇತಿ ತತ್ರ ನಿಯೋಕ್ಷ್ಯಾಮಿ.** ಗೃಹಸ್ಥಾದಿ ಆಶ್ರಮೋಕ್ತವಾದ ಕರ್ಮವನ್ನು ತ್ಯಾಗಮಾಡಿದ ಜ್ಞಾನನಿಷ್ಠರಾದವರೂ ಉಂಟು. (ಸನಕ ಮುಂತಾದವರು.) ಜ್ಞಾನಮಾರ್ಗದಲ್ಲಿದ್ದುಕೊಂಡೇ ಕರ್ಮವನ್ನಾಚರಿಸಬೇಕೆಂದು ಭಗವಂತನಿಂದ ಅಧಿಕೃತರಾದವರೂ ಉಂಟು. (ಜನಕ ಮುಂತಾದವರು.) ಜ್ಞಾನಿಗಳಾಗಿದ್ದರೂ ಕೂಡ ಈಶ್ವರೇಚ್ಛೆಯಿಂದಲೇ ಕರ್ಮವನ್ನು ಮಾಡಿದ ಪ್ರಿಯವ್ರತ ಮುಂತಾದವರೂ ಉಂಟು. ಅರ್ಜುನನು ಜನಕಾದಿಗಳಂತೆ ಕರ್ಮವನ್ನಾಚರಿಸುತ್ತಲೇ ಜ್ಞಾನಯೋಗ್ಯನಾಗಿರುವವನು. ಸನಕಾದಿಗಳಂತೆ ತ್ಯಾಗದಿಂದ ಜ್ಞಾನಯೋಗ್ಯನಾದವನಲ್ಲ–ಎಂದು ಶ್ರೀಮಧ್ವಾಚಾರ್ಯರು ಭಾಷ್ಯದಲ್ಲಿ ವಿವರಿಸಿದ್ದಾರೆ. **ತ್ವಂ ತು ಜನಕಾದಿವತ್ ಸತ್ಕರ್ಮಣೈವ ಜ್ಞಾನಯೋಗ್ಯಃ ನ ತು ಸನಕಾದಿವತ್ ತ್ಯಾಗೇನ.)**

**ಓಂ ನ ಕರ್ಮಣಾಮನಾರಮ್ಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।**
**ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥೪॥**

ಕರ್ಮಗಳನ್ನು ಆರಂಭಿಸದೇ ಇರುವುದರಿಂದಲೇ ಪುರುಷನು ನೈಷ್ಕರ್ಮ್ಯವನ್ನು ಹೊಂದುವುದಿಲ್ಲ. ಸಂನ್ಯಾಸದಿಂದಲೇ ಸಿದ್ಧಿಯನ್ನೂ ಹೊಂದುವುದಿಲ್ಲ.

* * *

(ಅರ್ಜುನನು 'ಜ್ಯಾಯಸೀ ಚೇತ್ಕರ್ಮಣಸ್ತೇ' ಕರ್ಮಕ್ಕಿಂತಲೂ ಬುದ್ಧಿಯೇ ಹೆಚ್ಚಿನದೆಂದು ನಿನ್ನ ಅಭಿಪ್ರಾಯವಾದರೆ ನನ್ನನ್ನು ಈ ಘೋರಕರ್ಮದಲ್ಲೇಕೆ ತೊಡಗಿಸುವೆ?–ಎಂದು ಕೇಳಿರುವುದಕ್ಕೆ ಇದು ಶ್ರೀಕೃಷ್ಣನ ಉತ್ತರವಾಗಿದೆ. 'ನ ಕರ್ಮಣಾ ನ ಪ್ರಜಯಾ ಧನೇನ' ಕರ್ಮದಿಂದಾಗಲೀ, ಮಕ್ಕಳಿಂದಾಗಲೀ, ಧನದಿಂದಾಗಲೀ–ಅಮೃತತ್ವವನ್ನು ಪಡೆಯುವ ಸಾಧ್ಯತೆಯಿಲ್ಲ. ಕೇವಲ ತ್ಯಾಗದಿಂದಲೇ ಅಮೃತತ್ವವನ್ನು ಪಡೆಯುತ್ತಾರೆ'–ಎಂಬುದು ನಿಶ್ಚಯ.

ಆದರೆ ಇದರಿಂದ ಕರ್ಮವನ್ನೇ ಮಾಡಕೂಡದೆಂಬ ಅರ್ಥವಲ್ಲ. ಮಾಡಬೇಕಾಗಿರುವ ಕರ್ಮವನ್ನು ಮಾಡಲು ಆರಂಭಿಸದಿದ್ದರೆ ಕರ್ಮರಾಹಿತ್ಯವು, ಕರ್ಮಗಳಿಲ್ಲದೇ ಇರುವಿಕೆಯು ಪ್ರಾಪ್ತವಾಗುತ್ತದೆ.

ಕರ್ಮವು ಯಾವುದು? ಕರ್ಮದ ಆರಂಭವೆಂದರೇನು? ಕರ್ಮಗಳೆಂದರೆ ಈ ಜನ್ಮದಲ್ಲಾಗಲೀ ಬೇರೊಂದು ಜನ್ಮದಲ್ಲಾಗಲೀ ಮಾಡಿದುವುಗಳಾಗಿದ್ದು ಹಿಂದೆ ಮಾಡಿದ್ದ ಪಾಪಗಳನ್ನು ಸವೆಸುವುದಕ್ಕೆ ಕಾರಣಗಳಾಗಿ ಆ ಮೂಲಕ ಅಂತಃಕರಣವು ಶುದ್ಧಿಯಾಗುವುದಕ್ಕೆ ಕಾರಣವಾಗಿಯೂ, ಅಂತಃಕರಣಶುದ್ಧಿಗೆ ಕಾರಣವಾಗುವುದರಿಂದ ಜ್ಞಾನವುಂಟಾಗುವ ಮೂಲಕ ಜ್ಞಾನನಿಷ್ಠೆಗೆ ಕಾರಣವಾಗಿಯೂ ಇರುವ ಯಜ್ಞವೇ ಮುಂತಾದ ಕ್ರಿಯೆಗಳು.

ಈ ವಿಷಯವನ್ನೇ ಮಹಾಭಾರತದ ಮೋಕ್ಷಧರ್ಮದಲ್ಲಿ ಹೀಗೆ ಹೇಳಿದೆ:

**ಜ್ಞಾನಮುತ್ಪದ್ಯತೇ ಪುಂಸಾಂ ಕ್ಷಯಾತ್ಪಾಪಸ್ಯ ಕರ್ಮಣಃ ।**
**ಯಥಾದರ್ಶತಲೇ ಪ್ರಖ್ಯೇ ಪಶ್ಯತ್ಯಾತ್ಮಾನಮಾತ್ಮನಿ ॥** ೨೦೪-೮

ಜನರಿಗೆ ಪಾಪಕರ್ಮವು ಸವೆಯುವುದರಿಂದ ಜ್ಞಾನವುಂಟಾಗುತ್ತದೆ. ಸ್ವಚ್ಛವಾದ ಕನ್ನಡಿಯ ಮೇಲುಭಾಗದಲ್ಲಿ ಹೇಗೋ ಹಾಗೆ ಪಾಪರಹಿತರಾದವರು ಅಂತಃಕರಣದಲ್ಲಿ ತಮ್ಮ ಆತ್ಮವನ್ನು ಕಂಡುಕೊಳ್ಳುವರು.

ಕರ್ಮವನ್ನು ಪ್ರಾರಂಭದಲ್ಲಿ ಎಲ್ಲರೂ ಮಾಡಲೇಬೇಕು. ನಮ್ಮಲ್ಲಿ ಜನ್ಮಾಂತರಗಳಿಂದ ಬಂದ ಹಲವಾರು ವಾಸನೆಗಳಿವೆ. ಅವುಗಳು ಕ್ಷಯಿಸ ಬೇಕಾದರೆ ಚಿತ್ತಶುದ್ಧಿಗೆ ಕಾರಣವಾದ ಕರ್ಮಗಳನ್ನು ಮಾಡಲೇಬೇಕು. ಸಮತ್ವಭಾವನೆಯಿಂದ ಕರ್ಮಮಾಡುತ್ತಾ ಕರ್ಮಗಳು ತಾವಾಗಿಯೇ ಕಳಚಿ ಕೊಂಡು ಹೋಗುವಂತೆ ಮಾಡಬೇಕು. ಯಾವುದನ್ನೋ ಸಾಧಿಸುತ್ತೇನೆಂಬ ಭ್ರಾಂತಿಯಿಂದ ಚಿತ್ತಶುದ್ಧಿಯಾಗದೇ ಕರ್ಮಗಳನ್ನು ಬಿಡಕೂಡದು. ಶ್ರೀರಾಮಕೃಷ್ಣರು ಒಂದು ಉದಾಹರಣೆಯನ್ನು ಹೇಳುತ್ತಿದ್ದರು. ಬಿದ್ದು ಗಾಯವಾದರೆ ಗಾಯವಾದ ಸ್ಥಳದಲ್ಲಿ ಒಂದು ಹೊಕ್ಕು ಹುಟ್ಟಿಕೊಳ್ಳುತ್ತದೆ. ಹೊಕ್ಕು ಇದೆಯೆಂಬ ಜಿಗುಪ್ಸೆಯಿಂದ ಅದನ್ನು ಕಿತ್ತುಬಿಟ್ಟರೆ ಅಲ್ಲಿಯೇ ಮತ್ತೊಂದು ಹುಟ್ಟಿಕೊಳ್ಳುವುದು. ಸ್ವಲ್ಪದಿವಸಗಳು ಸೈರಿಸಿಕೊಂಡಿದ್ದು ತಕ್ಕ ಚಿಕಿತ್ಸೆಮಾಡುತ್ತಿದ್ದರೆ ಹೊಕ್ಕು ತಾನೇ ತಾನಾಗಿ ಬಿಟ್ಟುಹೋಗುವುದು. ಚಿತ್ತ ಶುದ್ಧಿಯಿಲ್ಲದೇ ಕರ್ಮಗಳನ್ನು ಬಿಟ್ಟರೆ ಮತ್ತೊಂದು ಕರ್ಮವು ಅಂಟಿಕೊಳ್ಳು ತ್ತದೆ. ಕರ್ಮದ ವಾಸನೆಯು ಹೋಗುವುದೇ ಇಲ್ಲ. ತೆಂಗಿನಮರವು ಬೆಳೆ ಯುತ್ತಾ ಹೋದಂತೆ ಕೆಳಗಿನ ಗರಿಗಳು ತಾವೇ ತಾವಾಗಿ ಕಳಚಿಬೀಳುವುವು. ಅದೇ ರೀತಿಯಲ್ಲಿ ಚಿತ್ತಶುದ್ಧಿಕರವಾದ ಕರ್ಮಗಳನ್ನು ದ್ವಂದ್ವಾತೀತನಾಗಿ ಫಲಾಪೇಕ್ಷೆಯಿಲ್ಲದೇ ಮಾಡುತ್ತಾ ಹೋದರೆ ಕರ್ಮಗಳು ತಾವಾಗಿಯೇ ಕಳಚಿ ಹೋಗುವುವು.

ಕರ್ಮದಿಂದ ಜ್ಞಾನವನ್ನು ಪಡೆದುಕೊಳ್ಳಬಹುದೆಂಬುದು ಶ್ರುತಿಸಿದ್ಧವೂ ಆಗಿದೆ.

**ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ ಯಜ್ಞೇನ ।**

ಈ ಆತ್ಮನನ್ನು ಬ್ರಾಹ್ಮಣರು ವೇದಾಧ್ಯಯನದಿಂದಲೂ ಯಜ್ಞದಿಂದಲೂ ತಿಳಿದುಕೊಳ್ಳುವುದಕ್ಕೆ ಇಚ್ಛಿಸುತ್ತಾರೆ.

ಉತ್ತರಾರ್ಧದಲ್ಲಿ ಶ್ರೀಕೃಷ್ಣನು **ನ ತು ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ** ಎಂದು ಹೇಳಿದ್ದಾನೆ. ಕರ್ಮವನ್ನು ಬಿಟ್ಟಮಾತ್ರದಿಂದಲೇ ನೈಷ್ಕರ್ಮ್ಯವನ್ನು ಹೊಂದುವುದಿಲ್ಲ. ಜ್ಞಾನನಿಷ್ಠನಾಗುವುದಿಲ್ಲ.

ನೈಷ್ಕರ್ಮ್ಯವು–(ಕರ್ಮರಾಹಿತ್ಯವು) ಯಾವಾಗ ಎಂಬುದಕ್ಕೆ ಅಶ್ವ ಮೇಧಪರ್ವದಲ್ಲಿ ಹೀಗೆ ಹೇಳಿದ್ದಾರೆ :

**ಅಭಯಂ ಸರ್ವಭೂತೇಭ್ಯೋ ದತ್ವಾ ನೈಷ್ಕರ್ಮ್ಯಮಾಚರೇತ್ ।**
**ಸರ್ವಭೂತಸುಖೋ ಮೈತ್ರಃ ಸರ್ವೇನ್ದ್ರಿಯಯತೋ ಮುನಿಃ ॥**

ಎಲ್ಲ ಪ್ರಾಣಿಗಳಿಗೂ ಅಭಯದಾನಮಾಡಿ ಸಂನ್ಯಾಸಧರ್ಮವನ್ನು ಸ್ವೀಕರಿಸಬೇಕು. (ಕರ್ಮತ್ಯಾಗಮಾಡಬೇಕು.) ಸರ್ವಭೂತಗಳಿಗೂ ಸುಖ ವನ್ನಪೇಕ್ಷಿಸಬೇಕು. ಸರ್ವರೊಡನೆಯೂ ಮೈತ್ರಿಯಿಂದಿರಬೇಕು. ಸರ್ವೇಂದ್ರಿಯಗಳನ್ನೂ ಸಂಯಮನಮಾಡಿರಬೇಕು. ಮುನಿವೃತ್ತಿಯನ್ನು ಪಾಲನೆಮಾಡಬೇಕು.

ಇಲ್ಲಿ ಸರ್ವೇಂದ್ರಿಯಗಳನ್ನೂ ಜಯಿಸಿರಬೇಕೆಂದೂ ಮತ್ತು ಸರ್ವ ಸಮತ್ವವಿರಬೇಕೆಂದೂ ಹೇಳಿದೆ.

ಎರಡನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಸ್ಥಿತಪ್ರಜ್ಞನನ್ನು ಹೊಗಳುವಾಗ ಇದನ್ನೇ ಹೇಳಿದ್ದಾನೆ. ಸರ್ವಸಮತ್ವ, ಜಿತೇಂದ್ರಿಯತೆ ಇವುಗಳು ಕರ್ಮಗಳನ್ನು ಬಿಡುವುದರಿಂದಲೇ ಪ್ರಾಪ್ತವಾಗುವುದಿಲ್ಲ. ಬಲಿಯದ ಮಾವಿನಕಾಯನ್ನು ಕಿತ್ತು ಹಣ್ಣುಮಾಡಲು ಹೋದರೆ ಆ ಹಣ್ಣಿನಲ್ಲಿ ರುಚಿಯೂ ಇರುವುದಿಲ್ಲ; ವಾಸನೆಯೂ ಇರುವುದಿಲ್ಲ. ಅದು ವ್ಯರ್ಥವಾಗಿ ಹೋಗುತ್ತದೆ. ಮಾವಿನಕಾಯಿ ಬಲಿತು ಮರದ ಮೇಲೆಯೇ ಹಣ್ಣಾಗಿ ಕೆಳಕ್ಕೆ ಬೀಳಬೇಕು. ಆಗಲೇ ಅದರಲ್ಲಿ ವಾಸನೆ-ರುಚಿ ಎರಡೂ ಇರುತ್ತವೆ.

ಸಂನ್ಯಾಸಿಗಳಾಗಬೇಕಾದವರು ವೇದಾಂತವಿಜ್ಞಾನದಲ್ಲಿ ದೃಢವಾದ ನಿಶ್ಚಯಬುದ್ಧಿಯುಳ್ಳವರಾಗಿರಬೇಕು. ಅದು ಹೊರತಾಗಿ ಜೀವನದಲ್ಲಿ ಜುಗುಪ್ಸೆಯಿಂದಲೋ–ಕರ್ಮಮಾಡಲು ಅಲಸಿಕೆಯಿಂದಲೋ ಸಂನ್ಯಾಸ ಧರ್ಮವನ್ನು ಸ್ವೀಕಾರಮಾಡಬಾರದು. ಸಂನ್ಯಾಸವೇಷವನ್ನು ಸ್ವೀಕರಿಸಿದ ಮಾತ್ರದಿಂದಲೇ ಜ್ಞಾನನಿಷ್ಠೆಯಾಗುವುದಿಲ್ಲವೆಂದು ಶ್ರೀಕೃಷ್ಣನು ಸ್ಪಷ್ಟವಾಗಿ ಹೇಳಿದ್ದಾನೆ.

ನೈಷ್ಕರ್ಮ್ಯಂ = ಕರ್ಮಶೂನ್ಯತ್ವಂ ಕರ್ಮಶೂನ್ಯವಾದ ಸ್ಥಿತಿ : ನಿಷ್ಕ್ರಿಯ ವಾದ ಆತ್ಮಸ್ವರೂಪದಲ್ಲಿ ಸ್ತಿಮಿತವಾಗುವಿಕೆ.

ಜ್ಞಾನನಿಷ್ಠೆ: ಶಾಸ್ತ್ರೀಯವಾದ ಕರ್ಮಗಳನ್ನು ಆರಂಭಮಾಡದೇ ಇದ್ದು ಬಿಟ್ಟರೆ ಅದರಿಂದ ಜ್ಞಾನನಿಷ್ಠೆಯುಂಟಾಗುವುದಿಲ್ಲ. ಆರಂಭಮಾಡಿರುವ

ಶಾಸ್ತ್ರೀಯವಾದ ಕರ್ಮವನ್ನು ತ್ಯಾಗಮಾಡುವುದರಿಂದಲೂ ಸಿದ್ಧಿಯುಂಟಾಗುವುದಿಲ್ಲ. ಏಕೆಂದರೆ : ಜ್ಞಾನನಿಷ್ಠೆಯು ಫಲಾಭಿಸಂಧಿಯಿಲ್ಲದೆ ಮಾಡಿದ ಭಗವದಾರಾಧನಾರೂಪವಾದ ಕರ್ಮಸಿದ್ಧಿಯಾಗಿದೆ. ಅಂತಹ ಕರ್ಮವನ್ನಾಚರಿಸದೇ ಜ್ಞಾನನಿಷ್ಠೆಯುಂಟಾಗುವುದಿಲ್ಲ. (ರಾ.ಭಾ.)

ಶ್ರೀಮಧ್ವಾಚಾರ್ಯರು ನೈಷ್ಕರ್ಮ್ಯ ಎಂಬ ಪದಕ್ಕೆ ನಿಷ್ಕರ್ಮತಾ ಮೋಕ್ಷ–ಎಂದು ಅರ್ಥಮಾಡಿದ್ದಾರೆ. ಯುದ್ಧಾದಿಕರ್ಮಗಳನ್ನು ಆರಂಭ ಮಾಡದೇ ಇರುವುದರಿಂದ ಮೋಕ್ಷವುಂಟಾಗುವುದಿಲ್ಲ. ಕರ್ಮಮಾಡದೇ ಇರುವುದರಿಂದಲೇ ಮುಕ್ತಿಯುಂಟಾಗುವ ಪಕ್ಷಕ್ಕೆ ಸ್ಥಾವರಪ್ರಾಣಿಗಳಿಗೂ ಮುಕ್ತಿಯುಂಟಾಗಬೇಕು–ಎಂಬ ವಿವರಣೆಯನ್ನು ಕೊಟ್ಟಿರುತ್ತಾರೆ. **ಯದಿ ಕರ್ಮಾನ್ತರೇಣ ಮುಕ್ತಿಃ ಸ್ಯಾತ್ ಸ್ಥಾವರಾಣಾಂ...)**

'ಸಂನ್ಯಾಸಿಗೆ ಕರ್ಮಗಳ ಸಂಕೋಲೆ ಇಲ್ಲ' ಎಂಬುದು ನಿಜ. ಆದರೆ ಪ್ರಪಂಚದಲ್ಲಿ ಹುಟ್ಟಿರುವ ಯಾವ ಪ್ರಾಣಿಗೇ ಆದರೂ ಕ್ಷಣಮಾತ್ರವಾದರೂ ಕರ್ಮಮಾಡದಿರಲು ಸಾಧ್ಯವಾಗುವುದೇ? ಶ್ರೀಕೃಷ್ಣನು ಹೇಳುತ್ತಾನೆ :

**ಓಂ ನ ಹಿ ಕಶ್ಚಿತ್ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥೫॥**

ಕರ್ಮವನ್ನು ಮಾಡದೆ ಯಾವನೂ ಒಂದು ಕ್ಷಣವೂ ಇರುವುದಿಲ್ಲ. ಏಕೆಂದರೆ : ಪ್ರತಿಯೊಬ್ಬನೂ ಪರಾಧೀನನಾಗಿ ಪ್ರಕೃತಿಯಿಂದುಂಟಾಗುವ ಗುಣಗಳಿಂದ ಕರ್ಮವನ್ನು ಮಾಡಿಸಲ್ಪಡುತ್ತಾನೆ.

* * *

(ಯಾವನೇ ಆದರೂ ಕ್ಷಣಮಾತ್ರವೂ ಕಾರ್ಯಮಾಡದೇ ಇರಲು ಸಾಧ್ಯವಾಗುವುದಿಲ್ಲ. ಪ್ರಕೃತಿಜನ್ಯವಾದ ಸತ್ತ್ವರಜಸ್ತಮೋಗುಣಗಳೇ ಅವನನ್ನು ಕೆಲಸಕ್ಕೆ ನಿಯೋಜಿಸುತ್ತವೆ. ತಾಮಸಗುಣಿಯು ತನಗೂ ಪ್ರಯೋಜನವಾಗದ–ಇತರರಿಗೂ ಪ್ರಯೋಜನವಾಗದ ಕೆಲಸವನ್ನು ಮಾಡುತ್ತಾನೆ. ಕುಂಬಾರರ ಮನೆಯ ಹತ್ತಿರ ಒಡೆದ ಮಡಿಕೆಗಳನ್ನೆಲ್ಲಾ ರಾಶಿಹಾಕಿದ್ದರಂತೆ. ಒಬ್ಬನು ಪ್ರತಿನಿತ್ಯವೂ ಅಲ್ಲಿಗೆ ಹೋಗಿ ದೊಣ್ಣೆಯಿಂದ ಅದನ್ನು ಒಡೆದು ಪುಡಿ ಮಾಡಿ ಸೋತು-ಸೊಪ್ಪಾಗಿ ಮನೆಗೆ ಬರುತ್ತಿದ್ದನಂತೆ. ತಾಮಸಿಯು ಮಾಡುವುದು ಅಂತಹುದೇ ಕೆಲಸ. ರಾಜಸಿಯು ಯಾವಾಗಲೂ ಚಡಪಡಿಸುತ್ತಿರು

ತ್ತಾನೆ. ಕೀರ್ತಿ-ಕಾಮಗಳಿಗಾಗಿ ಹಾತೊರೆಯುತ್ತಿರುತ್ತಾನೆ. ಅವನು ತೆಪ್ಪಗಿರುವ ಸಮಯವೇ ಇಲ್ಲ. ಸ್ವಾರ್ಥವೋ–ಪರಹಿತವೋ ಯಾವುದಾದರೂ ಉದ್ದೇಶದಿಂದ ಏನನ್ನಾದರೂ ಮಾಡುತ್ತಲೇ ಇರುತ್ತಾನೆ. ಇದರಿಂದವನು ಅನೇಕವೇಳೆ ಕಷ್ಟವನ್ನೂ ಅನುಭವಿಸುತ್ತಾನೆ. ಆ ಸಮಯದಲ್ಲವನು 'ಇನ್ನು ಮುಂದೆ ಏನೂ ಮಾಡುವುದಿಲ್ಲ'–ಎಂದೂ ಸಂಕಲ್ಪಿಸುತ್ತಾನೆ. ಅವನಿಗೆ ತಿಳಿಯದಂತೆಯೇ ಮತ್ತೊಂದು ಕೆಲಸವು ಅವನಿಗೆ ಅಂಟಿಕೊಂಡಿರುತ್ತದೆ. ಆನೆಯ ಮೇಲೆ ಕುಳಿತಿರುವ ಮಾವುತನು ಆನೆಯನ್ನು ಅಂಕುಶದಿಂದ ತಿವಿಯುತ್ತಿರುವಂತೆ–ರಜೋಗುಣವು ಅವನನ್ನು ಕ್ಷಣ-ಕ್ಷಣಕ್ಕೂ ತಿವಿಯುತ್ತಲಿದ್ದು ಯಾವುದಾದರೂ ಕಾರ್ಯವನ್ನು ಮಾಡಿಸುತ್ತಲೇ ಇರುತ್ತದೆ. ಸತ್ವಗುಣಿಯು ಮೇಧಾವಿಯಾಗಿರುತ್ತಾನೆ. ಒಳ್ಳೆಯದನ್ನೇ ಯೋಚಿಸುತ್ತಾನೆ. ಇತರರಿಗೆ ಉಪಕಾರವನ್ನೇ ಮಾಡುತ್ತಾನೆ. ಕೀರ್ತಿಕಾಮನಲ್ಲ. ಭಜನೆ-ನಾಮಸಂಕೀರ್ತನೆಗಳಲ್ಲಿ ಕಾಲಕಳೆಯುತ್ತಾನೆ. ಕಾರ್ಯದ ದೃಷ್ಟಿಯಿಂದ ನೋಡಿದರೆ ಇದೂ ಕರ್ಮವೇ ಆಗುತ್ತದಲ್ಲವೇ? ಆದುದರಿಂದ ಪ್ರಪಂಚದಲ್ಲಿ ಹುಟ್ಟಿದ ಮನುಷ್ಯನು ಯಾವುದಾದರೊಂದು ಕೆಲಸವನ್ನು ಮಾಡುತ್ತಲೇ ಇರುತ್ತಾನೆ. ಇದು ಪ್ರಕೃತಿನಿಯಮ.

**'ಗುಣೈರ್ಯೋ ನ ವಿಚಾಲ್ಯತೇ'** ಜ್ಞಾನಿಗಳು ಗುಣಗಳಿಂದ ವಿಚಲಿತರಾಗುವುದಿಲ್ಲ–ಎಂದು ಹೇಳಿ ಭಗವಂತನು ಸಾಂಖ್ಯರನ್ನು ಕರ್ಮಯೋಗಿಗಳಿಂದ ಪ್ರತ್ಯೇಕಿಸಿದ್ದಾನೆ. ಆದುದರಿಂದ ಗುಣಗಳಿಂದ ಚಲಿತರಾಗುವ ಜನರಿಗೆ ಮಾತ್ರ ಕರ್ಮಯೋಗವೇ ಹೊರತು, ಗುಣಗಳಿಂದ ಚಲಿತರಾಗದೇ ಸದಾ ನಿಶ್ಚಲರಾಗಿರುವ ಜ್ಞಾನಿಗಳಿಗೆ ಕರ್ಮಯೋಗವಿಲ್ಲ. ಆದುದರಿಂದ ಕರ್ಮಯೋಗದಿಂದ ಪ್ರಾಚೀನವಾದ ಸಂಚಯವನ್ನು ನಾಶಪಡಿಸಿ, ಸತ್ವಾದಿ ಗುಣಗಳನ್ನು ವಶಪಡಿಸಿಕೊಂಡು, ನಿರ್ಮಲವಾದ ಅಂತಃಕರಣದಿಂದ ಜ್ಞಾನಯೋಗವನ್ನು ಸಂಪಾದಿಸಿಕೊಳ್ಳಬೇಕು–ಎಂಬುದು ಇಲ್ಲಿ ಭಗವಂತನ ನಿರ್ಣಯವಾಗಿದೆ.) (ಶಂ.ಭಾ.)

**ಓಂ ಕರ್ಮೇನ್ದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।**
**ಇನ್ದ್ರಿಯಾರ್ಥಾನ್ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥೬॥**

ಅರ್ಜುನ! ಯಾವನು ಕರ್ಮೇಂದ್ರಿಯಗಳನ್ನು ಬಿಗಿಹಿಡಿದು ಮನಸ್ಸಿನಲ್ಲಿ ಇಂದ್ರಿಯವಿಷಯಗಳನ್ನು ಸ್ಮರಿಸುತ್ತಿರುವನೋ ಅಂತಹ ವಿಮೂಢಾತ್ಮನು ಮಿಥ್ಯಾಚಾರವುಳ್ಳವನು (ಸುಳ್ಳು ಆಚಾರವುಳ್ಳವನು) ಎಂದು ಕರೆಯಲ್ಪಡುತ್ತಾರೆ.

* * *

(ಮುನಿಯು ಸರ್ವೇಂದ್ರಿಯಸಂಯಮವುಳ್ಳವನಾಗಬೇಕೆಂದು ಈ ಹಿಂದೆ ಹೇಳಿದೆ. ಅವನು ಸರ್ವೇಂದ್ರಿಯಗಳನ್ನೂ ನಿಗ್ರಹಿಸಿದವನಾಗಬೇಕು.

ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥ–ಇವು ಐದು ಕರ್ಮೇಂದ್ರಿಯ ಗಳು. ಯಾವನಾದರೂ ಸ್ವಲ್ಪ ಕಷ್ಟದಿಂದ ಇವುಗಳ ಸಂಯಮನ ಮಾಡ ಬಹುದು. ಚಲನಚಿತ್ರಕ್ಕೆ ಹೋಗದೇ ಇರಬಹುದು. ನೋಡಬಾರದುದನ್ನು ನೋಡದೇ ಇರಬಹುದು. ಕೆಟ್ಟ ಮಾತನ್ನು ಆಡದೇ ಇರಬಹುದು. ಸ್ತ್ರೀಯ ರನ್ನು ಮುಟ್ಟದೆಯೂ ಇರಬಹುದು. ಆದರೆ ಈ ಎಲ್ಲ ಕಾರ್ಯಗಳನ್ನೂ ಮನಸ್ಸಿನಿಂದಲೂ ಮಾಡಲು ಸಾಧ್ಯವಿದೆ. ಉದಾಹರಣೆಗೆ ಯಾವನು ಬಹಿ ರಿಂದ್ರಿಯಗಳನ್ನು ಸಂಯಮನಮಾಡಿ ಬಹಿರಂಗದಲ್ಲಿ ಸಾಧು-ಸತ್ಪುರುಷ-ಯೋಗೀಶ್ವರ ಎಂದು ಹೇಳಿಕೊಳ್ಳುತ್ತಾ ಮನಸ್ಸಿನಲ್ಲಿ ಇಂದ್ರಿಯಾರ್ಥಗಳನ್ನು (ವಿಷಯಗಳನ್ನು ) ಮೆಲುಕುಹಾಕುವನೋ ಅಂತಹ ಮೂಢನು ಮಿಥ್ಯಾಚಾರ 'ಸುಳ್ಳುನಟನೆಯವನು' ಎನಿಸಿಕೊಳ್ಳುತ್ತಾನೆ. ಶ್ರೀಕೃಷ್ಣನಿಲ್ಲಿ **'ಮನಸಾ ಸ್ಮರನ್'** ಎಂದು ಮಾತ್ರವೇ ಹೇಳಿದ್ದಾನೆ. ಆದರೆ 'ಸಾಧುಗಳು-ಸಂತರು-ಯೋಗೀಶ್ವರರು' ಎನಿಸಿಕೊಂಡಿರುವವರು ಬಹಿರಂಗದಲ್ಲಿ ಸರ್ವಸಂಗ ಪರಿತ್ಯಾಗವನ್ನು ತೋರಿಸಿಕೊಳ್ಳುತ್ತಾ ತೆರೆಮರೆಯಲ್ಲಿ ಮಾಡಬಾರದುದೆಲ್ಲ ವನ್ನೂ ಮಾಡುತ್ತಿರುತ್ತಾರೆ. ಇಂತಹ ಮೂಢಾತ್ಮರನ್ನು ಏನೆಂದು ಕರೆಯ ಬೇಕೋ ತಿಳಿಯದಾಗಿದೆ.

ಕೇವಲ ತೋರಿಕೆಯ ಸಂನ್ಯಾಸದಿಂದ ಯಾವ ಪ್ರಯೋಜನವೂ ಇಲ್ಲ. ಅಂತಹವನು ಸಮಾಜಕ್ಕೂ ವಂಚಕನಾಗುತ್ತಾನೆ. ತನ್ನನ್ನೂ ವಂಚನೆಮಾಡಿ ಕೊಳ್ಳುತ್ತಾನೆ. ಗ್ರಾಮರಕ್ಷಕರಿಂದ ತಪ್ಪಿಸಿಕೊಂಡಾನು. ಕರ್ಮಾಧಿಪತಿ ಯಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಅವನು ಮಾಡಿದ ಕರ್ಮ ಗಳೆಲ್ಲವನ್ನೂ ಕರ್ಮಾಧಿಪತಿಯು ಪ್ರತಿಕ್ಷಣದಲ್ಲಿಯೂ ಗುರುತಿಸುತ್ತಲೇ ಇರು

ತ್ತಾನೆ. ಪಾಪಿಷ್ಠನಿಗಾದರೂ ಸತ್ಕರ್ಮದಿಂದ ಪಾಪನಿವಾರಣೆಯಾಗಬಹುದು. ಆದರೆ ಮಿಥ್ಯಾಚಾರಿಗೆ ಅವಕಾಶವೇ ಇಲ್ಲ. ಕ್ಷಣ-ಕ್ಷಣಕ್ಕೂ ಪಾಪಸಂಘಟನೆ ಯಾಗುತ್ತಿರುತ್ತದೆ.

'ಮಿಥ್ಯಾಚಾರಃ ಎಂದರೆ ಸಂಕಲ್ಪಮಾಡುವುದು ಒಂದು ; ಕಾರ್ಯತಃ ಮಾಡುವುದು ಮತ್ತೊಂದು–ಹೀಗೆ ಇರುವವನು. (ರಾ.ಭಾ.)

ಬಂಧ-ಮೋಕ್ಷಗಳಿಗೆ ಮನಸ್ಸೇ ಪ್ರಚೋದಕ. ಆದ್ದರಿಂದ ಅದರ ನಿಗ್ರಹ ವನ್ನು ಮಾಡಬೇಕು. ಕರ್ಮಪರಿತ್ಯಾಗಮಾಡಬಾರದು. ಇದು ಭಗವಂತನ ಆಶಯ. (ಮ.ಭಾ.)

ಈ ಶ್ಲೋಕ ಮತ್ತು ಮುಂದಿನ ಶ್ಲೋಕದಲ್ಲಿ ಅನ್ವಯ-ವ್ಯತಿರೇಕಗಳು ಇರುವುದನ್ನು ಶ್ರೀಮಧ್ವಾಚಾರ್ಯರು ಗಮನಿಸಿದ್ದಾರೆ. ನಿಗ್ರಹವಿಲ್ಲದ ಮನಸ್ಸಿದ್ದರೆ ಬಂಧವುಂಟಾಗುತ್ತದೆ. (ಅನ್ವಯ.) ನಿಗ್ರಹವಿಲ್ಲದ ಮನಸ್ಸಿಲ್ಲದಿದ್ದರೆ ಬಂಧವುಂಟಾಗುವುದಿಲ್ಲ. (ವ್ಯತಿರೇಕ.) ನಿಗೃಹೀತವಾದ ಮನಸ್ಸಿದ್ದರೆ ಮೋಕ್ಷವುಂಟಾಗುತ್ತದೆ. (ಅನ್ವಯ.) ನಿಗೃಹೀತವಾದ ಮನಸ್ಸಿಲ್ಲದಿದ್ದರೆ ಮೋಕ್ಷವುಂಟಾಗುವುದಿಲ್ಲ. (ವ್ಯತಿರೇಕ.)]

**ಓಂ ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।**
**ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥೭॥**

ಅರ್ಜುನ! ಯಾವನು ಇಂದ್ರಿಯಗಳನ್ನು ಮನಸ್ಸಿನಿಂದ ತಡೆದುಕೊಂಡು ಕರ್ಮೇಂದ್ರಿಯಗಳಿಂದ ಕರ್ಮಗಳನ್ನು ಅನಾಸಕ್ತನಾಗಿ ಮಾಡುತ್ತಿರುವನೋ ಅವನು ಹೆಚ್ಚಿನವನಾಗಿರುವನು.

* * *

(ಮಿಥ್ಯಾಚಾರಿಯು ಕರ್ಮೇಂದ್ರಿಯಗಳನ್ನು ಬಾಹ್ಯದಲ್ಲಿ ದಮನಮಾಡಿ ಮನಸ್ಸಿನಲ್ಲಿಯೇ ವಿಷಯಗಳನ್ನು ಮೆಲ್ಲುತ್ತಿರುತ್ತಾನೆ. ಮತ್ತೊಬ್ಬನು ಇಂದ್ರಿಯಗಳನ್ನು ಮನಸ್ಸಿನಲ್ಲಿಯೇ ಸಂಯಮನಮಾಡಿ ಕರ್ಮೇಂದ್ರಿಯ ಗಳಿಂದ ಅವಶ್ಯವಾದ ಕರ್ಮಗಳನ್ನು ಮಾಡುತ್ತಿರುತ್ತಾನೆ. ಹಾಗೆ ಕರ್ಮಗಳನ್ನು ಮಾಡುವಾಗ ಅನಾಸಕ್ತನಾಗಿರುತ್ತಾನೆ. ಕರ್ಮದ ಫಲಾಫಲಗಳಿಗೆ ಅಂಟಿಕೊಂಡಿರುವುದಿಲ್ಲ. ಕರ್ಮಯೋಗಿಯು ಫಲದಲ್ಲಿ ಅನಾಸಕ್ತನಾಗಿ ಕರ್ಮವನ್ನು ಆರಂಭಿಸುತ್ತಾನೆ. ಇವನೇ ಹೆಚ್ಚಿನವನು.

ಸ ವಿಶಿಷ್ಯತೇ ಇಂದ್ರಿಯಗಳನ್ನು ಮನಸ್ಸಿನಿಂದ ಸಂಯಮನಮಾಡಿ ಅನಾಸಕ್ತನಾಗಿ ಕರ್ಮಯೋಗವನ್ನು ಆಚರಿಸುವವನು ಹಿಂದಿನ ಶ್ಲೋಕದಲ್ಲಿ ಹೇಳಿರುವ ಮಿಥ್ಯಾಚಾರಿಗಿಂತಲೂ ಶ್ರೇಷ್ಠನಾಗಿರುತ್ತಾನೆ.

**ಇತರಸ್ಮಾತ್ ಮಿಥ್ಯಾಚಾರಾದ್ವಿಶಿಷ್ಯತೇ ॥** (ಶಂ.ಭಾ.)

ಇಂತಹ ಕರ್ಮಯೋಗಿಯ ಆಚರಣೆಯಲ್ಲಿ ಪ್ರಮಾದವು ಸಂಭವಿಸುವುದಿಲ್ಲವಾದುದರಿಂದ ಆತನು ಜ್ಞಾನನಿಷ್ಠನಾದ ಪುರುಷನಿಗಿಂತಲೂ ಶ್ರೇಷ್ಠನಾಗಿರುತ್ತಾನೆ.

**ಅಸಮ್ಭಾವ್ಯಪ್ರಮಾದತ್ವೇನ ಜ್ಞಾನನಿಷ್ಠಾದಪಿ ಪುರುಷಾತ್ ವಿಶಿಷ್ಯತೇ** (ರಾ.ಭಾ.)

ಈ ಶ್ಲೋಕದಲ್ಲಿ ಕರ್ಮಯೋಗ ಎಂಬುದಕ್ಕೆ ತನ್ನ ವರ್ಣಾಶ್ರಮಕ್ಕೆ ಉಚಿತವಾದ ಕರ್ಮ ಎಂದರ್ಥ. ಯಾವ ಆಶ್ರಮಕ್ಕೆ ಉಚಿತವಾದ ಕರ್ಮವಾದರೂ ಆಗಬಹುದು. ಗೃಹಸ್ಥಕರ್ಮ, ವಾನಪ್ರಸ್ಥಕರ್ಮ, ಬ್ರಹ್ಮಚಾರಿಕರ್ಮ–ಎಂಬ ನಿಯಮವೇನೂ ಇಲ್ಲ. **ಸ್ವವರ್ಣಾಶ್ರಮೋಚಿತಂ ನ ತು ಗೃಹಸ್ಥಕರ್ಮೈವ ಇತಿ ನಿಯಮಃ.** ಇದೇ ಅಧ್ಯಾಯದಲ್ಲಿ ೩ನೆಯ ಶ್ಲೋಕದಲ್ಲಿ **ಜ್ಞಾನಯೋಗೇನ ಸಾಂಖ್ಯಾನಾಂ** ಎಂದು ಯತ್ಯಾಶ್ರಮಕರ್ಮವನ್ನು ಪ್ರತ್ಯೇಕವಾಗಿ ಹೇಳಿರುವುದರಿಂದ ಇಲ್ಲಿ ಕರ್ಮಯೋಗಕ್ಕೆ ಗೃಹಸ್ಥಾಶ್ರಮಕರ್ಮ–ಎಂದೇ ಅರ್ಥ. (ಮ.ಭಾ.)

ನಿಷ್ಕಾಮಬುದ್ಧಿಯಿಂದ ಸಮತ್ವಬುದ್ಧಿಯಿಂದ ಕರ್ಮಮಾಡುವುದಕ್ಕೆ ಕರ್ಮಯೋಗವೆಂದು ಹೆಸರು.

**ಓಂ ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ ।**
**ಶರೀರಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥೮॥**

ನೀನು ನಿಯತವಾದ ಕರ್ಮವನ್ನಾಚರಿಸು. ಏಕೆಂದರೆ : ಕರ್ಮವು ಅಕರ್ಮಕ್ಕಿಂತಲೂ ಮೇಲು. ಅಕರ್ಮನಾಗಿದ್ದರೆ ನಿನಗೆ ಶರೀರಯಾತ್ರೆಯೂ ಕೂಡ ಸಿದ್ಧಿಸುವುದಿಲ್ಲ.

* * *

(ನಿಯತವಾದ ಕರ್ಮಮಾಡು, ಎನ್ನುತ್ತಾನೆ ಶ್ರೀಕೃಷ್ಣ. ನಿಯತ

ವೆಂದರೆ ನಿತ್ಯಕರ್ಮ. ವರ್ಣಧರ್ಮಾನುಸಾರವಾಗಿ ಯಾವ ಕರ್ಮವನ್ನು ಮಾಡಲು ಅಧಿಕಾರವಿದೆಯೋ ಆ ಕರ್ಮ. ಅದನ್ನು ಮಾಡು. ನಿತ್ಯ, ನೈಮಿತ್ತಿಕ, ಕಾಮ್ಯ, ನಿಷಿದ್ಧ–ಎಂದು ನಾಲ್ಕು ವಿಧ ಕರ್ಮಗಳಿವೆ. ಕಾಮ್ಯಕರ್ಮವನ್ನು ಬಿಡಬಹುದು. ನಿಷಿದ್ಧಕರ್ಮವನ್ನು ಮಾಡಲೇಬಾರದು. ಆದರೆ ನಿತ್ಯ-ನೈಮಿತ್ತಿಕಕರ್ಮಗಳನ್ನು ಬಿಡಬಾರದು. ನಿನ್ನ ವರ್ಣಾಶ್ರಮಧರ್ಮದ ಪ್ರಕಾರ ಯುದ್ಧವು ನೈಮಿತ್ತಿಕಕರ್ಮ. ಅದನ್ನು ಬಿಡುವಂತಿಲ್ಲ. ಕರ್ಮಮಾಡದೇ ಇರುವುದಕ್ಕಿಂತಲೂ ಕರ್ಮಮಾಡುವುದು ಶ್ರೇಷ್ಠವಾದುದು. ನಮ್ಮಲ್ಲಿ ಅನೇಕಜನ್ಮಗಳ ವಾಸನೆಗಳಿವೆ. ಅವುಗಳನ್ನು ತೊಡೆದುಹಾಕಲು ಕರ್ಮವನ್ನು ಮಾಡಬೇಕು. ಕರ್ಮವನ್ನೇ ಮಾಡುವುದಿಲ್ಲವೆಂದರೆ ನಿನ್ನ ಶರೀರಯಾತ್ರೆಯೂ ಪೂರೈಸದು. ಜೀವಂತನಾಗಿರಲೂ ಸಾಧ್ಯವಿಲ್ಲ.

ಅರ್ಜುನನು ಹಿಂದೆ **ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ** ।'ತಿರಿದು ತಂದ ಅನ್ನವನ್ನಾದರೂ ತಿನ್ನುವುದು ಮೇಲು' ಎನ್ನುತ್ತಾನೆ. ಭಿಕ್ಷೆಯೂ ಒಂದು ಕರ್ಮವೇ ಸರಿ.

ನಾಲ್ಕಾರು ಮನೆಗಳಿಗೆ ಜೋಳಿಗೆಯನ್ನು ಹಿಡಿದುಕೊಂಡು ತಿರುಗದಿದ್ದರೆ ಭಿಕ್ಷೆಯೂ ಸಿಕ್ಕುವುದಿಲ್ಲ. ಆದುದರಿಂದ ಕರ್ಮವನ್ನು ಬಿಟ್ಟು ಯಾವ ನೊಬ್ಬನಿಗೂ ಬದುಕಿರಲು ಸಾಧ್ಯವೇ ಇಲ್ಲ. ಆದರೆ ಕರ್ಮಮಾಡುವಾಗ 'ವಿವೇಚಿಸಿ ನಿಯತವಾದ ಕರ್ಮಮಾಡು. ಕ್ಷತ್ರಿಯೋಚಿತವಾದ ಕರ್ಮ ಮಾಡು'–ಎಂದು ಶ್ರೀಕೃಷ್ಣನು ಹೇಳುತ್ತಾನೆ.

**ನಿಯತಂ ಕರ್ಮ** ನಿತ್ಯವಾದ ಕರ್ಮ. ಯಾವ ಕರ್ಮಕ್ಕೆ ಯಾವನು ಅಧಿಕಾರಿಯಾಗಿರುವನೋ ಅಂತಹ ಕರ್ಮ. (ಶಂ.ಭಾ.)

ವರ್ಣಾಶ್ರಮೋಚಿತವಾದ ಕರ್ಮ. (ಮ.ಭಾ.)

ಕರ್ಮವು ಅನಾದಿವಾಸನೆಯಿಂದ ನಿಯತವಾಗಿರುವುದರಿಂದ ಅದನ್ನು ಮಾಡುವುದು ಸುಲಭ ಮತ್ತು ಅದರಿಂದ ಪ್ರಮಾದವೂ ಸಂಭವಿಸುವುದಿಲ್ಲ. (ರಾ.ಭಾ.)

**ಅಕರ್ಮಣಃ** ಕರ್ಮವನ್ನು ಆರಂಭಿಸದೇ ಇರುವುದಕ್ಕಿಂತ. **ಕರ್ಮಣಃ ಅನಾರಮ್ಭಾತ್.** (ಶಂ.ಭಾ.)

**ಅಕರ್ಮಣಃ** ಎಂಬುದಕ್ಕೆ "ಜ್ಞಾನನಿಷ್ಠೆಗಿಂತಲೂ" ಎಂದು ಶ್ರೀ ರಾಮಾನುಜರು ಅರ್ಥಮಾಡಿರುತ್ತಾರೆ. 'ನೈಷ್ಕರ್ಮ್ಯಂ ಪುರುಷೋಽಶ್ನುತೇ' ಎಂದು ಪ್ರಾರಂಭಿಸಿದ ಪ್ರಕರಣದಲ್ಲಿ ಬಂದಿರುವುದರಿಂದ ಇಲ್ಲಿ ಅಕರ್ಮಶಬ್ದವು ಜ್ಞಾನನಿಷ್ಠೆಯನ್ನು ಹೇಳುತ್ತದೆ. ಜ್ಞಾನನಿಷ್ಠಾಧಿಕಾರಿಗೂ ಕೂಡ ಜ್ಞಾನನಿಷ್ಠೆಗಿಂತಲೂ ಕರ್ಮನಿಷ್ಠೆಯೇ ಶ್ರೇಷ್ಠ. ಏಕೆಂದರೆ : ಜ್ಞಾನನಿಷ್ಠೆಯು ಅವನು ಹಿಂದೆ ಅಭ್ಯಾಸಮಾಡಿದ್ದಲ್ಲ. ಅವನಿಗದು ನಿಯತವಾಗಿಲ್ಲ. ಆದುದರಿಂದ ಅದನ್ನು ಮಾಡುವುದು ಕಷ್ಟ ಮತ್ತು ಅದರ ಆಚರಣೆಯಿಂದ ಪ್ರಮಾದಗಳೂ ಸಂಭವಿಸುತ್ತವೆ.)

**ಓಂ ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬನ್ಧನಃ ।**
**ತದರ್ಥಂ ಕರ್ಮ ಕೌನ್ತೇಯ ಮುಕ್ತಸಙ್ಗಃ ಸಮಾಚರ ॥೯॥**

ಯಜ್ಞಾರ್ಥವಾಗಿ ಮಾಡುವ ಕರ್ಮವನ್ನು ಬಿಟ್ಟು ಉಳಿದ ಕರ್ಮಗಳಿಂದ ಜನರು ಬಂಧಿತರಾಗುತ್ತಾರೆ. ಕೌಂತೇಯ! ಆದುದರಿಂದ ನೀನು ಕರ್ಮವನ್ನು ಸಂಗರಹಿತನಾಗಿ ಮಾಡು.

* * *

(ಯಜ್ಞವೆಂದರೆ ಪಂಚಮಹಾಯಜ್ಞಗಳು–ನಿತ್ಯ-ನೈಮಿತ್ತಿಕಕರ್ಮಗಳು, ಭಗವಂತನ ಪೂಜಾರೂಪವಾದ ಕರ್ಮಗಳು.

**ಪಞ್ಚ ವಾ ಏತೇ ಮಹಾಯಜ್ಞಾಃ ಸತತಿ ಪ್ರತಾಯನ್ತೇ ಸತತಿ ಸಂತಿಷ್ಠನ್ತೇ ದೇವಯಜ್ಞಃ ಪಿತೃಯಜ್ಞೋ ಭೂತಯಜ್ಞೋ ಮನುಷ್ಯಯಜ್ಞೋ ಬ್ರಹ್ಮಯಜ್ಞ ಇತಿ.**

**ಯದಗ್ನೌ ಜುಹೋತ್ಯಪಿ ಸಮಿಧಂ ತದ್ದೇವಯಜ್ಞಃ ಸಂತಿಷ್ಠತೇ ಯತ್ಪಿತೃಭ್ಯಃ ಸ್ವಧಾಕರೋತ್ಯಪ್ಯಪಸ್ತತ್ಪಿತೃಯಜ್ಞಃ ಸಂತಿಷ್ಠತೇ ಯದ್ಭೂತೇಭ್ಯೋ ಬಲಿಗ್ಂ ಹರತಿ ತದ್ಭೂತಯಜ್ಞಃ ಸಂತಿಷ್ಠತೇ ಯದ್ಬ್ರಾಹ್ಮಣೇಭ್ಯೋಽನ್ನಂ ದದಾತಿ ತನ್ಮನುಷ್ಯಯಜ್ಞಃ ಸಂತಿಷ್ಠತೇ ಯತ್ಸ್ವಾಧ್ಯಾಯಮಧೀಯೀತೈ ಕಾಮಪ್ಯೃಚಂ ಯಜುಃ ಸಾಮ ವಾ ತದ್ಬ್ರಹ್ಮಯಜ್ಞಃ ಸಂತಿಷ್ಠತೇ.**

ದೇವತೆಗಳನ್ನು ಉದ್ದೇಶಿಸಿ ಅಗ್ನಿಯಲ್ಲಿ ಹೋಮಮಾಡುವುದು ದೇವ ಯಜ್ಞ; ಸಮಿತ್ತನ್ನು ವಿಧಿಪೂರ್ವಕವಾಗಿ ಹೋಮಮಾಡಿದರೂ ಅದು ದೇವ ಯಜ್ಞವಾಗುತ್ತದೆ. ಪಿತೃಗಳಿಗೆ ಶ್ರಾದ್ಧವನ್ನು ಮಾಡುವುದು ಪಿತೃಯಜ್ಞ; ಜಲತರ್ಪಣಮಾಡಿದರೂ ಅದು ಪಿತೃಯಜ್ಞವಾಗುತ್ತದೆ. ಭೂತಗಳಿಗೆ ಬಲಿ ಹರಣ ಕೊಟ್ಟರೆ ಅದು ಭೂತಯಜ್ಞವಾಗುತ್ತದೆ. ಸಾಕ್ಷಾತ್ ಅನ್ನದಾನ ಮಾಡಿದರೆ ಅದು ಮನುಷ್ಯಯಜ್ಞವಾಗುತ್ತದೆ. ಋಗ್ಯಜುಸ್ಸಾಮಗಳಲ್ಲಿ ಒಂದೇ ಋಕ್ಕನ್ನು, ಒಂದು ಸಾಮವನ್ನು ಅಥವಾ ಒಂದು ಯಜುಸ್ಸನ್ನು ಹೇಳಿದರೂ ಸಹ ಅದು ಬ್ರಹ್ಮಯಜ್ಞವಾಗುತ್ತದೆ. ಈ ಯಜ್ಞಗಳೆಲ್ಲವೂ ಸಾಮಾನ್ಯವಾಗಿ ನಿತ್ಯ-ನೈಮಿತ್ತಿಕಕರ್ಮಗಳಲ್ಲಿ ಸೇರಿದುವುಗಳಾಗಿವೆ. ಯಜ್ಞಗಳೆಲ್ಲವೂ ಕಾಮ್ಯ ಫಲಪ್ರಧಾನವಾದ ಮತ್ತು ಲೋಕಹಿತಾರ್ಥವಾದ ಕರ್ಮಗಳೇ ಆಗಿವೆ. ಮಳೆಯು ಹೋಗಿ ದುರ್ಭಿಕ್ಷವುಂಟಾದರೆ ಯಜ್ಞಮಾಡುತ್ತಾರೆ. ಅದರಿಂದ ಸುಪ್ರೀತರಾದ ದೇವತೆಗಳು ಮಳೆಗರೆಯುತ್ತಾರೆ. ಪರ್ಜನ್ಯಜಪಮಾಡಿದರೆ ಮಳೆಯು ಬರುತ್ತದೆ. ಇವುಗಳೆಲ್ಲವೂ ಕರ್ತವ್ಯದ ದೃಷ್ಟಿಯಿಂದ ಮಾಡಬೇಕಾದುವುಗಳು. ಆದರೆ ಯಜ್ಞವನ್ನು ಬಿಟ್ಟು ಉಳಿದ ಕರ್ಮಗಳು ಸಂಸಾರ ಬಂಧನಕ್ಕೆ ಕಾರಣಗಳಾಗುತ್ತವೆ. ಆದುದರಿಂದ ಯಜ್ಞರೂಪವಾದ ಈ ಕರ್ಮಗಳನ್ನು ನೀನು ಮಾಡಲೇಬೇಕು. ಕೌಶಲದಿಂದ ಮಾಡಬೇಕು. ಕರ್ಮಫಲವು ನಿನಗೆ ಅಂಟಿಕೊಳ್ಳದಂತೆ ಮಾಡಬೇಕು. **'ಮುಕ್ತಸಙ್ಗಃ ಸಮಾಚರ**–ಕರ್ಮಫಲದಿಂದ ಮುಕ್ತನಾಗಿ ಕರ್ಮಫಲವನ್ನು ಅಭಿಲಾಷಿಸದೇ ಕರ್ಮವನ್ನು ಚೆನ್ನಾಗಿಮಾಡು.

ಯಜ್ಞವೇ ಮುಂತಾದ ಶಾಸ್ತ್ರೀಯಕರ್ಮಕ್ಕೆ ಬೇಕಾದ ದ್ರವ್ಯಾರ್ಜನೆಯೇ ಮೊದಲಾದ ಕರ್ಮಗಳನ್ನು ಬಿಟ್ಟು ಸ್ವಪ್ರಯೋಜನಕ್ಕಾಗಿ ಕರ್ಮವನ್ನಾಚರಿಸಿದರೆ ಮನುಷ್ಯರು ಕರ್ಮಬಂಧನಕ್ಕೆ ಸಿಕ್ಕಿಬೀಳುತ್ತಾರೆ. ಆದುದರಿಂದ ಸ್ವಪ್ರಯೋಜನಸಾಧನೆಯೆಂಬ ಸಂಗವನ್ನು ತೊರೆದು ಕರ್ಮವನ್ನಾಚರಿಸಬೇಕು. ಹೀಗೆ ಮುಕ್ತಸಂಗನಾಗಿ ಯಜ್ಞಾರ್ಥಕರ್ಮಗಳನ್ನಾಚರಿಸಿದರೆ ಅವುಗಳಿಂದ ಆರಾಧಿತನಾದ ಪರಮಪುರುಷನು ಕರ್ಮವಾಸನೆಯನ್ನು ತೊಲಗಿಸಿ ನಿರ್ಬಾಧಕವಾದ ಆತ್ಮಸಾಕ್ಷಾತ್ಕಾರವನ್ನು ಉಂಟುಮಾಡಿಕೊಡುತ್ತಾನೆ.

(ರಾ.ಭಾ.)

ಶ್ರೀಶಂಕರರು ಯಜ್ಞಶಬ್ದಕ್ಕೆ 'ಯಜ್ಞೋ ವೈ ವಿಷ್ಣುಃ'–ಎಂಬ ಶ್ರುತಿಯನ್ನುದ್ಧರಿಸಿ 'ವಾಸುದೇವ' ಎಂಬ ಅರ್ಥವನ್ನು ಮಾಡಿದ್ದಾರೆ. ಅವನಿಗೋಸ್ಕರ ಮಾಡುವ ಕರ್ಮಗಳನ್ನು ಬಿಟ್ಟು ಉಳಿದ ಕರ್ಮಗಳು ಬಂಧನಕ್ಕೆ ಕಾರಣಗಳಾಗುತ್ತವೆ–ಎಂದು ಅವರ ಅಭಿಪ್ರಾಯ.

ಶ್ರೀಮಧ್ವಾಚಾರ್ಯರೂ ಯಜ್ಞಶಬ್ದಕ್ಕೆ ವಿಷ್ಣು ಎಂದೇ ಅರ್ಥಮಾಡಿದ್ದಾರೆ. '**ಕರ್ಮಣಾ ಬಧ್ಯತೇ ಜನ್ತುಃ**'–ಎಂಬ ಸ್ಮೃತಿವಾಕ್ಯದಂತೆ ಕರ್ಮ ಮಾಡಿದರೆ ಬಂಧನವುಂಟಾಗುತ್ತದೆ ಎಂದು ಭಾವಿಸಿ ಯುದ್ಧಾದಿಕರ್ಮಗಳನ್ನು ಅರ್ಜುನನು ತ್ಯಾಗಮಾಡಬಾರದು. ಸ್ಮೃತಿಯಲ್ಲಿ ಬಂಧನಕ್ಕೆ ಕಾರಣವನ್ನಾಗಿ ಹೇಳಿರುವುದು ಅವೈಷ್ಣವವಾದ ಕಾಮ್ಯಕರ್ಮಗಳಿಗೆ ಸಂಬಂಧಿಸಿದುದು. ವಿಷ್ಣುಸಂಬಂಧವಾದ ಕರ್ಮಗಳು ಸಂಗರಹಿತವಾಗಿ ಮಾಡಲ್ಪಟ್ಟರೆ ಬಂಧನಕ್ಕೆ ಕಾರಣವಾಗುವುದಿಲ್ಲ–ಎಂದು ಶ್ರೀಜಯತೀರ್ಥರು (ಶ್ರೀಟೀಕಾಚಾರ್ಯರು) ವಿವರಣೆ ನೀಡಿದ್ದಾರೆ.)

ಶ್ರೀಕೃಷ್ಣನು ಯಜ್ಞವು ಬಂಧನವಾಗದೆಂಬುದಕ್ಕೆ ಕಾರಣವನ್ನು ನಿರೂಪಿಸುತ್ತಾನೆ.

**ಓಂ ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ॥೧೦॥**
**ಓಂ ದೇವಾನ್ಭಾವಯತಾನೇನ ತೇ ದೇವಾ ಭಾವಯನ್ತು ವಃ ।**
**ಪರಸ್ಪರಂ ಭಾವಯನ್ತಃ ಶ್ರೇಯಃ ಪರಮವಾಪ್ಸ್ಯಥ ॥೧೧॥**
**ಓಂ ಇಷ್ಟಾನ್ಭೋಗಾನ್ಹಿ ವೋ ದೇವಾ ದಾಸ್ಯನ್ತೇ ಯಜ್ಞಭಾವಿತಾಃ ।**
**ತೈರ್ದತ್ತಾನ ಪ್ರದಾಯೈಭ್ಯೋ ಯೋ ಭುಙ್ಕ್ತೇ ಸ್ತೇನ ಏವ ಸಃ ॥**
**ಓಂ ಯಜ್ಞಶಿಷ್ಟಾಶಿನಃ ಸನ್ತೋ ಮುಚ್ಯನ್ತೇ ಸರ್ವಕಿಲ್ಬಿಷೈಃ ।**
**ಭುಞ್ಜತೇ ತೇ ತ್ವಘಂ ಪಾಪಾ ಯೇ ಪಚನ್ತ್ಯಾತ್ಮಕಾರಣಾತ್ ॥೧೩॥**

ಕಲ್ಪಾದಿಯಲ್ಲಿ ಪ್ರಜಾಪತಿಯು ಯಜ್ಞಗಳೊಡನೆ ಪ್ರಜೆಗಳನ್ನೂ ಸೃಷ್ಟಿಸಿ ಹೀಗೆಂದು ಹೇಳಿದನು : 'ಈ ಯಜ್ಞದಿಂದ ನೀವು ಅಭಿವೃದ್ಧಿಯನ್ನು ಹೊಂದಿರಿ. ಇದು ನಿಮಗೆ ಇಷ್ಟಾರ್ಥಗಳೆಲ್ಲವನ್ನೂ ಕರೆಯುವ ಕಾಮಧೇನು ವಾಗಲಿ. ಇದರಿಂದ ದೇವತೆಗಳನ್ನು ಭಾವಿಸಿರಿ. ಆ ದೇವತೆಗಳು ನಿಮ್ಮನ್ನು

ಭಾವಿಸಲಿ. ಹೀಗೆ ಒಬ್ಬರನ್ನೊಬ್ಬರು ಭಾವಿಸುತ್ತಿದ್ದರೆ ಪರಮಶ್ರೇಯಸ್ಸನ್ನು ಪಡೆಯುವಿರಿ. ಯಜ್ಞಭಾವಿತರಾದ ದೇವತೆಗಳು ನಿಮಗೆ ಇಷ್ಟವಾದ ಭೋಗ




ಗಳನ್ನು ಕೊಡುತ್ತಾರೆ. ಅವರು ಕೊಟ್ಟಿರುವುದನ್ನು ಅವರಿಗೆ ಕೊಡದೇ ಯಾವನು ಭೋಗಿಸುವನೋ ಅವನು ಕಳ್ಳನೇ ಸರಿ. ಯಜ್ಞದಲ್ಲಿ ಉಳಿದ ಶೇಷವನ್ನು ತಿನ್ನುವ ಸತ್ಪುರುಷರು ಸರ್ವಪಾಪಗಳಿಂದಲೂ ಬಿಡುಗಡೆ ಹೊಂದುತ್ತಾರೆ. ಆದರೆ ಯಾರು ತಮಗಾಗಿ ಮಾತ್ರ ಅಡಿಗೆಮಾಡಿಕೊಳ್ಳುವರೋ ಆ ಪಾಪಿಗಳು ಪಾಪವನ್ನೇ ಉಪಭುಂಜಿಸುವರು.

* * *

(ಪ್ರಜೆಗಳೆಲ್ಲರೂ ಸಾಮಾನ್ಯವಾಗಿ ಪ್ರವೃತ್ತಿಮಾರ್ಗಿಗಳೇ. ಎಲ್ಲರೂ ನಿವೃತ್ತಿಮಾರ್ಗಿಗಳೇ ಆಗಿಬಿಟ್ಟರೆ ಪ್ರಪಂಚವೇ ಬೆಳೆಯುವುದಿಲ್ಲ. ಆದುದರಿಂದ ಹುಟ್ಟಿದ ಪ್ರಜೆಗಳಿಗೆ ಸುಖವಾದ ಬಾಳ್ವೆನಡೆಸಲು ಸೌಕರ್ಯವನ್ನು ಕಲ್ಪಿಸಬೇಕು. ಅದಕ್ಕಾಗಿಯೇ ಬ್ರಹ್ಮನು ಪ್ರಜೆಗಳೊಡನೆ ಯಜ್ಞಗಳನ್ನೂ ಸೃಷ್ಟಿ ಸಿದನು. ಸೃಷ್ಟಿಸಿದ ಕಾಲದಲ್ಲಿಯೇ ಪ್ರಜೆಗಳನ್ನು ಕುರಿತು ತಾನು ಯಜ್ಞಗಳನ್ನು ಸೃಷ್ಟಿಸಿದ ಕಾರಣವನ್ನು ನಿರೂಪಿಸುತ್ತಾ ಹೇಳಿದನು :

"ಮಕ್ಕಳೇ! ನೀವು ಈ ಯಜ್ಞಗಳಿಂದ ಅಭಿವೃದ್ಧಿಯನ್ನು ಹೊಂದಿರಿ. ಈ ಯಜ್ಞಗಳು ನಿಮಗೆ ಬೇಕೆನಿಸಿದ ಬಯಕೆಗಳನ್ನೆಲ್ಲಾ ಪೂರೈಸಿಕೊಡುತ್ತವೆ. (ಚತುರ್ವಿಧಪುರುಷಾರ್ಥಗಳನ್ನೂ ಕೊಡುತ್ತವೆ.) ಈ ಯಜ್ಞಗಳು



ಭೂಲೋಕ-ಸ್ವರ್ಗಲೋಕಗಳೆರಡನ್ನೂ ಪೋಷಣೆಮಾಡತಕ್ಕುವುಗಳು. ಈ ಯಜ್ಞಗಳಿಂದ ನೀವು ಇಂದ್ರನೇ ಮೊದಲಾದ ದೇವತೆಗಳನ್ನು ತೃಪ್ತಿಪಡಿಸಿರಿ. ಅವರನ್ನು ಸಂತೋಷಗೊಳಿಸಿರಿ. ನಿಮ್ಮ ಯಜ್ಞಕರ್ಮದಿಂದ ಸಂತುಷ್ಟರಾದ ದೇವತೆಗಳು ನಿಮಗೆ ಬೇಕಾದ ಮಳೆ-ಬೆಳೆಗಳನ್ನು ಕೊಟ್ಟು ಸಂತೋಷಪಡಿಸು ತ್ತಾರೆ. ಈ ರೀತಿಯಲ್ಲಿ ಪರಸ್ಪರಸಹಕಾರದಿಂದಲೂ ಅನ್ಯೋನ್ಯಪ್ರೀತಿ-ವಿಶ್ವಾಸಗಳಿಂದಲೂ ಇದ್ದು ಮೋಕ್ಷರೂಪವಾದ ಶ್ರೇಯಸ್ಸನ್ನು ಪಡೆಯಿರಿ."

ಬ್ರಹ್ಮನು ಮುಂದೆ ಒಂದು ಎಚ್ಚರಿಕೆ ನೀಡುತ್ತಾನೆ. 'ಈ ಯಜ್ಞಚಕ್ರವು ತಿರುಗುತ್ತಲೇ ಇರಬೇಕು. ನಿಂತುಹೋಗಿಬಿಟ್ಟರೆ ಪ್ರಪಂಚಕ್ಕೇ ಹಾನಿಯಾಗುತ್ತದೆ. ನೀವು ಯಜ್ಞಮಾಡುವುದನ್ನೂ ನಿಲ್ಲಿಸಬಾರದು. ದೇವತೆಗಳು ನಿಮ್ಮ ಇಷ್ಟಾರ್ಥಗಳನ್ನೂ ತಡೆಹಿಡಿಯಬಾರದು. ನನ್ನ

ನಿಯಮದಂತೆ ನೀವು ಮಾಡುವ ಯಜ್ಞದಿಂದ ಸಂತೃಪ್ತರಾದ ದೇವತೆಗಳು ನಿಮಗೆ ಇಷ್ಟವಾದ ಭೋಗಗಳನ್ನೆಲ್ಲಾ ಕೊಡುತ್ತಾರೆ. ಸಾಮಾನ್ಯವಾಗಿ ಭೋಗಜೀವಿಯು ತನ್ನ ಕರ್ತವ್ಯವನ್ನು ಮರೆತುಬಿಡುವುದುಂಟು. ನೀವು ಹಾಗೆ ನಿಮ್ಮ ಕರ್ತವ್ಯವನ್ನು ಮರೆಯಬಾರದು. ದೇವತೆಗಳಿಂದ ನೀವು ಪಡೆದ ಐಶ್ವರ್ಯವನ್ನು ಪುನಃ ದೇವತೆಗಳಿಗಾಗಿ ಅವರ ಪ್ರೀತಿಗಾಗಿಯೇ ಬಳಸದಿದ್ದರೆ (ಪುನಃ ಯಜ್ಞ-ಯಾಗಾದಿಗಳಿಂದ ಅವರನ್ನು ತೃಪ್ತಿಪಡಿಸದಿದ್ದರೆ) ನೀವು ಕಳ್ಳರೆನಿಸಿಕೊಳ್ಳುತ್ತೀರಿ.'

ಯಜ್ಞದಿಂದ ಸುಪ್ರೀತರಾದ ದೇವತೆಗಳು ಮನುಷ್ಯನಿಗೆ ಪುರುಷಾರ್ಥ ಗಳನ್ನು ಅನುಗ್ರಹಿಸುವುದು ಅವನ ಸ್ವಾರ್ಥಕ್ಕಾಗಿ ಅಲ್ಲ. ಆ ಐಶ್ವರ್ಯವನ್ನವನು 'ತನ್ನದು' ಎಂದು ಭಾವಿಸಬಾರದು. ದೇವತೆಗಳು ಕೊಟ್ಟಿದ್ದನ್ನು ಪುನಃ ದೇವತೆಗಳಿಗೇ ಅರ್ಪಿಸುವ ಬುದ್ಧಿಯನ್ನು ಹೊಂದಿರಬೇಕು. 'ಇದು ನನ್ನದು' ಎಂದು ಭಾವಿಸಿದಾಗಲೇ ಅದು ಚೌರ್ಯವಾಗುತ್ತದೆ. ರಾಜನು ಪ್ರಜೆಗಳಿಗೆ ಭೂಮಿಯನ್ನು ಹಂಚಿಕೊಡುತ್ತಾನೆ. ಭೂಮಿಯೇನೋ ರೈತನದೇ ಸರಿ. ಅವನ ಹೆಸರಿಗೇ ಖಾತೆಯೂ ಆಗಿರುತ್ತದೆ. ಆದರೆ ರೈತನು ರಾಜನು ಕೊಟ್ಟ ಭೂಮಿ–ಎಂಬ ಕೃತಜ್ಞತೆಯಿಂದ ಕಂದಾಯವನ್ನು ಮಾತ್ರ ರಾಜನಿಗೆ ಅಥವಾ ಸರ್ಕಾರಕ್ಕೆ ಕೊಡುತ್ತಲೇ ಇರಬೇಕು. ಕೊಡದಿದ್ದರೆ ತಪ್ಪಿತಸ್ಥನಾಗುತ್ತಾನೆ. ಶಿಕ್ಷೆಯನ್ನೂ ಅನುಭವಿಸುತ್ತಾನೆ. ಅದೇ ರೀತಿಯಲ್ಲಿ ಯಜ್ಞಭಾವಿತರಾದ ದೇವತೆಗಳು ಕೊಟ್ಟ ಭೋಗ್ಯವಸ್ತುಗಳನ್ನು ಮನುಷ್ಯನು ಅನುಭವಿಸಲಡ್ಡಿಯಿಲ್ಲ. ಆದರೆ ದೇವತೆಗಳಿಗೆ ಸಮರ್ಪಣೆಮಾಡಿ ಅನಂತರ ಉಪಭೋಗಿಸಬೇಕು.

**ಕಣ್ಡನಂ ಪೇಷಣೀ ಚುಲ್ಲೀ ಉದಕುಮ್ಭಶ್ಚಮಾರ್ಜನೀ ।**
**ಪಞ್ಚಸೂನಾ ಗೃಹಸ್ಥಸ್ಯ ಪಞ್ಚಯಜ್ಞಾತ್ಪ್ರಣಶ್ಯತಿ ॥**

(ಮನುಸ್ಮೃತಿಃ)

ಐದು ವಿಧವಾದ ಪಾಪಗಳ ಅಪನೋದನಕ್ಕಾಗಿ ಮತ್ತು ಪ್ರಮಾದ ದಿಂದ ಆದ ಹಿಂಸೆ ಮುಂತಾದುವುಗಳಿಂದ ಉಂಟಾದ ಪಾಪಗಳ ಪರಿಹಾರ ಕ್ಕಾಗಿ ಪಂಚಮಹಾಯಜ್ಞಗಳನ್ನು ಮಾಡಬೇಕು. ೧) ಕುಟ್ಟುವಾಗ ೨) ಬೀಸು

ವಾಗ ೩) ಬೇಯಿಸುವಾಗ ೪) ನೀರು ತುಂಬುವಾಗ ೫) ಮನೆಯನ್ನು ಗುಡಿಸಿ ಸಾರಿಸುವಾಗ–ಎಷ್ಟೋ ಸೂಕ್ಷ್ಮಪ್ರಾಣಿಗಳು ನಮಗೆ ತಿಳಿಯದಂತೆಯೇ ಸತ್ತುಹೋಗುತ್ತವೆ. ಇದರಿಂದ ಪಂಚಸೂನಾದೋಷವು ಸಂಭವಿಸುತ್ತದೆ.

ಯಜ್ಞ-ಯಾಗಾದಿಗಳ ಮೂಲಕವಾಗಿ ಇಂದ್ರಾದಿದೇವತೆಗಳನ್ನು ಸಂತೃಪ್ತಿಗೊಳಿಸುವುದರ ಜೊತೆಗೆ ದೇವಯಜ್ಞ-ಪಿತೃಯಜ್ಞ-ಭೂತಯಜ್ಞ-ಮನುಷ್ಯಯಜ್ಞ-ಬ್ರಹ್ಮಯಜ್ಞಗಳನ್ನೂ ಮಾಡಬೇಕು. ಈ ಯಜ್ಞಗಳನ್ನು ಮಾಡಿ ಅತಿಥಿ-ಅಭ್ಯಾಗತರಿಗೆ ಭೋಜನಮಾಡಿಸಿ ಉಳಿದ ಅನ್ನಶೇಷವನ್ನು ಉಪಭುಂಜಿಸುವ ಸತ್ಪುರುಷರು ಸಕಲಪಾಪಗಳಿಂದಲೂ ವಿಮುಕ್ತರಾಗುತ್ತಾರೆ.

ಹಾಗೆ ಮಾಡದೇ ಯಾವ ಪಾಪಿಷ್ಠರು ಕೇವಲ ತಮಗೊಬ್ಬರಿಗಾಗಿ ಅಡಿಗೆಯನ್ನು ಮಾಡಿಕೊಳ್ಳುತ್ತಾರೆಯೋ, ಅತಿಥಿ-ಅಭ್ಯಾಗತರನ್ನು ಸತ್ಕರಿಸುವುದಿಲ್ಲವೋ–ಅವರು ಊಟಮಾಡುವುದು ಅನ್ನವಾಗಿರುವುದಿಲ್ಲ. ಕೇವಲ ಪಾಪವೇ ಆಗಿರುತ್ತದೆ. ಪಾಪವನ್ನೇ ಅವರು ಊಟಮಾಡುತ್ತಾರೆ.

ಇದು ಎಂತಹ ಸತ್ಸಂಪ್ರದಾಯವೆಂಬುದನ್ನು ನಾವು ಮನಗಾಣಬೇಕು. 'ಹಣ್ಣನ್ನು ಹಂಚಿ ತಿನ್ನು' ಎಂದು ನಾವು ಇಂದೂ ಮಕ್ಕಳಿಗೆ ಹೇಳುತ್ತೇವೆ. ದೇವರು ದಯಪಾಲಿಸಿದ ಐಶ್ವರ್ಯವು ನಮ್ಮೊಬ್ಬರದಲ್ಲ. ಆ ಐಶ್ವರ್ಯಕ್ಕೆ ನಾವು ಕೇವಲ ವಿಶ್ವಸ್ತರು. ಅದನ್ನು ಯಥಾಯೋಗ್ಯವಾಗಿ ಸಮಾಜಕ್ಕೆ ಹಂಚಿಕೊಡುವುದು ನಮ್ಮ ಕರ್ತವ್ಯ. ಹಾಗೆ ಮಾಡದಿದ್ದರೆ ನಾವು ಪಾಪಿಗಳಾಗುತ್ತೇವೆ. ಮನುಷ್ಯನು ತಾನು ಗಳಿಸಿದ ಐಶ್ವರ್ಯವನ್ನು ಸಮಾಜಕ್ಕೆ ಹಂಚಿಕೊಡುವಂತೆ ಮಾಡಬೇಕಾದರೆ ಅವನಿಗೊಂದು ಉತ್ತಮಭಾವನೆಯನ್ನು ಕೊಡಬೇಕು. ಕಾನೂನಿನಿಂದ ಹೆದರಿಸಿದರೆ ಅವನು ಹೆದರುವವನಲ್ಲ. ಕಾನೂನಿನಿಂದ ತಪ್ಪಿಸಿಕೊಳ್ಳಲು ಅವನು ಮೊದಲೇ ಯೋಚಿಸಿರುತ್ತಾನೆ. ಗೀತೆಯ ಈ ಹಿನ್ನೆಲೆಯನ್ನು ಕೊಡಬೇಕು. ಆಗವನು ಸ್ವಾಭಾವಿಕವಾಗಿಯೇ ಪರಿವರ್ತನೆಹೊಂದುತ್ತಾನೆ. ಸ್ವಾರ್ಥಭಾವನೆಯನ್ನು ಬಿಡುತ್ತಾನೆ.'

'ಕೇವಲಾಘೋ ಭವತಿ ಕೇವಲಾದೀ–ಸುಮ್ಮನೇ ತಿನ್ನುವವನು ಪಾಪಿಯಾಗುತ್ತಾನೆ.' ಎಂದು ಶ್ರುತಿಯು ಸಾರುತ್ತಿದೆ. 'ಮಾಡಿದ ಅಡಿಗೆ

ಯನ್ನು ದೇವರಿಗೆ ಸಮರ್ಪಿಸಬೇಕು. ಮಧ್ಯಾಹ್ನದ ವೇಳೆಯಲ್ಲಿ ಹಸಿದು ಬಂದವನಿಗೆ ಅನ್ನವಿಡಬೇಕು. ಅನಂತರ ತಾನು ಊಟಮಾಡಬೇಕು. ಇದು ಪ್ರತಿಯೊಬ್ಬ ಗೃಹಸ್ಥನ ಕರ್ತವ್ಯ. ಈ ಸಂಸ್ಕೃತಿಯನ್ನು ನಾವು ಮರೆಯುತ್ತಾ ಬಂದಿದ್ದೇವೆ. ನಾವು ಸಮಾಜದಲ್ಲಿ ಸುಖಬಾಳ್ವೆಯನ್ನು ನಡೆಸಬೇಕಾದರೆ ಈ ಗೀತಾಸಂಸ್ಕೃತಿಯ ಪುನರುತ್ಥಾನವಾಗಬೇಕು.'

ಪ್ರಜಾಪತಿಶಬ್ದವು ಸರ್ವೇಶ್ವರನನ್ನು ಕುರಿತು ಹೇಳುತ್ತದೆಯೆಂದು ಶ್ರೀರಾಮಾನುಜರ ಅಭಿಪ್ರಾಯ.

**ಇಷ್ಟಕಾಮಧುಕ್ :** ಯಜ್ಞವು ಪರಮಪುರುಷಾರ್ಥರೂಪವಾದ ಮೋಕ್ಷವೆಂಬ ಕಾಮವನ್ನೂ ಮತ್ತು ಅದಕ್ಕೆ ಅನುಗುಣವಾದ ಇತರ ಕಾಮ ಗಳನ್ನೂ ಪೂರ್ಣಗೊಳಿಸಲಿ.

**ದೇವಾನ್ ಭಾವಯತ**: ನನಗೆ (ಪರಮಾತ್ಮನಿಗೆ) ಶರೀರಭೂತ ರಾಗಿರುವ ದೇವತೆಗಳನ್ನು ಆರಾಧಿಸಿರಿ. (ರಾ.ಭಾ.)

**ಪರಂ ಶ್ರೇಯಃ : ಮೋಕ್ಷರೂಪವಾದ ಶ್ರೇಯಸ್ಸು** (ಮ.ಭಾ.)

**ಪರಂ ಶ್ರೇಯಃ : ಮೋಕ್ಷಲಕ್ಷಣಂ ಸ್ವರ್ಗಂ ವಾ** (ಶಂ.ಭಾ.)

**ಯೋ ಭುಙ್ಕ್ತೇ ಸ್ತೇನ ಏವ ಸಃ**–ಇಲ್ಲಿ ಕಳ್ಳತನ ಎಂದರೇನು? ಮನುಷ್ಯನು ದೇವತೆಗಳ ಭೋಗಗಳನ್ನು ಗುಟ್ಟಾಗಿಯೇ ಆಗಲೀ–ಬಲವಂತ ವಾಗಿಯೇ ಆಗಲೀ ಅಪಹರಿಸುತ್ತಿಲ್ಲ. ಅವರು ಕೊಟ್ಟು ತನ್ನ ಕೈಗೆ ಬಂದಿರುವು ದನ್ನು ಭೋಗಿಸುವುದು ಕಳ್ಳತನವೇನೂ ಅಲ್ಲ. ರಾಜನು ಕೊಟ್ಟ ರಾಜ ಭೋಗಗಳನ್ನು ಅನುಭವಿಸುವ ರಾಜಸೇವಕರು ಕಳ್ಳರೆಂದು ಶಿಕ್ಷೆಗೆ ಗುರಿ ಮಾಡಲ್ಪಡುವುದಿಲ್ಲ. ಹಾಗಾಗುವುದಾದರೆ ಯಜ್ಞಫಲವನ್ನು ಅನುಭವಿಸು ವವರೆಲ್ಲರೂ ಕಳ್ಳರಾಗಬೇಕಾಗುತ್ತದೆ. ಆದುದರಿಂದ ಚೌರ್ಯಶಬ್ದಕ್ಕೆ ಶ್ರೀರಾಮಾನುಜರು ಹೀಗೆ ವಿವರಣೆಕೊಟ್ಟಿರುತ್ತಾರೆ : ಮತ್ತೊಬ್ಬರ ಸ್ವತ್ತಾಗಿ ಅವರ ಪ್ರಯೋಜನಕ್ಕೋಸ್ಕರ ಇಡಲ್ಪಟ್ಟಿರುವ ವಸ್ತುವಿನಲ್ಲಿ 'ತನ್ನದು' ಎಂಬ ಬುದ್ಧಿಯನ್ನಿಟ್ಟು ಅದರಿಂದ ತನ್ನನ್ನು ಪೋಷಿಸಿಕೊಳ್ಳುವುದಕ್ಕೆ ಚೌರ್ಯ ವೆಂದು ಶ್ರೀಕೃಷ್ಣನು ಕರೆದಿದ್ದಾನೆ. ಭೋಗಗಳು ದೇವತೆಗಳಿಂದ ಅವರ

ಆರಾಧನೆ ಎಂಬ ಪ್ರಯೋಜನಕ್ಕಾಗಿ ರಚಿತವಾಗಿರುವಾಗ, ಅವುಗಳನ್ನು ತನ್ನದೆಂದು ಭಾವಿಸಿ ಕೃತಜ್ಞತೆಯಿಲ್ಲದೇ ತನ್ನನ್ನು ಬೆಳೆಸಿಕೊಳ್ಳುವುದರಿಂದ ದೇವತೆಗಳು ಕೊಟ್ಟ ಪದಾರ್ಥವನ್ನು ಅವರಿಗೆ ಕೊಡದೇ ತಿನ್ನುವವನು ಕಳ್ಳನಾಗುತ್ತಾನೆ. ಕಳ್ಳತನವನ್ನು ಶರೀರದಿಂದಲೇ ಮಾಡಬೇಕೆಂಬ ನಿಯಮವಿಲ್ಲ. ಇತರರ ವಸ್ತುವಿನಲ್ಲಿ 'ತನ್ನದು' ಎಂಬ ಬುದ್ಧಿಯನ್ನಿಟ್ಟುಕೊಳ್ಳುವುದೂ ಕೂಡ ಕಳ್ಳತನವೇ ಆಗುತ್ತದೆ.

ಯಜ್ಞಶೇಷವನ್ನು 'ಅಮೃತ' ಎಂದು ಶ್ರೀಶಂಕರರು ಕರೆದಿದ್ದಾರೆ.

೧೦ನೆಯ ಶ್ಲೋಕದಿಂದ ೧೩ರ ವರೆಗಿನ ನಾಲ್ಕು ಶ್ಲೋಕಗಳಲ್ಲಿ ಹೇಳಿರುವುದು ಅರ್ಥವಾದ. ವರ್ಣಾಶ್ರಮೋಚಿತವಾದ ಕರ್ಮವನ್ನು ಸರ್ವಥಾ ಮಾಡಬೇಕು–ಎನ್ನುವುದಕ್ಕೋಸ್ಕರ ಈ ಅರ್ಥವಾದವನ್ನು ಹೇಳಿದೆ.

ಅರ್ಥವಾದವು ಸ್ತುತಿ, ನಿಂದೆ, ಪರಕೃತಿ ಮತ್ತು ಪುರಾಕಲ್ಪ–ಎಂದು ನಾಲ್ಕು ಬಗೆಯಾಗಿದೆ. ಮಾಡಿದರೆ ಲಾಭ, ಇಷ್ಟಸಿದ್ಧಿಯಾಗುತ್ತದೆ–ಎಂದು ಹೇಳಿದರೆ ಸ್ತುತಿ. (ಏಷ ವೋಽಸ್ತ್ವಿಷ್ಟಕಾಮಧುಕ್) ಮಾಡದಿದ್ದರೆ ಅನರ್ಥವಾಗುತ್ತದೆ–ಎಂದು ಹೇಳುವುದು ನಿಂದೆ. (ಯೋ ಭುಙ್ಕ್ತೇಸ್ತೇನ ಏವ ಸಃ) ಕರ್ತೃವು ಒಬ್ಬನೇ ಎಂದು ಹೇಳಲ್ಪಡುವುದು ಪರಕೃತಿ. (ಪುರೋವಾಚ ಪ್ರಜಾಪತಿಃ)ಅನೇಕಕರ್ತೃಗಳು ಎಂದು ಹೇಳಲ್ಪಡುವುದು ಪುರಾಕಲ್ಪ. (ಇಷ್ಟಾನ್ ಯಜ್ಞಭಾವಿತಾಃ)

ಯಜ್ಞಚಕ್ರದ ವಿಷಯವನ್ನು ಶ್ರೀಕೃಷ್ಣನು ಮತ್ತೂ ವಿವರಿಸುತ್ತಾನೆ.

**ಓಂ ಅನ್ನಾದ್ಭವನ್ತಿ ಭೂತಾನಿ ಪರ್ಜನ್ಯಾದನ್ನಸಮ್ಭವಃ ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥೧೪॥**

**ಓಂ ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।**
**ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥೧೫॥**

ಅನ್ನದಿಂದ ಪ್ರಾಣಿಗಳು ಉಂಟಾಗುತ್ತವೆ. ಅನ್ನದ ಉತ್ಪತ್ತಿಯು ಆಗುವುದು ಪರ್ಜನ್ಯನಿಂದ (ಮಳೆಯಿಂದ.) ಪರ್ಜನ್ಯವು (ಮಳೆಯು) ಯಜ್ಞದಿಂದ ಆಗುತ್ತದೆ. ಯಜ್ಞವು ಕರ್ಮದಿಂದ ಹುಟ್ಟುತ್ತದೆ. ಕರ್ಮವು

ಬ್ರಹ್ಮನಿಂದ ಉದ್ಭವಿಸುವುದೆಂದು ತಿಳಿ. ಬ್ರಹ್ಮವು ಅಕ್ಷರದಿಂದ ಹುಟ್ಟುವುದು. ಆದುದರಿಂದ ಸರ್ವಗತವಾದ ಬ್ರಹ್ಮವು ಸದಾ ಯಜ್ಞದಲ್ಲಿ ನೆಲೆಗೊಂಡಿದೆ.

* * *

(ಅನ್ನದಿಂದ ಪ್ರಾಣಿಗಳು ಹುಟ್ಟುತ್ತವೆ. ಊಟಮಾಡಿದ ಅನ್ನವು ಶುಕ್ಲ-ಶೋಣಿತವಾಗಿ ಪರಿವರ್ತನೆಹೊಂದಿ ಅದರಿಂದ ಪ್ರಾಣಿಗಳು ಹುಟ್ಟುತ್ತವೆ. **ಅನ್ನಾದ್ಭೂತಾನಿ ಜಾಯನ್ತೇ । ಜಾತಾನ್ಯನ್ನೇನ ವರ್ಧನ್ತೇ । ಅನ್ನಾದ್ವೈ ಪ್ರಜಾಃ ಪ್ರಜಾಯನ್ತೇ ।** ಅನ್ನದಿಂದ ಪ್ರಾಣಿಗಳು ಹುಟ್ಟುತ್ತವೆ. ಹಾಗೆ ಅನ್ನದಿಂದ ಹುಟ್ಟಿದ ಪ್ರಾಣಿಗಳು ಅನ್ನದಿಂದಲೇ ವೃದ್ಧಿಯನ್ನು ಹೊಂದುತ್ತವೆ. ಅನ್ನದಿಂದ ಮನುಷ್ಯರು ಹುಟ್ಟುತ್ತಾರೆ–ಇತ್ಯಾದಿ ಶ್ರುತಿಗಳು ಇದನ್ನೇ ಪ್ರತಿಪಾದಿಸುತ್ತವೆ. ಇಂತಹ ಅನ್ನವು ಹುಟ್ಟುವುದು ಮಳೆಯಿಂದ. ಮಳೆಯೇ ಇಲ್ಲದಿದ್ದರೆ ಬೆಳೆಯೇ ಇಲ್ಲ. ಇದು ನಮ್ಮ ಅನುಭವವೇ ಆಗಿದೆ. **ಪರ್ಜನ್ಯೇನೌಷಧಿವನಸ್ಪತಯಃ ಪ್ರಜಾಯನ್ತೇ । ಓಷಧಿವನಸ್ಪತಿಭಿರನ್ನಂ ಭವತಿ ।** ಮಳೆಯಿಂದ ಗಿಡ-ಮರಗಳು ಹುಟ್ಟುತ್ತವೆ. ಗಿಡ-ಮರಗಳಿಂದ ತಿನ್ನುವ ಪದಾರ್ಥವು ಸಿಕ್ಕುತ್ತದೆ–ಎಂದು ವೇದದಲ್ಲಿ ಹೇಳಿದೆ.

ಪರ್ಜನ್ಯದ ಉಗಮಸ್ಥಾನವೇ ಯಜ್ಞ. ಯಜ್ಞದಿಂದ ಪರ್ಜನ್ಯವು ಅಥವಾ ಮಳೆಯು ಹುಟ್ಟುತ್ತದೆ. ಇದು ಹೇಗಾಗುವುದೆಂಬುದನ್ನು ಮನು ಸ್ಮೃತಿಯಲ್ಲಿ ವಿವರಿಸಿ ಹೇಳಿದೆ.

**ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ।**
**ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ ॥**

ಅಗ್ನಿಯಲ್ಲಿ ಸರಿಯಾಗಿ ಹಾಕಿದ ಹೋಮವು ಆದಿತ್ಯನನ್ನು ಹೋಗಿ ಮುಟ್ಟುತ್ತದೆ. ಆದಿತ್ಯನಿಂದ ವೃಷ್ಟಿಯಾಗುತ್ತದೆ. ವೃಷ್ಟಿಯಿಂದ ಅನ್ನವಾಗುತ್ತದೆ. ಅನ್ನದಿಂದ ಪ್ರಜೆಗಳು ಹುಟ್ಟುತ್ತಾರೆ.

ಮಹಾಭಾರತದ ಶಾಂತಿಪರ್ವದಲ್ಲಿಯೂ ಸಹ ಇದನ್ನೇ ಹೇಳಿದ್ದಾರೆ :

**ಯಜ್ಞಾತ್ಪ್ರಜಾಃ ಪ್ರಭವತಿ ಸ ಚ ಸೋಽದ್ಭ್ಯ ಇವಾಮಲಮ್ ।**
**ಅಗ್ನೌ ಪ್ರಾಸ್ತಾಹುತಿರ್ಬ್ರಹ್ಮನ್ನಾದಿತ್ಯಮುಪಗಚ್ಛತಿ ।**
**ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ ॥**

ಯಾವ ರೀತಿಯಲ್ಲಿ ಆಕಾಶದಿಂದ ಪರಿಶುದ್ಧವಾದ ನೀರು ಹುಟ್ಟುತ್ತದೆಯೋ ಹಾಗೆಯೇ ಯಜ್ಞದಿಂದ, ಶುದ್ಧಭಾವದಿಂದ ಕೂಡಿದ ಮನುಷ್ಯರು ಹುಟ್ಟುತ್ತಾರೆ. ಅಗ್ನಿಯಲ್ಲಿ ಮಾಡಿದ ಹೋಮವು ಸೂರ್ಯಮಂಡಲಕ್ಕೆ ಹೋಗುತ್ತದೆ. ಆದಿತ್ಯನಿಂದ ವೃಷ್ಟಿಯು ಹುಟ್ಟುತ್ತದೆ. ವೃಷ್ಟಿಯಿಂದ ಅನ್ನವು ಹುಟ್ಟುತ್ತದೆ. ಅನ್ನದಿಂದ ಪ್ರಜೆಗಳು ಹುಟ್ಟುತ್ತಾರೆ. ಯಜಮಾನ ಮತ್ತು ಋತ್ವಿಜರು ಮಾಡುವ ಕಾರ್ಯವೇ ಕರ್ಮ. ಇಂತಹ ಕರ್ಮದಿಂದ ಯಜ್ಞವು ಹುಟ್ಟುತ್ತದೆ. ಈ ಕರ್ಮವು ಬ್ರಹ್ಮೋದ್ಭವವಾದುದು ; ಬ್ರಹ್ಮನಿಂದ ಹುಟ್ಟಿದ್ದು. ಬ್ರಹ್ಮ ಎಂದರೆ ವೇದ. ಕರ್ಮವು ವೇದದಿಂದ ಹುಟ್ಟಿದೆ. ಯಜ್ಞದ ಸ್ವರೂಪ, ಪ್ರಯೋಗ ಮತ್ತು ಫಲಗಳು ಮತ್ತು ಪ್ರಧಾನಮಂತ್ರಗಳು–ಈ ಎಲ್ಲವೂ ವೇದದಲ್ಲಿಯೇ ಹೇಳಲ್ಪಟ್ಟಿರುವುದರಿಂದ ಈ ಕರ್ಮಗಳೆಲ್ಲವೂ (ಯಜ್ಞ-ಯಾಗಾದಿಗಳು) ವೇದದಿಂದಲೇ ಹುಟ್ಟಿವೆ. ವೇದವಿಲ್ಲದಿದ್ದರೆ ಯಾವ ಕರ್ಮವೂ ಇಲ್ಲ.

ವೇದವೆಂಬ ಹೆಸರಿನ ಬ್ರಹ್ಮವು ಅಕ್ಷರದಲ್ಲಿ ಹುಟ್ಟಿದೆ. ಅಕ್ಷರ ಎಂದರೆ ಪರಮಾತ್ಮ ; ಪರಬ್ರಹ್ಮ. ಪರಬ್ರಹ್ಮನಿಂದ ವೇದವು ಹುಟ್ಟಿದೆ.

ಪರಮಾತ್ಮನ ಉಸಿರೇ ವೇದಗಳು. ಸರ್ವವಿಷಯಗಳನ್ನೂ ತಿಳಿಸಿ ಕೊಡುವ ಈ ಬ್ರಹ್ಮವು (ವೇದವು) ಮನುಷ್ಯನ ಚಿತ್ತಶುದ್ಧಿಗೆ ಸಾಧನ ಭೂತವಾದ ಯಜ್ಞದಲ್ಲಿಯೇ ಪ್ರತಿಷ್ಠಿತವಾಗಿದೆ.

'ಶ್ರೀರಾಮಾನುಜರ ಅಭಿಪ್ರಾಯದಲ್ಲಿ ಇಲ್ಲಿರುವ ಬ್ರಹ್ಮಶಬ್ದಕ್ಕೆ 'ಪ್ರಕೃತಿಪರಿಣಾಮರೂಪವಾದ ಶರೀರ' ಎಂದರ್ಥ. **ತಸ್ಮಾದೇತದ್ಬ್ರಹ್ಮ ನಾಮರೂಪಮನ್ನಂ ಚ ಜಾಯತೇ** (ಮುಂಡಕ) ಎಂಬ ವಚನದಂತೆ ಬ್ರಹ್ಮಶಬ್ದವು ಪ್ರಕೃತಿಯನ್ನು ಹೇಳುತ್ತದೆ. ಗೀತೆಯಲ್ಲಿಯೂ ಕೂಡ ಶ್ರೀಕೃಷ್ಣನು **ಮಮ ಯೋನಿರ್ಮಹದ್ಬ್ರಹ್ಮ** ಎಂದೇ ಹೇಳಿದ್ದಾನೆ. ಆದುದರಿಂದ **ಕರ್ಮ ಬ್ರಹ್ಮೋದ್ಭವಂ ವಿದ್ಧಿ** ಎಂಬುದಕ್ಕೆ 'ಪ್ರಕೃತಿ ಪರಿಣಾಮರೂಪವಾದ ಶರೀರದಿಂದ ಕರ್ಮವುಂಟಾಗುತ್ತದೆ' ಎಂದರ್ಥ. ಅಕ್ಷರಶಬ್ದಕ್ಕೆ 'ಜೀವಾತ್ಮ' ಎಂದರ್ಥ. ಅನ್ನ-ಪಾನಾದಿಗಳಲ್ಲಿ ತೃಪ್ತನಾದ ಅಕ್ಷರನಿಂದ (ಜೀವಾತ್ಮನಿಂದ) ಅಧಿಷ್ಠಿತವಾದ ಶರೀರವು ಕೆಲಸಮಾಡಲು ಸಮರ್ಥವಾಗುವುದರಿಂದ ಕರ್ಮಸಾಧನಭೂತವಾದ ಶರೀರವು ಅಕ್ಷರದಿಂದ

ಉಂಟಾಗಿದೆ' ಎಂದು ಹೇಳಿದೆ. ಆದುದರಿಂದ ಸರ್ವಗತವಾದ ಬ್ರಹ್ಮವು ಎಂದರೆ ಸರ್ವಾಧಿಕಾರಿಗಳಲ್ಲಿಯೂ ಇರುವ ಶರೀರವು ಸರ್ವದಾ ಯಜ್ಞ ಮೂಲವಾಗಿದೆ.

ಪರ್ಜನ್ಯ ಎಂದರೆ ಮೇಘಚಕ್ರಕ್ಕೆ ಅಭಿಮಾನಿಯಾದ ದೇವತೆ. ದೇವತೆಗಳನ್ನು ಉದ್ದೇಶಿಸಿ ಮಾಡಲ್ಪಡುವ ದ್ರವ್ಯಪರಿತ್ಯಾಗವು ಯಜ್ಞ. ಉಳಿದ ಕ್ರಿಯೆಗಳು ಕರ್ಮ. **ಕರ್ಮ ಬ್ರಹ್ಮೋದ್ಭವಂ ವಿದ್ಧಿ** = ಕರ್ಮವು ಪರಮಾತ್ಮನಿಂದ ಉಂಟಾಗಿದೆ. **ಏಷ ಹ್ಯೇವ ಸಾಧುಕರ್ಮ ಕಾರಯತಿ.**

(ಮ.ಭಾ.)

'ಪರಬ್ರಹ್ಮವು **ಅಕ್ಷರ**=ವೇದದಿಂದ ಅಭಿವ್ಯಕ್ತವಾಗುತ್ತದೆ' ಎಂದು ಶ್ರೀಮಧ್ವಾಚಾರ್ಯರು ಶ್ಲೋಕದ ಪೂರ್ವಾರ್ಧಕ್ಕೆ ಭಾಷ್ಯಮಾಡಿದ್ದಾರೆ.)

**ಓಂ ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।**
**ಅಘಾಯುರಿನ್ದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥**

ಅರ್ಜುನ! ಹೀಗೆ ಪ್ರವರ್ತಿತವಾಗಿರುವ (ಯಜ್ಞ) ಚಕ್ರವನ್ನು ಯಾವನು ಇಲ್ಲಿ ಅನುಸರಿಸುವುದಿಲ್ಲವೋ ಅವನು ಅಘಾಯುವೂ (ಪಾಪಕರವಾದ ಆಯುಷ್ಯವುಳ್ಳವನು) ಇಂದ್ರಿಯಾರಾಮನೂ ಆಗುತ್ತಾನೆ. ಅವನ ಬದುಕೇ ವ್ಯರ್ಥವಾಗಿಹೋಗುತ್ತದೆ.

* * *

(ಪ್ರಪಂಚವು ನಿಂತಿರುವುದೇ ಈ ಯಜ್ಞಚಕ್ರದ ಆಧಾರದ ಮೇಲೆ. ಪ್ರಜೆಗಳಿಗಾಗಿಯೇ ಪರಮಾತ್ಮನು (ಬ್ರಹ್ಮನು) ಈ ಯಜ್ಞಚಕ್ರವನ್ನು ಸೃಷ್ಟಿಸಿದ್ದಾನೆ. ಈ ಚಕ್ರವು ನಿಲ್ಲದಂತೆ ನೋಡಿಕೊಳ್ಳುವುದು ಪ್ರತಿಯೊಬ್ಬನ ಕರ್ತವ್ಯವೂ ಆಗಿರುತ್ತದೆ. ಐಶ್ವರ್ಯವು ನಮ್ಮದಲ್ಲ ; ದೇವರದ್ದು. ಅವನು ಕೊಟ್ಟಿರುವ ಐಶ್ವರ್ಯವನ್ನು ಕೂಡಿಹಾಕಲು ಹೋಗದೇ ಅವನ ಸೇವೆಗೆ ವಿನಿಯೋಗಮಾಡಬೇಕು. ಕೃಷ್ಣಾರ್ಪಣಬುದ್ಧಿಯಿಂದ ಯಾವುದನ್ನೇ ಮಾಡಿ ದರೂ ಅದು ಸೂರ್ಯಭಗವಂತನಿಗೆ ಸೇರುತ್ತದೆ. ನಮಗೆ ಮಳೆ-ಬೆಳೆಗಳನ್ನು ಕಾಲ-ಕಾಲಕ್ಕೆ ಕೊಡುತ್ತಾನೆ. ಭಗವಂತನಿಂದ ಪ್ರವರ್ತಿತವಾಗಿ ರುವ ಈ ಚಕ್ರವನ್ನು ಎಲ್ಲರೂ ಅನುಸರಿಸಲೇಬೇಕು. ಅನುಸರಿಸದೇ ಇರತಕ್ಕ ವನು ಪಾಪಾಯುವಾಗುತ್ತಾನೆ. ಅವನು ಪಾಪಜೀವನನಡೆಸುತ್ತಿದ್ದಾನೆಂದು

ಭಾವಿಸಬೇಕು. ಇಂದ್ರಿಯಾರಾಮನಾಗಿರುತ್ತಾನೆ. ಇಂದ್ರಿಯಸುಖಗಳಲ್ಲೇ ತಲ್ಲೀನನಾಗಿರುತ್ತಾನೆ. ಆತ್ಮಾರಾಮನಾಗಿರುವುದಿಲ್ಲ. ಅಂತಹವನ ಜೀವನವು ವ್ಯರ್ಥ. ತನಗೆ ಕೊಟ್ಟಿದ್ದನ್ನು ಪುನಃ ಯಜ್ಞರೂಪದಲ್ಲಿ ಪರಮಾತ್ಮನಿಗೇ ಅರ್ಪಿಸದಿದ್ದರೆ ಅವನು ದ್ರೋಹಿ. ಕಳ್ಳನಾಗುತ್ತಾನೆ. ಆದುದರಿಂದ ಯಜ್ಞ ಚಕ್ರವನ್ನು ಅನುಸರಿಸಿ ಪ್ರತಿಯೊಬ್ಬನೂ ಶ್ರೇಯಸ್ಸಿಗಾಗಿ ತಕ್ಕ ಬಾಳ್ವೆಯನ್ನು ನಡೆಸಬೇಕು.

ಅಂತಹವನು ಜ್ಞಾನಯೋಗ ಮುಂತಾದುವುಗಳಲ್ಲಿ ಪ್ರಯತ್ನಮಾಡು ತ್ತಿದ್ದರೂ ಅವನ ಪ್ರಯತ್ನವು ನಿಷ್ಫಲವಾಗುವುದರಿಂದ ಅವನ ಜೀವನವು ವ್ಯರ್ಥ. (ರಾ.ಭಾ.)

**ಓಂ ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥೧೭॥**

ಯಾವ ಮಾನವನು ಆತ್ಮದಲ್ಲಿ ರಮಿಸುವನೋ, ಆತ್ಮತೃಪ್ತನೂ ಆಗಿರು ವನೋ, ಆತ್ಮದಲ್ಲಿಯೇ ಸಂತುಷ್ಟಿಯನ್ನು ಹೊಂದಿರುವನೋ–ಅವನಿಗೆ ಮಾಡಬೇಕಾದ ಕರ್ತವ್ಯವೇನೂ ಇರುವುದಿಲ್ಲ.

* * *

ಶ್ರೀಕೃಷ್ಣನು ಕರ್ಮಯೋಗದ ವಿಷಯವನ್ನು ಇದುವರೆಗೂ ಅರ್ಜುನ ನಿಗೆ ಮನದಟ್ಟಾಗುವಂತೆ ಹೇಳಿದನು. ಈಗ ಪುನಃ ಸಾಂಖ್ಯಯೋಗವನ್ನು ಹೇಳುತ್ತಾನೆ.

ಯಾವನು ಆತ್ಮರತಿಯಾಗಿರುತ್ತಾನೆಯೋ ಅವನು ಕರ್ಮಮಾಡಬೇಕಾ ಗಿಲ್ಲ. ರತಿ ಎಂದರೆ ಪ್ರೀತಿ. ಪತ್ನೀ-ಪುತ್ರ-ಪುತ್ರೀ ಮುಂತಾದವರ ಮೇಲಿರುವ ಪ್ರೀತಿ. ಅವರ ಮೇಲೆ ಇಡಬಹುದಾದ ಪ್ರೀತಿಯನ್ನು ಆತ್ಮನಲ್ಲಿಯೇ ಇಟ್ಟಿರುವವನು ; ಆತ್ಮರತಿ. ಆತ್ಮತೃಪ್ತ. ತೃಪ್ತಿಯಲ್ಲಿ ಅನೇಕವಿಧವಾದ ತೃಪ್ತಿಗಳಿರುತ್ತವೆ. ಒಬ್ಬನಿಗೆ ಹಣದ ಸಂಪಾದನೆಯಿಂದಲೇ ತೃಪ್ತಿ. ಒಬ್ಬನಿಗೆ ಮೃಷ್ಟಾನ್ನವನ್ನು ಊಟಮಾಡುವುದರಲ್ಲಿಯೇ ತೃಪ್ತಿ. ಮತ್ತೊಬ್ಬನಿಗೆ ಕಾಮೋಪಭೋಗದಿಂದಲೇ ತೃಪ್ತಿ. ಹೀಗೆ ಒಬ್ಬೊಬ್ಬನಿಗೂ ಒಂದೊಂದರಲ್ಲಿ ತೃಪ್ತಿಯಿರುತ್ತದೆ. ಹಾಗೆಯೇ ಆತ್ಮರತಿಯಾದವನಿಗೆ ಆತ್ಮನಲ್ಲಿಯೇ ತೃಪ್ತಿ

ಯಿರುವುದು ಸ್ವಾಭಾವಿಕವೇ ಆಗಿದೆ. ಆತ್ಮಧ್ಯಾನ-ಆತ್ಮನಿಧಿಧ್ಯಾಸನಗಳಿಂದಲೇ ಅವನು ತೃಪ್ತಿಯನ್ನು ಹೊಂದುತ್ತಾನೆ. ಅವನು ಆತ್ಮನಲ್ಲಿಯೇ ಸಂತುಷ್ಟಿ ಹೊಂದಿ ಇರುವವನು. ಅವನಿಗೆ ಪ್ರಪಂಚದಲ್ಲಿ ಬೇರಾವ ಲಾಭದಿಂದಲೂ ಸಂತುಷ್ಟಿಯಿಲ್ಲ. ಆತ್ಮಲಾಭದಿಂದ ಮಾತ್ರವೇ ಸಂತುಷ್ಟಿ. ಇಂತಹ ಆತ್ಮ ಜ್ಞಾನಿಗೆ ಮಾಡಬೇಕಾದ ಕರ್ತವ್ಯವೇನೂ ಇರುವುದಿಲ್ಲ.

ಕರ್ಮಮಾಡುವುದು ಚಿತ್ತಶುದ್ಧಿಗಾಗಿ–ತನ್ಮೂಲಕ ಜ್ಞಾನಪ್ರಾಪ್ತಿಗಾಗಿ. ಜ್ಞಾನಪ್ರಾಪ್ತಿಯಾದ ಮೇಲೆ ಕರ್ಮದ ಆವಶ್ಯಕತೆಯಿಲ್ಲ.

ಇದೇ ವಿಷಯವನ್ನು ಕುರಿತು ಬೃಹದಾರಣ್ಯಕದ ಶ್ರೀಶಂಕರಭಾಷ್ಯದಲ್ಲಿ ಹೀಗೆ ಹೇಳಿದೆ :

**ಏತಂ ವೈ ತಮಾತ್ಮಾನಂ ವಿದಿತ್ವಾ ನಿವೃತ್ತಮಿಥ್ಯಾಜ್ಞಾನಾಃ ಸನ್ತೋ ಬ್ರಾಹ್ಮಣಾಃ ಮಿಥ್ಯಾಜ್ಞಾನವದ್ಭಿರವಶ್ಯಂ ಕರ್ತವ್ಯೇಭ್ಯಃ ಪುತ್ರೈಷಣಾದಿಭ್ಯೋ ವ್ಯುತ್ಥಾಯ ಅಥ ಭಿಕ್ಷಾಚರ್ಯಂ ಶರೀರಸ್ಥಿತಿಮಾತ್ರಪ್ರಯುಕ್ತಂ ಚರನ್ತಿ**–ಈ ಆತ್ಮನನ್ನೇ ಅರಿತುಕೊಂಡು ಮಿಥ್ಯಾಜ್ಞಾನವನ್ನು ಕಳೆದುಕೊಂಡವರಾಗಿರುವ ಬ್ರಾಹ್ಮಣರು, ಮಿಥ್ಯಾಜ್ಞಾನವುಳ್ಳವರು ಅವಶ್ಯಕವಾಗಿ ಅನುಸರಿಸಬೇಕಾಗಿರುವ ಪುತ್ರೈಷಣೆ ಮುಂತಾದುವನ್ನು ಬಿಟ್ಟಿದ್ದು ಶರೀರವು ಇದ್ದುಕೊಂಡಿರುವ ಮಟ್ಟಿಗೆ ಮಾಡಬೇಕಾಗಿರುವ ಭಿಕ್ಷಾಟನೆಯನ್ನು ಮಾಡುತ್ತಿರುವರು. ಇವರಿಗೆ ಆತ್ಮಜ್ಞಾನನಿಷ್ಠೆಯನ್ನು ಬಿಟ್ಟರೆ ಬೇರೆ ಯಾವುದೂ ಮಾಡತಕ್ಕದ್ದು ಇರುವುದಿಲ್ಲ.

**ಆತ್ಮಕ್ರೀಡ ಆತ್ಮರತಿಃ ಕ್ರಿಯಾವಾನೇಷ ಬ್ರಹ್ಮವಿದಾಂ ವರಿಷ್ಠಃ ।**

ಆತ್ಮನಲ್ಲಿಯೇ ವಿನೋದಕಾಲಕ್ಷೇಪವನ್ನು ಮಾಡುವವನೂ ಆತ್ಮನಲ್ಲಿಯೇ ಪ್ರೀತಿಯನ್ನಿಟ್ಟಿರುವವನೂ ಬ್ರಹ್ಮವಿದರಲ್ಲಿ ಶ್ರೇಷ್ಠನು.

ಶ್ರೀರಾಮಾನುಜರ ಅಭಿಪ್ರಾಯದಲ್ಲಿ ೧೭ ಮತ್ತು ೧೮ನೆಯ ಶ್ಲೋಕಗಳು ಸದಾ ಆತ್ಮದರ್ಶನಸಂಪನ್ನನಾದ ಮುಕ್ತಾತ್ಮನಿಗೆ ಮಾತ್ರವೇ ಅನ್ವಯಿಸುತ್ತದೆ. ಮಹಾಯಜ್ಞಾದಿ ವರ್ಣಾಶ್ರಮೋಚಿತವಾದ ಕರ್ಮಗಳು ಕಿಂಚಿತ್ತೂ ಇಲ್ಲದಿರುವುದು ಅವನಿಗೇ ತಾನೇ?

ಶ್ರೀಮಧ್ವಾಚಾರ್ಯರ ಭಾಷ್ಯದಲ್ಲಿ : ಅಸಂಪ್ರಜ್ಞಾತಸಮಾಧಿಯಲ್ಲಿರು

ವಾಗ ಜ್ಞಾನಿಗೆ ಕರ್ಮವು ಯಾವುದೂ ಇಲ್ಲ. ಬೇರೆಯ ಸ್ಥಿತಿಯಲ್ಲಿರುವವನು ಜ್ಞಾನಿಯಾದರೂ ಉಚಿತವಾದ ಕರ್ಮಗಳನ್ನು ಆಚರಿಸಬೇಕು. ಸಂಪೂರ್ಣವಾದ ಆತ್ಮರತಿ ಮುಂತಾದುವುಗಳಿರುವುದು ಅಸಂಪ್ರಜ್ಞಾತಸಮಾಧಿನಿಷ್ಠನಿಗೆ. **ವಿಷ್ಣಾವೇವ ರತಿರ್ಯಸ್ಯ ತಸ್ಯಕಾರ್ಯಂ ನ ವಿದ್ಯತೇ ॥**

೧೭ನೆಯ ಶ್ಲೋಕದಲ್ಲಿ ಬರುವ ಆತ್ಮಶಬ್ದವು ಪರಮಾತ್ಮವಾಚಕ ಎಂದೂ ಇವರು ಹೇಳಿದ್ದಾರೆ.

ರತಿ ಎಂದರೆ ಪರಮಾತ್ಮದರ್ಶನನಿಮಿತ್ತವಾದ ಸುಖ. **ಸನ್ತೋಷಸ್ತೃಪ್ತಿ ಕಾರಣಮ್ ।**

**ಆತ್ಮತೃಪ್ತಃ** ಪ್ರಸನ್ನನಾದ ಪರಮಾತ್ಮನಿಂದ ತೃಪ್ತಿಹೊಂದಿದವನು. **ಆತ್ಮನಿ ಸನ್ತುಷ್ಟಃ** = ಆತ್ಮದಲ್ಲಿದ್ದುಕೊಂಡೇ ಸಂತೋಷಪಡುವವನು. **ತತ್ಸ್ಥ ಏವ ಸನ್ ಸನ್ತುಷ್ಟಃ.)**

**ಓಂ ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।**
**ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥೧೮॥**

ಇಲ್ಲಿ ಕರ್ಮಮಾಡಿದರೆ ಅವನಿಗೆ ಯಾವ ಲಾಭವೂ ಇಲ್ಲ. ಮಾಡದೇ ಇದ್ದರೆ ಯಾವ ನಷ್ಟವೂ ಇಲ್ಲ. ಅವನಿಗೆ ಯಾವ ಪ್ರಾಣಿಗಳಲ್ಲಿಯೂ ಪ್ರಯೋಜನನಿಮಿತ್ತವಾದ ಯಾವ ಕೆಲಸವೂ ಇರುವುದಿಲ್ಲ.

* * *

(ಆತ್ಮರತಿ, ಆತ್ಮತೃಪ್ತಿ, ಆತ್ಮದರ್ಶನ : ಆತ್ಮನಲ್ಲಿ ಪ್ರೇಮ. ಆತ್ಮನನ್ನು ಪ್ರೇಮಿಸುವುದರಲ್ಲಿಯೇ ತೃಪ್ತಿ. ಕಡೆಯ ಸಾಧನೆಯಾಗಿ ಆತ್ಮದರ್ಶನ. ಇವೇ ಮಾನವನ ಪರಮೋಚ್ಚಧ್ಯೇಯ. ಇದಕ್ಕಾಗಿಯೇ ನಾನಾವಿಧವಾದ ಕರ್ಮಗಳನ್ನು ಆತ್ಮದರ್ಶನೇಚ್ಛುಗಳು ಮಾಡುತ್ತಾರೆ. ಏಣಿಯಲ್ಲಿ ಎರಡನೇ ಮೆಟ್ಟಿಲನ್ನು ಹತ್ತಿದಮೇಲೆ ಮೊದಲನೇ ಮೆಟ್ಟಲು ನಿರರ್ಥಕವಾಗುತ್ತದೆ. ಅನಂತರ ಅವನು ಏಣಿಯ ಆಧಾರದಿಂದ ಕೆಳಗೆ ಇಳಿಯಲೂಬಹುದು. ಆತ್ಮರತನಾಗಿ ಯಾವಾಗಲೂ ಅಟ್ಟದಲ್ಲಿಯೇ ಇರಲೂಬಹುದು. ಆದುದರಿಂದ ಜೀವನ್ಮುಕ್ತನಿಗೆ ಕರ್ಮಮಾಡಿದುದರಿಂದ ಪ್ರಯೋಜನವೂ ಇಲ್ಲ; ಕರ್ಮವನ್ನು ಬಿಟ್ಟಿದ್ದರಿಂದ ಆತ್ಮಹಾನಿರೂಪವಾದ ಪ್ರತ್ಯವಾಯವೂ ಇಲ್ಲ.

ಜಗತ್ತಿನಲ್ಲಿರುವ ಯಾವ ಪ್ರಾಣಿಯಲ್ಲಿಯೂ ತನಗೆ ಆಗಬೇಕಾದ ಪ್ರಯೋಜನಕ್ಕೆ ಸಾಧಕವಾದುದು ಯಾವುದೂ ಇರುವುದಿಲ್ಲ.

ಪ್ರಯೋಜನವು ಬೇಕಾದರೆ ಒಬ್ಬರನ್ನು ಆಶ್ರಯಿಸಬೇಕು. ಒಂದು ಕರ್ಮವನ್ನು ಮಾಡಬೇಕು. ಪ್ರಪಂಚದಲ್ಲಿರುವ ಯಾವ ವಸ್ತುವೂ ಬೇಡವೆಂದ ಮೇಲೆ ಅಂತಹ ಜ್ಞಾನಿಯು ಯಾರನ್ನು ತಾನೇ ಆಶ್ರಯಿಸಬೇಕಾಗಿದೆ? ಯಾರ ಹಂಗು ತಾನೇ ಅವನಿಗೆ ಬೇಕು?

ಇಲ್ಲಿ ಶ್ರೀಕೃಷ್ಣನು ಆತ್ಮಜ್ಞಾನಿಯು ಕರ್ಮಮಾಡಿದರೂ ಅದರಿಂದವನಿಗೆ ಲಾಭವೇನೂ ಇಲ್ಲ ; ಮಾಡದಿದ್ದರೂ ಬಾಧಕವಿಲ್ಲ–ಎಂದು ಹೇಳಿರುವನೇ ಹೊರತು ಅವನು ಕರ್ಮವನ್ನೇ ಮಾಡುವುದಿಲ್ಲವೆಂದಾಗಲೀ–ಮಾಡಬಾರದು–ಎಂದಾಗಲೀ ಹೇಳಿಲ್ಲ. ಆತ್ಮಜ್ಞಾನಿಯೂ ಸಹ ಲೋಕಸಂಗ್ರಹಾರ್ಥವಾಗಿ ಕರ್ಮಮಾಡಬಹುದು ; ಕರ್ಮಮಾಡದಿದ್ದರೂ ಕರ್ಮಲೋಪದ ದೋಷವು ಅವನಿಗೆ ಅಂಟಿಕೊಳ್ಳುವುದಿಲ್ಲ.

**ನೈನಂ ಕೃತಾಕೃತೌ ತಪತಃ**–ಮಾಡಿದ ಕರ್ಮಗಳು, ಮಾಡದೇ ಇರುವ ಕರ್ಮಗಳು, ಎರಡೂ ಇವನಿಗೆ ತಾಪವನ್ನುಂಟುಮಾಡಲಾರವು.

ಶ್ರೀಶಂಕರರು ಭಜಗೋವಿಂದಸ್ತೋತ್ರದಲ್ಲಿ ಇದನ್ನೇ ಹೇಳಿದ್ದಾರೆ :

**ಯೋಗರತೋ ವಾ ಭೋಗರತೋ ವಾ ಸಙ್ಗರತೋ ವಾ ಸಙ್ಗವಿಹೀನಃ ।**
**ಯಸ್ಯ ಬ್ರಹ್ಮಣಿ ರಮತೇ ಚಿತ್ತಂ ನನ್ದತಿ ನನ್ದತಿ ನನ್ದತ್ಯೇವ ॥**

ಯೋಗರತನಾಗಿರಲಿ ; ಭೋಗರತನಾಗಿರಲಿ–ಆತ್ಮಜ್ಞಾನಿಯು ಲೋಕಸಂಗ್ರಹಕ್ಕಾಗಿ ಕರ್ಮವನ್ನು ಮಾಡುತ್ತಿರಲಿ ಅಥವಾ ಮಾಡದೆಯೇ ಇದ್ದುಬಿಡಲಿ ; ಸಹವಾಸದಲ್ಲಿರಲಿ ಅಥವಾ ನಿಸ್ಸಂಗನಾಗಿರಲಿ, ಯಾವನ ಮನಸ್ಸು ಯಾವಾಗಲೂ ಬ್ರಹ್ಮನಲ್ಲಿಯೇ ರತವಾಗಿರುತ್ತದೆಯೋ ಅವನು ಆನಂದಿಸಿಯೇ ಆನಂದಿಸುತ್ತಾನೆ. ಬ್ರಹ್ಮಾನಂದವನ್ನು ಪಡೆದೇ ಪಡೆಯುತ್ತಾನೆ.)

**ಓಂ ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ ।**
**ಅಸಕ್ತೋ ಹ್ಯಾಚರನ್ಕರ್ಮ ಪರಮಾಪ್ನೋತಿ ಪೂರುಷಃ ॥೧೯॥**

ಆದ್ದರಿಂದ ಅಸಕ್ತನಾಗಿ ಯಾವಾಗಲೂ ನಿಯತವಾದ ಕರ್ಮಗಳನ್ನು

ಮಾಡುತ್ತಿರು. ಸಂಗರಹಿತನಾಗಿ ಕರ್ತವ್ಯವಾದ ನಿತ್ಯಕರ್ಮವನ್ನು ಆಚರಿಸು ತ್ತಿದ್ದರೆ ಪುರುಷನು ಪರವನ್ನು (ಪರಮಾತ್ಮನನ್ನು ) ಪಡೆಯುತ್ತಾನೆ.

* * *

(ಅರ್ಜುನನ ಅಪೇಕ್ಷೆಯಂತೆ ಸಾಂಖ್ಯ ಮತ್ತು ಬುದ್ಧಿಯೋಗ ಅಥವಾ ಕರ್ಮಯೋಗಗಳನ್ನು ಸವಿಸ್ತರವಾಗಿ ಹೇಳಿದನಂತರ ಶ್ರೀಕೃಷ್ಣನು ಅರ್ಜುನನಿಗೆ ಯಾವುದು ಯೋಗ್ಯವಾದುದೆಂಬುದನ್ನು ನಿಷ್ಕೃಷ್ಟವಾಗಿ ಹೇಳುತ್ತಾನೆ :

ಕರ್ಮಮಾಡಿಯೂ ಮೋಕ್ಷವನ್ನು ಸಾಧಿಸಬಹುದೆಂದು ಹೇಳಿದ್ದಾನೆ. ವೈಶ್ವದೇವವೇ ಮೊದಲಾದ ಪಂಚಮಹಾಯಜ್ಞಗಳನ್ನು ಮಾಡಿದರೆ ಚಿತ್ತ ಶುದ್ಧಿಯಾಗುವುದು. ಆತ್ಮಸಂಸ್ಕಾರವೂ ಆಗುವುದು. ಆ ಮೂಲಕವಾಗಿ ಅವನು ಮೋಕ್ಷವನ್ನು ಹೊಂದುತ್ತಾನೆ.

"ಅರ್ಜುನ! ನಾನು ಮೇಲೆ ಹೇಳಿದ ಕಾರಣಗಳಿಂದ ನೀನು ಕರ್ಮ ಫಲಗಳಲ್ಲಿ ಅನಾಸಕ್ತನಾಗಿ ಕರ್ಮಗಳನ್ನು ಮಾಡು. ಸತತವಾಗಿ ಮಾಡುತ್ತಿರು. ನಿನಗೆ ಯಾವ ಕರ್ಮಗಳನ್ನು ಮಾಡಲು ಅಧಿಕಾರವಿದೆಯೋ ಆ ಕರ್ಮಗಳನ್ನು ಮಾಡು. ಫಲಾಭಿಸಂಧಿಯಿಲ್ಲದೆ ಈಶ್ವರಾರ್ಪಣಬುದ್ಧಿಯಿಂದ ಕರ್ಮಮಾಡಿ ದರೆ ಫಲವೇನೆನ್ನುವೆಯೋ? ಅಪಾರವಾದ ಫಲವಿದೆ. ಇದರಿಂದ ಪುರುಷನು ಮುಕ್ತಿಯನ್ನೇ ಪಡೆಯುತ್ತಾನೆ. ಕರ್ಮಫಲವನ್ನು ಬಿಟ್ಟರೆ ಮಹಾಫಲವು ಸಿಕ್ಕು ತ್ತದೆ. ಕರ್ಮಫಲವನ್ನು ಉಪಭುಂಜಿಸಬೇಕೆಂದರೆ ಅಶಾಶ್ವತವಾದ ಫಲವು ಸಿಕ್ಕುತ್ತದೆ. ಆದುದರಿಂದ ಅಲ್ಪಫಲವನ್ನು ತ್ಯಾಗಮಾಡಿ ಮೋಕ್ಷರೂಪವಾದ ಮಹಾಫಲವನ್ನು ಸಂಪಾದಿಸುವಂತೆ ಸಂಗರಹಿತವಾಗಿ ಕರ್ಮಮಾಡು.

ಹಿಂದೊಮ್ಮೆ ಪ್ರಸ್ತಾಪಿಸಿರುವಂತೆ ನಾವೂ ಎಲ್ಲ ಕರ್ಮಗಳ ಕಡೆ ಯಲ್ಲಿಯೂ 'ಶ್ರೀಕೃಷ್ಣಾರ್ಪಣಮಸ್ತು' ಎನ್ನುತ್ತೇವೆ. ಆದರೆ ಮೊದಲು 'ಇಂತಹ ಫಲಪ್ರಾಪ್ತಿಗಾಗಿ ಇಂತಹ ಕರ್ಮವನ್ನು ಮಾಡುತ್ತೇವೆ'–ಎಂದು ಸಂಕಲ್ಪಮಾಡುತ್ತೇವೆ. ನಮ್ಮ ಮನಸ್ಸಿನಲ್ಲಿ ಈ ಕರ್ಮದಿಂದ ನಮಗೆ 'ಇಂತಹ ಫಲವು ಬೇಕೆಂಬ ಆಶಯವು ಮೂಡಿರುತ್ತದೆ. ಆದುದರಿಂದ ಕಡೆ ಯಲ್ಲಿ 'ಶ್ರೀಕೃಷ್ಣಾರ್ಪಣಮಸ್ತು' ಎಂದು ಹೇಳುವುದರಿಂದ ಯಾವ ಪ್ರಯೋ ಜನವೂ ಆಗುವುದಿಲ್ಲ. ಫಲಾಭಿಸಂಧಿಯಿಂದಲೇ ಕರ್ಮಮಾಡಿದರೂ ಸಹ ಕಡೆಯಲ್ಲಿ 'ಶ್ರೀಕೃಷ್ಣಾರ್ಪಣಮಸ್ತು' ಎಂದು ಹೇಳುವಾಗ ಭಾವನಾ

ಪೂರ್ವಕವಾಗಿ ಹೇಳಬೇಕು. ಕರ್ಮಫಲಗಳೆಲ್ಲವನ್ನೂ ಅವನ ಪಾದಾರವಿಂದ ಗಳಲ್ಲಿ ಅರ್ಪಿಸಿಬಿಡಬೇಕು. ತನ್ನ ಮೇಲೆ ಯಾವುದೂ ಹೊರೆಯಿಲ್ಲವೆಂದು ಭಾವಿಸಿಕೊಳ್ಳಬೇಕು. ಭಾವನೆಯೇ ಅತಿಮುಖ್ಯವಾದುದು. ಭಾವನೆಯಿಲ್ಲದೇ ಯಾವ ಕರ್ಮವನ್ನೇ ಮಾಡಿದರೂ ಪ್ರಯೋಜನವಿಲ್ಲ. ಕೇವಲ ಗಿಳಿಪಾಠ ವಾಗುತ್ತದೆ.

ನಾವು ಮಾಡುವ ಸಂಧ್ಯಾವಂದನೆಯಲ್ಲಿ ಆತ್ಮಾನುಸಂಧಾನವೂ ಇದೆ. ವೇದಮಾತೆಯಾದ ಗಾಯತ್ರಿಯ ಜಪವೂ ಇದೆ. ಕಡೆಯಲ್ಲಿ ಶರಣಾ ಗತಿಯೂ ಇದೆ. ಸಂಧ್ಯಾವಂದನೆಯು 'ಮಹಾಯೋಗ' ಎಂದು ಶ್ರೀರಂಗ ಮಹಾಗುರುಗಳು ಹೇಳುತ್ತಿದ್ದರು. ಇದು ನಿತ್ಯಕರ್ಮ. ಆದರೆ ಈಗೀಗ ನಾವದನ್ನು ಮಾಡುತ್ತಲೇ ಇಲ್ಲ. ಮಾಡುತ್ತಿದ್ದರೂ ಭಾವನಾಪೂರ್ವಕವಾಗಿ ಮಾಡುತ್ತಿಲ್ಲ. ಭಾವನಾಪೂರ್ವಕವಾಗಿ ಸಂಧ್ಯಾವಂದನೆಯೆಂಬ ಈ ಒಂದು ನಿತ್ಯಕರ್ಮವನ್ನು ಮಾಡಿದರೇ ಸಾಕು. ಆತ್ಮಸಂಸ್ಕಾರವಾಗುತ್ತದೆ. ಈ ಶ್ಲೋಕವು ಅರ್ಜುನನಿಗೆ ಸಂದೇಶವಾಗಿರುವಂತೆ ನಮಗೂ ದಿವ್ಯಸಂದೇಶವಾಗಿದೆ. ಯಾರೇ ಆಗಲಿ–ತಮ್ಮ ಕರ್ತವ್ಯವೇನೆಂಬುದನ್ನು ಅರಿತುಕೊಂಡು ಫಲಾಸಕ್ತಿಯಿಲ್ಲದೇ ಈಶ್ವರಾರ್ಪಣಬುದ್ಧಿಯಿಂದ ಕರ್ಮವನ್ನು ಮಾಡಬೇಕು. ಈಶ್ವರನಿಗೆ ಅರ್ಪಿಸುವ ಕರ್ಮವು ಅಶ್ರದ್ಧೆಯಿಂದ ಕೂಡಿರಬಾರದು. ಪರಮಶ್ರದ್ಧೆಯಿಂದ ಕರ್ಮಮಾಡಬೇಕು. ಆಗಲೇ ನಮ್ಮ ಜೀವನದಲ್ಲಿ ಎಲ್ಲ ಸಮಸ್ಯೆಗಳೂ ಪರಿಹಾರವಾಗುವುವು.)

**ಓಂ ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।**
**ಲೋಕಸಂಗ್ರಹಮೇವಾಪಿ ಸಮ್ಪಶ್ಯನ್ಕರ್ತುಮರ್ಹಸಿ ॥೨೦॥**

ಜನಕನೇ ಮೊದಲಾದವರು ಕರ್ಮಯೋಗದ ಮೂಲಕವಾಗಿಯೇ ಸಂಸಿದ್ಧಿಯನ್ನು ಪಡೆದರು. ಲೋಕಸಂಗ್ರಹದ ದೃಷ್ಟಿಯಿಂದಾದರೂ ನೀನು ಕರ್ಮವನ್ನು ಮಾಡಲೇಬೇಕು.

* * *

(ನಿಷ್ಕಾಮಕರ್ಮವನ್ನು ಮಾಡುತ್ತಾ ಅನೇಕರು ಹಿಂದೆ ಇದ್ದರೆಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳುತ್ತಾನೆ :

ಅರ್ಜುನ! ಕೇವಲ ಕರ್ಮಯೋಗದಿಂದಲೇ ಜನಕ, ಅಶ್ವಪತಿ– ಮೊದಲಾದವರು ಸಂಸಿದ್ಧಿಯನ್ನು ಪಡೆದುಕೊಂಡರು.

ಆತ್ಮದರ್ಶನದನಂತರವೂ ಜನಕನು ರಾಜ್ಯವಾಳುತ್ತಿದ್ದನೆಂದೂ ಶುಕನಿಗೆ ಉಪದೇಶಮಾಡಿದನೆಂದೂ ಮುಂದೆ ಮಹಾಭಾರತದಲ್ಲಿಯೇ ಬರುತ್ತದೆ. ಜನಕನು ಜ್ಞಾನಿಯಾದ ಮೇಲೆ ತನ್ನ ಸ್ವಧರ್ಮವಾದ ರಾಜ್ಯಭಾರವನ್ನು ಮಾಡುವ ಅವಶ್ಯಕತೆಯೇನೂ ಇರಲಿಲ್ಲ. ಆದರೂ ಸಹ ಜನಕನು ಲೋಕ ಸಂಗ್ರಹಾರ್ಥವಾಗಿ ರಾಜ್ಯಭಾರವನ್ನು ಮಾಡುತ್ತಲೇ ಇದ್ದನು.

ಲೋಕಸಂಗ್ರಹ ಎಂಬುದಕ್ಕೆ ಎರಡರ್ಥಗಳಿವೆ. ಲೋಕಾನುಭವ ; ಲೋಕಕಲ್ಯಾಣ. **ಲೋಕಸಂಗ್ರಹಮೇವಾಪಿ ಸಂಪಶ್ಯನ್** ಲೋಕಕಲ್ಯಾಣ ವನ್ನಾದರೂ ದೃಷ್ಟಿಯಲ್ಲಿಟ್ಟುಕೊಂಡು ನೀನು ಕರ್ಮಮಾಡು. ಕ್ಷತ್ರಿಯ ಧರ್ಮೋಚಿತವಾದ ಯುದ್ಧಮಾಡು. ಇದರಿಂದ ಲೋಕಕಲ್ಯಾಣವಾಗುತ್ತದೆ.

ಜನಕಾದಿಗಳು ಜ್ಞಾನಸಿದ್ಧಿಯನ್ನು ಪಡೆದವರಾಗಿದ್ದರೂ, ಲೋಕ ಸಂಗ್ರಹಕ್ಕೋಸ್ಕರ ಕರ್ಮವನ್ನಾಚರಿಸುತ್ತಿದ್ದರೂ ಸಂನ್ಯಾಸವನ್ನು ಗ್ರಹಣ ಮಾಡದೆಯೇ ಪರಮಸಿದ್ಧಿಯನ್ನು ಪಡೆದರು–ಎಂದು ಇಟ್ಟುಕೊಳ್ಳಬೇಕು. ಅವರಿನ್ನೂ ಯಥಾರ್ಥದರ್ಶನವನ್ನು ಪಡೆದಿಲ್ಲವೆನ್ನುವುದಾದರೆ ಸತ್ತ್ವಶುದ್ಧಿ ಸಾಧನಭೂತವಾದ ಕರ್ಮದಿಂದ ಕ್ರಮವಾಗಿ ಸಂಸಿದ್ಧಿಯನ್ನು ಪಡೆದರು– ಎಂದು ಅರ್ಥಮಾಡಬೇಕು. (ಶಂ.ಭಾ.)

ಜ್ಞಾನಯೋಗಾಧಿಕಾರಿಗಳಿಗೂ ಕೂಡ ಕರ್ಮಯೋಗವೇ ಆತ್ಮದರ್ಶ ನಕ್ಕೆ ಪ್ರಶಸ್ತವಾದುದು. ಅದಕ್ಕೋಸ್ಕರವೇ ಜ್ಞಾನಿಗಳಲ್ಲಿ ಅಗ್ರೇಸರರಾದ ಜನಕನೇ ಮುಂತಾದ ರಾಜರ್ಷಿಗಳು ಕರ್ಮಯೋಗದಿಂದಲೇ ಸಂಸಿದ್ಧಿಯನ್ನು ಪಡೆದರು. (ಆತ್ಮಲಾಭವನ್ನು ಹೊಂದಿದರು.) (ರಾ.ಭಾ.)

**ಕರ್ಮಣಾ** ಎಂಬುದಕ್ಕೆ ಕರ್ಮವನ್ನು ಆಚರಿಸುವವನಾಗಿಯೇ–ಎಂದು ಅರ್ಥ. ಕರ್ಮದಿಂದ ಮೋಕ್ಷವಿಲ್ಲ. ಕರ್ಮವನ್ನಾಚರಿಸಿಯೇ ಜ್ಞಾನವನ್ನು ಪಡೆದು ಮೋಕ್ಷವನ್ನು ಹೊಂದಿದರು. ಜ್ಞಾನವಿಲ್ಲದೇ ಖಂಡಿತವಾಗಿಯೂ ಮೋಕ್ಷವಿಲ್ಲ.

**ಬ್ರಹ್ಮಜ್ಞಾನೇನ ವಾ ಮುಕ್ತಿಃ ಪ್ರಯಾಗಮರಣೇನ ವಾ ।**
**ಅಥವಾ ಸ್ನಾನಮಾತ್ರೇಣ ಗೋಮತ್ಯಾಂ ಕೃಷ್ಣಸನ್ನಿಧೌ ॥**

'ಬ್ರಹ್ಮಜ್ಞಾನದಿಂದಾಗಲೀ, ಪ್ರಯಾಗದಲ್ಲಿ ಮರಣಹೊಂದುವುದರಿಂದಾಗಲೀ, ಶ್ರೀಕೃಷ್ಣಸನ್ನಿಧಿಯಲ್ಲಿ ಗೋಮತೀನದಿಯಲ್ಲಿ ಸ್ನಾನಮಾಡುವುದರಿಂದಾಗಲೀ–ಮುಕ್ತಿಯು ಸಿಕ್ಕುತ್ತದೆ.' ಮುಂತಾದ ವಾಕ್ಯಗಳಲ್ಲಿ ಮುಕ್ತಿ ಎಂದರೆ 'ಪಾಪದಿಂದ ಬಿಡುಗಡೆ' ಎಂದು ಅರ್ಥಮಾಡಬೇಕು. 'ತೀರ್ಥಸ್ನಾನದ ಪ್ರಶಂಸೆಯಲ್ಲಿ ಅದಕ್ಕೆ ತಾತ್ಪರ್ಯ' ಎಂದು ತಿಳಿಯಬೇಕು. ವಿಹಿತವಾದ ಕರ್ಮವನ್ನು ಆಚರಿಸುವ ವಿಷಯದಲ್ಲಿ ಜನಕಾದಿಗಳ ಆಚಾರವೇ ಪ್ರಮಾಣ. ಭಾರತಾದಿಗಳಲ್ಲಿ ಪ್ರಸಿದ್ಧವಾಗಿರುವಂತೆಯೇ ಅವರು ಜ್ಞಾನಿಗಳೇ ಆಗಿರುತ್ತಾರೆ. ಅವರ ಉದಾಹರಣೆಯನ್ನು ಅನುಸರಿಸಬೇಕು.) (ಮ.ಭಾ.)

**ಓಂ ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥೨೧॥**

ಶ್ರೇಷ್ಠನಾದವನು ಯಾವುದನ್ನು ಆಚರಿಸುವನೋ ಅದನ್ನೇ ಉಳಿದ ಜನರೂ ಮಾಡುವರು. ಅವನು ಯಾವುದನ್ನು ಪ್ರಮಾಣವೆನ್ನುವನೋ ಲೋಕವು ಅದನ್ನೇ ಅನುಸರಿಸಿ ನಡೆಯುವುದು.

* * *

(ಸಾಮಾನ್ಯಜನರ ಸ್ವಭಾವವು ಶ್ರೇಷ್ಠರಾದವರನ್ನು ಅನುಸರಿಸುವುದೇ ಆಗಿರುತ್ತದೆ. ಜನಸಾಮಾನ್ಯರು ಶಾಸ್ತ್ರಾರ್ಥವಿಷಯಗಳಲ್ಲಿ ಹೆಚ್ಚು ಯೋಚಿಸ ಹೋಗುವುದಿಲ್ಲ. ಎಲ್ಲ ಜನರೂ ಶಾಸ್ತ್ರಾರ್ಥಗಳನ್ನು ವಿವೇಚಿಸಿ ಕಾರ್ಯ ಮಾಡುವ ಸಾಧ್ಯತೆಯೂ ಇಲ್ಲ. ದೊಡ್ಡವರು ಹೇಳಿದಂತೆ ಮಾಡಿದ ರಾಯಿತು–ಎನ್ನುತ್ತಾರೆ. ಧಾರ್ಮಿಕವಿಷಯಗಳಲ್ಲಿ ಅವರು ಹೇಳಿದಂತೆಯೇ ಮಾಡುತ್ತಾರೆ. ಅವರ ನಡಾವಳಿಗಳನ್ನೇ ಅನುಸರಿಸುತ್ತಾರೆ. ಶ್ರೇಷ್ಠನೆನಿಸಿಕೊಂಡವನು ಯಾವುದನ್ನು ಪ್ರಮಾಣವೆನ್ನುತ್ತಾನೆಯೋ ಅದನ್ನೇ ಜನರು ಅನುಸರಣೆಮಾಡುತ್ತಾರೆ. ಆದುದರಿಂದ ಶ್ರೇಷ್ಠನೆನಿಸಿಕೊಂಡವನ ಹೊಣೆಯು ಬಹಳ ಹೆಚ್ಚಿನದು. ಅವನು ಇತರರಿಗೆ ಸತ್ಯಸಂಗತಿಯನ್ನೂ ಪ್ರಾಮಾಣಿಕವಾದುದನ್ನೂ ಹೇಳಬೇಕು ಮತ್ತು ತಾನೂ ಅದರಂತೆಯೇ ನಡೆದುಕೊಳ್ಳ

ಬೇಕು. ಇಲ್ಲದಿದ್ದರೆ ಅಂತಹವನು ಧರ್ಮದ್ರೋಹದ ಪಾಪಕ್ಕೆ ಗುರಿಯಾಗು ತ್ತಾನೆ. ಅವನ ಸಲಹೆಯಂತೆ ಮಾಡುವ ಸಾಮಾನ್ಯಜನರ ಪಾಪಕ್ಕೆಲ್ಲಾ ಅವನೇ ಗುರಿಯಾಗುತ್ತಾನೆ. ತಂದೆಯು ಮಗನನ್ನು ಕುರಿತು ಸಂಧ್ಯಾವಂದನೆಯನ್ನು ಮಾಡಲು ಹೇಳುತ್ತಾನೆ. ಆದರೆ ಮಗನು 'ಅಪ್ಪನು ಸಂಧ್ಯಾವಂದನೆಯನ್ನು ಮಾಡುತ್ತಿದ್ದಾನೆಯೇ?'–ಎಂಬುದನ್ನು ಗಮನಿಸುತ್ತಾನೆ. ಅಪ್ಪನು ಮಾಡ ದಿದ್ದರೆ ಮಗನೂ ಮಾಡುವುದಿಲ್ಲ. ಸಂಧ್ಯಾವಂದನೆ ಮಾಡದ ತಂದೆಗೆ ಮಗನನ್ನು ಸಂಧ್ಯಾವಂದನೆ ಮಾಡೆಂದು ಬಲಾತ್ಕರಿಸಲೂ ಸಾಧ್ಯವಾಗುವು ದಿಲ್ಲ. ಹೀಗಾಗಿಯೇ ಇಂದು ನಮ್ಮ ಆಚಾರ-ವ್ಯವಹಾರಗಳೆಲ್ಲವೂ ಹದಗೆಟ್ಟು ಹೋಗಿವೆ. ಗುರುಗಳೆನಿಸಿಕೊಂಡವರ ಪುರೋಹಿತರೆನಿಸಿಕೊಂಡವರ ನಡೆ-ನುಡಿಗಳು ಸ್ವಚ್ಛವಾಗಿರಬೇಕು. ಮತ್ತೊಬ್ಬರಿಗೆ ಆದರ್ಶವಾಗಿರಬೇಕು. ಮತ್ತೊಬ್ಬರಿಗೆ ಶಾಸ್ತ್ರವಿಚಾರವನ್ನು ಬೋಧಿಸಿ ತಾವೇ ಆಚರಣೆಯಲ್ಲಿಟ್ಟು ಕೊಳ್ಳದಿದ್ದರೆ ಪ್ರಯೋಜನವಾಗುವುದಿಲ್ಲ. ಅಂತಹವರ ಮಾತಿಗೆ ಬೆಲೆಯೇ ಇರುವುದಿಲ್ಲ. ನಗರಗಳಲ್ಲಾಗುತ್ತಿರುವ ಪ್ರವಚನಗಳನ್ನು ನೋಡಿದರೆ ನಗರ ದಲ್ಲಿರುವವರೆಲ್ಲರೂ ಧಾರ್ಮಿಕರಾಗಿಬಿಡಬೇಕಾಗಿತ್ತು. ಆದರೆ ಇಂದು ಉಪನ್ಯಾಸ-ಹರಿಕಥೆಗಳು ಮನೋರಂಜನೆಗೆ ಮಾತ್ರವೇ ಆಗಿವೆ. ಪ್ರವಚನ ಕಾರನೂ ಕೇಳುವವರಿಗೆ ಸದ್ಬುದ್ಧಿಯುಂಟಾಗಲಿ–ಎಂದು ಹೇಳುವುದಿಲ್ಲ. ಹೊಟ್ಟೆಹೊರೆಯುವುದಕ್ಕೆ ಹೇಳುತ್ತಾನೆ. ಕೇಳುವವರೂ ಸಹ ತಮ್ಮ ದುಷ್ಟ ತನವನ್ನು ದೂರಮಾಡಿಕೊಳ್ಳಬೇಕೆಂದು ಕೇಳುವುದಿಲ್ಲ. ಮನೋರಂಜನೆಗಾಗಿ ಕೇಳಿ ತಟ್ಟೆಗೆ ಕಾಸುಹಾಕಿ ಹೋಗುತ್ತಾರೆ. ಪ್ರವಚನಶ್ರವಣದಿಂದ ಅವರ ವ್ಯವಹಾರಗಳಲ್ಲಿ ಎಳ್ಳಷ್ಟೂ ವ್ಯತ್ಯಾಸವಾಗುವುದಿಲ್ಲ. ಈ ಕಾರಣದಿಂದಲೇ ನಮ್ಮಲ್ಲಿ ಧರ್ಮ ಮತ್ತು ಕರ್ಮಗಳೆರಡೂ ಹಾಳಾಗಿಹೋಗುತ್ತಿವೆ. ಈಗಿನ ಕಾಲದಲ್ಲಿಯೂ ಜನರು ಅನೇಕವಿಷಯಗಳಲ್ಲಿ ಹಿರಿಯರನ್ನು ಕೇಳಿ ಅವರು ಹೇಳಿದಂತೆ ನಡೆಯಬೇಕೆಂಬ ಭಾವನೆಯಿಂದಲೇ ಇರುತ್ತಾರೆ. ಹಿರಿಯರೆನಿಸಿ ಕೊಂಡಿರುವವರಾದರೂ ಧರ್ಮಾಧರ್ಮಗಳನ್ನು ಚೆನ್ನಾಗಿ ತಿಳಿದುಕೊಂಡು ನಿರ್ಭೀತಿಯಿಂದ ಜನರಿಗೆ ಸಲಹೆಮಾಡಿದರೆ ಧರ್ಮ-ಕರ್ಮಗಳು ಸ್ವಲ್ಪ ವಾದರೂ ಉಳಿದರೂ ಉಳಿಯಬಹುದು.

ಶ್ರೀಕೃಷ್ಣನು ಅರ್ಜುನನಿಗೆ 'ಶ್ರೇಷ್ಠರೇನು ಮಾಡುವರೋ ಅದನ್ನೇ

ಜನರೂ ಅನುಸರಿಸುತ್ತಾರೆ'–ಎಂಬ ಮಾತನ್ನು ಹೇಳುತ್ತಾನೆ. ಅರ್ಜುನನು ಕ್ಷತ್ರಿಯ. ಅವನ ಧರ್ಮದಂತೆ ಅವನು ನಡೆದೇ ತೀರಬೇಕು. ಅವನನ್ನು ನೋಡಿ ಅವನ ಪ್ರಜೆಗಳೂ ತಮ್ಮ-ತಮ್ಮ ವರ್ಣಾಶ್ರಮಧರ್ಮಗಳಲ್ಲಿ ನಿರತರಾಗುತ್ತಾರೆ. ರಾಜರೇ ವರ್ಣಾಶ್ರಮಗಳನ್ನು ಮೀರಿನಡೆದರೆ ಪ್ರಜೆಗಳನ್ನು ಹೇಗೆ ತಾನೇ ಹತೋಟಿಯಲ್ಲಿಡಲು ಸಾಧ್ಯ? ರಾಜನು ಪ್ರಜೆಗಳಿಗಾಗಿ ಬಹಳ ತ್ಯಾಗಮಾಡಬೇಕಾಗುತ್ತದೆ.

**'ಯಥಾ ರಾಜಾ ತಥಾ ಪ್ರಜಾಃ'** ಇದು ಸಾರ್ವಕಾಲಿಕವಾದ ಸತ್ಯ. ನೀರು ಸಾಮಾನ್ಯವಾಗಿ ಮೇಲಿಂದ ಕೆಳಕ್ಕೆ ಹರಿದುಬರುತ್ತದೆಯೇ ಹೊರತು ಕೆಳಗಿನಿಂದ ಮೇಲಕ್ಕೆ ಹೋಗುವುದಿಲ್ಲ. ಆದುದರಿಂದ ಮೇಲಿನ ಅಧಿಕಾರಿಗಳು ಯಾವಾಗಲೂ ಸ್ವಚ್ಛಜೀವನವನ್ನು ನಡೆಸಬೇಕು.

ಶ್ರೀಕೃಷ್ಣನು ಉತ್ತರಾರ್ಧದಲ್ಲಿ **'ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ** ಅವನು ಯಾವುದನ್ನು ಪ್ರಮಾಣವೆನ್ನುತ್ತಾನೆಯೋ ಲೋಕವೂ ಅದನ್ನೇ ಅನುಸರಿಸುತ್ತದೆ'–ಎನ್ನುತ್ತಾನೆ.

'ಈಗೇನಾದರೂ ನೀನು ಸ್ವಧರ್ಮವಾದ ಯುದ್ಧಮಾಡುವುದನ್ನು ಬಿಟ್ಟು ಪರಧರ್ಮವನ್ನು ಅವಲಂಬಿಸ ಹೊರಟರೆ–ನೀನು ಮಾಡಿದ್ದೇ ಒಂದು ಪ್ರಮಾಣವೆಂದು ಭಾವಿಸಿ ಜನತೆಯೂ ಅದನ್ನೇ ಅನುಸರಿಸುತ್ತದೆ. ವರ್ಣಸಾಂಕರ್ಯವಾಗುತ್ತದೆ. ಆದುದರಿಂದ ಪ್ರಜೆಗಳ ಮಾರ್ಗದರ್ಶನಕ್ಕಾದರೂ ನೀನು ನಿನ್ನ ಧರ್ಮದಲ್ಲಿದ್ದೇ ತೀರಬೇಕು. ಜನಕನು ಜ್ಞಾನೀ. ಆದರೂ ಅವನು ಸ್ವಧರ್ಮವನ್ನು ಬಿಟ್ಟು ಸಂನ್ಯಾಸವನ್ನು ಸ್ವೀಕರಿಸಲಿಲ್ಲ. ಕಡೆಯವರೆಗೂ ರಾಜ್ಯಭಾರ ಮಾಡುತ್ತಲೇ ಇದ್ದನು. ಈ ದೃಷ್ಟಿಯಿಂದಲೂ ಸಹ ನೀನು ನಿನ್ನ ವರ್ಣಾಶ್ರಮಧರ್ಮಾನುಸಾರವಾಗಿ ಯುದ್ಧಮಾಡಲೇಬೇಕು' ಹೀಗೆಂದು ಹೇಳಿ ಶ್ರೀಕೃಷ್ಣನು ತನ್ನ ವಿಷಯವನ್ನು ಅಥವಾ ಆದರ್ಶವನ್ನು ಅರ್ಜುನನ ಮುಂದಿಡುತ್ತಾನೆ.

ಹೀಗೆ ಲೋಕಸಂಗ್ರಹಾರ್ಥವಾಗಿಯೂ ಅರ್ಜುನನು ತನ್ನ ವರ್ಣಾಶ್ರಮೋಚಿತವಾದ ಕರ್ಮವನ್ನು ಆಚರಿಸದಿದ್ದರೆ ಅದು ಸಾಮಾನ್ಯ ಜನರಿಗೆ ಮಾದರಿಯಾಗಿ ಅವರು ನಾಶಹೊಂದುತ್ತಾರೆ. ಲೋಕವಿನಾಶ

ದಿಂದುಂಟಾಗುವ ಆ ಪಾಪವು ಅರ್ಜುನನನ್ನು ಜ್ಞಾನಯೋಗದಿಂದಲೂ ಜಾರಿಸಬಹುದು.) (ರಾ.ಭಾ.)

**ಓಂ ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥೨೨॥**

ಪಾರ್ಥ! ಮೂರು ಲೋಕಗಳಲ್ಲಿಯೂ ನನಗೆ ಮಾಡಬೇಕಾದ ಕರ್ತವ್ಯವೇನೂ ಇರುವುದಿಲ್ಲ. ನಾನು ಪಡೆಯದೇ ಇದ್ದುದನ್ನು ಈಗ ಪಡೆಯಬೇಕಾಗಿಯೂ ಇರುವುದಿಲ್ಲ. ಆದರೂ ನಾನು ಕರ್ಮಮಾರ್ಗದಲ್ಲಿಯೇ ಇದ್ದೇನೆ.

( 'ಪಾರ್ಥ! ನಿನಗೆ ತಿಳಿದಿರುವಂತೆ ಈ ಮೂರು ಲೋಕಗಳಲ್ಲಿ ನಾನು ಮಾಡಬೇಕಾದ ಕರ್ತವ್ಯವೇನಿದೆ? ನಾನು ಯಾರಿಗಾಗಿ ಯಾವ ಕಾರ್ಯ



ಮಾಡಬೇಕಾಗಿದೆ? ನಾನು ಪಡೆಯದೇ ಇರುವುದು ಯಾವುದೂ ಇಲ್ಲ; ಪಡೆಯಬೇಕಾದುದೂ ಇಲ್ಲ. ನಾನೇ ಸರ್ವಸ್ವವೂ ಆಗಿದ್ದೇನೆ. ನನ್ನದೇ ಸರ್ವಸ್ವವೂ ಆಗಿದೆ. ಆದರೂ ನಾನು ಕರ್ಮಮಾಡುತ್ತಲೇ ಇದ್ದೇನೆ.' ಈ ಮಾತನ್ನು ಶ್ರೀಕೃಷ್ಣನು ಉಪಚಾರಕ್ಕಾಗಿ ಮಾತ್ರವೇ ಹೇಳಿಲ್ಲ. ಆ ವಿಷಯ

ದಲ್ಲಿ ತಾನು ಆದರ್ಶವನ್ನೇ ತೋರಿಸಿದ್ದಾನೆ. ಶ್ರೀಕೃಷ್ಣನು ಕಂಸನೇ ಮೊದಲಾದ ಅನೇಕದುಷ್ಟರನ್ನು ಸಂಹರಿಸಿದನು. ಆದರೆ ಯಾವ ರಾಜ್ಯಕ್ಕೂ ತಾನು ರಾಜನಾಗಲಿಲ್ಲ. ಈಗ ಪಾಂಡವರ ಪಕ್ಷಕ್ಕೆ ಸಾರಥ್ಯವಹಿಸಬೇಕೆಂದು ಸಂಕೋಚವೇ ಇಲ್ಲದೆ ಬಂದಿದ್ದಾನೆ. ಭಾರತಯುದ್ಧದಲ್ಲಿ ಯಾರೇ ಗೆಲ್ಲಲಿ, ಯಾರೇ ಸೋಲಲಿ–ಅವನಿಗೆ ಯಾವ ಪ್ರಯೋಜನವೂ ಇಲ್ಲ. ಆದರೆ ಧರ್ಮ ಪರಾಯಣರಾದ ಪಾಂಡವರನ್ನು ಗೆಲ್ಲಿಸಿ ಧರ್ಮಸಂಸ್ಥಾಪನೆಯನ್ನು ಮಾಡ ಬೇಕೆಂಬುದೇ ಅವನ ಗುರಿ. ಈ ರೀತಿಯಲ್ಲಿ ಶ್ರೀಕೃಷ್ಣನು ಪ್ರಾಪಂಚಿಕ ವ್ಯವ ಹಾರದಲ್ಲಿಯೂ ಸಹ ಫಲಾಭಿಸಂಧಿಯಿಲ್ಲದೇ ಕರ್ಮಮಾಡುತ್ತಾ ಉತ್ತಮ ವಾದ ಆದರ್ಶವನ್ನು ತೋರಿಸಿದ್ದಾನೆ.)

ಮುಂದೆ ಶ್ರೀಕೃಷ್ಣನು ತಾನು ಹಾಗೆ ನಡೆದುಕೊಳ್ಳದಿದ್ದರೆ ಪ್ರಪಂಚ ದಲ್ಲಾಗುವ ದುಷ್ಪರಿಣಾಮವನ್ನು ಹೇಳುತ್ತಾನೆ.

**ಓಂ ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತನ್ದ್ರಿತಃ ।**
**ಮಮ ವರ್ತ್ಮಾನುವರ್ತನ್ತೇ ಮನುಷ್ಯಾಃ ಪಾರ್ಥ ಸರ್ವಶಃ ॥೨೩॥**

ಅರ್ಜುನ! ಆಲಸ್ಯವಿಲ್ಲದ ನಾನು ಕರ್ಮದಲ್ಲಿ ಒಮ್ಮೆಯಾದರೂ ತೊಡಗದೇ ಇದ್ದುಬಿಟ್ಟೆನೆಂದರೆ ಮನುಷ್ಯರು ಸರ್ವಪ್ರಕಾರದಿಂದಲೂ ನನ್ನ ದಾರಿಯನ್ನು ಅನುಸರಣೆಮಾಡುವರು.

* * *

(ಈ ಶ್ಲೋಕದಲ್ಲಿ ಶ್ರೀಕೃಷ್ಣನು ಮನುಷ್ಯರ ಸ್ವಭಾವವನ್ನು ಹೃದ ಯಂಗಮವಾಗಿ ಚಿತ್ರಿಸಿದ್ದಾನೆ. ಅವನು ಅರ್ಜುನನಿಗೆ ಹೇಳುತ್ತಾನೆ : 'ಪಾರ್ಥ! ನಾನೇನೋ ನನ್ನ ನಿತ್ಯಕರ್ಮವನ್ನು ಮಾಡುತ್ತಲೇ ಇರುತ್ತೇನೆ. ನಿತ್ಯಕರ್ಮಗಳನ್ನೂ ಮತ್ತು ಸ್ವಧರ್ಮೋಕ್ತಕರ್ಮಗಳನ್ನೂ ಮಾಡುತ್ತಿರುವು ದನ್ನು ನೋಡಿ ಎಷ್ಟುಮಂದಿ ಅವನ್ನು ಅನುಸರಣೆಮಾಡುತ್ತಾರೆಂಬುದನ್ನು ಹೇಳಲು ಸಾಧ್ಯವಿಲ್ಲ. ಆದರೆ ಒಂದು ಮಾತು ಮಾತ್ರ ನಿಶ್ಚಯ. ನಾನೇ ನಾದರೂ ಅಜಾಗರೂಕನಾಗಿ ಯಾವಾಗಲಾದರೂ ಒಮ್ಮೆ ನನ್ನ ಕರ್ಮಾನು ಷ್ಠಾನಗಳನ್ನು ನಿಲ್ಲಿಸಿಬಿಟ್ಟೆನೆಂದರೆ ಅದನ್ನು ಮಾತ್ರ ಸರ್ವಪ್ರಕಾರದಿಂದಲೂ ಜನರು ಬಹುಬೇಗ ಆಚರಣೆಗೆ ತರುತ್ತಾರೆ. ಮನುಷ್ಯರ ಸ್ವಭಾವವೇ ಅಂತಹುದು. ಜನರಿಗೆ ಕರ್ಮಮಾಡುವುದರಲ್ಲಿರುವ ಆಸಕ್ತಿಗಿಂತಲೂ ಕರ್ಮ

ವನ್ನು ಬಿಡುವುದರಲ್ಲಿಯೇ ಹೆಚ್ಚಿನ ಆಸಕ್ತಿಯಿರುತ್ತದೆ. ಆದರೆ ಅವರಿಗೊಂದು ಕುಂಟುನೆಪಬೇಕು. ಶ್ರೀಕೃಷ್ಣನೇ ಈ ಕರ್ಮವನ್ನು ಮಾಡಲಿಲ್ಲವಂತೆ–ಎಂದು ತಿಳಿದ ತಕ್ಷಣವೇ ಅವರು ಎಲ್ಲ ಕರ್ಮಗಳನ್ನೂ ನಿಲ್ಲಿಸಿಯೇ ಬಿಡುತ್ತಾರೆ. 'ಧರ್ಮಮೂರ್ತಿಯಾದ ಶ್ರೀಕೃಷ್ಣನೇ ಮಾಡದಿದ್ದಮೇಲೆ ನಾವೇಕೆ ಮಾಡಬೇಕು? ಅವನೇನು ತಿಳಿಯದೇ ಬಿಟ್ಟನೋ? ಕರ್ಮದಲ್ಲಿಯೇ ದೋಷವಿರಬೇಕು. ಆದುದರಿಂದಲೇ ಬಿಟ್ಟಿರಬೇಕು–ಇತ್ಯಾದಿ ವಾದಗಳನ್ನು ಮುಂದಿಡುತ್ತಾರೆ. 'ಅವನು ಅಲಸಿಕೆಯಿಂದ, ಅಜಾಗರೂಕತೆಯಿಂದ ಅಂದು ಮಾತ್ರ ಕರ್ಮಮಾಡಲಿಲ್ಲವಂತೆ–ಎಂಬುದನ್ನು ಯಾರೂ ಹೇಳುವುದಿಲ್ಲ. ಆದುದರಿಂದ ಎಂದಿಗೂ ಕರ್ಮವನ್ನು ಬಿಡಬಾರದು. ಶ್ರೇಷ್ಠಪುರುಷರು ತಮ್ಮ ನಡೆ-ನುಡಿಗಳಲ್ಲಿ ಒಮ್ಮೆ ಜಾರಿದರೂ ಸಹ ಅದರಿಂದ ಜನತೆಯ ಮೇಲೆ ಹೆಚ್ಚಿನ ಪರಿಣಾಮವುಂಟಾಗುತ್ತದೆ. ಆದುದರಿಂದ ಸಮಾಜದ ಉನ್ನತಿಗೆ ಅಥವಾ ಅವನತಿಗೆ ಗುರುಗಳೆನಿಸಿಕೊಂಡವರ, ಆಚಾರ್ಯರೆನಿಸಿಕೊಂಡವರ, ನಾಯಕರೆನಿಸಿಕೊಂಡವರ ಹೊಣೆಗಾರಿಕೆಯು ಗುರುತರವಾಗಿರುತ್ತದೆ. ಮುಂದಿನ ಶ್ಲೋಕದಲ್ಲಿ ಶ್ರೀಕೃಷ್ಣನು ಕರ್ಮತ್ಯಾಗದ ದುಷ್ಪರಿಣಾಮವನ್ನು ಮತ್ತೂ ಸ್ಪಷ್ಟವಾಗಿ ಹೇಳಿದ್ದಾನೆ.)

**ಓಂ ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್ ।**
**ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥೨೪॥**

ನಾನು ಕರ್ಮವನ್ನು ಮಾಡದಿದ್ದರೆ ಈ ಲೋಕಗಳೆಲ್ಲವೂ ಹಾಳಾಗುವುವು. ವರ್ಣಸಂಕರಕ್ಕೂ ನಾನು ಕರ್ತನಾದೇನು. ಈ ಪ್ರಜೆಗಳನ್ನೂ ಹಾಳುಮಾಡಿದವನಾದೇನು.

* * *

(ಅರ್ಜುನ! ನಾನೇನಾದರೂ ಕರ್ಮಮಾಡದಿದ್ದರೆ ನನ್ನನ್ನು ಅನುಸರಿಸುವ ಪ್ರಜೆಗಳೂ ನಿತ್ಯ-ನೈಮಿತ್ತಿಕಕರ್ಮಗಳನ್ನು ಮಾಡುವುದಿಲ್ಲ. ಯಜ್ಞಚಕ್ರವು ಕುಸಿದುಬೀಳುತ್ತದೆ. ಆಗ ಈ ಲೋಕವು ಮಾತ್ರವಲ್ಲ ; ಯಜ್ಞಚಕ್ರವನ್ನೇ ಅವಲಂಬಿಸಿರುವ ಎಲ್ಲ ಲೋಕಗಳೂ ಹಾಳಾಗಿಹೋಗುತ್ತವೆ. ಎರಡನೆಯದಾಗಿ :- ನಾನು ಕರ್ಮಮಾಡದಿದ್ದುದನ್ನು ನೋಡಿ ಪ್ರಜೆಗಳು ಸ್ವೇಚ್ಛೆಯಿಂದ ವರ್ತಿಸುವರು. ವರ್ಣಾಶ್ರಮೋಕ್ತವಾದ ಕರ್ಮಗಳನ್ನು ಮಾಡು

ವುದಿಲ್ಲ. ರಾಜ್ಯದಲ್ಲಿ ಸಂಪತ್ಸಮೃದ್ಧಿಯಿರಬೇಕಾದರೆ ಎಲ್ಲ ವರ್ಣಗಳವರೂ ತಮ್ಮ-ತಮ್ಮ ವರ್ಣಾಶ್ರಮೋಕ್ತವಾದ ಕರ್ಮಾನುಷ್ಠಾನಗಳನ್ನು ನಿಯತವಾಗಿ ಮಾಡಬೇಕು. ರಾಜರಿಗೆ ತಮ್ಮ ಪ್ರಜೆಗಳನ್ನು ಅವರವರ ವರ್ಣಾಶ್ರಮೋಕ್ತ ಕರ್ಮಗಳಲ್ಲಿ ತೊಡಗಿಸುವುದೇ ಮುಖ್ಯಕರ್ತವ್ಯ. ಇದರ ವ್ಯವಸ್ಥೆಯಾಯಿತೆಂದರೆ ದೇಶವು ಸುಭಿಕ್ಷವಾಗಿರುತ್ತದೆ–ಎಂಬುದೇ ಭಾರತೀಯರೆಲ್ಲರ ಭಾವನೆ.

ಶ್ರೀಕೃಷ್ಣನು ಹೇಳುತ್ತಾನೆ : 'ಒಂದು ವೇಳೆ ನಾನು ನನ್ನ ವರ್ಣಾಶ್ರಮೋಕ್ತವಾದ ಕರ್ಮಗಳನ್ನು ಮಾಡದಿದ್ದರೆ ಪ್ರಜೆಗಳು ಸ್ವೇಚ್ಛಾಪ್ರವೃತ್ತರಾಗಿಬಿಡುತ್ತಾರೆ. ವರ್ಣಸಂಕರವಾಗಿಬಿಡುತ್ತದೆ. ಅದಕ್ಕೆ ನಾನು ಕಾರಣನಾಗುತ್ತೇನೆ. ವರ್ಣಸಂಕರವಾಯಿತೆಂದರೆ ಆಡಳಿತವೇ ಅಸ್ತವ್ಯಸ್ತವಾಗಿ ಪ್ರಜೆಗಳು ನಾಶಹೊಂದುತ್ತಾರೆ. ನಾನೇ ಪ್ರಜೆಗಳನ್ನು ಕೊಂದಂತಾಗುತ್ತದೆ. ಆದುದರಿಂದ ನಾನು ಕರ್ಮಮಾಡುತ್ತಿದ್ದೇನೆ. ನೀನೂ ಸಹ ಇದೇ ಕಾರಣದಿಂದಲಾದರೂ ಕರ್ಮಮಾಡಬೇಕು.')

ಕರ್ಮವನ್ನು ಹೇಗೆ ಮಾಡಬೇಕೆಂಬುದನ್ನು ಪುನಃ ಶ್ರೀಕೃಷ್ಣನಿಲ್ಲಿ ನಿರೂಪಿಸುತ್ತಾನೆ :

**ಓಂ ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವನ್ತಿ ಭಾರತ ।**
**ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್ಲೋಕಸಂಗ್ರಹಮ್ ॥೨೫॥**

ಭಾರತ! ತಿಳಿಯದವರು ಕರ್ಮದಲ್ಲಿ ಆಸಕ್ತರಾಗಿ ಯಾವ ರೀತಿಯಲ್ಲಿ ಕರ್ಮವನ್ನು ಮಾಡುತ್ತಿರುವರೋ ಹಾಗೆಯೇ ಜ್ಞಾನಿಯು ಅಸಕ್ತನಾಗಿ ಲೋಕಸಂಗ್ರಹವನ್ನು ಮಾಡುವುದಕ್ಕಾಗಿ ಕರ್ಮವನ್ನು ಮಾಡುತ್ತಿರಬೇಕು.

* * *

(ಜ್ಞಾನಿಯಾಗಲೀ, ಅಜ್ಞಾನಿಯಾಗಲೀ–ಸ್ವವರ್ಣೋಚಿತವಾದ ನಿತ್ಯ-ನೈಮಿತ್ತಿಕಕರ್ಮಗಳನ್ನು ಶಾಸ್ತ್ರೋಕ್ತವಾದ ರೀತಿಯಲ್ಲಿ ಮಾಡಲೇಬೇಕು. ಆದರೆ ಜ್ಞಾನಿಯು ಕರ್ಮಮಾಡುವುದಕ್ಕೂ ಅಜ್ಞಾನಿಯು ಕರ್ಮಮಾಡುವುದಕ್ಕೂ ಒಂದೇ ಒಂದು ವ್ಯತ್ಯಾಸ. ಇದೂ ಸಹ ಬಹಿರಂಗದ್ದಲ್ಲ. ಅಂತರಂಗದ್ದು. ಅಜ್ಞಾನಿಯು ಈಷಣಾತ್ರಯಕ್ಕಾಗಿ ಮತ್ತು ಸ್ವರ್ಗಾದಿಕಾಮನೆಯಿಂದ ಕರ್ಮಮಾಡುತ್ತಾನೆ. ಅವನಿಗೆ ಫಲಾಸಕ್ತಿಯಿರುತ್ತದೆ. ಫಲವಿಲ್ಲದೆ ಕರ್ಮಮಾಡುವುದೆಂಬುದನ್ನು ಅವನು ಅರಿಯನು. ಜ್ಞಾನಿಯು

ಸ್ವಪ್ರಯೋಜನಕ್ಕಾಗಿ ಕರ್ಮಮಾಡುವುದಿಲ್ಲ. ಕರ್ಮಫಲದಲ್ಲಿ ಅನಾಸಕ್ತನಾಗಿ ಲೋಕಕಲ್ಯಾಣಕ್ಕಾಗಿ ಕರ್ಮಮಾಡುತ್ತಾನೆ. ಈಶ್ವರಾರ್ಪಣಬುದ್ಧಿಯಿಂದ ಕರ್ಮವನ್ನು ಮಾಡುತ್ತಾನೆ. ಹೀಗೆ ಮಾಡಬೇಕಾದುದೇ ಅವನ ಕರ್ತವ್ಯ ವಾಗಿರುತ್ತದೆ.)

**ಓಂ ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಙ್ಗಿನಾಮ್ ।**
**ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ಯುಕ್ತಃ ಸಮಾಚರನ್ ॥೨೬॥**

ಕರ್ಮಸಂಗಿಗಳಾದ ಅಜ್ಞಾನಿಗಳಿಗೆ ಬುದ್ಧಿಭೇದವನ್ನು ಹುಟ್ಟಿಸಬಾರದು. ಜ್ಞಾನಿಯಾದವನು ತಾನೂ ಯುಕ್ತನಾಗಿ ಕರ್ಮಗಳನ್ನು ಮಾಡುತ್ತಾ ಎಲ್ಲ ಕರ್ಮಗಳನ್ನೂ ಅವರಿಂದಲೂ ಮಾಡಿಸಬೇಕು.

* * *

(ಕರ್ಮದಲ್ಲಿಯೇ ಆಸಕ್ತಿಯಿರುವವರಿಗೆ ಸಾಂಖ್ಯದ ಆದರ್ಶದ ಮಾತುಗಳನ್ನು ಹೇಳಿ ನಿರುತ್ಸಾಹವನ್ನುಂಟುಮಾಡಬಾರದು. ಅವರ ಬುದ್ಧಿ ಯನ್ನು ಹಾಳುಮಾಡಬಾರದು. ಅವರಿಗೆ ಇದು ಸರಿಯೇ–ಅದು ಸರಿಯೇ ಎಂಬ ಡೋಲಾಯಮಾನವಾದ ಮನಸ್ಸನ್ನುಂಟುಮಾಡಬಾರದು. ಸಾಮಾನ್ಯ ಜನರಿಗೆ ತತ್ತ್ವಾರ್ಥಗಳನ್ನು ಗ್ರಹಣೆಮಾಡುವ ಶಕ್ತಿಯಿರುವುದಿಲ್ಲ. ಅವರು ಶಾಸ್ತ್ರೋಕ್ತವಾದ ಕರ್ಮಗಳನ್ನು ಮಾಡುತ್ತಾ ಚಿತ್ತಶುದ್ಧಿಯನ್ನು ಪಡೆದು ಆತ್ಮಸಂಸ್ಕಾರವನ್ನು ಹೊಂದಿ ಅನುಕ್ರಮವಾಗಿ ಜ್ಞಾನಮಾರ್ಗಕ್ಕೆ ಬರಬೇಕಾ ಗುತ್ತದೆ. ಆತ್ಮವಿದ್ಯೆಯನ್ನು ಹೇಳಹೋಗಿ ಅದು ಅವರಿಗೆ ಹಿಡಿಸದೆ ಕರ್ಮ ದಲ್ಲಿಯೂ ಶ್ರದ್ಧೆಯು ಬಿಟ್ಟುಹೋದರೆ ಅವರು ಉಭಯತಃ ಭ್ರಷ್ಟರಾಗುತ್ತಾರೆ. ಇದಕ್ಕೆ ಕಾರಣನಾದವನಿಗೂ ಪಾಪವು ಅಂಟಿಕೊಳ್ಳುತ್ತದೆ. 'ಹಾಗಾದರೆ ಏನುಮಾಡಬೇಕು? ಅಜ್ಞರನ್ನು ಹಾಗೆಯೇ ಬಿಟ್ಟುಬಿಡುವುದೇ?'–ಎನ್ನುವುದಕ್ಕೆ ಶ್ರೀಕೃಷ್ಣನು ಹೇಳುತ್ತಾನೆ : ವಿದ್ವಾಂಸನಾದವನು (ಜ್ಞಾನಿಯಾದವನು) ಯೋಗಯುಕ್ತನಾಗಿ ಫಲಾಸಕ್ತಿಯಿಲ್ಲದೆ ಸರ್ವಕರ್ಮಗಳನ್ನೂ ಶಾಸ್ತ್ರೋಕ್ತರೀತಿಯಲ್ಲಿ ಶ್ರದ್ಧೆಯಿಂದ ಮಾಡುತ್ತಾ ಅಜ್ಞಾನಿಗಳೂ ಸಹ ಅವರವರ ಕರ್ಮಗಳನ್ನು ಶ್ರದ್ಧೆಯಿಂದ ಮಾಡುವಂತೆ ಅವರನ್ನು ಕರ್ಮಗಳಲ್ಲಿ ತೊಡಗಿಸಬೇಕು.

ಮಾನವನು ಕರ್ಮಠನಾಗಬೇಕು ; ಇಲ್ಲವೇ ಜ್ಞಾನಿಯಾಗಬೇಕು–ಎರ

ಡರ ಮಧ್ಯೆ ನಡೆಯುವುದು ಅಪಾಯಕರ. ಕರ್ಮಠರು ಸ್ವಲ್ಪನಿಧಾನವಾದರೂ ಜ್ಞಾನಮಾರ್ಗಕ್ಕೆ ಬಂದೇ ಬರುತ್ತಾರೆ. ಕರ್ಮವನ್ನು ಫಲಾಭಿಸಂಧಿಯಿಂದ ಮಾಡಿದರೂ ಸಹ ಆತ್ಮಸಂಸ್ಕಾರವಾಗದೇ ಇರುವುದಿಲ್ಲ. ಮೇಲಾಗಿ ಫಲಸಿಕ್ಕುತ್ತದೆಂದೇ ಕರ್ಮಮಾಡುತ್ತಾರೆಯೇ ಹೊರತು ಫಲವು ಬೇಡದಿದ್ದರೆ ಅಥವಾ ಫಲವಿಲ್ಲವೆಂದು ತಿಳಿದರೆ ಕರ್ಮಮಾಡುವುದೇ ಇಲ್ಲ. ಯಾವುದೋ ಕಾಮನೆಯಿಂದ ಸತ್ಯನಾರಾಯಣವ್ರತವನ್ನು ಮಾಡುತ್ತಾನೆ. ಅದರ ಫಲಿತಾಂಶವು ತಾತ್ಕಾಲಿಕವಾಗಿ ಸಮಷ್ಟಿಯಾಗಿರುತ್ತದೆ. ವ್ರತಮಾಡಿದವನು ಒಬ್ಬರಿಗೆ ಊಟಹಾಕುತ್ತಾನೆ. ದಕ್ಷಿಣೆಯನ್ನು ಕೊಡುತ್ತಾನೆ. ಇದರಿಂದ ಭೂತ ತೃಪ್ತಿಯಾದರೂ ಆಗುತ್ತದೆ. ಅವನಿಗೆ ಕಾಮನೆಯೇ ಇಲ್ಲದೇ ವ್ರತವನ್ನೇ ಮಾಡದಿದ್ದರೆ ಅವನು ಊಟವನ್ನು ಹಾಕಬೇಕಾದ ಪ್ರಮೇಯವೇ ಇಲ್ಲ. ಆದುದರಿಂದ ಕಾಮನೆಯಿಂದ ಕರ್ಮಮಾಡಿದರೂ ಪ್ರಯೋಜನವಿದ್ದೇ ಇದೆ. ಜ್ಞಾನಿಯೂ ಆಗದೇ ಕರ್ಮವನ್ನೂ ತೊರೆದರೆ ಅವನಿಗೆ ಅಧಃಪತನವಾಗುತ್ತದೆ. ಮೋಕ್ಷವೂ ಇಲ್ಲ ; ಸ್ವರ್ಗವೂ ಇಲ್ಲ. ಆದುದರಿಂದ ಶ್ರೀಕೃಷ್ಣನು ಈ ವಿಷಯವನ್ನು ಬಹುಸ್ಪಷ್ಟವಾಗಿ ಹೇಳಿದ್ದಾನೆ. 'ಕರ್ಮಠರಿಗೆ ಮನಸ್ಸು ಡೋಲಾಯಮಾನವುಂಟಾಗುವಂತೆ ಮಾಡಬೇಡ. ಮಾಡುವ ಕರ್ಮವನ್ನು ಅವರು ಶ್ರದ್ಧೆಯಿಂದ ಮಾಡುವಂತೆ ಪ್ರಚೋದಿಸು. ಅವರಿಂದ ಕರ್ಮಮಾಡಿಸಲು ನೀನೂ ಸಹ ಶ್ರದ್ಧೆಯಿಂದ ಸರ್ವಕರ್ಮಗಳನ್ನೂ ಮಾಡು.'

**ಯುಕ್ತಃ** = ಅಭಿಯುಕ್ತನಾದವನು. (ಶಂ.ಭಾ.)

'ಕರ್ಮಯೋಗವೇ ಆತ್ಮಾವಲೋಕನಸಾಧನ' ಎಂಬ ಬುದ್ಧಿಯಿಂದ ಕೂಡಿದವನು.) (ರಾ.ಭಾ.)

**ಓಂ ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥೨೭॥**

ಪ್ರಕೃತಿಯ ಗುಣಗಳಿಂದ ಎಲ್ಲ ರೀತಿಗಳಲ್ಲಿಯೂ ಕರ್ಮಗಳು ನಡೆಸಲ್ಪಡುತ್ತಿರುವಲ್ಲಿ ಅಹಂಕಾರದಿಂದ ಬಗೆ-ಬಗೆಯಾಗಿ ಮೋಹಿತವಾದ ಅಂತಃಕರಣವುಳ್ಳವನು 'ನಾನು ಕರ್ತನು' ಎಂದು ತಿಳಿದುಕೊಳ್ಳುತ್ತಿರುತ್ತಾನೆ.

* * *

(ಅರ್ಜುನ! 'ನಾನು ಕರ್ತೃ. ಇಂತಹ ಫಲಕ್ಕಾಗಿ ಈ ಕರ್ಮವನ್ನು

ಮಾಡುತ್ತೇನೆ' ಎಂದು ಸಂಕಲ್ಪಿಸಿ ಫಲಾಭಿಸಂಧಿಯಿಂದ ಕರ್ಮವನ್ನು ಮಾಡುವವನು ಒಂದು ಮುಖ್ಯವಾದ ರಹಸ್ಯವನ್ನು ತಿಳಿದುಕೊಂಡಿರುವುದಿಲ್ಲ. ಪ್ರಕೃತಿಯ ಗುಣಗಳಿಂದ ಮನುಷ್ಯನ ಈ ಎಲ್ಲ ಕಾರ್ಯಗಳೂ ನಡೆಯುತ್ತಿವೆ. ಪ್ರಕೃತಿಯ ಗುಣಗಳೆಂದರೆ ಸತ್ತ್ವ, ರಜಸ್ಸು ಮತ್ತು ತಮಸ್ಸು. ಈ ಮೂರು ಗುಣಗಳೇ ಭವಬಂಧನಕ್ಕೂ ಕಾರಣಗಳಾಗಿವೆ. ಮನುಷ್ಯನ ಪೂರ್ವ ಕರ್ಮಫಲಾನುಸಾರವಾಗಿ ಈ ಪ್ರಕೃತಿಗುಣಗಳು ದೇಹಿಯಲ್ಲಿ ಸೇರಿಕೊಳ್ಳುತ್ತವೆ. ಈ ಗುಣಗಳೇ ಮನುಷ್ಯನನ್ನು ಆಟವಾಡಿಸುತ್ತವೆ. ಈ ಗುಣಗಳಿಂದ ಮನುಷ್ಯನು ಸ್ವತಂತ್ರನಾಗಿರುವುದಿಲ್ಲ. ಅವು ಕುಣಿಸಿದಂತೆ ಕುಣಿಯುತ್ತಿರುತ್ತಾನೆ. ಆದರೆ ಜನ್ಮಾಂತರದ ವಾಸನೆಯಿಂದ ಅಂಟಿಕೊಂಡು ಬಂದಿರುವ ಈ ಸತ್ತ್ವ, ರಜಸ್ಸು ಮತ್ತು ತಮೋಗುಣಗಳು ತನ್ನ ವ್ಯವಹಾರಕ್ಕೆ ಕಾರಣವೆಂದು ಅವನು ಭಾವಿಸುವುದಿಲ್ಲ. ಅಹಂಕಾರದಿಂದ (ದೇಹಾತ್ಮಬುದ್ಧಿಯಿಂದ) 'ನಾನೇ ಮಾಡುವವನು' ಎಂದು ಭಾವಿಸುತ್ತಾನೆ.

ಆದರೆ ಅರ್ಜುನ! ತತ್ತ್ವಜ್ಞನಾದ ಆತ್ಮಾನಾತ್ಮವಿವೇಕವುಳ್ಳ ಜ್ಞಾನಿಯು ಹಾಗೆ ಭಾವಿಸುವುದಿಲ್ಲ.

**ಪ್ರಕೃತೇಃ ಗುಣೈಃ** ಎಂಬುದಕ್ಕೆ ಇಂದ್ರಿಯವೇ ಮುಂತಾದುವುಗಳಿಂದ–ಎಂದು ಶ್ರೀಮಧ್ವಾಚಾರ್ಯರು ಅರ್ಥಮಾಡಿದ್ದಾರೆ. ಪ್ರಕೃತಿಯ ದೃಷ್ಟಿಯಿಂದ ಗುಣಭೂತಗಳು. (ಅಪ್ರಧಾನವಾಗಿರುವುದರಿಂದ ಅವುಗಳನ್ನು ಗುಣಗಳೆಂದು ಕರೆದಿದೆ–ಎಂದು ಅವರು ಉಪಪತ್ತಿಯನ್ನು ಹೇಳುತ್ತಾರೆ.)

**ಕರ್ತಾ ಅಹಂ**–ಜೀವನಿಗೂ ಕರ್ತೃತ್ವವಿದೆಯಲ್ಲವೇ?–ಎಂದರೆ ಅವನು ಪ್ರತಿಬಿಂಬವಾದುದರಿಂದ ಅವನಿಗೆ ಸ್ವತಂತ್ರವಾದ ಕರ್ತೃತ್ವವಿಲ್ಲ. **ನ ಹಿ ಪ್ರತಿಬಿಂಬಸ್ಯ ಕ್ರಿಯಾ**–ಎಂದೂ ಅವರು ಹೇಳುತ್ತಾರೆ.)

**ಓಂ ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।**
**ಗುಣಾ ಗುಣೇಷು ವರ್ತನ್ತ ಇತಿ ಮತ್ವಾ ನ ಸಜ್ಜತೇ ॥೨೮॥**

ಮಹಾಬಾಹೋ! ಅರ್ಜುನ! ಗುಣಗಳ ವಿಭಾಗದ ಮತ್ತು ಕರ್ಮಗಳ ವಿಭಾಗದ ತತ್ತ್ವಜ್ಞಾನಿಯಾದರೋ ಗುಣಗಳು ಗುಣಗಳಲ್ಲಿ ಪ್ರವರ್ತಿಸುತ್ತಿರುತ್ತವೆ–ಎಂದು ತಿಳಿದು ಆಸಕ್ತನಾಗದೇ ಇರುತ್ತಾನೆ.

* * *

(ತತ್ತ್ವವಿತ್ ಎಂದರೆ ಅದು ಹೇಗಿದೆಯೋ ಹಾಗೆ ಆ ಮೂಲಸ್ವರೂಪ ವನ್ನು ಯಥಾವತ್ತಾಗಿ ತಿಳಿದುಕೊಳ್ಳುವವನು. ಕೇವಲ ತೋರುವುದನ್ನೇ ಸತ್ಯ ವೆಂದು ಭಾವಿಸದೇ ಇರುವವನು. ಸತ್ತ್ವರಜಸ್ತಮೋಗುಣಗಳ ಆಧಿಕ್ಯದ ಮೂಲಕ ಆದ ವಿಭಾಗದ ಮತ್ತು ಆ ಗುಣಗಳಿಂದುಂಟಾಗುವ ಕರ್ಮವಿಭಾ ಗದ ತತ್ತ್ವವನ್ನು ತಿಳಿದಿರತಕ್ಕವನು, ಸತ್ತ್ವರಜಸ್ತಮೋಗುಣಗಳು–ಆ ಗುಣಗಳ ಕಾರ್ಯಭೂತವಾದ ವ್ಯಾಪಾರಗಳಲ್ಲಿ ಇರುತ್ತವೆಯೆಂಬುದನ್ನು ತಿಳಿದು ಅವು ಗಳೊಂದಿಗೆ ಸಂಬಂಧವಿಟ್ಟುಕೊಳ್ಳುವುದಿಲ್ಲ. ಗುಣಕರ್ಮವಿಭಾಗ ಎಂದರೆ ಗುಣವಿಭಾಗ ಮತ್ತು ಕರ್ಮವಿಭಾಗ–ಎಂದು ಇಟ್ಟುಕೊಳ್ಳಬೇಕು. ಗುಣಾಧಿಕ್ಯ ಭೇದ ಎಂದರೆ ಸತ್ತ್ವಗುಣವು ಹೆಚ್ಚಾಗಿದ್ದು ರಜೋಗುಣವು ಕಡಿಮೆಯಾಗಿರು ವುದು. ರಜೋಗುಣವು ಹೆಚ್ಚಾಗಿದ್ದು ತಮೋಗುಣವು ಕಡಿಮೆಯಾಗಿರುವುದು. ತಮೋಗುಣವು ಹೆಚ್ಚಾಗಿದ್ದು ರಜೋಗುಣವು ಕಡಿಮೆಯಾಗಿರು ವುದು–ಇತ್ಯಾದಿ. ಈ ಗುಣಾಧಿಕ್ಯಭೇದದಿಂದ ಸತ್ಕರ್ಮ-ದುಷ್ಕರ್ಮಗಳು ನಡೆ ಯುತ್ತವೆ. ಈ ರೀತಿಯಾಗಿ ತಿಳಿದುಕೊಂಡು ಗುಣಾಧಿಕ್ಯಭೇದದಿಂದುಂಟಾದ ಸುಕೃತ-ದುಷ್ಕೃತಕರ್ಮಗಳಲ್ಲಿ ಯಾವ ವಿಧವಾದ ಮಮತೆಯನ್ನೂ ಇಟ್ಟು ಕೊಳ್ಳದೇ ಈ ಆತ್ಮನು ತಾನು ಮಾಡಿದ ಸುಕೃತ-ದುಷ್ಕೃತಗಳಿಗೆ ಅನುಸಾರ ವಾಗಿ ಸಾತ್ತ್ವಿಕ, ರಾಜಸ ಮತ್ತು ತಾಮಸಗುಣಗಳ ಆಧಿಕ್ಯವುಂಟಾಗಿ ತದನು ಸಾರವಾಗಿ ಶರೀರದ ಮೂಲಕ ಪ್ರವೃತ್ತಿಗಳುಂಟಾಗುತ್ತವೆಯೇ ಹೊರತು ತನ್ನ ಪರಿಶುದ್ಧಸ್ವರೂಪದಿಂದ ಉಂಟಾದುವಲ್ಲವೆಂದು ತಿಳಿದು ಆ ಕರ್ಮಗಳಲ್ಲಿ ತನಗೆ ಕರ್ತೃತ್ವದ ಸಂಬಂಧವಿಲ್ಲವೆಂದು ಭಾವಿಸುವನು. ತತ್ತ್ವಜ್ಞಾನಿಗೂ ಸಹ ಪೂರ್ವಾರ್ಜಿತವಾದ ಸತ್ತ್ವರಜಸ್ತಮೋಗುಣಗಳ ಪ್ರಚೋದನೆಯು ಬಿಟ್ಟಿದ್ದಲ್ಲ. ಈ ಮೂರು ಗುಣಗಳಲ್ಲಿ ಯಾವುದೋ ಒಂದು ಹೆಚ್ಚಿನ ಪರಿಣಾಮದಲ್ಲಿದ್ದ ಕಾರಣದಿಂದಲೇ ಅವನಿಗೆ ಜನ್ಮವು ಬಂದಿರುತ್ತದೆ. ಗುಣಗಳೇ ಇಲ್ಲದಿದ್ದರೆ ಜನ್ಮವೇ ಇಲ್ಲ. ಹಿಂದೊಮ್ಮೆ ಶ್ರೀಕೃಷ್ಣನು, 'ನಿಸ್ತ್ರೈಗುಣ್ಯೋ ಭವಾರ್ಜುನ ತ್ರಿಗುಣಾತೀತನಾಗು'–ಎಂದು ಹೇಳಿದ್ದನು. ಆದುದರಿಂದ ಗುಣಾತೀತನಾಗು ವವರೆಗೂ ಜನ್ಮಾಂತರಗಳು ತಪ್ಪಿದ್ದಲ್ಲ. ತತ್ತ್ವವಿದನಲ್ಲಿಯೂ (ಜ್ಞಾನಿ) ಈ ಮೂರು ಗುಣಗಳಲ್ಲಿ ಯಾವುದೋ ಒಂದು ಗುಣವು ಆಧಿಕ್ಯದಿಂದ ಇದ್ದೇ ಇರುತ್ತದೆ. ಶುದ್ಧಸತ್ತ್ವವಾಗಲೀ, ಶುದ್ಧರಾಜಸವಾಗಲೀ, ಶುದ್ಧತಾಮಸ

ವಾಗಲೀ ಇರಲು ಸಾಧ್ಯವಿಲ್ಲ. ಒಂದು ಗುಣವು ಹೆಚ್ಚಾಗಿರುತ್ತದೆ. ಅದರ ಹತ್ತಿರದ ಮತ್ತೊಂದು ಗುಣವು ಕಡಿಮೆಪ್ರಮಾಣದಿಂದಿರುತ್ತದೆ. ಈ ಗುಣ ಗಳು ಅವುಗಳ ಯೋಗ್ಯತೆಗೆ ತಕ್ಕಂತೆ ದೇಹಿಯಿಂದ ಕರ್ಮಗಳನ್ನು ಮಾಡಿ ಸಿಯೇ ತೀರುತ್ತವೆ. ಪೂರ್ವಜನ್ಮದ ವಾಸನೆಯಿಂದ ಯಾವುದೋ ಗುಣವು ತನ್ನ ಮನಸ್ಸಿನಲ್ಲಿ ಅಥವಾ ಇಂದ್ರಿಯಗಳಲ್ಲಿ ಸೇರಿಕೊಂಡು ಆ ಗುಣಗಳಿಗೆ ಅನುಗುಣವಾದ ಕರ್ಮಗಳನ್ನು ಇಂದ್ರಿಯಗಳ ಮೂಲಕ ಮಾಡಿಸುತ್ತಿದೆ– ಎಂಬುದನ್ನು ತತ್ತ್ವನಿರತನಾದ ಆತ್ಮಾನಾತ್ಮವಿವೇಕವುಳ್ಳ ಜ್ಞಾನಿಯು ಅರಿತು ಕೊಳ್ಳುತ್ತಾನೆ. ಗುಣಗಳಲ್ಲಾಗಲೀ, ಅವುಗಳ ಪ್ರಚೋದನೆಯಿಂದ ನಡೆದ ಕರ್ಮಗಳಲ್ಲಾಗಲೀ ಅವನು ಆಸಕ್ತಿಯನ್ನು ವಹಿಸುವುದಿಲ್ಲ. ಈ ಗುಣ-ಕರ್ಮಗಳು ತನಗೆ ಸಂಬಂಧಿಸಿಲ್ಲವೆಂದು ಭಾವಿಸುತ್ತಾನೆ. ಗುಣಗಳ ಪ್ರಚೋ ದನೆಯಿಂದಾಗಿ ಶರೀರದ ಮೂಲಕ ಆದ ಕರ್ಮಫಲದಲ್ಲಿಯೂ ಉದಾಸೀನ ನಾಗಿದ್ದುಬಿಡುತ್ತಾನೆ. 'ನನ್ನಲ್ಲಿ ವಾಸನಾರೂಪವಾಗಿ ಅಡಗಿಕೊಂಡಿರುವ ಇಂತಹ ಗುಣದಿಂದ ಈ ಕಾರ್ಯ ನಡೆಯಿತು' ಎಂದು ಅವನು ಹೇಳಿಕೊಳ್ಳ ದಿದ್ದರೂ 'ದೈವೇಚ್ಛೆಯಿಂದ ನಡೆಯಿತು' ಇಷ್ಟುಮಾತ್ರವಾದರೂ ಹೇಳುತ್ತಾನೆ. 'ನಾನು ಈ ಕಾರ್ಯಮಾಡಿದೆ' ಎಂದು ಒಮ್ಮೆ ತಪ್ಪಿಯೂ ಹೇಳುವುದಿಲ್ಲ. ಈ ಕಾರಣದಿಂದ ಪೂರ್ವಜನ್ಮದ ವಾಸನಾರೂಪವಾಗಿ ಬಂದ ಗುಣಗಳ ಪ್ರಚೋದನೆಯಿಂದ ನಡೆದ ಕರ್ಮದ ಫಲದಲ್ಲಿ ಅವನಿಗೆ ಸ್ವಲ್ಪವಾದರೂ ಆಸಕ್ತಿಯಿರುವುದಿಲ್ಲ. ಈ ತತ್ತ್ವವನ್ನು ತಿಳಿದವನು ನಿರಾಸಕ್ತನಾಗಿ ಫಲಾಭಿ ಸಂಧಿಯಿಲ್ಲದೇ ಕರ್ಮಮಾಡುತ್ತಾನೆ.

**ಗುಣಾ ಗುಣೇಷು ವರ್ತನ್ತೇ** ಕರಣಾತ್ಮಕವಾದ ಗುಣಗಳು ವಿಷ ಯಾತ್ಮಕವಾದ ಗುಣಗಳಲ್ಲಿ ವರ್ತಿಸುತ್ತಿವೆ. (ಕರಣ ಎಂದರೆ ಬುದ್ಧಿ, ಅಹಂ ಕಾರ, ಮನಸ್ಸು ಮತ್ತು ಜ್ಞಾನೇಂದ್ರಿಯ-ಕರ್ಮೇಂದ್ರಿಯಗಳು. ಕಾರ್ಯ ಎಂದರೆ ಪಂಚಭೂತಗಳು ಮತ್ತು ತನ್ಮಾತ್ರಗಳು.) (ಶಂ.ಭಾ.)

ಸತ್ತ್ವವೇ ಮುಂತಾದ ಗುಣಗಳು ತಮ್ಮ ಕೆಲಸದಲ್ಲೇ ತೊಡಗಿವೆ.) (ಮ.ಭಾ.)

**ಓಂ ಪ್ರಕೃತೇರ್ಗುಣಸಮ್ಮೂಢಾಃ ಸಜ್ಜನ್ತೇ ಗುಣಕರ್ಮಸು ।**
**ತಾನಕೃತ್ಸ್ನವಿದೋ ಮನ್ದಾನ್ಕೃತ್ಸ್ನವಿನ್ನ ವಿಚಾಲಯೇತ್ ॥೨೯॥**

ಪ್ರಕೃತಿಯ ಗುಣಗಳಿಂದ ಮೋಹಿತರಾಗಿರುವವರು ಗುಣಗಳ ಕರ್ಮಗಳಲ್ಲಿ ಆಸಕ್ತರಾಗಿರುತ್ತಾರೆ. ಎಲ್ಲವನ್ನೂ ಅರಿಯದ ಆ ಮಂದಬುದ್ಧಿಗಳನ್ನು ಎಲ್ಲವನ್ನೂ ತಿಳಿದಾತನು ಅಲುಗಾಡಿಸಬಾರದು.

* * *

(ವಾಸನಾರೂಪವಾಗಿ ಯಾವುದೋ ಗುಣವು ಈ ಶರೀರವನ್ನು ಅಂಟಿಕೊಂಡಿದೆ ಮತ್ತು ಅದು ತನ್ನ ಕೆಲಸವನ್ನು ಈ ಶರೀರದ ಮೂಲಕ ಮಾಡಿಸಿಕೊಂಡು ಹೋಗುತ್ತದೆ–ಎಂಬ ತಿಳಿವಳಿಕೆಯಿಲ್ಲದ, ಪ್ರಕೃತಿಯ ಸತ್ತ್ವರಜಸ್ತಮೋಗುಣಗಳಿಂದ ಸಮ್ಮೂಢರಾದ ಜನರು ಸತ್ತ್ವವೇ ಮುಂತಾದ ಗುಣಗಳಲ್ಲಿಯೂ–ಆ ಗುಣಗಳಿಂದ ಹುಟ್ಟಿದ ಕರ್ಮಗಳಲ್ಲಿಯೂ ಬೆರೆತುಕೊಂಡು ಬಿಟ್ಟಿರುತ್ತಾರೆ. 'ನಾನು ಈ ವ್ರತಮಾಡಿದೆ' ಎನ್ನುತ್ತಾರೆ. ನನ್ನಲ್ಲಿರುವ ರಜೋಗುಣವು ಈ ವ್ರತಮಾಡಿಸಿತು–ಎಂದು ಭಾವಿಸಲು ಅವರಿಂದ ಸಾಧ್ಯವಾಗುವುದೇ ಇಲ್ಲ. 'ಇಂತಹ ಫಲಕ್ಕಾಗಿ ಇಂತಹ ಕರ್ಮಮಾಡಿದೆ' ಎನ್ನುತ್ತಾರೆ. ಫಲವನ್ನು ಬಿಟ್ಟು ಕರ್ಮಮಾಡಲು ಅವರಿಂದ ಸಾಧ್ಯವಾಗದು. ಫಲವನ್ನು ಬಿಟ್ಟು ಕರ್ಮಮಾಡುವುದೆಂದರೇನೆಂಬುದೇ ಅವರಿಗೆ ತಿಳಿಯದು. ಅವರಲ್ಲಿ ವಾಸನಾರೂಪವಾಗಿರುವ ಗುಣಗಳ ಪ್ರಭಾವವೇ ಇದಕ್ಕೆ ಕಾರಣ. ಅವರು ಗುಣಗಳೊಂದಿಗೆ ತಾದಾತ್ಮ್ಯವನ್ನು ಹೊಂದಿರುತ್ತಾರೆ. ಆತ್ಮನ ವಿಷಯದಲ್ಲಿ ತಿಳಿವಳಿಕೆಯಿಲ್ಲದ ಅಂತಹ ಮೂಢರನ್ನು ಆತ್ಮಾನಾತ್ಮವಿವೇಕವುಳ್ಳವನು ಬದಲಿಸಲು ಪ್ರಯತ್ನಿಸಬಾರದು. ಅವನು ಹೋಗುತ್ತಿರುವ ಹಾದಿಗೆ ಅಡ್ಡಹಾಕಬಾರದು. ಕಾಮ್ಯಕರ್ಮಗಳೇ ಆದರೂ ಅವನ್ನು ಶ್ರದ್ಧೆಯಿಂದ ಮಾಡುವಂತೆ ಪ್ರೋತ್ಸಾಹಿಸಬೇಕು. ಅವರಿಗೆ ಬುದ್ಧಿಯು ಚಲಿಸುವಂತೆ ಮಾಡಬಾರದು.

ಕರ್ಮಠನಾದವನಿಗೂ ಕೆಲವು ಸಮಯಗಳಲ್ಲಿ ವೈರಾಗ್ಯವು ಬರುವುದುಂಟು. ಉದಾಹರಣೆಗೆ : ಶ್ಮಶಾನವೈರಾಗ್ಯ, ಪುರಾಣವೈರಾಗ್ಯ, ಪ್ರಸೂತಿವೈರಾಗ್ಯ–ಮುಂತಾದುವು. ಆ ಸಮಯದಲ್ಲಿ ಪ್ರಪಂಚವೇ ಬೇಡವೆನಿಸಬಹುದು. ಆದರೆ ಅದು ಕ್ಷಣಿಕವಾದುದು. ತತ್ಕಾಲದಲ್ಲಿ ಮಾತ್ರವಿರುತ್ತದೆ. ಆ ಸಮಯದಲ್ಲಿ ವೈರಾಗ್ಯದ ಮಾತನಾಡಿದ್ದರಿಂದ ವೇದಾಂತಿಯೆಂದು ಭಾವಿಸಬಾರದು ; ಅಥವಾ ವೇದಾಂತವನ್ನು ಬೋಧಿಸಲು ಹೋಗಬಾರದು. 'ಕೇಳಿ

ದಾಗಲೇ ಹೇಳಬಾರದು ಪರಬ್ರಹ್ಮವಿದ್ಯೆಯಾ'–ಎಂದು ಪುರಂದರದಾಸರು ಹಾಡಿದ್ದಾರೆ. ಪರಬ್ರಹ್ಮವಿದ್ಯೆಗೆ ಮನಸ್ಸು ಹಣ್ಣಾಗಬೇಕು. ಕರ್ಮಮಾರ್ಗವೂ ಜ್ಞಾನಕ್ಕೆ ಹಾದಿಯೇ ಸರಿ. ಆದುದರಿಂದ ಜ್ಞಾನಿಯಾದವನು ಕರ್ಮಮಾರ್ಗದಲ್ಲಿರುವವರನ್ನು ಹಂಗಿಸಲೂ ಹೋಗಬಾರದು. ಅವರ ಮಾರ್ಗಕ್ಕೆ ಅಡ್ಡ ಹಾಕಲೂ ಪ್ರಯತ್ನಿಸಬಾರದು.

**ಅಕೃತ್ಸ್ನವಿತ್** ಎಂದರೆ ಪೂರ್ಣರೂಪದಿಂದ ನೋಡದವನು. ಕರ್ಮದ ಫಲವನ್ನು ಮಾತ್ರ ನೋಡುವವನು. **ಕೃತ್ಸ್ನವಿತ್** ಎಂದರೆ ಎಲ್ಲವನ್ನೂ ಬಲ್ಲವನೂ ಎಂದರೆ ಯಾವುದನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುತ್ತದೆಯೋ ಅಂತಹ ಪರಮಾತ್ಮನನ್ನು ಬಲ್ಲವನು. (ಶಂ.ಭಾ.)

**ಗುಣಕರ್ಮಸು** = ವಿಷಯಗಳಲ್ಲಿ ಮತ್ತು ಕರ್ಮಗಳಲ್ಲಿ (ಮ.ಭಾ.)

**ಗುಣಕರ್ಮಸು** = ಕ್ರಿಯೆಗಳಲ್ಲಿ ) (ರಾ.ಭಾ.)

**ಓಂ ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥೩೦॥**

ನನ್ನಲ್ಲಿ ಎಲ್ಲ ಕರ್ಮಗಳನ್ನೂ ಅಧ್ಯಾತ್ಮಚಿತ್ತದಿಂದ ಸಂನ್ಯಾಸಮಾಡಿ ಆಶಾರಹಿತನಾಗಿ, ಮಮತಾರಹಿತನಾಗಿ, ಸಂತಾಪರಹಿತನಾಗಿ ಯುದ್ಧಮಾಡು.

* * *

(ಶ್ರೀಕೃಷ್ಣನು ಅನಾಸಕ್ತನಾಗಿ ಕರ್ಮಮಾಡುವವನಿಗೆ ಇಲ್ಲಿ ಒಂದು ಅವಲಂಬನೆಯನ್ನು ಸೂಚಿಸಿದ್ದಾನೆ. ನನ್ನಲ್ಲಿ ಎಂದರೆ ಸರ್ವಜ್ಞನೂ ಸರ್ವಾಂತರ್ಯಾಮಿಯೂ ಆದ ಪರಮಪುರುಷನಾದ ವಾಸುದೇವನಲ್ಲಿ ಎಲ್ಲ ಕರ್ಮಗಳನ್ನೂ ವಿವೇಕಬುದ್ಧಿಯಿಂದ ಇಡು–ಎನ್ನುತ್ತಾನೆ. ಎಂದರೆ ಕರ್ಮಗಳನ್ನೆಲ್ಲ ಅವನಿಗೆ ಒಪ್ಪಿಸಿಬಿಡುವುದಲ್ಲ. ಕರ್ಮಫಲವನ್ನು ಅವನಿಗೆ ಒಪ್ಪಿಸುವುದು. 'ನಾನು ಕರ್ಮಗಳನ್ನು ಈಶ್ವರಪ್ರೀತಿಗಾಗಿ ಮಾಡುತ್ತೇನೆ. ನನಗಾಗಿ ಮಾಡುವುದಿಲ್ಲ. ಕರ್ಮಫಲವೂ ನನಗೆ ಬೇಕಾಗಿಲ್ಲ. ಈಶ್ವರಪ್ರೀತಿಗಾಗಿ ಕರ್ಮಗಳನ್ನು ಮಾಡುತ್ತೇನೆ. ಕರ್ಮಫಲವೂ ಅವನಿಗೇ ಸಮರ್ಪಿತವಾಗಲಿ'–ಎಂಬ ಅಧ್ಯಾತ್ಮಬುದ್ಧಿಯಿಂದ, ಪರಮಾತ್ಮಾರ್ಪಿತವಾಗಲೆಂಬ ಬುದ್ಧಿಯಿಂದ ಅಥವಾ ವಿವೇಕಬುದ್ಧಿಯಿಂದ ಎಲ್ಲ ಕರ್ಮಗಳನ್ನೂ ನನಗರ್ಪಿಸು–ಎನ್ನುತ್ತಾನೆ ಶ್ರೀಕೃಷ್ಣ. ಆಶೆಯನ್ನು ಬಿಟ್ಟುಬಿಡು. 'ನಾನು ಮಾಡುತ್ತೇನೆ. ಇದು

ನನ್ನದು'–ಎಂಬ ಮಮಕಾರವನ್ನು ಬಿಟ್ಟುಬಿಡು. ಹೀಗೆ ಮಾಡಿದರೆ ಜ್ವರ ಎಂದರೆ ಉದ್ವೇಗ, ಪರಿತಾಪ, ದುಃಖ–ಇವು ಇರುವುದಿಲ್ಲ. 'ನಾನು–ನನ್ನದು' ಎಂಬ ಅಂಟಿನಿಂದ ಕೆಲಸಮಾಡುತ್ತಿದ್ದರೆ–ಕೆಲಸವಾದರೆ ಸಂತೋಷ ವಾಗುವುದು ; ಕೆಲಸವಾಗದಿದ್ದರೆ ದುಃಖವೂ ಆಗುವುದು. ನಾವು ಒಂದು ಕಾರ್ಖಾನೆಯಲ್ಲಿ ಕೆಲಸಮಾಡುತ್ತಿರುತ್ತೇವೆ. ತಿಂಗಳಿಗೊಮ್ಮೆ ವೇತನವು ನಮಗೆ ಸಿಕ್ಕುತ್ತದೆ. ಅಷ್ಟು ಹೊರತಾಗಿ ಕಾರ್ಖಾನೆಯ ಯಜಮಾನನಿಗೆ ಆಗುವ ಲಾಭ-ನಷ್ಟಗಳಿಂದ ನಮಗೆ ಸಂತೋಷವಾಗಲೀ–ದುಃಖವಾಗಲೀ ಉಂಟಾಗುವುದಿಲ್ಲ. ಏಕೆಂದರೆ : ನಾವದನ್ನು ನಮ್ಮ ಮನಸ್ಸಿಗೆ ಅಂಟಿಸಿ ಕೊಂಡಿಲ್ಲ. ಅದೇ ರೀತಿಯಲ್ಲಿ ನಾನು ಮಾಡುವ ಕಾರ್ಯವೆಲ್ಲವೂ ಪರ ಮಾತ್ಮನದು. ಅದರ ಫಲಾಫಲಗಳೆರಡೂ ನನಗೆ ಸಂಬಂಧಿಸಿದ್ದಲ್ಲ. ಶ್ರದ್ಧೆ ಯಿಂದ ಅವನ ಕಾರ್ಯಮಾಡುವುದೊಂದೇ ನನ್ನ ಕರ್ತವ್ಯ–ಎಂದು ಭಾವಿಸಿ ದರೆ ; ಈ ವಿಷಯವನ್ನು ಹೃದ್ಗತಮಾಡಿಕೊಂಡರೆ ಕರ್ಮದ ಫಲಾಫಲಗಳಲ್ಲಿ ನಮಗೆ ಯಾವ ವಿಧವಾದ ಉದ್ವೇಗವಾಗಲೀ–ಹರ್ಷವಾಗಲೀ ಇರುವುದಿಲ್ಲ. ಆದುದರಿಂದ ಮಮಕಾರವನ್ನು ಸಂಪೂರ್ಣವಾಗಿ ಬಿಟ್ಟುಬಿಡಬೇಕೆಂದು ಶ್ರೀಕೃಷ್ಣನು ಹೇಳುತ್ತಾನೆ. ಮಮಕಾರವನ್ನು ಬಿಟ್ಟು ಉದ್ವೇಗರಹಿತನಾಗಿ ಪರಿ ತಾಪರಹಿತನಾಗಿ ನಿಶ್ಚಿಂತೆಯಿಂದ ಯುದ್ಧಮಾಡು. ಈ ಯುದ್ಧಕರ್ಮಫಲ ವನ್ನೂ ನೀನು ನನಗರ್ಪಿಸಿ–'ಪರಮಾತ್ಮನ ಪ್ರೀತ್ಯರ್ಥವಾಗಿ ನನ್ನ ವರ್ಣಾ ಶ್ರಮೋಕ್ತವಾದ ಈ ಯುದ್ಧವನ್ನು ಶ್ರದ್ಧೆಯಿಂದ ಮಾಡುತ್ತೇನೆ'–ಎಂದು ಭಾವಿಸಿ ಯುದ್ಧಮಾಡಿದೆಯಾದರೆ, ನೀನೀಗ ಭಾವಿಸಿರುವಂತೆ ಭೀಷ್ಮ- ದ್ರೋಣಾದಿಗಳ ಹತ್ಯೆಯಿಂದ ಯಾವ ದೋಷವೂ ನಿನಗೆ ಅಂಟುವುದಿಲ್ಲ. ನೀನು ನಿಶ್ಚಿಂತನಾಗಿರಬಹುದು. ನಿನ್ನ ಸ್ವಾರ್ಥಕ್ಕಾಗಿ ನೀನು ಯುದ್ಧಮಾಡಿದರೆ–'ಆ ದೋಷ ಬರುತ್ತದೆ ; ಈ ದೋಷ ಬರುತ್ತದೆ'–ಎಂಬ ಕಶ್ಮಲವು ನಿನ್ನ ಮನಸ್ಸಿನಲ್ಲುಂಟಾಗಬಹುದು ; ನನಗಾಗಿ (ಪರಮಾತ್ಮನಿಗಾಗಿ) ಯುದ್ಧ ಮಾಡಿದರೆ ನಿನಗಾವ ದೋಷವೂ ಅಂಟುವುದೇ ಇಲ್ಲವಲ್ಲವೇ! ವಿಹಿತ ಕರ್ಮಗಳನ್ನು ಶ್ರದ್ಧೆಯಿಂದ ಯಥಾವಿಧಿಯಾಗಿ ನಡೆಸಿ ಮೂರನ್ನೂ ತ್ಯಾಗ ಮಾಡಬೇಕು. ೧) ಪ್ರಕೃತಿಯು ಮಾಡುವುದನ್ನು ಪರಮಾತ್ಮನು ನಡೆಸುವನು-

ಎಂಬ ಅನುಸಂಧಾನದ ಮೂಲಕ–'ನಾನು ಮಾಡಲಿಲ್ಲ'–ಎಂಬ ಕರ್ತೃತ್ವ ತ್ಯಾಗ. ೨) 'ನಾನು ಯಾವಾಗ ಮಾಡಲಿಲ್ಲವೋ ಆಗ ಫಲವೂ ನನಗಿಲ್ಲ'–ಎಂಬ ಫಲತ್ಯಾಗ. ೩) 'ನಾನು ಮಾಡಲಿಲ್ಲ'–ಎಂಬುದರಲ್ಲಿ ಮಮತಾತ್ಯಾಗ.

**ಧರ್ಮಕ್ಷೇತ್ರೇ ಕುರುಕ್ಷೇತ್ರೇ** ಎಂಬ ಗೀತೆಯ ಮೊದಲನೆಯ ಶ್ಲೋಕವನ್ನು ಅನುಸಂಧಾನಮಾಡಿಕೊಂಡು ಈ ಶ್ಲೋಕಕ್ಕೆ ಮತ್ತೊಂದು ವಿಧವಾಗಿಯೂ ಅರ್ಥಮಾಡಬಹುದಾಗಿದೆ. **ಮಾಮಕಾಃ ಪಾಣ್ಡವಾಶ್ಚೈವ ಕಿಮಕುರ್ವತ ಸಂಜಯ** ಎಂಬಲ್ಲಿ ಈ ನಮ್ಮ ದೇಹವೆಂಬ ಧರ್ಮಕ್ಷೇತ್ರದಲ್ಲಿ ಮಾಮಕಗಳಾದ ಕಾಮ-ಕ್ರೋಧಾದಿಗಳಿಗೂ, ಜ್ಞಾನ-ವಿವೇಕಾದಿಗಳಿಗೂ ಮಹತ್ತಾದ ಯುದ್ಧವು ನಡೆಯುತ್ತಿರುವುದರಿಂದ ಈ ಕಾಮ-ಕ್ರೋಧಾದಿ ಗಳನ್ನು ಜ್ಞಾನ-ವಿವೇಕಗಳ ಮೂಲಕ ಜಯಿಸುವ ಯುದ್ಧದಲ್ಲಿ ಪ್ರವರ್ತಿಸು– ಎಂಬ ಧ್ವನ್ಯರ್ಥವಿದೆಯೆಂದು ಒಬ್ಬ ವಿದ್ವಾಂಸರು ಹೇಳಿರುವುದನ್ನು ಮೊದಲ ನೆಯ ಶ್ಲೋಕದ ವಿವರಣೆಯಲ್ಲಿಯೇ ಕೊಟ್ಟಿದೆ. ಮೋಕ್ಷಾರ್ಥಿಯು ಮುಖ್ಯ ವಾಗಿ ಮಾಡತಕ್ಕ ಯುದ್ಧವೇ ಇದು. ವಿಷಯಸ್ಪೃಹೆಯ ಮೂಲಕ ಈತನು ಇಂದ್ರಿಯಗಳಿಗೆ ವಶನಾಗಿ ಕಾಮಜ್ವರಾದಿಗಳಿಂದ ಪರಿತಪಿಸುತ್ತಿರುವವನು. ಆದುದರಿಂದ ಅಂತಹ ಕಾಮನೆಗಳನ್ನೆಲ್ಲವನ್ನೂ ಬಿಟ್ಟು ವಿಗತಜ್ವರನಾಗು–ಎಂದು ಸೂಚಿತವಾಗಿದೆ. **'ನಿರಾಶೀರ್ನಿರ್ಮಮೋ ಭೂತ್ವಾ'** ಮನುಷ್ಯನಿಗೆ ಅಹಂಕಾರ, ಮಮಕಾರ ಮತ್ತು ಆಸೆ–ಇವುಗಳೇ ಪರಮಶತ್ರುಗಳು. ಇವು ಗಳನ್ನು ಪರಿತ್ಯಾಗಮಾಡು (ಇವುಗಳನ್ನು ಗೆಲ್ಲು.) ವಿಷಯವೈರಾಗ್ಯವೇ ಈ ಯುದ್ಧದಿಂದ ಉಂಟಾಗತಕ್ಕ ಜಯವು. ಬಗೆ ಹೇಗೆ? **ಅಧ್ಯಾತ್ಮಚೇತಸಾ ಮಯಿ ಕರ್ಮಾಣಿ ಸಂನ್ಯಸ್ಯ**–ನನ್ನಲ್ಲಿ ಮನಸ್ಸನ್ನು ಲೀನಗೊಳಿಸು. ಇದರಿಂದ ನಿನ್ನ ವಿಜಯವು ಸಿದ್ಧಿಸುತ್ತದೆ. **ಪರಮಾತ್ಮನಿ ಯೋ ರಕ್ತಃ ವಿರಕ್ತೋಽಪರಮಾತ್ಮನಿ**–ಪರಮಾತ್ಮನಲ್ಲಿ ಅನುರಕ್ತನಾಗಿಬಿಟ್ಟರೆ ಒಡನೆಯೇ ಪರಮಾತ್ಮನಲ್ಲದ ಐಹಿಕವಿಷಯಗಳಲ್ಲಿ ವಿರಕ್ತಿಯುಂಟಾಗಿಬಿಡುತ್ತದೆ.

**ಸಂನ್ಯಸ್ಯ** = ಇರಿಸಿ : ಭಗವಂತನೇ ಎಲ್ಲ ಕರ್ಮಗಳನ್ನೂ ಮಾಡಿಸು ತ್ತಾನೆ–ಎಂಬ ಭಾವವನ್ನೂ ಮತ್ತು ಕರ್ಮಗಳೆಲ್ಲವೂ ಭಗವಂತನ ಪೂಜೆ–ಎಂಬ ಭಾವವನ್ನೂ ಇಟ್ಟುಕೊಂಡು. **ಸಂನ್ಯಾಸ** =ಭಗವಂತನು ಮಾಡು

ತ್ತಾನೆ ಎಂಬ ಭಾವನೆ. ನಿರ್ಮಮತ್ವ=ಎಂದರೆ ನಾನು ಮಾಡುವುದಿಲ್ಲ ಎಂಬ ಭಾವನೆ.) (ಮ.ಭಾ.)

**ಓಂ ಯೇ ಮೇ ಮತಮಿದಂ ನಿತ್ಯಮನುತಿಷ್ಠನ್ತಿ ಮಾನವಾಃ ।**
**ಶ್ರದ್ಧಾವನ್ತೋಽನಸೂಯನ್ತೋ ಮುಚ್ಯನ್ತೇ ತೇಽಪಿ ಕರ್ಮಭಿಃ ॥**

ಯಾವ ಜನರು ಈ ನನ್ನ ಮತವನ್ನು (ಅಭಿಪ್ರಾಯವನ್ನು) ಶ್ರದ್ಧೆಯುಳ್ಳವರಾಗಿಯೂ ಅಸೂಯಾರಹಿತರಾಗಿಯೂ ಅನುಷ್ಠಾನಮಾಡುವರೋ ಅವರು ಕರ್ಮಗಳಿಂದ ಬಿಡುಗಡೆಯನ್ನು ಹೊಂದುವರು.

* * *

(ಈ ಹಿಂದಿನ ಶ್ಲೋಕದಲ್ಲಿ ಶ್ರೀಕೃಷ್ಣನು ಅರ್ಜುನನನ್ನು ಕುರಿತು 'ನನ್ನಲ್ಲಿ ಸರ್ವಕರ್ಮಗಳನ್ನೂ ಆಧ್ಯಾತ್ಮಿಕದೃಷ್ಟಿಯ ಮೂಲಕ ಅರ್ಪಣೆಮಾಡಿ ಆಸೆಯಿಲ್ಲದೇ ನಿರ್ಮಮನಾಗಿ ಉದ್ವೇಗವಿಲ್ಲದೇ ಯುದ್ಧಮಾಡು' ಎನ್ನುತ್ತಾನೆ. ಈ ಶ್ಲೋಕದಲ್ಲವನು–'ಹೀಗೆ ಯಾರೂ ಬೇಕಾದರೂ ಮಾಡಬಹುದು. ಈ ನನ್ನ ಅಭಿಪ್ರಾಯವನ್ನು ಅಥವಾ ಸಲಹೆಯನ್ನು ಯಾರು ಬೇಕಾದರೂ ಕಾರ್ಯರೂಪಕ್ಕೆ ತರಬಹುದು. ಆದರೆ ಒಂದು ದಿವಸ ಮಾಡಿ ಮರುದಿವಸ ಬಿಡಕೂಡದು. ನಿತ್ಯವೂ ಮಾಡಬೇಕು. ಅವಿಚ್ಛಿನ್ನವಾಗಿ ಮಾಡಬೇಕು'–ಎನ್ನುತ್ತಾನೆ. ಏಕೆಂದರೆ : ಮಾನವನು ಯಾವಾಗಲೂ ಕಾರ್ಯವಾಗಬೇಕಾದಾಗ ಕತ್ತೆಯ ಕಾಲನ್ನಾದರೂ ಕಟ್ಟುತ್ತಾನೆ. ಸಂಕಟ ಬಂದಾಗ ವೆಂಕಟರಮಣನನ್ನು ನೆನೆಯುತ್ತಾನೆ.

'ಅಪ್ಪಾ! ಎಲ್ಲವೂ ನಿನ್ನದೇ ಆಗಿದೆ ಸ್ವಾಮೀ! ಉದ್ಧಾರಮಾಡು'– ಎಂದು ಅಂಗಲಾಚಿ ಬೇಡುತ್ತಾನೆ. ಸಂಕಟವು ಪರಿಹಾರವಾದನಂತರ ವೆಂಕಟರಮಣನ ಸ್ಮರಣೆಯೇ ಉಳಿಯುವುದಿಲ್ಲ. ಪುನಃ ಸಂಕಟಬಂದಾಗಲೇ ಅವನ ಸ್ಮರಣೆಯಾಗುತ್ತದೆ. ಹಾಗೆ ಮಾಡಬಾರದು–ಎನ್ನುತ್ತಾನೆ ಶ್ರೀಕೃಷ್ಣ. ಕರ್ಮವನ್ನು ಮಾಡಿ ನಾವೀಗ ಮಾಡುತ್ತಿರುವಂತೆ ಶ್ರೀಕೃಷ್ಣಾರ್ಪಣಮಸ್ತು ಎಂದುಬಿಟ್ಟರೆ ಆಗುವುದಿಲ್ಲ. ಶ್ರದ್ಧಾವಂತರಾಗಿಯೂ ಅಸೂಯಾರಹಿತರಾಗಿಯೂ ಮಾಡಬೇಕೆನ್ನುತ್ತಾನೆ.

ಇವೆರಡೂ ಅಧ್ಯಾತ್ಮಮಾರ್ಗದಲ್ಲಿ ಮುಂದುವರಿಯಲು ಎರಡು ದಾರಿದೀಪಗಳು. ಅಸೂಯೆ ಎಂಬುದು ಒಂದು ರೋಗ. ಎಂತಹ ವಿದ್ಯಾವಂತನಿಗೂ ಇದು ಬಿಟ್ಟಿದ್ದಲ್ಲ. ಅಧ್ಯಾತ್ಮಮಾರ್ಗಿಗಳಿಗೂ ಇದು ಬಿಟ್ಟಿದ್ದಲ್ಲ.

ಇಬ್ಬರು ಸಾಧಕರ ಮಧ್ಯೆ ಒಬ್ಬನು ತನ್ನ ಪ್ರಕೃತಿಗೆ ಅನುಗುಣವಾಗಿ ಮುಂದುವರಿದುಬಿಟ್ಟರೆ ಮತ್ತೊಬ್ಬನು ಅಸೂಯೆಪಡುತ್ತಾನೆ. ಈ ರೋಗವು ಉಲ್ಬಣಿಸಿತೆಂದರೆ ಮೇಲೇರುತ್ತಿರುವವನು ಪಾತಾಳಕ್ಕೆ ಬೀಳುತ್ತಾನೆ. ಅಸೂಯೆಯಿಂದ ಪ್ರಯೋಜನವೇನೂ ಆಗುವುದಿಲ್ಲ. ಇದನ್ನು ಅವನು ಮನಗಾಣುವುದಿಲ್ಲ. ಅವನಿಗೆ ತಿಳಿಯದಂತೆಯೇ ಇದು ಅವನ ಹೃದಯವನ್ನು ಹೊಕ್ಕು ಕಾರ್ಯಮಾಡಿಬಿಡುತ್ತದೆ. ಅದಕ್ಕೆ ಎಡೆಗೊಡಬಾರದು. ಇಲ್ಲಿಯೂ ಪರಮಾತ್ಮನ ಅನುಸಂಧಾನಮಾಡಬೇಕು. 'ಅವನಿಗೆ ಇಷ್ಟ ಬಂದ ದಿನ ಅವನು ನನ್ನನ್ನೂ ಕರೆಸಿಕೊಳ್ಳುತ್ತಾನೆ'–ಎಂದು ಭಾವಿಸಬೇಕು. ಪರೋತ್ಕರ್ಷಸಹಿಷ್ಣುತೆಯಿರಬೇಕು.

'ಪರಮಗುರುವಾದ ವಾಸುದೇವನಾದ ನನ್ನಲ್ಲಿ ಅಸೂಯೆಯನ್ನು ಮಾಡದೇ, ನನ್ನ ಮಾತಿನಲ್ಲಿ–ಅಭಿಪ್ರಾಯದಲ್ಲಿ ದೋಷವನ್ನೆಣಿಸದೇ' ಎಂದು ಶ್ರೀಶಂಕರರು ಅರ್ಥಮಾಡಿದ್ದಾರೆ. ಮುಂದಿನ ಶ್ಲೋಕದಲ್ಲಿ **'ಮತಮಿದಂ ಅಭ್ಯಸೂಯನ್ತಃ'** 'ನನ್ನ ಮತವನ್ನು ಅಸೂಯೆಮಾಡುವವರಾಗಿ' ಎಂದಿರುವುದರಿಂದ ಈ ಅರ್ಥವೂ ಸಮಂಜಸವಾಗಿದೆ–ಎಂದು ಅವರ ಅಭಿಪ್ರಾಯ.

ಶ್ರೀಕೃಷ್ಣನು ಶ್ರದ್ಧಾವಂತರಾಗಿರಬೇಕೆಂದು ಹೇಳಿದ್ದಾನೆ. ಶ್ರದ್ಧೆ ಎಂಬ ಪದಕ್ಕೆ ಪರ್ಯಾಯಪದವಿಲ್ಲ. ಶ್ರದ್ಧೆಯನ್ನು ಶ್ರದ್ಧೆಯೆಂದೇ ಹೇಳಬೇಕು. ಅಥವಾ ಅಶ್ರದ್ಧೆಯಿಲ್ಲದ್ದು ಶ್ರದ್ಧೆ ಎಂದು ಹೇಳಬೇಕು. ಅಂತಹ ಮಹಾರ್ಥಪೂರ್ಣವಾಗಿರುವ ಪದವೇ ಶ್ರದ್ಧಾ ಎಂಬುದು. **ಫಲಾವಶ್ಯಂಭಾವ ನಿಶ್ಚಯಃ ಶ್ರದ್ಧಾ**–ಅವಶ್ಯವಾಗಿ ಫಲವು ಲಭಿಸುವುದೆಂದು ಭಾವಿಸುವುದು ಶ್ರದ್ಧೆ. ಒಬ್ಬನಿಗೆ ಜ್ಞಾನವಿಲ್ಲದೇ ಇರಬಹುದು ; ವಿದ್ಯೆಯಿಲ್ಲದೇ ಇರಬಹುದು. ಅನಕ್ಷರಸ್ಥನಾಗಿಯೇ ಇರಬಹುದು–ಆದರೆ ಅವನು ಶ್ರದ್ಧೆಯಿಂದ ಸಾಧಿಸಬಹುದಾದ ಕಾರ್ಯವನ್ನು ಪೂರ್ಣವಿದ್ಯಾವಂತನೂ ಸಾಧಿಸಲಾರನು. ಶ್ರದ್ಧೆಗೆ ಜಾತಿ, ವರ್ಣ, ಆಶ್ರಮ, ಧರ್ಮ, ಲಿಂಗ–ಇವುಗಳ ಭೇದವಿಲ್ಲ. ಶ್ರದ್ಧೆಯಿಟ್ಟು ಯಾರೇ ಪ್ರಾರ್ಥನೆಮಾಡಿದರೂ ಪರಮಾತ್ಮನು ಓಗೊಡುತ್ತಾನೆ. ಒಬ್ಬ ವೈದ್ಯನು ರೋಗಿಗೆ ಔಷಧಿಯನ್ನು ಕೊಡುತ್ತಾನೆ. ರೋಗಿಯು ದಡ್ಡ. ಅವನಲ್ಲಿರುವ ಖಾಯಿಲೆ ಯಾವುದೆಂಬುದು ಅವನಿಗೆ

ಗೊತ್ತಿಲ್ಲ. ಔಷಧದ ಸ್ವರೂಪವಂತೂ ಪೂರ್ಣವಾಗಿ ತಿಳಿಯದು. ಆದರೂ ವೈದ್ಯನು ಕೊಟ್ಟ ಗುಳಿಗೆಯನ್ನು ಶ್ರದ್ಧೆಯಿಂದ ಸೇವಿಸುತ್ತಾನೆ. ಅವನಿಗೆ ರೋಗವು ಗುಣವಾಗುತ್ತದೆ. ಶ್ರೀರಾಮಕೃಷ್ಣರು ಶ್ರದ್ಧೆಯ ವಿಷಯವಾಗಿ ಒಂದು ಸಣ್ಣ ಕಥೆ ಹೇಳುತ್ತಿದ್ದರು. ಒಬ್ಬ ಪಂಡಿತನ ಮನೆಗೆ ಹಾಲುಮಾರುವ ಹೆಂಗಸೊಬ್ಬಳು ಪ್ರತಿನಿತ್ಯವೂ ಹಾಲನ್ನು ತಂದುಕೊಡುತ್ತಿದ್ದಳು. ಒಂದು ದಿನ ವಿಪರೀತವಾಗಿ ಮಳೆಯು ಬಂದಿತು. ಆ ದಿನ ಹಾಲು ತರುವುದು ಸ್ವಲ್ಪ ತಡವಾಯಿತು. ಪಂಡಿತನು ಏಕಿಷ್ಟು ತಡವಾಯಿತೆಂದು ಹಾಲುಮಾರುವ ಹೆಂಗಸನ್ನು ಕೇಳಿದನು. ಮಳೆಯು ಬಂದಿದ್ದರಿಂದ ತೊರೆಯಲ್ಲಿ ಪ್ರವಾಹವು ಉಕ್ಕೇರಿ ಬಂದಿತೆಂದೂ, ದಾಟಿಬರಲು ಉಕ್ಕಡವನ್ನು ಕಾಯಬೇಕಾಯಿತೆಂದೂ ಹೇಳಿದಳು. ಇವನು ಎಷ್ಟಾದರೂ ಪಂಡಿತ ತಾನೇ! ನಸುನಗುತ್ತಾ ಹಾಲಮ್ಮನನ್ನು ಕುರಿತು ಹೇಳಿದನು : 'ಹಾಲಮ್ಮ! ದೇವರ ಹೆಸರನ್ನು ಹೇಳಿಕೊಂಡು ಭವಸಾಗರವನ್ನೇ ದಾಟುತ್ತಾರೆ. ನೀನು ಈ ಸಣ್ಣ ತೊರೆಯನ್ನು ದಾಟಲಾರದೇ ಹೋದೆಯಾ?'

ಅವಳು ಚಕಿತಳಾಗಿ 'ಹಾಗಾ? ಬುದ್ಧಿ!'–ಎಂದು ಹೇಳಿ ಹೊರಟು ಹೋದಳು. ಆ ದಿನವೂ ರಾತ್ರಿ ಮಳೆ ಬಂದಿತು. ಆದರೆ ಮರುದಿನ ಸಮಯಕ್ಕೆ ಸರಿಯಾಗಿ ಹಾಲಮ್ಮನು ಪಂಡಿತನ ಮನೆಗೆ ಹಾಲನ್ನು ತಂದಳು. ಪಂಡಿತನು : 'ನಿನ್ನೆಯೂ ಮಳೆಬಂತಲ್ಲಾ ಹಾಲಮ್ಮ! ಇದೇನು? ಇಷ್ಟು ಬೇಗ ಬಂದುಬಿಟ್ಟೆ?'

'ತಾವೇ ನೆನ್ನೆ ಅಪ್ಪಣೆಕೊಡಿಸಿದ್ದರಲ್ಲಾ ಬುದ್ಧಿ! 'ದೇವರನಾಮದಿಂದ ತೊರೆಯನ್ನು ದಾಟುವುದಕ್ಕೆ ಆಗುವುದಿಲ್ಲವೇ?'–ಎಂದು. ದೇವರ ನಾಮ ಹೇಳಿಕೊಂಡು ತೊರೆಯನ್ನು ದಾಟಿಬಂದೆ.'

ಪಂಡಿತನು ಅವಾಕ್ಕಾದನು. ಪರೀಕ್ಷಿಸುವ ಸಲುವಾಗಿ ಹಾಲಮ್ಮನ ಹಿಂದೆಯೇ ಹೊರಟನು. ಹಾಲಮ್ಮನು ದೇವರನಾಮವನ್ನು ಹೇಳುತ್ತಾ ನೀರಿನ ಮೇಲೆ ನಡೆದುಕೊಂಡೇ ಹೋದಳು. ದೇವರ ಹೆಸರು ತೊರೆಯನ್ನೂ ದಾಟಿಸಬಲ್ಲುದು–ಎಂಬುದು ಪಂಡಿತನಿಗೆ ಆಗ ಅರಿವಾಯಿತು. ತಾನೂ ಸಹ ದೇವರ ಹೆಸರನ್ನು ಹೇಳಿಕೊಂಡು ತೊರೆಯನ್ನು ದಾಟಬೇಕೆಂಬ ಉತ್ಸುಕತೆಯಿಂದ ಪಂಚೆಯನ್ನು ಮೇಲೆಕಟ್ಟಿ ನೀರಿಗಿಳಿದನು. ದೇವರನಾಮವು ತೊರೆಯನ್ನು ದಾಟಿಸುವುದಕ್ಕೆ ಬದಲಾಗಿ ತೊರೆಯೇ ಅವನನ್ನು ಮುಳುಗಿಸಿತು.

ಪಂಡಿತನು ಅರಚಿಕೊಂಡು ನೀರಿನ ಮೇಲೆ ನಡೆದುಹೋಗುತ್ತಿದ್ದ ಹಾಲಮ್ಮನಿಗೆ ಹೇಳಿದನು :

'ದೇವರನಾಮವು ನಿನ್ನನ್ನು ನೀರಿನಲ್ಲಿ ತೇಲಿಸುತ್ತಿದೆ. ನನ್ನನ್ನೇಕೆ ಮುಳುಗಿಸುತ್ತಿದೆ?'

ಹಾಲಮ್ಮನು ಹಿಂದಿರುಗಿ ನಸುನಗುತ್ತಾ ಹೇಳಿದಳು :

'ದೇವರ ಹೆಸರನ್ನು ಹೇಳಿ ಪಂಚೆಯನ್ನು ಮೇಲಕ್ಕೆತ್ತುತ್ತಿದ್ದರೆ ಮುಳುಗದೇ ಇನ್ನೇನು?'

ಪಂಡಿತನಿಗೆ ವಿದ್ಯೆ, ಬುದ್ಧಿ ಎಲ್ಲವೂ ಇತ್ತು. ಶ್ರದ್ಧೆಯಿರಲಿಲ್ಲ. ಹಾಲಮ್ಮನಿಗೆ ಶ್ರದ್ಧೆಯೊಂದೇ ಇತ್ತು. ಅವಳು ತೊರೆಯನ್ನು ದಾಟಿಯೇ ಬಿಟ್ಟಳು. ಆದುದರಿಂದ ವಿದ್ಯೆಯಿರಲಿ–ಇಲ್ಲದಿರಲಿ, ಜ್ಞಾನವಿರಲಿ–ಇಲ್ಲದಿರಲಿ ಶ್ರದ್ಧೆಯಿದ್ದೇ ಇರಬೇಕು. ಹೀಗೆ ಶ್ರದ್ಧೆಯಿದ್ದವನೂ ಅಸೂಯೆಯಿಲ್ಲದವನೂ ಕರ್ಮಗಳಿಂದ ವಿಮುಕ್ತನಾಗುತ್ತಾನೆ.

ಸಾಧಕನಿಗೆ ಶ್ರದ್ಧೆಯು ಅತ್ಯಂತಾವಶ್ಯಕವಾದುದರಿಂದ ನೂರಾರು ತಾಯಿ-ತಂದೆಗಳಿಗಿಂತಲೂ ನಮ್ಮಲ್ಲಿ ಹೆಚ್ಚು ವಾತ್ಸಲ್ಯವುಳ್ಳ ಶ್ರುತಿಮಾತೆಯು 'ಶ್ರದ್ಧತ್ಸ್ವ ಸೌಮ್ಯ'–ಎಂದು ಉಪದೇಶಿಸುತ್ತಾಳೆ.

ಶ್ರದ್ಧೆಯಿಲ್ಲದಿದ್ದವನು ಕಾರ್ಯದಲ್ಲಿ ತೊಡಗುವುದಿಲ್ಲ. ಹಾಗೆ ತೊಡಗದವನಿಗೆ ಕಾರ್ಯವು ಸಿದ್ಧಿಯಾಗುವುದಿಲ್ಲ.

**ಶ್ರದ್ಧಾವಿಹೀನಸ್ಯ ನ ತು ಪ್ರವೃತ್ತಿಃ**
**ಪ್ರವೃತ್ತಿಹೀನಸ್ಯ ನ ಸಾಧ್ಯಸಿದ್ಧಿಃ ।**

ದೈವ, ವೇದ, ಗುರು, ಮಂತ್ರ, ತೀರ್ಥ, ಮಹಾತ್ಮ ಮತ್ತು ಔಷಧ ಇವುಗಳನ್ನು ಸೇವಿಸುವಾಗ ಶ್ರದ್ಧೆಯು ಒಳಗೆ ಹೆಚ್ಚಿದಷ್ಟೂ ಸಿದ್ಧಿಯು ಶೀಘ್ರವಾಗಿ ಮತ್ತು ಸುಲಭವಾಗಿ ಕೈಗೂಡುತ್ತದೆ.

**ದೈವೇ ಚ ವೇದೇ ಚ ಗುರೌ ಚ ಮನ್ತ್ರೇ**
**ತೀರ್ಥೇ ಮಹಾತ್ಮನ್ಯಪಿ ಭೇಷಜೇ ಚ ।**
**ಶ್ರದ್ಧಾ ಭವೇದ್ಯಸ್ಯ ಯಥಾ ಯಥಾನ್ತಃ**
**ತಥಾ ತಥಾ ಸಿದ್ಧಿರುದೇತಿ ಪುಂಸಾಮ್ ॥**

ಎಂಬ ಶ್ರೀಶಂಕರಭಗವತ್ಪಾದರ ಸೂಕ್ತಿಯನ್ನು ಇಲ್ಲಿ ಸ್ಮರಿಸಬಹುದು.

ಆದರೆ ಶ್ರದ್ಧೆಯು ಅಂಧಶ್ರದ್ಧೆಯಾಗಬಾರದು. ಶ್ರದ್ಧೆಯಿಂದ ಆರಂಭಿಸಿದ ಕಾರ್ಯವು ಸರಿಯಾಗಿದೆಯೇ ಎಂಬುದನ್ನು ಪರೀಕ್ಷಿಸುತ್ತಾ ಫಲಸಿದ್ಧಿಯ ವರೆಗೂ ಕಾರ್ಯವನ್ನು ಅನುಷ್ಠಾನಮಾಡಬೇಕು.

ಆರಂಭದಲ್ಲಿ ಶ್ರದ್ಧೆಯಿರದಿದ್ದರೆ ಕಾರ್ಯವು ಸಿದ್ಧಿಸುವುದು ಕಷ್ಟ–ಎಂಬುದಕ್ಕೆ ಶ್ರೀರಂಗಮಹಾಗುರುಗಳು ಎರಡು ಉದಾಹರಣೆಗಳನ್ನು ಕೊಡು ತ್ತಿದ್ದರು.

ಐದರಲ್ಲಿ ಎರಡು ಹೋದರೆ ಮೂರು ಉಳಿಯುತ್ತದೆ–ಎಂಬುದನ್ನು ಬೋಧಿಸುವುದಕ್ಕೋಸ್ಕರ ಉಪಾಧ್ಯಾಯರು ಬಾಲಕನನ್ನು–'ನಿನ್ನಲ್ಲಿರುವ ಐದು ರೂಪಾಯಿಗಳಲ್ಲಿ ನನಗೆ ಎರಡು ರೂಪಾಯಿಗಳನ್ನು ಕೊಡು'– ಎಂದು ಹುಡುಗನನ್ನು ಕೇಳಿದಾಗ ಆತನು–'ನಿಮಗೇಕೆ ಹಣ ಕೊಡಬೇಕು? ಫೀಸು ಕೊಟ್ಟಾಯಿತಲ್ಲಾ'–ಎಂದು ಹಠಮಾಡಿದರೆ ಉಪಾಧ್ಯಾಯರ ಪಾಠವು ಅವನಿಗೆ ತಿಳಿಯುವುದು ಕಷ್ಟವಾಗುತ್ತದೆ.

ಗಣಿತಶಾಸ್ತ್ರದ ಕೆಲವು ಲೆಕ್ಕಗಳಲ್ಲಿ ಉತ್ತರವು X ಎಂದು ಇಟ್ಟುಕೊಳ್ಳಿ–ಎಂದು ಪ್ರಾರಂಭಮಾಡಿ ಲೆಕ್ಕವನ್ನು ಸರಿಯಾಗಿ ಮುಂದುವರಿಸುತ್ತಿದ್ದರೆ ಕೊನೆಗೆ ಸ್ಪಷ್ಟವಾದ ಉತ್ತರವು ಸಿಕ್ಕುವ ಕೆಲವು ಲೆಕ್ಕಗಳುಂಟು. ಆ X ಎಂಬು ದನ್ನು ಇಟ್ಟುಕೊಳ್ಳುವ ವಿಷಯದಲ್ಲಿ ಅಶ್ರದ್ಧೆ ತೋರಿದರೆ ಅವನಿಗೆ ಲೆಕ್ಕದ ಉತ್ತರ ಸಿಕ್ಕುವುದಿಲ್ಲ. ಇದು ಸಾಕ್ಷಾತ್ ಉಪನಿಷತ್ತಿನ ಸಾರಭೂತವಾದ ಅರ್ಥ.

ನನ್ನ ಈ ಮತವನ್ನು ನಿಶ್ಚಯಿಸಿಕೊಂಡು ಅದರಂತೆ ಆಚರಿಸುವವರು ಕರ್ಮಗಳಿಂದ ಬಿಡುಗಡೆ ಹೊಂದುತ್ತಾರೆ. ಹಾಗೆ ಅನುಷ್ಠಾನಮಾಡದಿದ್ದರೂ ಈ ಶಾಸ್ತ್ರಾರ್ಥದಲ್ಲಿ ಯಾರು ಶ್ರದ್ಧೆಯನ್ನಿಟ್ಟುಕೊಂಡಿದ್ದಾರೆಯೋ ಮತ್ತು ಹಾಗೆ ಶ್ರದ್ಧೆಯಿಲ್ಲದಿದ್ದರೂ–'ಶಾಸ್ತ್ರಾರ್ಥವು ಹೀಗೆ ಆಗುವುದಿಲ್ಲ'–ಎಂದು ಅಸೂಯೆ ಪಡುವುದಿಲ್ಲವೋ–ಈ ಮಹಾಗುಣಗಳುಳ್ಳ ಶಾಸ್ತ್ರಾರ್ಥದಲ್ಲಿ ದೋಷವನ್ನು ಆವಿಷ್ಕರಿಸುವುದಿಲ್ಲವೋ–ಅವರೂ ಕೂಡ ಕರ್ಮಗಳಿಂದ ಬಿಡುಗಡೆ ಹೊಂದುತ್ತಾರೆ.

ಇಲ್ಲಿ ಎರಡನೆಯ ಮತ್ತು ಮೂರನೆಯ ವರ್ಗದವರು ಈಗ ಶಾಸ್ತ್ರಾರ್ಥ ವನ್ನು ಅನುಷ್ಠಾನಮಾಡದಿದ್ದರೂ ತಮ್ಮ ಶ್ರದ್ಧೆ ಮತ್ತು ಅನಸೂಯೆಗಳಿಂದ

ಪಾಪಗಳನ್ನು ಕಳೆದುಕೊಂಡು ಶೀಘ್ರದಲ್ಲಿಯೇ ಈ ಶಾಸ್ತ್ರಾರ್ಥವನ್ನು ಅನುಷ್ಠಾನಮಾಡಿ ಮುಕ್ತಿಯನ್ನು ಪಡೆಯುತ್ತಾರೆ–ಎಂದು ಶ್ರೀರಾಮಾನುಜರು ಇಲ್ಲಿ ವಿವರಣೆ ನೀಡಿದ್ದಾರೆ.

ಹೀಗೆ ಯಾರು ನಿವೃತ್ತಕರ್ಮಿಗಳಾಗಿರುತ್ತಾರೆಯೋ ಅವರಿಗೂ ಕೂಡ ಜ್ಞಾನಪ್ರಾಪ್ತಿಯ ಮೂಲಕ ಮುಕ್ತಿಯುಂಟು. ಇನ್ನು ಅಪರೋಕ್ಷಜ್ಞಾನಿಗಳ ವಿಷಯವನ್ನು ಹೇಳಬೇಕೇ?

**ಯೇತ್ವೇವಂ ನಿವೃತ್ತಕರ್ಮಿಣಃ ತೇಽಪಿ ಮುಚ್ಯನ್ತೇ। ಜ್ಞಾನದ್ವಾರಾ ಕಿಂ ಅಪರೋಕ್ಷಜ್ಞಾನಿನಾಂ) (ಮ.ಭಾ.)**

**ಓಂ ಯೇ ತ್ವೇತದಭ್ಯಸೂಯನ್ತೋ ನಾನುತಿಷ್ಠನ್ತಿ ಮೇ ಮತಮ್ ।**
**ಸರ್ವಜ್ಞಾನವಿಮೂಢಾಂಸ್ತಾನ್ವಿದ್ಧಿ ನಷ್ಟಾನಚೇತಸಃ ॥೩೨॥**

ಆದರೆ ಯಾರು ಅಸೂಯೆಯುಳ್ಳವರಾಗಿ ಈ ನನ್ನ ಮತವನ್ನು ಅನುಷ್ಠಾನಮಾಡುವುದಿಲ್ಲವೋ, ಯಾವ ಜ್ಞಾನವೂ ಇಲ್ಲದೇ ವಿಮೂಢರಾಗಿರುವ ಆ ಬುದ್ಧಿಹೀನರನ್ನು ಹಾಳಾದರೆಂದು ತಿಳಿದುಕೊ.

* * *

(ಈ ನನ್ನ ಶ್ರೇಯಸ್ಕರವಾದ ಸಲಹೆಯು ಎಲ್ಲರಿಗೂ ಹಿಡಿಸುವುದೆಂದು ಹೇಳುವುದಕ್ಕಾಗುವುದಿಲ್ಲ. ಅನೇಕರು ಇದನ್ನು ಜರಿದು ಮಾತನಾಡುತ್ತಾರೆ. ನಾನು ಹೇಳಿದ್ದರಲ್ಲಿ ಅನೇಕದೋಷಗಳನ್ನು ಕಂಡುಹಿಡಿಯಲೂ ಯತ್ನಿಸುತ್ತಾರೆ. ನಾನು ಹೇಳಿದಂತೆ ಶ್ರದ್ಧೆಯಿಂದ ಮಾಡಿ ಕರ್ಮಬಂಧನದಿಂದ ಬಿಡಿಸಿಕೊಳ್ಳಬೇಕೆಂಬ ಇಚ್ಛೆ ಅವರಿಗೆ ಇರುವುದಿಲ್ಲ.

ತರ್ಕ-ವಿತರ್ಕಗಳಿಂದ ತಮ್ಮ ಪ್ರೌಢಿಮೆಯನ್ನು ತೋರಿಸಿಕೊಂಡು ತಿರುಗುತ್ತಾರೆ. ಅರ್ಜುನ! ಇಂತಹವರನ್ನು ಸರ್ವಜ್ಞಾನಗಳಿಂದಲೂ (ಆತ್ಮಜ್ಞಾನ, ಕರ್ಮಜ್ಞಾನ ಇತ್ಯಾದಿಗಳು) ಶತದಡ್ಡರಾಗಿರುವವರೆಂದು ಭಾವಿಸು. ಅಪಾರವಾದ ಪಾಂಡಿತ್ಯವೇ ಇದ್ದರೂ ಸಹ ನಾನು ಹೇಳಿದ ರೀತಿಯಲ್ಲಿ ಕರ್ಮಾಚರಣೆಯನ್ನು ಮಾಡದಿದ್ದರೆ ಅವರ ಪಾಂಡಿತ್ಯವೆಲ್ಲವೂ ವ್ಯರ್ಥವೇ ಸರಿ. ಕತ್ತೆಯ ಕೆಚ್ಚಲಿನಲ್ಲಿರುವ ಹಾಲಿನಂತೆ. ಅಂತಹ ಬುದ್ಧಿಗೆಟ್ಟವರು ಖಂಡಿತವಾಗಿಯೂ ಹಾಳಾಗುತ್ತಾರೆ. ಅವರಿಗೆ ಸಂಸಾರಬಂಧನವು ಎಂದೆಂದಿಗೂ ತಪ್ಪಿದ್ದಲ್ಲ.

**ಅಚೇತಸಃ= ಅವಿವೇಕಿಗಳು.** (ಶಂ.ಭಾ.)

**ಚೇತಸ್ಸಿನ ಕೆಲಸವು ಯಾಥಾತ್ಮ್ಯದ ನಿಶ್ಚಯವು. ಯಾಥಾತ್ಮ ನಿಶ್ಚಯವು** ಇಲ್ಲದ್ದರಿಂದ ಅವರು ಅಚೇತಸರು. ವಿಪರೀತ ಜ್ಞಾನವುಳ್ಳ ವರು.) (ರಾ.ಭಾ.)

**ಓಂ ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂ ಯಾನ್ತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥೩೩॥**

ಜ್ಞಾನವುಳ್ಳವನೂ ಕೂಡ ತನ್ನ ಪ್ರಕೃತಿಗೆ ಅನುಗುಣವಾಗಿ ವರ್ತಿಸುತ್ತಾನೆ. ಪ್ರಾಣಿಗಳು ಪ್ರಕೃತಿಯನ್ನು ಅನುಸರಿಸಿಯೇ ನಡೆಯುತ್ತವೆ. ನಿಗ್ರಹವು ಏನು ಮಾಡೀತು?

* * *

(ಹೀಗಿದ್ದರೂ ಕೂಡ ಜನರು ತನ್ನ ಮತವನ್ನು ಏತಕ್ಕೆ ಅನುಸರಿಸುವುದಿಲ್ಲ? ಎಂಬುದಕ್ಕೆ ಭಗವಂತನೇ ಉತ್ತರವನ್ನು ಕೊಡುತ್ತಾನೆ.

ದೊಡ್ಡ ವಿದ್ಯಾವಂತರೂ, ಇದಮಿತ್ಥಂ ಎಂಬ ಜ್ಞಾನವುಳ್ಳವರೂ ಮಾಡುವ ದುರಾಚಾರವನ್ನು ನಾವೂ ಒಮ್ಮೊಮ್ಮೆ ಗಮನಿಸುತ್ತೇವೆ. 'ಇವನ ವಿದ್ಯೆಗೆ ಧಿಕ್ಕಾರ' ಎಂದು ಮನಸ್ಸಿನಲ್ಲೇ ಅಂದುಕೊಳ್ಳುತ್ತೇವೆ. ಅರಿಯದವನು ತಪ್ಪುಮಾಡಿದರೆ ನಾವು ಲೆಕ್ಕಿಸುವುದಿಲ್ಲ. ಅರಿತವರು ತಪ್ಪುಮಾಡಿದರೆ ಅಚ್ಚರಿಪಡುತ್ತೇವೆ. ಆದರೆ ಶ್ರೀಕೃಷ್ಣನು ಇಂತಹವರ ಮೇಲೂ ಅನುಕಂಪೆಯನ್ನು ತೋರಿಸುತ್ತಾನೆ. ದೊಡ್ಡ ವಿದ್ಯಾವಂತನೇ ಆಗಿರಬಹುದು. ಆತ್ಮಾನಾತ್ಮ ವಿವೇಕವನ್ನು ಮನದಟ್ಟಾಗುವಂತೆ ಇತರರಿಗೆ ಬೋಧಿಸಬಹುದು. ನಾಲ್ಕಾರು ತಾಸುಗಳು ನದಿಯ ಪ್ರವಾಹದೋಪಾದಿಯಲ್ಲಿ ಮಾತನಾಡಲೂ ಬಹುದು. ಆದರೆ ಅಂತಹವನಿಗೂ ಕಾಮ-ಕ್ರೋಧಾದಿ ದ್ವೇಷಗಳು ಬಿಟ್ಟಿರುವುದಿಲ್ಲ. ಇದಕ್ಕೇನು ಕಾರಣ? ಶ್ರೀಕೃಷ್ಣನು ಮುತ್ತಿನಂತಹ ಮಾತನ್ನು ಹೇಳುತ್ತಾನೆ.

**ಜ್ಞಾನವಾನಪಿ ಸ್ವಸ್ಯಾಃ ಪ್ರಕೃತೇಃ ಸದೃಶಂ ಚೇಷ್ಟತೇ ।** ಜ್ಞಾನವಂತನೇ ಆಗಿರಬಹುದು. ಆದರೆ ಅವನ ಪ್ರಕೃತಿಗೆ ಅನುಗುಣವಾಗಿ ಅವನು ಈ ಪ್ರಪಂಚದಲ್ಲಿ ನಡೆದುಕೊಳ್ಳುತ್ತಾನೆ. ಜನ್ಮಾಂತರದಿಂದ ವಾಸನಾರೂಪವಾಗಿ ಬಂದಿರುವ ಗುಣಾಧಿಕ್ಯದ ಚೋದನೆಯಂತೆ ಈ ಜನ್ಮದಲ್ಲವನು ಕರ್ಮಮಾಡುತ್ತಾನೆ. ಅವನಿಗೆ ಆ ಕರ್ಮವು ಕೆಟ್ಟುದೆಂದೇ ತಿಳಿದಿರಬಹುದು.

ಆದರೂ ಅವನು ಅದನ್ನು ಮಾಡದೇ ಇರಲಾರ. ಮಾಡಿದ ಮೇಲೆ ಪಶ್ಚಾತ್ತಾಪವನ್ನೂ ಪಡಬಹುದು. ಪಶ್ಚಾತ್ತಾಪಪಟ್ಟರೂ ಪುನಃ ಪುನಃ ಆ ದುಷ್ಕಾರ್ಯವನ್ನೇ ಮಾಡುತ್ತಾನೆ. ಇದು ಅವನಿಗೊಂದು ಚಟವಾಗಿರುತ್ತದೆ. ಈ ವಾಸನೆಯಿಂದ ತಪ್ಪಿಸಿಕೊಳ್ಳುವುದು ಕಷ್ಟಸಾಧ್ಯ. ಆದುದರಿಂದ ವಿದ್ಯಾವಂತನು ಹೀಗೇಕೆ ಮಾಡಿದನೆಂದು ಅಚ್ಚರಿಪಡುವ ಕಾರಣವಿಲ್ಲ. ಅಥವಾ ಅವನನ್ನು ತೆಗಳುವ ಕಾರಣವೂ ಇಲ್ಲ. ಹಿಂದಿನ ವಾಸನೆಗೆ ಅನುಗುಣವಾಗಿ ಒಬ್ಬೊಬ್ಬನಲ್ಲಿ ಒಂದೊಂದು ವಿಧವಾದ ಚಟವಿರುತ್ತದೆ. ಅದನ್ನು ತಪ್ಪಿಸಲು ಸಾಧ್ಯವಿಲ್ಲ. ವಿದ್ಯಾವಂತನಿಗೇ ಇದರಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲವೆಂದ ಮೇಲೆ ಇನ್ನು ಸಾಮಾನ್ಯಮನುಷ್ಯರ ವಿಷಯವಾಗಿ ಹೇಳಲೇಬೇಕಾಗಿಲ್ಲ. **ಪ್ರಕೃತಿಂ ಯಾನ್ತಿ ಭೂತಾನಿ** ಸಕಲಪ್ರಾಣಿಗಳೂ ತಮ್ಮ ಪೂರ್ವಜನ್ಮದ ವಾಸನಾರೂಪವಾದ ಹುಟ್ಟುಗುಣವನ್ನೇ ಹಿಂಬಾಲಿಸುತ್ತವೆ. ಹೀಗಿರುವಾಗ **ನಿಗ್ರಹಃ ಕಿಂ ಕರಿಷ್ಯತಿ?** ಇಂದ್ರಿಯಗಳನ್ನು ವೃಥಾ ಅದುಮಿ ಹಿಡಿಯುವುದರಿಂದ ಪ್ರಯೋಜನವೇನಿದೆ? ಬಹಿರಿಂದ್ರಿಯಗಳ ನಿಗ್ರಹಮಾಡಿದ್ದರಿಂದ ಮನಸ್ಸಿನಲ್ಲಿರುವ ವಾಸನೆಯು ಹೋಗಿಬಿಡುವುದೇನು?

ಇಲ್ಲಿಂದ ಆರಂಭವಾಗಿರುವ ಈ ಅಧ್ಯಾಯದ ಶ್ಲೋಕಗಳಲ್ಲಿ–'ಜ್ಞಾನಯೋಗವನ್ನು ಅನುಷ್ಠಾನಮಾಡಲು ಕಷ್ಟ. ಅದರಲ್ಲಿ ಪ್ರಮಾದವು ಏರ್ಪಡುವ ಸಂಭವ ಹೆಚ್ಚು'–ಎಂಬುದನ್ನು ಶ್ರೀಕೃಷ್ಣನು ವಿವರಿಸಿದ್ದಾನೆಂದು ಶ್ರೀರಾಮಾನುಜರು ಭಾಷ್ಯದಲ್ಲಿ ಹೇಳಿದ್ದಾರೆ.

**ಪ್ರವೃತ್ತಿಃ**= ಹಿಂದಿನ ಜನ್ಮದಲ್ಲಿ ಮಾಡಿದ ಧರ್ಮ-ಅಧರ್ಮ ಮುಂತಾದ ಸಂಸ್ಕಾರ ; ಪ್ರಾಚೀನವಾಸನೆ. (ರಾ.ಭಾ.)

ಇಂದ್ರಿಯಗಳನ್ನು ನಿಗ್ರಹಿಸುವುದು ವಿದ್ಯಾವಂತನಿಗೂ ಜ್ಞಾನವಂತನಿಗೂ ಅತಿಕಷ್ಟವಾದರೂ ಅದಕ್ಕಾಗಿ ಯಥಾಶಕ್ತಿ ಪ್ರಯತ್ನವನ್ನು ಮಾಡಬೇಕು. ಇಂದ್ರಿಯನಿಗ್ರಹದಿಂದ ಒಡನೆಯೇ ಪ್ರಯೋಜನವಾಗದಿದ್ದರೂ ತೀವ್ರಪ್ರಯತ್ನಮಾಡಿದರೆ ಇಂದ್ರಿಯಗಳನ್ನು ವಶಪಡಿಸಿಕೊಳ್ಳಲು ಸಾಧ್ಯ.

**ಸಂಸ್ಕಾರೋ ಬಲವಾನೇಷಃ ಬ್ರಹ್ಮಾದ್ಯಾ ಅಪಿ ತದ್ವಶಾಃ ।**
**ತಥಾಪಿ ಸೋಽನ್ಯಥಾ ಕರ್ತುಂ ಶಕ್ಯತೇತಿ ಪ್ರಯತ್ನತಃ ॥** (ಮ.ಭಾ.)

ಹೀಗೆ ಹೇಳಿಯೂ ಸಹ ದಯಾಮಯನಾದ ಶ್ರೀಕೃಷ್ಣನು ಹಿಂದಿನ

ಜನ್ಮದ ವಾಸನೆಯನ್ನು ದೂರಮಾಡಲು ಕೆಲವು ಉಪಾಯಗಳನ್ನು ಸೂಚಿಸು ತ್ತಾನೆ.)

**ಓಂ ಇನ್ದ್ರಿಯಸ್ಯೇನ್ದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।**
**ತಯೋರ್ನ ವಶಮಾಗಚ್ಛೇತ್ತೌ ಹ್ಯಸ್ಯ ಪರಿಪನ್ಥಿನೌ ॥೩೪॥**

ಪ್ರತಿಯೊಂದು ಇಂದ್ರಿಯದ ವಿಷಯಗಳಲ್ಲಿಯೂ ರಾಗ-ದ್ವೇಷಗಳು ವ್ಯವಸ್ಥಿತವಾಗಿವೆ. ಅವುಗಳೆರಡಕ್ಕೂ ಅಧೀನನಾಗಬಾರದು. ಏಕೆಂದರೆ ಅವೇ ಇವನಿಗೆ ಶತ್ರುಗಳು.

* * *

(ನಮ್ಮಲ್ಲಿ ಇಂದ್ರಿಯಗಳಿವೆ. ಅವು ಎರಡು ಭಾಗಗಳಾಗಿವೆ. ಒಂದು ಜ್ಞಾನೇಂದ್ರಿಯಗಳು ; ಮತ್ತೊಂದು ಕರ್ಮೇಂದ್ರಿಯಗಳು. ಜ್ಞಾನೇಂದ್ರಿಯಗಳ ಮೂಲಕ ಹೊರಗಿನ ಜಗತ್ತನ್ನು ತಿಳಿದುಕೊಳ್ಳುತ್ತೇವೆ. ಕಣ್ಣು, ನಾಲಿಗೆ, ಮೂಗು, ಕಿವಿ, ಚರ್ಮ–ಇವುಗಳಿಂದ ರೂಪ, ರಸ, ಗಂಧ, ಶಬ್ದ, ಸ್ಪರ್ಶ ಇವುಗಳನ್ನು ತಿಳಿದುಕೊಳ್ಳುತ್ತೇವೆ. ಐದು ಕರ್ಮೇಂದ್ರಿಯಗಳಿವೆ. ಬಾಯಿ, ಕೈ, ಕಾಲು, ಗುದ, ಜನನೇಂದ್ರಿಯ–ಇವುಗಳ ಮೂಲಕ ಮಾತು, ಕೆಲಸ ಮಾಡುವುದು, ನಡೆಯುವುದು, ಮಲ-ಮೂತ್ರಗಳನ್ನು ವಿಸರ್ಜಿಸುವುದು– ಈ ಕೆಲಸಗಳನ್ನು ಮಾಡುತ್ತೇವೆ. ಇವುಗಳ ಹಿಂದೆ ಚಿತ್ತ, ಮನಸ್ಸು, ಬುದ್ಧಿ ಎಂಬ ಸೂಕ್ಷ್ಮೇಂದ್ರಿಯಗಳಿವೆ. ಇವುಗಳಿಗೆ ಪ್ರಿಯವಾಗಿರುವ ಬಾಹ್ಯವಸ್ತುಗಳ ಕಡೆಗೆ ಧಾವಿಸುತ್ತಿರುತ್ತವೆ. ಅಪ್ರಿಯವಾದ ವಸ್ತುಗಳನ್ನು ದ್ವೇಷಿಸುತ್ತವೆ. ಒಂದು ರಾಗ, ಮತ್ತೊಂದು ದ್ವೇಷ. ಇವುಗಳೇ ನಮ್ಮನ್ನು ಭವಬಂಧನದಲ್ಲಿಡುತ್ತವೆ. ಇವು ಕೇವಲ ವಸ್ತುಗತವಾಗಿರುವಾಗ ಇವುಗಳ ಪ್ರಾಬಲ್ಯವು ನಮಗೆ ಅಷ್ಟಾಗಿ ಕಾಣುವುದಿಲ್ಲ. ಸೌತೇಕಾಯನ್ನು ಪ್ರೀತಿಸುತ್ತೇವೆ. ಹಾಗಲಕಾಯನ್ನು ಬೇಡವೆನ್ನುತ್ತೇವೆ. ಈ ರಾಗ-ವಿರಾಗಗಳು ನಮ್ಮ ಮನಸ್ಸನ್ನು ಅಷ್ಟಾಗಿ ಬಂಧಿಸುವುದಿಲ್ಲ. ಇವು ವ್ಯಕ್ತಿಗತವಾದಾಗ ನಮ್ಮನ್ನು ಬಹಳವಾಗಿ ಬಂಧಿಸುತ್ತವೆ. ಪತ್ನೀ, ಪುತ್ರ, ಪುತ್ರೀ, ತಾತ, ಗುರು–ಇವರನ್ನು ನಾವು ಪ್ರೀತಿಸುತ್ತೇವೆ. ಈ ಪ್ರೀತಿಯೇ ನಮ್ಮನ್ನು ಬಂಧಿಸುತ್ತದೆ. ಅವರನ್ನು ನಾವು ಕ್ಷಣಮಾತ್ರವೂ ಬಿಟ್ಟಿರಲು ಇಚ್ಛಿಸುವುದಿಲ್ಲ. ಅವರಿಗೆ ತೊಂದರೆಯಾಗುವು ದನ್ನು ಸಹಿಸುವುದಿಲ್ಲ. ಅವರ ಅಗಲುವಿಕೆಯನ್ನು ನೆನೆಯಲೂ ನಾವು ಭಯಪಡುತ್ತೇವೆ.

ದ್ವೇಷದ ಸ್ವಭಾವವೂ ಹೀಗೆಯೇ. ಯಾವನನ್ನೋ ಯಾವುದೋ ಕಾರಣದಿಂದ ದ್ವೇಷಿಸುತ್ತೇವೆ. ದ್ವೇಷವು ಹುಟ್ಟಿತೆಂದರೆ ಅದು ಸಾಮಾನ್ಯವಾಗಿ ಬಿಟ್ಟುಹೋಗುವುದಿಲ್ಲ. ಪ್ರೀತಿಸಿದವನನ್ನು ಎಷ್ಟು ನೆನೆಸಿಕೊಳ್ಳುತ್ತೇವೆಯೋ ದ್ವೇಷಿಯನ್ನೂ ಅಷ್ಟೇ ನೆನೆಸಿಕೊಳ್ಳುತ್ತಿರುತ್ತೇವೆ. ದ್ವೇಷವೆಂಬ ಅಗ್ನಿಯು ಮನಸ್ಸಿನಲ್ಲಿ ಹೊಗೆಯಾಡುತ್ತಲೇ ಇರುತ್ತದೆ. ಜನ್ಮ-ಜನ್ಮಾಂತರಗಳಲ್ಲಿಯೂ ಈ ದ್ವೇಷವನ್ನು ಸಾಧಿಸುವವರಿದ್ದಾರೆ. ಪುರಾಣಗಳಲ್ಲಿಯೂ ಈ ಸಂಬಂಧವಾಗಿ ಕಥೆಗಳು ಬಂದಿವೆ. ಎಲ್ಲರಿಗೂ ಇದು ಅನುಭವೈಕವೇದ್ಯ. ರಾಗವೆಂಬುದು ಮೋಹಿನಿಯಾದರೆ ದ್ವೇಷವೆಂಬುದು ಪಿಶಾಚಿ. ಎರಡೂ ಸುಲಭವಾಗಿ ಬಿಟ್ಟುಹೋಗತಕ್ಕುವುಗಳಲ್ಲ. ಮಾನವನ ಮುಖ್ಯಶತ್ರುಗಳೆಂದರೆ ರಾಗ-ದ್ವೇಷಗಳು. ಹಗಲುಗಳ್ಳರಂತೆ ಈ ರಾಗ-ದ್ವೇಷಗಳು ಅಧ್ಯಾತ್ಮಮಾರ್ಗದಲ್ಲಿ ಹೋಗುತ್ತಿರುವವನ ತಲೆಯನ್ನೇ ಸೀಳಿಬಿಡುತ್ತವೆ. ಶ್ರೇಯಸ್ಸಿನಮಾರ್ಗಕ್ಕೆ ಅಡ್ಡಿಬರುವಂತಹುವೇ ಈ ರಾಗ-ದ್ವೇಷಗಳು. ಆದುದರಿಂದ ಈ ಎರಡಕ್ಕೂ ವಶನಾಗಬಾರದು.

ಇಷ್ಟವಿಷಯಗಳಲ್ಲಿ ರಾಗ ಮತ್ತು ಅನಿಷ್ಟವಿಷಯಗಳಲ್ಲಿ ದ್ವೇಷ– ಎಂಬುದು ಪ್ರತಿಯೊಂದು ಇಂದ್ರಿಯದ ವಿಷಯದಲ್ಲಿಯೂ ಬಂದು ಕುಳಿತು ಕೊಂಡಿರುತ್ತದೆ. (ನೆಲೆಸಿರುತ್ತದೆ.) ಆದುದರಿಂದ ಅವುಗಳಿಗೆ ಅಧೀನನಾಗ ಬಾರದು.

ಅರ್ಜುನ! ನೀನೀಗ ರಾಗದಿಂದ ಬಂಧಿತನಾಗಿರುವೆ. ಭೀಷ್ಮ- ದ್ರೋಣರ ಮೇಲಿನ ಪ್ರೀತಿಯು ನಿನ್ನನ್ನು ಕರ್ತವ್ಯಭ್ರಷ್ಟನನ್ನಾಗಿ ಮಾಡಿದೆ. ಈಗಲೂ ನಿನ್ನನ್ನು ಆ ಪ್ರೀತಿಯೇ ಬಂಧಿಸಿಬಿಟ್ಟಿದೆ. ಇದಿಂದು ನಿನ್ನ ಶ್ರೇಯಸ್ಸಿನ ಮಾರ್ಗಕ್ಕೇ ಪ್ರತಿಬಂಧವನ್ನುಂಟುಮಾಡುತ್ತಿದೆ. ನಿನ್ನ ಮನಸ್ಸಿನಲ್ಲಿ ಅಂಕುರಿಸಿರುವ ಈ ರಾಗವು ಎಷ್ಟು ಬಲವತ್ತರವಾಗಿರುವುದೆಂದರೆ ನಿನ್ನ ಸಹಜಪ್ರವೃತ್ತಿಯನ್ನೇ ಅದು ಬದಲಾಯಿಸಿಬಿಟ್ಟಿದೆ. ಈ ಶತ್ರುವಿನ ವಿಷಯ ದಲ್ಲಿ ಜಾಗರೂಕನಾಗಿರು. ಅದಕ್ಕೆ ಖಂಡಿತವಾಗಿಯೂ ನೀನು ವಶನಾಗಿಬಿಡ ಬೇಡ. ಕರ್ತವ್ಯಭ್ರಷ್ಟನಾಗಬೇಡ.

ಇನ್ದ್ರಿಯಸ್ಯ, ಇನ್ದ್ರಿಯಸ್ಯಾರ್ಥೇ = ಕಿವಿಯೇ ಮುಂತಾದ ಜ್ಞಾನೇಂದ್ರಿಯವಿಷಯಕವಾದ ಶಬ್ದ ಮುಂತಾದುವುಗಳಲ್ಲಿಯೂ, ವಾಕ್

ಮುಂತಾದ ಕರ್ಮೇಂದ್ರಿಯಗಳ ವಿಷಯವಾದ ವಚನ ಮುಂತಾದುವುಗಳ ಲ್ಲಿಯೂ ಅದನ್ನನುಭವಿಸಬೇಕೆಂಬ ಜನ್ಮಾಂತರವಾಸನೆಯಿಂದ ಬಂದ ಆಸೆಯು ರಾಗವೆನಿಸುತ್ತದೆ. ಇದು ತಪ್ಪಿದ್ದಲ್ಲವೆಂದು ನಿಷ್ಕರ್ಷಿಸಲ್ಪಟ್ಟಿದೆ. ಈ ವಿಷಯಾನುಭವಕ್ಕೆ ವಿಘ್ನವುಂಟಾದಾಗ ಬರುವುದು ದ್ವೇಷ. ಜ್ಞಾನಯೋಗದಲ್ಲಿ ತೊಡಗಿರುವವನಿಗೆ ಇವು ಭೀಕರವಾದ ಅಡ್ಡಿಗಳು. ಕ್ಷಾತ್ರಪ್ರಕೃತಿಯಿಂದ ಸಂಸೃಷ್ಟನಾಗಿರುವ ಅರ್ಜುನನಿಗೆ ಆ ಧರ್ಮಕ್ಕೆ ಅನುಗುಣವಾದ ನಡೆಯೇ ಶ್ರೇಷ್ಠ. ಜ್ಞಾನಯೋಗವೇನೋ ಉತ್ತಮವೇ ಆಗಿದ್ದರೂ ಅದನ್ನು ಸ್ವಲ್ಪಕಾಲ ಮಾತ್ರ ಇವನಿಗೆ ಆಚರಿಸಲು ಸಾಧ್ಯವಾಗುತ್ತದೆ ಮತ್ತು ಅದರಲ್ಲಿ ಪ್ರಮಾದ ಗಳೂ ಉಂಟು. ಆದುದರಿಂದ ಇವನು ಸಹಜಧರ್ಮವಾಗಿರುವ ಕ್ಷತ್ರಿಯ ಧರ್ಮದ ಕರ್ಮಯೋಗದಲ್ಲಿ ತೊಡಗುವುದೇ ಶ್ರೇಷ್ಠ. (ರಾ.ಭಾ.)

**ಓಂ ಶ್ರೇಯಾನ್ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥೩೫॥**

ಸ್ವಧರ್ಮವು ಗುಣರಹಿತವಾಗಿದ್ದರೂ ಚೆನ್ನಾಗಿ ಅನುಷ್ಠಾನಮಾಡಿದ ಪರಧರ್ಮಕ್ಕಿಂತಲೂ ಒಳ್ಳೆಯದು. ಸ್ವಧರ್ಮದಲ್ಲಿ ಮರಣಹೊಂದಿದರೂ ಲೇಸು. ಪರಧರ್ಮವು ಭಯವನ್ನು ತರುವುದು.

* * *

(ಅರ್ಜುನನು ತಾತ ಮತ್ತು ಆಚಾರ್ಯರ ಮೇಲಿನ ಪ್ರೀತಿಯಿಂದ ಬದ್ಧನಾಗಿ ಅನ್ಯಧರ್ಮವಾದ ಭಿಕ್ಷಾವೃತ್ತಿಯನ್ನಾದರೂ ಮಾಡಿಕೊಂಡಿರುವುದು ಲೇಸೆಂದು ಹೇಳಿದ್ದನಲ್ಲವೇ? ಶ್ರೀಕೃಷ್ಣನು ಅದಕ್ಕೆ ಉತ್ತರವಾಗಿ ಹೇಳುತ್ತಾನೆ : ಸ್ವಧರ್ಮವು ಗುಣರಹಿತವಾಗಿಯೇ ಇರಬಹುದು. ಆದರೂ ಸಹ ಸ್ವಧರ್ಮದಲ್ಲಿಯೇ ಇದ್ದು ಸ್ವಧರ್ಮೋಕ್ತವಾದ ಕರ್ಮಾನುಷ್ಠಾನಗಳನ್ನು ಮಾಡಿಕೊಂಡಿರುವುದೇ ಶ್ರೇಯಸ್ಕರ. ಪರಧರ್ಮವನ್ನು ಚೆನ್ನಾಗಿ ಅನು ಷ್ಠಾನಮಾಡಿದರೂ ಅದರಿಂದ ಫಲವಿಲ್ಲ. ನಮ್ಮ ಧರ್ಮದಲ್ಲಿ ಅನೇಕದೋಷ ಗಳೇ ಇರಬಹುದು. ಇದ್ದರೂ ಚಿಂತೆಯಿಲ್ಲ. ಸ್ವಧರ್ಮೋಕ್ತವಾದ ಕರ್ಮಾನು ಷ್ಠಾನಗಳನ್ನು ಪೂರ್ಣವಾಗಿ ಮಾಡದಿದ್ದರೂ ಚಿಂತೆಯಿಲ್ಲ. 'ಪರಧರ್ಮವು ದೋಷರಹಿತವಾಗಿದೆ. ಮನಸ್ಸಿಗೆ ಹಿಡಿಸಿದೆ. ಆದುದರಿಂದ ಪರಧರ್ಮೋಕ್ತ ವಾದ ಕರ್ಮಗಳನ್ನೇ ನಾನು ಶ್ರದ್ಧೆಯಿಂದ ಮಾಡುತ್ತೇನೆ' ಎನ್ನಲಾಗದು.

ಹಾಗೆ ಮಾಡಲೂ ಬಾರದು. ಸ್ವಧರ್ಮಾನುಷ್ಠಾನವನ್ನು ಮಾಡುವಾಗ ಅನೇಕಕಷ್ಟಗಳಿಗೆ ಸಿಕ್ಕಿ ಅಥವಾ ಸ್ವಧರ್ಮವಾದ ಕ್ಷತ್ರಿಯಧರ್ಮಾನುಸಾರವಾಗಿ ಯುದ್ಧಮಾಡಿ ಸತ್ತರೂ ಅದು ಶ್ರೇಯಸ್ಕರವೇ ಸರಿ. ಆದರೆ ಪರಧರ್ಮ ವನ್ನವಲಂಬಿಸುವುದು ಭಯಕ್ಕೆ ಕಾರಣವಾದುದರಿಂದ ಪಾಪಸಂಘಟನೆ ಯಾಗುತ್ತದೆ. ಭಿಕ್ಷಾವೃತ್ತಿಯು ಅಹಿಂಸೆಯಿಂದ ಕೂಡಿರಬಹುದು. ಆದರೆ ಅದು ಸಂನ್ಯಾಸಿಯ ಅಥವಾ ಬ್ರಹ್ಮಚಾರಿಯ ಧರ್ಮ. ಗೃಹಸ್ಥನ ಧರ್ಮವಲ್ಲ. ನೀನು ಅದನ್ನು ಮಾಡಕೂಡದು. ನಿನ್ನ ಧರ್ಮವಾದ ಯುದ್ಧವನ್ನು ಮಾಡು. ಯುದ್ಧದಲ್ಲಿ ಸತ್ತರೂ ಸಹ ಅದರಿಂದ ನಿನಗೆ ಶ್ರೇಯಸ್ಸೇ ಆಗುತ್ತದೆ.

ಎಲ್ಲ ಧರ್ಮಗಳಲ್ಲಿಯೂ ಒಂದೊಂದು ದೋಷವು ಇದ್ದೇ ಇರುತ್ತದೆ. ಬ್ರಾಹ್ಮಣಧರ್ಮದಲ್ಲಿ ಭಿಕ್ಷೆಮಾಡುವುದು, ಕ್ಷತ್ರಿಯಧರ್ಮದಲ್ಲಿ ಹಿಂಸೆ ಮಾಡುವುದು, ವೈಶ್ಯಧರ್ಮದಲ್ಲಿ ವ್ಯವಸಾಯ, ಶೂದ್ರಧರ್ಮದಲ್ಲಿ ಪರಿ ಚರ್ಯೆ. ಹೀಗೆ ಒಂದೊಂದು ಧರ್ಮದಲ್ಲಿಯೂ ಒಂದೊಂದು ದೋಷ ವಿರುವಂತೆ ತೋರುತ್ತದೆ. ಒಂದರಲ್ಲಿ ದೋಷವಿದೆಯೆಂದು ಭಾವಿಸಿ ಮತ್ತೊಂದು ಧರ್ಮಕ್ಕೆ ಹಾರಬಾರದು. ಮಂತ್ರಿಯ ಪದವಿಯು ಗುಮಾಸ್ತನ ಪದವಿಗಿಂತ ಉನ್ನತವೇ ಇರಬಹುದು. ಆದರೆ ಅವರಿಬ್ಬರೂ ಒಬ್ಬರು ಮತ್ತೊಬ್ಬರ ಧರ್ಮವನ್ನು–'ತಮಗೆ ಅದರಲ್ಲಿ ಯಾವುದೋ ಆಕರ್ಷಕಗುಣ ಇದೆ'–ಎಂದು ಅನುಷ್ಠಿಸತೊಡಗಿದರೆ ಮಹಾಹಾನಿಯಾಗುವುದಲ್ಲವೇ? ಈ ವರ್ಣಾಶ್ರಮಧರ್ಮಗಳು ನಾವಾಗಿ ಮಾಡಿಕೊಂಡಿದ್ದಲ್ಲ. ನಮ್ಮ ಪೂರ್ವ ಜನ್ಮದ ವಾಸನಾಫಲದಿಂದ ಪ್ರಾಪ್ತವಾದುವುಗಳು. ತಾಯಿಯು ಕುರೂಪಿಯೆಂದು ಅವಳನ್ನು–'ನನ್ನ ತಾಯಿಯಲ್ಲ'–ಎಂದು ಹೇಳುವುದಕ್ಕಾಗು ವುದಿಲ್ಲ. ಆದುದರಿಂದ ನಾವು ಹುಟ್ಟಿದ ಧರ್ಮವನ್ನು ಯಾವ ಕಾರಣ ದಿಂದಲೂ ತೆಗಳಬಾರದು. ವರ್ಣಾಶ್ರಮಧರ್ಮವಲ್ಲದೆ ಪ್ರತಿಯೊಬ್ಬ ಮಾನವನಿಗೂ ಈಶ್ವರಭಕ್ತಿ , ಸತ್ಯಭಾಷಣ, ಮಾತಾಪಿತೃಸೇವೆ, ಇಂದ್ರಿಯ ನಿಗ್ರಹ, ಬ್ರಹ್ಮಚರ್ಯಪರಿಪಾಲನೆ, ಅಹಿಂಸೆ, ಅಸ್ತೇಯ, ಸಂತೋಷ, ದಯೆ, ದಾನ, ಕ್ಷಮೆ, ಪವಿತ್ರತೆ–ಇವುಗಳು ಸಾಮಾನ್ಯಧರ್ಮಗಳಾಗಿರು ತ್ತವೆ. ಈ ಗುಣಗಳ ಅನುಷ್ಠಾನದಿಂದಲೇ ಮಾನವನು ಉದ್ಧಾರವಾಗ ಬಹುದು. ಆದುದರಿಂದ ಆತ್ಮವಿಕಾಸಕ್ಕೇ ಆಗಲೀ, ಸಮಾಜದ ವಿಕಾಸಕ್ಕೇ

ಆಗಲೀ–ಒಂದು ಧರ್ಮವನ್ನು ಬಿಟ್ಟು ಮತ್ತೊಂದು ಧರ್ಮವನ್ನು ಹಿಡಿಯುವ ಕಾರಣವಿಲ್ಲ.

ಸ್ವಧರ್ಮ-ಪರಧರ್ಮಗಳನ್ನು ಆಶ್ರಮಧರ್ಮಪರವಾಗಿಯೂ ಅರ್ಥ ಮಾಡಬಹುದು. ಆಶ್ರಮಗಳು ನಾಲ್ಕು : ಬ್ರಹ್ಮಚರ್ಯೆ, ಗಾರ್ಹಸ್ಥ್ಯ, ವಾನ ಪ್ರಸ್ಥ ಮತ್ತು ಸಂನ್ಯಾಸ. ಬ್ರಹ್ಮಚಾರಿಯು ಗೃಹಸ್ಥಧರ್ಮವನ್ನು ಆಚರಿಸ ಬಾರದು. ಗೃಹಸ್ಥನು ಸಂನ್ಯಾಸಧರ್ಮವನ್ನು ಆಚರಿಸಬಾರದು. ಸಂನ್ಯಾಸಿಯು ಗೃಹಸ್ಥಧರ್ಮಕ್ಕೆ ಮಾರುಹೋಗಬಾರದು. ಒಂದು ಧರ್ಮದಲ್ಲಿದ್ದು ಮತ್ತೊಂದು ಧರ್ಮದ ಆಚರಣೆಯನ್ನು ಮಾಡುತ್ತಿದ್ದರೆ ಅವನು ಉಭಯ ಭ್ರಷ್ಟನಾಗುತ್ತಾನೆ. ಒಂದು ಆಶ್ರಮದಲ್ಲಿದ್ದರೆ ಮತ್ತೊಂದು ಆಶ್ರಮವು ಸುಖಕರವೆಂದು ಕಾಣುವುದೇನೋ ನಿಜ. ಸಂಸಾರದ ಝಂಝಾವಾತಕ್ಕೆ ಸಿಕ್ಕಿದವನು, 'ಸಂನ್ಯಾಸಿಯಾದರೆ ಹಾಯಾಗಿದ್ದುಬಿಡಬಹುದಪ್ಪಾ' ಎಂದು ಉದ್ಗಾರತೆಗೆಯುತ್ತಾನೆ. ಸಂನ್ಯಾಸಿಯು ಗೃಹಸ್ಥನ ವೈಭವವನ್ನು ಕಂಡು ಬಾಯಿಚಪ್ಪರಿಸುತ್ತಾನೆ. 'ಅನ್ಯಾಯವಾಗಿ ಸಂನ್ಯಾಸಿಯಾದೆನಲ್ಲಾ'–ಎಂದು ಸಂಕಟಪಡುವವನೂ ಇದ್ದಾನೆ. ಹೀಗೆ ಮಾಡಬಾರದು. ಸ್ವಧರ್ಮವು ಕಷ್ಟವಾಗಿರಬಹುದು. ಕೀಳಾಗಿರಬಹುದು. ಆದರೆ ಪರಧರ್ಮಕ್ಕಿಂತಲೂ ಸ್ವಧರ್ಮವೇ ಲೇಸು. ಇದು ಶ್ರೀಕೃಷ್ಣನ ಸಂದೇಶ.

ಅರ್ಜುನನಿಗೆ ಸ್ವಧರ್ಮವೆಂದರೆ ಯುದ್ಧಾದಿರೂಪವಾದ ಕರ್ಮ ಯೋಗ. ಪರಧರ್ಮವೆಂದರೆ ಜ್ಞಾನಯೋಗ. ಸ್ವಧರ್ಮವಾದ ಕರ್ಮ ಯೋಗದ ಹಾದಿಯು ಮೋಕ್ಷಕ್ಕೆ ಸ್ವಲ್ಪದೂರವಾಗಿಯೇ ಇರಬಹುದು. ಆದರೂ **ಪ್ರಕೃತಿಸಂಸೃಷ್ಟಸ್ಯ ದುಶ್ಶಕ್ಯತಯಾ ಪರಧರ್ಮಭೂತಾತ್ ಜ್ಞಾನ ಯೋಗಾತ್ ಸಗುಣಾದಪಿ ಕಿಂಚಿತ್ಕಾಲಮನುಷ್ಠಿತಾತ್ ಸಪ್ರಮಾದಾತ್ ಶ್ರೇಯಾನ್**–ಪ್ರಕೃತಿಸಂಬಂಧಹೊಂದಿದ ಆತ್ಮನಿಗೆ ತಾನೇ ಪರಿಗ್ರಹಿಸಲು ಸಾಧ್ಯ ವಲ್ಲದೆ ಅಶಕ್ಯವಾದ ಕಾರಣದಿಂದ ಸ್ವಧರ್ಮವಲ್ಲದೆ ಬೇರೆ ಧರ್ಮವಾದ ಜ್ಞಾನಯೋಗವು ಪ್ರಮಾದವನ್ನೊಳಗೊಂಡಿರುವುದರಿಂದ ಭಯಾವಹ ವಾದುದು. ಕರ್ಮಯೋಗದ ಮಧ್ಯದಲ್ಲಿ ಮರಣವಾದರೆ ಉತ್ತರಜನ್ಮದಲ್ಲಾ ದರೂ ಫಲಸಿದ್ಧಿಯುಂಟು. ಸ್ವಧರ್ಮವಾದ ಕರ್ಮಯೋಗವನ್ನು ತ್ಯಜಿಸಿ

ಅನ್ಯಧರ್ಮವಾದ ಜ್ಞಾನಯೋಗವನ್ನಾರಂಭಿಸಿದರೆ ಅದರಲ್ಲಿ ಫಲಸಿದ್ಧಿ ಯುಂಟೆಂದು ನಂಬಲು ಸಾಧ್ಯವೇ ಇಲ್ಲ.) (ರಾ.ಭಾ.)

**ಅರ್ಜುನ ಉವಾಚ :**

**ಓಂ ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥೩೬॥**

ಅರ್ಜುನನು ಪ್ರಶ್ನಿಸುತ್ತಾನೆ :

"ವಾರ್ಷ್ಣೇಯ! ಈ ಪುರುಷನು ತನಗೆ ಇಚ್ಛೆಯಿಲ್ಲದಿದ್ದರೂ ಯಾವುದರಿಂದ ಪ್ರೇರಿತನಾಗಿ ಬಲಾತ್ಕಾರದಿಂದ ಕಟ್ಟುಮಾಡಲ್ಪಟ್ಟವನಂತೆ ಪಾಪವನ್ನು ಮಾಡುತ್ತಿರುವನು?"

* * *

(ನಿರಂಕುಶನಾದ ರಾಜನು ತನ್ನ ಸೇವಕನ ಹತ್ತಿರ ಕೆಲಸಮಾಡಿಸುವಂತೆ ನಮ್ಮಲ್ಲಿರುವ ಯಾವುದೋ ಶಕ್ತಿಯು ನಮಗೆ ಇಚ್ಛೆಯಿಲ್ಲದಿದ್ದರೂ ಮಾಡಬಾರದ ಕೆಲಸವನ್ನು ಮಾಡಿಸಿಬಿಡುತ್ತದೆ. ಅದು ಯಾವುದು? ಎಂದು ಅರ್ಜುನನು ಪ್ರಶ್ನಿಸುತ್ತಾನೆ. ಅರ್ಜುನನ ಈ ಮಾತು ಸಾಮಾನ್ಯವಾಗಿ ಎಲ್ಲರ ಅನುಭವದಲ್ಲಿಯೂ ಇದೆ. ನಮಗೆ ಸುಳ್ಳುಹೇಳಬಾರದೆಂದು ಗೊತ್ತಿದೆ. ಆದರೂ ಸುಳ್ಳುಹೇಳುತ್ತೇವೆ. ಒಬ್ಬರಿಗೆ ಮೋಸಮಾಡಬಾರದೆಂದು ಗೊತ್ತಿದೆ. ಆದರೂ ಮೋಸಮಾಡುತ್ತೇವೆ. ಮನುಷ್ಯನು ತಿಳಿಯದೇ ತಪ್ಪು ಮಾಡುವುದು ಕಡಿಮೆ. ತಿಳಿದು ತಪ್ಪುಮಾಡುವುದೇ ಹೆಚ್ಚು. ಮಾಡಿದ ತಪ್ಪನ್ನು ಒಪ್ಪಿಕೊಳ್ಳದೇ ಮರೆಮಾಡುವುದೇ ಮಾನವನ ಸ್ವಭಾವವಾಗುತ್ತದೆ.

ಟಿಕೆಟಿಲ್ಲದೇ ಬಸ್‌ಪ್ರಯಾಣ ಕೂಡದೆಂಬುದು ಗೊತ್ತಿದೆ. ಆದರೆ ಟಿಕೆಟ್ ಪಡೆಯದೆ ಸುಮ್ಮನೇ ಕುಳಿತಿರುತ್ತೇವೆ. ಲಂಚವನ್ನು ತೆಗೆದುಕೊಳ್ಳುವುದು ಅಪರಾಧವೆಂಬುದು ಗೊತ್ತು. ಆದರೆ ಲಂಚಸಿಕ್ಕಿದರೆ ಬಿಡುವ ಸ್ವಭಾವ ನಮ್ಮದಲ್ಲ. ಖೋಟಾನೋಟನ್ನು ಚಲಾಯಿಸಕೂಡದೆಂಬುದು ನಮಗೆ ಗೊತ್ತು. ಆದರೆ ನಮಗೆ ಹೇಗೋ ಸಿಕ್ಕಿದುದನ್ನು ರವಾನಿಸಲು ಪ್ರಯತ್ನಿಸುತ್ತೇವೆ. ಕಳ್ಳಸಂತೆವ್ಯಾಪಾರ ಮಾಡಕೂಡದೆಂಬುದು ಎಲ್ಲರಿಗೂ ಗೊತ್ತು. ಆದರೆ ಬಿಡುವುದಕ್ಕೆ ಇಷ್ಟವಾಗುವುದಿಲ್ಲ. ಹಾಲಿಗೆ ನೀರು ಬೆರೆಸಬಾರದೆಂಬುದು ತಿಳಿದಿದೆ. ಆದರೆ ನೀರುಬೆರೆಸದೆ ಹಾಲು ಮಾರುವುದಿಲ್ಲ. ಮದ್ಯ

ಪಾನ ಮಾಡಕೂಡದೆಂಬುದು ಅಮಲಿನಲ್ಲಿಲ್ಲದಿದ್ದಾಗ ಮದ್ಯಪಾಯಿಗೆ ತಿಳಿದಿರುತ್ತದೆ. ಆದರೆ ಕುಡಿಯುವ ಹೊತ್ತು ಬಂತೆಂದರೆ ಕಾಲು ತಾನೇ ತಾನಾಗಿ ಮದ್ಯದಂಗಡಿಗೆ ಹೋಗಿಬಿಡುತ್ತದೆ. ಧೂಮಪಾನ ಮಾಡಬಾರದು. ಆದರಿಂದ ರೋಗ ಬರುತ್ತದೆ–ಎಂದು ಜಾಹಿರಾತಿನಲ್ಲೇ ಇರುತ್ತದೆ. ಆದರೂ ಅದನ್ನು ಅಭ್ಯಾಸಿಗಳು ಬಿಡಲಾರರು. ಹೀಗೆ ನಾವು ಕೆಟ್ಟದ್ದೆಂದು ತಿಳಿದಿದ್ದೂ ಮಾಡುತ್ತಲೇ ಇರುತ್ತೇವೆ. ನಮ್ಮ ಇಚ್ಛೆಗೆ ವಿರುದ್ಧವಾಗಿಯೂ ಮಾಡುತ್ತೇವೆ. ಯಾವುದೋ ಶಕ್ತಿಯು ಇದನ್ನು ನಮ್ಮಿಂದ ಬಲಾತ್ಕಾರವಾಗಿ ಮಾಡಿಸುತ್ತದೆ. 'ಅದು ಯಾವುದು?'–ಎಂದು ಅರ್ಜುನನು ಕೇಳುತ್ತಾನೆ. ಆದರೆ ನಾವು ಹೀಗೆ ಕೇಳುವುದೂ ಇಲ್ಲ. ನಮ್ಮ ಸ್ವಭಾವದಲ್ಲಿ ತಪ್ಪಿನ ಕಾರಣವನ್ನು ತಿಳಿದುಕೊಂಡು ಅದನ್ನು ಸರಿಪಡಿಸಿಕೊಳ್ಳಬೇಕೆಂಬ ಹಂಬಲವೂ ನಮಗಿಲ್ಲ.

ಈ ಶ್ಲೋಕದ ಉತ್ತರಾರ್ಧಕ್ಕೆ **ಅನಿಚ್ಛಮಾನೋಽಪಿ ಬಲಾದಾತಾ-ಡ್ಯೇವ ನಿಯೋಜಿತಃ ।** ಎಂದು ಯಾದವಪ್ರಕಾಶರ ಪಾಠ.

ಸುಂಟರಗಾಳಿ, ಜಲಪ್ರವಾಹ–ಮುಂತಾದುವುಗಳಿಂದ ತನಗೆ ಇಷ್ಟವಿಲ್ಲ ದಿದ್ದರೂ ಪ್ರಾಣಿಯು ಬಲವಂತವಾಗಿ ಸೆಳೆದು ಒಯ್ಯಲ್ಪಡುವಂತೆ ಚೇತನನು ತನಗೆ ಇಷ್ಟವಿಲ್ಲದಿದ್ದರೂ ಯಾವ ಬಲಶಾಲಿಯಿಂದ ಪ್ರೇರಿತನಾಗಿ ಪಾಪದಲ್ಲಿ ತೊಡಗುತ್ತಾನೆ? (ಶ್ರೀವೇದಾಂತದೇಶಿಕರು.)

ಕರ್ಮಕ್ಕೆ ಕಾರಣವಾದುವುಗಳು ಕಾಮ-ಕ್ರೋಧ–ಇತ್ಯಾದಿಗಳು. ಇವು ಗಳಲ್ಲಿ ಅತ್ಯಂತಬಲಶಾಲಿಯಾದುದು ಯಾವುದು? ಎಂದು ಅರ್ಜುನನ ಪ್ರಶ್ನೆ. (ಮ.ಭಾ.)

**ಶ್ರೀಭಗವಾನುವಾಚ :**

**ಓಂ ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ॥೩೭॥**

ಭಗವಾನ್ ವಾಸುದೇವನು ಉತ್ತರಿಸುತ್ತಾನೆ :

"ಇದೇ ಕಾಮವು–ಇದೇ ಕ್ರೋಧವು. ಇದು ರಜೋಗುಣದಿಂದ

ಹುಟ್ಟಿರುವುದು. ಮಿತಿಮೀರಿ ತಿನ್ನುವುದು–ಮಹಾಪಾಪಿಯು. ಇದೇ ಇಲ್ಲಿ ವೈರಿಯೆಂದು ತಿಳಿ.

* * *

(ಯಾರಿಂದ ನಾವು ನಿಯಂತ್ರಿತರಾಗಿರುವೆವೆಂಬುದನ್ನು ಶ್ರೀಕೃಷ್ಣನು ನೇರವಾಗಿ ಹೇಳುತ್ತಾನೆ. ಇವುಗಳೇ ಕಾಮ ಮತ್ತು ಕ್ರೋಧ. ಕಾಮ ಎಂದರೆ ಆಸೆ. ಮನುಷ್ಯನಿಗೆ ಆಸೆಯು ತೀರುವುದೇ ಇಲ್ಲ. ಈ ಆಸೆಗೆ ಯಾವುದು ಬೇಕು ; ಯಾವುದು ಬೇಡ–ಎಂಬುದೇ ಇಲ್ಲ. ಪ್ರಪಂಚವೆಲ್ಲಾ ತನ್ನದೇ



ಆದರೂ ಇನ್ನೂ ಬೇಕೆನ್ನುತ್ತದೆ ಈ ಆಸೆ. ಆಸೆಪಟ್ಟ ಒಂದು ವಸ್ತುವು ದೊರಕಿತೆಂದರೆ ಮತ್ತೊಂದರ ಮೇಲೆ ಆಸೆಯು ಹರಿಯುತ್ತದೆ. ಅದು ನಮ್ಮ ವಶವಾಗಿರುವುದಿಲ್ಲ. ನಾವು ಅದರ ವಶವಾಗಿರುತ್ತೇವೆ. ಇಂದ್ರಿಯಗಳು

ಇಚ್ಛಿಸಿದುದೆಲ್ಲವನ್ನೂ ನಾವು ಪೂರೈಸುತ್ತಾ ಹೋಗುತ್ತೇವೆ. ಇಚ್ಛೆಯನ್ನು ಪೂರೈಸುವಾಗ ಕಷ್ಟ-ಸುಖಗಳ ಪರಿವೆಯಿರುವುದಿಲ್ಲ. ಧರ್ಮಾಧರ್ಮಗಳ ವಿವೇಚನೆಯಿರುವುದಿಲ್ಲ. ಕಾರ್ಯಾಕಾರ್ಯಗಳ ವಿವೇಕವೂ ಇರುವುದಿಲ್ಲ.

ಇಚ್ಛೆಯನ್ನು ಪೂರೈಸಿಕೊಳ್ಳುವುದೇ ಪರಮಲಕ್ಷ್ಯವಾಗಿರುತ್ತದೆ. ಅದಕ್ಕೇನಾದರೂ ತಡೆಯಾಯಿತೆಂದರೆ ಅದರ ಜೊತೆಯಲ್ಲೇ ಮತ್ತೊಂದು ಹುಟ್ಟಿಕೊಳ್ಳುತ್ತದೆ. ಅದೇ ಕ್ರೋಧ. ಅದು ಶರೀರವನ್ನೇ ದಹಿಸುತ್ತಿರುತ್ತದೆ. ವಿವೇಚನೆಯನ್ನೇ ಹಾಳುಮಾಡಿಬಿಡುತ್ತದೆ. ಹಿಂದೆ ಹೇಳಿದಂತೆ ಕಾಮವು ಮೋಹಿನೀ ; ಕ್ರೋಧವು ಪಿಶಾಚಿ. ಇವೆರಡೂ ಮನುಷ್ಯನನ್ನು ಬಡಪಟ್ಟಿಗೆ ಬಿಡುವುದಿಲ್ಲ. ಕಾಮವು ರಜೋಗುಣದಿಂದ ಜನ್ಯವಾದುದು. ಮನುಷ್ಯನನ್ನು ಯಾವಾಗಲೂ ಚಡಪಡಿಸುವಂತೆ ಮಾಡುತ್ತದೆ. ಕಾಮವೆಂಬುದು ಮಹಾಶನ-ಹೊಟ್ಟೇಬಾಕ. ಇದಕ್ಕೆ ಎಷ್ಟುಕೊಟ್ಟರೂ ತೃಪ್ತಿಯೇ ಇಲ್ಲ. ಬೆಂಕಿಗೆ ಸೌದೆಯನ್ನು ಹಾಕಿದಂತೆ ಕಾಮಾಗ್ನಿಗೆ ಎಷ್ಟು ಸುರಿದರೂ ಅರಗಿಸಿಕೊಳ್ಳುತ್ತಲೇ ಇರುತ್ತದೆ.

ಕಾಮದ ವಿಷಯವಾಗಿ ಯಯಾತಿಯು ಹೀಗೆ ತನ್ನ ಅನುಭವವನ್ನು ವ್ಯಕ್ತಪಡಿಸಿದ್ದಾನೆ :

**ಪೂರ್ಣಂ ವರ್ಷಸಹಸ್ರಂ ಮೇ ವಿಷಯಾಸಕ್ತಚೇತಸಃ ।**
**ತಥಾಪ್ಯನುದಿನಂ ತೃಷ್ಣಾ ಮಮ ತೇಷೂಪಜಾಯತೇ ॥**

ವಿಷ್ಣುಪುರಾಣ ೪-೧೦-೨೪

ವಿಷಯಾಸಕ್ತನಾಗಿ ಒಂದು ಸಾವಿರ ವರ್ಷಗಳನ್ನೇ ಕಳೆದೆನು. ಅನವರತ ವಾಗಿ ವಿಷಯೋಪಭೋಗಗಳನ್ನು ಅನುಭವಿಸಿದರೂ ಅವುಗಳಲ್ಲಿ ನನಗೆ ಅನುದಿನವೂ ಹೊಚ್ಚಹೊಸದಾಗಿಯೇ ಆಸಕ್ತಿಯು ಹುಟ್ಟುತ್ತಲೇ ಇದೆ.

ಕಾಮಾಭಿಭೂತನಾದವನು ಅಕಾರ್ಯವನ್ನು ಮಾಡಲು ಹಿಂದೆ-ಮುಂದೆ ನೋಡುವುದಿಲ್ಲವೆಂಬುದಕ್ಕೆ ರಾಮಾಯಣದಲ್ಲಿನ ದಶರಥನ ದೃಷ್ಟಾಂತವೇ ಸಾಕು.

ಕೈಕೇಯಿಯು ಕೋಪಗೃಹದಲ್ಲಿರುತ್ತಾಳೆ. ಕಾಮಾಭಿಭೂತನಾದ ದಶರಥನು ಅವಳಲ್ಲಿಗೆ ಹೋಗಿ ಅವಳನ್ನು ಕುರಿತು ಹೇಳುತ್ತಾನೆ :

"ನಿನಗೆ ಯಾರು ಏನು ಮಾಡಿದರು? ಹೇಳು. ನೀನು ಏನನ್ನು

ಹೇಳಿದರೂ ನಾನದನ್ನು ಮಾಡಲು ಸಿದ್ಧನಾಗಿರುವೆನು. ಯಾವ ಅಧರ್ಮಿಯನ್ನು ಬಂಧನದಿಂದ ಬಿಡಿಸಬೇಕಾಗಿದೆ ಹೇಳು. ಯಾವ ಧರ್ಮಾತ್ಮನನ್ನು ನಿನ್ನ ಸಲುವಾಗಿ ಶಿಕ್ಷಿಸಬೇಕಾಗಿದೆ ಬೇಗ ಹೇಳು. ಒಡನೆಯೇ ನಡೆಸಿ ಕೊಡುವೆನು.''

'**ಕಾಮಾತುರಾಣಾಂ ನ ಭಯಂ ನ ಲಜ್ಜಾ**–ಕಾಮಾತುರರಾದವರಿಗೆ ಭಯವಾಗಲೀ, ಲಜ್ಜೆಯಾಗಲೀ ಇರುವುದಿಲ್ಲ.'

ಕ್ರೋಧವು ಮಹಾಪಾಪಿಷ್ಠವಾದುದು. **ಕ್ರುದ್ಧಃ ಪಾಪಂ ನ ಕುರ್ಯಾದ್ಯಃ ಕ್ರುದ್ಧೋ ಹನ್ಯಾದ್ಗುರೂನಪಿ ।**

'ಕ್ರುದ್ಧನಾದ ಯಾವನು ತಾನೇ ಪಾಪವನ್ನು ಮಾಡುವುದಿಲ್ಲ? ಕ್ರುದ್ಧನಾದವನು ಗುರುಜನರನ್ನೂ ಕೊಲ್ಲುತ್ತಾನೆ'–ಎಂದು ಹನುಮಂತನೇ ಹೇಳಿದ್ದಾನೆ. ಸಾಮಾನ್ಯವಾಗಿ ನಮಗೆ ತಿಳಿದಿರುವಂತೆ ದೇಶದಲ್ಲಿ ಆಗುತ್ತಿರುವ ಕೊಲೆಗಳೆಲ್ಲವೂ ಈ ಕಾಮ-ಕ್ರೋಧಗಳಿಗೆ ಸಂಬಂಧಿಸಿದುವುಗಳೇ ಆಗಿವೆ.

ಶ್ರೀಶಂಕರರು ತೃಷ್ಣೆ ಅಥವಾ ಕಾಮದ ವಿಷಯವಾಗಿ ಭಜಗೋವಿಂದ ಸ್ತೋತ್ರದಲ್ಲಿ ಮುತ್ತಿನಂತಹ ನುಡಿಗಳನ್ನಾಡಿದ್ದಾರೆ :

**ಮೂಢ ಜಹೀಹಿ ಧನಾಗಮತೃಷ್ಣಾಂ**
**ಕುರು ಸದ್ಬುದ್ಧಿಂ ಮನಸಿ ವಿತೃಷ್ಣಾಮ್ ।**
**ಯಲ್ಲಭಸೇ ನಿಜಕರ್ಮೋಪಾತ್ತಂ**
**ವಿತ್ತಂ ತೇನ ವಿನೋದಯ ಚಿತ್ತಮ್ ॥೨॥**

ಮೂಢ! ಧನದಾಶೆಯನ್ನು ಪೂರ್ಣವಾಗಿ ಬಿಡು. ಆಶಾರಹಿತವಾದ ಸುಬುದ್ಧಿಯನ್ನು ಹೊಂದು. ನಿನ್ನ ಪೂರ್ವಜನ್ಮದ ಪುಣ್ಯಫಲಾನುಸಾರವಾಗಿ ಎಷ್ಟು ಹಣವನ್ನು ಪಡೆದುಕೊಳ್ಳುವೆಯೋ ಅಷ್ಟರಿಂದಲೇ ತೃಪ್ತಿಯನ್ನು ಹೊಂದು.

**ಅಙ್ಗಂ ಗಲಿತಂ ಪಲಿತಂ ಮುಣ್ಡಂ**
**ದಶನವಿಹೀನಂ ಜಾತಂ ತುಣ್ಡಮ್ ।**
**ವೃದ್ಧೋ ಯಾತಿ ಗೃಹೀತ್ವಾ ದಣ್ಡಂ**
**ತದಪಿ ನ ಮುಞ್ಚತ್ಯಾಶಾಪಿಣ್ಡಮ್ ॥೧೨॥**

ಅಂಗಾಂಗಗಳು ಶಿಥಿಲವಾಗಿವೆ. ತಲೆಯು ನರೆತುಹೋಗಿದೆ. ಹಲ್ಲು

ಗಳು ಉದುರಿಹೋಗಿ ಬೊಚ್ಚುಬಾಯಾಗಿದೆ. ದೊಣ್ಣೆಯ ಅವಲಂಬನೆ ಯಿಂದ ವೃದ್ಧನು ನಡೆಯುತ್ತಾ ಹೋಗುತ್ತಾನೆ. ಇಷ್ಟಾದರೂ ಸಹ ಪಿಂಡ ದಂತಹ ಅತಿದೊಡ್ಡದಾದ ಆಶೆಯು ಮಾತ್ರ ಅವನನ್ನು ಬಿಟ್ಟುಹೋಗಿಲ್ಲ.

ಕಡೆಯದಾಗಿ ಶ್ರೀಕೃಷ್ಣನು ಹೇಳುತ್ತಾನೆ : 'ಅರ್ಜುನ! ಈ ಕಾಮ-ಕ್ರೋಧಗಳೇ ನಿನ್ನಿಂದ ಮಾಡಬಾರದುದನ್ನು ಮಾಡಿಸುತ್ತವೆ. ನಿನಗೆ ಇಚ್ಛೆಯಿಲ್ಲದಿದ್ದರೂ ಅಕಾರ್ಯವನ್ನೂ ಮಾಡಿಸುತ್ತವೆ. ಆದುದರಿಂದ ನೀನು ಈ ಕಾಮ ಅಥವಾ ಕ್ರೋಧವನ್ನೇ ಪರಮಶತ್ರುವೆಂದು ತಿಳಿ.' (ಕಾಮ-ಕ್ರೋಧಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಆದುದರಿಂದ ಏಕವಚನವನ್ನು ಹೇಳಿದ್ದಾರೆ.)

ಕಾಮದ ಪ್ರಾಪ್ತಿಗೆ ಯಾರಾದರೂ ಅಡ್ಡಿಮಾಡಿದರೆ ಅದು ಕ್ರೋಧವಾಗಿ ಪರಿಣಮಿಸುತ್ತದೆ. ಆದುದರಿಂದ ಅವೆರಡೂ ಒಂದೇ ಆಗಿರುತ್ತವೆ.

**ಸ ಏಷ ಕಾಮಃ ಪ್ರತಿಹತಃ ಕೇನಚಿತ್ ಕ್ರೋಧತ್ವೇನ ಪರಿಣಮತೇ** (ಶಂ.ಭಾ.)

**ಏಷ ಏವ ಪ್ರತಿಹತಗತಿಃ ಪ್ರತಿಹತಿಹೇತುಭೂತಚೇತನಾನ್ಪ್ರತಿ ಕ್ರೋಧರೂಪೇಣ ಪರಿಣತಃ** (ರಾ.ಭಾ.)

ಇವೆರಡಕ್ಕೂ ಅಂತಃಕರಣವೊಂದೇ ಉಪಾದಾನಕಾರಣ. ಕಾಮವು ಕ್ರೋಧಕ್ಕೆ ಉಪಾದಾನಕಾರಣವಲ್ಲ. ಕಾಮದ ಅನಂತರ ಕ್ರೋಧವು ಬರು ತ್ತದೆ. ಆದುದರಿಂದ ಸೂಕ್ಷ್ಮವಾಗಿರುವ ಅತ್ಯಂತಭೇದವನ್ನು ಕೆಲವರು ಗಮನಿಸಿಲ್ಲ.

**ಏಕಾನ್ತಃಕರಣೋಪಾದಾನತ್ವಲಕ್ಷಣಾತ್ ಆನನ್ತರ್ಯಲಕ್ಷಣಾಚ್ಚ ಸಂಕರಾತ್ ಸೂಕ್ಷ್ಮಂ ಕಾಮಕ್ರೋಧಯೋಃ ಅತ್ಯನ್ತಭೇದಂ ನ ಜಾನನ್ತಿ.**

'ಕಾಮದಿಂದ ಕೋಪವು ಉಂಟಾಗುತ್ತದೆ' ಎನ್ನುವಿರಲ್ಲಾ–ಹಾಗಾದರೆ ಗುರುನಿಂದೆ ಮುಂತಾದುವುಗಳನ್ನು ಮಾಡಿದಾಗ ಕೋಪವುಂಟಾಗುತ್ತದೆಯಲ್ಲಾ! ಅದಕ್ಕೆ ಕಾಮವು ಹೇಗೆ ಕಾರಣ?

ಅಲ್ಲಿಯೂ ಕೋಪಕ್ಕೆ ನಿಮಿತ್ತ ಅವನ ಗುರುಭಕ್ತಿ ಮತ್ತು ನಿಂದೆಮಾಡಬಾರದೆಂಬ ಕಾಮ. (ಮ.ಭಾ.)

**ಮಹಾಶನಃ** : ಹೆಚ್ಚು ಭೋಗ್ಯವಿಷಯಗಳನ್ನುಳ್ಳದ್ದು.

**ಮಹಾಪಾಪ್ಮಾ** : ಬ್ರಹ್ಮಹತ್ಯೆಯೇ ಮುಂತಾದ ಮಹಾಪಾಪಗಳಿಗೆ ಕಾರಣವಾದುದು.

ವೈರೀ : ಎಲ್ಲ ಪುರುಷಾರ್ಥಗಳಿಗೂ ವಿರೋಧಿಯಾದುದು.) (ಮ.ಭಾ.)

**ಓಂ ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ ।**
**ಯಥೋಲ್ಬೇಣಾವೃತೋ ಗರ್ಭಸ್ತಥಾ ತೇನೇದಮಾವೃತಮ್ ॥೩೮॥**

ಬೆಂಕಿಯು ಹೊಗೆಯಿಂದಲೂ, ಕನ್ನಡಿಯು ಕೊಳೆಯಿಂದಲೂ, ಗರ್ಭವು ಜರಾಯುವಿನಿಂದಲೂ (ಮೇಲುಪೊರೆಯಿಂದಲೂ) ಹೇಗೆ ಆವರಿಸ ಲ್ಪಟ್ಟಿದೆಯೋ ಹಾಗೆ ಇದು (ಆತ್ಮವು ) ಕಾಮದಿಂದ ಮುಚ್ಚಲ್ಪಟ್ಟಿದೆ.

* * *

(ಬೆಂಕಿಯು ಉರಿಯುವಾಗ ಹೊಗೆಯು ಅದನ್ನು ಸುತ್ತಿಕೊಂಡಿರುತ್ತದೆ. ಕನ್ನಡಿಯ ಮೇಲೆ ಧೂಳು ಕುಳಿತಿದ್ದರೆ ಪ್ರತಿಬಿಂಬವು ಚೆನ್ನಾಗಿ ಕಾಣುವುದಿಲ್ಲ. ಜರಾಯುವಿನಿಂದ ಗರ್ಭವು ಆವೃತವಾಗಿರುತ್ತದೆ. ಅದೇ ರೀತಿಯಲ್ಲಿ ಜ್ಞಾನವು ಕಾಮದಿಂದ ಆವೃತವಾಗಿರುತ್ತದೆ. ಮನುಷ್ಯಮಾತ್ರದವರಿಗೆ ಈ ಕಾಮವಿರುತ್ತದೆ. ಕಾಮವಿಲ್ಲದಿರುವ ಮನುಷ್ಯನೇ ಇಲ್ಲ. ಕಾಮನೆಯು ಸಾತ್ತ್ವಿಕವಾಗಬಹುದು : ರಾಜಸವಾಗಬಹುದು ಅಥವಾ ತಾಮಸವಾಗ ಬಹುದು. ಗುಣಾತೀತನಾಗುವವರೆಗೂ ಯಾವುದಾದರೂ ಗುಣಸಂಬಂಧ ವಾದ ಕಾಮವು ಇದ್ದೇ ಇರುತ್ತದೆ. ಮೇಲೆ ಹೇಳಿರುವುದನ್ನೂ ಸಹ ಮೂರು ಬಗೆಯಾಗಿ ವಿಂಗಡಿಸಬಹುದಾಗಿದೆ.

ಸಾತ್ತ್ವಿಕಕಾಮ : ಇದು ಅಗ್ನಿಯ ಮೇಲಿನ ಹೊಗೆಯಂತಿರುತ್ತದೆ. ಹೀಗೆ ಅಗ್ನಿಯ ಸುತ್ತಲೂ ಹೊಗೆಯಾಡುತ್ತಿದ್ದರೂ ಸಹ ಅಗ್ನಿಯು ಅಲ್ಪ ಸ್ವಲ್ಪ ಕಾಣಿಸಿಕೊಳ್ಳುತ್ತಲೇ ಇರುತ್ತದೆ. ಅದೇ ರೀತಿಯಲ್ಲಿ ಸಾತ್ತ್ವಿಕಕಾಮನಿಗೆ ಜ್ಞಾನವು ಸಂಪೂರ್ಣವಾಗಿ ಮಸುಕಾಗಿರುವುದಿಲ್ಲ. ಹೊಗೆಯು ಚಂಚಲವಾಗಿರುವಂತೆ ಕಾಮದ ಆವರಣವು ಬಹುಬೇಗ ದೂರಸರಿದು ಜ್ಞಾನದ ಪ್ರಾಪ್ತಿಯಾಗಬಹುದು.

ಎರಡನೆಯದು ರಾಜಸಕಾಮ : ಕನ್ನಡಿಯ ಮೇಲಿನ ಧೂಳಿನಂತಿದೆ. ಧೂಳಿದ್ದರೆ ನಮ್ಮ ಮುಖವು ಸ್ವಲ್ಪವೂ ಕಾಣುವುದೇ ಇಲ್ಲ. ಧೂಳನ್ನು ತೆಗೆ

ಯಲು ಸ್ವಲ್ಪ ಪ್ರಯತ್ನಿಸಬೇಕು. ಅದನ್ನು ಚೆನ್ನಾಗಿ ಉಜ್ಜಬೇಕು. ರಾಜಸ ಕಾಮವುಳ್ಳವನು ಜ್ಞಾನವನ್ನು ಪಡೆದುಕೊಳ್ಳಬೇಕಾದರೆ ಚೆನ್ನಾಗಿ ಕೃಷಿ ಮಾಡಬೇಕು. ಅಷ್ಟು ಸುಲಭವಾಗಿ ಜ್ಞಾನಪ್ರಾಪ್ತಿಯಾಗುವುದಿಲ್ಲ.

ಮೂರನೆಯದು ತಾಮಸಕಾಮ : ಜರಾಯುವು ಗರ್ಭವನ್ನು ಯಾವ ರೀತಿಯಲ್ಲಿ ೯-೧೦ ತಿಂಗಳಿನವರೆಗೆ ಬಿಟ್ಟೇಹೋಗುವುದಿಲ್ಲವೋ ಅದೇ ರೀತಿಯಲ್ಲಿ ತಾಮಸಕಾಮವು ಅನೇಕಜನ್ಮಗಳವರೆಗೂ ದೇಹಿಯನ್ನು ಬಿಟ್ಟು ಕದಲುವುದಿಲ್ಲ. ಅನೇಕಜನ್ಮಗಳ ಸಂಸ್ಕಾರದಿಂದ ಅದು ಬಿಟ್ಟುಹೋಗಿ ಜೀವನು ತಾಮಸ-ರಾಜಸ-ಸಾತ್ತ್ವಿಕಗುಣಗಳನ್ನು ಅನುಕ್ರಮವಾಗಿ ದಾಟಿ ಜ್ಞಾನವನ್ನು ಪಡೆಯಬೇಕಾಗುತ್ತದೆ. ಈ ರೀತಿಯಾಗಿ ಸಾತ್ತ್ವಿಕ-ರಾಜಸ- ತಾಮಸಗುಣಗಳ ವಿವರಣೆಯನ್ನು ಇಲ್ಲಿ ಶ್ರೀಕೃಷ್ಣನು ಹೇಳಿರುತ್ತಾನೆ.

ಮೊದಲನೆಯ ಉಪಮಾನವು : ಈ ಆವರಣವು ಸಹಜ—ಎಂಬುದನ್ನೂ, ಎರಡನೆಯದು : ಆವರಣವು ತೊಲಗಿದರೂ ಮತ್ತೆ ಮತ್ತೆ ಉಪಾಧಿವಶದಿಂದ ಬರುತ್ತಿರುತ್ತದೆ—ಎಂಬುದನ್ನೂ, ಮೂರನೆಯದು : ನಮ್ಮ ಇಷ್ಟದಿಂದ ಅದನ್ನು ತೊಲಗಿಸುವುದು ಅಶಕ್ಯ—ಎಂಬುದನ್ನೂ ಸೂಚಿಸುತ್ತದೆ.

(ಶ್ರೀವೇದಾಂತದೇಶಿಕರು.)

ಈ ಶ್ಲೋಕದಲ್ಲಿ **ಇದಂ** ಎಂಬುದು ಯಾವುದನ್ನು ಹೇಳುತ್ತದೆ?

ಜ್ಞಾನವನ್ನು ಹೇಳುತ್ತದೆ. ಮೇಲಿನ ದೃಷ್ಟಾಂತಗಳಂತೆ ಜ್ಞಾನವು ಕಾಮದಿಂದ ಆವರಿಸಲ್ಪಟ್ಟಿದೆ. (ಶಂ.ಭಾ.)

ಎಲ್ಲ ಜಂತುಗಳನ್ನೂ ಹೇಳುತ್ತದೆ. ಮೇಲಿನ ಉಪಮಾನಗಳಂತೆ ಶರೀರಧಾರಿಗಳಾದ ಎಲ್ಲ ಜಂತುಗಳೂ ಕಾಮದಿಂದ ಆವರಿಸಲ್ಪಟ್ಟಿವೆ.

(ರಾ.ಭಾ.)

ಈಶ್ವರ, ಅಂತಃಕರಣ, ಜೀವ—ಎಂಬ ಮೂರು ವಸ್ತುಗಳನ್ನೂ ಹೇಳುತ್ತದೆ.

ಪ್ರಕಾಶಮಾನವಾದ ಅಗ್ನಿಯ ಹೊಗೆಯಿಂದ ಹೇಗೋ ಹಾಗೆ ಪರಮಾತ್ಮನು ಈ ಆವರಣದ ಕಾರಣದಿಂದ ನಮಗೆ ಚೆನ್ನಾಗಿ ದರ್ಶನಕ್ಕೆ ಸಿಗುವುದಿಲ್ಲ.

ಕನ್ನಡಿಯು ಮಲದಿಂದ ಆವರಿಸಲ್ಪಟ್ಟು ಇತರರ ಅಭಿವ್ಯಕ್ತಿಗೆ ಕಾರಣ

ವಾಗುವುದಿಲ್ಲ. ಹಾಗೆಯೇ ಅಂತಃಕರಣವು ಕಾಮದಿಂದ ಆವರಿಸಲ್ಪಟ್ಟು ಪರಮಾತ್ಮನ ಅಭಿವ್ಯಕ್ತಿಗೆ ಕಾರಣವಾಗುವುದಿಲ್ಲ.

ಗರ್ಭವು ಜರಾಯುವಿನಿಂದ ಆವರಿಸಲ್ಪಟ್ಟು ಬದ್ಧವಾಗಿರುವಂತೆ ಕಾಮ ದಿಂದ ಆವರಿಸಲ್ಪಟ್ಟ ಜೀವನೂ ಬದ್ಧನಾಗಿದ್ದಾನೆ. (ಮ.ಭಾ.)]

**ಓಂ ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।**
**ಕಾಮರೂಪೇಣ ಕೌನ್ತೇಯ ದುಷ್ಪೂರೇಣಾನಲೇನ ಚ ॥೩೯॥**

ಜ್ಞಾನಿಗೆ ನಿತ್ಯಶತ್ರುವೂ, ತುಂಬಲು ಅತಿಕಷ್ಟವೂ, ಪರ್ಯಾಪ್ತಿಯಿಲ್ಲದ್ದೂ ಆದ ಈ ಕಾಮವೆಂಬ ವಸ್ತುವಿನಿಂದ ಜ್ಞಾನವು ಆವರಿಸಲ್ಪಟ್ಟಿದೆ.

* * *

(ಜ್ಞಾನಿಗೆ ನಿತ್ಯವೈರಿಯಾದುದು ಕಾಮ. ಅಂತೆಯೇ ಕಾಮಿಗೆ ನಿತ್ಯ ವೈರಿಯಾದುದೂ ಜ್ಞಾನವೆಂದೇ ಇಟ್ಟುಕೊಳ್ಳಬಹುದು. ಈ ಕಾಮವು ದುಷ್ಪೂರವಾದುದು. ಕಾಮವೆಂಬ ಕೊಳಗಕ್ಕೆ ಎಷ್ಟು ವಿಷಯವಸ್ತುಗಳನ್ನು ಹಾಕಿದರೂ ಅದು ತುಂಬುವುದೇ ಇಲ್ಲ. ಮಹಾಶನ ಅದು. ಹೊಟ್ಟೇಬಾಕ. ಅನಲ. ಅಲಂ ಎಂದರೆ ಸಾಕು ಎಂದರ್ಥ. ಅದು ಇಲ್ಲದುದು ಅನಲ.

ಯಾವಾಗಲೂ ಬೇಕು-ಬೇಕು ಇನ್ನಷ್ಟುಬೇಕು ಎನ್ನುತ್ತಲೇ ಇರುತ್ತದೆ. ಇಂತಹ ಅದ್ಭುತಾಕಾರನಾದ ಕಾಮಾಸುರನಿಂದ ಮನುಷ್ಯನ ಜ್ಞಾನವು ಮುಚ್ಚಿಹೋಗಿದೆ. ಶ್ರೀರಾಮಕೃಷ್ಣರು ಕಾಮದ ವಿಷಯವಾಗಿ ಒಂದು ಕಥೆ ಯನ್ನು ಹೇಳುತ್ತಿದ್ದರು. ವರ್ತಕರು ತಮ್ಮ ದಿನಸಿಮಳಿಗೆಗಳಿಗೆ ಹೆಗ್ಗಣಗಳು ಬರದಿರಲಿ-ಎಂಬ ಆಶಯದಿಂದ ಹೆಗ್ಗಣಗಳು ಬರುವ ದಾರಿಯಲ್ಲಿಯೇ ಪುರಿ ಯನ್ನೋ–ಅವಲಕ್ಕಿಯನ್ನೋ ಚೆಲ್ಲುತ್ತಿದ್ದರು. ಹೆಗ್ಗಣಗಳು ಬಂದು ಅದನ್ನೇ ತಿಂದು ಹಿಂದಿರುಗುತ್ತಿದ್ದುವು. ದಿನಸಿ ಇದ್ದ ಉಗ್ರಾಣದ ಕಡೆಗೆ ಹೋಗುತ್ತಿರ ಲಿಲ್ಲ. ಅಂತೆಯೇ ಆತ್ಮವಸ್ತುವಿನ ಹಾದಿಯಲ್ಲಿ ಅನೇಕವಿಷಯವಸ್ತುಗಳು ಬಿದ್ದಿವೆ. ಇಂದ್ರಿಯಗಳು ಆ ವಿಷಯವಸ್ತುಗಳನ್ನು ಹುಡುಕಿ ತಿನ್ನುವುದರಲ್ಲಿ ಆಸಕ್ತವಾಗಿರುತ್ತವೆಯೇ ಹೊರತು ಆತ್ಮವಸ್ತುವಿನ ಕಡೆಗೆ ಅಥವಾ ಜ್ಞಾನದ ಕಡೆಗೆ ಕಣ್ಣೆತ್ತಿಯೂ ನೋಡುವುದಿಲ್ಲ. ಅಥವಾ ವಿಷಯವಸ್ತುಗಳನ್ನೇ ಉಪ ಭೋಗಿಸುತ್ತಾ ಮೆರೆಯುತ್ತಿರುವ ಇಂದ್ರಿಯಗಳಿಗೆ–'ಆತ್ಮವಸ್ತು ಎಂಬುದು ಒಂದಿದೆ' ಎಂಬ ಅರಿವೂ ಸಹ ಉಂಟಾಗುವುದಿಲ್ಲ.

ಕಾಮವು ಜ್ಞಾನಿಗೆ ನಿತ್ಯವೈರಿ ಹೇಗೆ? ಎಂದರೆ : ತನ್ನನ್ನು ಅನರ್ಥಕ್ಕೆ ತಳ್ಳಿರುವುದು ಈ ಕಾಮವೇ–ಎಂದು ಅದರ ಬಗೆಗೆ ಜ್ಞಾನಿಯು ಮೊದಲಿನಿಂದಲೂ ಭಾವಿಸುವುದರಿಂದ ಅವನಿಗೇ ಅದು ಎಂದೆಂದಿಗೂ ವೈರಿಯಾಗಿರುವುದು. ಮೂರ್ಖನಾದರೋ ತನಗೆ ಆಸೆ ತುಂಬಿರುವಾಗ ಅದನ್ನು ಮಿತ್ರನಂತೆ ಭಾವಿಸುತ್ತಾ ಅದರ ಫಲವಾದ ದುಃಖವು ಒದಗಿದಾಗ ಮಾತ್ರ ಅದರಿಂದ ಕೆಡುಕುಂಟಾಯಿತು ಎನ್ನುತ್ತಾನೆ. ಆದುದರಿಂದ ಜ್ಞಾನಿಗೆ ಮಾತ್ರವೇ ಅದು ಎಂದೆಂದಿಗೂ ವೈರಿ.

ಮೂರ್ಖನಿಗೆ ಕಾಮವು ಒಮ್ಮೆ ಮಿತ್ರ, ಒಮ್ಮೆ ಶತ್ರು–ಎರಡೂ ಆಗಬಹುದು. (ಶಂ.ಭಾ.)

ಇಲ್ಲಿರುವ ಜ್ಞಾನೀ ಎಂಬ ಶಬ್ದವು ಶುದ್ಧಜ್ಞಾನಾನುಭಾವವನ್ನು ಹೇಳುವುದಿಲ್ಲ. ಏಕೆಂದರೆ : ಆ ಅವಸ್ಥೆಯಲ್ಲಿ ಅವನ ಜ್ಞಾನಕ್ಕೆ ಕಾಮದ ಆವರಣವಿರುವುದಿಲ್ಲ. ಆದುದರಿಂದ 'ಜ್ಞಾನದ ಸ್ವಭಾವದವನಾದ ಚೇತನನು' ಎಂದು ಆ ಶಬ್ದಕ್ಕೆ ಅರ್ಥ. (ರಾ.ಭಾ.)

ನಿತ್ಯವೈರೀ = ಅನಾದಿವೈರೀ ಆತ್ಮಸಾಕ್ಷಾತ್ಕಾರವಾಗುವವರೆಗೂ ವೈರಿಯಾಗಿರುವುದರಿಂದ ಅದು ನಿತ್ಯವೈರಿ. (ಶ್ರೀವೇದಾಂತದೇಶಿಕರು.)

ಜ್ಞಾನಿನಃ = ಜ್ಞಾನಿನೋಽಪಿ. ಶಾಸ್ತ್ರಜನಿತವಾದ ಜ್ಞಾನವುಳ್ಳವನಿಗೂ ಕೂಡ ಹೀಗಾಗುವಾಗ ಇನ್ನು ಅಲ್ಪಜ್ಞಾನವುಳ್ಳವನ ಬಗೆಗೆ ಹೇಳತಕ್ಕದ್ದೇನಿದೆ? (ಮ.ಭಾ.)

**ದುಷ್ಪೂರೇಣ :** ಈ ಪದವು 'ಹೊಂದಲು ಅಯೋಗ್ಯವಾದ ವಿಷಯವುಳ್ಳದ್ದು' ಎಂಬುದನ್ನು ಜ್ಞಾಪಿಸುತ್ತದೆ.

**ತೃಷ್ಣಾಖನಿರಗಾಧೇಯಂ ದುಷ್ಪೂರಾ ಕೇನ ಪೂರ್ಯತೇ ।**
**ಯಾ ಮಹದ್ಭಿರಪಿ ಕ್ಷಿಪ್ತೈಃ ಪೂರ್ಣೈರೇವ ನಿಖನ್ಯತೇ ॥**

ಈ ತೃಷ್ಣೆ ಎಂಬ ಗಣಿಯು ಅಗಾಧವಾದುದು. ಇದನ್ನು ತುಂಬಲು ಹೇಗೆ ಸಾಧ್ಯ? ತುಂಬುವುದಕ್ಕಾಗಿ ದೊಡ್ಡ ಪದಾರ್ಥಗಳನ್ನು ಎಸೆದರೆ ಅವು ಗಳಿಂದಲೇ ಆ ಗಣಿಯು ಇನ್ನೂ ಆಳವಾಗಿ ಅಗೆಯಲ್ಪಡುತ್ತಲೇ ಇರುತ್ತದೆ.
(ಮ.ಭಾ.)

ಅನಲ ಎಂಬುದು ಪರ್ಯಾಪ್ತಿರಹಿತವಾದುದು–ಎಂಬ ಅರ್ಥವನ್ನು

ಹೇಳುತ್ತದೆ. ಅಥವಾ ಅನಲಶಬ್ದಕ್ಕೆ ಅಗ್ನಿ ಎಂದೇ ಅರ್ಥಹೇಳಿ ಗೌಣಾರ್ಥದಲ್ಲಿ ಅದು ಕಾಮವನ್ನು ಸೂಚಿಸುತ್ತದೆ–ಎಂದೂ ಹೇಳಬಹುದು. ಅಗ್ನಿಗೆ ವಿಷಯ ವಿಭಾಗವಾಗಲೀ ಪರ್ಯಾಪ್ತಿಯಾಗಲೀ ಇಲ್ಲ. ಹಾಗೆಯೇ ಕಾಮಕ್ಕೂ ಇರುವುದಿಲ್ಲ. (ಶ್ರೀವೇದಾಂತದೇಶಿಕರು.)

ಕಾಮವನ್ನು ಪೂರೈಸಿಕೊಳ್ಳುವುದೂ ಕಷ್ಟ. ಅದು ತೃಪ್ತಿಯಾದ ಮೇಲೂ ಸಾಕು ಎನಿಸುವುದಿಲ್ಲ. ಇಂದ್ರಾದಿ ಪದವಿಗಳನ್ನು ಗಳಿಸುವುದು ಕಷ್ಟ. ಹಾಗೆ ಕಷ್ಟದಿಂದ ಗಳಿಸಿದರೂ ಬ್ರಹ್ಮಾದಿಪದವಿಗಳು ಬೇಕೆಂಬ ಆಸೆಯುಂಟಾಗುತ್ತದೆ. ಈ ಉದಾಹರಣೆಗಳಂತೆ ಅದು ದುಷ್ಪೂರ ಮತ್ತು ಅನಲ.) (ಮ.ಭಾ.)

ಇಂತಹ ಕಾಮವು ಎಲ್ಲಿದೆ? ಮತ್ತು ಯಾವುದನ್ನು ಆಶ್ರಯಿಸಿಕೊಂಡಿದೆ ಎಂಬುದನ್ನು ಶ್ರೀಕೃಷ್ಣನು ಹೇಳುತ್ತಾನೆ :

**ಓಂ ಇನ್ದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ ।**
**ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥೪೦॥**

ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ–ಇವೇ ಇದಕ್ಕೆ ಆಶ್ರಯ ವೆನಿಸಿರುವುವು. ಇವುಗಳಿಂದ ಜ್ಞಾನವನ್ನು ಮುಸುಕಿಕೊಂಡು ಇದು ದೇಹಿ ಯನ್ನು ಬಗೆ-ಬಗೆಯಾಗಿ ಮೋಹಗೊಳಿಸುತ್ತಿರುವುದು.

* * *

(ಕಾಮಕ್ಕೆ ಆಶ್ರಯವಾದುವುಗಳು ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ.

ಪಾಚಿಯ ನೀರಿನಲ್ಲಿ ಮಲೇರಿಯಾದ ಸೊಳ್ಳೆಗಳು ವೃದ್ಧಿಯಾಗುವಂತೆ ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿಗಳಲ್ಲಿ ಕಾಮಕ್ರಿಮಿಗಳು ವೃದ್ಧಿ ಯಾಗುತ್ತಿರುತ್ತವೆ.

ಪೇಟೆಯಲ್ಲಿ ಒಂದು ಒಳ್ಳೆಯ ಮಾವಿನ ಹಣ್ಣನ್ನು ಕಣ್ಣು (ಜ್ಞಾನೇಂದ್ರಿಯವು ) ನೋಡುತ್ತದೆ. ಆಗಲೇ ನಾಲಿಗೆಯು (ಜ್ಞಾನೇಂದ್ರಿ ಯವು) ಆ ಹಣ್ಣನ್ನು ಚಪ್ಪರಿಸುತ್ತದೆ. ಎರಡೂ ಸೇರಿ ತಮ್ಮ ಕಾಮನೆ ಯನ್ನು ಮನಸ್ಸಿಗೆ ತಿಳಿಸುತ್ತವೆ. ಇವೆಲ್ಲವೂ ಒಂದೇಕ್ಷಣದಲ್ಲಾಗುವ ಕಾರ್ಯಗಳು. ಬುದ್ಧಿಯು, ಹೇಗೆ ತೆಗೆದುಕೊಳ್ಳಬೇಕು? ಕಿಸೆಯಲ್ಲಿ ಕಾಸು

ಎಷ್ಟಿದೆ?–ಎಂಬುದನ್ನು ಕ್ಷಣಕಾಲ ತರ್ಕಿಸಿ ಮನಸ್ಸಿಗೆ ತೆಗೆದುಕೊಳ್ಳುವಂತೆ ಸೂಚನೆ ಕೊಡುತ್ತದೆ. ಮನಸ್ಸು ಕರ್ಮೇಂದ್ರಿಯಗಳಿಗೆ (ಕೈ-ಕಾಲುಗಳಿಗೆ) ಹಣ್ಣನ್ನು ತೆಗೆದುಕೊಳ್ಳುವಂತೆ ಆಜ್ಞೆಮಾಡುತ್ತದೆ. ಅಂತಃಕರಣದಲ್ಲಿ ಬೇರೊಂದು ವಿಧವಾಗಿ ತರ್ಕವಾಗುತ್ತಿರುತ್ತದೆ. 'ಹಣತಂದಿದ್ದು ಯಾವುದಕ್ಕಾಗಿ? ಯಾವುದಕ್ಕೆ ವೆಚ್ಚಮಾಡುತ್ತಿದ್ದೇನೆ?' ಆದರೆ ಅದರ ತರ್ಕವೇನೂ ಕಾರ್ಯರೂಪಕ್ಕೆ ಬರುವುದಿಲ್ಲ. ಕರ್ಮೇಂದ್ರಿಯಗಳ ಸಹಕಾರದಿಂದ ಹಣ್ಣನ್ನು ತಂದೂ ಆಗುತ್ತದೆ. ತಿಂದೂ ಆಗುತ್ತದೆ. ಈ ರೀತಿಯಾಗಿ ಎಲ್ಲ ಇಂದ್ರಿಯಗಳೂ, ಮನಸ್ಸು ಮತ್ತು ಬುದ್ಧಿಯೂ ಸೇರಿ ಕಾಮವನ್ನು ತೃಪ್ತಿಗೊಳಿಸುತ್ತವೆ. ಆದರೆ ಸೂಕ್ಷ್ಮವ್ಯವಹಾರಗಳನ್ನು ಮನುಷ್ಯನು ತರ್ಕಿಸಲು ಹೋಗುವುದಿಲ್ಲ. ಯಾವ ಕಾರ್ಯವೇ ಆಗಬೇಕಾದರೂ ಈ ಹತ್ತು ಇಂದ್ರಿಯಗಳು (ಕರ್ಮೇಂದ್ರಿಯಗಳು ಐದು-ಜ್ಞಾನೇಂದ್ರಿಯಗಳು ಐದು), ಮನಸ್ಸು ಮತ್ತು ಬುದ್ಧಿ ಇವುಗಳ ವ್ಯಾಪಾರ ನಡೆದೇ ತೀರಬೇಕು. ಕಾಮಕ್ಕೆ ಇವುಗಳೇ ವಾಸಸ್ಥಾನಗಳಾಗಿವೆ. ಅರ್ಥಾತ್ ಕಾಮವು ಸರ್ವವ್ಯಾಪಿಯಾಗಿದೆ. ಮನುಷ್ಯನನ್ನೇ ಸಂಪೂರ್ಣವಾಗಿ ಆವರಿಸಿಕೊಂಡುಬಿಟ್ಟಿದೆ.

ಮನುಷ್ಯನು ಕಾಮದ ತಾದಾತ್ಮ್ಯವನ್ನು ಹೊಂದಿಬಿಟ್ಟಿದ್ದಾನೆ. ಕಾಮದ ಮುದ್ದೆಯಾಗಿಬಿಟ್ಟಿದ್ದಾನೆ. ಕಾಮವು ಈ ಹತ್ತು ಇಂದ್ರಿಯಗಳ ಮೂಲಕವೂ ಮನಸ್ಸು ಮತ್ತು ಬುದ್ಧಿಯ ಮೂಲಕವೂ ಆತ್ಮನ ಮೇಲೆ ದಾಳಿನಡೆಸಿ ಆತ್ಮನನ್ನೇ ಮೋಹಗೊಳಿಸಿಬಿಟ್ಟಿದೆ. ಆತ್ಮನಿಗೆ ತಾನಾರೆಂಬ ಅರಿವೇ ಇಲ್ಲದಂತೆ ಈ ಕಾಮವು ಮಾಡಿಬಿಟ್ಟಿದೆ. ಕಾಮದ ಆಕ್ರಮಣದಿಂದಾಗಿ ಆತ್ಮನಿಗೆ ದೇಹವೇ ತಾನೆಂಬ ಭ್ರಾಂತಿಯುಂಟಾಗಿಬಿಟ್ಟಿದೆ.

ನಿತ್ಯವೈರಿಯಾದ ಕಾಮವನ್ನು ವಧಿಸಬೇಕಾಗಿರುವುದರಿಂದ ಅದರ ಆಶ್ರಯ ಯಾವುದೆಂಬುದನ್ನು ಈ ಶ್ಲೋಕವು ಹೇಳುತ್ತದೆ. ಆಶ್ರಯವನ್ನೇ ನಾಶಮಾಡಿದರೆ ಶತ್ರುವು ನಾಶಹೊಂದುತ್ತಾನೆ. (ಮ.ಭಾ.)

**ಓಂ ತಸ್ಮಾತ್ತ್ವಮಿನ್ದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ॥೪೧॥**

ಆದುದರಿಂದ ಎಲೈ ಭರತರ್ಷಭನೇ! ನೀನು ಮೊದಲು ಇಂದ್ರಿಯ

ಗಳನ್ನು ಬಿಗಿಹಿಡಿದು ಜ್ಞಾನ-ವಿಜ್ಞಾನಗಳನ್ನು ನಾಶಗೊಳಿಸುವ ಈ ಪಾಪಿಯನ್ನು ಕಿತ್ತೊಗೆದುಬಿಡು.

* * *

(ಕಾಮವೈರಿಯ ದಮನಕ್ಕೆ ಶ್ರೀಕೃಷ್ಣನು ಉಪಾಯವನ್ನು ಹೇಳುತ್ತಾನೆ: ಈ ಕಾಮಕ್ಕೆ ಆಶ್ರಯಕೊಟ್ಟವರನ್ನು ನೀನು ನಿನ್ನ ಹತೋಟಿಗೆ ತೆಗೆದುಕೋ. ಕಳ್ಳರನ್ನು ಹಿಡಿಯಲಾಗದಿದ್ದರೆ ಕಳ್ಳರಿಗೆ ಆಶ್ರಯಕೊಟ್ಟವನನ್ನಾದರೂ ಶಿಕ್ಷಿಸಿದರೆ ಕಳ್ಳರು ಉಳಿದುಕೊಳ್ಳಲು ಸ್ಥಾನವಿಲ್ಲದೇ ಓಡಿಹೋಗುವರಲ್ಲವೇ? ಅದೇ ರೀತಿಯಲ್ಲಿ ಅನಂಗನಾದ ಕಾಮನನ್ನು ಹಿಡಿದು ಶಿಕ್ಷಿಸಲು ಸಾಧ್ಯವಿಲ್ಲ. ಕಾಮನಿಗೆ ಆಶ್ರಯವಿತ್ತವರನ್ನು ಹತೋಟಿಗೆ ತೆಗೆದುಕೊಂಡು ಅವರ ಮನೆಗಳಲ್ಲಿ ಕಾಮನು ಆಶ್ರಯಮಾಡಿಕೊಳ್ಳಲು ಅವಕಾಶವಾಗದಂತೆ ನೋಡಿಕೊಂಡರೆ ಸಾಕಲ್ಲವೇ? ಆದುದರಿಂದ ಮೊದಲು ನೀನು ನಿನ್ನ ಇಂದ್ರಿಯಗಳನ್ನು ಹತೋಟಿಗೆ ತೆಗೆದುಕೊಳ್ಳಬೇಕು. ಅನಂತರ ಜ್ಞಾನ-ವಿಜ್ಞಾನನಾಶಕನಾದ ಪಾಪಿಷ್ಠನಾದ ಈ ಕಾಮನನ್ನು ಇಂದ್ರಿಯಗಳೆಂಬ ಮನೆಗಳಿಂದ ಉಚ್ಚಾಟನೆ ಮಾಡಿಸಬೇಕು.

ಜ್ಞಾನ–ವಿಜ್ಞಾನ ಎಂಬುದಕ್ಕೆ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಅರ್ಥಮಾಡಿರುತ್ತಾರೆ.

ಜ್ಞಾನಂ = ಸರಿಯೇ–ತಪ್ಪೇ ಎಂದು ಬೌದ್ಧಿಕವಾಗಿ ತಿಳಿದುಕೊಳ್ಳುವುದು. ವಿಜ್ಞಾನಂ = ತಿಳಿದುಕೊಂಡಿದ್ದನ್ನು ಅನುಭವಿಸುವುದು. ಜ್ಞಾನ-ವಿಜ್ಞಾನ Theory and Experience.

**ಜ್ಞಾನಂ = ಶಾಸ್ತ್ರತಃ ಆಚಾರ್ಯತಶ್ಚ ಆತ್ಮಾದೀನಾಂ ಅವಬೋಧಃ। ವಿಜ್ಞಾನಂ = ವಿಶೇಷತಃ ತದನುಭವಃ.**

ಜ್ಞಾನವೆಂದರೆ ಶಾಸ್ತ್ರದಿಂದಲೂ ಆಚಾರ್ಯರಿಂದಲೂ ಆತ್ಮನೇ ಮುಂತಾದುವುಗಳನ್ನು ತಿಳಿದುಕೊಳ್ಳುವುದು. ವಿಜ್ಞಾನವೆಂದರೆ ಇಂತಹುದೆಂದು ಅದನ್ನು ಅನುಭವಕ್ಕೆ ತಂದುಕೊಳ್ಳುವುದು.

**ಜ್ಞಾನವಿಜ್ಞಾನನಾಶನಂ = ಆತ್ಮಸ್ವರೂಪವಿಷಯಸ್ಯ ಜ್ಞಾನಸ್ಯ, ತದ್ವಿವೇಕವಿಷಯಸ್ಯ ವಿಜ್ಞಾನಸ್ಯ ಚ ನಾಶನಂ.**

**ಜ್ಞಾನಂ– ಆತ್ಮಸ್ವರೂಪಜ್ಞಾನ– ಪ್ರತ್ಯಕ್ಷ– ಜ್ಞಾನತ್ವ– ಆನಂದತ್ವಾದಿಗಳುಂಟೆಂಬ ಸ್ವರೂಪಜ್ಞಾನ.**

ವಿಜ್ಞಾನಂ = ಆತ್ಮವಿವೇಕವಿಷಯಜ್ಞಾನ. ಅಣುತ್ವ-ನಿತ್ಯತ್ವ-ಜ್ಞಾತೃತ್ವ-ಭೋಕ್ತೃತ್ವ-ಕರ್ತೃತ್ವಾದಿ ವೈಲಕ್ಷಣ್ಯವನ್ನು ಬೋಧಿಸುವ ಧರ್ಮವರ್ಗವೆಲ್ಲವೂ ವಿಜ್ಞಾನ.

ವಿಜ್ಞಾನಂ = ವಿಶೇಷ ಜ್ಞಾನ ; ಜ್ಞಾನ ಮತ್ತು ಅಜ್ಞಾನಗಳನ್ನೂ ಮೀರಿದ್ದು ವಿಜ್ಞಾನ.

ಶ್ರೀರಂಗಮಹಾಗುರುಗಳು ಜ್ಞಾನ-ವಿಜ್ಞಾನಗಳ ವಿಷಯವಾಗಿ ಹೀಗೆ ಹೇಳಿದ್ದಾರೆ : ಜ್ಞಾನದ ವಿಕಾಸವೇ ವಿಜ್ಞಾನ. ವಿಜ್ಞಾನವು ವಿಕಾರತೊಲಗಿದಾಗ ಜ್ಞಾನವಾಗುತ್ತದೆ. ವಿಜ್ಞಾನದಿಂದ ಹಿಂದೆ ಹೊರಟಾಗ ಜ್ಞಾನ. ಜ್ಞಾನವು ವಿಕಾಸವಾಗಿ ಅವರೋಹಣಕ್ರಮದಿಂದ ವಿಜ್ಞಾನವೆನಿಸಿಕೊಳ್ಳುತ್ತದೆ. ಜ್ಞಾನದಿಂದ ವಿಕಾಸಗೊಂಡ ಪ್ರಕೃತಿಯೇ ವಿಜ್ಞಾನರೂಪವಾದುದು. ಪ್ರಕೃತಿಯು ಪ್ರಕೋಪಗೊಂಡರೆ ಮಾರಕವಸ್ತುವಾಗುತ್ತದೆ. ಅದೇ ಪ್ರಸನ್ನವಾಗಿ ನಿಂತರೆ ಕ್ಷಣಮಾತ್ರದಲ್ಲಿಯೇ ತಾರಕವಾಗುತ್ತದೆ.)

ಓಂ ಇನ್ದ್ರಿಯಾಣಿ ಪರಾಣ್ಯಾಹುರಿನ್ದ್ರಿಯೇಭ್ಯಃ ಪರಂ ಮನಃ ।
ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥೪೨॥

ಇಂದ್ರಿಯಗಳು ಹೆಚ್ಚಿನವು ಎನ್ನುತ್ತಾರೆ. ಇಂದ್ರಿಯಗಳಿಗಿಂತ ಮನಸ್ಸು ಹೆಚ್ಚಿನದು. ಮನಸ್ಸಿಗಿಂತಲೂ ಬುದ್ಧಿಯೇ ಹೆಚ್ಚಿನದು. ಆದರೆ ಬುದ್ಧಿಗಿಂತಲೂ ಅವನು (ಪರಮಾತ್ಮನು) ಶ್ರೇಷ್ಠನು.

* * *

(ದೇಹದ ಸಕಲವ್ಯಾಪಾರಗಳೂ ಇಂದ್ರಿಯಗಳ ಮೂಲಕವಾಗಿಯೇ ನಡೆಯುತ್ತವೆ. ಆದುದರಿಂದ ಇಂದ್ರಿಯಗಳು ಹೆಚ್ಚಿನವು ಅಥವಾ ಶ್ರೇಷ್ಠವಾದುವು–ಎಂದು ಹೇಳುತ್ತಾರೆ. ಇಂದ್ರಿಯಗಳಿಗಿಂತಲೂ ಹೆಚ್ಚಿನದು ಯಾವುದು? ಮನಸ್ಸು. ಮನಸ್ಸೇ ಇಲ್ಲದಿದ್ದರೆ ಇಂದ್ರಿಯಗಳು ಏನೂ ಮಾಡಲಾರವು. ಮನಸ್ಸಿನಲ್ಲಿ ಏನನ್ನೋ ಯೋಚಿಸುತ್ತಿದ್ದಾಗ ಕಣ್ಣುಮುಂದೆ ಯಾರು ಸುಳಿದಾಡಿದರೂ ಕಾಣಿಸುವುದೇ ಇಲ್ಲ. ಆದುದರಿಂದ ಇಂದ್ರಿಯದೊಡನೆ ಮನಸ್ಸು ಸೇರಿದರೆ ಮಾತ್ರವೇ ವಿಷಯಗ್ರಹಣವಾಗುತ್ತದೆ. ಆದುದರಿಂದ ಇಂದ್ರಿಯಗಳಿಗಿಂತಲೂ ಮನಸ್ಸು ಶ್ರೇಷ್ಠವಾದುದು.

ಮನಸ್ಸಿಗಿಂತಲೂ ಅತಿಸೂಕ್ಷ್ಮವಾದುದು ಮತ್ತು ಶ್ರೇಷ್ಠವಾದುದು ಬುದ್ಧಿ. ಅದು ತನ್ನ ಗಮನಕ್ಕೆ ಬಂದ ವಿಷಯಗಳ ಅನುಭವಗಳನ್ನೆಲ್ಲಾ ಜೋಡಿಸುವುದು. ಅದರ ಹಿಂದೆ ಇರುವ ಅನುಭವಗಳನ್ನು ಕಂಡುಹಿಡಿಯುವುದು. ಒಂದು ವಸ್ತುವಿನ ಗುಣವೇನು? ಅದನ್ನು ಪಡೆಯಬೇಕಾದರೆ ಏನು ಮಾಡಬೇಕು? ದಾರಿಯಲ್ಲಿರುವ ಆತಂಕಗಳು ಯಾವುವು? ಅವುಗಳಿಂದ ಪಾರಾಗುವುದು ಹೇಗೆ?–ಇವುಗಳನ್ನು ಚೆನ್ನಾಗಿ ವಿಚಾರಮಾಡಿ ಮನಸ್ಸಿಗೆ ತಿಳಿಸುವುದು. ಸಾಮಾನ್ಯವಾಗಿ ಮನಸ್ಸು ಬುದ್ಧಿಯ ನಿರ್ದೇಶವಿಲ್ಲದೆ ಇಂದ್ರಿಯಗಳ ಮೂಲಕ ಕೆಲಸಮಾಡುವುದಿಲ್ಲ. ಈ ಬುದ್ಧಿಗಿಂತಲೂ ಹಿರಿಯದಾದುದು ಮತ್ತೊಂದಿದೆ. ಅದೇ ಆತ್ಮಾ. ಅದೇ ಯಜಮಾನ. ಬುದ್ಧಿಯು ಅವನ ಆಳು. ಈ ಆತ್ಮಾವಲಂಬನೆಯಿಂದ ನೀನು ಕಾಮನನ್ನು ಕಾಮದ ಅಧಿಷ್ಠಾನವಾದ ಬುದ್ಧಿ, ಮನಸ್ಸು ಮತ್ತು ಇಂದ್ರಿಯಗಳಿಂದ ಓಡಿಸಬೇಕು. ಕಠೋಪನಿಷತ್ತಿನಲ್ಲಿ ಇದೇ ವಿಷಯವನ್ನು ವಿವರಿಸಿ ಹೇಳುವ ಮಂತ್ರಗಳಿವೆ.

**ಇನ್ದ್ರಿಯೇಭ್ಯಃ ಪರಾಹ್ಯರ್ಥಾ ಅರ್ಥೇಭ್ಯಶ್ಚ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿರ್ಬುದ್ಧೇರಾತ್ಮಾ ಮಹಾನ್ಪರಃ ॥೧೦॥**
**ಮಹತಃ ಪರಮವ್ಯಕ್ತಂ ಅವ್ಯಕ್ತಾತ್ಪುರುಷಃ ಪರಃ ।**
**ಪುರುಷಾನ್ನ ಪರಂ ಕಿಂಚಿತ್ಸಾ ಕಾಷ್ಠಾ ಪರಾ ಗತಿಃ ॥೧೧॥**

–ಮೂರನೆಯ ವಲ್ಲಿ.

ಇಂದ್ರಿಯಗಳಿಗಿಂತಲೂ ವಿಷಯಗಳು ಶ್ರೇಷ್ಠವಾದುವುಗಳು. ವಿಷಯಗಳಿಗಿಂತಲೂ ಮನಸ್ಸು ಶ್ರೇಷ್ಠವಾದುದು. ಮನಸ್ಸಿಗಿಂತಲೂ ಬುದ್ಧಿಯು ಶ್ರೇಷ್ಠವಾದುದು. ಬುದ್ಧಿಗಿಂತಲೂ ಮಹತ್ ಎಂಬ ಆತ್ಮನು ಶ್ರೇಷ್ಠನು.

ಶತ್ರುವಾದ ಕಾಮನನ್ನು ಕೊಲ್ಲಲು ಆಯುಧಭೂತವಾಗಿರುವ ಜ್ಞಾನವನ್ನು ತಿಳಿಸುವುದಕ್ಕೋಸ್ಕರ ಇಲ್ಲಿ ಜ್ಞೇಯವನ್ನು ನಿರೂಪಿಸಲಾಗಿದೆ.

(ಮ.ಭಾ.)

**ಬುದ್ಧೇಃ ಪರತಸ್ತು ಸಃ :** ಇಲ್ಲಿ ಸಃ ಎಂಬುದು ಕಾಮಕ್ಕೆ ಅನ್ವಯಿಸು ತ್ತದೆ. ಬುದ್ಧಿಯ ಪರ್ಯಂತವಾದ ಎಲ್ಲವೂ ಉಪರತವಾದರೂ ಕೂಡ ರಜೋಜನಿತವಾದ ಕಾಮವು ಇದ್ದೇ ಇರುತ್ತದೆ. ಅದೇ ಈ ಇಂದ್ರಿಯ ಮುಂತಾದುವುಗಳನ್ನು ತನ್ನ ವಿಷಯದಲ್ಲಿ ತೊಡಗಿಸಿ ಆತ್ಮಜ್ಞಾನವನ್ನು ತಡೆ

ಗಟ್ಟುತ್ತದೆ. ಆದುದರಿಂದ ಬುದ್ಧಿಗಿಂತಲೂ ಪರವಾದುದು ಕಾಮವೇ ಆಗಿದೆ. (ರಾ.ಭಾ.)

ಅದು ಕಾಮವನ್ನು ಹೇಳುವುದಿಲ್ಲ ; ಜೀವವನ್ನೂ ಹೇಳುವುದಿಲ್ಲ. ಬುದ್ಧಿಗಿಂತ ಮಾತ್ರವಲ್ಲ ; ಅದಕ್ಕಿಂತಲೂ ಮೇಲಿನವನಾದ ಅವ್ಯಕ್ತಕ್ಕಿಂತಲೂ ಶ್ರೇಷ್ಠನಾದ ಪುರುಷೋತ್ತಮನಾದ ಪರಮಾತ್ಮನನ್ನು ಹೇಳುತ್ತದೆ.

**ನ ಚಾತ್ರ ಜೀವ ಉಚ್ಯತೇ 'ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ' ಇತ್ಯುಕ್ತತ್ವಾತ್ ಅವಿಜ್ಞಾಯ ಪರಂ ಮತ್ತಃ ಜಯಃ ಕಾಮಸ್ಯ ವೈ ಕುತಃ। ಅತಃ ಪರಮಾತ್ಮಜ್ಞಾನಮೇವ ಅತ್ರ ವಿವಕ್ಷಿತಮ್.** (ಮ.ಭಾ.) ]

ಓಂ ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥೪೩॥**

ಮಹಾಬಾಹುವೇ! ಹೀಗೆ ಬುದ್ಧಿಗಿಂತಲೂ ಹೆಚ್ಚಿನವನಾಗಿರುವ ಆತ್ಮವನ್ನು ತಿಳಿದುಕೊಂಡು ಆತ್ಮವನ್ನು ಆತ್ಮದಿಂದ ಸ್ತಂಭನಮಾಡಿ ಕಾಮವೆಂಬ ಎದುರಿಸಲಸಾಧ್ಯವಾದ ಶತ್ರುವನ್ನು ಕೊಂದುಹಾಕು.

* * *

(ಇಂದ್ರಿಯವಿಷಯಗಳು, ಇಂದ್ರಿಯಗಳು, ಮನಸ್ಸು, ಬುದ್ಧಿ, ಆತ್ಮ ಇವುಗಳನ್ನು ನಾವು ವಿಂಗಡಿಸಿ ತಿಳಿದುಕೊಳ್ಳಬೇಕು. ಆತ್ಮಾನಾತ್ಮವಿವೇಕಜ್ಞರಾಗಬೇಕು. ಆತ್ಮನಿಗೆ ಹುಟ್ಟು-ಸಾವುಗಳಿಲ್ಲ. ಆ ಆತ್ಮನ ವಿಷಯವಾಗಿ ನಾವು ಯೋಚಿಸುವುದಿಲ್ಲ. ಹುಟ್ಟಿ-ಸಾಯುವ ದೇಹದ ವಿಷಯದಲ್ಲಿ ಆತ್ಮಭಾವವನ್ನಿಟ್ಟುಕೊಂಡು ಅದರ ಪೋಷಣೆಗಾಗಿ ಹಗಲಿರುಳೂ ದುಡಿಯುವೆವು. 'ನಾನು' ಯಾರೋ ಅದು ನನಗೆ ಗೊತ್ತಿಲ್ಲ. 'ನಾನು' ಯಾವುದಲ್ಲವೋ ಅದರ ವಿಷಯವು ನಮಗೆ ಚೆನ್ನಾಗಿ ತಿಳಿದಿದೆ. ದೇಹವು 'ನಾವಲ್ಲ.' ಅದರ ವಿಷಯವನ್ನು ನಾವು ಚೆನ್ನಾಗಿ ತಿಳಿದಿರುತ್ತೇವೆ. ಆದುದರಿಂದ ನಮ್ಮ ಮೊದಲಿನ ಕರ್ತವ್ಯವೇನೆಂದರೆ : ಬುದ್ಧಿಗೂ ಪರನಾದವನು, ಶ್ರೇಷ್ಠನಾದವನು, ಸೂಕ್ಷ್ಮನಾದವನು ಆತ್ಮನೆಂದು ತಿಳಿದುಕೊಳ್ಳಬೇಕು. ಆ ಆತ್ಮನನ್ನು ಮನಸ್ಸಿನಿಂದ ಹುಡುಕಿ ಹಿಡಿಯಬೇಕು.

ಮೊದಲು ಮನಸ್ಸನ್ನು ಗೆಲ್ಲಬೇಕು. ಒಳ್ಳೆಯ ಮನಸ್ಸಿನಿಂದ ಕೆಟ್ಟ ಮನಸ್ಸನ್ನು ಗೆಲ್ಲಬೇಕು. ಉತ್ತಮಸಂಸ್ಕಾರದಿಂದ ಅಧಮಸಂಸ್ಕಾರವನ್ನು ನಾಶಗೊಳಿಸಬೇಕು.

**ಮನ ಏವ ಮನುಷ್ಯಾಣಾಂ ಕಾರಣಂ ಬನ್ಧಮೋಕ್ಷಯೋಃ ।**

ಸಂಸಾರದ ಬಂಧನಕ್ಕೂ ಮತ್ತು ಮೋಕ್ಷಕ್ಕೂ ಮನಸ್ಸೇ ಕಾರಣ. ಆ ಮನಸ್ಸಿಗೆ ನಮ್ಮನ್ನು ಉದ್ಧಾರಮಾಡುವ ಶಕ್ತಿಯೂ ಇದೆ ; ಹಾಳುಮಾಡುವ ಶಕ್ತಿಯೂ ಇದೆ.

ಆನೆಗಳಿಂದಲೇ ಆನೆಗಳನ್ನು ಪಳಗಿಸುವಂತೆ–ಮನಸ್ಸಿನಿಂದಲೇ ಮನಸ್ಸನ್ನು ಪಳಗಿಸಬೇಕು.

ಯಾವುದು ಕೆಟ್ಟುದು ಯಾವುದು ಒಳ್ಳೆಯದು–ಎಂಬುದನ್ನು ಬುದ್ಧಿಯ ಮೂಲಕವಾಗಿ ಯೋಚಿಸಿ ಒಳ್ಳೆಯದನ್ನೇ ಆರಿಸಿಕೊಂಡು ಕಾರ್ಯಮಾಡುತ್ತಿದ್ದರೆ ಉತ್ತಮಸಂಸ್ಕಾರವಾಗುತ್ತದೆ. ಮನಸ್ಸನ್ನು ಹತೋಟಿಗೆ ತಂದುಕೊಂಡು ದುರ್ಧರ್ಷನಾದ ಕಾಮವೆಂಬ ಶತ್ರುವನ್ನು ನಿಗ್ರಹಿಸು–ಎನ್ನುತ್ತಾನೆ, ಶ್ರೀಕೃಷ್ಣ.

ಕಾಮವು ಅತ್ಯಂತದುರ್ಜಯ. ಯೋಗಿಗಳಿಗೂ ಇದರ ಕಾಟವು ತಪ್ಪಿದ್ದಲ್ಲ. **ಕಾಮರೂಪಂ** ಎನ್ನುವುದಕ್ಕೆ ಇಷ್ಟಬಂದ ನಾನಾರೂಪಗಳನ್ನು ತಾಳುವ–ಎಂದೂ ಅರ್ಥಮಾಡಬಹುದು. ಕಾಮನು ರಾಕ್ಷಸರಂತೆ ನಾನಾ ರೂಪಗಳನ್ನು ಧರಿಸಬಲ್ಲನು. ಒಂದು ರೂಪವನ್ನು ಹೊರಗಟ್ಟಿದರೆ ಮತ್ತೊಂದು ರೂಪದಲ್ಲಿ ನುಸುಳಿಕೊಳ್ಳುತ್ತಾನೆ. ವಿಷಯವಸ್ತುಗಳನ್ನು ಬೇಡುತ್ತಲೇ ಇರುತ್ತಾನೆ. ಕೊಡದೇ ಇದ್ದರೆ ಕಾಡುತ್ತಾನೆ. ಅವನ ಯಮಯಾತನೆಯನ್ನು ತಪ್ಪಿಸಿಕೊಳ್ಳುವುದಕ್ಕೆ ನಾವು ಅವನ ಅಡಿಯಾಳಾಗುತ್ತೇವೆ. ಹೀಗೆ ಅವನು ಮಹಾಪ್ರತಾಪಶಾಲೀ. ದುರಾಸದನಾದ, ಮನಸ್ಸಿನಲ್ಲೇ ಅಧಿಷ್ಠಾನಹೊಂದಿರುವ, ಕಾಮರೂಪನಾದ ಶತ್ರುವನ್ನು ಮನಸ್ಸಿನಿಂದಲೇ ನಿಗ್ರಹಿಸಬೇಕಾಗಿದೆ.

**ಆತ್ಮನಾ ಆತ್ಮಾನಂ ಸಂಸ್ತಭ್ಯ** = ಸುಸಂಸ್ಕೃತವಾದ ಮನಸ್ಸಿನಿಂದ ಆತ್ಮನನ್ನು ಚೆನ್ನಾಗಿ ಸಮಾಧಿಯಲ್ಲಿರಿಸಿ. (ಶಂ.ಭಾ.)

ಮನಸ್ಸನ್ನು ಬುದ್ಧಿಯಿಂದ ಕರ್ಮಯೋಗದಲ್ಲಿ ನೆಲೆಗೊಳಿಸಿ.

(ರಾ.ಭಾ.)

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಕರ್ಮಯೋಗೋ ನಾಮ ತೃತೀಯೋಽಧ್ಯಾಯಃ**

ಭಗವದ್ಗೀತೆಯ–೩ನೆಯ ಅಧ್ಯಾಯವು ಮುಗಿಯಿತು.

ಭೀಷ್ಮಪರ್ವದಲ್ಲಿ-೨೭ನೆಯ ಅಧ್ಯಾಯವು ಮುಗಿಯಿತು.

# ಭಗವದ್ಗೀತಾ-೪ನೆಯ ಅಧ್ಯಾಯ

೨೮ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ಸಗುಣಭಗವಂತನ ಪ್ರಭಾವ : ನಿಷ್ಕಾಮಕರ್ಮಯೋಗ : ಮಹಾತ್ಮರಾದ ಯೋಗಿಗಳ ಆಚರಣೆ ಮತ್ತು ಅವರ ಮಹಿಮೆ : ವಿವಿಧ ಯಜ್ಞಗಳ ಮತ್ತು ಜ್ಞಾನದ ಮಹಿಮೆ

**ಶ್ರೀಭಗವಾನುವಾಚ :**

**ಓಂ ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।**
**ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥೧॥**

ಭಗವಂತನು ಹೇಳುತ್ತಾನೆ :

"ಅರ್ಜುನ! ಅವ್ಯಯವಾದ ಈ ಯೋಗವನ್ನು ನಾನು ವಿವಸ್ವಂತನಿಗೆ (ಆದಿತ್ಯನಿಗೆ) ಹೇಳಿದೆನು. ಅವನು ಮನುವಿಗೆ ಹೇಳಿದನು. ಮನುವು ಇಕ್ಷ್ವಾಕುವಿಗೆ ಹೇಳಿದನು.

* * *

(ಇದುವರೆಗೆ ಶ್ರೀಕೃಷ್ಣನು ಹೇಳಿದ ಯೋಗವು ಅವ್ಯಯವಾದುದು. ಅದಕ್ಕೆ ನಾಶವೆಂಬುದೇ ಇಲ್ಲ. 'ಈಶ್ವರಾರ್ಪಣಬುದ್ಧಿಯಿಂದ ಅಸಕ್ತನಾಗಿ ಕಾರ್ಯಮಾಡು. ಕರ್ಮಫಲಕ್ಕೆ ಅಂಟಿಕೊಳ್ಳಬೇಡ. ಕರ್ತವ್ಯದೃಷ್ಟಿಯಿಂದ ಕರ್ಮಮಾಡು. ಮನಸ್ಸನ್ನು ಹತೋಟಿಯಲ್ಲಿಟ್ಟುಕೊಂಡು ಕರ್ಮಮಾಡು.

ಇವೇ ಯೋಗದ ಮೂಲತತ್ತ್ವಗಳು. ಇಂತಹ ಅವ್ಯಯವಾದ ನಾಶ ರಹಿತವಾದ ಯೋಗವನ್ನು ನಾನು ವಿವಸ್ವಂತನಿಗೆ ಹೇಳಿದೆನು'–ಎನ್ನುತ್ತಾನೆ ಶ್ರೀಕೃಷ್ಣ.

ವಿವಸ್ವಂತ ಎಂದರೆ ಆದಿತ್ಯ. ಕ್ಷತ್ರಿಯರ ಒಂದು ಪರಂಪರೆಯು ಆದಿತ್ಯನಿಂದ ಪ್ರಾರಂಭವಾಯಿತು.

ಶ್ರೀಕೃಷ್ಣನು ಸೂರ್ಯನಿಗೇಕೆ ಹೇಳಿದನು? ಅಥವಾ ಕ್ಷತ್ರಿಯರಿಗೆ ಏಕೆ ಹೇಳಿದನು? ಬ್ರಾಹ್ಮಣರಿಗೇಕೆ ಹೇಳಲಿಲ್ಲ?–ಎಂಬುದಕ್ಕೆ ಸಮಾಧಾನವನ್ನು ಹೀಗೆ ಹೇಳಬಹುದಾಗಿದೆ :

ಭಗವಂತನು ಈ ಯೋಗವಿದ್ಯೆಯನ್ನು ಹಿರಣ್ಯಗರ್ಭನಿಗೂ ಉಪದೇಶಿಸಿದ್ದನು. ಅವನಿಂದ ಸನಕಾದಿಮುನಿಗಳೂ ನಾರದರೇ ಮುಂತಾದವರೂ ಅದನ್ನು ಗ್ರಹಿಸಿ ಮುಂದುವರಿಸಿದರು. ಹಾಗೆಯೇ ಆದಿತ್ಯನಿಗೆ ಭಗವಂತನು ಯೋಗವನ್ನು ಉಪದೇಶಿಸಿದಮೇಲೆ ಅದು ಅವನ ಪುತ್ರನಾದ ಮನು ಮುಂತಾದವರ ಮೂಲಕ ಮುಂದುವರಿಯಿತು.

ಇಲ್ಲಿ ಭಗವಂತನು ಯೋಗಕ್ಕೆ ಕ್ಷತ್ರಿಯಪರಂಪರೆಯನ್ನೇ ಹೇಳಲು ಕಾರಣ : ಕ್ಷತ್ರಿಯನೇ ಆಗಿರುವ ಅರ್ಜುನನಿಗೆ ಆ ಆದರ್ಶವು ಹೆಚ್ಚು ಸುಲಭವೂ ಸಹಜವೂ ಆಗಿದೆಯೆಂದು ಮನವರಿಕೆ ಮಾಡಲೋಸುಗ.

ಇಲ್ಲಿಯವರೆಗೂ ಎರಡನೆಯ ಮತ್ತು ಮೂರನೆಯ ಅಧ್ಯಾಯಗಳಲ್ಲಿ ಹೇಳಿರುವ ಕರ್ಮಯೋಗವನ್ನು ಉಪಾಯವಾಗಿ ಹೊಂದಿರುವ ಯಾವ ಜ್ಞಾನಯೋಗವುಂಟೋ ಅದನ್ನು ಇಲ್ಲಿ ವಂಶಪರಂಪರಾಕಥನದಿಂದ ಭಗವಂತನು ಸ್ತುತಿಸುತ್ತಾನೆ. (ಶಂ.ಭಾ.)

ಕರ್ಮಯೋಗದ ಪ್ರಾಮುಖ್ಯವನ್ನೇ ಇಲ್ಲಿ ಭಗವಂತನು ಒತ್ತಿ ಹೇಳುತ್ತಾನೆ. ಮನ್ವಂತರದ ಆದಿಯಲ್ಲೇ ಉಪದೇಶಮಾಡಲ್ಪಟ್ಟಿರುವುದರಿಂದ ಅದೇ (ಕರ್ಮಯೋಗವೇ) ಅರ್ಜುನನಿಗೆ ಕರ್ತವ್ಯಜ್ಞಾನಯೋಗದಲ್ಲಿ ಅಂತರ್ಗತವಾಗಿರುವುದರಿಂದ ಅದು ಜ್ಞಾನಯೋಗಾಕಾರವೂ ಆಗಿದೆ. ಅಂತೆಯೇ ಕರ್ಮಯೋಗದ ಸ್ವರೂಪ, ಅದರ ಭೇದಗಳು ಮತ್ತು ಕರ್ಮಯೋಗದಲ್ಲಿ

ಜ್ಞಾನಾಂಶವೇ ಮುಖ್ಯವಾಗಿರುವಿಕೆ ಮತ್ತು ಪ್ರಾಸಂಗಿಕವಾಗಿ ಭಗವದವ ತಾರದ ತತ್ತ್ವ–ಇವುಗಳು ಈ ಅಧ್ಯಾಯದ ವಿಷಯ. (ರಾ.ಭಾ.)

ಬುದ್ಧಿಗೆ ಪರನಾಗಿರುವ ಪರಮಾತ್ಮನ ಮಾಹಾತ್ಮ್ಯ, ಕರ್ಮಭೇದ ಮತ್ತು ಜ್ಞಾನದ ಮಾಹಾತ್ಮ್ಯ–ಇವುಗಳು ಈ ಅಧ್ಯಾಯದ ವಿಷಯ. (ಮ.ಭಾ.)

ಅವ್ಯಯಂ : ಈ ಜ್ಞಾನನಿಷ್ಠೆಯೆಂಬ ಯೋಗದ ಫಲವಾದ ಮೋಕ್ಷವು ಅವ್ಯಯ (ಅವಿನಾಶಿ) ವಾದುದರಿಂದ ಯೋಗವನ್ನೇ ಅವ್ಯಯವೆಂದು ಕರೆದಿದೆ. (ಶಂ.ಭಾ.)

ವಿವಸ್ವತೇ....ಪ್ರೋಕ್ತವಾನ್ : 'ನಿನ್ನನ್ನು ಯುದ್ಧದಲ್ಲಿ ಪ್ರೋತ್ಸಾಹಿಸುವುದಕ್ಕೋಸ್ಕರ ಈ ಯೋಗವನ್ನು ಈಗ ಹೇಳುತ್ತಿದ್ದೇನೆ'–ಎಂದು ಭಾವಿಸಬಾರದು. ಮನ್ವಂತರದ ಪ್ರಾರಂಭದಲ್ಲೇ ನಾನು ಈ ಮೋಕ್ಷಸಾಧನವಾದ ಯೋಗವನ್ನು ಆದಿತ್ಯನಿಗೆ ಉಪದೇಶಮಾಡಿದ್ದೆನು.) (ರಾ.ಭಾ.)

**ಓಂ ಏವಂ ಪರಮ್ಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥೨॥**

ಹೀಗೆ ಪರಂಪರೆಯಿಂದ ಬಂದಿರುವ ಈ ಯೋಗವನ್ನು ರಾಜರ್ಷಿಗಳು ಬಲ್ಲವರಾಗಿದ್ದರು. ಪರಂತಪ! ಆ ಯೋಗವು ದೀರ್ಘವಾದ ಕಾಲಾವಧಿಯಲ್ಲಿ ನಷ್ಟವಾಯಿತು.

* * *

(ಪರಂಪರೆ ಎಂದರೆ ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಬರುವುದು. ಕೆಲವು ವಿದ್ಯೆಗಳು ಪರಂಪರಾಗತವಾಗಿ ಬಂದಿರುತ್ತವೆ. ಕೆಲವು ಮಂತ್ರಗಳೂ ಪರಂಪರಾಗತವಾಗಿ ಬಂದಿರುತ್ತವೆ. ಕೆಲವು ವ್ರತಗಳೂ ಪರಂಪರಾಗತವಾಗಿ ಬಂದಿರುತ್ತವೆ. ತಂದೆಯು ಮಗನಿಗೆ ಉಪದೇಶಿಸುತ್ತಾನೆ. ನಮ್ಮ ಭಾರತೀಯರಲ್ಲಿ ಅನೇಕವಿದ್ಯೆಗಳು ಹೀಗೆ ಪರಂಪರಾಗತವಾಗಿ ಬಂದಿವೆ.

ಮರಣಕಾಲವು ಬಂದಾಗಲೂ ಯಾವುದಾದರೂ ಕಾರಣದಿಂದ ಬೇರೆಯವರಿಗೆ ಉಪದೇಶಿಸದಿದ್ದರೆ (ಗ್ರಹಿಸಲು ಯೋಗ್ಯನಾದ ಅಧಿಕಾರಿಯು ಸಿಕ್ಕದಿದ್ದರೆ) ಆ ವಿದ್ಯೆಯು ಅವನ ಜೊತೆಯಲ್ಲಿಯೇ ಹೋಗಿಬಿಡುತ್ತದೆ.

ಭಗವಂತನಿಂದ ಉಪದಿಷ್ಟವಾಗಿ ಆದಿತ್ಯನೇ ಮುಂತಾದವರ ಸಂಪ್ರ ದಾಯಪರಂಪರೆಯಲ್ಲಿ ಬಂದ ಈ ಯೋಗವು ಕಾಲಕ್ರಮದಲ್ಲಿ ಅಧಿಕಾರಿಗಳ ಬುದ್ಧಿಮಾಂದ್ಯವೇ ಮುಂತಾದ ದೋಷಗಳಿಂದ ವಿಚ್ಛಿನ್ನವಾಗಿಬಿಟ್ಟಿದೆ.

ಪರಂಪರೆಯಿಂದ ಬಂದ ಯೋಗವಿದ್ಯೆಯನ್ನು ರಾಜರ್ಷಿಗಳು ತಿಳಿದು ಕೊಂಡಿದ್ದರು. ರಾಜ್ಯಭಾರವನ್ನೂ ಮಾಡುತ್ತಿದ್ದು ಈಶ್ವರಾರ್ಪಣಬುದ್ಧಿಯಿಂದ ಕರ್ಮಮಾಡಿ ಕರ್ಮಫಲತ್ಯಾಗವನ್ನು ಮಾಡುತ್ತಿದ್ದವರನ್ನು ರಾಜರ್ಷಿಗಳೆಂದು ಕರೆಯುತ್ತಿದ್ದರು. ಆದರೆ ಮುಂದು-ಮುಂದಿನ ರಾಜರಲ್ಲಿ ಕರ್ಮೋಪಭೋಗಪ್ರವೃತ್ತಿಯೇ ಹೆಚ್ಚುತ್ತಾ ಬಂದುದರಿಂದ ಈ ಯೋಗವು ನಷ್ಟವಾಗಿ ಹೋಯಿತು.

ನಷ್ಟ ಎಂಬ ಪದಕ್ಕೆ ಶ್ರೀರಾಮಾನುಜರು 'ವಿನಷ್ಟಪ್ರಾಯಃ' ಬಹುಮಟ್ಟಿಗೆ ನಷ್ಟವಾಗಿತ್ತು–ಎಂದು ಭಾಷ್ಯಮಾಡಿದ್ದಾರೆ. ಏಕೆಂದರೆ : ವ್ಯಾಸ, ಭೀಷ್ಮ, ಅಕ್ರೂರ, ವಿದುರ–ಮುಂತಾದ ಯೋಗಿಗಳು ಆಗಲೂ ಇದ್ದರು.

ನಷ್ಟ ಇತ್ಯತ್ರ ಅತ್ಯನ್ತವಿಚ್ಛೇದಃ ನಾಭಿಮತಃ। ವ್ಯಾಸಭೀಷ್ಮಾಕ್ರೂರಾದೇಃ ತದಾನೀಮಪಿ ವಿದ್ಯಮಾನತ್ವಾತ್.)

(ವೇದಾಂತದೇಶಿಕರು.)

**ಓಂ ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ ।**
**ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ॥೩॥**

ಆ ಪುರಾತನವಾದ ಯೋಗವೇ–ನನಗೆ ಭಕ್ತನೂ ಮತ್ತು ಗೆಳೆಯನೂ ಆಗಿರುವೆಯೆಂದು–ಈಗ ನಿನಗೆ ನನ್ನಿಂದ ಹೇಳಲ್ಪಟ್ಟಿತು. ಏಕೆಂದರೆ ಇದು ಉತ್ತಮವಾದ ರಹಸ್ಯವು.

* * *

(ನಾನು ಹಿಂದೆ ಸೂರ್ಯನಿಗೆ ಉಪದೇಶಿಸಿದ ಪುರಾತನವಾದ ಯೋಗ ಮಾರ್ಗವನ್ನೇ ಇಂದು ನಿನಗೆ ಹೇಳಿದೆನು. ಇದು ಅತ್ಯಂತರಹಸ್ಯವಾದ ವಿದ್ಯೆ. ಕಂಡ-ಕಂಡವರಿಗೆ ಹೇಳತಕ್ಕುದಲ್ಲ. ಈ ಯೋಗವಿದ್ಯೆಯನ್ನು ಪಡೆದುಕೊಳ್ಳಲು ಪಾತ್ರರಾದವರಿಗೆ ಮಾತ್ರವೇ ಉಪದೇಶಿಸಬೇಕು. ನೀನು ಭಕ್ತನಾಗಿರುವೆ.

ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ 'ನಾನು ನಿನ್ನ ಶಿಷ್ಯನಾಗಿದ್ದೇನೆ. ಶರಣಾಗತನಾದ ನನಗೆ ಏನು ಮಾಡಬೇಕೆಂದು ಆಜ್ಞೆ ಮಾಡು'–ಎಂದು ದೈನ್ಯಭಾವದಿಂದ ಕೇಳಿಕೊಂಡಿರುವೆ. ಮೇಲಾಗಿ ನೀನು ನನ್ನ ಆಪ್ತಮಿತ್ರನೂ ಆಗಿರುವೆ. ಈ ಕಾರಣದಿಂದ ನಾನು ಪರಂಪರೆಯಲ್ಲಿ ಬಿಟ್ಟುಹೋಗಿದ್ದ ಈ ಯೋಗವಿದ್ಯೆಯನ್ನು ನಿನಗೆ ಹೇಳಿರುತ್ತೇನೆ.

ಮಹಾರಹಸ್ಯವಾದ ಈ ವಿದ್ಯೆಯನ್ನು ಭಕ್ತನಲ್ಲದವನಿಗೆ, ನನ್ನನ್ನು ದ್ವೇಷಿಸುವವನಿಗೆ ಹೇಳಲೇ ಕೂಡದೆಂದು ಶ್ರೀಕೃಷ್ಣನು ಮುಂದೆ ಹೇಳುತ್ತಾನೆ. ಇದನ್ನು ಅಯೋಗ್ಯರಿಗೆ ಹೇಳಕೂಡದು. ಹಾಗೆ ಹೇಳಿದರೆ ಮಂಗನ ಕೈಯಲಿ ಮಾಣಿಕ್ಯವನ್ನು ಕೊಟ್ಟಂತಾಗುತ್ತದೆ.

ಅಲ್ಲಸಲ್ಲದವರಿಗೆಲ್ಲಾ ಗೀತೋಪನಿಷತ್ತುಗಳ ಪ್ರವಚನಗಳು ಈಗೀಗ ಪ್ರಾರಂಭವಾಗಿವೆಯೇ ಹೊರತು ಹಿಂದೆ ಇವು ಸಾರ್ವಜನಿಕವಾಗಿರಲಿಲ್ಲ. ಇದನ್ನು ತಿಳಿದುಕೊಳ್ಳಲು ಸುಸಂಸ್ಕೃತವಾದ ಬುದ್ಧಿಯಿರಬೇಕು. ಗುರು ಮುಖೇನ ತಿಳಿದುಕೊಳ್ಳಬೇಕು. ಗುರುವೂ ಸಹ ಸದಾಚಾರಸಂಪನ್ನನಾಗಿರ ಬೇಕು. ಗೀತೆಯಲ್ಲಿ ನಿರ್ದೇಶಿಸಿರುವ ಅನುಷ್ಠಾನಗಳನ್ನು ಕೃತಿಗಳಲ್ಲಿಯೂ ತೋರಿಸಿಕೊಡತಕ್ಕ ಆಚಾರ್ಯನಾಗಬೇಕು. ಆಗಲೇ ಇಂತಹ ರಹಸ್ಯವಿದ್ಯೆ ಗಳು ವೀರ್ಯವತ್ತಾಗುತ್ತವೆ. ಹಾಗಿಲ್ಲದೆ ಹೊತ್ತುಕಳೆಯಲು ಕೇಳುವುದು ; ಕಾಸುಗಿಟ್ಟಿಸಲು ಹೇಳುವುದು–ಹೀಗೆ ಮಾಡಿದರೆ ಇದು ಆಕಾಶಪುರಾಣವೇ ಆಗುತ್ತದೆ.)

ಅರ್ಜುನನಿಗೆ ಇಲ್ಲಿ ಪುನಃ ಒಂದು ಸಂದೇಹವುಂಟಾಯಿತು. 'ಶ್ರೀಕೃಷ್ಣನು ತನ್ನ ಸಮಕಾಲೀನ, ಇವನು ಸೂರ್ಯನಿಗೆ ಈ ಯೋಗವನ್ನು ಹೇಗೆ ಉಪದೇಶಿಸಿದನು?'–ಎಂಬ ಸಂದೇಹವನ್ನು ಪರಿಹಾರಮಾಡಿಕೊಳ್ಳಲು ಶ್ರೀಕೃಷ್ಣನನ್ನೇ ಪ್ರಶ್ನಿಸುತ್ತಾನೆ :

ಅರ್ಜುನ ಉವಾಚ :

ಓಂ ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।
ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥೪॥

ಅರ್ಜುನನು ಕೇಳುತ್ತಾನೆ :

"ನಿನ್ನ ಜನ್ಮವು ಈಚಿನದು. ವಿವಸ್ವಂತನ ಜನ್ಮವು ಹಿಂದಿನದು. 'ನೀನು ಮೊದಲು ಇದನ್ನು ಅವನಿಗೆ ಹೇಳಿದ್ದೆ'–ಎಂಬುದನ್ನು ನಾನು ಹೇಗೆ ತಿಳಿದುಕೊಳ್ಳಲಿ?"

* * *

(ಅರ್ಜುನನಿಗೆ, 'ನಾನು ಹಿಂದೇನೋ ಆಗಿದ್ದೆನು. ಈಗ ಕುಂತೀಪುತ್ರ ನಾಗಿ ಹುಟ್ಟಿದ್ದೇನೆ. ಮುಂದೆ ಏನೋ ಆಗುತ್ತೇನೆ'–ಎಂಬ ಪುನರಪಿ ಜನನ ಪುನರಪಿ ಮರಣಗಳ ವಿಷಯವು ಗೊತ್ತಿದೆ. ಆದರೆ ಅವನಿಗೆ ಹಿಂದಿನ ಜನ್ಮ ದಲ್ಲಿ ತಾನು ಏನೇನಾಗಿದ್ದನೆಂಬ ಅರಿವು ಇರಲಿಲ್ಲ. ತನ್ನಂತೆಯೇ ಶ್ರೀಕೃಷ್ಣನನ್ನೂ ಅವನು ಭಾವಿಸಿದನು. 'ನನಗೇ ನನ್ನ ಹಿಂದಿನ ಜನ್ಮದ ವಿಷಯ ತಿಳಿಯದಿದ್ದ ಮೇಲೆ ಇವನಿಗೆ ಹೇಗೆ ತಾನೇ ತಿಳಿದಿದ್ದೀತು?' ಈ ನಿಶ್ಚಯದಿಂದ ಅರ್ಜುನನು ಶ್ರೀಕೃಷ್ಣನನ್ನು ಪ್ರಶ್ನಿಸಿದನು. "ಕೃಷ್ಣ! ನಿನ್ನ ಜನ್ಮವು ಇತ್ತೀಚಿನದು. ನಾನೂ ನೀನೂ ಸಮಕಾಲೀನರಾಗಿದ್ದೇವೆ. 'ಈ ಜನ್ಮದಲ್ಲೇ ನಾನು ಒಬ್ಬನಿಗೆ ಉಪದೇಶವಿತ್ತಿದ್ದೆ' ಎಂದು ಹೇಳಿದ್ದರೆ ಅದನ್ನು ನಂಬಲು ಸಾಧ್ಯವಾಗುತ್ತಿತ್ತು. 'ವಿವಸ್ವಂತನಿಗೆ ನಾನು ಈ ಯೋಗವನ್ನು ಹೇಳಿದೆನು' ಎಂದು ನಿಸ್ಸಂದೇಹವಾಗಿ ಹೇಳಿರುವೆ. ಬೇರೆ ಯಾರಾದರೂ ಋಷಿಗಳೋ ದೇವತೆಗಳೋ ಈ ಯೋಗವನ್ನು ಸೂರ್ಯನಿಗೆ ಹೇಳಿದರು'–ಎಂದಾದರೂ ಹೇಳಿದ್ದರೆ ಅದನ್ನೇ ಈಗ ನನಗೆ ಹೇಳಿದೆಯೆಂದಾದರೂ ತಿಳಿಯಲು ಶಕ್ಯವಿದ್ದಿತು. ಅದಕ್ಕೆ ಬದಲಾಗಿ 'ಅಹಂ ಪ್ರೋಕ್ತವಾನ್' 'ನಾನೇ ಹೇಳಿದೆನು' ಎಂದೂ ಸುಸ್ಪಷ್ಟವಾಗಿ ಹೇಳಿರುವೆ. ಸಾವಿರಾರು ವರ್ಷಗಳ ಹಿಂದೆ ನೀನೇ ಸೂರ್ಯನಿಗೆ ಈ ಯೋಗವನ್ನು ಮೊದಲು ಉಪದೇಶಿಸಿದೆಯೆಂಬುದನ್ನು ನಾನು ಹೇಗೆ ನಂಬಲಿ? ಈ ನನ್ನ ಸಂಶಯವನ್ನು ನಿವಾರಿಸು."

'ಭಗವಂತನು ಅಸಂಗತವಾದ ಮಾತನ್ನು ಹೇಳಿದ್ದಾನೆ' ಎಂಬ ಭಾವನೆ ಇತರರಿಗೆ ಉಂಟಾಗದಿರಲಿ ಎಂದು, ಅಂತಹ ಭಾವನೆಯನ್ನು ದೂರಮಾಡು ವುದಕ್ಕೋಸ್ಕರ ಶಂಕೆಮಾಡುವವನಂತೆ ಅರ್ಜುನನು ಇಲ್ಲಿ ಪ್ರಶ್ನಿಸಿದ್ದಾನೆ.

(ಶಂ.ಭಾ.)

ಶ್ರೀಕೃಷ್ಣನು ಸರ್ವೇಶ್ವರ ಎಂಬುದು ಅರ್ಜುನನಿಗೆ ಗೊತ್ತಿಲ್ಲದೇ ಇಲ್ಲ.

ಮುಂದೆ ಪರಂ ಬ್ರಹ್ಮ ಪರಂ ಧಾಮ ಎಂದು ಶ್ರೀಕೃಷ್ಣನ ವಿಷಯವಾಗಿ ಅವನೇ ಹೇಳುತ್ತಾನೆ. ಶ್ರೀಕೃಷ್ಣನೇ ಪರಮಾತ್ಮನೆಂದು ಭೀಷ್ಮಾದಿಗಳು ಯುಧಿಷ್ಠಿರನ ರಾಜಸೂಯಯಜ್ಞವೇ ಮುಂತಾದ ಕಡೆಗಳಲ್ಲಿ ತಿಳಿಸಿದ್ದಾರೆ. ಆದರೂ ಅರಿಯದವನಂತೆ ಶ್ರೀಕೃಷ್ಣನ ಜನ್ಮದ ಬಗೆಗೆ ಕೇಳಲು ಕಾರಣ : ಅವನ ಅವತಾರಗಳು ಸತ್ಯವೇ? ಅವನ ಜನ್ಮಪ್ರಕಾರವು ಹೇಗೆ? ಆ ದೇಹವು ಎಂತಹುದು? ಜನ್ಮಕ್ಕೆ ಕಾರಣವೇನು? ಅದು ಯಾವಾಗ ಮತ್ತು ಏಕೆ ಆಗುತ್ತದೆ?–ಇತ್ಯಾದಿ ಸಂಶಯಗಳನ್ನು ಪರಿಹರಿಸಿಕೊಳ್ಳಲು ಅರ್ಜುನನು ಈ ಪ್ರಶ್ನೆಯನ್ನು ಕೇಳಿದ್ದಾನೆ. (ರಾ.ಭಾ.)

ಮಯಿ ಸರ್ವಾಣಿ ಎಂಬ ಶ್ಲೋಕದಲ್ಲಿ ಶ್ರೀಕೃಷ್ಣನು ಸೂಚಿಸಿದ್ದ ಮಾಹಾತ್ಮ್ಯವನ್ನು ಆದಿಯಿಂದ ತಿಳಿಯಲು ಅರ್ಜುನನ ಈ ಪ್ರಶ್ನೆ. ಆ ಶ್ಲೋಕದಲ್ಲಿ ಶ್ರೀಕೃಷ್ಣನ ಪೂಜ್ಯತ್ವ-ಅರ್ಜುನನ ಪೂಜಕತ್ವ ಹೇಳಲ್ಪಟ್ಟಿತು. ಭಗವಂತನು ಹಿಂದೆ ಅಂಗೀಕರಿಸಿದ್ದ ಈ ಜೀವೇಶ್ವರಭೇದವನ್ನು ಪ್ರಮಾಣ ಪುರಸ್ಸರವಾಗಿ ತಿಳಿಯಲು ಇಲ್ಲಿ ಹೀಗೆ ಪ್ರಶ್ನಿಸುತ್ತಾನೆ–ಎಂದು ಶ್ರೀಜಯ ತೀರ್ಥರು ವಿವರಣೆ ನೀಡಿದ್ದಾರೆ.)

**ಶ್ರೀಭಗವಾನುವಾಚ :**

**ಓಂ ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**
**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥೫॥**

ಶ್ರೀಕೃಷ್ಣನು ಹೇಳುತ್ತಾನೆ :

"ಅರ್ಜುನ! ಶತ್ರುತಾಪಕ! ನನಗೂ ನಿನಗೂ ಅನೇಕಜನ್ಮಗಳು ಕಳೆದುಹೋಗಿವೆ. ಅವುಗಳೆಲ್ಲವನ್ನೂ ನಾನು ಬಲ್ಲೆನು. ಆದರೆ ನೀನು ಅರಿಯೆ.

* * *

(ಈಶ್ವರನು ಸ್ವೇಚ್ಛೆಯಿಂದ ಅವತಾರಗಳನ್ನೆತ್ತುತ್ತಾನೆ. ಮನುಷ್ಯನು ಕರ್ಮದ ವಾಸನೆಯಿಂದ ಕರ್ಮಾನುಗುಣವಾಗಿ ಜನ್ಮಗಳನ್ನು ಹೊಂದುತ್ತಾನೆ. ಎಂಬುದು ಇಲ್ಲಿಯ ರಹಸ್ಯ.

'ನನಗೆ ಅನೇಕಜನ್ಮಗಳು ಕಳೆದಿವೆ' ಎಂದು ಹೇಳಿ ನಿನಗೂ ಕೂಡ

ಕಳೆದಿವೆ–ಎಂದು ದೃಷ್ಟಾಂತವನ್ನು ಹೇಳಿದೆ. ಆದುದರಿಂದ ಭಗವಂತನ ಜನ್ಮಗಳು ಸತ್ಯವಾದುವುಗಳು. (ರಾ.ಭಾ.)

ಅರ್ಜುನನಿಗೇಕೆ ಹಿಂದಿನ ಜನ್ಮದ ಅರಿವಿಲ್ಲವೆಂಬುದಕ್ಕೆ ಶ್ರೀಶಂಕರರು ಹೀಗೆ ವ್ಯಾಖ್ಯೆಮಾಡಿರುತ್ತಾರೆ.

**ಧರ್ಮಾಧರ್ಮಾದಿ ಪ್ರತಿಬದ್ಧಜ್ಞಾನಶಕ್ತಿತ್ವಾತ್ ತ್ವಂ ನ ವೇತ್ಥ ಅಹಂ ಪುನಃ ನಿತ್ಯಶುದ್ಧಬುದ್ಧಮುಕ್ತಸ್ವಭಾವತ್ವಾತ್ ಅನಾವರಣ ಜ್ಞಾನಶಕ್ತಿಃ. ಅಹಂ ವೇದ** = ಧರ್ಮ, ಅಧರ್ಮ ಮುಂತಾದುವುಗಳು ನಿನ್ನ ಜ್ಞಾನಶಕ್ತಿಗೆ ಅಡ್ಡಿಯಾಗಿರುವುದರಿಂದ ನೀನು ಅರಿಯೆ. ಆದರೆ ನಾನು ಯಾವಾಗಲೂ ಶುದ್ಧನೂ, ಜ್ಞಾನಸ್ವರೂಪನೂ, ಮುಕ್ತನೂ ಆಗಿರುವ ಸ್ವಭಾವದವನಾದ್ದರಿಂದ ನನ್ನ ಜ್ಞಾನಶಕ್ತಿಗೆ ಯಾವುದೊಂದು ಮುಸುಕೂ ಇಲ್ಲ. ಆದುದರಿಂದ ನಾನು ಬಲ್ಲೆನು.)

**ಓಂ ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಮ್ಭವಾಮ್ಯಾತ್ಮಮಾಯಯಾ ॥೬॥**

ಅಜನೂ ಅವ್ಯಯಾತ್ಮನೂ ಆಗಿದ್ದರೂ, ಭೂತಗಳಿಗೆ ಈಶ್ವರನಾಗಿ ದ್ದರೂ ನನ್ನ ಪ್ರಕೃತಿಯನ್ನು ಹಿಡಿತದಲ್ಲಿಟ್ಟುಕೊಂಡು ನನ್ನ ಮಾಯೆಯಿಂದ ಹುಟ್ಟುತ್ತಿರುವೆನು.

* * *

("ಅರ್ಜುನ! ನಾನು ಹುಟ್ಟು ಎಂಬುದೇ ಇಲ್ಲದವನು. (ನಾನು ಹುಟ್ಟಿ-ಸಾಯುವವನಲ್ಲ.) ನಿತ್ಯನು. ನಾನು ಕ್ಷಯಿಸುವವನಲ್ಲ. ಕ್ಷಯ-ವೃದ್ಧಿಗಳು ನನಗಿಲ್ಲ. ಆಕಾರ-ವಿಕಾರಗಳಿಲ್ಲ. ಬ್ರಹ್ಮನು ಮೊದಲ್ಗೊಂಡು ಸಕಲ ಚರಾಚರಪ್ರಾಣಿಗಳಿಗೂ, ಸ್ಥಾವರ-ಜಂಗಮಗಳಿಗೂ ನಾನೇ ಈಶ್ವರನಾಗಿದ್ದೇನೆ. ಹೀಗಿದ್ದರೂ ಸಹ ನನ್ನ ಮೂಲಪ್ರಕೃತಿಯನ್ನೇ ಅಧಿಷ್ಠಾನವನ್ನಾಗಿಟ್ಟುಕೊಂಡು ವೈಷ್ಣವೀಮಾಯೆಯಿಂದ ಹುಟ್ಟುತ್ತೇನೆ."

ಪ್ರಾಣಿಗಳು ವಾಸನಾವಶವಾಗಿ ಜನ್ಮವೆತ್ತುತ್ತವೆ. ಆದರೆ ಭಗವಂತನು ತನ್ನ ಇಚ್ಛೆಯಿಂದ ಜನ್ಮವೆತ್ತುತ್ತಾನೆ. ಸ್ವೇಚ್ಛೆಯಿಂದ ಅವತಾರವನ್ನು ಪೂರೈಸುತ್ತಾನೆ. ಸೂರ್ಯನು ಹುಟ್ಟುವಾಗ, ಮುಳುಗುವಾಗ ಪ್ರಪಂಚದ

ಕಣ್ಣಿಗೆ ಕೆಂಪಾಗಿ ಕಂಡರೂ ಸಹ ಅವನ ಸ್ವಾಭಾವಿಕಗುಣದಲ್ಲಿ ಯಾವುದೊಂದು ವ್ಯತ್ಯಾಸವೂ ಆಗಿರುವುದಿಲ್ಲ. ಅದೇ ರೀತಿಯಲ್ಲಿ ಪರಮಾತ್ಮನು ಹುಟ್ಟುತ್ತಾನೆ. ದೊಡ್ಡವನಾಗುತ್ತಾನೆ. ಇವೆಲ್ಲವೂ ಪ್ರಪಂಚಕ್ಕೆ ಕಾಣುವ ವ್ಯತ್ಯಾಸ. ಅವನು ಇಚ್ಛಿಸಿದಾಗ ದೊಡ್ಡವನಾಗಬಲ್ಲನು. ಅಣೋರಣೀಯನೂ ಆಗಬಲ್ಲನು. ವಾಮನಾವತಾರದಲ್ಲಿ ಇದನ್ನು ತೋರಿಸಿದ್ದಾನೆ. ಅವನು ಹುಟ್ಟುವಾಗಲೂ ಶುದ್ಧಸ್ವರೂಪನಾಗಿಯೇ ಹುಟ್ಟುತ್ತಾನೆ. ಗುಣಾತೀತನಾಗಿರುತ್ತಾನೆ. ಅವನು ಕೆಲವು ವೇಳೆ ಕೋಪಿಸಿಕೊಂಡಂತೆ, ಕೆಲವು ವೇಳೆ ಸಂತೋಷಗೊಂಡಂತೆ ಕಂಡರೂ ಸಹ ಅವನು ಗುಣಗಳಿಂದ ಪ್ರಭಾವಿತನಾಗಿರುವುದಿಲ್ಲ. ಗುಣಗಳು ಕಿಂಕರರಂತೆ ಅವನ ಸೇವೆಮಾಡುತ್ತಿರುತ್ತವೆ. ಪ್ರಕೃತಿಯು (ಗುಣಗಳು) ಎಲ್ಲರನ್ನೂ ಬಂಧಿಸಿರುತ್ತದೆ. ಆದರೆ ಪರಮಾತ್ಮನೇ ಪ್ರಕೃತಿಯನ್ನು (ಗುಣಗಳನ್ನು ) ಬಂಧಿಸಿರುತ್ತಾನೆ. ಹುಟ್ಟುವುದೂ ಸಹ ಅವನ ಇಚ್ಛೆಗೆ ಸೇರಿದ್ದು. ರಾಜನು ಒಂದು ಪಟ್ಟಣದಿಂದ ಮತ್ತೊಂದು ಪಟ್ಟಣಕ್ಕೆ ಹೋಗುವ ಇಚ್ಛೆಯನ್ನು ವ್ಯಕ್ತಪಡಿಸಿದರೆ ಅವನ ಪರಿವಾರವು ಸಕಲವನ್ನೂ ಸಿದ್ಧಗೊಳಿಸುವಂತೆ–ಪರಮಾತ್ಮನ ಇಚ್ಛಾಮಾತ್ರದಿಂದ ಪ್ರಕೃತಿಯೂ ಮತ್ತು ವೈಷ್ಣವೀಮಾಯೆಯೂ ಅವನ ಅವತಾರಕ್ಕೆ ಅನುವುಮಾಡಿಕೊಡುತ್ತವೆ. ಪರಮಾತ್ಮನ ಅವತಾರವೂ ಸಹ ವಿಶೇಷರೀತಿಯಿಂದಲೇ ಆಗುತ್ತದೆ.

ಶ್ರೀಕೃಷ್ಣನು ಹುಟ್ಟಿದೊಡನೆಯೇ ದೇವಕೀ-ವಸುದೇವರಿಗೆ ಶಂಖ-ಚಕ್ರ-ಪದ್ಮ-ಗದಾಪಾಣಿಯಾಗಿ ಸ್ವಸ್ವರೂಪವನ್ನು ತೋರಿಸಿಕೊಳ್ಳುತ್ತಾನೆ. ಆದರೆ ತಂದೆ-ತಾಯಿಗಳು ಆ ಸ್ವರೂಪವನ್ನು ಉಪಸಂಹರಿಸುವಂತೆ ಕೇಳಿಕೊಳ್ಳುತ್ತಾರೆ.

**ಉಪಸಂಹರ ವಿಶ್ವಾತ್ಮನ್ನದೋರೂಪಮಲೌಕಿಕಮ್ ।**
**ಶಙ್ಖಚಕ್ರಗದಾಪದ್ಮಶ್ರಿಯಾ ಜುಷ್ಟಂ ಚತುರ್ಭುಜಮ್ ॥**

ವಿಶ್ವಾತ್ಮನೇ! ಶಂಖ-ಚಕ್ರ-ಗದಾ-ಪದ್ಮಗಳಿಂದ ಅಲಂಕೃತವಾದ, ಚತುರ್ಭುಜಗಳನ್ನು ಧರಿಸಿರುವ ಈ ನಿನ್ನ ಅಲೌಕಿಕವಾದ ದಿವ್ಯರೂಪವನ್ನು ಒಳಕ್ಕೆ ತೆಗೆದುಕೊ.

ಹೀಗೆಂದು ಹೇಳಿದೊಡನೆಯೇ ಶ್ರೀಕೃಷ್ಣನು ವಸುದೇವ-ದೇವಕಿಯರಿಗೆ

ಅವರ ಪೂರ್ವಜನ್ಮದ ವೃತ್ತಾಂತಗಳನ್ನೆಲ್ಲಾ ಅವರ ಸ್ಮರಣೆಗೆ ತಂದುಕೊಟ್ಟು, ಹಿಂದಿನ ಜನ್ಮದಲ್ಲಿ ಅವರು ಘೋರವಾದ ತಪಸ್ಸಿನ ಮೂಲಕವಾಗಿ ಪ್ರಾರ್ಥಿಸಿ ಕೊಂಡಿದ್ದಂತೆ ತಾನೀಗ ಅವರ ಪುತ್ರನಾಗಿ ಹುಟ್ಟಿರುವೆನೆಂದು ಹೇಳಿ, ತಂದೆ-ತಾಯಿಗಳ ಅಪೇಕ್ಷೆಯಂತೆ ಪುನಃ ಶಿಶುವಾಗುತ್ತಾನೆ.

ಈ ರೀತಿಯಾಗಿ ಪರಮಾತ್ಮನ ಅವತಾರಗಳು ವಿಶೇಷರೀತಿಯಿಂದಾಗು ವುವು.

ತಾನು ಏಕೆ ಅವತರಿಸುವೆನೆಂಬುದಕ್ಕೆ ಶ್ರೀಕೃಷ್ಣನು ಕಾರಣಗಳನ್ನು ಹೇಳುತ್ತಾನೆ.

**ಈಶ್ವರಃ** : ಈಶರಾದ ದೇವತೆಗಳಿಗಿಂತಲೂ ಶ್ರೇಷ್ಠನಾದವನು. **ಈಶೇಭ್ಯೋಽಪಿ ವರಃ ಸಮರ್ಥಃ ಈಶ ಇತ್ಯುಕ್ತಃ. ತದ್ವರತ್ವಾತ್ತ್ವಮೀಶ್ವರಃ** (ಮ.ಭಾ.)

**ಆತ್ಮಮಾಯಯಾ** ಎಂಬ ಪದಕ್ಕೆ ಶ್ರೀರಾಮಾನುಜರು ಆತ್ಮಜ್ಞಾನ ದಿಂದ, ಆತ್ಮಸಂಕಲ್ಪದಿಂದ–ಎಂದು ಅರ್ಥಮಾಡಿರುತ್ತಾರೆ. ಮಾಯಾಶಬ್ದವು ಇಲ್ಲಿ ಜ್ಞಾನವಾಚಕವಾದುದು–ಎಂದು ಅವರ ಮತ್ತು ಶ್ರೀಮಧ್ವಾಚಾರ್ಯರ ಅಭಿಪ್ರಾಯ.

**'ಮಾಯಾವಯುನಂ ಜ್ಞಾನಂ' ಇತಿ ಜ್ಞಾನಪರ್ಯಾಯೋಽತ್ರ ಮಾಯಾಶಬ್ದಃ । ಮಾಯಯಾ ಸತತಂ ವೇತ್ತಿ ಪ್ರಾಣಿನಾಂ ಚ ಶುಭಾಶುಭಮ್ ।** (ರಾ.ಭಾ.)

**ಕೇತುಃ ಕೇತಃ ಚಿತಿಶ್ಚಿತ್ತಂ ಮತಿಃ ಕ್ರತುರ್ಮನೀಷಾ ಮಾಯೇತಿ ಹ್ಯಭಿಧಾನಮ್** (ಮ.ಭಾ.)

'ಹುಟ್ಟದೇ ಇದ್ದರೂ ಹುಟ್ಟಿದವನಂತೆ ಎಣಿಸಿಕೊಳ್ಳುತ್ತೇನೆ.' ಎಂದಾ ದರೂ ಅರ್ಥಮಾಡಬಹುದು.

**ಅವ್ಯಯಾತ್ಮಾ** : ಕ್ಷೀಣಹೊಂದದ ಜ್ಞಾನಶಕ್ತಿಸ್ವಭಾವವುಳ್ಳವನು. (ಶಂ.ಭಾ.)

**ಅವ್ಯಯಾತ್ಮಾ** : ಅವ್ಯಯವಾದ ದೇಹವುಳ್ಳವನು.) (ಮ.ಭಾ.)

**ಓಂ ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥೭॥**

ಭಾರತ! ಯಾವ ಯಾವಾಗ ಧರ್ಮಕ್ಕೆ ಹಾನಿಯಾಗುವುದೋ ಅಧರ್ಮದ ಏಳಿಗೆಯಾಗುವುದೋ–ಆಗಾಗ ನಾನು ನನ್ನನ್ನು ಸೃಷ್ಟಿಮಾಡಿ ಕೊಳ್ಳುವೆನು.

* * *

(ಸನಾತನಿಗಳಲ್ಲಿ ಇದೊಂದು ನಂಬಿಕೆ ಗಾಢವಾಗಿದೆ : 'ಅಧರ್ಮವು ಹೆಚ್ಚಾದರೆ ದೇವರು ಅವತಾರವೆತ್ತುತ್ತಾನೆ.' ಈ ನಂಬಿಕೆಯು ಅನೇಕ ಸಮಯಗಳಲ್ಲಿ ಪ್ರತ್ಯಕ್ಷಪ್ರಮಾಣವೂ ಆಗಿದೆ. ಪರಮಾತ್ಮನು ಅವತರಿಸ ಬೇಕಾದರೆ ಧರ್ಮದ ಗ್ಲಾನಿಯೂ ಆಗಬೇಕು. ಅಧರ್ಮವೂ ಹೆಚ್ಚಾಗಬೇಕು. ಇದರ ಕಾಲನಿರ್ಣಯ ಮಾಡುವವನೂ ಅವನೇ ಆಗಿದ್ದಾನೆ.

ನಾವು ಆತುರಪಟ್ಟರೆ ಅವನು ಬರುವುದಿಲ್ಲ. ಅಧರ್ಮಿಗಳ ಪಾಪದ ಕೊಡವು ತುಂಬಬೇಕು. ಆಗಲೇ ದಿವ್ಯಪುರುಷನ ಅವತಾರವಾಗುವುದು. ಯಾವಾಗ ಅಧರ್ಮದ ಅಭ್ಯುತ್ಥಾನ ಅಥವಾ ಧರ್ಮದ ಗ್ಲಾನಿಯಾಗುವು ದೆಂಬುದನ್ನು ನಾವು ಸಾಧಾರಣವಾಗಿ ಹೀಗೆ ಹೇಳಬಹುದಾಗಿದೆ. ಋಷಿಕಲ್ಪ ರಾದವರ ಮೇಲೆ, ಸದಾಚಾರಿಗಳ ಮೇಲೆ, ನಿರಪರಾಧಿಗಳ ಮೇಲೆ, ದುರ್ಬಲ ಮನುಷ್ಯರ ಮೇಲೆ–ದುರಾಚಾರಿಗಳಾದ ಮನುಷ್ಯರು ಅತ್ಯಾಚಾರನಡೆಸುತ್ತಾರೆಯೋ, ಆ ಕಾರಣದಿಂದಲೇ ಸದ್ಗುಣ-ಸದಾಚಾರಗಳು ದೇಶದಲ್ಲಿ ಕ್ಷೀಣಿಸಿ ದುರಾಚಾರಗಳು ಮತ್ತು ದುರಾಚಾರಿಗಳಿಂದಲೇ ದೇಶವು ವ್ಯಾಪ್ತವಾಗಿರುತ್ತದೆಯೋ–ಆ ಕಾಲವನ್ನು ಧರ್ಮಗ್ಲಾನಿಯ ಕಾಲ ಎಂದು ನಿರ್ಣಯಿಸಬಹುದಾಗಿದೆ.

ಅವತಾರ ಎಂದರೆ ಇಳಿಯುವುದು. ಹುಟ್ಟುವುದಲ್ಲ. ಜೀವಿಗಳಾದರೆ ಕರ್ಮದ ವೇಗಕ್ಕೆ ಒಳಪಟ್ಟು ಹುಟ್ಟುವವರು. ಅವತಾರಪುರುಷರು ಹುಟ್ಟು ವಾಗಲೇ ಸಿದ್ಧರಾಗಿ ಹುಟ್ಟುತ್ತಾರೆ. ಅವರು ಇಲ್ಲಿ ಕಲಿಯಬೇಕಾದುದು ಏನೂ ಇರುವುದಿಲ್ಲ. ಮಾರ್ಗದರ್ಶನವನ್ನು ಮಾಡಲೆಂದೇ ಅವರು ಅವತರಿ ಸುತ್ತಾರೆ.

ಆತ್ಮಾನಂ ಸೃಜಾಮಿ ಎನ್ನುತ್ತಾನೆ, ಶ್ರೀಕೃಷ್ಣ. 'ನನ್ನನ್ನೇ ನಾನು ಸೃಷ್ಟಿಮಾಡಿಕೊಳ್ಳುತ್ತೇನೆ. ನನಗೆ ಸೃಷ್ಟಿಕರ್ತರು ಯಾರೂ ಇಲ್ಲ. ಸೃಷ್ಟಿಯ ನಿಯಮಕ್ಕೆ ನಾನು ಒಳಪಟ್ಟಿಲ್ಲ. ಸ್ವೇಚ್ಛೆಯಿಂದ ಜನ್ಮತಾಳುತ್ತೇನೆ.'

ಭಗವಂತನ ಜನ್ಮಕಾಲವನ್ನು ಈ ಶ್ಲೋಕವು ಹೇಳುತ್ತದೆ. ಅವನ ಅವತಾರಕ್ಕೆ ಕಾಲನಿಯಮವಿಲ್ಲ. ವೇದೋದಿತಧರ್ಮವು ಹಾನಿಹೊಂದಿ ಅಧರ್ಮವು ತಲೆಯೆತ್ತಿದಾಗ–ಭಗವಂತನು ತಾನೇ ತನ್ನ ಸಂಕಲ್ಪದಿಂದಲೇ ಹಿಂದೆ ಹೇಳಿದ ರೀತಿಯಲ್ಲಿ ತನ್ನನ್ನು ಸೃಷ್ಟಿಸಿಕೊಳ್ಳುತ್ತಾನೆ. (ರಾ.ಭಾ.)

**ಧರ್ಮಸ್ಯ :** ಪ್ರಾಣಿಗಳ ಅಭ್ಯುದಯ ಮತ್ತು ನಿಶ್ರೇಯಸ್ಸುಗಳಿಗೆ ಸಾಧನವಾದ ವರ್ಣಾಶ್ರಮಾದಿ ಧರ್ಮದ.) (ಶಂ.ಭಾ.)

ಶ್ರೀಕೃಷ್ಣನು ಮುಂದುವರಿದು ತನ್ನ ಅವತಾರದ ಉದ್ದೇಶವನ್ನು (ಗುರಿಯನ್ನು ) ವಿವರಿಸಿ ಹೇಳುತ್ತಾನೆ :

**ಓಂ ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।**
**ಧರ್ಮಸಂಸ್ಥಾಪನಾರ್ಥಾಯ ಸಮ್ಭವಾಮಿ ಯುಗೇ ಯುಗೇ ॥೮॥**

ಸಾಧುಗಳ ರಕ್ಷಣೆಗಾಗಿಯೂ, ದುಷ್ಟರ ವಿನಾಶಕ್ಕಾಗಿಯೂ ಮತ್ತು ಧರ್ಮಸಂಸ್ಥಾಪನೆಗಾಗಿಯೂ ಯುಗ-ಯುಗದಲ್ಲಿಯೂ ನಾನು ಪ್ರಕಟ ವಾಗುತ್ತೇನೆ.

* * *

ಶ್ರೀಕೃಷ್ಣನ ಈ ಒಂದು ಅಭಯೋಕ್ತಿಯೇ ಧರ್ಮಮಾರ್ಗಿಗಳಿಗೆ ಕರಾವಲಂಬನವಾಗಿದೆ. ಸಾಧುಗಳ ರಕ್ಷಣೆಯ ಹೊಣೆಯನ್ನು ಶ್ರೀಕೃಷ್ಣನೇ ಹೊತ್ತಿದ್ದಾನೆ. ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ–ಇವೇ ಮೊದಲಾದ ಸರ್ವಸಾಮಾನ್ಯಧರ್ಮಗಳನ್ನು ಪರಿಪಾಲನೆಮಾಡತಕ್ಕವನು ; ಯಜ್ಞ, ದಾನ, ತಪಸ್ಸು, ಅಧ್ಯಾಪನ, ಪ್ರಜಾಪಾಲನ–ಇವೇ ಮುಂತಾದ ವರ್ಣೋಚಿತವಾದ ಅನುಷ್ಠಾನಗಳಲ್ಲಿ ನಿರತನಾಗಿರತಕ್ಕವನು ; ಇತರರಿಗೆ ಹಿತ ವನ್ನುಂಟುಮಾಡುವ ಸ್ವಭಾವವಿರತಕ್ಕವನು ; ಸಕಲಸದ್ಗುಣಸಂಪನ್ನನು ; ಸದಾಚಾರಿಯು ; ಶ್ರದ್ಧಾ-ಭಕ್ತಿಪೂರ್ವಕವಾಗಿ ಭಗವಂತನ ನಾಮ, ರೂಪ, ಪ್ರಭಾವ, ಲೀಲೆ–ಇತ್ಯಾದಿಗಳ ಶ್ರವಣ-ಮನನ-ಕೀರ್ತನಗಳನ್ನು ಮಾಡು ವವನು–ಇಂತಹವನನ್ನು ಸಾಧು ಎನ್ನುತ್ತಾರೆ.

ನಿರಪರಾಧಿಗಳಾದ, ಸದಾಚಾರಿಗಳಾದ ಭಗವದ್ಭಕ್ತರ ವಿಷಯದಲ್ಲಿ ಅತ್ಯಾಚಾರವೆಸಗುವವನು ; ಸುಳ್ಳು, ಮೋಸ, ಕಳ್ಳತನ, ವ್ಯಭಿಚಾರ ಇತ್ಯಾದಿ ದುರ್ಗುಣಗಳಿಂದ ಪರಿಪೂರ್ಣವಾಗಿರತಕ್ಕವನು ; ಅನ್ಯಾಯದಿಂದ ಧನ

ಸಂಗ್ರಹ ಮಾಡುವವನು ; ಭಗವಂತನೇ ಇಲ್ಲವೆಂದು ಹೇಳಿಕೊಂಡು ತಿರುಗುವ ನಾಸ್ತಿಕನು ; ವೇದ-ಶಾಸ್ತ್ರಗಳನ್ನು ವಿರೋಧಿಸುವ ಸ್ವಭಾವವಿರುವವನು ಇಂತಹವನನ್ನು ದುಷ್ಕೃತ ಎನ್ನುತ್ತಾರೆ.

ಅಂತಹವರಿಂದ ಸಮಾಜಕ್ಕೆ ಅಪರಿಮಿತವಾದ ಹಾನಿಯಾಗುತ್ತಿರುತ್ತದೆ. ಅಂತಹವರನ್ನು ವಿನಾಶಮಾಡಿಯೇ ತೀರಬೇಕಾಗುತ್ತದೆ. ಮಗನಿಗೆ ಕಾಲಿನಲ್ಲಿ ಯಾವುದೋ ಹುಣ್ಣು ಎದ್ದಿರುತ್ತದೆ. ತಂದೆಯು ಔಷಧೋಪಚಾರಗಳನ್ನು ಮಾಡುತ್ತಾನೆ. ಅದು ಮಾಯುವುದಿಲ್ಲ. ಕಾಲನ್ನು ಕತ್ತರಿಸಬೇಕೆಂದೂ, ಇಲ್ಲದಿದ್ದರೆ ವಿಷವು ಶರೀರಕ್ಕೆಲ್ಲಾ ವ್ಯಾಪಿಸಿ ಹುಡುಗನೇ ಉಳಿಯಲಾರನೆಂದೂ ವೈದ್ಯರು ಹೇಳುತ್ತಾರೆ. ಆಗ ತಂದೆಯು ಕಾಲುಹೋದರೂ ಹೋಗಲಿ, ಮಗನ ಪ್ರಾಣವಾದರೂ ಉಳಿಯಲಿ–ಎನ್ನುತ್ತಾನೆ. ಅದರಂತೆ ಸಮಾಜದ ಉಳಿವಿಗಾಗಿ ಸಮಾಜಕಂಟಕರನ್ನು ವಿನಾಶಮಾಡಬೇಕಾಗುತ್ತದೆ. ಧರ್ಮಸ್ಥಾಪನೆಯೆಂದರೆ : ವರ್ಣಾಶ್ರಮಧರ್ಮಗಳನ್ನು ಜೀರ್ಣೋದ್ಧಾರ ಮಾಡುವುದು. ಅದನ್ನು ಸುವ್ಯವಸ್ಥೆಗೊಳಿಸುವುದು. ಹಿಂದಿನ ಅಧ್ಯಾಯದಲ್ಲಿ ಹೇಳಿರುವಂತೆ ಯಜ್ಞಚಕ್ರವು ಅನಿರ್ಬಂಧಿತವಾಗಿ ನಡೆಯಬೇಕಾದರೆ ವರ್ಣಾಶ್ರಮಧರ್ಮಗಳು ಸುವ್ಯವಸ್ಥಿತವಾಗಿರಬೇಕು. ನಾಲ್ಕು ವರ್ಣದವರೂ ತಮ್ಮ-ತಮ್ಮ ಕರ್ತವ್ಯಗಳಲ್ಲಿರುವಂತೆ ನೋಡಿಕೊಳ್ಳುವುದೇ ರಾಜರ ಮುಖ್ಯ ಕರ್ತವ್ಯವಾಗಿರುತ್ತದೆ.

ವರ್ಣಾಶ್ರಮಧರ್ಮಗಳು ಹಾಳಾಗಿ ವರ್ಣಸಂಕರವಾದಾಗ ಅಧರ್ಮವು ಪ್ರಬಲಿಸುವುದು. ಯುಗ-ಯುಗದಲ್ಲಿಯೂ ಹುಟ್ಟುತ್ತೇನೆಂದರೆ ಒಂದು ಯುಗದಲ್ಲಿ ಒಂದು ಬಾರಿ ಹುಟ್ಟುತ್ತಾನೆಂದಲ್ಲ. ಯುಗದಲ್ಲಿ ಯಾವಾಗ ಅಧರ್ಮವು ಅಧಿಕವಾಗುತ್ತದೆಯೋ ಆಗ ಪ್ರಕಟವಾಗುತ್ತಾನೆ.)

**ಓಂ ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥೯॥**

ಅರ್ಜುನ! ದಿವ್ಯವಾದ ನನ್ನ ಜನ್ಮವನ್ನೂ ಮತ್ತು ಕರ್ಮವನ್ನೂ ಯಾವಾತನು ಹೀಗೆ ಯಥಾರ್ಥವಾಗಿ ತಿಳಿದುಕೊಳ್ಳುವನೋ–ಅವನು ದೇಹ

ವನ್ನು ಬಿಟ್ಟ ಬಳಿಕ ಪುನರ್ಜನ್ಮವನ್ನು ಹೊಂದುವುದಿಲ್ಲ. ನನ್ನನ್ನೇ ಸೇರು ತ್ತಾನೆ.

* * *

(ನನ್ನ ದಿವ್ಯವಾದ ಜನ್ಮ ಮತ್ತು ಕರ್ಮಗಳನ್ನು ತತ್ತ್ವತಃ ತಿಳಿದುಕೊಳ್ಳ ಬೇಕು–ಎನ್ನುತ್ತಾನೆ. 'ಶ್ರೀಕೃಷ್ಣನು ದೊಡ್ಡಮನುಷ್ಯ. ರಾಜಕೀಯ ನಿಪುಣ. ಅವನಿಗೆ ತತ್ತ್ವಶಾಸ್ತ್ರವೂ ತಿಳಿದಿತ್ತು. ಉಪಾಯಾಂತರಗಳಿಂದ ತನ್ನ ಶತ್ರು ಗಳನ್ನು ಸದೆಬಡಿಯುತ್ತಿದ್ದನು. ಅವನಿಗೆ ಇಂದ್ರಜಾಲ-ಮಹೇಂದ್ರಜಾಲಗಳೂ ತಿಳಿದಿದ್ದುವು. ಕೆಲವು ಸಮಯದಲ್ಲಿ ಅದನ್ನು ಪ್ರಯೋಗಿಸಿ ಜನರ ಮನಸ್ಸಿ ನಲ್ಲಿ ಭ್ರಾಂತಿಯನ್ನುಂಟುಮಾಡುತ್ತಿದ್ದನು.' (ಇದು ದುರ್ಯೋಧನನ ಅಭಿ ಪ್ರಾಯ) ಹೀಗೆ ನನ್ನನ್ನು ಮನುಷ್ಯರ ಮಾನದಂಡದಿಂದ ಅಳೆಯಬಾರದು. ನನ್ನ ನಿಜಸ್ಥಿತಿಯನ್ನರಿಯಬೇಕು. ನನಗೆ ಹುಟ್ಟು-ಸಾವುಗಳಿಲ್ಲ. ಆದರೆ ಸ್ವೇಚ್ಛೆ ಯಿಂದ ಬೇಕಾದ ಜನ್ಮಗಳನ್ನು ತಾಳಬಲ್ಲೆನು. ನನ್ನ ಅವತಾರಗಳ ಮುಖ್ಯೋ ದ್ದೇಶವು ಸಾಧು-ಸತ್ಪುರುಷರ ರಕ್ಷಣೆ ಮತ್ತು ದುಷ್ಕೃತಿಗಳ ವಿನಾಶ. ನಾನು ಮನುಷ್ಯಯೋನಿಯಲ್ಲಿಯೇ ಜನ್ಮತಾಳಬೇಕೆಂದೇನೂ ಇಲ್ಲ. ಕೆಲವು ಕಾರಣ ಗಳಿಂದ ಮನುಷ್ಯಯೋನಿಯಲ್ಲಿಯೂ ಜನ್ಮತಾಳುತ್ತೇನೆ. ಭಕ್ತನ ರಕ್ಷಣೆಗಾಗಿ ನಾನು ಕಂಬದಲ್ಲೇ ಆವಿರ್ಭವಿಸಿದೆನು. ಆದುದರಿಂದ ನಾನು ಯಾವಾಗಲೂ ಪ್ರಕೃತಿಯ ನಿಯಮಕ್ಕೆ ಒಳಪಟ್ಟವನಲ್ಲ. ನನ್ನ ಆಜ್ಞೆಯಂತೆ ಪ್ರಕೃತಿಯು ತನ್ನ ಕಾರ್ಯಗಳನ್ನು ನಿರ್ವಹಿಸುವುದು. ನಾನು ಗುಣಾತೀತ. ಯಾವ ವಾಸನೆಗಳೂ ನನಗೆ ಅಂಟುವುದಿಲ್ಲ. ನಾನು ಮಾಡುವ ಕರ್ಮಗಳೆಲ್ಲವೂ ಲೋಕ ಕಲ್ಯಾಣಕ್ಕಾಗಿಯೇ. ನನಗಾಗಿ ನಾನು ಮಾಡಿಕೊಳ್ಳಬೇಕಾದುದು ಏನೂ ಇಲ್ಲ. **ವಿದಿತಂ ವೋ ಯಥಾ ಸ್ವಾರ್ಥಾಃ ನ ಮೇ ಕಾಶ್ಚಿತ್ಪ್ರವೃತ್ತಯಃ ||** ಈ ರಹಸ್ಯವನ್ನು ತಿಳಿದುಕೊಂಡು ನನ್ನ ಅವತಾರದ ನಿಧಿಧ್ಯಾಸನಮಾಡಬೇಕು. ಶುದ್ಧನೂ ಜ್ಞಾನಸ್ವರೂಪನೂ ಆಗಿರುವ ನನ್ನನ್ನು ಹೃದಯದಲ್ಲಿ ನಿಲ್ಲಿಸಿಕೊಂಡು ಚಿಂತಿಸುವುದರಿಂದ ಮಾನವನು ಪೂತಾತ್ಮನಾಗುತ್ತಾನೆ. ಸ್ಪರ್ಶಶಿಲೆಯಿಂದ ಕಬ್ಬಿಣವೂ ಚಿನ್ನವಾಗುವಂತೆ–ನನ್ನ ನಿಧಿಧ್ಯಾಸನದಿಂದ ಅವನಲ್ಲಿರುವ ವಾಸನೆಗಳೆಲ್ಲಾ ದೂರವಾಗಿ ಪುರುಷನು ನನ್ನ ಭಾವವನ್ನೇ ಹೊಂದುತ್ತಾನೆ. ಅವನಿಗೆ ದೇಹಾವಸಾನಾನಂತರದಲ್ಲಿ ಪುನರ್ಜನ್ಮವಿಲ್ಲ.

ಏವಂ ಯೋ ವೇತ್ತಿ: ಜನ್ಮವಿಜ್ಞಾನಮಾತ್ರದಿಂದ ಮುಕ್ತಿಯಿಲ್ಲ. ಉಪಾಸನೆಯನ್ನು ಮಾಡಬೇಕು. **ಜನ್ಮಾದಿ ಜ್ಞಾನಮಾತ್ರೇಣ ನ ಮುಕ್ತಿಃ। ವೇದಾದ್ಯುಕ್ತಂ ತು ಸರ್ವಂ ಯೋ ಜ್ಞಾತ್ವೋಪಾಸ್ತೇ ಸದಾ ಹಿ ಮಾಮ್ । ತಸ್ಮೈವ ದರ್ಶನಪಥಂ ಯಾಮಿ ನಾನ್ಯಸ್ಯ ಕಸ್ಯಚಿತ್ ॥**

(ಮ.ಭಾ.)

ತಾತ್ತ್ವಿಕವಾಗಿ ಭಗವಂತನ ಅಪ್ರಾಕೃತವಾದ ಜನ್ಮ-ಕರ್ಮಗಳನ್ನು ತಿಳಿದವನು–ಆ ಅರಿವಿನಿಂದ ಪಾಪಗಳನ್ನು ಕಳೆದುಕೊಂಡು ಯಥೋಕ್ತ ಪ್ರಕಾರದಲ್ಲಿ ನನ್ನನ್ನು ಆಶ್ರಯಿಸಿ ನನ್ನನ್ನೇ ಪ್ರಿಯವಾಗಿಟ್ಟುಕೊಂಡು ನನ್ನೊಬ್ಬನನ್ನೇ ಚಿತ್ತದಲ್ಲಿಟ್ಟು ನನ್ನನ್ನೇ ಹೊಂದುತ್ತಾನೆ.) (ರಾ.ಭಾ.)

**ಓಂ ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।**
**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥೧೦॥**

ರಾಗ-ಭಯ-ಕ್ರೋಧಗಳನ್ನು ಕಳೆದುಕೊಂಡು ಮನ್ಮಯರಾಗಿ ನನ್ನನ್ನೇ ಆಶ್ರಯಿಸಿಕೊಂಡು ಬಹುಮಂದಿ ಜ್ಞಾನವೆಂಬ ತಪಸ್ಸಿನಿಂದ ಶುದ್ಧರಾಗಿ ನನ್ನ ಭಾವವನ್ನು ಹೊಂದಿರುತ್ತಾರೆ.

* * *

(ರಾಗ-ಭಯ-ಕ್ರೋಧಗಳೇ ಸಂಸಾರದ ಮೂಲಕಾರಣಗಳು. ಇವುಗಳನ್ನು ತ್ಯಜಿಸಿದನಂತರವೇ ಭಗವಂತನು ನಮಗೆ ಸಿಕ್ಕುತ್ತಾನೆ. ಎರಡನ್ನೂ ಏಕಕಾಲದಲ್ಲಿ ಸಾಧಿಸಿಕೊಳ್ಳುವುದಕ್ಕಾಗುವುದಿಲ್ಲ. ಒಂದನ್ನು ತ್ಯಜಿಸಿ ಮತ್ತೊಂದನ್ನು ಹಿಡಿಯಬೇಕಾಗುತ್ತದೆ. ದೇವರ ಮೇಲೆ ಆಸಕ್ತಿಯಿದ್ದರೆ ಪ್ರಪಂಚದ ಮೇಲೆ ಆಸಕ್ತಿಯಿರುವುದಿಲ್ಲ. ಪ್ರಪಂಚದ ಮೇಲಿನ ಆಸಕ್ತಿಯಿದ್ದರೆ ದೇವರು ಸಿಕ್ಕುವುದಿಲ್ಲ. ರಾಗ-ಭಯ-ಕ್ರೋಧಗಳೆಂಬ ಗೂಟಗಳಿಂದ ನಮ್ಮನ್ನು ಬಿಚ್ಚಿಕೊಂಡರೆ ನಾವು ಸಂಸಾರಸಾಗರವನ್ನು ದಾಟಿಯೇವು. ಶ್ರೀರಾಮಕೃಷ್ಣರು ಇದಕ್ಕೆ ಒಂದು ಚಿಕ್ಕ ಕಥೆಯನ್ನು ಹೇಳುತ್ತಿದ್ದರು. ಚೆನ್ನಾಗಿ ಮದ್ಯಕುಡಿದಿದ್ದ ನಾಲ್ಕಾರು ಮಂದಿ ನದಿಯನ್ನು ದಾಟಲು ದೋಣಿಯಲ್ಲಿ ಕುಳಿತು ಹುಟ್ಟುಹಾಕಲು ಪ್ರಾರಂಭಿಸಿದರು. ಒಂದು ತಾಸಿನ ಪರ್ಯಂತ ಹುಟ್ಟುಹಾಕುತ್ತಲೇ ಇದ್ದರು. ಮದ್ಯದ ಅಮಲು ಆ ವೇಳೆಗೆ

ಇಳಿಯಿತು. ಸುತ್ತಲೂ ನೋಡಲಾಗಿ ದೋಣಿಯು ಇದ್ದ ಜಾಗದಲ್ಲೇ ಇದ್ದಿತು. ದೋಣಿಯ ಹಗ್ಗವನ್ನು ಗೂಟದಿಂದ ಬಿಚ್ಚಿಯೇ ಇರಲಿಲ್ಲ.

ಇಲ್ಲಿ ಶ್ರೀಕೃಷ್ಣನು ರಾಗದೊಡನೆ ಭಯವನ್ನೂ ಹೇಳಿದ್ದಾನೆ. ನಮಗೆ ಒಂದು ವಸ್ತುವಿನ ಮೇಲೆ ಪ್ರೀತಿಯು ಹೆಚ್ಚಾಗಿದ್ದಷ್ಟೂ ಅದು ಎಲ್ಲಿ ಕಳೆದು ಹೋಗುವುದೋ–ಎಂಬ ಭಯವು ಅಧಿಕವಾಗಿರುತ್ತದೆ. ಹೆಂಡತಿಯ ಮೇಲೆ ಅತಿಯಾದ ಪ್ರೀತಿಯಿರುವವನು ತನ್ನ ಹೆಂಡತಿಯನ್ನು ಮತ್ತಾರಾದರೂ ಮೋಹಿಸುತ್ತಿದ್ದಾರೆಯೇ–ಎಂದು ಶಂಕಿಸುತ್ತಲೇ ಇರುತ್ತಾನೆ. ಅರ್ಥಾತ್ ಮಿತಿಮೀರಿದ ಪ್ರೀತಿಯು ಮಿತಿಮೀರಿದ ಭಯ-ಕ್ರೋಧಗಳಿಗೆ ಕಾರಣವಾಗು ತ್ತದೆ.

ಮಕ್ಕಳ ಮೇಲೆ ತಂದೆ-ತಾಯಿಗಳಿಗೆ ಪ್ರೀತಿಯು ಸ್ವಾಭಾವಿಕ. ಆದರೆ ಅವರ ಪ್ರೀತಿಯ ಪರಿಣಾಮವೇನೆಂದರೆ ಮಗನೇನಾದರೂ ಮನೆಗೆ ಬರು ವುದು ಸ್ವಲ್ಪ ಹೊತ್ತಾಗಿಬಿಟ್ಟರೆ–'ಯಾವುದಾದರೂ ವಾಹನಕ್ಕೆ ಸಿಕ್ಕಿಬಿಟ್ಟನೇ? ಅಪಘಾತಕ್ಕೆ ಒಳಗಾದನೇ?'–ಇವೇ ಮುಂತಾಗಿ ತಂದೆ-ತಾಯಿಗಳ ಮನಸ್ಸು ಪರಿತಪಿಸುತ್ತಿರುತ್ತದೆ. ಆದುದರಿಂದ ಭಯಕ್ಕೆ ಅತಿಪ್ರೀತಿಯೇ ಕಾರಣ. ಅಂತೆಯೇ ಕೋಪಕ್ಕೂ ಪ್ರೀತಿಯೇ ಕಾರಣ. ಆಶಿಸಿದ ವಸ್ತುವು ಸಿಕ್ಕಲು ಪ್ರತಿಬಂಧಕವುಂಟಾದರೆ ಕೋಪವು ಬರುತ್ತದೆ. ಪ್ರೀತಿಸಿದ ವಸ್ತುವನ್ನು ಯಾರಾದರೂ ಅಪಹರಿಸಿಬಿಟ್ಟರೆ ಒಡನೆಯೇ ಕೋಪಬರುತ್ತದೆ. ತಾನು ಉಪಯೋಗಿಸುವ ಲೇಖನಿ (ಪೆನ್ನು) ಯನ್ನು ಯಾರಾದರೂ ಮುಟ್ಟಿಬಿಟ್ಟರೆ ಮನುಷ್ಯನು ಮುನಿಸಿಕೊಳ್ಳುತ್ತಾನೆ. ಬೇರೆಯವನು ಮುಟ್ಟಿದ ಮಾತ್ರಕ್ಕೆ ಲೇಖನಿಯು ಕೆಟ್ಟುಹೋಗುವುದಿಲ್ಲ. ಆದರೆ ಲೇಖನಿಯಲ್ಲಿ ಮನುಷ್ಯನು ಅಷ್ಟು ಆಸಕ್ತನಾಗಿರುತ್ತಾನೆ. ನನ್ನ ಲೇಖನಿ, ನನ್ನ ಬಟ್ಟೆ, ನನ್ನ ಪುಸ್ತಕ, ನನ್ನ ಸೈಕಲ್ಲು, ಯಾರೂ ಮುಟ್ಟಬೇಡಿ–ಎನ್ನುತ್ತಾನೆ. ಅವನಿಗೆ ಆ ವಸ್ತುಗಳಲ್ಲಿ ಅಷ್ಟು ಪ್ರೇಮ ಅಥವಾ ಆಸಕ್ತಿಯಿರುತ್ತದೆ. ಯಾರಾದರೂ ತನ್ನ ವಸ್ತುವನ್ನು ಮುಟ್ಟಿಬಿಟ್ಟರೆ ಹೊಡೆದೇಬಿಡುತ್ತಾನೆ. ಕೋಪವೆಂಬುದು ಅಷ್ಟು ಶೀಘ್ರವಾಗಿ ಬರುತ್ತದೆ. ಕೋಪವು ಆವರಿಸಿದೊಡನೆಯೇ ವಿವೇಚನಾಶಕ್ತಿಯೇ ಹಾಳಾಗಿ ಹೋಗುತ್ತದೆ. ಆದುದರಿಂದಲೇ ವಿದುರನು ಕೋಪದ ವಿಷಯದಲ್ಲಿ ಹೀಗೆ ಹೇಳಿದ್ದಾನೆ :

**ಕೋಪವೆಂಬುದನರ್ಥಸಾಧನ ಕೋಪವೇ ಸಂಸಾರಬಂಧನ**
**ಕೋಪದಿಂದುರುತರದ ಸುಕೃತವು ಲಯವನೈದುವುದು ।**
**ಕೋಪವನು ವರ್ಜಿಸಲು ಬೇಹುದು ಕೋಪವುಳ್ಳವನಾವನಾಗಲಿ**
**ಕಾಪುರಷನಿಹಪುರಕೆ ಚಿತ್ತೈಸೆಂದನಾ ವಿದುರ ॥**

ಆದುದರಿಂದ ರಾಗವೇ ಕೋಪಕ್ಕೂ ಕಾರಣವಾಗುತ್ತದೆ. ಈ ಕಾರಣ ದಿಂದಲೇ ಶ್ರೀಕೃಷ್ಣನು ಎರಡನೆಯ ಅಧ್ಯಾಯದ ೬೭ನೆಯ ಶ್ಲೋಕದಲ್ಲಿ ಕಾಮವನ್ನೇ ಮುಖ್ಯವಾಗಿ ಹೇಳಿದ್ದಾನೆ. ಆದುದರಿಂದ ಪರಮಾತ್ಮನ ಆರಾಧನೆಗೆ ಮೊಟ್ಟಮೊದಲನೆಯದಾಗಿ ರಾಗ-ಭಯ-ಕ್ರೋಧಗಳನ್ನು ದೂರ ಮಾಡಬೇಕು.

ಪ್ರಾಪಂಚಿಕವಸ್ತುಗಳ ಮೇಲಿನ ಪ್ರೀತಿಯನ್ನು ಬಿಟ್ಟುಬಿಟ್ಟರೆ ಮನಸ್ಸು ಪರಿಶುದ್ಧವಾಗುತ್ತದೆ. ಆಗ **ಮನ್ಮನಾಃ**= ನನ್ನನ್ನೇ ಆ ಪರಿಶುದ್ಧವಾದ ಮನಸ್ಸಿನಲ್ಲಿ ಸರ್ವದಾ ಚಿಂತಿಸಬೇಕು. 'ಅನ್ಯಥಾ ಶರಣಂ ನಾಸ್ತಿ' ಎಂದು ನನ್ನನ್ನೇ ಸರ್ವದಾ ಆಶ್ರಯಿಸಿರಬೇಕು. ಈ ವಿಧವಾದ ಜ್ಞಾನತಪಸ್ಸಿನಿಂದ ಪೂತಾತ್ಮರಾದ ಅನೇಕರು ನನ್ನ ಭಾವವನ್ನೇ ಪಡೆದಿರುತ್ತಾರೆ. ನದಿಯು ತನ್ನ ಪತಿಯನ್ನು ಸೇರುವ ತವಕದಿಂದ ಶೀಘ್ರವಾಗಿ ಪ್ರವಹಿಸುತ್ತಾ ಸಮುದ್ರವನ್ನೂ ಸೇರಿ ಸಮುದ್ರದ ಭಾವವನ್ನೇ ಹೊಂದಿಬಿಡುವಂತೆ ಜ್ಞಾನಿಯು ಪರಮಾತ್ಮನ ಭಾವವನ್ನೇ ಹೊಂದಿಬಿಡುತ್ತಾನೆ.

ಹಿಂದಿನ ಶ್ಲೋಕದಲ್ಲಿ ಹೇಳಿದಂತೆ 'ಮುಕ್ತಿಹೊಂದಿದ ಜನರೂ ಇದ್ದಾರೆ' ಎಂದು ಈ ಶ್ಲೋಕದಲ್ಲಿ ಭಗವಂತನು ಪ್ರತಿಪಾದಿಸುತ್ತಾನೆ.

**ಮನ್ಮಯಾಃ**= ಮತ್ಪ್ರಚುರಾಃ ಎಲ್ಲೆಡೆಗಳಲ್ಲಿಯೂ ನನ್ನನ್ನು ಬಿಟ್ಟು ಬೇರೆ ಏನನ್ನೂ ಕಾಣುವುದಿಲ್ಲ. **ಸರ್ವತ್ರ ಮಾಂ ವಿನಾ ನ ಕಿಂಚಿತ್ ಪಶ್ಯನ್ತಿ.** (ಮ.ಭಾ.)

**ಜ್ಞಾನತಪಸಾ** = ನನ್ನ ಜನ್ಮ-ಕರ್ಮ-ತತ್ತ್ವಗಳ ಜ್ಞಾನವೆಂಬ ತಪಸ್ಸಿನಿಂದ ಎಂದು ಅರ್ಥಹೇಳಿ–**'ತಸ್ಯ ಧೀರಾಃ ಪರಿಜಾನನ್ತಿ ಯೋನಿಂ'** ಎಂಬ ಶ್ರುತಿಪ್ರಮಾಣವನ್ನು ಶ್ರೀರಾಮಾನುಜರು ಉದಾಹರಿಸುತ್ತಾರೆ. ಭಗ

ವಂತನ ಅವತಾರರಹಸ್ಯವನ್ನು ಅರಿಯುವವರೇ ಧೀರರು. ಧೀಮಂತರಲ್ಲಿ ಅಗ್ರೇಸರರು.)

'ಜ್ಞಾನಿಗೆ ಮಾತ್ರವೇ ನಿನ್ನ ಒಲುಮೆಯೋ? ಬೇರೆಯವರಿಗಿಲ್ಲವೋ?'–ಎಂಬುದಕ್ಕೆ ಪರಮಾತ್ಮನು ಹೇಳುತ್ತಾನೆ :

**ಓಂ ಯೇ ಯಥಾ ಮಾಂ ಪ್ರಪದ್ಯನ್ತೇ ತಾಂಸ್ತಥೈವ ಭಜಾಮ್ಯಹಮ್ ।**
**ಮಮ ವರ್ತ್ಮಾನುವರ್ತನ್ತೇ ಮನುಷ್ಯಾಃ ಪಾರ್ಥ ಸರ್ವಶಃ ॥೧೧॥**

ಯಾರು ಹೇಗೆ ನನ್ನನ್ನು ಶರಣುಹೋಗುವರೋ ನಾನೂ ಹಾಗೆಯೇ ಅವರನ್ನು ಅನುಗ್ರಹಿಸುವೆನು. ಮನುಷ್ಯರು ಸರ್ವಪ್ರಕಾರದಿಂದಲೂ ನನ್ನ ಮಾರ್ಗವನ್ನೇ ಅನುವರ್ತಿಸುತ್ತಿರುವರು.

* * *

**(ಆಕಾಶಾತ್ಪತಿತಂ ತೋಯಂ ಯಥಾ ಗಚ್ಛತಿ ಸಾಗರಮ್ ।**
**ಸರ್ವದೇವನಮಸ್ಕಾರಃ ಕೇಶವಂ ಪ್ರತಿಗಚ್ಛತಿ ॥**

ಆಕಾಶದಿಂದ ಬೀಳುವ ನೀರು ಯಾವ ರೀತಿಯಲ್ಲಿ ಕಡೆಯಲ್ಲಿ ಸಮುದ್ರವನ್ನೇ ಸೇರುತ್ತದೆಯೋ–ಅದೇ ರೀತಿಯಲ್ಲಿ ಸರ್ವದೇವತೆಗಳಿಗೂ ಮಾಡಿದ ನಮಸ್ಕಾರವು ಕೇಶವನನ್ನೇ ಸೇರುತ್ತದೆ. ಸಂಧ್ಯಾವಂದನೆಯ ಉಪಸ್ಥಾನದಲ್ಲಿ ಹೇಳುವ ಈ ಶ್ಲೋಕದ ರಹಸ್ಯವನ್ನೇ ಶ್ರೀಕೃಷ್ಣನು ಭಗವದ್ಗೀತೆಯ **ಯೇ ಯಥಾ ಮಾಂ** ಎಂಬ ಶ್ಲೋಕದಲ್ಲಿ ವಿವರಿಸಿ ಹೇಳಿದ್ದಾನೆ. ಒಬ್ಬನು ನನ್ನನ್ನು ರಾಮರೂಪದಿಂದ ಪೂಜೆಮಾಡಿದರೆ–ಅವನಿಗೆ ನಾನು ರಾಮನಾಗಿಯೇ ಅನುಗ್ರಹಿಸುತ್ತೇನೆ. ಕೃಷ್ಣರೂಪದಿಂದ ಪೂಜಿಸಿದರೆ–ಕೃಷ್ಣನಾಗಿಯೇ ಅನುಗ್ರಹಿಸುತ್ತೇನೆ. ಶಿವರೂಪದಿಂದ ಪೂಜಿಸಿದರೆ–ಶಿವನಾಗಿಯೇ ಅನುಗ್ರಹಿಸುತ್ತೇನೆ. ದೇವಿಯರೂಪದಿಂದ ಪೂಜಿಸಿದರೆ–ದೇವಿಯಾಗಿಯೇ ಅನುಗ್ರಹಿಸುತ್ತೇನೆ. ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ–ಯಾವುದೇ ಆಕಾರದಿಂದ ನನ್ನನ್ನು ಪೂಜಿಸಿದರೂ ಕೂಡ ನಾನು ಆ ರೂಪವಾಗಿಯೇ ಭಕ್ತರನ್ನು ಅನುಗ್ರಹಿಸುತ್ತೇನೆ.

ಒಬ್ಬ ಭಕ್ತನು ನನ್ನ ವಿಷಯದಲ್ಲಿ ವ್ಯಾಕುಲಿತನಾದರೆ ನಾನೂ ಅವನ ವಿಷಯದಲ್ಲಿ ವ್ಯಾಕುಲಪಡುತ್ತೇನೆ. ಮತ್ತೊಬ್ಬನು ನನ್ನ ವಿಯೋಗವನ್ನು ಸಹಿಸದವನಾಗಿದ್ದರೆ ಆ ಭಕ್ತನ ವಿಯೋಗವನ್ನು ನಾನೂ ಸಹಿಸಲಾರೆನು.

ಇನ್ನೊಬ್ಬ ಭಕ್ತನು ನನಗೆ ತನ್ನಲ್ಲಿರುವ ಸಕಲವನ್ನೂ ಅರ್ಪಿಸಿಬಿಟ್ಟರೆ ನಾನೂ ಸಹ ನನ್ನಲ್ಲಿರುವ ಸಕಲವನ್ನೂ ಅವನಿಗೆ ಅರ್ಪಿಸಿಬಿಡುತ್ತೇನೆ. ಯಶೋದೆ ಯಂತೆ ನನ್ನ ಭಕ್ತನು ನನ್ನನ್ನು ಪುತ್ರನೆಂದು ಭಾವಿಸಿದರೆ–ನಾನು ಪುತ್ರ ಭಾವವನ್ನೇ ಹೊಂದುತ್ತೇನೆ. ರುಕ್ಮಿಣಿಯಂತೆ ಪತಿಭಾವದಿಂದ ನನ್ನನ್ನು ಪೂಜಿಸಿದರೆ–ನಾನು ಪತಿಭಾವವನ್ನೇ ಹೊಂದುತ್ತೇನೆ. ಹನುಮಂತನಂತೆ ನನ್ನನ್ನು ಸ್ವಾಮಿಭಾವದಿಂದ ಪೂಜಿಸಿದರೆ–ನಾನೂ ಸ್ವಾಮಿಯಾಗಿಯೇ ಅವನನ್ನು ಅನುಗ್ರಹಿಸುತ್ತೇನೆ. ಸುದಾಮನಂತೆ ಮಿತ್ರನೆಂದು ಭಾವಿಸಿದರೆ–ನಾನೂ ಸಹ ಮಿತ್ರನಾಗಿಯೇ ಅವನನ್ನು ಅನುಗ್ರಹಿಸುತ್ತೇನೆ. ಗೋಪಿಯರಂತೆ ಮಧುರಭಾವದಿಂದ ನನ್ನನ್ನು ಆರಾಧಿಸಿದರೆ–ನಾನೂ ಸಹ ಮಧುರ ಭಾವದಿಂದಲೇ ಇದ್ದು ಅವರಿಗೆ ಮಂಗಳವನ್ನುಂಟುಮಾಡುತ್ತೇನೆ.

ಜ್ಞಾನಿಯು ನನ್ನನ್ನು ಅಪೇಕ್ಷಿಸಿದರೆ ನನ್ನ ಭಾವವನ್ನೇ ಜ್ಞಾನಿಗೆ ನಾನು ಕೊಡುತ್ತೇನೆ. ಪುತ್ರ-ಮಿತ್ರ-ಕಳತ್ರರನ್ನು ಅಪೇಕ್ಷಿಸಿದರೆ ಅವನ್ನೂ ನಾನು ಅನುಗ್ರಹಿಸುತ್ತೇನೆ. ಯಾರು ಏನೇ ಕೇಳಿದರೂ ನಾನು ಇಲ್ಲವೆನ್ನುವವನಲ್ಲ. ಐಶ್ವರ್ಯಕಾಮಿಗಳಿಗೆ ಐಶ್ವರ್ಯವನ್ನೂ ಕೊಡುತ್ತೇನೆ. ಸಂಕಟವನ್ನು ಪರಿ ಹರಿಸಬೇಕೆಂದು ಒಬ್ಬನು ಕೇಳಿದರೆ ಅವನ ಸಂಕಟವನ್ನೂ ಪರಿಹರಿಸುತ್ತೇನೆ. ಯಾರು, ಹೇಗೆ, ಯಾವ ಪ್ರಕಾರದಿಂದ, ಯಾವ ಪ್ರಯೋಜನಕ್ಕಾಗಿ ಯಾವ ಫಲವನ್ನು ಬಯಸಿ ನನ್ನನ್ನು ಬಂದು ಸೇರುವರೋ, ನನ್ನನ್ನು ಪ್ರಾರ್ಥಿಸು ವರೋ–ಅವರಿಗೆ ಹಾಗೆಯೇ ಆ ಫಲವನ್ನು ಕೊಟ್ಟು ಅನುಗ್ರಹಿಸುವೆನು. ಮೋಕ್ಷಾಕಾಂಕ್ಷಿಗಳಾಗಲೀ, ಐಹಿಕವಾದ ಫಲವನ್ನು ಅಪೇಕ್ಷಿಸುವವರೇ ಆಗಲೀ ಸರ್ವಪ್ರಕಾರದಿಂದಲೂ ಮನುಷ್ಯರು ನನ್ನ ಮಾರ್ಗವನ್ನೇ ಹಿಡಿದುಬರುತ್ತಾರೆ. ಅವರ ಇಚ್ಛಾಪೂರಣಕ್ಕಾಗಿ ನನ್ನ ಯಾವುದೋ ರೂಪವನ್ನು ಪ್ರಾರ್ಥಿಸುತ್ತಾರೆ. ಅದೇ ರೂಪದಿಂದಲೇ ನಾನು ಅವರವರ ಇಷ್ಟಾರ್ಥ ಗಳನ್ನು ನೆರವೇರಿಸುತ್ತೇನೆ. ಫಲಾಪೇಕ್ಷಿಗಳಾದವರೂ ಮತ್ತು ಮೋಕ್ಷಾಪೇಕ್ಷಿ ಗಳಾದವರೂ ನನ್ನನ್ನು ಬಿಟ್ಟುಹೋಗಲಾರರು.

ಅಹಂ ಭಜಾಮಿ : ನನ್ನನ್ನು ತೋರಿಸಿಕೊಳ್ಳುತ್ತೇನೆ. (ರಾ.ಭಾ.)

ಫಲಪ್ರದಾನದಿಂದ ಅವರು ಸೇವಿಸುವಂತೆ ಮಾಡುತ್ತೇನೆ. ಫಲ ದಾನೇನ ಸೇವಯಾಮಿ. (ಮ.ಭಾ.)

ಅನ್ಯದೇವತಾರೂಪದಿಂದ ನನ್ನನ್ನು ಭಜಿಸಿದಮಾತ್ರದಿಂದ ಮುಕ್ತಿಯು ದೊರೆಯುವುದಿಲ್ಲ. ಆದರೂ ಎಲ್ಲರಿಗೂ ಅನುರೂಪವಾದ ಫಲವನ್ನು ಕೊಡುತ್ತೇನೆ. ಜ್ಞಾನಿಗಳಿಗೆ ಮಾತ್ರವಲ್ಲ ; ಕರ್ಮಠರಿಗೂ ಅವರವರಿಗೆ ಯೋಗ್ಯವಾದ ಫಲವನ್ನು ನಾನೇ ಕೊಡುವವನು.

ಅನ್ಯದೇವತೆಗಳನ್ನು ಪೂಜಿಸುವವರು ಕೂಡ ನನ್ನ ದಾರಿಯನ್ನೇ ಅನು ಸರಿಸುತ್ತಾರೆ. ಏಕೆಂದರೆ : ಎಲ್ಲ ಕರ್ಮಗಳ ಕರ್ತೃವೂ ಮತ್ತು ಭೋಕ್ತೃವೂ ನಾನೇ ಆಗಿದ್ದೇನೆ.

**ಸರ್ವಕರ್ಮಕರ್ತೃತ್ವಾತ್ ಭೋಕ್ತೃತ್ವಾಚ್ಚ ಮಮ ।ಯೋ ದೇವಾನಾಂ ನಾಮಧಾ ಏಕ ಏವ । ಅಜಸ್ಯನಾಭಾವಧ್ಯೇಕಮರ್ಪಿತಂ** (ಶ್ರುತಿಃ.)

(ಮ.ಭಾ.)

ನೀನು ಇಷ್ಟು ಉದಾರತೆಯಿಂದ ಸರ್ವಶ್ರೇಷ್ಠವಾದ ಜ್ಞಾನವನ್ನೇ ಕೊಡುವೆನೆಂದು ಸಾರಿರುವಾಗ ಮನುಷ್ಯರು ಫಲಾಪೇಕ್ಷಿಗಳಾಗುವ ಕಾರಣ ವೇನು? ಜ್ಞಾನವನ್ನೇಕೆ ಎಲ್ಲರೂ ಬಯಸುವುದಿಲ್ಲ?

ಈ ಪ್ರಶ್ನೆಗೆ ಶ್ರೀಕೃಷ್ಣನು ಉತ್ತರಿಸುತ್ತಾನೆ :

**ಓಂ ಕಾಂಕ್ಷನ್ತಃ ಕರ್ಮಣಾಂ ಸಿದ್ಧಿಂ ಯಜನ್ತ ಇಹ ದೇವತಾಃ ।**
**ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥೧೨॥**

ಮನುಷ್ಯರು ಕರ್ಮಗಳ ಸಿದ್ಧಿಯನ್ನು ಬಯಸಿ ಈ ಲೋಕದಲ್ಲಿ ದೇವತೆಗಳನ್ನು ಆರಾಧಿಸುತ್ತಾರೆ. ಏಕೆಂದರೆ : ಮನುಷ್ಯಲೋಕದಲ್ಲಿ ಕರ್ಮ ದಿಂದ ಸಿದ್ಧಿಯು ಬಲುಬೇಗ ಆಗುತ್ತದೆ.

* * *

(ಪ್ರಪಂಚದ ಬಹುಪಾಲು ಜನರು ಬಲುಬೇಗ ಕರ್ಮದ ಸಿದ್ಧಿಯನ್ನು ಅಥವಾ ಕರ್ಮದ ಫಲವನ್ನು ಅಪೇಕ್ಷಿಸುವವರಾಗಿದ್ದಾರೆ. ಈ ಕಾರಣ ದಿಂದಲೇ ಅವರು ವಿಧ್ಯುಕ್ತವಾಗಿ ನಾನಾವಿಧವಾದ ಕಾಮ್ಯಕರ್ಮಗಳನ್ನು ಮಾಡಿ ನಾನಾದೇವತೆಗಳನ್ನು ಪೂಜಿಸುತ್ತಾರೆ. ಪ್ರಕೃತಿಯು ಯಾವಾಗಲೂ ಬಾಹ್ಯಮುಖವಾಗಿರುತ್ತದೆ. ಬಾಹ್ಯವ್ಯಾಪಾರಗಳನ್ನು ಮಾಡುವುದು ಸುಲಭ. ಮೇಲಾಗಿ ಫಲವು ಪ್ರತ್ಯಕ್ಷವಾಗಿ ಸಿಕ್ಕುತ್ತದೆ. ಅಲ್ಲದೇ ಮನುಷ್ಯಲೋಕದಲ್ಲಿ ಕರ್ಮದ ಫಲವು ಬಲುಬೇಗ ಲಭಿಸುತ್ತದೆ. ಹನ್ನೆರಡು ದಿವಸಗಳು

ಪರ್ಜನ್ಯಜಪಮಾಡಿದರೆ ಹನ್ನೆರಡನೆಯ ದಿವಸ ಮಳೆಗರೆಯುತ್ತದೆ. ಇದು ಪ್ರತ್ಯಕ್ಷಪ್ರಮಾಣ. ನವಗ್ರಹಜಪಮಾಡುವುದರಿಂದ ಅನೇಕ ಈತಿಬಾಧೆಗಳು ಕಡಿಮೆಯಾಗುತ್ತವೆ. ಸೂರ್ಯನಮಸ್ಕಾರವನ್ನು ಮಾಡಿ ಹೋಗಿದ್ದ ಕಣ್ಣುಗಳನ್ನು ಪುನಃ ಪಡೆದುಕೊಂಡಿರುವುದೂ ಉಂಟು. ಹರಕೆಗಳಿಂದ ಕಳೆದುಹೋದ ವಸ್ತುವು ಸಿಕ್ಕುತ್ತದೆ. ಮಹಾಲಕ್ಷ್ಮಿಯ ಸ್ತೋತ್ರವನ್ನು ತಪ್ಪದೇ ನಲವತ್ತೆಂಟು ದಿವಸಗಳು ಪಠಿಸಿದರೆ ಮದುವೆಯಾಗದಿದ್ದ ಹೆಣ್ಣಿಗೆ ಮದುವೆಯಾಗುತ್ತದೆ. ಇವೆಲ್ಲವೂ ಪ್ರತ್ಯಕ್ಷಪ್ರಮಾಣ ; ಶೀಘ್ರಕರ್ಮಸಿದ್ಧಿ. ಹೀಗೆ ಕರ್ಮಮಾಡಿ ಮನುಷ್ಯನು ಕ್ಷಿಪ್ರದಲ್ಲಿಯೇ ಕರ್ಮಫಲವನ್ನು ಪಡೆಯು ವಾಗ ಅವನಿಗೆ ಆಧ್ಯಾತ್ಮದ ದೃಷ್ಟಿಯು ಹೇಗೆ ತಾನೇ ಬಂದೀತು? ಇದರಲ್ಲಿ ದೊರೆಯುವ ಜ್ಞಾನವು ಅತ್ಯುಚ್ಚವಾಗಿದ್ದರೂ ಹಾದಿಯು ಬಹುದೂರ. ಅನೇಕಜನ್ಮಗಳ ಸಾಧನೆಯು ಬೇಕಾಗುವುದು. ಈ ಕಾರಣದಿಂದಲೇ ಜನರು ಕರ್ಮಮಾರ್ಗದಲ್ಲಿ ಹೆಚ್ಚು ಆಸಕ್ತಿಯುಳ್ಳವರಾಗಿರುತ್ತಾರೆ.

ಭಗವಂತನು ಹೇಳುವ ಕರ್ಮಯೋಗವು ತಾತ್ತ್ವಿಕವಾಗಿ ಜ್ಞಾನಾಕಾರವೇ ಆಗಿದೆ. ಆದರೆ ಅಂತಹ ಕರ್ಮಯೋಗದ ಅಧಿಕಾರಿಗಳು ಅತಿವಿರಳ. ಶೀಘ್ರವಾಗಿ ದೊರೆಯುವ ಲೌಕಿಕಫಲದಲ್ಲಿ ಆಸೆಯಿಟ್ಟು ಇಂದ್ರಾದಿದೇವತೆ ಗಳನ್ನು ಆರಾಧಿಸುವವರ ಸಂಖ್ಯೆಯೇ ಹೆಚ್ಚು. ಫಲಾಭಿಸಂಧಿಯನ್ನು ತೊರೆದು ಇಂದ್ರಾದಿದೇವತೆಗಳಿಗೆ ಆತ್ಮಭೂತನಾಗಿ ಎಲ್ಲ ಯಜ್ಞಗಳಿಗೂ ಭೋಕ್ತೃವಾದ ನನ್ನನ್ನು ಪೂಜಿಸುವವರು ಕಡಿಮೆ. ಶೀಘ್ರವಾದ ಲೌಕಿಕಫಲವನ್ನು ಬಯಸುವವರೇ ಹೆಚ್ಚು. (ರಾ.ಭಾ.)

ಕರ್ಮಜವಾದ ಫಲಪ್ರಾಪ್ತಿಯು ಶೀಘ್ರವಾಗಿಯೇ ದೊರಕುತ್ತದೆ. ಕರ್ಮಗಳಿಗೆ ಭಗವಂತನು ಭೋಕ್ತೃವಾಗಿರುವುದರಿಂದಲೇ ಇದೂ ಕೂಡ ಹೊಂದಿಕೆಯಾಗುವುದು.

ತಸ್ಮಾತ್ತೇ ಧನಸನಯಃ (ಶ್ರುತಿಃ) (ಮ.ಭಾ.)

ವರ್ಣಾಶ್ರಮಧರ್ಮಗಳಿಗೆ ಕಟ್ಟುಬಿದ್ದು ವರ್ಣಾಶ್ರಮೋಕ್ತವಾದ ನಿತ್ಯ-ನೈಮಿತ್ತಿಕ-ಕಾಮ್ಯಕರ್ಮಗಳನ್ನು ಮಾಡಿ ಇಂದ್ರಾದಿದೇವತೆಗಳನ್ನು ಪೂಜಿಸಿ ದರೂ ಸಹ ಅವರು ನನ್ನನ್ನೇ ಪೂಜಿಸಿದಂತಾಗುತ್ತದೆ. ಏಕೆಂದರೆ : ವರ್ಣಾ ಶ್ರಮಗಳೂ ನನ್ನಿಂದಲೇ ಹುಟ್ಟಿವೆ.)

**ಓಂ ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ॥೧೩॥**

ಗುಣ-ಕರ್ಮಗಳ ವಿಭಾಗದಿಂದ ನಾಲ್ಕು ವರ್ಣಗಳು ನನ್ನಿಂದ ಸೃಷ್ಟಿಸಲ್ಪಟ್ಟಿವೆ. ನಾನವುಗಳನ್ನು ಸೃಷ್ಟಿಸಿರುವೆನಾದರೂ, ನಾನು ಅವುಗಳ ಕರ್ತೃವೇ ಆದರೂ ನಾನು ಅದರ ಅಕರ್ತೃ ಮತ್ತು ಅವ್ಯಯ ಎಂದು ಭಾವಿಸು.

* * *

(ತ್ರೈಗುಣ್ಯವಿಷಯವಾದ ವೇದಗಳು ಅನಾದಿ. ಪ್ರಕೃತಿಯೊಡನೆ ವೇದಗಳೂ ಬ್ರಹ್ಮವಸ್ತುವಿನಿಂದಲೇ ಹೊರಬಂದಿವೆ. ವೇದಗಳಲ್ಲಿ ಚಾತುರ್ವರ್ಣ್ಯದ ವ್ಯವಸ್ಥೆಯಿದೆ. ಪುರುಷಸೂಕ್ತದ ವಿರಾಟ್ಪುರುಷನ ವರ್ಣನೆಯಲ್ಲಿ :

**ಬ್ರಾಹ್ಮಣೋಽಸ್ಯ ಮುಖಮಾಸೀತ್**
**ಬಾಹೂ ರಾಜನ್ಯಃ ಕೃತಃ ।**
**ಊರೂ ತದಸ್ಯ ಯದ್ವೈಶ್ಯಃ**
**ಪದ್ಭ್ಯಾಗ್ಂ ಶೂದ್ರೋ ಅಜಾಯತ ॥**

ವಿರಾಟ್ಪುರುಷನ ಮುಖವೇ ಬ್ರಾಹ್ಮಣನಾದವನು. (ಮುಖದಿಂದ ಬ್ರಾಹ್ಮಣನು ಹುಟ್ಟಿದನು.) ಬಾಹುಗಳಿಂದ ಕ್ಷತ್ರಿಯನು ಮಾಡಲ್ಪಟ್ಟನು. (ಕ್ಷತ್ರಿಯನು ಹುಟ್ಟಿದನು.) ತೊಡೆಯಿಂದ ವೈಶ್ಯನು ಹುಟ್ಟಿದನು. ಕಾಲುಗಳಿಂದ ಶೂದ್ರನು ಹುಟ್ಟಿದನು.

ಮಹಾಭಾರತದ ಶಾಂತಿಪರ್ವದಲ್ಲಿಯೂ ಇದರ ಉಲ್ಲೇಖವಿದೆ. ಭೀಷ್ಮನು ವಿರಾಟ್ಪುರುಷನನ್ನು ಹೀಗೆ ಪ್ರಾರ್ಥಿಸುತ್ತಾನೆ :

**ಬ್ರಹ್ಮ ವಕ್ತ್ರಂ ಭುಜೌ ಕ್ಷತ್ರಂ ಕೃತ್ಸ್ನಮೂರೂದರಂ ವಿಶಃ ।**
**ಪಾದೌ ಯಸ್ಯಾಶ್ರಿತಾಃ ಶೂದ್ರಾಸ್ತಸ್ಮೈ ವರ್ಣಾತ್ಮನೇ ನಮಃ ॥**

ಬ್ರಾಹ್ಮಣನೇ ಮುಖವಾಗಿರುವ, ಭುಜಗಳೇ ಕ್ಷತ್ರಿಯನಾಗಿರುವ, ಹೊಟ್ಟೆ ಮತ್ತು ತೊಡೆಗಳೇ ವೈಶ್ಯನಾಗಿರುವ, ಪಾದಗಳೇ ಶೂದ್ರನಾಗಿರುವ (ಶೂದ್ರಾಶ್ರಿತವಾದ ಪಾದಗಳುಳ್ಳ ), ವರ್ಣಾತ್ಮನಾದ ವಿರಾಟ್ಪುರುಷನಿಗೆ ನಮಸ್ಕಾರವಿರಲಿ.

ಶ್ರೀಮದ್ಭಾಗವತದ ಹನ್ನೊಂದನೆಯ ಸ್ಕಂಧದಲ್ಲಿ ಶ್ರೀಕೃಷ್ಣನು ಉದ್ಧವ ನೊಡನೆ ಈ ವಿಷಯವನ್ನೇ ಹೇಳುತ್ತಾನೆ :

**ಮುಖಬಾಹೂರುಪಾದೇಭ್ಯಃ ಪುರುಷಸ್ಯಾಶ್ರಮೈಃ ಸಹ ।**
**ಚತ್ವಾರೋ ಜಜ್ಞಿರೇ ವರ್ಣಾಃ ಗುಣೈರ್ವಿಪ್ರಾದಯಃ ಪೃಥಕ್ ॥**

ಮುಖ-ಬಾಹು-ಊರು-ಪಾದಗಳಿಂದ ಅವರವರ ಆಶ್ರಮಧರ್ಮ ಗಳೊಡನೆ ಮತ್ತು ಬ್ರಾಹ್ಮಣರೇ ಮೊದಲಾದವರಿಗಿರಬೇಕಾದ ಪ್ರತ್ಯೇಕ ಗುಣ ಗಳೊಡನೆ ನಾಲ್ಕು ವರ್ಣಗಳೂ ಪ್ರಾದುರ್ಭೂತವಾಗಿವೆ.

ಈ ಅಭಿಪ್ರಾಯವನ್ನೇ ಇಲ್ಲಿ ಶ್ರೀಕೃಷ್ಣನು ಹೇಳಿದ್ದಾನೆ. ಗುಣ- ಕರ್ಮಗಳ ವಿಭಾಗದೊಡನೆ ಸಾತ್ತ್ವಿಕನಾದ ಬ್ರಾಹ್ಮಣನಿಗೆ ಶಮ-ದಮ- ತಪಸ್ಸುಗಳು. ಎರಡನೆಯದಾದ ರಜೋಗುಣವು ಪ್ರಧಾನವಾಗಿರುವ ಕ್ಷತ್ರಿಯನಿಗೆ ಶೌರ್ಯ-ತೇಜಸ್ಸು ಮುಂತಾದುವು. ತಮಸ್ಸೇ ಎರಡನೆಯದಾಗಿ ರಜೋಗುಣವೇ ಪ್ರಧಾನವಾಗಿರುವ ವೈಶ್ಯನಿಗೆ ವ್ಯಾಪಾರ-ವ್ಯವಸಾಯಗಳು. ರಜೋಗುಣವು ಎರಡನೆಯದಾಗಿ ತಮಸ್ಸೇ ಮುಖ್ಯವಾಗಿರುವ ಶೂದ್ರನಿಗೆ ಶುಶ್ರೂಷೆ. ಈ ನಾಲ್ಕು ವರ್ಣಗಳೂ ವಿರಾಟ್ಪುರುಷನಿಂದ ಪ್ರಾದುರ್ಭೂತ ವಾಗಿವೆ. ಇವುಗಳಲ್ಲಿ ಒಂದು ಮೇಲು ಒಂದು ಕೀಳು ಎಂಬ ವಿಷಯವೇ ಇಲ್ಲ. ಒಂದಕ್ಕೊಂದು ಪೂರಕವಾಗಿವೆ.

'ಹಾಗಾದರೆ ಚಾತುರ್ವರ್ಣ್ಯವನ್ನು ಸೃಷ್ಟಿಸಿದ್ದರಿಂದ ನೀನು ಕರ್ತೃ ವೆಂದಾಯಿತು. ಸೃಷ್ಟಿಸಿದ ಫಲಕ್ಕೂ ನೀನು ಭಾಗಿಯಾಗಲೇಬೇಕು. ಆದುದ ರಿಂದ ನೀನು ನಿತ್ಯಮುಕ್ತನು ಹೇಗಾದೆ?'–ಎಂಬ ಅರ್ಜುನನ ಪ್ರಶ್ನೆಯನ್ನು ನಿರೀಕ್ಷಿಸಿ ಶ್ರೀಕೃಷ್ಣನು ಹೇಳುತ್ತಾನೆ : ವ್ಯವಹಾರದ ದೃಷ್ಟಿಯಿಂದ ನೋಡಿದರೆ ನಾನಿದಕ್ಕೆ ಕರ್ತೃವಾಗಿ ಕಂಡರೂ ನಿಜವಾಗಿ ನಾನು ಇದರ ಕರ್ತೃವಲ್ಲ. ಆದುದರಿಂದ ಇದರ ಫಲಾಫಲಗಳೂ ನನಗೆ ಅಂಟುವುದಿಲ್ಲ. ನಾನು ಹೇಳಿ ದಂತೆಯೇ ನಾನು ಅವ್ಯಯನು ಎಂದು ತಿಳಿ.

ಈ ನಾಲ್ಕು ವರ್ಣದವರೂ ಭಗವಂತನ ಮುಖ, ಬಾಹು, ತೊಡೆ ಮತ್ತು ಪಾದಗಳಿಂದ ಹುಟ್ಟಿದವರು. ಆದರೆ ಈ ವರ್ಣಗಳಿಗೆ ಸೇರದವರು ಮತ್ತು ಬೇರೆ ದೇಶದ ಜನರು ಭಗವಂತನ ಯಾವ ಅವಯವದಿಂದ ಹುಟ್ಟಿ

ದರು?—ಎಂದು ಕೆಲವರು ಕುಚೋದ್ಯಮಾಡುವುದುಂಟು. ಅದಕ್ಕೆ ಶ್ರುತಿಯ ಸರಿಯಾದ ಅರ್ಥವನ್ನು ಗ್ರಹಿಸದಿರುವುದೇ ಕಾರಣ. ಆಯಾ ಜಾತಿಯವರು ಆಯಾ ಅಂಗಗಳಿಂದ ಹೊರಕ್ಕೆ ಚಿಮ್ಮಿದರು—ಎಂದು ಭೌತಿಕವಾದ ಅರ್ಥವಲ್ಲ. ಭಗವಂತನ ಆಯಾ ಅವಯವಗಳ ಕಾರ್ಯವಾದ ಜ್ಞಾನಪ್ರವಚನ, ಬಾಹುಬಲ, ಕೃಷಿ-ವಾಣಿಜ್ಯ, ಸೇವೆ—ಇವುಗಳು ಪ್ರಧಾನವಾಗಿ ಉಳ್ಳವುಗಳು ಆಯಾ ವರ್ಣಗಳು—ಎಂಬ ತಾತ್ತ್ವಿಕವಾದ ಅರ್ಥವನ್ನು ತಿಳಿಯಬೇಕು.

ಬ್ರಾಹ್ಮಣನು ಭಗವಂತನ ಮುಖ—ಎಂದರೆ ಭಗವಂತನ ಆಶ್ರಯವನ್ನು ವಿಕಾರಗೊಳಿಸದೇ ತಿಳಿಸುವವನು. ಆ ಆಶ್ರಯವನ್ನು ತಮ್ಮ ತೋಳಿನ ಬಲ ಮುಂತಾದುವುಗಳಿಂದ ಕಾರ್ಯರೂಪಕ್ಕೆ ತರಬೇಕಾದವರು ಇತರ ವರ್ಣ ದವರು.

ಭಗವಂತನು ಹೇಳಿರುವ ಈ ವ್ಯವಸ್ಥೆಯು ಸಹಜವಾದುದು. ಹಿಂದಿನ ಕರ್ಮಗಳಿಗೆ ಅನುಗುಣವಾಗಿ ಮನುಷ್ಯನು ಪಡೆದುಕೊಂಡಿರುವುದು.

**ತದ್ಯ ಇಹ ರಮಣೀಯಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮಾಪದ್ಯೇರನ್**

ಸೃಷ್ಟಿಯಲ್ಲಿ ಬಂದಿರುವುದು. ಅದಕ್ಕೆ ಅನುಗುಣವಾದ ಒಳ್ಳೆಯ ಕರ್ಮಗಳನ್ನು ಮಾಡಿ ಭಗವಂತನನ್ನು ಆರಾಧಿಸಬೇಕು.

**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ ।**

ಕೆಲವು ಜನರಲ್ಲಿ ಹೊರಗೆ ಕಂಡುಬರುವ ಕೆಲವು ಕರ್ಮಗಳನ್ನು ನೋಡಿ ಅದರಿಂದ ಅವರ ವರ್ಣವನ್ನು ನಿರ್ಣಯಿಸುವುದು ಕೃತಕವಾದ ವಿಧಾನ.

ಮಾವಿನಕಾಯಿನ ಮಿಡಿಯನ್ನು ಅದರದೇ ಆದ ಸಹಜಧರ್ಮದಂತೆ ಬೆಳೆಯಲುಬಿಟ್ಟು ಗಿಡದಲ್ಲಿರುವಂತೆ ಪೋಷಿಸುತ್ತಿದ್ದರೆ ಅದು ಕಾಲವಿಶೇಷ ದಲ್ಲಿ ದೋರುಗಾಯಾಗಿ ಅನಂತರ ಪಕ್ವವಾದ ಹಣ್ಣಾಗುತ್ತದೆ. ಮಾವಿನ ಕಾಯಿನ ಮಿಡಿಯೂ ಪ್ರಯೋಜನಕ್ಕೆ ಬರುತ್ತದೆ. ಉಪ್ಪಿನಕಾಯಿ ಹಾಕ ಬಹುದು. ಅದನ್ನು ಹಣ್ಣುಮಾಡಬಯಸಿದರೆ ಕೊಳೆತುಹೋಗುತ್ತದೆ. ಮಾವಿನಕಾಯಿ ಸ್ವಲ್ಪ ಬಲಿತಾಗ ಅದರಿಂದ ಹುಳಿಯನ್ನವನ್ನು ಕಲೆಸಬಹುದು. ಮತ್ತಾವ ಪ್ರಯೋಜನವೂ ಅದರಿಂದ ಆಗುವುದಿಲ್ಲ. ಸ್ವಲ್ಪ ಬಲಿತರೆ ಅದನ್ನು

ಗುಡಾಣದಲ್ಲಿಟ್ಟು ಹಣ್ಣುಮಾಡಬೇಕಾಗುತ್ತದೆ. ಅದನ್ನೂ ತಿನ್ನಬಹುದಾದರೂ ಮರದ ಮೇಲೆಯೇ ಮಾಗಿದ ಹಣ್ಣಿನಷ್ಟು ರುಚಿ ಅದರಲ್ಲಿರುವುದಿಲ್ಲ. ಇದರಂತೆ ಮನುಷ್ಯನ ವಿಕಾಸವೂ ಆಗಬೇಕಾಗಿದೆ.

ಶೂದ್ರ, ವೈಶ್ಯ, ಕ್ಷತ್ರಿಯ, ಬ್ರಾಹ್ಮಣ ಮತ್ತು ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸ–ಇವು ಕ್ರಮವಾಗಿ ಸೃಷ್ಟಿಯಲ್ಲಿ ಸಹಜವಾದ ಆಧ್ಯಾತ್ಮಿಕವಿಕಾಸದ ಸ್ಥಿತಿಗಳು. ಆ ವಿಕಾಸವು ಯಾರಿಗೆ ಪರಿಪೂರ್ಣವಾಗಿರುವುದೋ ಅವರೇ ಪರಮಹಂಸರು. ತಮ್ಮ ತಮ್ಮ ವರ್ಣಗಳಿಗೆ ಅನುಗುಣವಾದ ಕರ್ಮಗಳನ್ನು ಆಚರಿಸುತ್ತಾ ಆತ್ಮಗುಣಸಂಪನ್ನ ರಾಗಿರುವವರು ಯಾವ ವರ್ಣದವರಾಗಿದ್ದರೂ ಗೌರವಕ್ಕೆ ಯೋಗ್ಯರೇ. ಆದರೆ ಮತ್ತೊಂದು ವರ್ಣದ ಕರ್ಮಗಳನ್ನು ಅನುಸರಿಸ ಹೋಗುವವರು ಉಭಯತಃ ಭ್ರಷ್ಟರಾಗುತ್ತಾರೆ.

ವರ್ಣವಿಭಾಗದ ಆವಶ್ಯಕತೆಯನ್ನು ಒಂದಲ್ಲ ಒಂದು ರೀತಿಯಲ್ಲಿ ಪ್ರಪಂಚದ ಎಲ್ಲ ಜನಾಂಗಗಳಲ್ಲಿಯೂ ನಾವು ಕಾಣುತ್ತೇವೆ. ವಿದೇಶಗಳಲ್ಲೂ ಇರುವ 'ಹರೇ ರಾಮ ಹರೇ ಕೃಷ್ಣ' ಪಂಥದವರು ಇದರ ಸ್ವಾರಸ್ಯವನ್ನು ಯಥಾಶಕ್ತಿ ಅರಿತು ಆಚರಿಸಲು ಪ್ರಯತ್ನಿಸುತ್ತಿದ್ದಾರೆ. ಋಷಿಗಳು ಹೇಳಿದ ಪರಿಷ್ಕೃತವಾದ ರೂಪದಲ್ಲಿ ವರ್ಣಧರ್ಮವು ಆವಶ್ಯಕವೆಂಬುದನ್ನು ಎಲ್ಲ ದೇಶಗಳ ಧೀಮಂತಜನರೂ ಒಪ್ಪಿದ್ದಾರೆ.

**ಮಯಾ ಸೃಷ್ಟಂ** = ಸೃಷ್ಟಿಶಬ್ದವು ಉಪಲಕ್ಷಣ. **ಚಾತುರ್ವರ್ಣ್ಯ** ಪ್ರಮುಖವಾದ ಸಮಸ್ತಜಗತ್ತಿನ ಸೃಷ್ಟಿ, ರಕ್ಷಣೆ ಮತ್ತು ಉಪಸಂಹಾರ ಎಲ್ಲವೂ ನನ್ನಿಂದಲೇ ಆಗುತ್ತದೆ ಎಂಬ ಭಾವ–**ಸೃಷ್ಟಿಗ್ರಹಣಂ ಪ್ರದರ್ಶನಾರ್ಥಂ ಮಯ್ಯೈವ ರಕ್ಷ್ಯತೇ ಮಯ್ಯೈವ ಚ ಉಪಸಂಹ್ರಿಯತೇ ।** (ರಾ.ಭಾ.)

ಭಗವಂತನು ಚಾತುರ್ವರ್ಣ್ಯದ ಕರ್ತೃ ಆಗಿದ್ದರೂ ಅಕರ್ತೃವು ಹೇಗೆ? ಎಂಬುದಕ್ಕೆ ಶ್ರೀಶಂಕರರು ಮಾಯಾವ್ಯವಹಾರದಿಂದ ಅವನು ಕರ್ತೃ, ಪಾರಮಾರ್ಥಿಕವಾಗಿ ಅಕರ್ತೃ–ಎಂದೂ ಹೇಳಿದ್ದಾರೆ.

**ಕ್ರಿಯಾಯಾಂ ವೈಲಕ್ಷಣ್ಯಾತ್ ಕರ್ತಾಪ್ಯಕರ್ತಾ** ಎಂದು ಹೇಳಿ **ವಿಶ್ವಕರ್ಮಾ ವಿಮನಾಃ** ಎಂಬ ಶ್ರುತಿಯನ್ನು ಪ್ರಮಾಣವಾಗಿ ಶ್ರೀಮಧ್ವಾ

ಚಾರ್ಯರು ಹೇಳುತ್ತಾರೆ. ಭಗವಂತನು ಸೃಷ್ಟಿಯ ಕರ್ತೃವಾದರೂ ಜೀವದಂತೆ ಅವನಿಗೆ ಕರ್ಮಲೇಪವಿಲ್ಲ. ಏಕೆಂದರೆ : ಅವನ ಕ್ರಿಯೆಯಲ್ಲಿ ವೈಲಕ್ಷಣ್ಯವಿದೆ. ಅದೇನೆಂದರೆ ಅವನಿಗೆ ಅಭಿನಿವೇಶ (ಆಗ್ರಹ) ವಿರುವುದಿಲ್ಲ. ಶ್ರುತಿಯಲ್ಲಿ ಹೇಳಿರುವ ವಿಮನಾಃ ಎಂಬುದಕ್ಕೆ ಅಭಿನಿವೇಶರಹಿತಃ ಎಂದು ಅರ್ಥ.

(ಮ.ಭಾ.)

**ಚಾತುರ್ವರ್ಣ್ಯಂ** = ಚಾತುರ್ವರ್ಣ್ಯಪ್ರಮುಖವಾದ ಬ್ರಹ್ಮಾದಿಸ್ತಂಬ ಪರ್ಯಂತವಾದ ಇಡೀ ಜಗತ್ತು. (ರಾ.ಭಾ.)

ವರ್ಣಗಳ ಗುಣವಿಭಾಗವನ್ನು ಹೇಳುವ ಮಹಾಭಾರತದ ಶ್ಲೋಕವನ್ನು ವೇದಾಂತದೇಶಿಕರು ಉದ್ಧರಿಸಿದ್ದಾರೆ.

**ತಮಃ ಶೂದ್ರೇ ರಜಃ ಕ್ಷತ್ರೇ ಬ್ರಾಹ್ಮಣೇ ಸತ್ತ್ವಮುತ್ತಮಮ್**

ಭಗವಂತನು ಕರ್ತೃವಾಗಿದ್ದರೂ ಅಕರ್ತೃವು ಹೇಗೆ?–ಎಂಬುದಕ್ಕೆ ಕಾರಣವನ್ನು ಮುಂದಿನ ಶ್ಲೋಕದ ಪೂರ್ವಾರ್ಧವು ಹೇಳುತ್ತದೆ ಎಂದು ಶ್ರೀರಾಮಾನುಜರ ಅಭಿಪ್ರಾಯ.)

**ಓಂ ನ ಮಾಂ ಕರ್ಮಾಣಿ ಲಿಮ್ಪನ್ತಿ ನ ಮೇ ಕರ್ಮಫಲೇ ಸ್ಪೃಹಾ ।**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ ॥೧೪॥**

ನನಗೆ ಕರ್ಮಗಳು ಅಂಟುವುದಿಲ್ಲ. ನನಗೆ ಕರ್ಮಫಲದಲ್ಲಿ ಆಸೆ ಯಿಲ್ಲ–ಹೀಗೆಂದು ಯಾವನು ತಿಳಿಯುತ್ತಾನೆಯೋ ಅವನು ಕರ್ಮಗಳಿಂದ ಬಂಧಿತನಾಗುವುದಿಲ್ಲ.

* * *

(ನಾನು ಕರ್ಮಗಳನ್ನು ಮಾಡುವೆನೇ ಹೊರತು ನಮಗೆ ಕರ್ಮಗಳು ಅಂಟುವುದಿಲ್ಲ. ಕಾರಣ ನನಗೆ ಅಹಂಭಾವವಿಲ್ಲ. 'ನಾನು ಈ ಕರ್ಮವನ್ನು ಮಾಡಿದೆನು' ಎಂದೇ ನಾನು ಭಾವಿಸುವುದಿಲ್ಲ–ಎನ್ನುತ್ತಾನೆ ಶ್ರೀಕೃಷ್ಣ. ಕೆಸರಿನಲ್ಲಿರುವ ಮೀನಿನಂತೆ ಇರಿ–ಎಂದು ಶ್ರೀರಾಮಕೃಷ್ಣರು ಹೇಳುತ್ತಿದ್ದರು. ಮೀನು ಕೆಸರಿನಲ್ಲಿದ್ದರೂ ಅದಕ್ಕೆ ಕೆಸರು ಅಂಟಿಕೊಳ್ಳುವುದಿಲ್ಲ. ಅದೇ ರೀತಿ ಯಲ್ಲಿ ಶ್ರೀಕೃಷ್ಣನು ಕರ್ಮಮಾಡಿದರೂ ಅವನಲ್ಲಿ 'ನಾನು ಮಾಡಿದೆನು' ಎಂಬ ಭಾವನೆಯೇ ಇಲ್ಲದೇ ಇರುವುದರಿಂದ 'ನನಗೆ ಕರ್ಮಗಳೇ ಅಂಟುವುದಿಲ್ಲ' ಎನ್ನುತ್ತಾನೆ.

ಹಿಂದಿನ ಶ್ಲೋಕದಲ್ಲಿ **ತಸ್ಯ ಅಕರ್ತಾರಂ ವಿದ್ಧಿ** ಎನ್ನುತ್ತಾನೆ. 'ನಾನು ಆ ಕರ್ಮವನ್ನು ಮಾಡಿದವನಲ್ಲ' ಎಂದು ತಿಳಿ ಎನ್ನುತ್ತಾನೆ. 'ನಾನು' ಎಂಬುದು ಯಾವಾಗ ಹೊರಟುಹೋಯಿತೋ ಅದರೊಡನೆ ಮಾಡಿದ ಕರ್ಮವೂ ಹೊರಟುಹೋಗುತ್ತದೆ. ಎರಡನೆಯದಾಗಿ : 'ನನಗೆ ಕರ್ಮಫಲದಲ್ಲಿ ಆಸಕ್ತಿಯಿಲ್ಲ' ಎನ್ನುತ್ತಾನೆ. ಇದನ್ನು ಶ್ರೀಕೃಷ್ಣನು ಮಾಡಿತೋರಿಸಿದ್ದಾನೆ. ಕಂಸನನ್ನು ಕೊಂದ. ಸಿಂಹಾಸನವನ್ನು ಹತ್ತಲಿಲ್ಲ. ಶಿಶುಪಾಲನನ್ನು ಕೊಂದು ಅವನ ಮಗನಿಗೇ ಪಟ್ಟಗಟ್ಟಿದ. ಜರಾಸಂಧನನ್ನು ಭೀಮನಿಂದ ಕೊಲ್ಲಿಸಿದ. ಅವನ ಮಗನಿಗೇ ಪಟ್ಟಗಟ್ಟಿದ. ಪಾಂಡವರ ವಿಜಯಸಾಧನೆಗೆ ಬಂದಿದ್ದಾನೆ. ಅವರಿಗೆ ರಾಜ್ಯವು ದೊರೆತನಂತರ ಯಾವ ಪ್ರತಿಫಲವೂ ಇಲ್ಲದೇ ದ್ವಾರಕೆಗೆ ಹಿಂದಿರುಗುತ್ತಾನೆ. ಶ್ರೀಕೃಷ್ಣನು ಆದರ್ಶಪುರುಷ. ಈ ಶ್ಲೋಕದ ಉತ್ತರಾರ್ಧದಲ್ಲಿ ಸಾಧಕರಿಗೂ ಮಾರ್ಗದರ್ಶನವನ್ನು ಮಾಡುತ್ತಾನೆ.

"ಶ್ರೀಕೃಷ್ಣನು ಲೋಕಹಿತಾರ್ಥವಾಗಿ ಕರ್ಮಮಾಡುವನೇ ಹೊರತು 'ನಾನು ಈ ಕರ್ಮಮಾಡಿದೆನು' ಎಂಬ ಭಾವನೆಯಿಂದ ಮಮಕಾರದಿಂದ ಕರ್ಮಮಾಡುವುದಿಲ್ಲ ಮತ್ತು ಅವನಿಗೆ ಕರ್ಮಫಲದ ಆಶೆಯೂ ಇಲ್ಲ" ಎಂದು ಯಾವನು ತಿಳಿದುಕೊಳ್ಳುವನೋ ಅವನಿಗೂ ಸಹ ಕರ್ಮಬಂಧನವಿಲ್ಲ. **'ತಮಪಿ ಕರ್ಮಾಣಿ ನ ಲಿಮ್ಪನ್ತಿ'** ತಿಳಿದುಕೊಂಡ ಮಾತ್ರಕ್ಕೇ ಅವನನ್ನು ಕರ್ಮಗಳು ಬಂಧಿಸುವುದಿಲ್ಲವೇ? ಶ್ರೀಕೃಷ್ಣನ ಈ ಮಹಾಗುಣವನ್ನು ಕುರಿತು ನಾವು ಯಾವಾಗಲೂ ಮನಸ್ಸಿನಲ್ಲಿ ಆಲೋಚಿಸುತ್ತಿದ್ದರೆ ನಮಗೂ ಆ ಗುಣಗಳೇ ಬರುತ್ತವೆ. ನಾವು ಹೇಗೆ ಆಲೋಚಿಸುತ್ತೇವೆಯೋ ಹಾಗೆಯೇ ಆಗುವೆವು. ಇದೊಂದು ಮನಃಶಾಸ್ತ್ರದ ರಹಸ್ಯ.

**ಅಭಿಜಾನಾತಿ**–ಚೆನ್ನಾಗಿ ತಿಳಿಯುವನೋ ; ಈ ವಿಷಯವನ್ನು ಹೃದ್ಗತಮಾಡಿಕೊಳ್ಳುವನೋ ಅಂತಹವನು ಕರ್ಮಗಳಿಂದ ಬಂಧಿತನಾಗುವುದಿಲ್ಲ.

ಕರ್ಮಗಳು ನನ್ನನ್ನು ಬಂಧಿಸುವುದಿಲ್ಲ. ದೇವ-ಮನುಷ್ಯಾದಿ ವೈಚಿತ್ರ್ಯಗಳು ಪುಣ್ಯ-ಪಾಪರೂಪವಾದ ಕರ್ಮವಿಶೇಷದಿಂದ ಉಂಟಾಗ ತಕ್ಕುವುಗಳು. ಫಲಸಂಗವೇ ಮುಂತಾದುವುಗಳಿಂದ ಉಂಟಾಗುವ ಸೃಷ್ಟಿಯೇ

ಮುಂತಾದ ಕರ್ಮಫಲದಲ್ಲಿ ಅವುಗಳಿಗೆ ಆಸೆಯೇ ಹೊರತು ಭಗವಂತನಿಗೆ ಇಲ್ಲ. ಆ ವೈಚಿತ್ರ್ಯಕ್ಕೆ ಕಾರಣವಾದರೋ ಚೇತನದ ಪ್ರಾಚೀನಕರ್ಮಶಕ್ತಿಗಳು. ಸೃಷ್ಟ್ಯಾದಿ ಕರ್ಮಫಲಸಂಗರಹಿತನಾದುದರಿಂದ ನಾನು ವಿವಿಧ ಸೃಷ್ಟಿಗೆ ಕರ್ತೃವಾಗಿದ್ದರೂ ಅಕರ್ತೃ. ನನ್ನ ಸ್ವರೂಪವನ್ನರಿತವನು ಕರ್ಮಯೋಗಾರಂಭಕ್ಕೆ ವಿರೋಧಿಗಳಾದ ಫಲಸಂಗಾದಿಗಳಿಗೆ ಕಾರಣವಾದ ಪ್ರಾಚೀನಕರ್ಮಗಳ ಬಂಧನಕ್ಕೆ ಒಳಗಾಗುವುದಿಲ್ಲ. ಮುಕ್ತಿಹೊಂದುತ್ತಾನೆ. **ನ ಮೇ ಕರ್ಮಫಲೇ ಸ್ಪೃಹಾ** (ರಾ.ಭಾ.)

ಭಗವಂತನಿಗೆ ಇಚ್ಛೆಯೇ ಇಲ್ಲ–ಎಂದು ಅರ್ಥವಲ್ಲ. ಇಚ್ಛಾಮಾತ್ರವು ಇದ್ದರೂ ಲೋಕದಂತೆ ಅವನಿಗೆ ಅಭಿನಿವೇಶ (ಆಗ್ರಹ) ವಿಲ್ಲ. ಅವನ ಕಾಮವು ಜ್ಞಾನದಂತೆ.

**ನ ಹ್ಯಾಗ್ರಹಃ ತಸ್ಯ ವಿಷ್ಣೋಃ ಜ್ಞಾನಂ ಕಾಮೋ ಹಿ ತಸ್ಯ ತು.**

(ಮ.ಭಾ.)

**ಓಂ ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।**
**ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಮ್ ॥**

ಹೀಗೆ ತಿಳಿದುಕೊಂಡು ಹಿಂದಿನ ಕಾಲದ ಮುಮುಕ್ಷುಗಳೂ ಕರ್ಮವನ್ನು ಮಾಡುತ್ತಿದ್ದರು. ಆದುದರಿಂದ ನೀನೂ ಹಿಂದಿನವರು ಮಾಡಿದ ಬಹಳ ಹಿಂದಿನದಾದ (ಸನಾತನವಾದ) ಕರ್ಮವನ್ನೇ ಮಾಡು.

* * *

(ಕರ್ಮವನ್ನು ಮಾಡಬೇಕು ; 'ನಾನು ಮಾಡಿದೆನು' ಎಂಬ ಅಹಂಭಾವನೆಯನ್ನು ಬಿಟ್ಟು ಮಾಡಬೇಕು. ಫಲಾಪೇಕ್ಷೆಯಿಂದ ಕರ್ಮಮಾಡ ಬಾರದು. ಇದೇ ಕರ್ಮಮಾಡುವುದರ ರಹಸ್ಯ. ಕರ್ಮದ ಈ ರಹಸ್ಯವನ್ನೇ ತಿಳಿದುಕೊಂಡು ಹಿಂದಿದ್ದ ಮುಮುಕ್ಷುಗಳೂ (ಮೋಕ್ಷಾಭಿಲಾಷಿಗಳೂ) ಕರ್ಮಮಾಡಿದರು. ವಿವಸ್ವಂತ, ಮನು, ಇಕ್ಷ್ವಾಕು, ಜನಕ–ಇವರೂ ಸಹ ಹೀಗೆಯೇ ನಿಷ್ಕಾಮಕರ್ಮವನ್ನು ಮಾಡಿ ಮೋಕ್ಷವನ್ನು ಪಡೆದರು.

ಹಿಂದಿನವರಿಂದ ಬಹಳ ಹಿಂದೆಯೇ ಮಾಡಲ್ಪಟ್ಟ ಈ ನಿಷ್ಕಾಮಕರ್ಮ ವನ್ನೇ ನೀನೂ ಮಾಡಿಯೇ ತೀರಬೇಕು. ಆತ್ಮವನ್ನು ಅರಿಯದವನಾಗಿದ್ದರೆ ಚಿತ್ತಶುದ್ಧಿಗೆ ಕರ್ಮಮಾಡು. ತತ್ತ್ವವನ್ನು ಅರಿತವನಾಗಿದ್ದರೆ ಜನಕಾದಿ

ಗಳು ಮಾಡಿದಂತೆ ಲೋಕಕಲ್ಯಾಣಕ್ಕಾದರೂ ನಾನು ಹೇಳಿದ ರೀತಿಯಲ್ಲಿ ನಾನು ಮಾಡುತ್ತಿರುವ ರೀತಿಯಲ್ಲಿ ಕರ್ಮಮಾಡು.

ಶ್ರೀಕೃಷ್ಣನು ಹಿಂದೆ ಉಪಪತ್ತಿಪೂರ್ವಕವಾಗಿ ಹೇಳಿದುದಕ್ಕೆ ಹಿಂದಿನ ಕಾಲದ ಮಹಾತ್ಮರ ಸಿದ್ಧವಾದ ಆಚಾರವೂ ಉಂಟು–ಎಂದು ಹೇಳಿ ವಿಷಯವನ್ನು ದೃಢಪಡಿಸುತ್ತಾನೆ.

**ಏವಂ ಜ್ಞಾತ್ವಾ ಕರ್ಮಕರಣೇ ಆಚಾರೋಽಪ್ಯಸ್ತಿ** (ಮ.ಭಾ.)

ಶ್ರೀಕೃಷ್ಣನು ತನ್ನ ಉದಾಹರಣೆಯನ್ನು ಕೊಟ್ಟುದಲ್ಲದೇ ಅದು ಅನು ಷ್ಠಾನದಲ್ಲೂ ಸಾಧ್ಯ–ಎಂಬುದನ್ನು ತೋರಿಸಲು ಪುರಾತನಪುಣ್ಯಪುರುಷರ ನಿದರ್ಶನವನ್ನೂ ಹೇಳಿದ್ದಾನೆ.)

**ಓಂ ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ ।**
**ತತ್ತೇ ಕರ್ಮಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥**

ಕರ್ಮವು ಯಾವುದು? ಅಕರ್ಮವು ಯಾವುದು?–ಎಂಬುದರಲ್ಲಿ ಕವಿಗಳೂ ಸಹ ವಿಮೋಹಿತರಾಗಿರುತ್ತಾರೆ. ಆದುದರಿಂದ ನಿನಗೆ ಕರ್ಮದ ರಹಸ್ಯವನ್ನು ಹೇಳುವೆನು. ಇದನ್ನು ತಿಳಿದುಕೊಂಡರೆ ನೀನು ಅಶುಭದಿಂದ ಬಿಡುಗಡೆಯನ್ನು ಹೊಂದುವೆ.

* * *

(ಕರ್ಮವು ಯಾವುದು? ಅಕರ್ಮವು ಯಾವುದು?–ಎಂಬುದನ್ನು ನಿಶ್ಚಯಿಸುವಾಗ ವಿದ್ವಾಂಸರೂ ಭ್ರಾಂತರಾಗುತ್ತಾರೆ. ಕರ್ಮ ಎಂದರೆ ಕರ್ತವ್ಯ: ವಿಹಿತವಾದ ಕರ್ಮ ; ಸರಿಯಾದ ಕೆಲಸ. ಯಾವುದು ಮಾಡ ತಕ್ಕದ್ದೋ ಅದು. ಅಕರ್ಮ ಎಂಬುದಕ್ಕೆ ಮೂರು ವಿಧವಾಗಿ ಅರ್ಥಮಾಡ ಬಹುದು.

೧) ವಿಹಿತಕರ್ಮವನ್ನೂ ಸಹ ಮಾಡದೇ ಬಿಟ್ಟಿರುವುದು. ಯಾವು ದನ್ನೂ ಮಾಡದಿರುವುದು.

೨) ವಿಹಿತಕರ್ಮವನ್ನು ಮಾಡಿ ಅದರ ಫಲವನ್ನು ಅಂಟಿಸಿಕೊಳ್ಳ ದಿರುವುದು. ಮಾಡಿದರೂ ಮಾಡದವನಂತೆ ನಿಶ್ಚಿಂತನಾಗಿರುವುದು.

ಇ) ಮಾಡಬಾರದ ಕರ್ಮ ; ಅಕಾರ್ಯ–ಎಂಬ ಅರ್ಥವೂ ಆಗುತ್ತದೆ ; ಈ ಅರ್ಥಗಳನ್ನು ಸಂದರ್ಭಾನುಸಾರವಾಗಿ ಮಾಡಬೇಕಾಗುತ್ತದೆ.

ಈ ಶ್ಲೋಕದಲ್ಲಿ ಕೆಲಸಮಾಡದೇ ಸುಮ್ಮನೇ ಇರುವಿಕೆ ಎಂಬ ಅರ್ಥವು ಹೊಂದಿಕೆಯಾಗುತ್ತದೆ–ಎಂಬುದು ನಮ್ಮ ಅಭಿಪ್ರಾಯ.

ಪಂಡಿತರಿಗೂ ಭ್ರಾಂತಿಯನ್ನುಂಟುಮಾಡತಕ್ಕ ಕರ್ಮ-ಅಕರ್ಮಗಳ ರಹಸ್ಯವನ್ನು ನಿನಗೆ ಹೇಳುತ್ತೇನೆ–ಎನ್ನುತ್ತಾನೆ ಶ್ರೀಕೃಷ್ಣ. ಇದನ್ನು ತಿಳಿದುಕೊಂಡರೆ ಪ್ರಯೋಜನವೇನು? ಅಶುಭದಿಂದ ಪಾರಾಗುವಿಕೆ. ಅಶುಭ ಎಂದರೆ ಕರ್ಮಬಂಧನ. ಕರ್ಮದ ರಹಸ್ಯವನ್ನು, ಕರ್ಮವನ್ನು ಹೇಗೆ ಮಾಡಬೇಕೆಂಬುದನ್ನು ತಿಳಿದರೆ ಕರ್ಮಬಂಧನದಿಂದ ಪಾರಾಗುವೆ.

ಒಂದು ರೀತಿಯ ಕರ್ಮಮಾಡಿದರೆ ನಾವು ಕರ್ಮಬಂಧನಕ್ಕೆ ಸಿಕ್ಕಿಕೊಳ್ಳುತ್ತೇವೆ. ಮತ್ತೊಂದು ರೀತಿಯ ಕರ್ಮಮಾಡಿದರೆ ನಾವು ಕರ್ಮಬಂಧನದಿಂದ ಬಿಡಿಸಿಕೊಳ್ಳುತ್ತೇವೆ. ರೇಷ್ಮೆಹುಳುವು ತನ್ನ ಸುತ್ತಲೂ ಗೂಡುಕಟ್ಟಿಕೊಳ್ಳುವುದರಿಂದ ಬಂಧನಕ್ಕೆ ತಾನೇ ಸಿಕ್ಕಿಕೊಳ್ಳುತ್ತದೆ. ಹೊರಕ್ಕೆ ಬರಬೇಕಾದರೆ ಗೂಡನ್ನು ಭೇದಿಸಿಕೊಂಡು ಬರುತ್ತದೆ. ಒಂದು ಕರ್ಮದಿಂದ ಬಂಧನವಾಯಿತು. ಮತ್ತೊಂದು ಕರ್ಮದಿಂದ ಬಿಡುಗಡೆಯಾಯಿತು. ಆದುದರಿಂದ ಯಾವ ರೀತಿಯಲ್ಲಿ ಕುಶಲತೆಯಿಂದ ಕರ್ಮಮಾಡಿದರೆ ಬಂಧನಮೋಕ್ಷವಾಗುತ್ತದೆಂಬುದನ್ನು ಹೇಳುತ್ತೇನೆ–ಎಂದು ಭಗವಂತನು ಹೇಳುತ್ತಾನೆ.

ಶ್ರೀರಾಮಾನುಜರು ಅಕರ್ಮ ಎಂಬುದಕ್ಕೆ ಹೀಗೆ ವ್ಯಾಖ್ಯೆಮಾಡಿರುತ್ತಾರೆ.

**ಅಕರ್ಮೇತಿ ಕರ್ತುಃ ಆತ್ಮನೋ ಯಾಥಾತ್ಮ್ಯಜ್ಞಾನಮುಚ್ಯತೇ ।**

ಅಕರ್ಮವೆಂದರೆ ಕರ್ಮವಲ್ಲದ್ದು–ಜ್ಞಾನ. ಯಾವ ಜ್ಞಾನವೆಂದರೆ ಆತ್ಮಯಾಥಾತ್ಮ್ಯಜ್ಞಾನ.

ಅಕರ್ಮ ಎಂಬುದಕ್ಕೆ ದೇಹಾದಿಚೇಷ್ಟೆಗಳನ್ನು ಮಾಡದೆ ಸುಮ್ಮನಿರುವಿಕೆ. (ಶಂ.ಭಾ.)

ಶ್ರೀರಾಮಾನುಜರ ಅಭಿಪ್ರಾಯದಲ್ಲಿ ಅಕರ್ಮ ಎಂದರೆ ಆತ್ಮಜ್ಞಾನ. ಅದೇ ಇಲ್ಲಿ ಪ್ರಸ್ತುತವಾದುದು.

ಅಕರ್ಮಶಬ್ದೇನ ಅತ್ರ ಕರ್ಮೇತರತ್ ಪ್ರಸ್ತುತಂ ಆತ್ಮಜ್ಞಾನಂ ಉಚ್ಯತೇ. (ರಾ.ಭಾ.)

ಶ್ರೀಮಧ್ವಾಚಾರ್ಯರು **ಕರ್ಮಾಕರಣಂ** ಕೆಲಸಮಾಡದೇ ಇರುವಿಕೆ ಎಂದು ಅರ್ಥಮಾಡಿರುತ್ತಾರೆ.)

**ಓಂ ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ।**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥೧೭॥**

ಕರ್ಮದ ವಿಷಯದಲ್ಲಿಯೂ ತಿಳಿದುಕೊಳ್ಳತಕ್ಕದ್ದಿದೆ. ವಿಕರ್ಮದ (ನಿಷಿದ್ಧಕರ್ಮದ) ವಿಷಯದಲ್ಲಿಯೂ ತಿಳಿದುಕೊಳ್ಳತಕ್ಕದ್ದಿದೆ. ಅಕರ್ಮದ ವಿಷಯದಲ್ಲಿಯೂ ತಿಳಿದುಕೊಳ್ಳತಕ್ಕದ್ದಿದೆ. ಕರ್ಮದ ಗತಿಯು ಗಹನ ವಾದುದು.

* * *

(ಕರ್ಮ ಎಂದರೆ ಶಾಸ್ತ್ರವು ವಿಧಿಸಿರುವ ಕರ್ಮಗಳು. ನಿತ್ಯ-ನೈಮಿತ್ತಿಕ ಕಾಮ್ಯಕರ್ಮಗಳು. ಗರ್ಭಾಧಾನಾದಿ ಷೋಡಶಕರ್ಮಗಳು. ನಾಲ್ಕು ವರ್ಣ ದವರಿಗೂ ಪ್ರತ್ಯೇಕ-ಪ್ರತ್ಯೇಕವಾಗಿ ಹೇಳಿರುವ ಕರ್ಮಗಳು. ಬ್ರಾಹ್ಮಣರು ಷಟ್ಕರ್ಮಿಗಳು. ಯಜನ-ಯಾಜನ ; ಅಧ್ಯಯನ-ಅಧ್ಯಾಪನ ; ದಾನ-ಪ್ರತಿಗ್ರಹ. ಕ್ಷತ್ರಿಯ-ವೈಶ್ಯರು ತ್ರಿಕರ್ಮಿಗಳು. ಯಜನ, ಅಧ್ಯಯನ, ದಾನ.

ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸಾಶ್ರಮದವರಿಗೆ ವಿಧಿಸಿರುವ ಕರ್ಮಗಳು. ಇವುಗಳೆಲ್ಲವನ್ನೂ ತಿಳಿದುಕೊಳ್ಳಬೇಕು.

**ವಿಕರ್ಮ :** ನಿಷಿದ್ಧಕರ್ಮ, ಮಾಡಬಾರದ ಕರ್ಮಗಳು. ಬ್ರಾಹ್ಮಣ ನಾದವನಿಗೆ ಕೆಲವು ಕರ್ಮಗಳು ನಿಷಿದ್ಧವಾಗಿವೆ. ಕ್ಷತ್ರಿಯನಾದವನಿಗೆ ಕೆಲವು ಕರ್ಮಗಳು ನಿಷಿದ್ಧವಾಗಿವೆ. ಬ್ರಾಹ್ಮಣನು ಭಿಕ್ಷಾಟನೆಮಾಡಬೇಕು. ಕ್ಷತ್ರಿಯನು ಮಾಡಬಾರದು. ಗೃಹಸ್ಥನು ಕಾಮಿನೀ-ಕಾಂಚನಗಳನ್ನು ಹೊಂದಿರಬಹುದು. ಸಂನ್ಯಾಸಿಗೆ ಇದು ನಿಷಿದ್ಧ. ಗೃಹಸ್ಥನು ತಾಂಬೂಲಚರ್ವಣವನ್ನು ಮಾಡಬಹುದು. ಬ್ರಹ್ಮಚಾರಿ-ಸಂನ್ಯಾಸಿಗಳಿಗೆ ಇದು ನಿಷಿದ್ಧ. ಹೀಗೆ ಒಬ್ಬನಿಗೆ ವಿಧಿಯಾದದ್ದು ಮತ್ತೊಬ್ಬನಿಗೆ ನಿಷಿದ್ಧವಾಗಿರುತ್ತದೆ. ಇಂತಹ ನಿಷಿದ್ಧಕರ್ಮಗಳನ್ನೂ ತಿಳಿದುಕೊಳ್ಳಬೇಕು. **ಅಕರ್ಮ :** ಕರ್ಮಮಾಡ

ದೆಯೇ ಇರುವುದು ; ಕರ್ಮಮಾಡಿಯೂ ಮಾಡದಂತಿರುವುದು ; ಕರ್ಮ ಮಾಡದೆಯೇ ಕರ್ಮಮಾಡಿದಂತಿರುವುದು. ಈ ಮೂರನ್ನೂ ತಿಳಿದುಕೊಳ್ಳ ಬೇಕು.

**ಕರ್ಮ**=ಮೋಕ್ಷಸಾಧನಭೂತವಾದ ಕರ್ಮಸ್ವರೂಪ. **ಅಕರ್ಮ**= ಜ್ಞಾನ. **ವಿಕರ್ಮ**=ವಿವಿಧತೆಯನ್ನು ಹೊಂದಿರುವ ಕರ್ಮ-ನಿತ್ಯ-ನೈಮಿತ್ತಿಕ-ಕಾಮ್ಯಗಳು. ಅವುಗಳಿಗೆ ಸಾಧನವಾದ ದ್ರವ್ಯಾರ್ಜನೆ ಮುಂತಾದ ನಾನಾಕಾರಗಳನ್ನು ಹೊಂದಿರುವ ಕರ್ಮ. (ರಾ.ಭಾ.)

**ಕವಯೋಽಪ್ಯತ್ರ ಮೋಹಿತಾಃ ।**

ಈ ವಿಷಯದಲ್ಲಿ ಪಂಡಿತರೂ ಮೋಹಗೊಂಡಿದ್ದಾರೆ. ಇಲ್ಲಿ ಶಾಪ ಮುಂತಾದ ಕಾರಣಗಳಿಂದ ಅವರಿಗೆ ಮೋಹವುಂಟಾಗಿಲ್ಲ. ಕರ್ಮಾಕರ್ಮ ಗಳ ಸ್ವರೂಪವನ್ನು ತಿಳಿಯುವುದು ಸ್ವಾಭಾವಿಕವಾಗಿಯೇ ಅಸಾಧ್ಯ ಎಂಬ ಅಭಿಪ್ರಾಯದಿಂದ **ಗಹನಾ ಕರ್ಮಣೋ ಗತಿಃ** ಎಂದು ಹೇಳಿದ್ದಾರೆ.

**ನ ಚ ಶಾಪಾದಿನಾ ಕವಯೋಽಪ್ಯತ್ರ ಮೋಹಿತಾಃ ಅಶಕ್ಯಂ ಚೈತತ್ ಜ್ಞಾನಂ ಇತ್ಯಾಹ ಗಹನಾ ಇತಿ.** (ಮ.ಭಾ.)

ಕರ್ಮ, ವಿಕರ್ಮ, ಅಕರ್ಮಗಳನ್ನು ಹೀಗೂ ವಿಂಗಡಿಸಬಹುದಾಗಿದೆ.

ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಸುಖಪ್ರಾಪ್ತಿಯು ಯಾವ ಕ್ರಿಯೆಯಿಂದ ಆಗುವುದೋ ಅದಕ್ಕೆ ಕರ್ಮ ಎಂದು ಹೆಸರು. ಈ ಲೋಕದಲ್ಲಿಯೂ ಮತ್ತು ಪರಲೋಕದಲ್ಲಿಯೂ ಯಾವ ಕ್ರಿಯೆಯಿಂದ ದುಃಖವು ಪ್ರಾಪ್ತವಾಗುವುದೋ ಅದಕ್ಕೆ ವಿಕರ್ಮವೆಂದು ಹೆಸರು. ಯಾವ ಒಂದು ಕ್ರಿಯೆಯಿಂದ ಇಹಲೋಕ-ಪರಲೋಕಗಳಲ್ಲಿ ಪ್ರಾಪ್ತವಾಗಬಹುದಾದ ಸುಖ-ದುಃಖಗಳೆರಡೂ ಲಭಿಸುವುದಿಲ್ಲವೋ ಅಂತಹ ಕ್ರಿಯೆಗೆ ಅಥವಾ ಕರ್ಮಕ್ಕೆ ಅಕರ್ಮ ಎಂದು ಹೆಸರು.

ಮತ್ತೊಂದು ಅಭಿಪ್ರಾಯದ ಪ್ರಕಾರ : ಮನಸ್ಸು, ಮಾತು ಮತ್ತು ಶರೀರಗಳಿಂದ (ತ್ರಿಕರಣಗಳಿಂದ) ಕೂಡಿ ಮಾಡುವ ವಿಧಿವಿಹಿತವಾದ ಕಾರ್ಯಕ್ಕೆ ಕರ್ಮವೆಂದು ಹೆಸರು. ಈ ಕರ್ಮವು ಕೇವಲ ಭಾವನೆಯಿಂದ ವಿಕರ್ಮವೂ, ಅಕರ್ಮವೂ ಆಗುತ್ತದೆ.

ಫಲಾಪೇಕ್ಷೆಯಿಂದ ಶುದ್ಧಭಾವನೆಯಿಂದ ಕೂಡಿ ವಿಧಿವಿಹಿತವಾದ ಯಜ್ಞ, ದಾನ, ತಪಸ್ಸು–ಇತ್ಯಾದಿ ಕ್ರಿಯೆಗಳನ್ನು ಮಾಡುವುದಕ್ಕೆ ಕರ್ಮ ಎಂದು ಹೆಸರು.

ಫಲದ ಇಚ್ಛೆಯಿಂದ ದುಷ್ಟಭಾವನೆಯನ್ನಿಟ್ಟುಕೊಂಡು, ಇತರರಿಗೆ ತೊಂದರೆಮಾಡುವ ಸಲುವಾಗಿ ಯಜ್ಞ-ದಾನ-ತಪಃಕ್ರಿಯೆಗಳನ್ನು ಮಾಡು ವುದು ವಿಕರ್ಮವೆನಿಸಿಕೊಳ್ಳುತ್ತದೆ.

ಇವೇ ಯಜ್ಞ-ದಾನ-ತಪಃಕ್ರಿಯೆಗಳನ್ನೇ ಫಲಾಸಕ್ತಿಯಿಲ್ಲದೇ ಈಶ್ವ ರಾರ್ಪಣಬುದ್ಧಿಯಿಂದ ಮಾಡಿದರೆ ಅದು ಅಕರ್ಮವೆನಿಸಿಕೊಳ್ಳುತ್ತದೆ.

ಸಾಧಾರಣವಾಗಿ ಮನಸ್ಸು, ಮಾತು, ಶರೀರ–ಇವುಗಳಿಂದ ಕೂಡಿ ಮಾಡುವ ಹಿಂಸೆ, ಅಸತ್ಯ, ಚೌರ್ಯ–ಇವೇ ಮುಂತಾದ ನಿಷಿದ್ಧಕರ್ಮಗಳಿಗೆ ವಿಕರ್ಮ ಎಂದು ಹೇಳುತ್ತಾರೆ. ಆದರೆ ಆ ವಿಕರ್ಮವೂ ಕರ್ತೃವಿನ ಭಾವನೆ ಯಿಂದ ಕರ್ಮ ಮತ್ತು ಅಕರ್ಮಗಳ ರೂಪವನ್ನು ಹೊಂದುತ್ತದೆ. ರುಗ್ಣಾಲಯ (ಆಸ್ಪತ್ರೆ)ದಲ್ಲಿ ಒಬ್ಬ ಪರಿಣತನಾದ ವೈದ್ಯನಿರುತ್ತಾನೆ. ರೋಗಿಗೆ ಹೊಟ್ಟೆಯ ನೋವಿರುತ್ತದೆ. ಶಸ್ತ್ರಚಿಕಿತ್ಸೆಯನ್ನೇ ಮಾಡಬೇಕಾಗುತ್ತದೆ. ಶಸ್ತ್ರಚಿಕಿತ್ಸೆಯೇನೋ ಹಿಂಸೆ ಎನಿಸಿಕೊಳ್ಳುತ್ತದೆ. ಆದರೂ ಸಹ ರೋಗಿಗೆ ಅದರಿಂದ ಹೊಟ್ಟೆಯ ನೋವು ಹೋಗುವುದರಿಂದ ಹಿಂಸೆಯನ್ನು ಮಾಡಿದರೂ ಅದು ಕರ್ಮವೆನಿಸಿಕೊಳ್ಳುತ್ತದೆ. ಅದೇ ವೈದ್ಯನು ಅದೇ ಶಸ್ತ್ರಚಿಕಿತ್ಸೆಯನ್ನು ಲಂಚತೆಗೆದುಕೊಂಡು ಮಾಡಿದರೆ ಅದನ್ನು ವಿಕರ್ಮವೆನ್ನಬಹುದು. ತನ್ನ ಕರ್ತವ್ಯವಲ್ಲದಿದ್ದರೂ ಸಹ ನಿಷ್ಕಾಮನಾಗಿ ಅದೇ ವೈದ್ಯನು ಬಡವನೊಬ್ಬನ ಮನೆಗೆ ಹೋಗಿ ಹೊಟ್ಟೆನೋವಿನಿಂದ ನರಳುತ್ತಿರುವ ರೋಗಿಗೆ ಚಿಕಿತ್ಸೆಯನ್ನು ಮಾಡಿ ಅವನನ್ನು ಸಂಕಟದಿಂದ ಪಾರುಮಾಡಿದರೆ ಅದನ್ನು ಅಕರ್ಮವೆಂದು ಹೇಳಬಹುದು.

ಮನಸ್ಸು, ಮಾತು, ಶರೀರ–ಇವುಗಳ ಕ್ರಿಯೆಗಳಿಲ್ಲದಿರುವುದೇ ಅಕರ್ಮ. ಇಲ್ಲಿಯೂ ಸಹ ಭಾವನಾಮಾತ್ರದಿಂದಲೇ ಅಕರ್ಮವು ಕರ್ಮ ವಾಗಿಯೂ ವಿಕರ್ಮವಾಗಿಯೂ ಪರಿವರ್ತಿತವಾಗುತ್ತದೆ.

ಮನಸ್ಸು, ಮಾತು, ಶರೀರ–ಇವುಗಳ ಕರ್ಮಗಳೆಲ್ಲವನ್ನೂ ತ್ಯಾಗ ಮಾಡಿ ಒಬ್ಬ ಸಾಧಕನು ಏಕಾಂತದಲ್ಲಿ ಕುಳಿತಿರುತ್ತಾನೆ. ಅವನಿಗೆ ಮನಸ್ಸಿನಲ್ಲಿಯೇ–'ನಾನು ಎಲ್ಲವನ್ನೂ ತ್ಯಾಗಮಾಡಿಬಿಟ್ಟಿದ್ದೇನೆ'–ಎಂಬ ಭಾವನೆಯುಂಟಾಗುತ್ತದೆ. ಅವನು ಯಾವ ಕರ್ಮವನ್ನು ಮಾಡದಿದ್ದರೂ ಸಹ ತ್ಯಾಗದ ಅಭಿಮಾನವಿರುವ ಕಾರಣದಿಂದ ಅದು ತ್ಯಾಗರೂಪವಾದ ಕರ್ಮವೆನಿಸಿಕೊಳ್ಳುತ್ತದೆ.

ಶಾಸ್ತ್ರೋಕ್ತವಾದ ಕರ್ಮಗಳನ್ನು ಅಲಸಿಕೆಯಿಂದ ಬಿಟ್ಟುಬಿಡುವುದು, ಜನರನ್ನು ಮೋಸಗೊಳಿಸುವ ಸಲುವಾಗಿ ಕರ್ಮರಹಿತನಾದ ಸಂನ್ಯಾಸಿಯಂತೆ ತೋರ್ಪಡಿಸಿಕೊಳ್ಳುವುದು–ಇತ್ಯಾದಿಗಳು ಅಕರ್ಮದಲ್ಲಿ ವಿಕರ್ಮವೆನಿಸಿಕೊಳ್ಳುತ್ತವೆ.

ಮಾನಾಭಿಮಾನಗಳನ್ನು ಸಂಪೂರ್ಣವಾಗಿ ತೊರೆದು ಹೃದಯಾಂತರಾಳದಲ್ಲಿರುವ ಪರಮಾತ್ಮನಲ್ಲಿಯೇ ಸ್ಥಿರಮನಸ್ಕನಾಗಿ ಸಮಾಧಿಸ್ಥಿತಿಯಲ್ಲಿ ಅಕ್ರಿಯನಾಗಿರುವ ಸ್ಥಿತಪ್ರಜ್ಞನಿಗೆ ಅಕರ್ಮನೆನ್ನಬಹುದು. ಇದೇ ನಿಜವಾದ ಅಕರ್ಮವೆನಿಸಿಕೊಳ್ಳುತ್ತದೆ.)

**ಓಂ ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ॥೧೮॥**

ಕರ್ಮದಲ್ಲಿ ಅಕರ್ಮವನ್ನೂ–ಅಕರ್ಮದಲ್ಲಿ ಕರ್ಮವನ್ನೂ ಯಾವನು ಕಂಡುಕೊಳ್ಳುವನೋ ಮನುಷ್ಯರಲ್ಲಿ ಅವನು ಬುದ್ಧಿವಂತನು. ಅವನು ಯುಕ್ತನು. ಎಲ್ಲ ಕರ್ಮಗಳನ್ನೂ ಮಾಡಿದವನು.

* * *

(ಕರ್ಮಗಳೆಲ್ಲವೂ ಮನಸ್ಸು, ಇಂದ್ರಿಯಗಳು ಮತ್ತು ದೇಹ–ಇವುಗಳಿಂದಲೇ ನಡೆಯುತ್ತವೆ. ದೇಹೇಂದ್ರಿಯಗಳನ್ನೇ ಆತ್ಮವೆಂದು ಭಾವಿಸಿರುವವರು (ದೇಹಾತ್ಮಬುದ್ಧಿಯುಳ್ಳವರು) ಇಂದ್ರಿಯಗಳು ಮಾಡಿದುದನ್ನು ತಾವೇ ಮಾಡಿದೆವೆಂಬ ಭ್ರಾಂತಿಯಿಂದ ಇಂದ್ರಿಯಗಳಿಂದಾದ ಕರ್ಮವನ್ನೇ ತಮ್ಮ ಆತ್ಮದ ಮೇಲೆ ಹಾಕಿಕೊಳ್ಳುತ್ತಾರೆ. ಆತ್ಮವು ಶರೀರವಲ್ಲ ; ಶರೀರವೇ ಬೇರೆ–ಆತ್ಮವೇ ಬೇರೆ. ಆತ್ಮವು ಏನನ್ನೂ ಮಾಡುವುದಿಲ್ಲ. ಆದುದರಿಂದ

ಪುಣ್ಯಕರ್ಮವಾಗಲೀ–ಪಾಪಕರ್ಮವಾಗಲೀ ನಡೆದಾಗ ಅದು ದೇಹಾದಿಗಳಿಗೆ ಸಂಬಂಧಪಟ್ಟಿದ್ದೆನ್ನಬೇಕು. ಚೈತನ್ಯಸ್ವರೂಪವಾದ ತನಗೆ (ಆತ್ಮನಿಗೆ) ಸಂಬಂಧ ಪಟ್ಟಿದ್ದಲ್ಲವೆಂದು ತಿಳಿದುಕೊಂಡರೆ ಕರ್ಮದಲ್ಲಿ ಅಕರ್ಮವನ್ನು ನೋಡಿ ದಂತಾಗುತ್ತದೆ.

ದೇಹೇಂದ್ರಿಯಗಳೆಲ್ಲವೂ ಸ್ತಬ್ಧವಾಗಿರುವಾಗ, ಮನುಷ್ಯನು ಯಾವ ಕಾರ್ಯವನ್ನೂ ಮಾಡದೇ ಕುಳಿತಿರುವನು ಎನ್ನುವಾಗ–ಆ ಮನುಷ್ಯನನ್ನು ಕರ್ಮರಹಿತನಾಗಿದ್ದಾನೆಂದು (ಅಕರ್ಮನಾಗಿದ್ದಾನೆಂದು) ಹೇಳುವುದಕ್ಕಾ ಗುವುದಿಲ್ಲ. ಸುಮ್ಮನೇ ಕುಳಿತುಕೊಳ್ಳುವುದೂ ಒಂದು ಕರ್ಮವೇ ಆಗುತ್ತದೆ. ಮೇಲಾಗಿ ಮನಸ್ಸು ಮತ್ತು ಇಂದ್ರಿಯಗಳು ವಾಸನಾಯುಕ್ತವಾಗಿರುವುದರಿಂದ ಯಾವ ಕ್ಷಣದಲ್ಲೇ ಆದರೂ ಮಾನಸಿಕವಾಗಿ ಕರ್ಮವು ನಡೆಯುತ್ತಲೇ ಇರುತ್ತದೆ. ಕರ್ಮಬೀಜವಾದರೂ ಇದ್ದೇ ಇರುತ್ತದೆ. ಅಕರ್ಮದಲ್ಲಿಯೂ ಕರ್ಮವು ನಡೆಯುತ್ತಿದೆಯೆಂಬುದನ್ನು ಬುದ್ಧಿವಂತನಾದವನು ಈ ರೀತಿಯಲ್ಲಿ ತಿಳಿದುಕೊಳ್ಳಬೇಕು. ಅಂತಹವನು ಮನುಷ್ಯರಲ್ಲಿಯೇ ಬುದ್ಧಿವಂತನೂ, ಯೋಗಯುಕ್ತನೂ, ಎಲ್ಲ ಕೆಲಸಗಳನ್ನೂ ಶ್ರದ್ಧೆಯಿಂದ ಮಾಡುವವನೂ ಆಗುತ್ತಾನೆ.

ಶ್ರೀಕೃಷ್ಣನು ೧೪ನೆಯ ಶ್ಲೋಕದಲ್ಲಿ ಹೇಳಿರುವಂತೆ 'ನ ಮಾಂ **ಕರ್ಮಾಣಿ** ಲಿಮ್ಪನ್ತಿ–ಕರ್ಮಮಾಡಿದರೂ ನನಗೆ ಕರ್ಮಗಳು ಅಂಟಿಕೊಳ್ಳು ವುದಿಲ್ಲ. ಕರ್ಮಫಲದಲ್ಲಿ ನನಗೆ ಆಸೆಯಿಲ್ಲ. ಕರ್ಮಮಾಡಿದರೂ 'ನಾನು' ಕರ್ಮಮಾಡಿದೆನೆಂದು ನಾನು ಭಾವಿಸುವುದಿಲ್ಲ'–ಈ ಭಾವನೆಯಿಂದ (ನಿಷ್ಕಾ ಮನೆಯಿಂದ) ಕರ್ಮಮಾಡಿದರೆ ಶ್ರೀಕೃಷ್ಣನ ನುಡಿಯಂತೆ ಕರ್ಮವೇ ಅಕರ್ಮವಾಗುತ್ತದೆ.

ಮೂರನೆಯ ಅಧ್ಯಾಯದ ೪ನೆಯ ಶ್ಲೋಕದಲ್ಲಿ ಶ್ರೀಕೃಷ್ಣನು ಹೇಳಿರು ವಂತೆ ಕರ್ಮವನ್ನು ಮಾಡದೇ ಇರುವುದರಿಂದಲೇ ಮನುಷ್ಯನು ನೈಷ್ಕರ್ಮ್ಯ ವನ್ನು (ಕರ್ಮಗಳಿಲ್ಲದಿರುವಿಕೆಯನ್ನು ) ಪಡೆಯುವುದಿಲ್ಲ. ವಿಧಿವಿಹಿತವಾದ ಕರ್ಮಗಳನ್ನು ಬಿಟ್ಟು ಕಾಡಿಗೆ ಹೋಗಿ ಮೌನಧರಿಸಿ ಕುಳಿತಿದ್ದರೂ ಸಹ ವಾಸನಾಮಯವಾದ ಇಂದ್ರಿಯಗಳೂ ಮತ್ತು ಮನಸ್ಸೂ ಪ್ರಾಪಂಚಿಕವ್ಯವ

ಹಾರದಲ್ಲಿ ತೊಡಗಿಯೇ ಇರುತ್ತವೆ. ಬುದ್ಧಿವಂತನಾದವನು ಅಕರ್ಮದಲ್ಲಿ ಕರ್ಮವಿದೆಯೆಂಬುದನ್ನು ಈ ರೀತಿಯಲ್ಲಿ ಮನಗಾಣಬೇಕು.

ಹಿಂದಿನ ಪ್ರಕರಣದಲ್ಲಿ ಹೇಳಿರುವಂತೆ ಸರ್ವಸಂಗಪರಿತ್ಯಾಗಮಾಡಿ ಮೌನಧರಿಸಿ ಕುಳಿತಿರುವ ಸಾಧುವು 'ನಾನು ಸರ್ವಸಂಗಪರಿತ್ಯಾಗಮಾಡಿದ್ದೇನೆ' ಎಂದು ಭಾವಿಸಿದರೂ ಅದೇ ಒಂದು ಕರ್ಮವಾಗುತ್ತದೆ.

ಅಷ್ಟಾವಕ್ರಗೀತೆಯಲ್ಲಿ ಇದನ್ನೇ ಹೀಗೆ ನಿರೂಪಿಸಿದ್ದಾರೆ :

**ನಿವೃತ್ತಿರಪಿ ಮೂಢಸ್ಯ ಪ್ರವೃತ್ತಿರುಪಜಾಯತೇ ।**
**ಪ್ರವೃತ್ತಿರಪಿ ಧೀರಸ್ಯ ನಿವೃತ್ತಿಫಲಭೋಗಿನೀ ॥**

ಮೂಢನ ನಿವೃತ್ತಿ ಎಂದರೆ : ಒತ್ತಾಯದಿಂದಾಗಲೀ–ಮೋಹದಿಂದಾಗಲೀ ಸಾಧಿಸಿದ ಕರ್ಮಪರಾಙ್ಮುಖತೆಯು ಪರಿಣಾಮದಲ್ಲಿ ಪ್ರವೃತ್ತಿಯೇ (ಕರ್ಮವೇ) ಆಗುತ್ತದೆ. ಜ್ಞಾನಿಯ ಪ್ರವೃತ್ತಿಯು ಎಂದರೆ : ನಿಷ್ಕಾಮ ಕರ್ಮವು, ಕರ್ಮತ್ಯಾಗವೆಂದರೆ ನಿವೃತ್ತಿಯ ಫಲವನ್ನು ಕೊಡುವುದು–ಎಂದಾಗುತ್ತದೆ.

ಡಾ॥ ಡಿ.ವಿ.ಜಿ. ಯವರು ಕರ್ಮ-ಅಕರ್ಮಗಳನ್ನು ಈ ಉಪಮೆಯಿಂದ ವಿವರಿಸಿದ್ದಾರೆ :

ಸಮಾರಂಭದಲ್ಲಿ ಅಡಿಗೆಯವನು ಅಡಿಗೆಮಾಡುತ್ತಾನೆ. ಅದು ಕರ್ಮ. ತಾನು ಮಾಡಿದ ಅಡಿಗೆಯನ್ನು ಊಟಮಾಡುವವರು ಯಾರೆಂಬ ಚಿಂತೆ ಅವನಿಗಿರುವುದಿಲ್ಲ. ಅದು ಅಕರ್ಮ. ಊಟಕ್ಕಾಗಿ ಬಂದವನು ಊಟಮಾಡುವುದು ಕರ್ಮ. ಅವನು ಅಡಿಗೆಮಾಡಿದವನ ವಿಷಯವಾಗಿ ವಿಚಾರಿಸದಿರುವುದು ಅಕರ್ಮ. ಹೀಗೆ ಕರ್ಮದಲ್ಲಿ ಅಕರ್ಮ. ಅಕರ್ಮದಲ್ಲಿ ಕರ್ಮ. ಶ್ರದ್ಧೆಯಿಂದ ದುಡಿಯುವುದು ; ಫಲದ ವಿಷಯದಲ್ಲಿ ಅಸಡ್ಡೆಯಿಂದಿರುವುದು ಇದು ತತ್ತ್ವ.

ಕರ್ಮದಲ್ಲಿ ಅಕರ್ಮವನ್ನು ನೋಡುವುದು, ಅಕರ್ಮದಲ್ಲಿ ಕರ್ಮವನ್ನು ನೋಡುವುದು. ಯಾವುದು ವಾಸ್ತವವಾಗಿ ಅಕರ್ಮವಾಗಿದೆಯೋ ಅದೇ ಮೂಢಬುದ್ಧಿಯುಳ್ಳವರಿಗೆ ಕರ್ಮದಂತೆ ತೋರಿಬರುತ್ತದೆ. ಹಾಗೆಯೇ ಅವರಿಗೆ ಕರ್ಮವು ಅಕರ್ಮದಂತೆ ಕಾಣುತ್ತದೆ. ಅವುಗಳಲ್ಲಿಯ ಅರ್ಥತತ್ತ್ವ

ವನ್ನು ನೋಡುವುದಕ್ಕೋಸ್ಕರ ಭಗವಂತನು **ಕರ್ಮಣಿ ಅಕರ್ಮ ಯಃ ಪಶ್ಯೇತ್** ಮುಂತಾದ ಮಾತುಗಳನ್ನು ಹೇಳಿದ್ದಾನೆ. ಕರ್ಮಗಳನ್ನು ಮಾಡುವುದು ಮತ್ತು ಅವುಗಳ ಫಲತ್ಯಾಗ–ಈ ಎರಡೂ ಕರ್ತೃವಿನ ವ್ಯಾಪಾರಕ್ಕೆ ಅಧೀನವಾದುದು. ಕರ್ತೃವಿನ ವ್ಯಾಪಾರವು ಯಾವುದರಲ್ಲಿದೆಯೋ ಅದು (ಪ್ರವೃತ್ತಿಯಾಗಲೀ ; ನಿವೃತ್ತಿಯಾಗಲೀ) ವಾಸ್ತವವಾಗಿ ಕರ್ಮವೇ ಆಗಿದೆ. ಆದುದರಿಂದ ಅಹಂಕಾರಪೂರ್ವಕವಾಗಿ ಮಾಡಲ್ಪಟ್ಟ ಕರ್ಮತ್ಯಾಗವೂ ಕೂಡ ವಾಸ್ತವವಾಗಿ ಕರ್ಮವೇ ಆಗುತ್ತದೆ–ಎಂದು ತಿಳಿಯುವುದೇ ಅಕರ್ಮದಲ್ಲಿ ಕರ್ಮವನ್ನು ನೋಡುವಿಕೆ. (ಶಂ.ಭಾ.)

ಕರ್ಮವನ್ನು ಆಚರಿಸುತ್ತಿರುವಾಗಲೇ ಯಾವನು ಅಕರ್ಮ (ಆತ್ಮಜ್ಞಾನ) ವನ್ನು ನೋಡುತ್ತಾನೆಯೋ, ಅಕರ್ಮ (ಆತ್ಮಜ್ಞಾನ) ದಲ್ಲಿದ್ದುಕೊಂಡೇ ಯಾವನು ಕರ್ಮವನ್ನು ನೋಡುತ್ತಾನೆಯೋ–ಅವನು ಬುದ್ಧಿವಂತ. ತಾನು ಮಾಡುತ್ತಿರುವ ಕರ್ಮವನ್ನು ಆತ್ಮಯಾಥಾತ್ಮ್ಯದ ಅನುಸಂಧಾನದ ಮೂಲಕ ಅವನು ಜ್ಞಾನಾಕಾರವಾಗಿ ನೋಡುತ್ತಾನೆ ಮತ್ತು ಆ ಜ್ಞಾನವು ಕರ್ಮದಲ್ಲಿ ಅಂತರ್ಗತವಾಗಿರುವುದರಿಂದ ಅದನ್ನು ಕರ್ಮಾಕಾರವಾಗಿ ನೋಡುತ್ತಾನೆ. (ರಾ.ಭಾ.)

ಕರ್ಮವನ್ನು ಆಚರಿಸುತ್ತಿರುವಾಗಲೇ ಅಕರ್ಮವನ್ನು ನೋಡುವುದು ಎಂದರೆ 'ಕರ್ಮವೆಲ್ಲವೂ ವಿಷ್ಣುವಿನದು, ಚಿತ್‌ಪ್ರತಿಬಿಂಬನಾದ ನಾನು ಏನನ್ನೂ ಮಾಡುತ್ತಿಲ್ಲ'–ಎಂಬ ಅನುಸಂಧಾನ. ಅಕರ್ಮದಲ್ಲಿ ಕರ್ಮವನ್ನು ನೋಡುವುದು ಎಂದರೆ : 'ನಿದ್ರೆ ಮುಂತಾದ ಅಕರ್ಮಾವಸ್ಥೆಯಲ್ಲಿಯೂ ಪರಮೇಶ್ವರನ ಕರ್ಮವು ಇದ್ದೇ ಇರುತ್ತದೆ. ಆ ಪರಮೇಶ್ವರನೇ ಸದಾ ಸೃಷ್ಟ್ಯಾದಿಕರ್ಮಗಳನ್ನು ಮಾಡುತ್ತಿದ್ದಾನೆ'–ಎಂದು ತಿಳಿಯುವುದು. (ಮ.ಭಾ.)

ಕೃತ್ಸ್ನಕರ್ಮಕೃತ್ ಎಲ್ಲ ಕರ್ಮಗಳನ್ನೂ ಮಾಡಿದವನು, ಎಲ್ಲ ಶಾಸ್ತ್ರಾರ್ಥವನ್ನೂ ಆಚರಿಸಿದವನು. (ರಾ.ಭಾ.)

ಎಲ್ಲ ಸಂಪೂರ್ಣಫಲವನ್ನೂ ಹೊಂದುವುದರಿಂದ ಅವನು ಕೃತ್ಸ್ನ **ಕರ್ಮಕೃತ್** ಆಗಿದ್ದಾನೆ.) (ಮ.ಭಾ.)

ಓಂ ಯಸ್ಯ ಸರ್ವೇ ಸಮಾರಮ್ಭಾಃ ಕಾಮಸಂಕಲ್ಪವರ್ಜಿತಾಃ ।
ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಣ್ಡಿತಂ ಬುಧಾಃ ॥೧೯॥

ಯಾವನ ಎಲ್ಲ ಸಮಾರಂಭಗಳೂ ಕಾಮ್ಯಸಂಕಲ್ಪಗಳಿಂದ ರಹಿತವಾಗಿರುವುವೋ ಜ್ಞಾನವೆಂಬ ಅಗ್ನಿಯಿಂದ ಕರ್ಮಗಳನ್ನು ಸುಟ್ಟುಹಾಕಿರುವ ಅವನನ್ನು ವಿದ್ವಾಂಸರು ಪಂಡಿತನೆಂದು ಕರೆಯುತ್ತಾರೆ.

* * *

(ಅವರವರ ವರ್ಣಾಶ್ರಮಧರ್ಮಾನುಸಾರವಾಗಿ ಮಾಡತಕ್ಕ ಯಜ್ಞ-ದಾನ-ತಪಸ್ಸು ಮತ್ತು ಶಾಸ್ತ್ರಸಮ್ಮತವಾದ ಎಲ್ಲ ಕರ್ಮಗಳಿಗೂ ಸಮಾರಂಭಗಳೆಂದು ಹೆಸರು.

ಕಾಮಸಂಕಲ್ಪವಿಲ್ಲದೇ ಪಂಡಿತನು ಈ ಕರ್ಮಗಳನ್ನು ಮಾಡುತ್ತಾನೆ. 'ಇಂತಹ ಕಾಮನೆಗಾಗಿ ಇಂತಹ ಕರ್ಮವನ್ನು ಮಾಡುತ್ತೇನೆ' ಎಂದು ಸಂಕಲ್ಪಮಾಡುವುದಿಲ್ಲ. ಪ್ರತಿಯೊಂದು ಕರ್ಮಕ್ಕೂ ಫಲವೊಂದಿದೆ–ಎಂಬುದು ನಿಜ. ಆದರೆ ಪಂಡಿತನಾದವನು ಕರ್ಮವನ್ನು ಅಕರ್ಮಗೊಳಿಸಿ (ಕರ್ಮಫಲಕ್ಕೆ ಅಂಟಿಕೊಳ್ಳದೇ ಕರ್ಮಮಾಡಿ) ಜ್ಞಾನವೆಂಬ ಅಗ್ನಿಯಿಂದ ಕರ್ಮವನ್ನೇ ಸುಟ್ಟುಬಿಟ್ಟಿರುತ್ತಾನೆ. ಕರ್ಮವನ್ನೇ ಸುಟ್ಟುಬಿಟ್ಟರೆ ಕರ್ಮದ ಫಲವು ಹೇಗೆ ತಾನೇ ಮೊಳೆಯುತ್ತದೆ? ಕರ್ಮಯೋಗಿಯು ಎಲ್ಲ ಕರ್ಮಗಳನ್ನೂ ಮಾಡುತ್ತಾನೆ. ಆದರೆ ಅವನು ಕಾಮಸಂಕಲ್ಪನಾಗಿರುವುದಿಲ್ಲ. ಎಲ್ಲ ಕರ್ಮಗಳನ್ನೂ ಈಶ್ವರಪ್ರೀತ್ಯರ್ಥವಾಗಿ ಮಾಡುತ್ತಾನೆ. ಲೋಕಕಲ್ಯಾಣಕ್ಕಾಗಿ ಕರ್ಮಮಾಡಬೇಕೆಂಬುದೊಂದೇ ಅವನ ಧ್ಯೇಯವಾಗಿರುತ್ತದೆ. 'ನಾನು ಈ ಕರ್ಮವನ್ನು ಮಾಡಿದೆನು' ಎಂಬ ಅಹಂಕಾರವೇ ಅವನಿಗಿರುವುದಿಲ್ಲ. ವಿದ್ವಾಂಸರು ಇಂತಹ ಕರ್ಮಯೋಗಿಯನ್ನು ಪಂಡಿತ (ಆತ್ಮಜ್ಞಾನೀ) ಎಂದು ಹೇಳುತ್ತಾರೆ.

ಕಾಮಗಳಿಂದಲೂ ಮತ್ತು ಅವುಗಳಿಗೆ ಕಾರಣಗಳಾದ ಸಂಕಲ್ಪಗಳಿಂದಲೂ ವರ್ಜಿತವಾಗಿ ಕೇವಲ ಚೇಷ್ಟಾಮಾತ್ರವಾಗಿ ಅವನ ಕರ್ಮಗಳಿರುತ್ತವೆ. ಅವನು ಪ್ರವೃತ್ತಿಮಾರ್ಗದವನಾಗಿದ್ದರೆ ಆ ಕೆಲಸಗಳು ಲೋಕಸಂಗ್ರಹಕ್ಕೋಸ್ಕರ ; ನಿವೃತ್ತಿಮಾರ್ಗದವನಾಗಿದ್ದರೆ ಜೀವನಯಾತ್ರಾನಿರ್ವಾಹಕ್ಕೋಸ್ಕರ-ಹೀಗೆ ಅವನ ಕ್ರಿಯೆಗಳು ಕೇವಲ ಚೇಷ್ಟಾಮಾತ್ರವಾಗಿರುತ್ತವೆ. (ಶಂ.ಭಾ.)

ಕರ್ತೃತ್ವವು ಪರಮೇಶ್ವರನದೇ ಎಂಬುದನ್ನರಿತು ತನಗೆ ಸ್ವತಂತ್ರವಾಗಿ ಕರ್ಮವಿಲ್ಲ–ಎಂಬ ಜ್ಞಾನವೇ **ಜ್ಞಾನಾಗ್ನಿದಗ್ಧಕರ್ಮತ್ವ.**

'ಯಸ್ಯ ಸರ್ವೇ' ಎಂಬ ಶ್ಲೋಕವೂ ಈ ಅಭಿಪ್ರಾಯವನ್ನೇ ವಿವರಿಸುತ್ತದೆ.

**ಕಾಮಸಂಕಲ್ಪವರ್ಜಿತಾಃ**

**ಕಾಮವರ್ಜಿತಾಃ :** ಎಂದರೆ ಫಲಸಂಗರಹಿತರಾದವರು. **ಸಂಕಲ್ಪ ವರ್ಜಿತಾಃ** ಎಂದರೆ ಪ್ರವೃತ್ತಿ ಮತ್ತು ಅದರ ಗುಣಗಳೊಡನೆ ಆತ್ಮವನ್ನು ಒಂದಾಗಿ ಸೇರಿಸಿಕೊಳ್ಳುವುದು ಸಂಕಲ್ಪ ; ಅದು ಇಲ್ಲದವರು. ಪ್ರವೃತ್ತಿ ಯುಕ್ತವಾದ ಆತ್ಮಸ್ವರೂಪಾನುಸಂಧಾನವುಳ್ಳವರನ್ನು ಇಲ್ಲಿ ಹೇಳಿದೆ.)

(ರಾ.ಭಾ.)

**ಓಂ ತ್ಯಕ್ತ್ವಾ ಕರ್ಮಫಲಾಸಙ್ಗಂ ನಿತ್ಯತೃಪ್ತೋ ನಿರಾಶ್ರಯಃ ।**
**ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ॥೨೦॥**

ಕರ್ಮಫಲದ ಆಸಕ್ತಿಯನ್ನು ಬಿಟ್ಟು ನಿತ್ಯತೃಪ್ತನಾಗಿ ನಿರಾಶ್ರಯನಾಗಿದ್ದರೆ ಅವನು ಕರ್ಮದಲ್ಲಿ ತೊಡಗಿದ್ದರೂ ನಿಜವಾಗಿ ಏನೂ ಮಾಡುತ್ತಿರುವುದಿಲ್ಲ.

* * *

(ಕರ್ಮಫಲದ ಸಂಗವನ್ನು ಬಿಟ್ಟು ಕರ್ಮಫಲದಲ್ಲಿ ಆಸಕ್ತಿಯಿಲ್ಲದೇ ನಿತ್ಯತೃಪ್ತನಾಗಿರಬೇಕು. ಕರ್ಮಮಾಡಬೇಕು. ಕರ್ಮಫಲವನ್ನು ಅಪೇಕ್ಷಿಸಬಾರದು. ಕರ್ಮಫಲವನ್ನು ಆಶ್ರಯಿಸಿಕೊಂಡಿರಬಾರದು. ಕರ್ಮದ ಹಂಗೇ ಇರಬಾರದು. ಇಂತಹವನು ತನ್ನ ವರ್ಣಾಶ್ರಮೋಕ್ತವಾದ ಕರ್ಮಗಳಲ್ಲಿ ತೊಡಗಿದ್ದರೂ ಸಹ ಅವನು ಯಾವ ಕರ್ಮವನ್ನೂ ಮಾಡುತ್ತಿರುವುದಿಲ್ಲ. ಕರ್ಮವನ್ನು ಮಾಡಿಯೂ ಅಕರ್ಮನೆನಿಸುತ್ತಾನೆ.

ಇದೇ ಅಧ್ಯಾಯದ ೧೩ನೆಯ ಶ್ಲೋಕದಲ್ಲಿ ಶ್ರೀಕೃಷ್ಣನು ಹೇಳಿರುವಂತೆ '**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್** ನಾನು ಚಾತುರ್ವರ್ಣ್ಯಗಳ ಕರ್ತೃವಾಗಿದ್ದರೂ ನಾನು ಅದರ ಕರ್ತೃವಲ್ಲ ಎಂದು ತಿಳಿ' ಎಂದು ಹೇಳಿರುವುದಕ್ಕೆ ಇದು ಅನುಗುಣವಾಗಿದೆ. ಕರ್ಮದಲ್ಲಿ

ಪ್ರವೃತ್ತನಾಗಿದ್ದರೂ ಸಹ ಅವನು ಕರ್ಮವನ್ನು ಮಾಡುತ್ತಿಲ್ಲವೆಂದೇ ತಿಳಿ. ಏಕೆಂದರೆ : ಅವನು (ಕರ್ಮಯೋಗಿಯು) 'ನಾನು' ಎಂಬ ಅಹಂಕಾರದಿಂದ ಯಾವ ಕಾರ್ಯವನ್ನೂ ಮಾಡುವುದಿಲ್ಲ. ಮಾಡಿದ ಕಾರ್ಯಕ್ಕೆ ಫಲವನ್ನೂ ಅಪೇಕ್ಷಿಸುವುದಿಲ್ಲ. ಲೋಕಕಲ್ಯಾಣಕ್ಕಾಗಿ ಕರ್ಮವನ್ನು ಮಾಡುತ್ತಿರುತ್ತಾನೆ.

**ನಿತ್ಯತೃಪ್ತಃ : ನಿತ್ಯೇ ತೃಪ್ತಃ** ನಿತ್ಯವಾದ ಆತ್ಮಸ್ವರೂಪದಲ್ಲಿಯೇ ತೃಪ್ತಿಯುಳ್ಳವನು ; **ನಿರಾಶ್ರಯಃ :** ಅಸ್ಥಿರವಾದ ಪ್ರವೃತ್ತಿಯಲ್ಲಿ ಆಶ್ರಯ ಬುದ್ಧಿಯಿಲ್ಲದವನು. **ನೈವ ಕಿಂಚಿತ್ಕರೋತಿ :** ಅವನು ಯಾವ ಕರ್ಮವನ್ನೂ ಮಾಡುವುದಿಲ್ಲ. ಕರ್ಮದ ನೆಪದಲ್ಲಿ ಜ್ಞಾನಾಭ್ಯಾಸವನ್ನೇ ಮಾಡುತ್ತಾನೆ.

(ರಾ.ಭಾ.)

ಕೇವಲ ಕಾಮಸಂಕಲ್ಪವು ಇಲ್ಲದಿದ್ದರೇ ಸಾಲದು. ಸಂಗವನ್ನೂ (ಸ್ನೇಹ ವನ್ನೂ ) ತೊರೆಯಬೇಕು. (ಮ.ಭಾ.)

ಜ್ಞಾನಿಯು ಆಚರಿಸುವ ಕರ್ಮವು ಪಾರಮಾರ್ಥಿಕವಾಗಿ ಅಕರ್ಮವೇ ಆಗಿದೆ. ಏಕೆಂದರೆ : ಅವನು ನಿಷ್ಕ್ರಿಯವಾದ ಆತ್ಮದರ್ಶನಸಂಪನ್ನನಾಗಿರು ತ್ತಾನೆ.

**ವಿದುಷಾ ಕ್ರಿಯಮಾಣಂ ಕರ್ಮ ಪರಮಾರ್ಥಃ ಅಕರ್ಮ ಏವ. ತಸ್ಯ ನಿಷ್ಕ್ರಿಯಾತ್ಮದರ್ಶನಸಂಪನ್ನತ್ವಾತ್.)** (ಶಂ.ಭಾ.)

**ಓಂ ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ।**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥೨೧॥**

ಆಶೆಗಳಿಲ್ಲದವನಾಗಿ, ಚಿತ್ತವನ್ನೂ ಇಂದ್ರಿಯಗಳನ್ನೂ ಬಿಗಿಹಿಡಿದು ಕೊಂಡು, ಎಲ್ಲ ಪರಿಗ್ರಹಗಳನ್ನೂ ಬಿಟ್ಟು ಕೇವಲ ಶರೀರಸಂಬಂಧವಾದ ಕರ್ಮವನ್ನು ಮಾಡುತ್ತಿರುವವನಿಗೆ ಯಾವ ದೋಷವೂ ಬರುವುದಿಲ್ಲ.

* * *

(ಆಸೆ ಎಂಬುದು ಬಹಳ ಕೆಟ್ಟದ್ದು. ಸರ್ವಸಂಗಪರಿತ್ಯಾಗಮಾಡಿದ ವರಿಗೂ ಈ ಆಸೆಯು ಬಿಟ್ಟಿದ್ದಲ್ಲ. 'ಯಾವ ರೂಪದಲ್ಲಿ ಅದು ಬಂದು ಸೇರುತ್ತದೆ?' ಎಂಬುದು ಅವನಿಗೇ ಗೊತ್ತಿರುವುದಿಲ್ಲ. ಆಸೆಗೆ ನಾನಾಮುಖ ಗಳಿವೆ. ಕೇವಲ ಕಾಮೋಪಭೋಗಗಳಲ್ಲ. ಕೀರ್ತಿಕಾಮನೆಯೂ ಕೂಡ ಒಂದು ಆಸೆಯೇ. ಸರ್ವಸಂಗಪರಿತ್ಯಾಗಮಾಡಿರುತ್ತಾನೆ. ಆದರೆ ಅವನ

ಮನಸ್ಸಿನಲ್ಲಿ 'ನನ್ನನ್ನು ಎಲ್ಲರೂ ತ್ಯಾಗೀ ಎಂದು ತಿಳಿದುಕೊಳ್ಳಲಿ' ಎಂಬ ಕಾಮನೆಯಿರಬಹುದು. ಆಸೆಗೆ ದಾಸನಾದವನು ಎಲ್ಲರಿಗೂ ದಾಸನಾಗು ತ್ತಾನೆ. ಆಸೆಯು ಯಾವನಿಗೆ ದಾಸಿಯಾಗಿದೆಯೋ ಅವನಿಗೆ ಎಲ್ಲರೂ ದಾಸರಾಗುತ್ತಾರೆ. ಇಲ್ಲಿ ಶ್ರೀಕೃಷ್ಣನು ಮೊದಲನೆಯದಾಗಿ ನಿರಾಶೀಃ ಎನ್ನುತ್ತಾನೆ. ಇಂತಹ ಬಂಧನಕ್ಕೆ ಕಾರಣವಾದ ಆಸೆಯನ್ನು ತೊರೆದವನು. **ಯತಚಿತ್ತಾತ್ಮಾ:** ಇಂದ್ರಿಯಗಳನ್ನೂ, ಮನಸ್ಸನ್ನೂ ಜಯಿಸಿದವನು. ಆಸೆಯನ್ನು ತೊರೆಯುವುದು, ಮನಸ್ಸು ಮತ್ತು ಇಂದ್ರಿಯಗಳನ್ನು ಜಯಿಸು ವುದು–ಈ ಎರಡೂ ಸಹ ಒಂದಕ್ಕೊಂದು ಪೂರಕಗಳು. ಮನಸ್ಸು ಮತ್ತು ಇಂದ್ರಿಯಗಳನ್ನು ನಿಗ್ರಹಿಸದಿದ್ದರೆ ಆಶಾರಹಿತನಾಗಲು ಸಾಧ್ಯವಾಗುವುದಿಲ್ಲ. ಪರಿಗ್ರಹ ಎಂದರೆ ಪ್ರತಿಗ್ರಹಿಸುವುದು. ಒಬ್ಬನು ಕೊಟ್ಟಿದ್ದನ್ನು ತೆಗೆದು ಕೊಳ್ಳುವುದು. ದಾನ-ಪ್ರತಿಗ್ರಹ ಇವು ಷಟ್ಕರ್ಮಗಳಲ್ಲಿ ಸೇರಿವೆ. ದಾನ ಕೊಡುವುದು ಮತ್ತು ದಾನತೆಗೆದುಕೊಳ್ಳುವುದು. 'ಇಂತಹುದನ್ನು ಪ್ರತಿ ಗ್ರಹಮಾಡಬಹುದು ; ಇಂತಹುದನ್ನು ಪ್ರತಿಗ್ರಹಮಾಡಕೂಡದು ; ಇಂತಹ ವಸ್ತುವನ್ನು ಪ್ರತಿಗ್ರಹಮಾಡಿದರೆ ಇಂತಹ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳ ಬೇಕು'–ಇತ್ಯಾದಿ ವಿಧಿ-ನಿಷೇಧಗಳು ಪ್ರತಿಗ್ರಹಕ್ಕೆ ಇವೆ. ಪರಮಹಂಸ ನಾಗಿದ್ದರೆ ಯಾವ ಪ್ರತಿಗ್ರಹವೂ ಇರುವುದೇ ಇಲ್ಲ. ಬ್ರಹ್ಮನಿಷ್ಠನಾಗಿದ್ದು ಕರ್ಮಯೋಗಿಯಾಗಿದ್ದರೆ ಪರಿಗ್ರಹಮಾಡಿದರೂ ಅದರ ಸಂಬಂಧವಾದ ಲೇಪವಿಲ್ಲವಾದುದರಿಂದ ಅವನನ್ನು ಅಪರಿಗ್ರಹ–ಎಂದೇ ಹೇಳಬೇಕು.

ಇಂತಹವನು ಪರಮಹಂಸನಾಗಿದ್ದರೆ ಕೇವಲ ಶರೀರದ ಇರುವಿಕೆಗೆ ಅನಿವಾರ್ಯವಾಗಿ ಬೇಕಾದ ಕರ್ಮಗಳನ್ನು ಮಾತ್ರ ಮಾಡುತ್ತಾನೆ. ಕರ್ಮ ಯೋಗಿಯಾಗಿದ್ದರೆ ಅವನ ನಿಷ್ಠೆಯು ಬ್ರಹ್ಮನಲ್ಲಿರುವುದರಿಂದ ಅವನು ಯಾವುದೇ ಕರ್ಮವನ್ನು ಮಾಡಿದರೂ ಅದು ಕೇವಲ ಶಾರೀರವಾದ ಕರ್ಮವೇ ಆಗುತ್ತದೆ. ಆ ಕರ್ಮದ ಹಿಂದಿರುವ ಮನಸ್ಸು ಬ್ರಹ್ಮನಲ್ಲಿ ಸಂಲಗ್ನ ವಾಗಿರುತ್ತದೆ. ಅವನಿಗೆ ಪಾಪದ ಲೇಪವಿಲ್ಲ.

**ಪರಿಗ್ರಹತ್ಯಾಗ** ಎಂದರೆ ಅನಭಿಮಾನ. **ನೈವ ಕಿಂಚಿತ್ಕರೋತಿ :** ಯಾವುದನ್ನೂ ಮಾಡುವುದಿಲ್ಲ ಎಂದರೆ ಕರ್ಮಸಂಬಂಧವಾದ ಕಿಲ್ಬಿಷವು ಅವನಿಗೆ ಇರುವುದಿಲ್ಲ.

**ನೈವ ಕಿಂಚಿತ್ಕರೋತೀತ್ಯಸ್ಯ ಅಭಿಪ್ರಾಯಮಾಹ ನಾಪ್ನೋತಿ ಕಿಲ್ಬಿಷಮಿತಿ**

ನಿರಾಶೀಃ ಎಂಬುದು ಕಾಮಾದಿತ್ಯಾಗದ ಉಪಾಯವನ್ನು ಹೇಳುತ್ತದೆ.

ಆತ್ಮಾ ಎಂದರೆ ಮನಸ್ಸು. ಚಿತ್ತ ಮತ್ತು ಮನಸ್ಸುಗಳನ್ನು ಸಂಯಮದಲ್ಲಿಟ್ಟುಕೊಂಡು ಆಶಾರಹಿತನಾಗಿ–ಎಂದು ಅರ್ಥ. (ಮ.ಭಾ.)

ಕೇವಲ ಶರೀರಕ್ಕೆ ಸಂಬಂಧಿಸಿದ ಕರ್ಮಗಳನ್ನು ಮಾತ್ರವೇ ಮಾಡು ತ್ತಿದ್ದರೂ ವಿಧ್ಯುಕ್ತವಾದ ಕರ್ಮಗಳನ್ನು ಒಂದು ವೇಳೆ ಮಾಡದಿದ್ದರೂ ಅಕರ್ಮದ ದೋಷಕ್ಕೆ ಭಾಗಿಯಾಗುವುದಿಲ್ಲ. ಶರೀರಕ್ಕೆ ಸಂಬಂಧಿಸಿದ ಕರ್ಮ ವೆಂದರೆ ಶರೀರಪೋಷಣೆಗೆ ಎಷ್ಟುಬೇಕೋ ಅಷ್ಟು ಅನ್ನವನ್ನು ತಿನ್ನುವುದು. ಶರೀರವನ್ನು ಮುಚ್ಚಿಕೊಳ್ಳಲು ಎಷ್ಟು ಬಟ್ಟೆಬೇಕೋ ಅಷ್ಟನ್ನು ಮಾತ್ರವೇ ಉಟ್ಟುಕೊಳ್ಳುವುದು. ಅನ್ನವನ್ನೂ ಸಹ ಬೇಡಲು ಹೋಗದೆ ಯಾರಾದರೂ ತಂದುಕೊಟ್ಟರೆ ಮಾತ್ರವೇ ತಿನ್ನುವುದು.

ಶರೀರವಿರುವುದಕ್ಕೆ ಆವಶ್ಯಕವಾದ ಅನ್ನಾದಿಗಳನ್ನು ಪಡೆಯುವುದಕ್ಕೆ ಅಶ್ವಮೇಧಪರ್ವದಲ್ಲಿ ಮತ್ತು ಬೋಧಾಯನಸ್ಮೃತಿಯಲ್ಲಿ ಹೀಗೆ ಹೇಳಿದೆ :

**ಅಯಾಚಿತಮನಸಂಕ್ಲೃಪ್ತಮುಪಪನ್ನಂ ಯದೃಚ್ಛಯಾ ॥**

ತಾನು ಬೇಡದೇ ಇದ್ದದ್ದು ; ಮೊದಲು ಗೊತ್ತುಮಾಡಿಕೊಳ್ಳದೇ ಇದ್ದದ್ದು; ತಾನೇ ಒದಗಿ ಬಂದಿದ್ದು. ಈ ವಿಷಯವನ್ನೇ ಮುಂದಿನ ಶ್ಲೋಕ ದಲ್ಲಿ ಶ್ರೀಕೃಷ್ಣನು ಇನ್ನೂ ಸ್ಪಷ್ಟವಾಗಿ ಹೇಳುತ್ತಾನೆ.)

**ಓಂ ಯದೃಚ್ಛಾಲಾಭಸಂತುಷ್ಟೋ ದ್ವನ್ದ್ವಾತೀತೋ ವಿಮತ್ಸರಃ ।**
**ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ ॥೨೨॥**

ತಾನು ಯಾರನ್ನೂ ಪ್ರಾರ್ಥನೆಮಾಡದೆ ತಾನಾಗಿಯೇ ಒದಗಿ ಬಂದ ಲಾಭದಿಂದ ಸಂತೋಷಪಡುವವನಾಗಿ, ದ್ವಂದ್ವಗಳನ್ನು ಮೀರಿ, ಮತ್ಸರ ವಿಲ್ಲದೇ, ಸಿದ್ಧಿಯಾದರೂ ಅಸಿದ್ಧಿಯಾದರೂ ಸಮನಾಗಿ ಭಾವಿಸುವವನು ಕರ್ಮಮಾಡಿದರೂ ಬದ್ಧನಾಗುವುದಿಲ್ಲ.

* * *

**(ಯದೃಚ್ಛಾಲಾಭಸಂತುಷ್ಟಃ : ಅಪ್ರಾರ್ಥಿತೋಪನತೋ ಲಾಭಃ ಯದೃಚ್ಛಾಲಾಭಃ ತೇನ ಸಂತುಷ್ಟಃ** ಒಬ್ಬನನ್ನು ಕೇಳಿಕೊಳ್ಳದೇ ತಾನೇ ಬಂದೊದಗಿದ್ದು ಯದೃಚ್ಛಾಲಾಭ. ಅದರಿಂದಲೇ ಸಂತುಷ್ಟನಾಗಿರುವವನು ಯದೃಚ್ಛಾಲಾಭಸಂತುಷ್ಟನು.

ಶ್ರೀಶಂಕರರ ಉಪದೇಶವನ್ನು ಇಲ್ಲಿ ಸ್ಮರಿಸಬಹುದಾಗಿದೆ :

**ಮೂಢ ಜಹೀಹಿ ಧನಾಗಮತೃಷ್ಣಾಂ**
**ಕುರು ಸದ್ಬುದ್ಧಿಂ ಮನಸಿ ವಿತೃಷ್ಣಾಮ್ ।**
**ಯಲ್ಲಭಸೇ ನಿಜಕರ್ಮೋಪಾತ್ತಂ**
**ವಿತ್ತಂ ತೇನ ವಿನೋದಯ ಚಿತ್ತಮ್ ॥**

–ಭಜಗೋವಿಂದಸ್ತೋತ್ರ

ಮೂಢ! ಹಣದ ಮೇಲಿನ ದಾಹವನ್ನು ದೂರಮಾಡು. ಹಣದ ದಾಹದಿಂದ ವಿಮುಕ್ತವಾದ ಸದ್ಬುದ್ಧಿಯನ್ನು ಹೊಂದು. ನಿನ್ನ ಸಹಜವಾದ ಕರ್ಮದ ಫಲವಾಗಿ ನೀನು ಎಷ್ಟು ವಿತ್ತವನ್ನು ಪಡೆದುಕೊಳ್ಳುವೆಯೋ ಅಷ್ಟು ವಿತ್ತದಿಂದಲೇ ಮನಸ್ಸನ್ನು ಹರ್ಷಗೊಳಿಸು.

ಶ್ರೀಶಂಕರರದ್ದೇ ಆದ **ಸ್ವಾದ್ವನ್ನಂ ನ ತು ಯಾಚ್ಯತಾಂ ವಿಧಿವಶಾತ್ ಪ್ರಾಪ್ತೇನ ಸನ್ತುಷ್ಯತಾಂ** ಎಂಬ ಮಾತನ್ನೂ ಸ್ಮರಿಸಬಹುದು. ಯೋಗಿಯು ದುರಾಶಾರಹಿತನು.

ಶ್ರೀಕೃಷ್ಣನು ಹೇಳುತ್ತಾನೆ : ಎಷ್ಟು ಪ್ರಾಪ್ತವಾಗುವುದೋ ಅಷ್ಟರಿಂದಲೇ ತೃಪ್ತಿಯನ್ನು ಹೊಂದುವವನು ದ್ವಂದ್ವಾತೀತನು ; ಶೀತೋಷ್ಣ-ಸುಖ-ದುಃಖಗಳನ್ನೂ ಲೆಕ್ಕಿಸದವನು.

ಸಾಮಾನ್ಯಮನುಷ್ಯನಿಗೆ ದ್ವಂದ್ವಾತೀತನಾಗಿರಲು ಸಾಧ್ಯವಿಲ್ಲ. ಬೇಸಿಗೆಯ ಬಿಸಿಲಿನಲ್ಲಿ ತಲ್ಲಣಿಸುತ್ತೇವೆ. ಚಳಿಗಾಲದ ಶೀತದಲ್ಲಿ ಹೊದಿಕೆಸಾಲದೆಂದು ಸಂಕಟಪಡುತ್ತೇವೆ. ದೇಹವು 'ನಾನಲ್ಲ' ಎಂಬ ಭಾವನೆಯು ರೂಢಮೂಲವಾಗಿರುವವನಿಗೆ ಮಾತ್ರವೇ ಶೀತೋಷ್ಣಗಳನ್ನು ಸಹಿಸಿಕೊಳ್ಳಲು ಸಾಧ್ಯವಾಗುವುದು. ದುಃಖಬಂದಾಗ ಕೊರಗುವುದು ; ಸುಖಬಂದಾಗ ಹಿಗ್ಗುವುದೂ ಮನುಷ್ಯನ ಸ್ವಭಾವವಾಗಿರುತ್ತದೆ. ಹಗಲು-ರಾತ್ರಿಗಳಂತೆ

ಸುಖ-ದುಃಖಗಳು ಬಂದುಹೋಗುತ್ತಿರುತ್ತವೆ–ಎಂಬುದನ್ನು ಮನುಷ್ಯನು ಅರಿತುಕೊಳ್ಳುವುದಿಲ್ಲ. ಸುಖ-ದುಃಖಗಳು ಮನುಷ್ಯನ ಜೀವನದಲ್ಲಿ ಅನಿವಾರ್ಯವೆಂಬುದನ್ನೂ ಸಹ ಮನಗಂಡಿರುವುದಿಲ್ಲ. ಕಷ್ಟಬಂದೊಡನೆಯೇ ಕಂಗಾಲಾಗಿಬಿಡುತ್ತಾನೆ. ಆಕಾಶವೇ ತಲೆಯ ಮೇಲೆ ಕಳಚಿ ಬಿದ್ದಿತೋ ಎನ್ನುವಂತೆ ಭಯಪಡುತ್ತಾನೆ. ಇವನೆಷ್ಟೇ ದುಃಖಪಡಲಿ ; ಭಯಪಡಲಿ–ಕಷ್ಟವು ಬಾರದೆಯೂ ಇರುವುದಿಲ್ಲ. ಬಂದ ಕಷ್ಟವು ಕ್ಷಣಮಾತ್ರದಲ್ಲಿ ಪರಿಹಾರವಾಗುವುದೂ ಇಲ್ಲ. ಕುರುವೊಂದು ಎದ್ದರೆ ಅದು ದೊಡ್ಡದಾಗಬೇಕು; ಮಾಗಬೇಕು ; ಒಡೆಯಬೇಕು ; ಅನಂತರ ಮಾಯಬೇಕು. ಕಷ್ಟಗಳೂ ಹೀಗೆಯೇ. ಇದನ್ನು ಮನುಷ್ಯನು ಧೈರ್ಯವಾಗಿ ಎದುರಿಸಬೇಕು. ಆತ್ಮಾನಾತ್ಮವಿವೇಕವುಳ್ಳವನು ಮಾತ್ರವೇ ಸುಖ-ದುಃಖಗಳ ಪರಿಣಾಮಗಳನ್ನು ಉದಾಸೀನದೃಷ್ಟಿಯಿಂದ ಕಾಣಲು ಸಮರ್ಥನಾಗುತ್ತಾನೆ.

'ವಿಮತ್ಸರಃ' ಎಂಬುದಾಗಿ ಮೂರನೆಯ ವಿಶೇಷಣವನ್ನು ಶ್ರೀಕೃಷ್ಣನು ಹೇಳುತ್ತಾನೆ. ಮಾತ್ಸರ್ಯವೆಂಬುದು ಒಂದು ರೋಗ. ಸಂನ್ಯಾಸಿಗಳಿಗೂ ಬಿಟ್ಟಿದ್ದಲ್ಲ–ಎಂದ ಮೇಲೆ ಸಾಮಾನ್ಯರಾದವರ ಪಾಡೇನು?

ಮಾತ್ಸರ್ಯವೆಂದರೆ ಮತ್ತೊಬ್ಬನ ಉಚ್ಛ್ರಾಯಸ್ಥಿತಿಯನ್ನು ನೋಡಿ ಕರುಬುವುದು. ಅವನ ಕರುಬುತನದಿಂದ ಮತ್ತೊಬ್ಬನ ಉಚ್ಛ್ರಾಯಸ್ಥಿತಿಯು ಹಾಳಾಗಿಬಿಡುವುದಿಲ್ಲ. ಮಾತ್ಸರ್ಯಾಗ್ನಿಯು ಅವನನ್ನೇ ಸುಡಲು ಪ್ರಾರಂಭಿಸುವುದು. ಅಕಾರ್ಯವನ್ನು ಮಾಡಲು ಪ್ರೇರಿಸುವುದು. ಆದುದರಿಂದ ಮಾತ್ಸರ್ಯವೆಂದಿಗೂ ಇರಬಾರದು. ಯಾವಾಗಲೂ ಮನುಷ್ಯನು ಮಾತ್ಸರ್ಯವಿಲ್ಲದೇ ಸುಖವಾಗಿರಬೇಕಾದರೆ ತನಗಿಂತ ಕೆಳಗಿನವರನ್ನು ನೋಡಿ 'ದೇವರು ನನಗೆ ಇಷ್ಟಾದರೂ ಕೊಟ್ಟಿದ್ದಾನಲ್ಲಾ'–ಎಂದು ತೃಪ್ತಿಪಟ್ಟು ಕೊಳ್ಳಬೇಕು. ತನಗಿಂತ ಮೇಲಿನ ಅಂತಸ್ತಿನವರನ್ನು ನೋಡಿ ಹೊಟ್ಟೇ ಕಿಚ್ಚುಪಡಬಾರದು. ತಾನೂ ಸಹ ಆ ಮಟ್ಟಕ್ಕೆ ಹೋಗಲು ಯತ್ನಿಸಬೇಕು.

ನಾಲ್ಕನೆಯದಾಗಿ ಶ್ರೀಕೃಷ್ಣನು ಹೇಳುತ್ತಾನೆ.

ಸಿದ್ಧೌ ಅಸಿದ್ಧೌ ಚ ಸಮಃ ಇವನಿಗೆ ತಾನು ಮಾಡಿದ ಕಾರ್ಯವು ಫಲಿತವಾದರೂ ಫಲಿತವಾಗದಿದ್ದರೂ ವ್ಯತ್ಯಾಸವೇನೂ ಕಾಣುವುದಿಲ್ಲ.

ಬದುಕಿರುವ ಪರ್ಯಂತವಾಗಿ ತನ್ನ ಕರ್ತವ್ಯಗಳನ್ನು ಮಾಡುತ್ತಾ ಹೋಗು ತ್ತಾನೆ. ಲಾಭಾಲಾಭಗಳು, ಯುದ್ಧದಲ್ಲಿ ಜಯಾಪಜಯಗಳು–ಇವುಗಳ ವಿಷಯವಾಗಿ ಯೋಚಿಸಹೋಗುವುದಿಲ್ಲ. ಲಾಭವಾದರೂ ಸರಿಯೇ, ನಷ್ಟವಾದರೂ ಸರಿಯೇ, ಇಂದು ಲಾಭವಾಗಬಹುದು ; ನಾಳೆ ನಷ್ಟವಾಗ ಬಹುದು. ಪುನಃ ಚಕ್ರವು ತಿರುಗಿದಾಗ ಲಾಭವು ಬಂದೇ ಬರುವುದು. ಇದಕ್ಕೇಕೆ ದುಃಖಿಸಬೇಕು?–ಎಂಬುದು ಅವನ ನಿಶ್ಚಯವಾಗಿರುತ್ತದೆ. ಕರ್ತವ್ಯವನ್ನು ಶ್ರದ್ಧೆಯಿಂದ ಕಾಲಕ್ಕೆ ಸರಿಯಾಗಿ ಮಾಡುವುದೊಂದೇ ಅವನ ಧ್ಯೇಯ. ಉಳಿದುವು ಅವನಿಗೆ ಸಂಬಂಧಿಸಿದುವಲ್ಲ. ಇಂತಹವನು ಯಜ್ಞವೇ ಮೊದಲಾದ ಕಾರ್ಯಗಳನ್ನು ಮಾಡುತ್ತಿದ್ದರೂ ಸಂಸಾರದಲ್ಲಿ ಬಂಧಿತ ನಾಗುವುದಿಲ್ಲ. ಕರ್ಮಗಳು ಇವನನ್ನು ಬಂಧಿಸಲಾರವು.

ಯತಚಿತ್ತಾತ್ಮನ ಲಕ್ಷಣವನ್ನು ಈ ಶ್ಲೋಕವು ಹೇಳುತ್ತದೆ. ದ್ವಂದ್ವಾ ತೀತನು ಹೇಗೆ ಆಗುತ್ತಾನೆ ಎಂದರೆ : ಸಿದ್ಧಿ, ಅಸಿದ್ಧಿಗಳಲ್ಲಿ ಸಮಭಾವವನ್ನು ಹೊಂದುವುದರಿಂದ.) (ಮ.ಭಾ.)

**ಓಂ ಗತಸಙ್ಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ ।**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥೨೩॥**

ಸಂಗವು ಹೋಗಿ ವಿಮುಕ್ತನಾಗಿ ಜ್ಞಾನದಲ್ಲಿ ನೆಲೆಗೊಂಡಿರುವ ಚಿತ್ತ ವುಳ್ಳವನಾಗಿ ಯಜ್ಞಕ್ಕೋಸ್ಕರವಾಗಿಯೇ ಯಾವನು ಕರ್ಮವನ್ನು ಆಚರಿಸು ತ್ತಾನೆಯೋ–ಅವನ ಎಲ್ಲ ಕರ್ಮಗಳೂ ಸಮಗ್ರವಾಗಿ ಅಡಗಿಹೋಗುವುವು.

* * *

('ಕೃತ್ವಾಪಿ ನ ನಿಬಧ್ಯತೇ' ಯಜ್ಞವೇ ಮೊದಲಾದ ಕರ್ಮವನ್ನು ಮಾಡಿದರೂ ಕರ್ಮದಲ್ಲಿ ಹೇಗೆ ಬದ್ಧನಾಗುವುದಿಲ್ಲವೆಂಬುದನ್ನು ಭಗವಂತನು ಈ ಶ್ಲೋಕದಲ್ಲಿ ಸಮರ್ಥಿಸುತ್ತಾನೆ. ಸಂಗದಲ್ಲಿದ್ದರೂ ಇವನು ನಿಸ್ಸಂಗನಾಗಿರುತ್ತಾನೆ. ಎಲ್ಲರನ್ನೂ ಸಮದೃಷ್ಟಿಯಿಂದ ನೋಡುವ ಇವನಿಗೆ ಇವರು ಪ್ರಿಯರು, ಅವರು ಅಪ್ರಿಯರು–ಎಂಬ ಭಾವನೆಯೇ ಹೋಗಿ ಬಿಟ್ಟಿರುತ್ತದೆ. ಯಾವ ವಿಷಯವಸ್ತುಗಳಲ್ಲಿಯೂ ಇವನಿಗೆ ಸಂಗವಿರುವು ದಿಲ್ಲ. ಪಾಪಪುಣ್ಯಗಳಿಂದ ಮುಕ್ತನಾಗಿರುತ್ತಾನೆ. ನಿಸ್ಸಂಕಲ್ಪನಾಗಿ ಕರ್ಮಗಳನ್ನು

ಮಾಡುವುದರಿಂದ ಇವನು ಅಕರ್ಮನಾಗಿ ಪಾಪ-ಪುಣ್ಯಗಳೇ ಇವನಿಗೆ ಸೋಂಕುವುದಿಲ್ಲ.

ಸ್ಫಟಿಕದಂತೆ ಪರಿಶುದ್ಧಮನಸ್ಕನಾಗಿರುತ್ತಾನೆ. ಇವನ ಮನಸ್ಸು ಯಾವಾಗಲೂ ಜ್ಞಾನದಲ್ಲಿಯೇ ಪ್ರತಿಷ್ಠಿತವಾಗಿರುತ್ತದೆ. ಇಂತಹವನು ಯಜ್ಞಕ್ಕಾಗಿ ಮಾಡುವ ಕಾರ್ಯಗಳೆಲ್ಲವೂ ಜ್ಞಾನಾಗ್ನಿಯಲ್ಲಿ ದಗ್ಧವಾಗಿ ಬಿಡುತ್ತದೆ. ಅಗ್ನಿಕುಂಡಕ್ಕೆ ಇದ್ದಿಲನ್ನು ಹಾಕಿದರೆ ಅದೂ ಸಹ ಕೆಂಡವಾಗಿ ಬಿಡುವಂತೆ–ಇಂತಹ ಮುಕ್ತನು ಮಾಡುವ ಕರ್ಮಗಳೆಲ್ಲವೂ ಜ್ಞಾನಮಯವೇ ಆಗಿಬಿಡುತ್ತವೆ. ಆದುದರಿಂದ ಕರ್ಮದ ಬಂಧನವು ಇವನಿಗೆ ಇರುವುದಿಲ್ಲ.

ನಿಸ್ಸಂಗದ ವಿಷಯವಾಗಿ ಶ್ರೀಶಂಕರರು ಹೀಗೆ ಹೇಳಿದ್ದಾರೆ :

**ಸತ್ಸಙ್ಗತ್ವೇ ನಿಃಸಙ್ಗತ್ವಂ ನಿಸ್ಸಙ್ಗತ್ವೇ ನಿರ್ಮೋಹತ್ವಮ್ ।**
**ನಿರ್ಮೋಹತ್ವೇ ನಿಶ್ಚಲತತ್ತ್ವಂ ನಿಶ್ಚಲತತ್ತ್ವೇ ಜೀವನ್ಮುಕ್ತಿಃ ॥**

–ಭಜಗೋವಿಂದಸ್ತೋತ್ರ

ಸದ್ವಸ್ತುವಿನ (ಆತ್ಮನ) ಸಂಗವಾಯಿತೆಂದರೆ ಪ್ರಪಂಚದ ಸಂಗವು ಇಲ್ಲವಾಗುತ್ತದೆ. ಪ್ರಪಂಚದ ಸಂಗವಿಲ್ಲದಿದ್ದರೆ ವ್ಯಾಮೋಹವು (ಕಾಮ) ತೊಲಗುವುದು. ಕಾಮವು ತೊಲಗಿತೆಂದರೆ ನಿಜವಾದ ತತ್ತ್ವಜ್ಞಾನವಾಗು ವುದು. ತತ್ತ್ವಜ್ಞಾನವಾದರೆ ಜೀವನ್ಮುಕ್ತಿಯು ಸಿಕ್ಕುವುದು.

ಹಿಂದೆ **ತ್ಯಕ್ತ್ವಾ ಕರ್ಮಫಲಾಸಙ್ಗಂ, ತ್ಯಕ್ತಸರ್ವಪರಿಗ್ರಹಃ, ಯತಚಿತ್ತಾತ್ಮಾ**–ಎಂಬ ಪದಗಳಿಂದ ಬುದ್ಧಿಪೂರ್ವಕವಾಗಿ ಸಂಗಪರಿತ್ಯಾಗ ಮುಂತಾದುವುಗಳನ್ನು ಹೇಳಿದೆ. ಅಂತಹ ನಿಯಮವುಳ್ಳವನು ಬೇರೆಯ ಅವಸ್ಥೆಯಲ್ಲಿದ್ದು ಯಜ್ಞವೇ ಮುಂತಾದುವುಗಳಿಗಾಗಿ ದ್ರವ್ಯಾರ್ಜನೆಯಲ್ಲಿ ತೊಡಗಿದರೂ ಕೂಡ ನಿಃಸಂಗತ್ವ ಮುಂತಾದುವು ಸ್ವರಸವಾಗಿಯೇ ಆಗಿ ಬಿಡುತ್ತವೆ–ಎಂದು ಹೇಳುತ್ತಾ, 'ವಿರೋಧಿಯಾದ ಕರ್ಮವು ಅನಂತವಾಗಿದ್ದರೂ ಕೂಡ ಕರ್ಮಯೋಗದ ಪ್ರಭಾವದಿಂದ ನಿವೃತ್ತಿಹೊಂದಿಬಿಡುತ್ತದೆ' ಎಂದು ಈ ಶ್ಲೋಕದಲ್ಲಿ ಹೇಳಿರುತ್ತದೆ. (ಶ್ರೀವೇದಾಂತದೇಶಿಕರು)

ಶ್ರೀಮಧ್ವಾಚಾರ್ಯರು **ಗತಸಙ್ಗಸ್ಯ** ಎಂಬ ಪದಕ್ಕೆ **ಫಲಸ್ನೇಹರಹಿತಸ್ಯ** ಫಲಸ್ನೇಹರಹಿತನಾದ ಎಂದೂ, **ಮುಕ್ತಸ್ಯ** ಎಂಬುದಕ್ಕೆ ಶರೀರಾದ್ಯಭಿಮಾನರಹಿತನಾದ ಎಂದೂ, **ಜ್ಞಾನಾವಸ್ಥಿತಚೇತಸಃ** ಎಂಬುದಕ್ಕೆ

ಪರಮೇಶ್ವರಜ್ಞಾನವುಳ್ಳವನು ಎಂದೂ–ಅರ್ಥಮಾಡುತ್ತಾರೆ ಮತ್ತು ಅಂತಹ ಜ್ಞಾನಾವಸ್ಥಿತಚೇತಸ್ಸಿನ ಭಾವವನ್ನು ಮುಂದಿನ ಶ್ಲೋಕದಲ್ಲಿ ಸ್ಪಷ್ಟಪಡಿಸುತ್ತದೆ ಎನ್ನುತ್ತಾರೆ.)

**ಓಂ ಬ್ರಹ್ಮಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।**
**ಬ್ರಹ್ಮೈವ ತೇನ ಗನ್ತವ್ಯಂ ಬ್ರಹ್ಮಕರ್ಮಸಮಾಧಿನಾ ॥೨೪॥**

ಅರ್ಪಣವು ಬ್ರಹ್ಮವು. ಹವಿಸ್ಸು ಬ್ರಹ್ಮವು. ಬ್ರಹ್ಮವೆಂಬ ಅಗ್ನಿಯಲ್ಲಿ ಬ್ರಹ್ಮದಿಂದ ಹೋಮಮಾಡಲ್ಪಡುತ್ತದೆ. ಬ್ರಹ್ಮಕರ್ಮಸಮಾಧಿಯಿಂದ ಅವನು ಪಡೆಯಬೇಕಾದುದೂ ಬ್ರಹ್ಮವೇ ಆಗಿರುತ್ತದೆ.

* * *

(ಬ್ರಹ್ಮಸಾಕ್ಷಾತ್ಕಾರವನ್ನು ಮಾಡಿಕೊಂಡವನು ಎಲ್ಲವನ್ನೂ ಬ್ರಹ್ಮ ಮಯವನ್ನಾಗಿಯೇ ಕಾಣುತ್ತಾನೆಂಬುದನ್ನು ನಾವು ಕೇಳಿದ್ದೇವೆ. ‘**ಬ್ರಹ್ಮೈ-ವೇದಗ್ಂ ಸರ್ವಂ । ಸರ್ವಂ ಖಲ್ವಿದಂ ಬ್ರಹ್ಮ । ಪುರುಷ ಏವೇದಗ್ಂ ಸರ್ವಂ । ಸರ್ವೋ ವೈ ರುದ್ರಃ ।** ಎಲ್ಲವೂ ಬ್ರಹ್ಮಮಯವೇ ಆಗಿದೆ ಎಂದವನು ಹೇಳುತ್ತಾನೆ. ಅಂತಹ ಬ್ರಹ್ಮಜ್ಞಾನಿಯೊಬ್ಬನು ಯಜ್ಞಮಾಡಿದರೆ ಯಾವ ಭಾವನೆಯಿಂದ ಮಾಡುತ್ತಾನೆ? ಶ್ರೀಕೃಷ್ಣನಿದನ್ನು ವಿವರಿಸಿ ಹೇಳುತ್ತಾನೆ:

**ಅರ್ಪ್ಯತೇ ಅನೇನ ಇತ್ಯರ್ಪಣಂ**–ಹವಿಸ್ಸನ್ನು ಯಜ್ಞೇಶ್ವರನಿಗೆ ಅರ್ಪಿಸುವ ಸ್ರುಕ್-ಸ್ರುವಾದಿ ಉಪಕರಣಗಳು ಅಥವಾ ಅರ್ಪಿಸುವ ಕ್ರಿಯೆ ಯಾವುದುಂಟೋ ಅದು ಬ್ರಹ್ಮ. ಹವಿಸ್ಸೂ ಬ್ರಹ್ಮವೇ ಆಗಿದೆ. ಹೋಮ ಮಾಡುವವನೂ ಬ್ರಹ್ಮನೇ ಆಗಿದ್ದಾನೆ. ಹೋಮಮಾಡಲ್ಪಡುವ ಅಗ್ನಿಯೂ ಬ್ರಹ್ಮವೇ ಆಗಿದೆ. ಬ್ರಹ್ಮವೆಂಬ ಅಗ್ನಿಯಲ್ಲಿ ಬ್ರಹ್ಮನಿಂದ ಹುತಮಾಡಲ್ಪಟ್ಟುದೂ ಬ್ರಹ್ಮವೇ ಆಗಿದೆ. ಬ್ರಹ್ಮವೇ ಕರ್ಮವಾಗಿ ಉಳ್ಳದ್ದು ಬ್ರಹ್ಮಕರ್ಮ. ಈ ಬ್ರಹ್ಮಕರ್ಮದಲ್ಲಿಯೇ ಏಕಾಗ್ರತೆಯನ್ನು ಹೊಂದಿ ಬ್ರಹ್ಮಾಹುತಿಯನ್ನು ಬ್ರಹ್ಮಾಗ್ನಿಯಲ್ಲಿ ಹೋಮಮಾಡುವವನಿಗೆ ಲಭ್ಯವಾಗುವ ಫಲವೂ ಬ್ರಹ್ಮವೇ ಆಗಿರುತ್ತದೆ.

ಮಹತ್ವಪೂರ್ಣವಾದ ಮಂತ್ರವಿದು. ಶ್ರಾದ್ಧಕಾಲದಲ್ಲಿ ಬ್ರಾಹ್ಮಣ ಭೋಜನಕ್ಕೆ ಮೊದಲು ಈ ಮಂತ್ರವನ್ನು ಹೇಳುವ ವಾಡಿಕೆಯಿದೆ. ನಮ್ಮ

ನಿತ್ಯ-ನೈಮಿತ್ತಿಕಕರ್ಮಗಳಲ್ಲಿ ಆಧ್ಯಾತ್ಮಿಕತೆಯನ್ನು ಮೂಡಿಸಲು ನಮ್ಮ ಹಿಂದಿನವರು ಯಾವ ರೀತಿಯಲ್ಲಿ ಮಂತ್ರಗಳನ್ನೂ ಕರ್ಮಗಳನ್ನೂ ಅಳವಡಿಸಿದ್ದಾರೆಂಬುದನ್ನು ಇದರಿಂದ ನಾವು ಮನಗಾಣಬಹುದಾಗಿದೆ. ಆದುದರಿಂದ ನಿತ್ಯಕರ್ಮಗಳಾವುವೂ ಬಿಡತಕ್ಕುವುಗಳಲ್ಲ. ಆತ್ಮಸಂಸ್ಕಾರವು ನಿತ್ಯಕರ್ಮಗಳಿಂದಲೇ ಆಗುತ್ತದೆ. ಮಾಡುವಾಗ ಶ್ರದ್ಧೆಯಿರಬೇಕು ; ಸದ್ಭಾವನೆಯಿರಬೇಕು.

ಬ್ರಹ್ಮವೊಂದೇ ಸತ್ಯಸ್ವರೂಪವಾಗಿರುವುದರಿಂದ ಎಲ್ಲವೂ ಬ್ರಹ್ಮವೇ. ವಿವೇಕಿಗೆ ಕಪ್ಪೇಚಿಪ್ಪಿನಲ್ಲಿ ಬೆಳ್ಳಿಯು ಕಾಣುವುದಿಲ್ಲ. ಬೆಳ್ಳಿಯಂತೆ ಇತರರಿಗೆ ಯಾವುದು ಕಾಣುತ್ತದೆಯೋ ಅದು ವಸ್ತುತಃ ಕಪ್ಪೇಚಿಪ್ಪೇ ಆಗಿದೆ–ಎಂದು ಅವನು ತಿಳಿಯುತ್ತಾನೆ. ಹಾಗೆಯೇ ಬ್ರಹ್ಮಜ್ಞಾನಿಯು ಅರ್ಪಣೆ, ಹವಿಸ್ಸು–ಮುಂತಾದುವುಗಳೆಲ್ಲವೂ ಪಾರಮಾರ್ಥಿಕವಾಗಿ ಬ್ರಹ್ಮವೇ ಎಂದು ತಿಳಿಯುತ್ತಾನೆ.

**ಯಥಾ ಶುಕ್ತಿಕಾಯಾಂ ರಜತಭಾವಂ ಪಶ್ಯತಿ ತದುಚ್ಯತೇ ಬ್ರಹ್ಮ ಏವ ಅರ್ಪಣಂ ಇತಿ.** (ಶಂ.ಭಾ.)

ಅರ್ಪಣೆ, ಹವಿಸ್ಸು–ಮುಂತಾದುವುಗಳೆಲ್ಲಾ ಬ್ರಹ್ಮಕಾರ್ಯವಾಗಿರುವುದರಿಂದ ಎಲ್ಲವೂ ಬ್ರಹ್ಮವೇ. (ರಾ.ಭಾ.)

**ತತ್ ಬ್ರಹ್ಮಕಾರ್ಯತ್ವಾತ್ ಬ್ರಹ್ಮ**

ಅರ್ಪಣೆ, ಹವಿಸ್ಸು–ಮುಂತಾದ ಎಲ್ಲದರ ಇರುವಿಕೆ, ಪ್ರವೃತ್ತಿ–ಇವೆಲ್ಲವೂ ಬ್ರಹ್ಮಕ್ಕೆ ಅಧೀನವಾಗಿರುವುದರಿಂದ ಎಲ್ಲವೂ ಬ್ರಹ್ಮವೇ.

**ಸರ್ವಮೇತತ್ ಬ್ರಹ್ಮೋಚ್ಯತೇ, ತದಧೀನಸತ್ತಾಪ್ರವೃತ್ತಿಮತ್ತ್ವಾತ್, ನ ತು ತತ್ಸ್ವರೂಪತ್ವಾತ್.**

ಸಮಾಧಿನಾ ಎಂಬುದನ್ನು ಪ್ರತ್ಯೇಕಪದವಾಗಿ ತೆಗೆದುಕೊಂಡು **ಸಮಾಧಿನಾ ಸಹ ಬ್ರಹ್ಮೈವ ಕರ್ಮ**–ಸಮಾಧಿಯೂ ಕೂಡ ಬ್ರಹ್ಮವೇ.)

(ಮ.ಭಾ.)

**ಓಂ ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।**
**ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥೨೫॥**

ಕೆಲವರು ಯೋಗಿಗಳು ದೈವಯಜ್ಞವನ್ನೇ ಉಪಾಸನೆಮಾಡುತ್ತಾರೆ.

ಮತ್ತೆ ಕೆಲವರು ಬ್ರಹ್ಮಾಗ್ನಿಯಲ್ಲಿ ಯಜ್ಞದಿಂದಲೇ ಯಜ್ಞವನ್ನು ಹೋಮ ಮಾಡುತ್ತಾರೆ.

(ದೈವಂ ಯಜ್ಞಂ ಎಂದರೆ ದೇವತಾಸಂಬಂಧವಾದ ಯಜ್ಞ. ಇಂದ್ರಾದಿದೇವತೆಗಳಿಗೆ ಸಂಬಂಧಿಸಿದ ದರ್ಶ-ಪೂರ್ಣಮಾಸಾದಿಗಳು. ಇವು ಗಳನ್ನು ಕರ್ಮಯೋಗಿಗಳು ಉಪಾಸನೆಮಾಡುತ್ತಾರೆ. ನಿಷ್ಕಾಮಬುದ್ಧಿಯಿಂದ ಈಶ್ವರಪ್ರೀತ್ಯರ್ಥವಾಗಿ ಮಾಡುತ್ತಾರೆ.

ಬ್ರಹ್ಮಾಗ್ನಿ ಎಂದರೆ ಬ್ರಹ್ಮವೆಂಬ ಅಗ್ನಿ. ಬ್ರಹ್ಮವೆಂದರೇನು? **ಸತ್ಯಂ ಜ್ಞಾನಮನನ್ತಂ ಬ್ರಹ್ಮ**–ಸತ್ಯವೂ, ಜ್ಞಾನವೂ, ಅನಂತವೂ ಆಗಿರುವುದು ಬ್ರಹ್ಮ. **ವಿಜ್ಞಾನಮಾನನ್ದಂ ಬ್ರಹ್ಮ** (ಬೃ. ೩-೯-೨೮) ವಿಜ್ಞಾನವೂ ಆನಂದವೂ ಆಗಿರುವುದು ಬ್ರಹ್ಮ. ಈ ಬ್ರಹ್ಮವೆಂಬ ಅಗ್ನಿಯಲ್ಲಿ ಬ್ರಹ್ಮಜ್ಞಾನಿಗಳು ಯಜ್ಞವನ್ನು ಮಾಡುತ್ತಾರೆ. ಇವರಿಗೆ ಯಜ್ಞಸಾಮಗ್ರಿ ಯಾವುದು? ಅವರು ಯಜ್ಞದಿಂದಲೇ ಹೋಮಮಾಡುತ್ತಾರೆ. ಯಜ್ಞ ಎಂಬುದು ಆತ್ಮಪರ್ಯಾಯಪದಗಳಲ್ಲಿ ಪರಿಗಣಿತವಾಗಿದೆ. ಅರ್ಥಾತ್ ಬ್ರಹ್ಮವೆಂಬ ಯಜ್ಞದ ಬ್ರಹ್ಮಾಗ್ನಿಯಲ್ಲಿ ಬ್ರಹ್ಮವಿದರು ಜೀವವನ್ನು ಅಥವಾ ಆತ್ಮನನ್ನು ಹೋಮಮಾಡುತ್ತಾರೆ. ಬ್ರಹ್ಮನಲ್ಲಿ ಆತ್ಮನನ್ನು ವಿಲೀನಗೊಳಿಸುತ್ತಾರೆ.

**ಯಜ್ಞಂ ಯಜ್ಞೇನೈವ ಉಪಜುಹ್ವತಿ ।**

ಪಾರಮಾರ್ಥಿಕವಾಗಿ ಪರಬ್ರಹ್ಮವೇ ಆಗಿರುವ ಯಜ್ಞವನ್ನು (ಆತ್ಮ ವನ್ನು) ಜ್ಞಾನಿಗಳು ಯಜ್ಞದಿಂದಲೇ (ಆತ್ಮದಿಂದಲೇ) ಹೋಮಮಾಡುತ್ತಾರೆ. ಉಪಾಧಿಯುಕ್ತವಾದ ಆತ್ಮನನ್ನು ನಿರುಪಾಧಿಕವಾದ ಪರಬ್ರಹ್ಮ ಸ್ವರೂಪದಿಂದ ನೋಡುವುದೇ ಯಜ್ಞದಿಂದ ಯಜ್ಞವನ್ನು ಹೋಮಮಾಡು ವುದು.

ಬ್ರಹ್ಮಾತ್ಮಾನಃ–ಏಕತ್ವದರ್ಶನವುಳ್ಳ ಸಂನ್ಯಾಸಿಗಳು ಇಂತಹ ಯಜ್ಞ ಮಾಡುತ್ತಾರೆ. (ಶಂ.ಭಾ.)

ಕೆಲವರು ಕರ್ಮಯೋಗಿಗಳು ದೇವಾರ್ಚನರೂಪವಾದ ಯಜ್ಞವನ್ನು

ಸೇವಿಸುತ್ತಾರೆ. ಅಲ್ಲಿ ನಿಷ್ಠೆಯನ್ನು ಮಾಡುತ್ತಾರೆ. ಕೆಲವರು ಬ್ರಹ್ಮಾಗ್ನಿಯಲ್ಲಿ ಯಜ್ಞವನ್ನು ಯಜ್ಞದಿಂದಲೇ ಹೋಮಮಾಡುತ್ತಾರೆ. ಇಲ್ಲಿ ಯಜ್ಞಶಬ್ದಕ್ಕೆ ಹವಿಸ್ಸು, ಸ್ರುಕ್ ಮುಂತಾದ ಯಜ್ಞಸಾಧನಗಳು ಎಂದು ಅರ್ಥ.

ಬ್ರಹ್ಮಾರ್ಪಣಂ ಬ್ರಹ್ಮ ಹವಿಃ ಎಂಬ ನ್ಯಾಯದಿಂದ ಯಾಗ-ಹೋಮಗಳಲ್ಲಿ ನಿಷ್ಠೆಯನ್ನು ಆಚರಿಸುತ್ತಾರೆ. (ರಾ.ಭಾ.)

ಕೆಲವು ಯೋಗಿಗಳು ದೈವವನ್ನೇ (ಭಗವಂತನನ್ನೇ) ಯಜ್ಞವನ್ನಾಗಿ ಉಪಾಸನೆಮಾಡುತ್ತಾರೆ. ಅಂತಹ ಪರಮಹಂಸರಿಗೆ ಭಗವಂತನನ್ನು– ಭಗವಂತನ ಉಪಾಸನೆಯನ್ನು ಬಿಟ್ಟು ಬೇರೆ ಯಜ್ಞವೇ ಇಲ್ಲ. ಯಜ್ಞಶಬ್ದಕ್ಕೆ ವಿಷ್ಣು ಎಂದು ಅರ್ಥ. ಯಜ್ಞೋ ವೈ ವಿಷ್ಣುಃ । ಮುಂತಾದ ಶ್ರುತಿಗಳು ಇದಕ್ಕೆ ಪ್ರಮಾಣ. ಮತ್ತೆ ಕೆಲವರು ಪ್ರಸಿದ್ಧವಾದ ಯಜ್ಞದಿಂದ ಬ್ರಹ್ಮವೆಂಬ ಅಗ್ನಿಯಲ್ಲಿ ಆ ಯಜ್ಞವನ್ನು ಪೂಜಿಸುತ್ತಾರೆ. ಇಲ್ಲಿ ಮಾನಸಯಜ್ಞವು ನಿರೂಪಿತವಾಗಿದೆ.

**ವಿಷ್ಣುಂ ರುದ್ರೇಣ ಪಶುನಾ ಬ್ರಹ್ಮಾ ಜ್ಯೇಷ್ಠೇನ ಸೂನುನಾ ।**
**ಅಯಜನ್ಮಾನಸೇ ಯಜ್ಞೇ ಪಿತರಂ ಪ್ರಪಿತಾಮಹಃ ॥** (ಮ.ಭಾ.)

**ಓಂ ಶ್ರೋತ್ರಾದೀನೀನ್ದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।**
**ಶಬ್ದಾದೀನ್ವಿಷಯಾನನ್ಯ ಇನ್ದ್ರಿಯಾಗ್ನಿಷು ಜುಹ್ವತಿ ॥೨೬॥**

ಕೆಲವರು ಕಿವಿಯೇ ಮುಂತಾದ ಇಂದ್ರಿಯಗಳನ್ನು ಸಂಯಮಗಳೆಂಬ ಅಗ್ನಿಗಳಲ್ಲಿ ಹೋಮಮಾಡುತ್ತಾರೆ. ಮತ್ತೆ ಕೆಲವರು ಶಬ್ದವೇ ಮುಂತಾದ ವಿಷಯಗಳನ್ನು ಇಂದ್ರಿಯಗಳೆಂಬ ಅಗ್ನಿಗಳಲ್ಲಿ ಹೋಮಮಾಡುತ್ತಾರೆ.

* * *

(ಕೆಲವರು ಯೋಗಿಗಳು ಶ್ರೋತ್ರವೇ ಮೊದಲಾದ ಇಂದ್ರಿಯಗಳನ್ನು ಸಂಯಮವೆಂಬ ಅಗ್ನಿಗಳಲ್ಲಿ ಹೋಮಮಾಡುತ್ತಾರೆ.

ಪ್ರತಿಯೊಂದು ಇಂದ್ರಿಯಗಳನ್ನು ಹೋಮಮಾಡುವುದಕ್ಕೂ ಪ್ರತ್ಯೇಕ ಪ್ರತ್ಯೇಕವಾದ ಅಗ್ನಿಯೇ ಬೇಕಾಗುತ್ತದೆ. ಪ್ರತಿಯೊಂದು ಇಂದ್ರಿಯಗಳ ಸಂಯಮವನ್ನೂ ಮಾಡಬೇಕು. ಪ್ರತಿಯೊಂದು ಇಂದ್ರಿಯಗಳನ್ನೂ ಹತೋಟಿಯಲ್ಲಿಟ್ಟುಕೊಳ್ಳಬೇಕು. ಕಣ್ಣೊಂದನ್ನೇ ಹತೋಟಿಯಲ್ಲಿಟ್ಟು

ಕೊಂಡರೆ ಸಾಲದು. ಅಥವಾ ಕಿವಿಯೊಂದನ್ನೇ ಹತೋಟಿಯಲ್ಲಿಟ್ಟು ಕೊಂಡರೂ ಸಾಲದು. ಪಂಚೇಂದ್ರಿಯಗಳನ್ನೂ ಹತೋಟಿಯಲ್ಲಿಟ್ಟುಕೊಳ್ಳ ಬೇಕು. ಆದುದರಿಂದ ಇವುಗಳನ್ನು ಆಹುತಿಕೊಡಲು ಪಂಚಸಂಯಮಾಗ್ನಿ ಗಳೇ ಬೇಕಾಗುತ್ತವೆ. ಒಂದೇ ಸಂಯಮಾಗ್ನಿಯಲ್ಲಿ ಎಲ್ಲ ಇಂದ್ರಿಯಗಳನ್ನೂ ಹೋಮಮಾಡುವಂತಿಲ್ಲ. ಏಕೆಂದರೆ : ಪ್ರತಿಯೊಂದು ಇಂದ್ರಿಯವೂ ಬಲ ವತ್ತರವಾಗಿದೆ. ಒಂದೊಂದಕ್ಕೂ ಪ್ರತ್ಯೇಕವಾದ ಅಸ್ತಿತ್ವವಿದೆ. ಆದುದರಿಂದ ಒಂದೊಂದಕ್ಕೂ ಪ್ರತ್ಯೇಕವಾದ ಸಂಯಮಾಗ್ನಿಯೇ ಬೇಕಾಗುತ್ತದೆ.

ಮತ್ತೆ ಕೆಲವರು ಶಬ್ದವೇ ಮೊದಲಾದ ವಿಷಯಗಳನ್ನು ಇಂದ್ರಿಯಾಗ್ನಿ ಗಳಲ್ಲಿ ಹೋಮಮಾಡುತ್ತಾರೆ. **ಶ್ರೋತ್ರಾದಿಭಿಃ ಅವಿರುದ್ಧವಿಷಯಗ್ರಹಣಂ ಹೋಮಂ ಮನ್ಯನ್ತೇ ।** ಕಿವಿಯೇ ಮುಂತಾದ ಇಂದ್ರಿಯನಿಷಿದ್ಧವಲ್ಲದ ಯೋಗ್ಯವಿಷಯಗಳ ಸ್ವೀಕಾರವನ್ನು ಹೋಮವೆಂದು ಎಣಿಸುತ್ತಾರೆ–ಎಂದು ಶ್ರೀಶಂಕರರ ಅಭಿಪ್ರಾಯ. ಧರ್ಮಾವಿರುದ್ಧವಾದ ಯೋಗ್ಯವಿಷಯಗಳನ್ನು ಅನುಭವಿಸುವಾಗ ಅದೊಂದು ಬಗೆಯ ಹೋಮವೆಂದೇ ಭಾವಿಸುತ್ತಾರೆ.

ಈ ಶ್ಲೋಕಕ್ಕೆ ಪಾತಂಜಲಯೋಗಸೂತ್ರದ ಪಾರಿಭಾಷಿಕಶಬ್ದಗಳ ಹಿನ್ನೆಲೆಯಲ್ಲಿ ನೀಲಕಂಠರು ಹೀಗೆ ಅರ್ಥಮಾಡಿರುತ್ತಾರೆ :

**ಯಜ್ಞಾನ್ತರಮಾಹ ಶ್ರೋತ್ರಾದೀನೀತಿ । ತತ್ರ ಕಿಂಚಿತ್ ಬಾಹ್ಯಂ ಆಭ್ಯನ್ತರಂ ವಾ ವಿಶೇಷಮುಪಾದಾಯ ತತ್ರ ಚೇತಸೋ ನಿಯಮನಂ ಕ್ರಿಯತೇ । ತೇ ಚ ಸಂಯಮಾಃ ಅನೇಕವಿಷಯತ್ವಾದನೇಕೇ ಪೃಥಕ್ಫಲಾಶ್ಚ । ತಥಾ ಚ ಯೋಗಸೂತ್ರಕೃತಾ ಪ್ರೋಕ್ತಂ ಭುವನಜ್ಞಾನಂ ಸೂರ್ಯಸಂಯಮಾತ್ । ಚನ್ದ್ರೇ ತಾರಾವ್ಯೂಹಜ್ಞಾನಂ । ಕಂಠಕೂಪೇ ಕ್ಷುತ್ಪಿಪಾಸಾನಿವೃತ್ತಿಃ ಇತ್ಯಾದಿ...**

ಹೊರಗಡೆಯ ಅಥವಾ ಒಳಗಡೆಯ ವಿಶೇಷವನ್ನು ತೆಗೆದುಕೊಂಡು ಅದರ ಮೇಲೆ ಮನಸ್ಸಿನ ಸಂಯಮವು ಮಾಡಲ್ಪಡುತ್ತದೆ. ಈ ಸಂಯಮ ಗಳು ಅನೇಕವಿಷಯಗಳ ಮೇಲೆ ಮಾಡುವುದಾಗಿರುವುದರಿಂದ ಅನೇಕ ವಾಗಿರುತ್ತವೆ ಮತ್ತು ಒಂದೊಂದರ ಮೇಲೂ ಮಾಡುವ ಸಂಯಮವೂ ಸಹ ಪ್ರತ್ಯೇಕ-ಪ್ರತ್ಯೇಕಫಲಗಳನ್ನು ಕೊಡುತ್ತವೆ. ಯೋಗಸೂತ್ರಕಾರರಾದ

ಪತಂಜಲಿಗಳು ಹೀಗೆ ಹೇಳಿದ್ದಾರೆ : ಸೂರ್ಯನ ಮೇಲೆ ಸಂಯಮಮಾಡುವುದರಿಂದ ಭುವನದ ಜ್ಞಾನವಾಗುತ್ತದೆ. ಚಂದ್ರನ ಮೇಲೆ ಸಂಯಮಮಾಡಿದಾಗ ತಾರಾವ್ಯೂಹದ ಜ್ಞಾನವಾಗುತ್ತದೆ. ಕಂಠಕೂಪದ ಮೇಲೆ ಸಂಯಮಮಾಡಿದಾಗ ಹಸಿವು-ಬಾಯಾರಿಕೆಗಳು ಹೋಗುತ್ತವೆ. ಹೀಗೆ ಯೋಗಸೂತ್ರಕಾರರು ಅನೇಕವಿಧವಾದ ಸಂಯಮಗಳನ್ನು ಹೇಳಿದ್ದಾರೆ.

ಕೆಲವರು ಕಿವಿಯೇ ಮುಂತಾದ ಇಂದ್ರಿಯಗಳ ಸಂಯಮಕ್ಕೆ ಪ್ರಯತ್ನಿಸುತ್ತಾರೆ. ಅಗ್ನಿಯಲ್ಲಿ ಹಾಕಿದ ಹವಿಸ್ಸು ಭಸ್ಮವಾಗುವಂತೆ ಸಂಯಮಕ್ಕೆ ಒಳಪಟ್ಟ ಕಿವಿ ಮುಂತಾದುವು ವ್ಯಾಪಾರರಹಿತವಾಗುವುದರಿಂದ ಸಂಯಮವನ್ನು ಅಗ್ನಿ ಎಂದು ಹೇಳಿದ್ದಾರೆ.

ಮತ್ತೆ ಕೆಲವು ಯೋಗಿಗಳು ಇಂದ್ರಿಯಗಳನ್ನು ಅವುಗಳ ಶಬ್ದವೇ ಮುಂತಾದ ವಿಷಯಗಳಲ್ಲಿ ತೊಡಗದಂತೆ ನಿವಾರಿಸಲು ಪ್ರಯತ್ನಿಸುತ್ತಾರೆ.)

(ರಾ.ಭಾ.)

**ಓಂ ಸರ್ವಾಣೀನ್ದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।**
**ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥೨೭॥**

ಇನ್ನೂ ಕೆಲವರು ಎಲ್ಲ ಇಂದ್ರಿಯಗಳನ್ನೂ ಮತ್ತು ಎಲ್ಲ ಪ್ರಾಣಕರ್ಮಗಳನ್ನೂ ಜ್ಞಾನದಿಂದ ಹೊತ್ತಿಸಿದ ಆತ್ಮಸಂಯಮವೆಂಬ ಯೋಗಾಗ್ನಿಯಲ್ಲಿ ಹೋಮಮಾಡುತ್ತಾರೆ.

* * *

(ಕೆಲವು ಮುನಿಗಳು ಎಲ್ಲ ಇಂದ್ರಿಯಕರ್ಮಗಳನ್ನೂ ಜ್ಞಾನದಿಂದ ಪ್ರದೀಪ್ತವಾದ ಆತ್ಮಸಂಯಮವೆಂಬ ಯೋಗಾಗ್ನಿಯಲ್ಲಿ ಹೋಮಮಾಡುತ್ತಾರೆ. ಆತ್ಮಸಂಯಮಯೋಗವೆಂದರೆ ಸಮಾಧಿಯೋಗ. ಇದಕ್ಕೆ ಯಜ್ಞರೂಪವನ್ನು ಕೊಟ್ಟಿರುವುದರಿಂದ 'ಆತ್ಮಸಂಯಮಯೋಗಾಗ್ನಿ' ಎಂದು ಹೇಳಿದ್ದಾರೆ. ಈ ಅಗ್ನಿಯು ಜ್ಞಾನದಿಂದಲೇ ಪ್ರದೀಪ್ತವಾಗಿದೆ. ಜ್ಞಾನದಿಂದ ಇಂದ್ರಿಯವಿಷಯಗಳನ್ನು–ಇಂದ್ರಿಯಗಳಲ್ಲೂ, ಇಂದ್ರಿಯಗಳನ್ನು–ಮನಸ್ಸಿನಲ್ಲೂ, ಮನಸ್ಸನ್ನು–ಬುದ್ಧಿಯಲ್ಲೂ ಮತ್ತು ಬುದ್ಧಿಯನ್ನು–ಆತ್ಮನಲ್ಲೂ ಲೀನಗೊಳಿಸುತ್ತಾರೆ. ಹೀಗೆ ಲೀನವಾಗಿರುವುದನ್ನೇ ಆತ್ಮ

ಸಂಯಮಯೋಗಾಗ್ನಿಯಲ್ಲಿ ಸರ್ವೇಂದ್ರಿಯಕರ್ಮಗಳನ್ನೂ ಹೋಮ ಮಾಡುತ್ತಾರೆ–ಎಂದು ನಿರೂಪಿಸಲಾಗಿದೆ. ಪ್ರಾಣಕರ್ಮಗಳನ್ನು ಆತ್ಮ ಸಂಯಮಯೋಗಾಗ್ನಿಯಲ್ಲಿ ಬೇರೆ ಕೆಲವರು ಹೋಮಮಾಡುತ್ತಾರೆ– ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಇದರಿಂದ ಅಷ್ಟಾಂಗಯೋಗದ ಮೂಲಕವೂ ಆತ್ಮದರ್ಶನವಾಗುವುದೆಂಬುದನ್ನು ಶ್ರೀಕೃಷ್ಣನು ಸೂಚಿಸಿದ್ದಾನೆ.

ಪ್ರಾಣಕರ್ಮಗಳೆಂದರೆ ಪ್ರಾಣವಾಯುವಿನಿಂದ ಆಗುವ ಕರ್ಮಗಳು. ಪ್ರಾಣಾಯಾಮ-ಪ್ರತ್ಯಾಹಾರ-ಧ್ಯಾನ-ಧಾರಣಾದಿಗಳು.

ಸೂತಸಂಹಿತೆಯ ಜ್ಞಾನಕಾಂಡದಲ್ಲಿ ಈ ವಿಷಯವನ್ನು ಸ್ಪಷ್ಟವಾಗಿ ಹೇಳಿದ್ದಾರೆ :

**ಯೋಗಾಭ್ಯಾಸರತೋ ನಿತ್ಯಂ ಸ್ವಧರ್ಮನಿರತಶ್ಚ ಯಃ ।**
**ಪ್ರಾಣಸಂಯಮನೇನೈವ ಜ್ಞಾನಾನ್ಮುಕ್ತೋ ಭವಿಷ್ಯತಿ ॥**

ಅ ೧೬-ಶ್ಲೋ. ೧೮.

ಯೋಗಾಭ್ಯಾಸನಿರತನಾಗಿಯೂ, ಸ್ವಧರ್ಮನಿಷ್ಠನಾಗಿಯೂ ಇರತಕ್ಕವನಿಗೆ ಪ್ರಾಣಸಂಯಮನದಿಂದಲೇ ಜ್ಞಾನದ್ವಾರಾ ಮೋಕ್ಷವಾಗುತ್ತದೆ.

**ಜುಹ್ವತಿ** ಆಜ್ಯದ ಸ್ಥಾನದಲ್ಲಿರುವ ಜ್ಞಾನದಿಂದ ಬೆಳಗಿಸಲ್ಪಟ್ಟ (ವಿವೇಕಜ್ಞಾನದಿಂದ ಉಜ್ಜ್ವಲಗೊಳಿಸಲ್ಪಟ್ಟ) ಆತ್ಮಸಂಯಮವೆಂಬ ಯೋಗಾಗ್ನಿಯಲ್ಲಿ ಆಧ್ಯಾತ್ಮಿಕವೆಂಬ ವಾಯುವಿನ ಸಂಕೋಚ, ಹರಡುವಿಕೆ–ಮುಂತಾದ ಕರ್ಮಗಳನ್ನು ಲಯಗೊಳಿಸುತ್ತಾರೆ. (ಶಂ.ಭಾ.)

ಕೆಲವರು ಜ್ಞಾನದಿಂದ ಉಜ್ಜ್ವಲಿತವಾದ ಮನಸ್ಸಂಯಮವೆಂಬ ಯೋಗಾಗ್ನಿಯಲ್ಲಿ ಇಂದ್ರಿಯಕರ್ಮಗಳನ್ನು (ದರ್ಶನ, ಸ್ಪರ್ಶನ, ವಚನ, ಆದಾನ ಮುಂತಾದುವುಗಳನ್ನು ) ಹೋಮಮಾಡುತ್ತಾರೆ. ಇಂದ್ರಿಯಗಳ ಮತ್ತು ಪ್ರಾಣಗಳ ಕರ್ಮಗಳಲ್ಲಿ ಮನಸ್ಸು ತೊಡಗದಂತೆ ನಿವಾರಿಸಲು ಪ್ರಯತ್ನಿಸುತ್ತಾರೆ. (ರಾ.ಭಾ.)

ಮಧ್ವಾಚಾರ್ಯರ ಭಾಷ್ಯದಲ್ಲೂ ಕೂಡ ಈ ಶ್ಲೋಕದಲ್ಲಿರುವ ಆತ್ಮಾ ಎಂಬ ಪದಕ್ಕೆ ಮನಸ್ಸು ಎಂದೇ ಅರ್ಥಮಾಡಿದ್ದಾರೆ. **ಆತ್ಮಾ.....ಯೋಗಾಗ್ನೌ** ಎಂಬುದಕ್ಕೆ ಆತ್ಮಸಂಯಮವೆಂಬ ಉಪಾಯರೂಪವಾದ ಅಗ್ನಿಯಲ್ಲಿ.

**ಆತ್ಮಸಂಯಮಾಖ್ಯೋಪಾಯಾಗ್ನೌ** ಎಂದು ಅವರ ಭಾಷ್ಯ.)

**ಓಂ ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।**
**ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥೨೮॥**

ಕಠೋರವ್ರತನಿಷ್ಠರಾದ ಕೆಲವರು ಯತಿಗಳು ದ್ರವ್ಯಯಜ್ಞವನ್ನು ಮಾಡುವರು. ಕೆಲವರು ತಪೋಯಜ್ಞವನ್ನು ಮಾಡುವರು. ಮತ್ತೆ ಕೆಲವರು ಯೋಗಯಜ್ಞವನ್ನು ಮಾಡುವರು. ಇನ್ನೂ ಕೆಲವರು ಸ್ವಾಧ್ಯಾಯ ಯಜ್ಞ-ಜ್ಞಾನಯಜ್ಞಗಳನ್ನು ಮಾಡುವರು.

* * *

(ದ್ರವ್ಯಯಜ್ಞಗಳೆಂದರೆ ದ್ರವ್ಯದಿಂದ ಆಗತಕ್ಕ ಯಜ್ಞಗಳು. ದೈವ ಯಜ್ಞಗಳಾದ ದರ್ಶ-ಪೂರ್ಣಮಾಸಾದಿಗಳೂ ಆಗಬಹುದು. ಇವುಗಳೂ ಸಹ ದ್ರವ್ಯದಿಂದಲೇ ಆಗತಕ್ಕುವುಗಳು. ಆದರೆ ದ್ರವ್ಯದಿಂದ ಇನ್ನೂ ಅನೇಕ ಸತ್ಕಾರ್ಯಗಳಾಗುತ್ತವೆ. ಇಷ್ಟಾ-ಪೂರ್ತಗಳು, ತೀರ್ಥಯಾತ್ರೆ, ಸತ್ಪಾತ್ರದಲ್ಲಿ ದಾನ–ಇವುಗಳೂ ಸಹ ದ್ರವ್ಯಯಜ್ಞಗಳೇ ಆಗುತ್ತವೆ.

ತಪಸ್ಸು ಎಂಬ ಶಬ್ದಕ್ಕೆ :-

೧) ಮನಸ್ಸಿನ ಮತ್ತು ಇಂದ್ರಿಯಗಳ ಏಕಾಗ್ರತೆ. **ಮನಸಶ್ಚೇನ್ದ್ರಿಯಾಣಾಂ ಚ ಐಕಾಗ್ರ್ಯಂ ಪರಮಂ ತಪಃ**

೨) ಆಲೋಚನೆ, ಸಂಕಲ್ಪ , **ತಪ**ಆಲೋಚನೇ ಎಂಬ ಧಾತು. ಉದಾ : ಪರಮಾತ್ಮನ ತಪಸ್ಸು. ಸ **ತಪೋऽತಪ್ಯತ । ಸ ತಪಸ್ತಪ್ತ್ವಾ.**

೩) ಗೀತೆಯ ೧೮ನೆಯ ಅಧ್ಯಾಯದಲ್ಲಿ ಶಾರೀರಿಕ, ವಾಚಿಕ ಮತ್ತು ಮಾನಸಿಕ–ಎಂದು ಮೂರು ವಿಧವಾದ ತಪಸ್ಸುಗಳನ್ನು ಹೇಳಿದ್ದಾರೆ. ಜ್ಞಾನ ಯಜ್ಞ, ಸ್ವಾಧ್ಯಾಯಯಜ್ಞಯೋಗಗಳನ್ನು ಪ್ರತ್ಯೇಕವಾಗಿ ಹೇಳಿರುವುದರಿಂದ ಇಲ್ಲಿ ತಪೋಯಜ್ಞ ಎಂಬಲ್ಲಿ ಶಾರೀರಕವಾದ ತಪಸ್ಸು : ಕೃಚ್ಛ್ರ-ಚಾಂದ್ರಾಯಣ-ಉಪವಾಸ ಇತ್ಯಾದಿಗಳು ಎಂಬ ಅರ್ಥವನ್ನು ತೆಗೆದುಕೊಳ್ಳಬಹುದು.

ಯೋಗಯಜ್ಞರು ಕೆಲವರು. ಯೋಗಶಾಸ್ತ್ರಕ್ಕೂ ಶ್ರೀಕೃಷ್ಣನು ಯಜ್ಞದ ಹೆಸರನ್ನು ಕೊಟ್ಟಿದ್ದಾನೆ. ಇಲ್ಲಿ ಯೋಗವೆಂದರೆ ಅಷ್ಟಾಂಗಯೋಗ.

**ಯೋಗಶ್ಚಿತ್ತವೃತ್ತಿನಿರೋಧಃ ॥೨॥**

ಯೋಗವೆಂದರೆ ಚಿತ್ತದ ವೃತ್ತಿಗಳ (ವ್ಯಾಪಾರಗಳ) ತಡೆಯುವಿಕೆ.

**ಯಮನಿಯಮಾಸನಪ್ರಾಣಾಯಾಮಪ್ರತ್ಯಾಹಾರಧಾರಣಧ್ಯಾನ ಸಮಾಧಯೋಽಷ್ಟಾವಙ್ಗಾನಿ.**

ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ–ಇವು ಯೋಗದ ಅಷ್ಟಾಂಗಗಳು.

**ಅಹಿಂಸಾ ಸತ್ಯಾಸ್ತೇಯಬ್ರಹ್ಮಚರ್ಯಾಪರಿಗ್ರಹಾ ಯಮಾಃ ॥೩೦॥**

ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ–ಇವುಗಳು ಯಮ ಎನಿಸುತ್ತವೆ.

**ಶೌಚಸನ್ತೋಷತಪಃಸ್ವಾಧ್ಯಾಯೇಶ್ವರಪ್ರಣಿಧಾನಾನಿ ನಿಯಮಾಃ ॥**

ಶೌಚ, ಸಂತೋಷ, ತಪಸ್ಸು, ಸ್ವಾಧ್ಯಾಯ ಮತ್ತು ಈಶ್ವರನಲ್ಲಿ ಭಕ್ತಿ–ಇವು ನಿಯಮಗಳು.

ಯಮ-ನಿಯಮಗಳನ್ನು ಎಲ್ಲರೂ ಅನುಸರಿಸಲೇಬೇಕಾಗಿರುವುದರಿಂದ ಯೋಗಿಗೆ ಇದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಆದುದರಿಂದ ಶ್ರೀಶಂಕರರು ಈ ಎರಡನ್ನು ಬಿಟ್ಟು ಯೋಗವು ಷಡಂಗವೆಂದೇ ಹೇಳುವರು.

**ತತ್ರ ಸ್ಥಿರಸುಖಮಾಸನಮ್ ॥೪೬॥**

ಸ್ಥಿರವಾಗಿ ಸುಖವಾಗಿರುವುದೇ ಆಸನ.

**ತದ್ಯಥಾ ಪದ್ಮಾಸನಂ ವೀರಾಸನಂ ಭದ್ರಾಸನಂ ಸ್ವಸ್ತಿಕಂ ದಣ್ಡಾಸನಂ ಸೋಪಾಶ್ರಯಂ ಪರ್ಯಙ್ಕಂ ಕ್ರೌಞ್ಚನಿಷದನಂ ಹಸ್ತಿನಿಷದನಂ ಉಷ್ಟ್ರನಿಷದನಂ ಸಮಸಂಸ್ಥಾನಂ ಸ್ಥಿರಸುಖಂ ಯಥಾಸುಖಂ ಚೇತ್ಯೇವಮಾದೀನಿ.**

ಪದ್ಮಾಸನ, ವೀರಾಸನ, ಭದ್ರಾಸನ, ಸ್ವಸ್ತಿಕ, ದಂಡಾಸನ, ಸೋಪಾಶ್ರಯ (ಆಶ್ರಯದೊಂದಿಗೆ), ಪರ್ಯಂಕಾಸನ (ಮಲಗಿಕೊಂಡು ಮೊಣಕಾಲವರೆಗೂ ಕೈಗಳನ್ನೂ ಚಾಚುವುದು), ಕ್ರೌಂಚನಿಷದನ (ಕ್ರೌಂಚಪಕ್ಷಿಯಂತೆ ಕುಳಿತುಕೊಳ್ಳುವುದು), ಹಸ್ತಿನಿಷದನ (ಆನೆಯ ಹಾಗೆ ಕುಳಿತುಕೊಳ್ಳುವುದು), ಉಷ್ಟ್ರನಿಷದನ (ಒಂಟೆಯ ಹಾಗೆ ಕುಳಿತುಕೊಳ್ಳುವುದು),

ಸಮಸಂಸ್ಥಾನ (ವಿನ್ಯಾಸಗಳಲ್ಲಿ ಸಮತೆ) ಮತ್ತು ಸುಖವಾಗಿರುವ ಸ್ಥಿರ ಸುಖಾಸನ–ಇವೇ ಮೊದಲಾದುವು ಧ್ಯಾನಾದಿಗಳಿಗೆ ಆಸನಗಳು.

**ತಸ್ಮಿನ್ ಸತಿ ಶ್ವಾಸಪ್ರಶ್ವಾಸಯೋರ್ಗತಿವಿಚ್ಛೇದಃ ಪ್ರಾಣಾಯಾಮಃ ||**

ಶ್ವಾಸ-ಪ್ರಶ್ವಾಸಗಳ ಕ್ರಿಯೆಗಳನ್ನು ನಿಲ್ಲಿಸುವುದೇ ಪ್ರಾಣಾಯಾಮ.

**ಸ್ವವಿಷಯಾಸಂಪ್ರಯೋಗೇ ಚಿತ್ತಸ್ಯ ಸ್ವರೂಪಾನುಕಾರ**
**ಇತೀನ್ದ್ರಿಯಾಣಾಂ ಪ್ರತ್ಯಾಹಾರಃ ||೫೪||**

ಇಂದ್ರಿಯಗಳು ಸ್ವವಿಷಯಗಳಲ್ಲಿ ಸಂಸ್ಪರ್ಶವಿಲ್ಲದಿರುವಾಗ ನಿರುದ್ಧ ವಾದ ಮನಸ್ಸನ್ನೇ ಹೋಲುತ್ತವೆ. ಇದೇ ಪ್ರತ್ಯಾಹಾರ.

**ದೇಶಬನ್ಧಶ್ಚಿತ್ತಸ್ಯ ಧಾರಣಾ ||೧||**

ಒಂದು ನಿಷ್ಕೃಷ್ಟವಾದ ಸ್ಥಾನದ ಮೇಲೆ ಚಿತ್ತವನ್ನು ನಿಲ್ಲಿಸುವುದು ಧಾರಣೆ.

**ತತ್ರ ಪ್ರತ್ಯಯೈಕತಾನತಾ ಧ್ಯಾನಂ ||೨||**

ಅದರ ಮೇಲೆ ಪ್ರತ್ಯಯವು ನಿರಂತರವಾಗಿ ಹರಿಯುವಿಕೆಯೇ ಧ್ಯಾನ.

**ತದೇವಾರ್ಥಮಾತ್ರಧೀರ್ಭಾಸಂ ಸ್ವರೂಪಶೂನ್ಯಮಿವ ಸಮಾಧಿಃ ||೩||**

ಅದೇ ಧ್ಯಾನವು ನಿರ್ದಿಷ್ಟವಸ್ತುವಿನಂತೆ ಚಿತ್ತದಲ್ಲಿ ಹೊಳೆಯುತ್ತಾ ಸ್ವರೂಪಶೂನ್ಯವಾದ ಹಾಗೆ ಆದಾಗ ಅದು ಸಮಾಧಿ.

**ತ್ರಯಮೇಕತ್ರ ಸಂಯಮಃ ||೪||**

ಧ್ಯಾನ, ಧಾರಣ ಮತ್ತು ಸಮಾಧಿ–ಈ ಮೂರೂ ಒಂದೇ ವಿಷಯದಲ್ಲಿ ಕೂಡಿದಾಗ ಸಂಯಮವೆನಿಸುತ್ತದೆ. ಎಂದರೆ ಈ ಮೂರೂ ಒಂದೇ ವಿಷಯ ದಲ್ಲಿ ಸಾಧನವಾಗದಿದ್ದಾಗ ಸಂಯಮವೆನಿಸಿಕೊಳ್ಳುತ್ತದೆ. ಈ ಮೂರರ ತಾಂತ್ರಿಕೀಪರಿಭಾಷೆಯು 'ಸಂಯಮ'

ಇದು ಯೋಗದಲ್ಲಿರುವ ಅಷ್ಟಾಂಗಗಳ ಸೂಕ್ಷ್ಮಪರಿಚಯ.

ಈ ಯೋಗವೂ ಸಹ ಒಂದು ಯಜ್ಞ ಎನ್ನುತ್ತಾನೆ ಶ್ರೀಕೃಷ್ಣ.

ಕೆಲವರು ಯತಿಗಳು ಸ್ವಾಧ್ಯಾಯಯಜ್ಞರೂ ಆಗಿರುತ್ತಾರೆ. ಸ್ವಾಧ್ಯಾಯವೆಂದರೆ ವೇದ-ವೇದಾಂಗಗಳ ವಿಧಿಪೂರ್ವಕವಾದ ಅಧ್ಯಯನ ಮತ್ತು ಅಧ್ಯಾಪನ. ಇದನ್ನೇ ಕೆಲವರು ಮಾಡುತ್ತಿರುತ್ತಾರೆ.

ತೈತ್ತಿರೀಯೋಪನಿಷತ್ತಿನಲ್ಲಿ–ಸ್ವಾಧ್ಯಾಯಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ। ತದ್ಧಿ ತಪಸ್ತದ್ಧಿ ತಪಃ 'ಸ್ವಾಧ್ಯಾಯ ಮತ್ತು ಪ್ರವಚನ ಇದೇ ತಪಸ್ಸು ; ಇದೇ ತಪಸ್ಸು' ಎಂದು ಮೌದ್ಗಲ್ಯರಾದ ನಾಕಮಹರ್ಷಿಗಳು ಒತ್ತಿಹೇಳಿದ್ದಾರೆ. ಆದುದರಿಂದ ಸ್ವಾಧ್ಯಾಯವೂ ಸಹ ಒಂದು ಯಜ್ಞವೇ ಆಗಿರುತ್ತದೆ.

ಜ್ಞಾನಯಜ್ಞವೆಂದರೆ ಬ್ರಹ್ಮಜ್ಞಾನದ ಅನುಸಂಧಾನ. ಇದಕ್ಕಿಂತಲೂ ಪವಿತ್ರವಾದುದು ಬೇರೆ ಯಾವುದೂ ಇಲ್ಲ.

**ನಾಸ್ತಿ ಜ್ಞಾನಾತ್ಪರಂ ಕಿಂಚಿತ್ಪವಿತ್ರಂ ಪಾಪನಾಶನಮ್ ।**
**ತದಭ್ಯಾಸಾದೃತೇ ನಾಸ್ತಿ ಸಂಸಾರಚ್ಛೇದಕಾರಣಮ್ ॥೬೭॥**

ಸೂತಸಂಹಿತೆ-ಜ್ಞಾನಯೋಗಖಂಡ

ಪವಿತ್ರವೂ ಪಾಪನಾಶಕವೂ ಆದ ಆತ್ಮಜ್ಞಾನಕ್ಕಿಂತಲೂ ಶ್ರೇಷ್ಠವಾದುದು ಮತ್ತೊಂದಿಲ್ಲ. ಸಂಸಾರಬಂಧನದ ಛೇದಕ್ಕೆ ಜ್ಞಾನಾಭ್ಯಾಸದ ಹೊರತಾಗಿ ಬೇರಾವ ಮಾರ್ಗವೂ ಇಲ್ಲ.

ಯತಯಃ ಎಂದರೆ ರೂಢಿಯಾಗಿರುವ ಅರ್ಥದಲ್ಲಿ ಸಂನ್ಯಾಸಿಗಳು ಎಂದಾಗುತ್ತದೆ. ಆದರೆ ಮೇಲೆ ಹೇಳಿರುವ ಯಜ್ಞಗಳನ್ನು ಗೃಹಸ್ಥರೂ ಮಾಡುತ್ತಾರೆ. ವಾನಪ್ರಸ್ಥರೂ ಮಾಡುತ್ತಾರೆ. ಆದುದರಿಂದ ಇಲ್ಲಿ ಯತಯಃ ಎಂಬುದಕ್ಕೆ ಪ್ರಯತ್ನಶೀಲರು ಎಂದು ಅರ್ಥಮಾಡುವುದು ಸಾಧುವಾಗಿ ಕಾಣುತ್ತದೆ.

ಶ್ರೀಶಂಕರರ ಭಾಷ್ಯದಲ್ಲಿ ಜ್ಞಾನಯಜ್ಞ ಎಂದರೆ ಶಾಸ್ತ್ರಾರ್ಥದ ಪರಿಜ್ಞಾನ.

ಶ್ರೀರಾಮಾನುಜರು ದ್ರವ್ಯಯಜ್ಞ ಎಂದರೆ ನ್ಯಾಯದಿಂದ ದ್ರವ್ಯವನ್ನು ಸಂಪಾದಿಸಿ ದೇವತಾರ್ಚನೆ, ದಾನ, ಹೋಮ–ಇವುಗಳಲ್ಲಿ ತೊಡಗುವುದು ಎಂದಿದ್ದಾರೆ.

ತಪೋಯಜ್ಞ ಎಂದರೆ ಕೃಚ್ಛ್ರ-ಚಾಂದ್ರಾಯಣ-ಉಪವಾಸ ಇತ್ಯಾದಿ.

ಯೋಗಯಜ್ಞ ಎಂದರೆ ಪುಣ್ಯತೀರ್ಥಗಳನ್ನೂ ಮತ್ತು ಪುಣ್ಯಸ್ಥಾನ ಗಳನ್ನೂ ಸೇವಿಸುವುದರಲ್ಲಿ ನಿಷ್ಠೆ.

ಸ್ವಾಧ್ಯಾಯಜ್ಞಾನಯಜ್ಞ ಎಂದರೆ ಅಧ್ಯಯನ ಮತ್ತು ಅದರ ಅರ್ಥ ಜ್ಞಾನದ ಅಭ್ಯಾಸ ಎಂದೂ ಶ್ರೀರಾಮಾನುಜರು ವಿವರಿಸಿದ್ದಾರೆ.

ಶ್ರೀಮಧ್ವರ ಭಾಷ್ಯದಲ್ಲಿ **ತಪೋಯಜ್ಞಃ** ಎಂದರೆ ತಪಸ್ಸನ್ನು ಪರಮೇಶ್ವರಾರ್ಪಣಬುದ್ಧಿಯಿಂದ ಪರಮಾತ್ಮನಲ್ಲಿ ಹೋಮಮಾಡುವುದು.

(ಈ ತಪಸ್ಸೇ ಹವಿಸ್ಸು. ಅದನ್ನು ಬ್ರಹ್ಮಾಗ್ನಿಯಲ್ಲಿ ಹೋಮಮಾಡುತ್ತಾನೆ. ಬ್ರಹ್ಮನ ಪೂಜೆಗೋಸ್ಕರವೇ ಈ ಹೋಮ.)

**ಓಂ ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ ।**
**ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ॥೨೯॥**

**ಓಂ ಅಪರೇ ನಿಯತಾಹಾರಾಃ ಪ್ರಾಣಾನ್ಪ್ರಾಣೇಷು ಜುಹ್ವತಿ ।**
**ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ॥೩೦॥**

ಕೆಲವರು ಪ್ರಾಣದಲ್ಲಿ ಅಪಾನವನ್ನು ಹೋಮಮಾಡುತ್ತಾರೆ. ಕೆಲವರು ಅಪಾನದಲ್ಲಿ ಪ್ರಾಣವನ್ನು ಹೋಮಮಾಡುತ್ತಾರೆ. ಮತ್ತೆ ಕೆಲವರು ಪ್ರಾಣಾಪಾನಗಳ ಗತಿಯನ್ನು ಸ್ತಂಭನಮಾಡಿ ಪ್ರಾಣಾಯಾಮದಲ್ಲಿ ನಿಷ್ಠರಾಗಿರುತ್ತಾರೆ. ಇನ್ನೂ ಕೆಲವರು ಪರಿಮಿತವಾದ ಆಹಾರವನ್ನು ಸೇವಿಸುತ್ತಾ ಪ್ರಾಣಗಳನ್ನು ಪ್ರಾಣಗಳಲ್ಲಿಯೇ ಹೋಮಮಾಡುತ್ತಿರುವರು. ಇವರೆಲ್ಲರೂ ಯಜ್ಞವನ್ನು ಬಲ್ಲವರು. ಯಜ್ಞಗಳಿಂದ ಕಲ್ಮಷವನ್ನು ಕಳೆದುಕೊಂಡವರು.

* * *

(ಪ್ರಾಣಾಯಾಮಪರಾಯಣರು ಪ್ರಾಣಾಗ್ನಿಹೋತ್ರದ ಈ ವಿಷಯವನ್ನು ವಿವರಿಸಬಹುದೇ ಹೊರತು ಬೇರೆಯವರಿಂದ ಇದರ ರಹಸ್ಯವನ್ನು ವಿವರಿಸುವ ಸಾಧ್ಯತೆಯಿಲ್ಲ. ಸ್ಥೂಲವಾಗಿ ಹೀಗೆ ವಿವರಿಸಬಹುದಾಗಿದೆ.

ಪ್ರಾಣಗಳ ಆಯಾಮ ನಿಯಮನ ; ತಡೆಯುವಿಕೆ. ಇದಕ್ಕೆ ಪ್ರಾಣಾಯಾಮವೆಂದು ಹೆಸರು.

ಪ್ರಾಣವಾಯುಗಳು ಐದು. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ.

ಪ್ರಾಣವು ಹೃದಯದಲ್ಲಿಯೂ, ಅಪಾನವು ಗುದದಲ್ಲಿಯೂ, ಸಮಾನವು ನಾಭಿಯಲ್ಲಿಯೂ, ಉದಾನವು ಕಂಠದಲ್ಲಿಯೂ ಇವೆ. ವ್ಯಾನವು ಸರ್ವ ಶರೀರವನ್ನೂ ವ್ಯಾಪಿಸಿದೆ.

**'ಅಪಾನೇ ಜುಹ್ವತಿ ಪ್ರಾಣಂ'** ಕೆಲವು ಯೋಗಿಗಳು ಅಪಾನ ವಾಯುವಿನಲ್ಲಿ ಪ್ರಾಣವಾಯುವನ್ನು ಹೋಮಮಾಡುತ್ತಾರೆ. ಉಸಿರನ್ನು ಮೂಗಿನ ಮೂಲಕವಾಗಿ ಒಳಕ್ಕೆ ಎಳೆದುಕೊಳ್ಳುವುದಕ್ಕೆ ಶ್ವಾಸವೆಂದೂ, ಹೊರಕ್ಕೆ ಬಿಡುವುದಕ್ಕೆ ನಿಶ್ವಾಸ ಅಥವಾ ಪ್ರಶ್ವಾಸ ಎಂದೂ ಹೆಸರು. ಮೂಗಿನ ಮೂಲಕ ಒಳಕ್ಕೆ ಎಳೆದುಕೊಂಡ ಶ್ವಾಸವು ಅಪಾನವಾಯುವಿರುವ ಸ್ಥಳವನ್ನು (ಗುದಪ್ರದೇಶವನ್ನು ) ಮುಟ್ಟುವುದರಿಂದ ಇದಕ್ಕೆ ಅಪಾನಗತಿಯೆಂದೂ, ಪ್ರಶ್ವಾಸವಾಯುವು ಹೃದಯದಲ್ಲಿರುವ ಪ್ರಾಣವಾಯುವನ್ನು ಮುಟ್ಟಿ ಹೊರಕ್ಕೆ ಬರುವುದರಿಂದ ಇದಕ್ಕೆ ಪ್ರಾಣಗತಿಯೆಂದೂ ಹೆಸರು.

ಮೇಲೆ ಹೇಳಿರುವ ಪ್ರಾಣಾಯಾಮಯಜ್ಞದಲ್ಲಿ, ಅಗ್ನಿಯ ಸ್ಥಾನದಲ್ಲಿ ರುವ ಅಪಾನವಾಯುವಿನಲ್ಲಿ ಹವಿಸ್ಸಿನ ಸ್ಥಾನದಲ್ಲಿರುವ ಪ್ರಾಣವಾಯುವನ್ನು ಹೋಮಮಾಡುತ್ತಾರೆ. ಇದನ್ನು ಪೂರಕಪ್ರಾಣಾಯಾಮವೆಂದೂ ಕರೆಯು ತ್ತಾರೆ. ಹೊರಗಿನ ಗಾಳಿಯು ಶ್ವಾಸರೂಪವಾಗಿ ಒಳಗೆ ಹೋದನಂತರ ಅದು ಹೃದಯದಲ್ಲಿರುವ ಪ್ರಾಣವಾಯುವಿನೊಡನೆ ಸೇರಿ ನಾಭಿಯ ಪ್ರದೇಶಕ್ಕೆ ಹೋಗಿ ಅಪಾನವಾಯುವಿನಲ್ಲಿ ವಿಲೀನಗೊಳ್ಳುತ್ತದೆ. ಹೊರಗಿನ ಗಾಳಿಯು ಶರೀರದಲ್ಲಿಯೇ ನಿರೋಧಿಸಲ್ಪಡುವುದರಿಂದ ಇದನ್ನು ಆಭ್ಯಂತರಕುಂಭಕ ವೆಂದೂ ಕರೆಯುತ್ತಾರೆ.

**ಪ್ರಾಣೇಽಪಾನಂ ತಥಾಪರೇ :** ಕೆಲವರು ಪ್ರಾಣಾಯಾಮಯಾಜ್ಞಿಕರು ಅಗ್ನಿಯ ಸ್ಥಾನದಲ್ಲಿರುವ ಪ್ರಾಣವಾಯುವಿನಲ್ಲಿ ಹವಿಸ್ಸಿನ ಸ್ಥಾನದಲ್ಲಿರುವ ಅಪಾನವಾಯುವನ್ನು ಹೋಮಮಾಡುತ್ತಾರೆ. ಇದನ್ನು ಯೋಗಿಗಳು ರೇಚಕ ಪ್ರಾಣಾಯಾಮವೆನ್ನುತ್ತಾರೆ. ರೇಚಕಪ್ರಾಣಾಯಾಮದಲ್ಲಿ ಶರೀರದೊಳಕ್ಕೆ ಹೋದ ಶ್ವಾಸವಾಯುವನ್ನು ಪ್ರಶ್ವಾಸದ ಮೂಲಕ ಸಂಪೂರ್ಣವಾಗಿ ಹೊರಗೆ ಬಿಟ್ಟನಂತರ ಪುನಃ ಗಾಳಿಯು ಶ್ವಾಸದ ಮೂಲಕ ಒಳಕ್ಕೆ ಹೋಗದಂತೆ ಪ್ರತಿಬಂಧಿಸುವುದು. ಆ ಸಮಯದಲ್ಲಿ ಶರೀರದಲ್ಲಿ ಒತ್ತಡವು ಮೇಲ್ಮುಖ ವಾಗಿರುತ್ತದೆ. ಇದರಿಂದಾಗಿ ಗುದಸ್ಥಾನದಲ್ಲಿರುವ ಅಪಾನವಾಯುವು ಮೇಲೆಬಂದು ಹೃದಯದಲ್ಲಿರುವ ಪ್ರಾಣವಾಯುವಿನೊಡನೆ ಲೀನವಾಗು ತ್ತದೆ. ಇದಕ್ಕೆ ಬಾಹ್ಯಕುಂಭಕವೆಂದೂ ಹೇಳುತ್ತಾರೆ.

ಯೋಗಿಗಳೆಲ್ಲರೂ ನಿಯತವಾದ ಆಹಾರವುಳ್ಳವರಾಗಿಯೇ ಇರಬೇಕು.

ಹೆಚ್ಚು ತಿನ್ನಕೂಡದು. ಕಡಿಮೆಯಾಗಿಯೂ ತಿನ್ನಕೂಡದು. ಆಹಾರವನ್ನೇ ತೆಗೆದುಕೊಳ್ಳದೇ ಉಪವಾಸವಿರಲೂಬಾರದು. ಸಾತ್ತ್ವಿಕವಾದ ಆಹಾರವನ್ನೇ ತೆಗೆದುಕೊಳ್ಳಬೇಕು. ನಿಯತಾಹಾರಿಗಳಾಗಿರಬೇಕೆಂಬುದು ಎಲ್ಲ ಯೋಗಿಗಳಿಗೂ ಅನ್ವಯಿಸುತ್ತದೆ. ಮತ್ತೆ ಕೆಲವರು ಯೋಗಯಾಜ್ಞಿಕರು **ಪ್ರಾಣಾನ್ ಪ್ರಾಣೇಷು ಜುಹ್ವತಿ** ಪ್ರಾಣಗಳನ್ನು ಪ್ರಾಣಗಳಲ್ಲಿಯೇ ಹೋಮಮಾಡುತ್ತಾರೆ. ರೇಚಕ-ಕುಂಭಕಗಳೆರಡನ್ನೂ ಮಾಡದೇ ಪಂಚವಾಯುಗಳನ್ನೂ ಅವುಗಳಿರುವ ಸ್ಥಾನಗಳಲ್ಲಿ ನಿರೋಧಿಸಿ, ಐದು ಉಪವಾಯುಗಳಲ್ಲಿ (ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ) ಹೋಮಮಾಡುತ್ತಾರೆ. ಇದಕ್ಕೆ ಕೇವಲಕುಂಭಕವೆಂದೂ ಹೆಸರು.

ಮೇಲೆ ಹೇಳಿದ ಈ ಎಲ್ಲರೂ ಯಜ್ಞದ ರಹಸ್ಯಾರ್ಥವನ್ನು (ಯಜ್ಞದ ಮೂಲಕವಾಗಿ ಆತ್ಮಾನುಭವವನ್ನು ಪಡೆದುಕೊಳ್ಳುವುದನ್ನು ) ತಿಳಿದವರಾಗಿರುತ್ತಾರೆ ಮತ್ತು ಈ ಯಜ್ಞಗಳನ್ನಾಚರಿಸಿ ಪಾಪರಹಿತರೂ ಆಗಿರುತ್ತಾರೆ.

ನಿಯತಾಹಾರತ್ವ ಎಂದರೆ ಜಠರವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ ಎರಡು ಭಾಗವನ್ನು ಅನ್ನದಿಂದಲೂ ಮೂರನೆಯ ಭಾಗವನ್ನು ನೀರಿನಿಂದಲೂ ತುಂಬಿ, ನಾಲ್ಕನೆಯ ಭಾಗವನ್ನು ಗಾಳಿಯ ಸಂಚಾರಕ್ಕೋಸ್ಕರ ಉಳಿಸುವುದು.

**ದ್ವೌ ಭಾಗೌ ಪೂರಯೇದನ್ನಂ ತೋಯೇನೈಕಂ ಪ್ರಪೂರಯೇತ್ ।**
**ಮಾರುತಸ್ಯ ಪ್ರಚಾರಾರ್ಥಂ ಚತುರ್ಥಮವಶೇಷಯೇತ್ ॥)**

**ಓಂ ಯಜ್ಞಶಿಷ್ಟಾಮೃತಭುಜೋ ಯಾನ್ತಿ ಬ್ರಹ್ಮ ಸನಾತನಮ್ ।**
**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥೩೧॥**

ಕುರುಶ್ರೇಷ್ಠ! ಯಜ್ಞಶೇಷವೆಂಬ ಅಮೃತವನ್ನು ಭುಂಜಿಸುವ ಇವರು ಸನಾತನವಾದ ಬ್ರಹ್ಮವನ್ನು ಪಡೆಯುತ್ತಾರೆ. ಯಜ್ಞವನ್ನು ಮಾಡದವನಿಗೆ ಈ ಲೋಕವೇ ಇಲ್ಲ. ಮತ್ತೊಂದು ಲೋಕವೆಲ್ಲಿ ಬಂತು ?

* * *

(ವೇದಾಜ್ಞೆಯ ಪ್ರಕಾರ ಯಜ್ಞಮಾಡುವುದು ಮನುಷ್ಯನ ಕರ್ತವ್ಯ. ಯಜ್ಞಚಕ್ರವಿಲ್ಲದೇ ಪ್ರಪಂಚವು ಉಳಿಯುವುದಿಲ್ಲ. ಆದರೆ ಶ್ರೀಕೃಷ್ಣನು

ಹೇಳಿರುವಂತೆ ಯಜ್ಞವೆಂದರೆ ದರ್ಶ-ಪೂರ್ಣಮಾಸಗಳೇ ಮೊದಲಾದ ದೈವ ಯಜ್ಞಗಳು ಮಾತ್ರವೇ ಅಲ್ಲ. ಪ್ರಾಣಾಯಾಮ, ತಪಸ್ಸು, ವೇದಾಧ್ಯಯನ, ಪೂಜೆ, ವೈಶ್ವದೇವಾದಿ ಪಂಚಮಹಾಯಜ್ಞಗಳು–ಎಲ್ಲವೂ ಯಜ್ಞಗಳೇ ಆಗಿರುತ್ತವೆ. ಆದರೆ ಈ ಎಲ್ಲ ಯಜ್ಞಗಳನ್ನೂ ಫಲಾಸಕ್ತಿಯಿಲ್ಲದೇ ಮಾಡಬೇಕು. ಯಜ್ಞಶಿಷ್ಟವಾದುದು ಅಥವಾ ಯಜ್ಞಶೇಷವು ಅಮೃತವೆಂದು ಶ್ರೀಕೃಷ್ಣನು ಹೇಳಿದ್ದಾನೆ.

**ವಿಘಸಂ ಭುಕ್ತಶೇಷಂ ತು ಯಜ್ಞಶೇಷಮಥಾಮೃತಮ್ ।**

ಅತಿಥಿ-ಅಭ್ಯಾಗತರು ಊಟಮಾಡಿ ಉಳಿದ ಅನ್ನವು ವಿಘಸವೆಂದೂ, ಯಜ್ಞಮಾಡಿದನಂತರ ಉಳಿದ ಅನ್ನವು ಅಮೃತವೆಂದೂ ಮನುವು ಹೇಳಿದ್ದಾನೆ.

ಯಜ್ಞಶಿಷ್ಟವಾದ ಅಮೃತವನ್ನು ಊಟಮಾಡುವವರು ಅಮೃತರೇ ಆಗುತ್ತಾರೆ. ಸನಾತನವಾದ ಬ್ರಹ್ಮಪದವನ್ನು ಪಡೆದುಕೊಳ್ಳುತ್ತಾರೆ.

ಯಾವ ವಿಧವಾದ ಯಜ್ಞವನ್ನೂ ಮಾಡದವರ ಪಾಡೇನು? ಅವರಿಗೆ ಈ ಲೋಕವೂ ಇಲ್ಲ ; ಪರಲೋಕವೂ ಇಲ್ಲ–ಎಂದು ಶ್ರೀಕೃಷ್ಣನು ಸ್ಪಷ್ಟವಾಗಿ ಹೇಳುತ್ತಾನೆ. ಈ ಲೋಕವೂ ಇಲ್ಲ ಎನ್ನುವುದರ ಅಭಿಪ್ರಾಯವೇನು? ಯಜ್ಞವನ್ನು ಮಾಡದವನಿಗೆ ಮನಸ್ಸು ಪರಿಶುದ್ಧವಾಗಿರುವುದಿಲ್ಲ. ಶಾಂತಿಯಿರುವುದಿಲ್ಲ. ಹೊರಗೆ ನೋಡಲು ಸುಖವಾಗಿರುವಂತೆ ಕಂಡರೂ ಮನಸ್ಸಿನಲ್ಲಿ ನಾನಾವಿಧವಾದ ಸಂಕಟಗಳನ್ನು ಅನುಭವಿಸುತ್ತಿರುತ್ತಾನೆ. ಈ ಲೋಕದ ಸುಖಗಳಾದ ಖ್ಯಾತಿಲಾಭ-ಪೂಜೆಗಳೂ ಅವನಿಗೆ ದೊರೆಯುವುದಿಲ್ಲ. ಅವನು ಅಪಕೀರ್ತಿಗೆ ಪಾತ್ರನಾಗುತ್ತಾನೆ. ಭಯ-ಸಂಶಯಗಳಿಂದ ತುಂಬಿದ ವಾತಾವರಣದಲ್ಲಿರುತ್ತಾನೆ. ಅರ್ಥ-ಕಾಮಗಳ ಅನುಭವಗಳೂ ಅವನಿಗೆ ಬಹಳ ಕಾಲ ಆಗುವುದಿಲ್ಲ. ಪರಲೋಕಸುಖ ಎಂದರೆ ಧರ್ಮದ ಫಲವಾದ ಮೋಕ್ಷ. ಯಜ್ಞಮಾಡಿ ಮನಸ್ಸಿನ ಕೊಳೆಯನ್ನು ತೊಳೆದುಕೊಂಡು ಭಗವದಾರಾಧನೆಯಿಂದ ದೊರೆಯಬೇಕಾದ ಜ್ಞಾನವೂ ಇಲ್ಲವಾದುದರಿಂದ ಅವನಿಗೆ ಮೋಕ್ಷವು ಹೇಗೆ ದೊರಕೀತು? ಪುಣ್ಯಲೋಕಗಳ ಪ್ರಾಪ್ತಿಯೂ ಅವನಿಗಿಲ್ಲ.

**ಯಾನ್ತಿ ಬ್ರಹ್ಮ ಸನಾತನಮ್–**

ಯಜ್ಞಶಿಷ್ಟವಾದ ಅಮೃತವನ್ನು ಭುಂಜಿಸುವ ಪುರುಷರು ಚಿರಂತನ

ವಾದ ಬ್ರಹ್ಮವನ್ನು ಹೊಂದುತ್ತಾರೆ. ಇಲ್ಲಿ 'ಯಾನ್ತಿ' ಎಂದು ಗತಿಯನ್ನು ಹೇಳಿರುವುದರಿಂದ ಯಜ್ಞಮಾಡುವವರು ಮುಮುಕ್ಷುಗಳಾಗಿದ್ದರೆ–ಅವರು ಮರಣಾನಂತರ ಕಾಲಾತಿಕ್ರಮವಾದ ಮೇಲೆ (ಬಹಳ ಕಾಲ ಬ್ರಹ್ಮಲೋಕ ದಲ್ಲಿದ್ದು ಅನಂತರ ಬ್ರಹ್ಮನೊಡನೆ) ಪರಬ್ರಹ್ಮವನ್ನು ಹೊಂದುತ್ತಾರೆ ಎಂದು ಅರ್ಥ.

ಆದುದರಿಂದ ಇಲ್ಲಿ ಶ್ರೀಕೃಷ್ಣನು ಕ್ರಮಮುಕ್ತಿಯನ್ನು ಹೇಳಿದ್ದಾನೆಂದು ಶ್ರೀಶಂಕರರ ಅಭಿಪ್ರಾಯವಾಗಿದೆ.

**ನಾಯಂ ..... ಕುರುಸತ್ತಮ ।**

ಮೇಲೆ ಹೇಳಿದ ಯಜ್ಞಗಳಲ್ಲಿ ಒಂದು ಯಜ್ಞವನ್ನೂ ಮಾಡದವನಿಗೆ ಎಲ್ಲ ಪ್ರಾಣಿಗಳಿಗೂ ಸಾಧಾರಣವಾದ ಈ ಲೋಕವು ಕೂಡ ಸಿಕ್ಕುವುದಿಲ್ಲ. ಇನ್ನು ವಿಶೇಷಸಾಧನೆಗಳಿಂದಲೇ ಹೊಂದಬೇಕಾಗಿರುವ ಬೇರೆ ಲೋಕವು ಹೇಗೆ ದೊರಕೀತು? (ಶಂ.ಭಾ.)

ಮಹಾಯಜ್ಞಪೂರ್ವಕವಾಗಿ ನಿತ್ಯ-ನೈಮಿತ್ತಿಕಕರ್ಮಗಳನ್ನೂ ಮಾಡ ದವನಿಗೆ ಈ ಲೋಕವೂ ಇಲ್ಲ. (ಪ್ರಾಕೃತಲೋಕವೂ ಇಲ್ಲ.) ಪ್ರಾಕೃತಲೋಕ ಸಂಬಂಧವಾದ ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳೂ ಸಿದ್ಧಿಸುವು ದಿಲ್ಲ. ಇನ್ನು ಬೇರೆಯದು ಎಂದರೆ ಮೋಕ್ಷವೆಂಬ ಪುರುಷಾರ್ಥವು ಹೇಗೆ ದೊರಕೀತು? (ರಾ.ಭಾ.)

**ಓಂ ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।**
**ಕರ್ಮಜಾನ್ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥೩೨॥**

ಹೀಗೆ ಬಹುವಿಧವಾದ ಯಜ್ಞಗಳು ಬ್ರಹ್ಮನ ಮುಖದಿಂದ ಹೊರ ಟಿರುತ್ತವೆ. ಅವುಗಳೆಲ್ಲವನ್ನೂ ಕರ್ಮದಿಂದ ಹುಟ್ಟಿದುವುಗಳನ್ನಾಗಿ ತಿಳಿ. ಹೀಗೆಂದು ತಿಳಿದರೆ ಮುಕ್ತಿಯನ್ನು ಹೊಂದುವೆ.

* * *

(ಅರ್ಜುನ! ಈ ರೀತಿಯಲ್ಲಿ ಅನೇಕವಿಧವಾದ ಯಜ್ಞಗಳು ಬ್ರಹ್ಮನ ಮುಖದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿವೆ. ಎಂದರೆ–ವೇದಗಳ ಮೂಲಕ

ವಿಸ್ತಾರವಾಗಿ ಹೇಳಲ್ಪಟ್ಟಿವೆ ಅಥವಾ ಪರಮಾತ್ಮನ ಮುಖದಿಂದ ವಿಸ್ತಾರ ಗೊಂಡಿವೆ. ಇವುಗಳೆಲ್ಲವೂ ಕಾಯಕ, ವಾಚಿಕ ಮತ್ತು ಮಾನಸಿಕ ಕರ್ಮ ಗಳಿಂದಲೇ ಉಂಟಾದುವುಗಳೆಂದು ನೀನು ತಿಳಿದುಕೊಳ್ಳಬೇಕು. ಈ ಯಜ್ಞ ಗಳೆಲ್ಲವೂ ಕರ್ಮದಿಂದಲೇ ಉಂಟಾಗಿವೆ ಎಂಬುದನ್ನು ಅರಿಯಬೇಕು. ಹೀಗೆ ಅರಿತು ನಿನ್ನ ವರ್ಣಾಶ್ರಮಕ್ಕೆ ನಿಯತವಾಗಿರುವ ಕರ್ಮದಿಂದುಂಟಾದ ಯುದ್ಧವೇ ಮುಂತಾದ ಯಜ್ಞಗಳನ್ನಾಚರಿಸಿದರೆ ಫಲಾಭಿಸಂಧಿಯಿಲ್ಲದೇ ಮಾಡಿದರೆ ನೀನು ಬಿಡುಗಡೆಹೊಂದುವೆ.

ಎಲ್ಲ ಯಜ್ಞಗಳೂ ಕಾಯಕ, ವಾಚಿಕ ಮತ್ತು ಮಾನಸಿಕ–ಇವುಗಳಿಂದ ಉಂಟಾದುವುಗಳು. ಇವು ಆತ್ಮದಿಂದ ಉಂಟಾದುವುಗಳಲ್ಲ. ಏಕೆಂದರೆ : ಆತ್ಮನು ಕ್ರಿಯಾರಹಿತನು ಎಂಬುದನ್ನರಿತರೆ ನೀನು ಅಶುಭದಿಂದ ಬಿಡುಗಡೆ ಹೊಂದುವೆ. 'ನನ್ನ ವ್ಯಾಪಾರದಲ್ಲಿ ನಾನು ಉದಾಸೀನ' ಎಂದು ಅರಿತರೆ ಈ ಸಮ್ಯಗ್ದರ್ಶನದ ಪ್ರಭಾವದಿಂದ ನೀನು ಸಂಸಾರಬಂಧನದಿಂದ ಬಿಡುಗಡೆ ಯನ್ನು ಹೊಂದುತ್ತೀಯೆ.

**'ನ ಮದ್ವ್ಯಾಪಾರಾ ಇಮೇ. ನಿರ್ವ್ಯಾಪಾರೋಽಹಂ ಉದಾಸೀನಃ ಇತಿ ಏವಂ ಜ್ಞಾತ್ವಾ ಅಸ್ಮಾತ್ ಸಮ್ಯಗ್ದರ್ಶನಾತ್ ಮೋಕ್ಷ್ಯಸೇ ಸಂಸಾರಬನ್ಧನಾತ್**
**ಇತ್ಯರ್ಥಃ** (ಶಂ.ಭಾ.)

ಹೀಗೆ ಬಹುವಿಧವಾದ ಕರ್ಮಯೋಗಗಳು ಬ್ರಹ್ಮನ ಮುಖವಾಗಿ ಎಂದರೆ ಆತ್ಮಯಾಥಾತ್ಮ್ಯವನ್ನು ಹೊಂದುವ ಸಾಧನಗಳಾಗಿ ವಿಸ್ತಾರಗೊಂಡಿವೆ. ಇವುಗಳೆಲ್ಲವೂ ನಿತ್ಯವೂ ಆಚರಿಸಬೇಕಾದ ನಿತ್ಯ-ನೈಮಿತ್ತಿಕಕರ್ಮಗಳಿಂದ ಉಂಟಾದುವುಗಳೆಂದು ತಿಳಿ. ಹೀಗೆ ಅರಿತು ಅನುಷ್ಠಾನಮಾಡಿದರೆ ನೀನು ಮೋಕ್ಷವನ್ನು ಹೊಂದುವೆ.

**ಬ್ರಹ್ಮಣೋ ಮುಖೇ** ಎಂಬಲ್ಲಿ ಬ್ರಹ್ಮ ಎಂದರೆ ಯಥಾವಸ್ಥಿತವಾದ ಆತ್ಮ. ಮುಖ ಎಂದರೆ ಉಪಾಯ. (ರಾ.ಭಾ.)

ಹೀಗೆ ಅನೇಕವಿಧವಾದ ಯಜ್ಞಗಳು ಪರಮಾತ್ಮನ ಮುಖದಲ್ಲಿ ವಿಸ್ತಾರ ಗೊಂಡಿವೆ. ( ಬ್ರಹ್ಮಾ = ಪರಮಾತ್ಮ ) **ಅಹಂ ಹಿ ಸರ್ವಯಜ್ಞಾನಾಂ**

**ಭೋಕ್ತಾ ಚ ಪ್ರಭುರೇವ ಚ**–ಈ ಎಲ್ಲ ಯಜ್ಞಗಳೂ ಮಾನಸಿಕ-ವಾಚಿಕ-ಕಾಯಕಕರ್ಮಗಳಿಂದಲೇ ಹುಟ್ಟಿರುವುವು. ಯುದ್ಧವನ್ನು ಬಿಟ್ಟು ಮೋಕ್ಷಾರ್ಥವಾಗಿ ಬೇರೆ ಯಜ್ಞವನ್ನು ಮಾಡಲು ಬಯಸಿದರೆ ಅದೂ ಕೂಡ ಕರ್ಮವೇ ಆಗುತ್ತದೆ. (ಅಂತೂ ಕರ್ಮತ್ಯಾಗವು ಸಾಧ್ಯವಿಲ್ಲ.) ಹೀಗೆ ಅರಿತರೆ ನೀನು ಯುದ್ಧವೇ ಮುಂತಾದ ನಿನಗೆ ವಿಹಿತವಾದ ಕರ್ಮಗಳನ್ನು ಮಾಡಿಯೇ ಸಂಸಾರದಿಂದ ಬಿಡುಗಡೆಹೊಂದಲು ಬಯಸಬೇಕು. (ಮ.ಭಾ.)

ಯಜ್ಞಗಳೆಲ್ಲವೂ ಕರ್ಮಜಗಳೆಂಬುದು ಸಿದ್ಧವಾಗಿಯೇ ಇರುವಾಗ ಈ ವಿಷಯವನ್ನು ತಿಳಿಯುವುದರಲ್ಲಿ ಅತಿಶಯವೇನಿದೆ? ಇದರಿಂದ ಮುಕ್ತಿಯು ಹೇಗೆ ತಾನೇ ಆಗುತ್ತದೆ? ಇದಕ್ಕೆ ಸಮಾಧಾನವು ಈ ರೀತಿಯಾಗಿದೆ : ಅಗ್ನಿಯಲ್ಲಿ ದ್ರವ್ಯಗಳನ್ನು ಹವನಮಾಡಿ ಯಜ್ಞಗಳನ್ನು ಮಾಡುತ್ತಾರೆ. ಅಗ್ನಿಯು ದೇವತೆಗಳ ಮುಖವಾಗಿರುವುದರಿಂದ ದೇವತಾಪ್ರೀತ್ಯರ್ಥವಾಗಿ ಅಗ್ನಿಯಲ್ಲಿ ಮಾಡಿದ ಯಜ್ಞಗಳು ಆಯಾ ದೇವತೆಗಳಿಗೆ ಮುಟ್ಟುತ್ತವೆಂದು ಶಾಸ್ತ್ರಗಳಲ್ಲಿ ಹೇಳಿದೆ. ಹಿಂದೆ ವಿವರಿಸಿದ ಲಾಕ್ಷಣಿಕವಾದ ಯಜ್ಞಗಳು ದೇವಮುಖನಾದ ಅಗ್ನಿಯಲ್ಲಿ ಹೋಮಮಾಡಲ್ಪಡುವುದಿಲ್ಲವಾದುದರಿಂದ ಅಂತಹ ಲಾಕ್ಷಣಿಕ ಯಜ್ಞಗಳಿಂದ ಶ್ರೇಯಸ್ಸು ಪ್ರಾಪ್ತವಾಗುವುದು ಹೇಗೆಂದು ಕೆಲವರು ಶಂಕೆಯನ್ನು ತೆಗೆಯಬಹುದು. ಆ ಶಂಕೆಯ ಸಮಾಧಾನಕ್ಕಾಗಿ "ಯಜ್ಞಗಳೆಲ್ಲವೂ ಬ್ರಹ್ಮನ ಮುಖದಲ್ಲಿಯೇ ಸಾಗುತ್ತವೆ" ಎಂದು ಇಲ್ಲಿ ಶ್ರೀಕೃಷ್ಣನು ಹೇಳಿದ್ದಾನೆ. ಮೀಮಾಂಸಕರ ಸಂಕುಚಿತವಾದ ಅರ್ಥದ ಗೊಡವೆಗೆ ಹೋಗದೇ ಇಲ್ಲಿ ಹೇಳಿದ ಯಜ್ಞವಿಧಿಯ ವ್ಯಾಪಕಸ್ವರೂಪವನ್ನು ತಿಳಿದವನಾದ ಪುರುಷನ ಬುದ್ಧಿಯು ಹೀನವಾಗಿರದೇ ಬ್ರಹ್ಮಸ್ವರೂಪವನ್ನು ಕಂಡುಕೊಳ್ಳಲು ಅವನು ಅಧಿಕಾರಿಯಾಗುತ್ತಾನೆಂಬುದೇ ಉತ್ತರಾರ್ಧದ ಭಾವಾರ್ಥವಾಗಿರುತ್ತದೆ."

"ವೇದೋಕ್ತವಾದ ಈ ಯಜ್ಞಗಳು ಹಿಂದಿನಿಂದಲೂ ನಡೆದುಕೊಂಡು ಬಂದಿವೆ. ಶ್ರೀಕೃಷ್ಣನಿಲ್ಲಿ ಹೊಸಯಜ್ಞಗಳನ್ನು ಸೃಷ್ಟಿಸಿಲ್ಲ. 'ವಾಚಿ ಹಿ ಪ್ರಾಣಂ **ಜುಹುಮಃ** ಮಾತಿನಲ್ಲೇ ಪ್ರಾಣವನ್ನು ಹೋಮಮಾಡುತ್ತೇವೆ.'

ಆದುದರಿಂದ ಇಲ್ಲಿ ಶ್ರೀಕೃಷ್ಣನು ಹೇಳಿರುವ ಯಜ್ಞಗಳು ಲಾಕ್ಷಣಿಕ ಯಜ್ಞಗಳಲ್ಲ. ವಿಧಿಸಮ್ಮತವಾದ ಯಜ್ಞಗಳೇ ಆಗಿವೆ. ಹಾಗಿಲ್ಲದಿದ್ದರೆ

**ವಿತತಾ ಬ್ರಹ್ಮಣೋ ಮುಖೇ ಬ್ರಹ್ಮನ ಅಥವಾ ವೇದದ ಮುಖದಿಂದಲೇ ವಿಸ್ತೃತವಾದುವು ಎಂದು ಹೇಳುವ ಕಾರಣವೇ ಇರಲಿಲ್ಲ.) (ಶ್ರೀತಿಲಕರು.)**

**ಓಂ ಶ್ರೇಯಾನ್ದ್ರವ್ಯಮಯಾದ್ಯಜ್ಞಾಜ್ಜ್ಞಾನಯಜ್ಞಃ ಪರಂತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥೩೩॥**

ಪರಂತಪನೇ! ದ್ರವ್ಯಮಯವಾದ ಯಜ್ಞಕ್ಕಿಂತಲೂ ಜ್ಞಾನಯಜ್ಞವು ಹೆಚ್ಚು ಶ್ರೇಯಸ್ಕರವಾದುದು. ಜ್ಞಾನದಲ್ಲಿ ಎಲ್ಲ ಕರ್ಮಗಳೂ ಸಂಪೂರ್ಣವಾಗಿ ಕೊನೆಗಾಣುತ್ತವೆ.

* * *

(ಇದುವರೆಗೂ ಶ್ರೀಕೃಷ್ಣನು ಕರ್ಮವನ್ನು ಹೇಗೆ ನಿಷ್ಕಾಮನೆಯಿಂದ ಮಾಡಬೇಕೆಂಬುದನ್ನು ವಿವರಿಸಿ ಹೇಳಿದನು. ಫಲಾಸಕ್ತಿಯಿಲ್ಲದೇ ಕರ್ಮ ಮಾಡಿದಲ್ಲಿ ಅವನು ಪಾಪ-ಪುಣ್ಯಗಳೆರಡನ್ನೂ ವಿಸರ್ಜಿಸಿ ಆತ್ಮಜ್ಞಾನವನ್ನೂ ಪಡೆಯುತ್ತಾನೆ–ಎಂದೂ ಶ್ರೀಕೃಷ್ಣನು ಹೇಳಿದನು. ಆದರೂ ಈ ಶ್ಲೋಕದಲ್ಲಿ ದ್ರವ್ಯಮಯಯಜ್ಞಗಳಿಗಿಂತಲೂ ಜ್ಞಾನಯಜ್ಞವೇ ಶ್ರೇಷ್ಠವಾದುದೆಂದು ಹೇಳುತ್ತಾನೆ.

ಅದು ಹೇಗೆಂದರೆ : ದ್ರವ್ಯಮಯವಾದ ಯಜ್ಞವು ಸಕಾಮ, ನಿಷ್ಕಾಮ ಎಂದು ಎರಡು ಬಗೆ. ಅದನ್ನು ಸಕಾಮವಾಗಿ ಆಚರಿಸಿದರೆ ಐಹಿಕಫಲ ಅಥವಾ ಸ್ವರ್ಗಾದಿ ಪುಣ್ಯಲೋಕಪ್ರಾಪ್ತಿ. ನಿಷ್ಕಾಮವಾಗಿ ಮಾಡಿದರೆ ಅದೇ ಜ್ಞಾನಯಜ್ಞವಾಗುತ್ತದೆ.

ಜ್ಞಾನಯಜ್ಞದ ಫಲ–ಅಮೃತಸ್ವರೂಪವಾದ ಮೋಕ್ಷ. ಆದುದರಿಂದ ಸಕಾಮವಾದ ದ್ರವ್ಯಯಜ್ಞಕ್ಕಿಂತಲೂ ನಿಷ್ಕಾಮವಾದ ಜ್ಞಾನಯಜ್ಞವು ಶ್ರೇಷ್ಠ ಎಂಬುದು ನಿಃಸಂಶಯ. ನಿಷ್ಕಾಮವಾಗಿ ಭಗವದರ್ಪಣಬುದ್ಧಿಯಿಂದ ದ್ರವ್ಯ ಯಜ್ಞವನ್ನು ಮಾಡಿದರೂ ಅದು ಜ್ಞಾನವನ್ನು ಕೊಟ್ಟು ತನ್ಮೂಲಕ ಮೋಕ್ಷವನ್ನು ಕೊಡುತ್ತದೆ. ಆದುದರಿಂದ ದೂರಸಾಧನವಾದ ಈ ದ್ರವ್ಯಯಜ್ಞಕ್ಕಿಂತಲೂ ಸಾಧ್ಯಕ್ಕೆ ಹತ್ತಿರದಲ್ಲಿರುವ ಜ್ಞಾನಯಜ್ಞವೇ ಶ್ರೇಷ್ಠವಾದುದು.

ಎಲ್ಲ ಕರ್ಮಗಳೂ ಜ್ಞಾನದಲ್ಲೇ ಪರಿಸಮಾಪ್ತಿಯಾಗುತ್ತದೆ–ಎಂದು ಭಗವಂತನು ಹೇಳುತ್ತಾನೆ.

ಎಲ್ಲ ಕರ್ಮಗಳನ್ನೂ ಎನ್ನುವುದಕ್ಕೆ ಈ ಹಿಂದೆ ಹೇಳಲ್ಪಟ್ಟಿರುವ ಯಜ್ಞ ರೂಪವಾದ ಎಲ್ಲ ಕರ್ಮಗಳು–ಎಂಬ ಅರ್ಥವನ್ನು ಇಟ್ಟುಕೊಂಡರೆ ಅವುಗಳೆಲ್ಲವೂ ಭಗವದಾರಾಧನವಾಗಿರುವುದರಿಂದ ಅಥವಾ ಆತ್ಮಜ್ಞಾನವನ್ನು ಫಲವಾಗಿ ಕೊಡುವುದರಿಂದ ಅವುಗಳೆಲ್ಲಕ್ಕೂ ಜ್ಞಾನದಲ್ಲೇ ನಿಲುಗಡೆ. ಕರ್ಮಗಳಲ್ಲಿ ವಿಹಿತಕರ್ಮ, ಕಾಮ್ಯಕರ್ಮ, ನಿಷಿದ್ಧಕರ್ಮ–ಎಂದು ಮೂರು ವಿಭಾಗ ಮಾಡಬಹುದು. ಅವುಗಳಲ್ಲಿ ಈಶ್ವರಾರ್ಪಣಬುದ್ಧಿಯಿಂದ ವಿಹಿತ ಕರ್ಮಗಳನ್ನು ಮಾಡಿದರೆ **'ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿನ್ದತಿ ಮಾನವಃ'** ಎಂದು ಭಗವಂತನು ಹೇಳಿರುವಂತೆ–ಜ್ಞಾನಸಿದ್ಧಿ, ಆತ್ಮಲಾಭ ಆಗುವುದು. ಕಾಮ್ಯಕರ್ಮಗಳನ್ನು ಮಾಡುವಾಗಲೂ ಆಯಾ ಫಲಗಳನ್ನು ಕೊಡುವ ದೇವತೆಗಳ ಹಿಂದೆ ಭಗವಂತನೇ ದೇವತೆಗಳ ಮೂಲಕ ಫಲವನ್ನು ದಯಪಾಲಿಸುತ್ತಾನೆ–ಎಂಬ ಭಾವನೆಯಿದ್ದರೆ ಅದು ಕಾಲಕ್ರಮದಲ್ಲಿ ಚಿತ್ತ ಶುದ್ಧಿಯನ್ನುಂಟುಮಾಡಿ ಜ್ಞಾನಕ್ಕೇ ಒಯ್ಯುತ್ತದೆ. ನಿಷಿದ್ಧಕರ್ಮಗಳಿಂದ ಅಜ್ಞಾನವೇ ಉಂಟಾಗುತ್ತದೆಯಾದರೂ, ಜ್ಞಾನವೇ ಎಲ್ಲಕ್ಕೂ ಸ್ವರೂಪವಾಗಿರುವುದರಿಂದ, ನಿಷಿದ್ಧಕರ್ಮಮಾಡಿದವನೂ ತನ್ನ ಕರ್ಮಗಳಿಗೆ ತಕ್ಕ ಶಿಕ್ಷೆಯನ್ನು ಅನುಭವಿಸಿ ಬುದ್ಧಿಕಲಿತು ಸಂಸ್ಕಾರಗೊಂಡು, ಒಂದಲ್ಲ ಒಂದು ದಿವಸ ತನ್ನ ಮೂಲಭೂತವಾದ ಜ್ಞಾನಕ್ಕೆ ಬರಲೇಬೇಕು. ಹೀಗೆ ಸರ್ವ ಮೂಲವಾಗಿರುವುದು ಜ್ಞಾನ. ಎಲ್ಲ ಕರ್ಮಗಳಿಗೂ ಮೂಲವಾದ ತ್ರಿಗುಣಗಳ ಹಿಂದೆ ಇರುವುದೂ ಜ್ಞಾನ. ಕರ್ಮವು ಗತಿರೂಪವಾದುದು. ಈ ಗತಿರೂಪವಾದ ಪದಾರ್ಥವು ಕೊನೆಗೆ ತನ್ನ ಸ್ವರೂಪಕ್ಕೆ ಬಂದು ಸೇರಲೇಬೇಕು. ಆದುದರಿಂದ ಎಲ್ಲ ಕರ್ಮಗಳಿಗೂ ಜ್ಞಾನವೇ ಲಕ್ಷ್ಯ ಎಂದು ಗ್ರಹಿಸಬೇಕು.

**ಸರ್ವಂ ಕರ್ಮ** = ಎಲ್ಲ ಕರ್ಮಗಳೂ, **ಅಖಿಲಂ** =ಸಂಪೂರ್ಣವಾಗಿ. (ನ್ಯೂನತೆಯಿಲ್ಲದೆ ) ದ್ರವ್ಯಮಯವಾದ ಯಜ್ಞವು ಫಲವನ್ನು ಆರಂಭಿಸುತ್ತದೆ. ಜ್ಞಾನಯಜ್ಞವು ಫಲವನ್ನು (ಜನ್ಮಾದಿ ಫಲವನ್ನು ) ಕೊಡುವುದಿಲ್ಲ. ಆದುದರಿಂದ ದ್ರವ್ಯಮಯಯಜ್ಞಕ್ಕಿಂತಲೂ ಜ್ಞಾನಯಜ್ಞವು ಶ್ರೇಷ್ಠ. **ಪರಿಸಮಾಪ್ಯತೇ** ಎಂದರೆ ಅಂತರ್ಗತವಾಗುತ್ತದೆ–ಎಂದು ಅರ್ಥ. ಜ್ಞಾನವು ಮೋಕ್ಷಸಾಧನವಾದುದು. ಎಲ್ಲೆಲ್ಲೂ ನೀರುತುಂಬಿರುವ ಜಲಾಶಯದಂತೆ

ಇರುವ ಜ್ಞಾನದಲ್ಲಿ ಎಲ್ಲ ಕರ್ಮಗಳೂ ಯಾವ ಪ್ರತಿಬಿಂಬವೂ ಇಲ್ಲದೆ ಅಂತರ್ಗತವಾಗುತ್ತವೆ.

**ಯಥಾ ಕೃತಾಯ ವಿಜಿತಾಯಾಧರೇಯಾಃ ಸಂಯನ್ತ್ಯೇಕಮೇವ ಸರ್ವಂ ತದಭಿಸಮೇತಿ ಯತ್ಕಿಂಚ ಪ್ರಜಾಃ ಸಾಧು ಕುರ್ವನ್ತಿ ಯಸ್ತದ್ವೇದ ಯತ್ಸವೇದ. ಛಾಂದೋಗ್ಯ ೪-೧-೪** (ಶಂ.ಭಾ.)

ಅಂತರ್ಗತಜ್ಞಾನವಾದ ಕರ್ಮಯೋಗದಲ್ಲಿ ಜ್ಞಾನಾಂಶವೇ ಮುಖ್ಯ ವಾದುದು ಎಂಬುದನ್ನು ಪ್ರತಿಪಾದಿಸುತ್ತದೆ. ಈ ಕರ್ಮಯೋಗದಲ್ಲಿ ದ್ರವ್ಯ ಮಯವಾದ ಅಂಶಕ್ಕಿಂತಲೂ ಜ್ಞಾನಮಯವಾದ ಅಂಶವೇ ಹೆಚ್ಚು ಪ್ರಶಸ್ತ ವಾದುದು. ಏಕೆಂದರೆ : ಎಲ್ಲ ಕರ್ಮಗಳೂ ಮತ್ತು ಅದಕ್ಕೆ ಸಾಧನವಾಗಿರುವ ಉಳಿದ ಎಲ್ಲ ಉಪಾದೇಯಗಳೂ-ಎಲ್ಲವೂ ಜ್ಞಾನದಲ್ಲೇ ಪರಿಸಮಾಪ್ತಿ ಹೊಂದುತ್ತವೆ. ಎಲ್ಲಕ್ಕೂ ಜ್ಞಾನವೇ ಪ್ರಾಪ್ಯ. ಎಲ್ಲ ಸಾಧನೆಗಳಿಂದಲೂ ಪ್ರಾಪ್ಯವಾದ ಜ್ಞಾನವೇ ಕರ್ಮಾಂತರ್ಗತವಾಗಿ ಅಭ್ಯಾಸಮಾಡಲ್ಪಡುತ್ತದೆ. ಹೀಗೆ ಅಭ್ಯಾಸಮಾಡಲ್ಪಡುವುದೇ ಕ್ರಮವಾಗಿ ಪ್ರಾಪ್ಯದಶೆಯನ್ನು ಹೊಂದು ತ್ತದೆ.

ಕರ್ಮವು ತನ್ನಲ್ಲಿ ಅಂತರ್ಗತವಾದ ಜ್ಞಾನದಲ್ಲಿ ಪರಿಸಮಾಪ್ತಿ ಹೊಂದುವುದೆಂದರೆ ಸಾಕ್ಷಾತ್ಕಾರಲಕ್ಷಣವಾದ ಸಾಧ್ಯದಶೆಯನ್ನು ಹೊಂದು ವುದು. (ರಾ.ಭಾ.)

ಅಖಿಲಂ ಎಂದರೆ ಉಪಾಸನೆಯೇ ಮುಂತಾದ ಅಂಗಯುಕ್ತವಾದ ಎಂದು ಅರ್ಥ. (ಕರ್ಮಸಮೃದ್ಧ್ಯರ್ಥವಾದ ಉಪಾಸನೆಗಳು ವೇದದಲ್ಲಿ ಹೇಳಲ್ಪಡುತ್ತವೆ.) ಹೀಗೆ ಉಪಾಸನೆಯೇ ಮುಂತಾದ ಎಲ್ಲ ಅಂಗಗಳಿಂದ ಕೂಡಿದ ಎಲ್ಲ ಕರ್ಮಗಳಿಗೂ ಜ್ಞಾನವೇ ಫಲವಾದುದರಿಂದ ಅದರಲ್ಲೇ ಪರಿ ಸಮಾಪ್ತಿ. (ಪರಿಸಮಾಪ್ತಿ ಎಂದರೆ ಸಂಪೂರ್ಣತೆ, ಸಫಲತೆ.) (ಮ.ಭಾ.)

**ಓಂ ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯನ್ತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥೩೪॥**

ಆ ಜ್ಞಾನವನ್ನು ನಮಸ್ಕಾರದಿಂದಲೂ, ಪರಿಪ್ರಶ್ನೆಯಿಂದಲೂ, ಸೇವೆ

ಯಿಂದಲೂ ತಿಳಿಯುವವನಾಗು. ತತ್ತ್ವವನ್ನು ಕಂಡವರಾದ ಜ್ಞಾನಿಗಳು ನಿನಗೆ ಜ್ಞಾನವನ್ನು ಉಪದೇಶಮಾಡುವರು.

* * *

(ಆ ಜ್ಞಾನವು ನಿನಗೆ ಯಾವ ರೀತಿಯಲ್ಲಿ ಲಭ್ಯವಾಗುತ್ತದೆಂಬುದನ್ನು ಹೇಳುವೆನು ಕೇಳು—ಎನ್ನುತ್ತಾನೆ ಶ್ರೀಕೃಷ್ಣ.

ಪ್ರಣಿಪಾತ ಎಂದರೆ ದೀರ್ಘದಂಡನಮಸ್ಕಾರ. ಇದು ಶಿಷ್ಯನಾದವನ ಮೊದಲನೆಯ ಕರ್ತವ್ಯ. ಸಾಷ್ಟಾಂಗಪೂರ್ವಕವಾಗಿ ದೀರ್ಘದಂಡನಮಸ್ಕಾರ ವನ್ನು ಮಾಡಬೇಕು. ಅಷ್ಟಾಂಗಗಳೆಂದರೆ :

**ದೋರ್ಭ್ಯಾಂ ಪದ್ಭ್ಯಾಂ ಚ ಜಾನುಭ್ಯಾಂ ಉರಸಾ ಶಿರಸಾ ದೃಶಾ ।**
**ಮನಸಾ ವಚಸಾ ಚೈವ ಪ್ರಣಾಮೋಽಷ್ಟಾಂಗ ಈರಿತಃ ॥**

ಕೈಗಳು, ಕಾಲುಗಳು, ಮೊಣಕಾಲುಗಳು, ಎದೆ, ತಲೆ, ದೃಷ್ಟಿ, ಮನಸ್ಸು ಮತ್ತು ಮಾತು—ಇವುಗಳು ಅಷ್ಟಾಂಗಗಳು.

ಅಷ್ಟಾಂಗಪೂರ್ವಕವಾಗಿ ದೀರ್ಘದಂಡನಮಸ್ಕಾರವನ್ನು ಮಾಡುವು ದೆಂದರೆ ನಾವು ನಮ್ಮನ್ನೇ ಆಚಾರ್ಯರಿಗೆ ಅರ್ಪಿಸಿಕೊಂಡಂತೆ. ಅವರ ಕೈಂಕರ್ಯವನ್ನು ಒಪ್ಪಿಕೊಂಡಂತೆ. ಇದು ಮೊದಲನೆಯ ಕರ್ತವ್ಯ.

ವಿಷಯಗಳನ್ನು ಕೇಳಿ ತಿಳಿದುಕೊಳ್ಳುವುದು ಎರಡನೆಯ ಕರ್ತವ್ಯ. 'ಮೋಕ್ಷವೆಂದರೇನು? ಬಂಧನವೆಂದರೇನು? ವಿದ್ಯೆಯೆಂದರೇನು? ಅವಿದ್ಯೆಯೆಂದರೇನು?'—ಇತ್ಯಾದಿ.

ಗುರುಸೇವೆಯನ್ನು ಮಾಡಬೇಕು-ಇದು ಮೂರನೆಯ ಕರ್ತವ್ಯ. ನಮ್ಮ ವಿದ್ಯೆಗಳಿಗೆ ಗುರುಶುಶ್ರೂಷೆಯೇ ಬಹುಮುಖ್ಯವಾದುದು. ಇದು ಹಣ ಕೊಟ್ಟು ಕಲಿಯುವ ವಿದ್ಯೆಯಲ್ಲ. ಗುರುವಿನ ಅನುಗ್ರಹದಿಂದ ಪಡೆಯುವ ವಿದ್ಯೆ.

"ವಿದ್ಯುಚ್ಛಕ್ತಿಯು ಪ್ರವಹಿಸಲು ಹೇಗೆ ಮಧ್ಯವರ್ತಿಯ ಸಹಾಯ ಆವಶ್ಯಕವೋ—ಅಂತೆಯೇ ಲೋಕಗುರುವಾದ ಭಗವಂತನ ಶಕ್ತಿಯು ಹರಿ ಯಲು ಆ ಭಗವಂತನ ಕಲ್ಯಾಣಗುಣಗಳನ್ನು ಪಡೆದು ಮಹಾಪುರುಷನಾಗಿ ಅವತರಿಸಿದ ಗುರುವೂ ಪ್ರತಿಯೊಂದು ಜೀವಿಗೂ ಅವಶ್ಯವಾಗಿ ಬೇಕು."

(ಶ್ರೀರಂಗವಚನಾಮೃತ)

ವಿದ್ಯಾರ್ಥಿಯಾದವನು **ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್** ಎಂಬ ಭಾವದಿಂದ ಆಶ್ರಯಿಸಬೇಕು.

ಕೇವಲ ಗುರುಶುಶ್ರೂಷೆಯಿಂದಲೇ ಆತ್ಮವಿದ್ಯೆಯನ್ನು ಪಡೆದವರ ಇತಿಹಾಸಗಳೂ ಅನೇಕವಾಗಿವೆ. ಸತ್ಯಕಾಮನು ಬ್ರಹ್ಮವಿದ್ಯೆಯನ್ನು ಕಲಿಯುವುದಕ್ಕಾಗಿ ಗುರುಗಳ ಬಳಿಗೆ ಹೋದನು. ಗುರುಗಳು ಶಿಷ್ಯನಿಗೆ ಕೆಲವು ದನಗಳನ್ನು ಒಪ್ಪಿಸಿ 'ಇವುಗಳನ್ನು ಕಾಡಿನಲ್ಲಿ ಮೇಯಿಸುತ್ತಿರು. ಇವುಗಳ ಸಂಖ್ಯೆಯು ಎರಡರಷ್ಟಾದಮೇಲೆ ನನ್ನ ಬಳಿ ಬಾ'–ಎಂದರು. ಸತ್ಯಕಾಮನು ಮರುಮಾತಾಡಲಿಲ್ಲ. ಹಸುಗಳನ್ನು ಹೊಡೆದುಕೊಂಡು ಕಾಡಿಗೆ ಹೊರಟುಹೋದನು. ಗುರುಗಳ ಅಪ್ಪಣೆಯಂತೆ ಸದಾಕಾಲದಲ್ಲಿಯೂ ಸತ್ಯಕಾಮನು ಗೋಸೇವೆಯಲ್ಲೇ ನಿರತನಾಗಿರುತ್ತಿದ್ದನು. ಹಲವಾರು ವರ್ಷಗಳು ಕಳೆದನಂತರ ದ್ವಿಗುಣಿತವಾದ ಹಸುಗಳೇ ಸತ್ಯಕಾಮನಿಗೆ ಹೇಳಿದುವು : "ಸತ್ಯಕಾಮ! ನಾವು ಇದ್ದುದಕ್ಕೆ ಎರಡರಷ್ಟಾಗಿದ್ದೇವೆ. ನೀನು ನಮ್ಮನ್ನು ಗುರುಗಳ ಸಮೀಪಕ್ಕೆ ಕರೆದೊಯ್ಯಬಹುದು." ಹಸುಗಳ ಮಾತಿನಂತೆ ಸತ್ಯ ಕಾಮನು ಹಸುಗಳನ್ನು ಗುರುಗಳ ಮನೆಯ ಕಡೆಗೆ ಹೊಡೆದುಕೊಂಡು ಬರು ತ್ತಿದ್ದ ಹಾದಿಯಲ್ಲಿ ಬೆಂಕಿ, ಜಿಂಕೆ ಮತ್ತು ಹಕ್ಕಿ ಮುಂತಾದುವು ಪರಬ್ರಹ್ಮನಿಗೆ ಸಂಬಂಧಪಟ್ಟ ವಿಷಯವನ್ನು ಇವನಿಗೆ ಹೇಳಿದುವು. ಬ್ರಹ್ಮವಿದ್ಯೆಯ ರಹಸ್ಯವನ್ನರಿತು ಸತ್ಯಕಾಮನು ಗುರುಗಳ ಮನೆಗೆ ಬಂದನು. ಬ್ರಹ್ಮತೇಜಸ್ಸಿನಿಂದ ಪರಿಪೂರ್ಣನಾಗಿದ್ದ ಸತ್ಯಕಾಮನನ್ನು ಕಂಡು ಗುರುಗಳು ಪ್ರಶ್ನಿಸಿದರು : 'ಸತ್ಯಕಾಮ! ನಿನಗೆ ಬ್ರಹ್ಮವಸ್ತುವಿನ ವಿಷಯವನ್ನು ಹೇಳಿದವರಾರು?'

'ಮನುಷ್ಯರಲ್ಲದ ಇತರ ವ್ಯಕ್ತಿಗಳು ಹೇಳಿದರು' ಎಂದನು ಸತ್ಯಕಾಮ.

ಗುರುವು ಪ್ರತ್ಯಕ್ಷವಾಗಿಯೇ ವಿದ್ಯೆಯನ್ನು ಹೇಳಬೇಕಾಗಿಲ್ಲ. ಅನುಗ್ರಹ ಮಾತ್ರದಿಂದಲೇ ಮಹಾವಿದ್ಯೆಯು ಲಭಿಸುತ್ತದೆ. 'ಶಿಷ್ಯನು ಬುದ್ಧಿವಂತನೇ? ಅಲ್ಲವೇ?'–ಎಂಬ ಪರಿಗಣನೆಯೂ ಇರುವುದಿಲ್ಲ. ಹೆಚ್ಚು ದಡ್ಡನಾಗಿರಬಹುದು. ಅಂತಹವನೂ ಸಹ ಗುರುವಿನ ಸೇವೆಮಾಡಿ ಅವರ ಕೃಪಾ ಕಟಾಕ್ಷಕ್ಕೆ ಸಿಕ್ಕಿದನೆಂದರೆ ಮಹಾಜ್ಞಾನಿಯೇ ಆಗುವನು. ಶ್ರೀರಾಮಕೃಷ್ಣರ ಹತ್ತಿರ ಲಟು ಎಂಬ ಪರಿಚಾರಕನಿದ್ದನು. ಅವನಿಗೆ ಓದು-ಬರಹಗಳು ಬರು

ತ್ತಿರಲಿಲ್ಲ. ಆದರೆ ರಾಮಕೃಷ್ಣರಿಗೆ ಮಾಡಿದ ಸೇವೆಯಿಂದಾಗಿ ಮತ್ತು ಅವರ ದಿವ್ಯಾನುಗ್ರಹದಿಂದಾಗಿ ಲಟುವು ಆಧ್ಯಾತ್ಮಿಕಾನುಭವವನ್ನು ಪಡೆದು ಕೊಂಡನು. ಅದನ್ನು ಕಂಡ ವಿವೇಕಾನಂದರು ಆಶ್ಚರ್ಯಚಕಿತರಾದರು. ಅವರಿಗೆ ಅದೊಂದು ಅದ್ಭುತವೆನಿಸಿತು. ಲಟುವಿಗೆ ಅದ್ಭುತಾನಂದ ಎಂದೇ ನಾಮಕರಣಮಾಡಿದರು. ಇಂತಹ ನಿದರ್ಶನಗಳು ಲೆಕ್ಕವಿಲ್ಲದಷ್ಟಿವೆ. ಆದುದ ರಿಂದ ಶ್ರೀಕೃಷ್ಣನು ಗುರುಸೇವೆಯನ್ನು ಮಾಡಬೇಕೆನ್ನುತ್ತಾನೆ. ಸೇವೆಯಿಂದ ಸುಪ್ರೀತರಾದ, ಜ್ಞಾನಿಗಳಾದ ತತ್ತ್ವದರ್ಶಿಗಳು ನಿನಗೆ ಜ್ಞಾನೋಪದೇಶ ಮಾಡುತ್ತಾರೆ. ತತ್ತ್ವದರ್ಶಿಗಳು ಎಂದರೆ 'ವೇದಾಂತಶಾಸ್ತ್ರಜ್ಞಾನವನ್ನು ತಿಳಿದ ಆತ್ಮಾನುಭವಿಗಳು'–ಎಂದು ಅರ್ಥಮಾಡಬಹುದು. ಪರಿಪ್ರಶ್ನೆಗೆ ಉತ್ತರಿಸ ಬೇಕಾದರೆ ಗುರುವಿಗೆ ಶಾಸ್ತ್ರಜ್ಞಾನವೂ ಇರಬೇಕಾಗುತ್ತದೆ. ಸಹಜಜ್ಞಾನವೂ ಇರಬೇಕಾಗುತ್ತದೆ. ಇಂತಹ ತತ್ತ್ವವೇತ್ತರು ಪರಿಪ್ರಶ್ನೆಗಳಿಗೆ ಸಮಂಜಸವಾಗಿ ಉತ್ತರವನ್ನು ಹೇಳುತ್ತಾರೆ. ಬ್ರಹ್ಮೋಪದೇಶವನ್ನೂ ಮಾಡುತ್ತಾರೆ. ಉಪ ದೇಶವೆಂದರೆ ಪಾಠ-ಪ್ರವಚನಗಳೂ ಆಗಬಹುದು. ಬ್ರಹ್ಮವಸ್ತುವಿನ ಬೀಜಾವಾಪವೂ ಆಗಬಹುದು. ಎರಡೂ ಆದರೆ ಪೂರ್ಣಜ್ಞಾನವಾಗುತ್ತದೆ. ಕೇವಲ ಬ್ರಹ್ಮೋಪದೇಶವಾದರೂ ಆತ್ಮಾನುಭವವಾಗುತ್ತದೆ. ಆದರೆ ಕೇವಲ ಶಾಸ್ತ್ರಾಭ್ಯಾಸದಿಂದ ಪ್ರಯೋಜನವಿಲ್ಲ.

ಆತ್ಮಜ್ಞನಾದ ಸದ್ಗುರುವಿನಿಂದಲೇ ಬ್ರಹ್ಮೋಪದೇಶವನ್ನು ಪಡೆಯ ಬೇಕೆಂಬುದಕ್ಕೆ ಕಠೋಪನಿಷತ್ತಿನಲ್ಲಿ ಹೀಗೆ ಹೇಳಿದೆ :

**ನ ನರೇಣಾವರೇಣ ಪ್ರೋಕ್ತ ಏಷ**
**ಸುವಿಜ್ಞೇಯೋ ಬಹುಧಾ ಚಿನ್ತ್ಯಮಾನಃ ।**
**ಅನನ್ಯಪ್ರೋಕ್ತೇ ಗತಿರತ್ರ ನಾಸ್ತ್ಯ-**
**ಣೀಯಾನ್ಹ್ಯತರ್ಕ್ಯಮಣುಪ್ರಮಾಣಾತ್ ॥೮॥**

–ಅಧ್ಯಾಯ ೨

ಹೀನಮನುಷ್ಯನಿಂದ ಹೇಳಲ್ಪಟ್ಟರೆ ಈ ಆತ್ಮನನ್ನು ಚೆನ್ನಾಗಿ ಅರಿತು ಕೊಳ್ಳಲು ಆಗುವುದಿಲ್ಲ. ಏಕೆಂದರೆ : ಅನೇಕರು ಅನೇಕಪ್ರಕಾರವಾಗಿ ಇವ ನನ್ನು ಚಿಂತಿಸುತ್ತಾರೆ. ಅನನ್ಯನಾದ ಆಚಾರ್ಯನಿಂದ ಹೇಳಲ್ಪಟ್ಟರೆ ಆತ್ಮ

ವಿಷಯದಲ್ಲಿ ಸಂದೇಹವಿರುವುದಿಲ್ಲ. ಏಕೆಂದರೆ : ಅಣುಪ್ರಮಾಣಕ್ಕಿಂತಲೂ ಸೂಕ್ಷ್ಮವಾಗಿರುವ ಆತ್ಮನು ತರ್ಕಕ್ಕೆ ಸಿಕ್ಕುವವನಲ್ಲ.

**ಜ್ಞಾನಿನಃ ತತ್ತ್ವದರ್ಶಿನಃ** ಎಂದು ಬಹುವಚನವನ್ನು ಹೇಳಿರುವುದು ಆಚಾರ್ಯರ ವಿಷಯದಲ್ಲಿ ಗೌರವಸೂಚಿಸುವ ಸಲುವಾಗಿ. ಅನೇಕಾತ್ಮವಿದರ ಸಮೀಪಕ್ಕೆ ಹೋಗಿ ಎಲ್ಲರಿಂದಲೂ, ಬ್ರಹ್ಮೋಪದೇಶವನ್ನು ಪಡೆಯಬೇಕೆಂಬ ಅಭಿಪ್ರಾಯವಲ್ಲ.

**ಜ್ಞಾನಿನಃ ತತ್ತ್ವದರ್ಶಿನಃ**= ಜ್ಞಾನವುಳ್ಳವರಲ್ಲಿ ಕೆಲವರು ಮಾತ್ರವೇ ಯಥಾವತ್ತಾಗಿ ತತ್ತ್ವವನ್ನು ನೋಡಿರುತ್ತಾರೆ. ಎಲ್ಲರೂ ಹಾಗೆ ಇರುವುದಿಲ್ಲ. ಅದಕ್ಕೋಸ್ಕರ **ತತ್ತ್ವದರ್ಶಿನಃ** ಎಂಬ ವಿಶೇಷಣವನ್ನು ಜ್ಞಾನಿಗಳಿಗೆ ಹೇಳಿದೆ. ಯಥಾರ್ಥತತ್ತ್ವವನ್ನು ಚೆನ್ನಾಗಿ ಯಾರು ನೋಡಿದ್ದಾರೆಯೋ ಅವರು ಉಪದೇಶಿಸಿದ ಜ್ಞಾನವೇ ಕಾರ್ಯಸಿದ್ಧಿಯನ್ನು ಮಾಡಲು ಸಮರ್ಥವಾಗಿದೆ ; ಉಳಿದಿದ್ದು ಅಲ್ಲ–ಎಂದು ಭಗವಂತನ ಅಭಿಪ್ರಾಯ. (ಶಂ.ಭಾ.)

**ತತ್ತ್ವದರ್ಶಿನಃ** ಎಂಬ ಪದಕ್ಕೆ ಆತ್ಮಸ್ವರೂಪವನ್ನು ಸಾಕ್ಷಾತ್ಕರಿಸಿದವರು–ಎಂದು ಅರ್ಥಮಾಡಿ ಅಂತಹ ಜ್ಞಾನಿಗಳು ನಮಸ್ಕಾರವೇ ಮುಂತಾದುವುಗಳಿಂದ ಸೇವಿಸಲ್ಪಟ್ಟು ಜ್ಞಾನಪಡೆಯುವ ಇಷ್ಟದಿಂದ ಸಮಯವರಿತು ಪ್ರಶ್ನೆಮಾಡುವ ನಿನ್ನ ಆಶಯವನ್ನರಿತು ಜ್ಞಾನವನ್ನು ಉಪದೇಶಿಸುತ್ತಾರೆ.

**ವಿದ್ಧಿ**= ವಿಶದಾಕಾರವಾಗಿ ತಿಳಿ. (ರಾ.ಭಾ.)

**ಪರಿಪ್ರಶ್ನಃ** = ಪ್ರತಿವಾದಿಗಳಂತೆ ಕುಯುಕ್ತಿಗಳಿಂದ ಪ್ರಶ್ನೆಮಾಡಬಾರದು. ತನ್ನ ಬುದ್ಧಿವಂತಿಕೆಯನ್ನು ಬಚ್ಚಿಟ್ಟುಕೊಂಡು ಅರಿಯದವನಂತೆ, ನೇರವಾಗಿ ಕೇಳಬೇಕಾದುದನ್ನು ಕೇಳದೇ ವಿಷಯಕ್ಕೆ ಸಂಬಂಧಪಡದ ವಿಷಯವನ್ನು ಪ್ರಶ್ನಿಸಬಾರದು. (ಶ್ರೀವೇದಾಂತದೇಶಿಕರು)

**ತದ್ವಿದ್ಧಿ**= ಅದನ್ನು ತಿಳಿದುಕೊ. ಈಗಲೂ ಕೂಡ ಅರ್ಜುನನು ಜ್ಞಾನಿಯಾಗಿದ್ದಾನೆ. ಜ್ಞಾನಿಯಾಗಿದ್ದರೂ **'ಯದ್ ಜ್ಞಾತ್ವಾ ನ ಪುನರ್ಮೋಹಂ'** ಎಂದು ಅವನಿಗೆ ಮೋಹವನ್ನು ಏಕೆ ಹೇಳಿದೆ–ಎಂದರೆ ಅಭಿಭವದಿಂದ. ಇದರಿಂದ ಅರ್ಜುನನು ಜ್ಞಾನೀ ಎಂಬುದು ಸಿದ್ಧವಾಗುತ್ತದೆ. ಅವನು ಜ್ಞಾನೀ ಎಂಬುದಕ್ಕೆ ಪ್ರಮಾಣವನ್ನು **'ಸಃ ಜ್ಞಾನೀ ನರಾಂಶಃ**

ಇನ್ದ್ರಸ್ಯ ಪಾರ್ಥಾರ್ಷ್ಟಿಷೇಣೌ' ಎರಡನೇ ಅಧ್ಯಾಯದಲ್ಲೇ ಭಾಷ್ಯದಲ್ಲಿ ಹೇಳಿದೆ. (ಮ.ಭಾ.)

ಈ ಶ್ಲೋಕದ ಬಗ್ಗೆ ಶಿರಡಿಯ ಸಂತ ಶ್ರೀಸಾಯಿನಾಥರು ಹೀಗೆ ಹೇಳಿರುತ್ತಾರೆ :–

ಈ ಶ್ಲೋಕವು, ಮುಮುಕ್ಷುವಾದ ಶಿಷ್ಯನು, ಶ್ರೋತ್ರಿಯನೂ ಬ್ರಹ್ಮ ನಿಷ್ಠನೂ ಆದ ಗುರುವನ್ನು ಬ್ರಹ್ಮಜ್ಞಾನಪ್ರಾಪ್ತಿಗಾಗಿ ಹೇಗೆ ಸಮೀಪಿಸ ಬೇಕೆಂಬುದನ್ನು ಹೇಳುತ್ತದೆ. ಶಿಷ್ಯನು ತನ್ನ ತನು-ಮನ-ಧನಗಳನ್ನೂ ಮತ್ತು ಆತ್ಮವನ್ನೂ ಸಂಪೂರ್ಣವಾಗಿ ಗುರುವಿಗೆ ಅರ್ಪಿಸಬೇಕು–(ಎಂದರೆ ತಾನು ಮತ್ತು ತನ್ನದೆಲ್ಲವೂ ಗುರುವಿಗೆ ಸೇರಿದ್ದು ; ಅವನಿಚ್ಛೆಯಂತೆ ಉಪ ಯೋಗಿಸಲ್ಪಡತಕ್ಕದ್ದು ಎಂಬ ದೃಢವಿಶ್ವಾಸದಿಂದ ಗುರುವಿಗೆ ಶರಣುಹೋಗ ಬೇಕು.) 'ಪ್ರಣಿಪಾತ'–ಎಂದರೆ ಮೇಲೆ ಹೇಳಿದ ರೀತಿಯ ಮನೋ ಭಾವದಿಂದ ಕೂಡಿ ಗುರುವಿಗೆ ಸಾಷ್ಟಾಂಗವಾಗಿ ನಮಸ್ಕರಿಸಬೇಕು. 'ಪರಿ ಪ್ರಶ್ನೆ'–ಎಂದರೆ ಮತ್ತೆ ಮತ್ತೆ ಪ್ರಶ್ನಿಸಬೇಕು. ಅರ್ಥವಿಲ್ಲದ, ನಿಷ್ಪ್ರಯೋ ಜನಕಾರಿಯಾದ (ಯಾವುದಾದರೂ ಪ್ರಶ್ನೆಯನ್ನು ಕೇಳಲೇಬೇಕಲ್ಲಾ ಎಂಬ ದೃಷ್ಟಿಯಿಂದ) ಗೊಂದಲವನ್ನುಂಟುಮಾಡಿ ಗುರುವನ್ನೂ ಪೇಚಿಗೆ ಸಿಕ್ಕಿಸುವ ಮತ್ತು ಅವರಲ್ಲಿ ತಪ್ಪುಕಂಡುಹಿಡಿಯುವ ಉದ್ದೇಶದಿಂದ ಪ್ರಶ್ನೆಗಳನ್ನು ಕೇಳಬಾರದು. ತತ್ತ್ವವನ್ನು ತಿಳಿಯುವ ಅಭಿಲಾಷೆಯಿಂದ, ಬಹಳ ವಿನೀತನಾಗಿ, ತನಗೆ ಚೆನ್ನಾಗಿ ತಿಳಿಯುವವರೆಗೂ, ಮತ್ತೆ ಮತ್ತೆ ಪ್ರಶ್ನಿಸಿ ಗುರುವಿನಿಂದ ಉತ್ತರ ಪಡೆಯಬೇಕು. 'ಸೇವೆ'–ಎಂದರೆ ಕೇವಲ ಗುರುವಿನ ಪಾದಸಂವಹನ (ಕಾಲೊತ್ತುವುದು) ಇದೇ ಮುಂತಾದ ದೈಹಿಕಸೇವೆ ಮಾಡು ವುದು ಮಾತ್ರವಲ್ಲ. 'ಗುರುವಿನ ಸೇವೆಮಾಡಲು ಅಥವಾ ಮಾಡದಿರಲು ತಾನು ಸ್ವತಂತ್ರನು' ಮುಂತಾದ ಭಾವನೆಗಳನ್ನು ಮನಸ್ಸಿನಲ್ಲಿಯೂ ಸಹ ತರಕೂಡದು. 'ತನ್ನ ದೇಹವು ತನ್ನದಲ್ಲ ; ಶ್ರೀಗುರುವೇ ಇದಕ್ಕೆ ಸ್ವಾಮಿಯು; ಗುರುಗಳ ಸೇವೆಗಾಗಿಯೇ ಇದಿರುವುದು' ಎಂಬ ಏಕೈಕದೃಷ್ಟಿ ಇರಬೇಕು.

'ಉಪದೇಕ್ಷ್ಯನ್ತಿ ತೇ ಜ್ಞಾನಂ' ಎಂಬಲ್ಲಿ 'ಉಪದೇಕ್ಷ್ಯನ್ತಿ ತೇಽಜ್ಞಾನಂ' ಎಂಬ ಪಾಠದ ಪ್ರಕಾರ ಹೀಗೆ ಅರ್ಥಮಾಡಬಹುದು :

ಬ್ರಹ್ಮವೊಂದೇ ಸದ್ವಸ್ತು ; ಜ್ಞಾನಮಯ. ಮಿಕ್ಕೆಲ್ಲವೂ ಅಸತ್ತು ಅಥವಾ ಅಜ್ಞಾನ. ವಾಕ್ಕು ಮತ್ತು ಮನಸ್ಸುಗಳೂ ಬ್ರಹ್ಮನ ಹತ್ತಿರಕ್ಕೆ ಹೋಗಲಾರವು ಎಂದು ಶ್ರುತಿಯಲ್ಲಿ ಹೇಳಿದೆ. (ಯತೋ ವಾಚೋ ನಿವರ್ತನ್ತೇ ಅಪ್ರಾಪ್ಯ ಮನಸಾ ಸಹ) ಆದುದರಿಂದ ಗುರುವಿನ ಉಪದೇಶವಾಕ್ಕೂ ಸಹ ಜ್ಞಾನವಲ್ಲವೆಂದಾಯಿತು. ಚುಚ್ಚಿಕೊಂಡಿರುವ ಒಂದು ಮುಳ್ಳನ್ನು ಮತ್ತೊಂದು ಮುಳ್ಳಿನಿಂದಲೇ ತೆಗೆಯುವಂತೆ–ಗುರುವಿನ ಉಪದೇಶವೆಂಬ ಜ್ಞಾನದಿಂದ ಶಿಷ್ಯನ ಅಜ್ಞಾನವು ತೆಗೆಯಲ್ಪಡುತ್ತದೆ. ಇದೂ ಅಲ್ಲದೇ ಶಿಷ್ಯನು ಜೀವಾತ್ಮ. ಜೀವಾತ್ಮದ ಸ್ವಭಾವವೇ ಜ್ಞಾನ. ಆದುದರಿಂದ ಹೊಸದಾಗಿ ಯಾರೂ ಅದನ್ನು ಅವನಿಗೆ ಕೊಡಬೇಕಾಗಿಲ್ಲ. ಅವನ ಸ್ವಭಾವಸಿದ್ಧವಾದ ಜ್ಞಾನವನ್ನು ಮುಚ್ಚಿಕೊಂಡಿರುವ ಆವರಣವನ್ನು ತೆಗೆಯುವುದೇ ಗುರೂಪದೇಶದಿಂದಾಗುವ ಪ್ರಯೋಜನ. ಆದರೆ ಅದು ಒಮ್ಮೆಗೇ ಆಗುವ ಕಾರ್ಯವಲ್ಲ. ಅನಾದಿಕಾಲದಿಂದ ಅಜ್ಞಾನಾಂಧಕಾರದಲ್ಲಿ ಮುಳುಗಿರುವ ಜೀವನನ್ನು ಉದ್ಧರಿಸಲು, ಅನೇಕಜನ್ಮಗಳ ಗುರೂಪದೇಶವೇ ಬೇಕು. ವಾಙ್ಮನಸ್ಸುಗಳಿಗೆ ಅಗೋಚರನಾದ, ಅವನ್ನು ಮೀರಿದ ಬ್ರಹ್ಮದ ಬಗ್ಗೆ ವಾಕ್ಕಿನಿಂದ ಉಪದಿಷ್ಟವಾಗುವುದೆಂಬುದೇನು? ಪಾಚಿಯು ನೀರನ್ನು ಮುಚ್ಚಿರುವಂತೆ ಅಜ್ಞಾನವು ಜ್ಞಾನವನ್ನು ಮುಚ್ಚಿದೆ. ಪಾಚಿಯನ್ನು ಸರಿಸಿದರೆ ನೀರು ಕಾಣುತ್ತದೆ. ಹೊಸದಾಗಿ ನೀರನ್ನು ತರಬೇಕಾಗಿಲ್ಲ. ಗ್ರಹಣ ಸಮಯದಲ್ಲಿ ರಾಹು-ಕೇತುಗಳು ಸೂರ್ಯ-ಚಂದ್ರರನ್ನಾವರಿಸಿರುತ್ತಾರೆ. ಗ್ರಹಣವು ಬಿಟ್ಟನಂತರ–ಗ್ರಹಣದ ಸಮಯದಲ್ಲಿಯೂ ಹಾಗೆಯೇ ಇದ್ದ ನಮಗೆ ಕಾಣಿಸದಿದ್ದ ಸೂರ್ಯ-ಚಂದ್ರರ ಬೆಳಕು ನಮಗೆ ಕಾಣಿಸುತ್ತದೆ. ನಾವು ಕಣ್ಣಿನಿಂದ ನೋಡುತ್ತೇವೆ. ಕಣ್ಣುಗಳ ಮೇಲೆ ಪೊರೆ ಬೆಳೆದಾಗ ಕಣ್ಣುಗಳು ಕಾಣುವುದಿಲ್ಲ. ಆದರೆ ಪೊರೆಯನ್ನು ತೆಗೆದ ಮೇಲೆ ಪುನಃ ಕಣ್ಣುಗಳು ಕಾಣಲಾರಂಭಿಸುತ್ತವೆ.

ಜ್ಞಾನವು ಉಪದೇಶದಿಂದ ಹೊಂದತಕ್ಕುದ್ದಲ್ಲ ; ಅದು ಸ್ವಯಂವ್ಯಕ್ತ. ಪ್ರಣಿಪಾತ, ಪರಿಪ್ರಶ್ನ ಮತ್ತು ಸೇವೆಗಳು ಶ್ರೀಗುರುವಿನ ಕೃಪೆಯನ್ನು ಗಳಿಸುವ ಸಾಧನಗಳು. ಅಜ್ಞಾನವೇ ಸಂಸಾರಕ್ಕೆ ಕಾರಣ–ಅದರ ಬೀಜ. ಗುರು ಕೃಪೆಯಿಂದ ಅಂಜನವು ಕಣ್ಣಿಗೆ ಹಚ್ಚಲ್ಪಟ್ಟರೆ ಮಾಯೆಯ ತೆರೆ ಸರಿದು

ಪ್ರಜ್ಞಾನಬ್ರಹ್ಮವು ಪ್ರಕಾಶಿಸುತ್ತದೆ. ಜ್ಞಾನವು ಕಾರ್ಯವಲ್ಲ. ಯಾವುದೇ ಕಾರಣದಿಂದ ಉಂಟಾದುದಲ್ಲ. ಅದು ಯಾವಾಗಲೂ ಸ್ವಯಂಸಿದ್ಧವಾಗಿರುವುದು. ಹೀಗಿದ್ದರೂ ಶ್ರೀಕೃಷ್ಣನು ಅರ್ಜುನನನ್ನು ತತ್ತ್ವದರ್ಶಿಗಳಾದ ಜ್ಞಾನಿಗಳ ಬಳಿಗೆ ಉಪದೇಶಕ್ಕಾಗಿ ಹೋಗು' ಎಂದೇಕೆ ಹೇಳಿದನೆಂದರೆ–ಕೃಷ್ಣನೇ ಜ್ಞಾನಿಗಳಿಗೂ ತನಗೂ ವ್ಯತ್ಯಾಸವಿಲ್ಲವೆನ್ನುತ್ತಾನಲ್ಲವೇ? 'ಜ್ಞಾನೀತ್ವಾತ್ಮೈವ ಮೇ **ಮತಮ್ ।'**)

**ಓಂ ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಣ್ಡವ ।**
**ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥೩೫॥**

ಪಾಂಡವ! ಅದನ್ನು ಅರಿತುಕೊಂಡರೆ ಮತ್ತೆ ಹೀಗೆ ಮೋಹವನ್ನು ನೀನು ಹೊಂದುವುದಿಲ್ಲ. ಆದುದರಿಂದ ಭೂತಗಳೆಲ್ಲವನ್ನೂ ನಿನ್ನಲ್ಲಿಯೂ ಮತ್ತು ನನ್ನಲ್ಲಿಯೂ ಕಾಣುವೆ.

* * *

(ಆತ್ಮಜ್ಞಾನವನ್ನು ತಿಳಿದುಕೊಂಡು ಆತ್ಮಾನುಭವವನ್ನು ಪಡೆದುಕೊಂಡ ನಂತರ ನೀನು ಈ ವಿಧವಾದ ಮೋಹವನ್ನು ಮತ್ತೆ ಹೊಂದುವುದಿಲ್ಲ–ಎನ್ನುತ್ತಾನೆ ಶ್ರೀಕೃಷ್ಣ. ಆತ್ಮಾನಾತ್ಮವಿವೇಕವುಂಟಾಗುತ್ತದೆ. ಸಂಸಾರದ ಸ್ವರೂಪವು ತಿಳಿಯುತ್ತದೆ. ಜನನ-ಮರಣಗಳ ರಹಸ್ಯವು ತಿಳಿಯುತ್ತದೆ. ದ್ವಂದ್ವಾತೀತನಾಗುತ್ತಾನೆ. ಎಲ್ಲಕ್ಕಿಂತಲೂ ಮುಖ್ಯವಾಗಿ ಮಮಕಾರವು ಹೋಗುತ್ತದೆ. ಮಮಕಾರವು ಹೋಯಿತೆಂದರೆ ಶೋಕ-ಮೋಹಗಳಿಗೆ ಅವಕಾಶವೇ ಇಲ್ಲ. ಆತ್ಮಾನುಭವಿಯು ಸದಾ ಆನಂದಮಯನಾಗಿಯೇ ಇರುತ್ತಾನೆ. ಈ ವಿಷಯವನ್ನೇ ಈಶಾವಾಸ್ಯೋಪನಿಷತ್ತಿನಲ್ಲಿಯೂ ಬೃಹದಾರಣ್ಯಕದಲ್ಲಿಯೂ ಹೀಗೆ ಹೇಳಿದ್ದಾರೆ :

**ಯಸ್ಮಿನ್ಸರ್ವಾಣಿ ಭೂತಾನಿ ಆತ್ಮೈವಾಭೂದ್ವಿಜಾನತಃ ।**
**ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ॥೭॥**

ಯಾವಾಗ ತತ್ತ್ವಜ್ಞಾನಿಗೆ ಎಲ್ಲ ಪ್ರಾಣಿಗಳೂ ತನ್ನ ಆತ್ಮವೇ ಆಗುತ್ತವೆಯೋ–ಆಗ ಏಕತ್ವವನ್ನು ನೋಡುತ್ತಿರುವ ಅವನಿಗೆ ಮೋಹವೆಲ್ಲಿ? ಶೋಕವೆಲ್ಲಿ? (ಶೋಕ-ಮೋಹಗಳು ಅಜ್ಞಾನಿಗೆ ಆಗುವುದೇ ಹೊರತು ವಿಶುದ್ಧವಾದ ಆತ್ಮತತ್ತ್ವವನ್ನು ಕಂಡುಕೊಂಡವನಿಗೆ ಆಗುವುದಿಲ್ಲ.)

ಆತ್ಮಜ್ಞಾನದಿಂದ ನೀನು ಸಕಲಪ್ರಾಣಿಗಳನ್ನೂ ನಿನ್ನಲ್ಲಿಯೇ ಕಂಡು ಕೊಳ್ಳುವೆ.

'ಶ್ರೀಕೃಷ್ಣನು ಬಾಯ್ತೆರೆದು ಯಶೋದೆಗೆ ಬ್ರಹ್ಮಾಂಡವನ್ನೇ ತೋರಿಸಿದನು' ಎಂದು ಭಾಗವತದ ಕಥೆಯಿದೆ. ಇಲ್ಲಿ ಶ್ರೀಕೃಷ್ಣನು ಅರ್ಜುನನಿಗೆ 'ನೀನು ಬ್ರಹ್ಮಜ್ಞಾನಿಯಾದರೆ ನಿನ್ನಲ್ಲಿಯೇ ಸರ್ವಪ್ರಾಣಿಗಳನ್ನೂ ಕಾಣುವೆ' ಎನ್ನುತ್ತಾನೆ. ಇದರ ರಹಸ್ಯವೇನು? ಪ್ರಕೃತಿಯ ಉತ್ಪತ್ತಿಗೆ ಕಾರಣನಾದ ಪರಮಾತ್ಮನು ನಮ್ಮಲ್ಲಿಯೇ ಇರುವಾಗ ಪ್ರಕೃತಿಯೂ ನಮ್ಮಲ್ಲಿಯೇ ಇರಲೇಬೇಕಲ್ಲವೇ? ನನ್ನಲ್ಲಿಯೂ ನೀನು ಸಕಲಪ್ರಾಣಿಗಳನ್ನೂ ಕಾಣುವೆ ಎನ್ನುತ್ತಾನೆ ಶ್ರೀಕೃಷ್ಣ. ಕನ್ನಡಿಯೊಳಗೆ ಕನ್ನಡಿಯನ್ನು ನೋಡಿದಂತೆ ಭಗವಂತನಲ್ಲಿಯೇ ಬ್ರಹ್ಮಾಂಡವಿದೆ. ಬ್ರಹ್ಮಾಂಡದಲ್ಲಿ ಭಗವಂತನಿದ್ದಾನೆ. ಅವನಿಲ್ಲದ ಸ್ಥಳವೇ ಇಲ್ಲ. ಆತ್ಮಸಾಕ್ಷಾತ್ಕಾರವನ್ನು ಮಾಡಿಕೊಂಡವನು ಶುದ್ಧನಾದ ಪರಮಾತ್ಮನನ್ನು ತನ್ನಲ್ಲಿಯೇ ಕಂಡುಕೊಂಡನೆಂದಮೇಲೆ ಆ ಪರಮಾತ್ಮನಲ್ಲಿ ಅಖಂಡಬ್ರಹ್ಮಾಂಡವಿರುವುದೆಂಬುದನ್ನೂ ಕಂಡುಕೊಳ್ಳುವನೆಂಬುದು ಸಹಜವಾಗಿಯೇ ಇದೆ.

**ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ**

ಬ್ರಹ್ಮಾದಿಸ್ತಂಬಪರ್ಯಂತವಾದ ಎಲ್ಲ ಜಗತ್ತೂ ಪ್ರತ್ಯಗಾತ್ಮನಾದ ನನ್ನಲ್ಲೇ ಇದೇ–ಎಂದು ನಿನ್ನಲ್ಲಿ ನೋಡಿಕೊಳ್ಳುವೆ. ಹಾಗೆಯೇ ವಾಸುದೇವ ಪರಮೇಶ್ವರನಾದ ನನ್ನಲ್ಲಿಯೂ ನೋಡುವೆ. ಹೀಗೆ ಉಪನಿಷತ್ಪ್ರಸಿದ್ಧವಾದ ಕ್ಷೇತ್ರಜ್ಞ ಮತ್ತು ಈಶ್ವರರ ತತ್ತ್ವವನ್ನು ನೋಡುವೆ.

**ಕ್ಷೇತ್ರಜ್ಞೇಶ್ವರೈಕತ್ವಂ ಸರ್ವೋಪನಿಷತ್ಪ್ರಸಿದ್ಧಂ ದ್ರಕ್ಷ್ಯಸಿ ಇತ್ಯರ್ಥಃ**
**(ಶಂ.ಭಾ.)**

ಪ್ರಕೃತಿಸಂಸರ್ಗವನ್ನು ಬಿಟ್ಟರೆ ಎಲ್ಲ ಭೂತಗಳೂ ಜ್ಞಾನೈಕಾಕಾರವಾಗಿರುವುದರಿಂದ ಸಮ–ಎಂದು ನಿನ್ನ ನಿದರ್ಶನದಿಂದ ತಿಳಿಯುವೆ. ಅನಂತರ ಎಲ್ಲ ಭೂತಗಳನ್ನೂ ನನ್ನಲ್ಲಿ ನೋಡುವೆ. ಏಕೆಂದರೆ : ಪರಿಶುದ್ಧವಾದ ಎಲ್ಲ ಆತ್ಮವಸ್ತುವೂ ನನ್ನ ಸ್ವರೂಪಕ್ಕೆ ಸಮನಾದುದು. ಆದುದರಿಂದ ಪ್ರಕೃತಿವಿನಿರ್ಮುಕ್ತವಾದ ಎಲ್ಲ ಆತ್ಮವಸ್ತುಗಳೂ ಪರಸ್ಪರ ಸಮ ಮತ್ತು ಸರ್ವೇಶ್ವರ

ನಿಗೂ ಸಮ. ತನ್ನಲ್ಲಿ ಇತರರನ್ನು ನೋಡುವುದು ಎಂದರೆ ಎಲ್ಲರೂ ಸಮಾನಾಕಾರ, ಜ್ಞಾನಾಕಾರ ಎಂದು ತನ್ನ ನಿದರ್ಶನದಿಂದ ಅನುಸಂಧಾನ ಮಾಡುವುದು.

**ಪುಮಾನ್ ನ ದೇವೋ ನ ನರಃ ನಾಯಂ ದೇವೋ ನ ಮರ್ತ್ಯೋ ವಾ ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ** (ಶ್ರೀವೇದಾಂತದೇಶಿಕರು)

**ಯೇನ....ಮಯಿ** ಯಾವ ಜ್ಞಾನದಿಂದ ನೀನು ಆತ್ಮಭೂತನಾಗಿರುವ (ಸರ್ವಾಂತರ್ಯಾಮಿಯಾಗಿರುವ) ನನ್ನಲ್ಲಿ ಎಲ್ಲ ಭೂತಗಳನ್ನೂ ಆ ಮೋಹ ನಾಶವೆಂಬ ಕಾರಣದಿಂದಲೇ ನೋಡುತ್ತೀಯೆ.) (ಮ.ಭಾ.)

**ಓಂ ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥೩೬॥**

ನೀನು ಎಲ್ಲ ಪಾಪಿಗಳಿಗಿಂತಲೂ ಹೆಚ್ಚು ಪಾಪವನ್ನು ಮಾಡಿದ್ದರೂ ಚಿಂತೆಯಿಲ್ಲ. ಆ ಪಾಪಗಳೆಲ್ಲವನ್ನೂ ಜ್ಞಾನವೆಂಬ ತೆಪ್ಪದಿಂದಲೇ ದಾಟಿ ಬಿಡುವೆ.

* * *

(ಇಲ್ಲಿ ಶ್ರೀಕೃಷ್ಣನು 'ನೀನು ಪಾಪಕೃತ್ತಮನಾಗಿದ್ದರೂ, ಮಹಾ ಪಾಪಿಷ್ಠನಾಗಿದ್ದರೂ' ಎಂದು ಅರ್ಜುನನನ್ನು ಕುರಿತು ಹೇಳಿದ್ದಾನೆ. ಆದರೆ ಅರ್ಜುನನು ಮಹಾಪಾಪಿಷ್ಠನೆಂಬ ಅಭಿಪ್ರಾಯವಲ್ಲ. ಇದು ಮನುಷ್ಯ ಸಾಮಾನ್ಯಕ್ಕೆ ದಯಾಮಯನಾದ ಪರಮಾತ್ಮನು ಕೊಟ್ಟಿರುವ ಭರವಸೆ ಯಾಗಿದೆ. ಕಾಲಕರ್ಮಸಂಯೋಗದಿಂದ ಪಾಪಮಾಡಿದವರು–ತಾವು ಎಂದೆಂದಿಗೂ ಪಾಪಿಷ್ಠರು. ಬಿಡುಗಡೆಯೇ ಇಲ್ಲ–ಎಂದು ಕೊರಗುತ್ತಿರ ಬೇಕಾಗಿಲ್ಲ. 'ಮಹಾಪಾಪಿಷ್ಠನೂ ಸಹ ಜ್ಞಾನವೆಂಬ ನಾವೆಯಿಂದ ಅಗಾಧ ವಾದ ಪಾಪಸಮುದ್ರವನ್ನು ದಾಟಬಹುದು'–ಎಂದು ಆಶ್ವಾಸನೆ ನೀಡಿದ್ದಾನೆ. ಎಂತಹುದೇ ಪಾಪಮಾಡಿದ್ದರೂ ಸಹ ಆತ್ಮಜ್ಞಾನವಾದ ಮೇಲೆ ಆ ಪಾಪ ಗಳೆಲ್ಲವೂ ಭಸ್ಮವಾಗಿ ಹೋಗುತ್ತವೆ. ಇದಕ್ಕೆ ನಾವು ವಾಲ್ಮೀಕಿಮಹರ್ಷಿಗಳ ಉದಾಹರಣೆಯನ್ನೇ ತೆಗೆದುಕೊಳ್ಳಬಹುದಾಗಿದೆ. ವಾಲ್ಮೀಕಿಗಳು ಮೊದಲು **ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮರೇ** ಆಗಿದ್ದರು. ನಾರದರ ಅನುಗ್ರಹದಿಂದಾಗಿ ಮಹಾಜ್ಞಾನಿಗಳೇ ಆದರು. ಅವರು ಮಾಡಿದ್ದ ಪಾಪ

ಗಳೆಲ್ಲವೂ ದಗ್ಧವಾಗಿಹೋದುವು. ಪಾಪದಲ್ಲಿಯೇ ಹುಟ್ಟಿ ಪಾಪದಲ್ಲಿಯೇ ಸಾಯುವುದು ನಮ್ಮ ಧರ್ಮದ ಅಭಿಪ್ರಾಯವಲ್ಲ. ಮೊದಲು ಪಾಪಿಷ್ಠ ರಾಗಿದ್ದು ಅನಂತರ ಜ್ಞಾನಿಗಳಾದವರ ಅನೇಕವಾದ ಇತಿಹಾಸಗಳಿವೆ. ಆದುದರಿಂದ ಪಾಪಮಾಡಿದವರು ಎದೆಗುಂದುವ ಕಾರಣವಿಲ್ಲ. ಮುಂದೆ ಪಾಪಕರ್ಮಗಳನ್ನು ಮಾಡದಂತೆ ಎಚ್ಚೆತ್ತುಕೊಂಡರೆ ಸಾಕು. ಮನುಷ್ಯನು ಉದ್ಧಾರವಾಗುತ್ತಾನೆ. ಶ್ರೀಕೃಷ್ಣನು ಜ್ಞಾನದ ಹೆಚ್ಚುಗಾರಿಕೆಯನ್ನು ಇಲ್ಲಿ ಹೇಳಿದ್ದಾನೆ. ಜ್ಞಾನ ಎಂದರೆ ಪರಮಾರ್ಥಜ್ಞಾನ. ಲೌಕಿಕಜ್ಞಾನವಲ್ಲ. ಇದು ಅನುಭವದಿಂದಲೇ ತಿಳಿಯಬೇಕಾದುದು.

ಮುಮುಕ್ಷುವಿಗೆ ಧರ್ಮವೂ ಅಥವಾ ಪುಣ್ಯವೂ ಪ್ರತಿಬಂಧಕವಾದುದ ರಿಂದ ಅದನ್ನು ಇಲ್ಲಿ ಪಾಪವೆಂದು ಪರಿಗಣಿಸಬಹುದು–ಎಂದು ಶ್ರೀಶಂಕರರ ಅಭಿಪ್ರಾಯ.)

**ಓಂ ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥೩೭॥**

ಚೆನ್ನಾಗಿ ಹೊತ್ತಿಕೊಂಡು ಉರಿಯುತ್ತಿರುವ ಬೆಂಕಿಯು ಅದಕ್ಕೆ ಹಾಕಿದ ಸೌದೆಗಳೆಲ್ಲವನ್ನೂ ಯಾವ ರೀತಿಯಲ್ಲಿ ಭಸ್ಮಮಾಡಿಬಿಡುವುದೋ–ಅದೇ ರೀತಿಯಲ್ಲಿ ಜ್ಞಾನವೆಂಬ ಅಗ್ನಿಯು ಸರ್ವಕರ್ಮಗಳನ್ನೂ ಭಸ್ಮಮಾಡಿ ಬಿಡುತ್ತದೆ.

* * *

(ಹಿಂದಿನ ಶ್ಲೋಕದಲ್ಲಿ ಶ್ರೀಕೃಷ್ಣನು ಜ್ಞಾನದ ನಾವೆಯಿಂದ ಪಾಪ ಸಮುದ್ರವನ್ನು ದಾಟಬಹುದೆಂದು ಹೇಳುತ್ತಾನೆ. ಆದರೆ ಪಾಪಸಮುದ್ರವನ್ನು ದಾಟಿದರೂ ಪಾಪಸಮುದ್ರವು ಮಾತ್ರ ಇದ್ದಂತೆಯೇ ಇರಬಹುದಲ್ಲವೇ? ಚರ್ಮರೋಗವು (ಹುಳುಕಡ್ಡಿ ಮುಂತಾದುವು) ಔಷಧಿಗಳ ಲೇಪನದಿಂದ ಸ್ವಲ್ಪಕಾಲ ಇಲ್ಲದಂತೆ ಕಾಣಬಂದರೂ ಸಹ ಪುನಃ ಹುಟ್ಟಿಕೊಳ್ಳುತ್ತವೆ. ಅದೇ ರೀತಿಯಲ್ಲಿ ಪಾಪಗಳು ಉಳಿದಿರಬಹುದೋ? ಇವನಿಗೆ ಅದರಲ್ಲಿ ಮತ್ತೆ ಪ್ರವೇಶವಾಗಬಹುದೋ?–ಎಂಬ ಸಂಶಯದ ನಿವಾರಣೆಗಾಗಿ ಶ್ರೀಕೃಷ್ಣನು ಈ ಶ್ಲೋಕವನ್ನು ಹೇಳುತ್ತಾನೆ.

ಧಗ-ಧಗನೆ ಉರಿಯುತ್ತಿರುವ ಯಜ್ಞೇಶ್ವರನು ಅವನಲ್ಲಿ ಹಾಕಿದ

ಕಟ್ಟಿಗೆಗಳೆಲ್ಲವನ್ನೂ (ಹಸಿಯಾಗಿದ್ದರೂ ಸಹ) ಸುಟ್ಟು ಭಸ್ಮಮಾಡಿ ಬಿಡುವಂತೆ–ಜ್ಞಾನಾಗ್ನಿಯು ಪುಣ್ಯ-ಪಾಪಪ್ರದವಾದ ಸಕಲಕರ್ಮಗಳನ್ನೂ ಭಸ್ಮಮಾಡಿಬಿಡುತ್ತದೆ. ಜ್ಞಾನಾಗ್ನಿಯು ಕರ್ಮವನ್ನು ಹೇಗೆ ಭಸ್ಮಮಾಡುತ್ತದೆ? ಕರ್ಮವನ್ನು ಫಲರೂಪವಾದ ಮೊಳಕೆಯಿಲ್ಲದುದನ್ನಾಗಿ ಮಾಡುತ್ತದೆ. ಲೋಕಸಂಗ್ರಹಕ್ಕಾಗಿ ಕರ್ಮಮಾಡಿದರೂ ಪುಣ್ಯ-ಪಾಪರೂಪವಾದ ಫಲವಿಲ್ಲದಂತೆ ಮಾಡುತ್ತದೆ. ಕೇವಲ ಈ ಜನ್ಮದಲ್ಲಿ ಮಾಡಿದ ಕರ್ಮಫಲ ವನ್ನು ಮಾತ್ರವೇ ಅಲ್ಲ. ಮನುಷ್ಯನ ಈ ಜನ್ಮಕ್ಕೆ ಕಾರಣವಾದ ಹಿಂದಿನ ಜನ್ಮದ ಕರ್ಮಫಲವನ್ನೂ ಸಹ ಜ್ಞಾನವು ನಿರ್ವೀರ್ಯವನ್ನಾಗಿ ಮಾಡುತ್ತದೆ.

ಆದರೆ ಹಿಂದಿನ ಕರ್ಮದ ಫಲವು ಹುಟ್ಟಿದೊಡನೆಯೇ ಕಾರ್ಯಗತ ವಾಗಲು ಪ್ರಾರಂಭವಾಗಿಬಿಟ್ಟಿರುವುದರಿಂದ ಪ್ರಾರಬ್ಧಕರ್ಮವನ್ನು ಜ್ಞಾನಿ ಯಾದವನೂ ಸಹ ಅನುಭವಿಸಿಯೇ ತೀರಬೇಕಾಗುವುದು–ಎಂದು ಶ್ರೀಶಂಕರರ ಅಭಿಪ್ರಾಯವಾಗಿದೆ.

**ಯೇನ ಕರ್ಮಣಾ ಶರೀರಂ ಆರಬ್ಧಂ ತತ್ ಪ್ರವೃತ್ತಫಲತ್ವಾತ್ ಉಪಭೋಗೇನೈವ ಕ್ಷೀಯತೇ ।**

ಯಾವ ಕರ್ಮದಿಂದ ಜ್ಞಾನಿಯ ಶರೀರವು ಉಂಟಾಗಿರುವುದೋ ಅದು ಫಲವನ್ನು ಕೊಡುವುದಕ್ಕೆ ಪ್ರಾರಂಭಮಾಡಿಬಿಟ್ಟಿರುವುದರಿಂದ ಅನು ಭವಿಸುವುದರಿಂದಲೇ ಕ್ಷಯವಾಗುವುದು.

ಜ್ಞಾನಿಯು ಈ ಪ್ರಾರಬ್ಧವನ್ನು ಕಳೆದುಕೊಳ್ಳುವನೆಂಬುದರಲ್ಲಿಯೂ ಒಂದು ಸ್ವಾರಸ್ಯವಿದೆ. ಇವನು ಆತ್ಮಾನಾತ್ಮವಿವೇಕವುಳ್ಳವನಾಗಿರುತ್ತಾನೆ. 'ಹಿಂದಿನ ಕರ್ಮಫಲದಂತೆ ಹುಟ್ಟಿರುವ ದೇಹವು ಹಿಂದಿನ ಕರ್ಮಫಲವನ್ನು ಅನುಭವಿಸಲಿ. ನನಗೂ ಇದಕ್ಕೂ ಸಂಬಂಧವಿಲ್ಲ'–ಎಂದು ಭಾವಿಸುತ್ತಾನೆ. ಯಾವುದಾದರೂ ಮುಳ್ಳಿಗೆ ಸಿಕ್ಕಿ ಬಟ್ಟೆಯು ಹರಿದುಹೋದಲ್ಲಿ ಆ ಬಟ್ಟೆಯ ವಿಷಯವಾಗಿ ವಿಚಾರವಂತನು ಎಷ್ಟು ತಾತ್ಸಾರಮಾಡುವನೋ ಅದೇ ರೀತಿ ಯಲ್ಲಿ ಜ್ಞಾನಿಯೂ ಸಹ ಪ್ರಾರಬ್ಧಕರ್ಮದ ಫಲವನ್ನು ಶರೀರವು ಅನುಭವಿಸ ಬೇಕಾಗಿಬಂದಾಗ ತಾತ್ಸಾರದಿಂದಿದ್ದುಬಿಡುತ್ತಾನೆ.

ಜ್ಞಾನಾಗ್ನಿಯು, ಜ್ಞಾನಜ್ಯೋತಿಯು ಹೃತ್ಕಮಲದಲ್ಲಿ ಕಾಣಿಸಿ

ಕೊಂಡಾಗ ಯಾವ ಕರ್ಮಗಳೂ ಉಳಿದಿರುವುದಿಲ್ಲ. ಜ್ಞಾನಾಗ್ನಿಯಲ್ಲಿ ವಿಲೀನವಾಗಿಬಿಟ್ಟಿರುತ್ತವೆ.)

**ಓಂ ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।**
**ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿನ್ದತಿ ॥೩೮॥**

ಜ್ಞಾನಕ್ಕೆ ಸಮಾನವಾದ ಪವಿತ್ರವಸ್ತುವು ಈ ಪ್ರಪಂಚದಲ್ಲಿ ಬೇರೊಂದಿಲ್ಲ. ಕರ್ಮಯೋಗದಲ್ಲಿ ಸಿದ್ಧಿಯನ್ನು ಪಡೆದವನು ಕಾಲಾನುಕಾಲಕ್ಕೆ ತನ್ನಲ್ಲಿ ತಾನೇ ಜ್ಞಾನವನ್ನು ಕಂಡುಕೊಳ್ಳುತ್ತಾನೆ.

* * *

(ಜ್ಞಾನವು ಪರಮಪವಿತ್ರವಾದುದು. ಯಜ್ಞ, ದಾನ, ತಪಸ್ಸು, ಸೇವೆ, ಪೂಜೆ, ವ್ರತ, ಉಪವಾಸ, ಪ್ರಾಣಾಯಾಮ, ಶಮ, ದಮ, ಸಂಯಮ, ಜಪ, ಧ್ಯಾನ–ಇವೆಲ್ಲಕ್ಕೂ ಜ್ಞಾನವೇ ಲಕ್ಷ್ಯವಾಗಿರುವುದರಿಂದ ಎಲ್ಲಕ್ಕಿಂತಲೂ ಪವಿತ್ರವಾದುದು ಜ್ಞಾನ. ಗಂಗಾ-ಯಮುನಾ-ಸರಸ್ವತೀ ಮೊದಲಾದ ಪುಣ್ಯ ನದಿಗಳಲ್ಲಿ ಸ್ನಾನಮಾಡಿದರೆ ಪಾಪಗಳು ಹೋಗಿ ಪುಣ್ಯವು ಬರುವುದು ನಿಜ. ಮೇಲೆ ಹೇಳಿದ ಕರ್ಮಗಳನ್ನೂ ಪವಿತ್ರಕರ್ಮಗಳೆಂದು ಹೇಳುವರು ಮತ್ತು ಮೇಲೆ ಹೇಳಿದ ಮಹಾನದಿಗಳನ್ನೂ ಪವಿತ್ರನದಿಗಳೆಂದು ಕರೆಯುವರು. ಇವುಗಳೆಲ್ಲವೂ ಪರಮಪವಿತ್ರವಾದ ಜ್ಞಾನಕ್ಕೆ ಸಾಧಕಗಳಾಗಿರುವುದರಿಂದ ಇವುಗಳಿಗೆ ಪಾವಿತ್ರ್ಯವು ಲಭಿಸಿದೆ. ಎಂದರೆ ಸ್ವತಃ ಜ್ಞಾನವು ಎಷ್ಟು ಪವಿತ್ರವಾದುದೆಂಬುದನ್ನು ಇದರಿಂದ ಊಹಿಸಬಹುದಾಗಿದೆ. ಇದನ್ನು ಹೇಗೆ ಪಡೆದುಕೊಳ್ಳಬೇಕು? ಎಲ್ಲಿ ಪಡೆದುಕೊಳ್ಳಬೇಕು? ಜ್ಞಾನವೆಂದರೆ ಅಪೇಕ್ಷಿಸಿ ದಾಗ ಸಿದ್ಧಿಸುವ ವಸ್ತುವಲ್ಲ. ಮೇಲೆ ಹೇಳಿದ ಕರ್ಮಗಳ ನಿಷ್ಕಾಮನೆಯ ಅನುಷ್ಠಾನದಿಂದಲೂ, ತೀರ್ಥಯಾತ್ರೆಯೇ ಮುಂತಾದುವುಗಳಿಂದಲೂ ಅಥವಾ ಗುರೂಪದೇಶವಾದ ಧ್ಯಾನಯೋಗದಿಂದಲೂ ಬಹಳ ಕಾಲಾನಂತರ ದಲ್ಲಿ ಪಡೆದುಕೊಳ್ಳಬಹುದು. ಇಂತಹ ಪರಮಪವಿತ್ರವಾದ ಜ್ಞಾನವನ್ನು ತನ್ನ ಆತ್ಮನಲ್ಲಿಯೇ ಕಂಡುಕೊಳ್ಳಬಹುದು. ಜ್ಞಾನವು ಶರೀರವನ್ನು ಬಿಟ್ಟು ಹೊರಗಡೆ ಸಿಕ್ಕುವ ವಸ್ತುವಲ್ಲ. ಕರ್ಮಯೋಗದ ಮೂಲಕವಾಗಿ ಮಮಕಾರ ವನ್ನು ತೊರೆದು ಚಿತ್ತವನ್ನು ಶುದ್ಧಿಗೊಳಿಸಿ, ತನ್ಮೂಲಕವಾಗಿ ಆತ್ಮಜ್ಞಾನ

ವನ್ನು ಪಡೆದುಕೊಳ್ಳಬೇಕು ಅಥವಾ ಗುರೂಪದಿಷ್ಟವಾದ ಧ್ಯಾನಯೋಗದಿಂದ ಆತ್ಮಜ್ಞಾನವನ್ನು ಪಡೆದುಕೊಳ್ಳಬಹುದು.

ಶ್ರೀಶಂಕರರು **ಯೋಗಸಂಸಿದ್ಧಃ** ಎಂಬುದಕ್ಕೆ **ಕರ್ಮಯೋಗೇನ ಸಮಾಧಿಯೋಗೇನ ಚ ಸಂಸಿದ್ಧಃ ಸಂಸ್ಕೃತಃ ಯೋಗ್ಯತಾಂ ಆಪನ್ನಃ ಸನ್ ಮುಮುಕ್ಷುಃ ಕಾಲೇನ ಮಹತಾ ಆತ್ಮನಿ ವಿನ್ದತಿ ಜ್ಞಾನಂ ಲಭತೇ.**

ಯೋಗದಿಂದ ಎಂದರೆ ಕರ್ಮಯೋಗದಿಂದಲೂ, ಸಮಾಧಿಯೋಗದಿಂದಲೂ ಸಂಸ್ಕಾರವನ್ನು ಹೊಂದಿ ಮುಮುಕ್ಷುವಾದವನು ಬಹುಕಾಲದ ಮೇಲೆ ತನ್ನಲ್ಲಿ ತಾನೇ ಆತ್ಮಜ್ಞಾನವನ್ನು ಪಡೆದುಕೊಳ್ಳುವನು–ಎಂದು ವ್ಯಾಖ್ಯಾನಮಾಡಿರುತ್ತಾರೆ.

ಕರ್ಮಯೋಗವು ಜ್ಞಾನಯೋಗಕ್ಕೆ ಬಹಿರಂಗವಾದ ಉಪಾಯ. ಸಮಾಧಿಯೋಗವು ಅಥವಾ ಧ್ಯಾನಯೋಗವು ಅಂತರಂಗವಾದ ಉಪಾಯ. ಎರಡರಿಂದಲೂ ಚಿತ್ತಸಂಸ್ಕಾರವಾದವನಿಗೇ ಜ್ಞಾನವುಂಟಾಗುವುದು–ಎಂಬುದು ಇದರ ಅಭಿಪ್ರಾಯವಾಗಿದೆ.

**ಯೋಗಸಂಸಿದ್ಧಃ** ಎಂಬುದಕ್ಕೆ ನಿತ್ಯವೂ ಆಚರಿಸಲ್ಪಡುವ ಜ್ಞಾನಾಕಾರವಾದ ಕರ್ಮಯೋಗದಲ್ಲಿ ಸಿದ್ಧಿಯನ್ನು ಪಡೆದು ಎಂದು ಅರ್ಥ.

**ಸ್ವಯಂ** ಎಂದರೆ ತಾನಾಗಿಯೇ ಪಕ್ವಕಷಾಯನಾಗುವ ಯೋಗ್ಯತೆಯನ್ನು ಪಡೆದಾಗ ಉಪದೇಶದ ಅಪೇಕ್ಷೆಯಿಲ್ಲ. ಜ್ಞಾನವು ತಾನಾಗಿಯೇ ದೊರೆಯುತ್ತದೆ–ಎಂದು ಶ್ರೀವೇದಾಂತದೇಶಿಕರು ವಿವರಣೆ ಕೊಟ್ಟಿದ್ದಾರೆ.

**ಕಾಲೇನ** = ಬಹಳ ಕಾಲದ ಅನಂತರದಲ್ಲಿ **ಬಹುನಾ ಕಾಲೇನ.**)

ರಾ. ಶ್ರೀಪಾದರ ಟೀಕೆ.

**ಓಂ ಶ್ರದ್ಧಾವಾಂಲ್ಲಭತೇ ಜ್ಞಾನಂ ತತ್ಪರಃ ಸಂಯತೇನ್ದ್ರಿಯಃ ।**
**ಜ್ಞಾನಂ ಲಬ್ಧ್ವಾ ಪರಾಂ ಶಾನ್ತಿಮಚಿರೇಣಾಧಿಗಚ್ಛತಿ ॥೩೯॥**

ಶ್ರದ್ಧಾವಂತನೂ, ಅದರಲ್ಲಿಯೇ ವಿಶೇಷವಾದ ಆಸಕ್ತಿಯಿರುವವನೂ, ಜಿತೇಂದ್ರಿಯನೂ ಆದವನು ಆತ್ಮಜ್ಞಾನವನ್ನು ಪಡೆದುಕೊಂಡು ನಿರತಿಶಯವಾದ ಶಾಂತಿಯನ್ನು ಬಲುಬೇಗ ಹೊಂದುತ್ತಾನೆ.

* * *

(ಯಾವುದರಿಂದ (ಯಾವ ವಿಧವಾದ ಸಾಧನೆಯಿಂದ) ಜ್ಞಾನವು ಲಭಿಸುತ್ತದೆಂಬುದನ್ನು ಶ್ರೀಕೃಷ್ಣನು ಹೇಳುತ್ತಾನೆ. ಮೊದಲನೆಯದಾಗಿ : ಶ್ರದ್ಧೆಯಿರಬೇಕು ಎನ್ನುತ್ತಾನೆ. ಶ್ರದ್ಧೆ ಎಂದರೆ ಮಹಾವಿಶ್ವಾಸ, ಅಪಾರ ನಂಬಿಕೆ. 'ಆತ್ಮ ಎಂಬುದೊಂದಿದೆ. ಈ ಮಾರ್ಗದಲ್ಲಿ ಹೋದರೆ ಆತ್ಮಜ್ಞಾನ ವಾಗುತ್ತದೆ'–ಎಂಬ ವಿಷಯದಲ್ಲಿ ಅಪಾರ ನಂಬಿಕೆ ಅಥವಾ ಶ್ರದ್ಧೆಯಿರಬೇಕು. ನಂಬಿಕೆಯೇ ಇಲ್ಲದಿದ್ದರೆ ಯಾವ ಕಾರ್ಯವನ್ನೂ ಮನುಷ್ಯನು ಪ್ರಾರಂಭಿಸು ವುದೇ ಇಲ್ಲ. ಶ್ರದ್ಧೆಯು ಜೀವನದಲ್ಲಿ ಅಸಾಧ್ಯವಾದುದನ್ನು ಸಾಧ್ಯವನ್ನಾಗಿ ಮಾಡುವುದು ; ದುರ್ಬಲರನ್ನು ಸಬಲರನ್ನಾಗಿ ಮಾಡುವುದು. ಶ್ರದ್ಧೆಯಿದ್ದರೆ ಅಯೋಗ್ಯನೂ ಯೋಗ್ಯನಾಗುತ್ತಾನೆ. ಆದುದರಿಂದ ಯಾವುದೇ ಕಾರ್ಯವನ್ನು ಸಾಧಿಸಬೇಕಾದರೂ ಶ್ರದ್ಧೆಯು ಬಹುಮುಖ್ಯವಾದುದು. ಜ್ಞಾನದ ವಿಷಯದಲ್ಲಂತೂ ಇದು ಅನಿವಾರ್ಯ.

ಆದರೆ ಶ್ರದ್ಧೆಯೊಂದೇ ಇದ್ದರೆ ಸಾಲದೆಂಬ ಅಭಿಪ್ರಾಯದಿಂದ ಶ್ರೀಕೃಷ್ಣನು ತತ್ಪರನಾಗಿಯೂ ಇರಬೇಕೆನ್ನುತ್ತಾನೆ.

'ಆತ್ಮವಿದ್ಯೆ-ಅದನ್ನು ಸಾಕ್ಷಾತ್ಕಾರಮಾಡಿಕೊಳ್ಳಬಹುದು' ಎಂಬುದರಲ್ಲಿ ಅಪಾರಶ್ರದ್ಧೆಯೇನೋ ಇದೆ. ಆದರೆ ಅದರ ಸಾಧನೆಗೆ ಪ್ರಯತ್ನಿಸದಿದ್ದರೆ ಕೇವಲ ನಮ್ಮ ಶ್ರದ್ಧೆಯೇ ನಮ್ಮನ್ನು ಆತ್ಮಸಾಕ್ಷಾತ್ಕಾರಕ್ಕೆ ಒಯ್ಯುವುದಿಲ್ಲ. ಆದುದರಿಂದ ಶ್ರದ್ಧೆಯಿರುವುದು ಮಾತ್ರವಲ್ಲದೇ ತತ್ಪರನಾಗಿಯೂ ಇರಬೇಕು. ಅದರ ಸಾಧನೆಯಲ್ಲಿಯೇ ಆಸಕ್ತನಾಗಿರಬೇಕು. ಇದು ಎರಡನೆಯ ನಿಯಮ.

ಉದಾಹರಣೆಗೆ ಒಬ್ಬನಿಗೆ ಅಪಾರವಾದ ಹಣಗಳಿಸಬೇಕೆಂಬ ಆಸೆ ಯುಂಟಾಗುತ್ತದೆ. ಅದಕ್ಕಾಗಿ ಅವನು ಹಗಲಿರುಳೆನ್ನದೇ ಕಷ್ಟಪಡುತ್ತಾನೆ. ಹಸಿವು-ಬಾಯಾರಿಕೆಗಳನ್ನೂ ಲೆಕ್ಕಿಸುವುದಿಲ್ಲ. ಮಧ್ಯದಲ್ಲಿ ಬರುವ ಅಡ್ಡಿ-ಆತಂಕಗಳನ್ನೂ ಪರಿಗಣಿಸದೆ ಮುನ್ನುಗ್ಗುತ್ತಾನೆ.

ಈ ವಿಧವಾದ ತತ್ಪರತೆಯಿಂದ ಅವನು ಧನಿಕನಾಗುತ್ತಾನೆ. ಹೀಗೆಯೇ ಆತ್ಮಜ್ಞಾನವನ್ನು ಸಾಧಿಸುವಾಗಲೂ ಶ್ರದ್ಧೆಯೊಡನೆ ಈ ತತ್ಪರತೆಯೂಬೇಕು. ಆಡುಮಾತಿನಲ್ಲಿ ಹೇಳುವುದಾದರೆ ಆತ್ಮಜ್ಞಾನವನ್ನು ಪಡೆದುಕೊಳ್ಳುವ ಖಯಾಲಿ ಹುಟ್ಟಬೇಕು.

ಶ್ರೀಕೃಷ್ಣನು ಹೇಳುವ ಮೂರನೆಯ ನಿಯಮ : ಸಂಯತೇಂದ್ರಿಯನಾಗಿರಬೇಕು. ಜಿತೇಂದ್ರಿಯನಾಗಿರಬೇಕು. ನಾವು ಆತ್ಮಜ್ಞಾನವನ್ನು ಪಡೆದುಕೊಳ್ಳಬೇಕಾದರೆ–ಆತ್ಮಜ್ಞಾನಕ್ಕೆ ವಿರೋಧಿಗಳಾದ ಎಲ್ಲವನ್ನೂ ಹೊಡೆದಟ್ಟಬೇಕು. ಶತ್ರುಗಳ ಧ್ವಂಸವಾಗದೇ ಸ್ವರಾಜ್ಯವು ಸಿಕ್ಕದು. ಬಹಿರ್ವ್ಯಾಪಾರಿ ಗಳಾದ ಇಂದ್ರಿಯಗಳೇ ನಮ್ಮ ಶತ್ರುಗಳಾಗಿವೆ. ಇಂದ್ರಿಯಗಳನ್ನು ವಿಷಯ ಗಳಲ್ಲಿ ಪ್ರವೇಶಿಸದಂತೆ ತಡೆಹಿಡಿಯಬೇಕು. ನಿಯಮನಮಾಡಬೇಕು. ಆತ್ಮಾನುಭವವು ಇಂದ್ರಿಯಾನುಭವಕ್ಕೆ ತೀರಾ ವಿರೋಧವಾದುದು. ಅದು ಇಂದ್ರಿಯಾತೀತವಾದುದು. ಆದುದರಿಂದ ಶ್ರದ್ಧೆ ಮತ್ತು ತತ್ಪರತೆಗಳ ಜೊತೆಗೆ ಜಿತೇಂದ್ರಿಯತ್ವವೂ ಅವಶ್ಯವಾಗಿ ಬೇಕು. ರಾಮ-ಕಾಮ, ಕತ್ತಲೆ- ಬೆಳಕು ಒಂದಾಗಿ ಹೋಗುವುದಿಲ್ಲ. ಒಂದು ಬೇಕಾದರೆ ಮತ್ತೊಂದನ್ನು ಬಿಡಲೇಬೇಕು.

ಶ್ರದ್ಧೆ, ತತ್ಪರತೆ, ಇಂದ್ರಿಯನಿಗ್ರಹ–ಇವುಗಳಿದ್ದರೆ ಜ್ಞಾನವನ್ನು ಪಡೆಯುತ್ತಾನೆಂದು ಶ್ರೀಕೃಷ್ಣನು ಘೋಷಿಸಿದ್ದಾನೆ. ಅವನ ಈ ಮಾತಿನಲ್ಲಿಯೂ ನಾವು ಅಚಲವಾದ ಶ್ರದ್ಧೆಯಿಡಬೇಕು. ಉತ್ತು ಹಸನುಮಾಡಿದ ಹೊಲದಲ್ಲಿ ಬೀಜವನ್ನು ಬಿತ್ತಿ, ಗೊಬ್ಬರಹಾಕಿ ಶ್ರದ್ಧೆಯಿಂದ ಬೆಳೆಸಿದರೆ ಕೆಲವು ಕಾಲದ ಮೇಲೆ ನಮಗೆ ಫಸಲು ದೊರೆಯುವುದರಲ್ಲಿ ಸಂದೇಹವಿಲ್ಲ. ಅಂತೆಯೇ ಶ್ರೀಕೃಷ್ಣನ ಸಂದೇಶದಂತೆ ನಡೆದುಕೊಂಡರೆ ನಮಗೆ ಆತ್ಮಜ್ಞಾನವು ಲಭಿಸುವುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. 'ಜ್ಞಾನವಾದನಂತರ ಏನಾಗುತ್ತದೆ?'– ಎಂಬುದಕ್ಕೆ ಶ್ರೀಕೃಷ್ಣನು ಉತ್ತರಹೇಳುತ್ತಾನೆ.

'ಆತ್ಮಜ್ಞಾನವನ್ನು ಪಡೆದುಕೊಂಡೊಡನೆಯೇ ಆ ಜ್ಞಾನಿಯು ಪರಮ ಶಾಂತಿಯನ್ನು ಪಡೆದುಕೊಳ್ಳುತ್ತಾನೆ.'

ಸಂಸಾರತಾಪತ್ರಯಗಳಿಗೆ ಸಿಕ್ಕಿ ನಾವೂ ಸಹ–'ಮನಸ್ಸಿಗೆ ಶಾಂತಿಯೇ ಇಲ್ಲ'–ಎಂದು ಹೇಳುತ್ತಲೇ ಇರುತ್ತೇವೆ. ಸಂಸಾರದಲ್ಲಿ ಮನಸ್ಸಿಗೆ ಶಾಂತಿಯೆಂಬುದೇ ಇರದು. ಒಂದು ಚಿಂತೆಯು ದೂರವಾಯಿತೆಂದರೆ ಮತ್ತೊಂದು ಬೆನ್ನುಹತ್ತಿರುವುದು. ಶಾಂತಿಯನ್ನು ಪಡೆಯಲೆಂದೇ ಅನೇಕರು ವಿಶ್ರಾಂತಿಧಾಮಗಳಿಗೆ ಹೋಗುತ್ತಾರೆ. ಆದರೆ ವಾಸನೆಯಿಂದ ತುಂಬಿರುವ ಮನಸ್ಸೂ ಅವರೊಡನೆ ಇರುವುದರಿಂದ ವಿಶ್ರಾಂತಿಧಾಮದಲ್ಲೂ ಅವರಿಗೆ ಅಶಾಂತಿಯು ತಪ್ಪಿದ್ದಲ್ಲ.

ಆತ್ಮಜ್ಞಾನವಾದೊಡನೆಯೇ ಪರಮಶಾಂತಿಯು ಲಭಿಸುವುದೆಂದು ಶ್ರೀಕೃಷ್ಣನು ಹೇಳಿದ್ದಾನೆ. ಪರಮಶಾಂತಿಗೆ ಜನ್ಮಾಂತರವನ್ನು ಕಾಯಬೇಕಾಗಿಲ್ಲ. ದೀಪವನ್ನು ತಂದೊಡನೆಯೇ ಕತ್ತಲು ಹೋಗಿಬಿಡುವುದು. ಸೂರ್ಯನು ಹುಟ್ಟಿದೊಡನೆಯೇ ಕತ್ತಲಿನ ಕುರುಹೂ ಇರುವುದಿಲ್ಲ. ಅದೇ ರೀತಿಯಲ್ಲಿ ಆತ್ಮಜ್ಞಾನವಾದೊಡನೆಯೇ ಆಜನ್ಮವಾಗಿ ಬಂದ ಅಶಾಂತಿಯು ಅಡಗುವುದು. ಪರಮಶಾಂತಿಯು ಮನಸ್ಸಿನಲ್ಲಿ ನೆಲೆಸುವುದು.

**ಶ್ರದ್ಧಾವಾನ್ :** ತ್ವರೆಯುಳ್ಳವನಾಗಿ. **ತತ್ಪರಃ :** ಅದನ್ನೇ ಉಪಾದೇಯವೆಂಬ ಅಭಿಸಂಧಿಯುಳ್ಳವನಾಗಿ. **ಶಾನ್ತಿಂ :** ಪರಮನಿರ್ವಾಣವನ್ನು.

—ಶ್ರೀವೇದಾಂತದೇಶಿಕರು.

**ಶಾನ್ತಿಂ**—ಮೋಕ್ಷವೆಂಬ ಶಾಂತಿಯನ್ನು. ಪ್ರಣಿಪಾತವೇ ಮುಂತಾದ ಉಪಾಯಗಳು ಹೊರಗಿನವು. ಕಪಟಿಯಾದ ಮನುಷ್ಯನೂ ಅವುಗಳನ್ನು ಮಾಡಬಹುದು. ಆದುದರಿಂದ ಅವು ಜ್ಞಾನರೂಪವಾದ ಅನುಭವವನ್ನು ಕೊಟ್ಟೇಕೊಡುತ್ತವೆಂಬ ನಿಶ್ಚಯವಿಲ್ಲ. ಆದರೆ ಶ್ರದ್ಧಾಳುತ್ವವೇ ಮುಂತಾದ ಉಪಾಯಗಳಲ್ಲಿ ಕಾಪಟ್ಯಕ್ಕೆ ಸ್ಥಾನವಿಲ್ಲ. ಆದುದರಿಂದ ಅವು ನಿಶ್ಚಯವಾಗಿಯೂ ಜ್ಞಾನಪ್ರಾಪ್ತಿಯ ಉಪಾಯಗಳಾಗುತ್ತವೆ. (ಶಂ.ಭಾ.)

ಜ್ಞಾನದ ಸಾಧನ (ಅಂತರಂಗಸಾಧನವಾದ ಶ್ರದ್ಧೆ ಮುಂತಾದುವು), ಅದಕ್ಕೆ ವಿರೋಧಿಯಾದ ಅಜ್ಞಾನ ಮುಂತಾದುವು ಮತ್ತು ಜ್ಞಾನದ ಫಲವಾದ ಪರಮಶಾಂತಿ—ಇವುಗಳನ್ನು ಈ ಶ್ಲೋಕ ಮತ್ತು ಮುಂದಿನ ಶ್ಲೋಕಗಳಲ್ಲಿ ಹೇಳಿ ಭಗವಂತನು ವಿಷಯದ ಉಪಸಂಹಾರಮಾಡುತ್ತಾನೆ.

**ತತ್ಸಾಧನಂ ವಿರೋಧಿಫಲಂ ಚ ತದುತ್ತರೈರುಕ್ತ್ವಾ ಉಪಸಂಹರತಿ.)**

(ಮ.ಭಾ.)

**ಓಂ ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।**
**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ॥೪೦॥**

ತಿಳಿವಳಿಕೆಯಿಲ್ಲದವನೂ, ಶ್ರದ್ಧೆಯಿಲ್ಲದವನೂ ಮತ್ತು ಸಂಶಯ ಸ್ವಭಾವದವನೂ ವಿನಾಶಹೊಂದುತ್ತಾನೆ. ಸಂಶಯಾತ್ಮನಿಗೆ ಈ ಲೋಕವೂ ಇಲ್ಲ ; ಪರಲೋಕವೂ ಇಲ್ಲ ; ಸುಖವೂ ಇಲ್ಲ.

* * *

(ಶ್ರೀಕೃಷ್ಣನು ಪ್ರಜಾಕೋಟಿಯನ್ನು ಮೂರು ಭಾಗಗಳಾಗಿ ವಿಂಗಡಿಸುತ್ತಾನೆ. ಅಜ್ಞ=ಏನೂ ತಿಳಿಯದವನು. ಇವನು ಪಶುಸಮಾನನಾಗಿರುತ್ತಾನೆ. ವಿಹಾರ, ಶಯ್ಯೆ, ಭೋಜನ–ಇವುಗಳಲ್ಲಿಯೇ ಇವನ ಪ್ರವೃತ್ತಿಯಿರುತ್ತದೆ. ಇಂದ್ರಿಯಗಳ ಸುಖಾನುಭವಕ್ಕೇ ಇವನ ಕಾಲವೆಲ್ಲವೂ ಮೀಸಲಾಗಿರುತ್ತದೆ. ದೇಹವನ್ನೇ ಆತ್ಮವೆಂದು ಭಾವಿಸಿರತಕ್ಕವನಿವನು. ಬದುಕಿರುವವರೆಗೂ ಈ ದೇಹವನ್ನು ಸುಖದಿಂದಿಟ್ಟಿರಬೇಕೆಂಬುದೇ ಇವನ ಪರಮೋದ್ದೇಶವಾಗಿರುತ್ತದೆ. 'ಇಂತಹವನು ನಾಶನಾಗುತ್ತಾನೆ'–ಎನ್ನುವನು ಶ್ರೀಕೃಷ್ಣ. ಅಜ್ಞನಿಗೆ ಧರ್ಮಾಧರ್ಮಗಳ ಮತ್ತು ಪುಣ್ಯ-ಪಾಪಗಳ ವಿವೇಚನೆಯೇ ಇಲ್ಲದಿರುವುದರಿಂದ ತನ್ನ ಕರ್ಮಾನುಸಾರವಾಗಿ ಇವನು ಮುಂದೆ ಪಾಪಯೋನಿಗಳಲ್ಲಿ ಹುಟ್ಟುತ್ತಾನೆ. ಆದುದರಿಂದ ಇವನು ನಾಶವಾಗುತ್ತಾನೆ.

ಎರಡನೆಯವನು ಶ್ರದ್ಧೆಯಿಲ್ಲದವನು. ಇವನಿಗೆ ಅಜ್ಞಾನಿಗಿಂತಲೂ ಸ್ವಲ್ಪ ವಿವೇಕವುಂಟು. ಪಾಪ-ಪುಣ್ಯಗಳ ವಿಷಯವನ್ನು ತಿಳಿದುಕೊಂಡಿರುತ್ತಾನೆ. ಪರಲೋಕವಿರುವುದೆಂಬುದು ಇವನಿಗೆ ಗೊತ್ತು. ವಿಧ್ಯುಕ್ತವಾದ ಕರ್ಮಗಳನ್ನು ಮಾಡಬೇಕೆಂಬ ತಿಳಿವಳಿಕೆಯಿದೆ. ಆದರೆ ಕರ್ಮದಲ್ಲಿ ಶ್ರದ್ಧೆಯಿಲ್ಲ. ಎಲ್ಲ ಕರ್ಮಗಳನ್ನೂ ಕಾಟಾಚಾರಕ್ಕೆ ಮಾಡುತ್ತಾನೆ. ತೋರಿಕೆಗಾಗಿ ಪ್ರತಿಷ್ಠೆಗಾಗಿ ಮಾಡುತ್ತಾನೆ. ದಾನಮಾಡಬೇಕು ; ಮಾಡುತ್ತಾನೆ. ತಾತ್ಸಾರದಿಂದ ಮಾಡುತ್ತಾನೆ. ಮನಃಪೂರ್ವಕವಾಗಿ ಶ್ರದ್ಧೆಯಿಂದ ಮಾಡುವುದಿಲ್ಲ. ಪೂಜಾದಿಗಳನ್ನು ಮಾಡುತ್ತಾನೆ. ಆಟಾಟೋಪಕ್ಕಾಗಿ ಮಾಡುತ್ತಾನೆ. ಭಕ್ತಿ-ಶ್ರದ್ಧೆಗಳಿಂದ ಮಾಡುವುದಿಲ್ಲ. ಇವನೂ ಸಹ ಹಾಳಾಗುತ್ತಾನೆ. ಏಕೆಂದರೆ ಈ ವಿಧವಾಗಿ ಕರ್ಮಗಳನ್ನು ಮಾಡಿದರೂ ಪ್ರಯೋಜನವಿಲ್ಲ ; ಫಲವೂ ಇಲ್ಲ.

ಸಂಶಯಾತ್ಮನು ಮೂರನೆಯವನು. ಇವನೂ ಹಾಳಾಗುತ್ತಾನೆ. ಹಾಳಾಗುವುದು ಮಾತ್ರವಲ್ಲ. ಇವನಿಗೆ ಇಹಲೋಕವೂ ಇಲ್ಲ ; ಐಹಿಕ ಸುಖವೂ ಇಲ್ಲ ; ಪರಲೋಕವೂ ಇಲ್ಲ.

ಪರಲೋಕವುಂಟೋ ಇಲ್ಲವೋ? ಸಂಶಯಾತ್ಮನು 'ಇಲ್ಲ' ಎಂದೂ ನಿರ್ಧರಿಸಲಾರ ; 'ಇದೆ' ಎಂದೂ ನಿರ್ಧರಿಸಲಾರ. ಮೋಕ್ಷವುಂಟೋ ಇಲ್ಲವೋ? ಇದನ್ನು ಮಾಡಲೋ? ಅದನ್ನು ಮಾಡಲೋ? ವಿಷಯಸುಖ

ಗಳನ್ನು ಅನುಭವಿಸಬೇಕೋ? ಬೇಡವೋ? ವಿಷಯಸುಖಗಳನ್ನೇ ಅನುಭವಿಸುತ್ತಿದ್ದು ಮೋಕ್ಷವು ಅಥವಾ ಪರಲೋಕವೇ ಸಿಕ್ಕದಿದ್ದರೇನು ಗತಿ?– ಈ ವಿಧಸಂಶಯಗಳಿಂದ ಇವನು ಮಾಡಬೇಕಾದುದನ್ನು ಮಾಡದೇ ಬಿಡಬೇಕಾದುದನ್ನು ಬಿಡದೇ ಯಾವಾಗಲೂ ತಲ್ಲಣಿಸುತ್ತಿರುತ್ತಾನೆ. ಇಂತಹವನಿಗೆ ಸಂಸಾರಸುಖವೂ ಇರುವುದಿಲ್ಲ. ಹೆಂಡತಿಯ ಮೇಲೆ ಸಂಶಯ. ಮಕ್ಕಳ ಮೇಲೆ ಸಂಶಯ. ಸ್ನೇಹಿತರನ್ನು ನಂಬಲಾರ. 'ಎಡಗೈ-ಬಲಗೈಗಳನ್ನೇ ನಂಬಲಾರ'–ಎಂದೂ ಇಂತಹ ಸಂಶಯಗ್ರಸ್ತನ ವಿಷಯವಾಗಿ ಹೇಳುವುದುಂಟು. ಕರ್ಮಗಳನ್ನು ಸಂಶಯಿಸಿಮಾಡುವುದರಿಂದ ಇವನಿಗೆ ಫಲವು ಸಿಕ್ಕುವುದಿಲ್ಲ. ಆದುದರಿಂದ ಇವನಿಗೆ ಪರಲೋಕವಿಲ್ಲ. ಎಲ್ಲದರಲ್ಲಿಯೂ ಸಂಶಯಪಡುತ್ತಾ ಜ್ಞಾನಮಾರ್ಗ-ಕರ್ಮಮಾರ್ಗಗಳೆರಡನ್ನೂ ಬಿಡುವುದರಿಂದ ಇವನಿಗೆ ಪುನಃ ಮನುಷ್ಯಜನ್ಮವೂ ಲಭಿಸುವುದಿಲ್ಲ. ಹೆಂಡತಿ-ಮಕ್ಕಳ ವಿಷಯದಲ್ಲಿಯೂ ಸಹ ಸಂಶಯಪಡುವುದರಿಂದ ಇವನಿಗೆ ಈ ಜನ್ಮದಲ್ಲಿಯೂ ಸುಖವಿಲ್ಲ. ಆದುದರಿಂದ ಸಂಶಯಾತ್ಮನು ಸಂಪೂರ್ಣವಾಗಿ ಹಾಳಾಗುತ್ತಾನೆ.

ಜ್ಞಾನದ ವಿಷಯದಲ್ಲಿ ಸಂಶಯವೆಂಬುದೇ ಇರಬಾರದು. ಆದರೆ ಇದು ಪರೋಕ್ಷದ ವಿಷಯವಾದುದರಿಂದ ಇದರಲ್ಲಿ ಸಂಶಯವು ಮೂಡುವುದು ಸಹಜ. ಗುರುಗಳ ಉಪದೇಶವನ್ನೂ, ಶಾಸ್ತ್ರಗಳ ಸಂದೇಶವನ್ನೂ ಅವಲಂಬಿಸಿ ಜ್ಞಾನಮಾರ್ಗದಲ್ಲಿ ಹೋಗಬೇಕಾಗುವುದು. ಮೇಲಾಗಿ ಮುಂದೆ ಮಹತ್ವದ ಫಲವು ಲಭಿಸುತ್ತದೆಯೆಂಬುದನ್ನು ನಂಬಿ ಐಹಿಕಸುಖಗಳೆಲ್ಲವನ್ನೂ ಪರಿತ್ಯಜಿಸಬೇಕಾಗುವುದು. ಇಲ್ಲಿ ಸಂಶಯಕ್ಕೆ ಎಡೆಯೇ ಇಲ್ಲ. ಸಂಶಯವಿದ್ದವನು ಖಂಡಿತವಾಗಿಯೂ ಈ ಮಾರ್ಗವನ್ನು ಹಿಡಿಯಲಾರ. ಗುರುವರೇಣ್ಯರ ಮಾತು ಮತ್ತು ಶಾಸ್ತ್ರಗಳ ಆಧಾರ–ಇವುಗಳಲ್ಲಿ ಅಪಾರವಾದ ನಂಬಿಕೆಯಿಟ್ಟು ಈ ಮಾರ್ಗಕ್ಕೆ ಹೋಗಬೇಕು. ವ್ರತಾನುಷ್ಠಾನಾದಿಗಳಲ್ಲಿಯೂ ನಂಬಿಕೆಯು ಮುಖ್ಯವಾಗಿರಬೇಕು. ಸಂಶಯವಿದ್ದವನಿಗೆ ಯಾವ ವ್ರತಾನುಷ್ಠಾನಗಳೂ ಫಲದಾಯಕವಾಗುವುದಿಲ್ಲ. ಆದುದರಿಂದ ಅಧ್ಯಾತ್ಮಮಾರ್ಗಿಯು ಖಂಡಿತವಾಗಿಯೂ ಸಂಶಯಾತ್ಮನಾಗಬಾರದು. 'ಸಂಶಯಾತ್ಮನು ಹಾಳಾಗುತ್ತಾನೆ' ಎಂದು ಶ್ರೀಕೃಷ್ಣನು ಉದ್ಘೋಷಿಸಿದ್ದಾನೆ.

ಅಜ್ಞಃ = ಈ ಮೇಲೆ ಹೇಳಿದಂತೆ ಉಪದೇಶದಿಂದ ಪಡೆದ ಜ್ಞಾನವಿಲ್ಲ

ದವನು. ಅಶ್ರದ್ದಧಾನಃ ಎಂದರೆ ಅಂತಹ ಜ್ಞಾನವನ್ನು ವೃದ್ಧಿಪಡಿಸಿಕೊಳ್ಳುವ ಉಪಾಯದಲ್ಲಿ ತ್ವರೆಮಾಡದವನು.

ಸಂಶಯಾತ್ಮಾ ಎಂದರೆ ಉಪದೇಶಮಾಡಿರುವ ಜ್ಞಾನದಲ್ಲಿ ಸಂಶಯದ ಮನಸ್ಸುಳ್ಳವನು. ಇವನು ನಾಶಹೊಂದುತ್ತಾನೆ.

ಈ ಆತ್ಮಯಾಥಾರ್ಥ್ಯವಿಷಯದಲ್ಲಿ ಸಂಶಯವುಳ್ಳವನಿಗೆ ಪ್ರಾಕೃತ ಲೋಕವೂ ಇಲ್ಲ ಎಂದರೆ : ಧರ್ಮಾರ್ಥಕಾಮಗಳೆಂಬ ಪುರುಷಾರ್ಥಗಳ ಸಿದ್ಧಿಯೂ ಇಲ್ಲ. ಇನ್ನು ಪರವು ಹೇಗೆ ಸಿದ್ಧಿಸೀತು? ಎಂದರೆ ಮೋಕ್ಷವು ಹೇಗೆ ಸಿದ್ಧಿಸುತ್ತದೆ? ಎಲ್ಲ ಪುರುಷಾರ್ಥಗಳೂ ಶಾಸ್ತ್ರೀಯಕರ್ಮಗಳಿಂದ ಸಿದ್ಧಿಸುವುವು. ಶಾಸ್ತ್ರೀಯಕರ್ಮಗಳಿಂದುಂಟಾಗುವ ಸಿದ್ಧಿಯು–'ದೇಹಾತಿ ರಿಕ್ತವಾದ ಆತ್ಮವುಂಟು'–ಎಂಬ ನಿಶ್ಚಯವಿದ್ದರೆ ಮಾತ್ರ ಉಂಟಾಗುವುದು. ಆದುದರಿಂದ ಸಂಶಯದ ಮನಸ್ಸುಳ್ಳವನಿಗೆ ಸುಖಲೇಶವೂ ಇರುವುದಿಲ್ಲ.)

(ರಾ.ಭಾ.)

**ಓಂ ಯೋಗಸಂನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಮ್ ।**
**ಆತ್ಮವನ್ತಂ ನ ಕರ್ಮಾಣಿ ನಿಬಧ್ನನ್ತಿ ಧನಂಜಯ ॥೪೧॥**

ಧನಂಜಯ! (ಕರ್ಮ) ಯೋಗದಿಂದ ತ್ಯಾಗಮಾಡಲ್ಪಟ್ಟ ಕರ್ಮಗಳುಳ್ಳವನೂ ಜ್ಞಾನದ ಮೂಲಕ ಕತ್ತರಿಸಲ್ಪಟ್ಟ ಸಂಶಯವುಳ್ಳವನೂ ಆದ ಜಿತೇಂದ್ರಿಯನನ್ನು ಕರ್ಮಗಳು ಕಟ್ಟಿಹಾಕುವುದಿಲ್ಲ.

* * *

(ಕರ್ಮಯೋಗದಂತೆ ಕರ್ಮಗಳನ್ನು ಯಾವ ರೀತಿಯಲ್ಲಿ ಮಾಡಬೇಕೋ ಆ ರೀತಿಯಲ್ಲಿ ಮಾಡುತ್ತಿರುವವನನ್ನು ಅರ್ಥಾತ್ ಫಲಾಭಿಸಂಧಿಯನ್ನು ತ್ಯಾಗಮಾಡಿ ಕರ್ಮಗಳನ್ನು ಮಾಡುತ್ತಿರುವವನನ್ನು ಕರ್ಮಗಳು ಬಂಧಿಸುವುದಿಲ್ಲ. ಫಲಾಭಿಸಂಧಿಯಿದ್ದರೆ ಪುಣ್ಯ-ಪಾಪಗಳು ಅಂಟಿಕೊಂಡು ಕರ್ಮಬಂಧನಕ್ಕೆ ಕಾರಣವಾಗುತ್ತವೆ. ಫಲಾಭಿಸಂಧಿಯಿಲ್ಲದೇ ಈಶ್ವರಾರ್ಪಣ ಬುದ್ಧಿಯಿಂದ ಕರ್ಮಮಾಡಿದರೆ ಪಾಪ-ಪುಣ್ಯಗಳೆರಡೂ ಅಂಟುವುದಿಲ್ಲ.

ಜ್ಞಾನದಿಂದ ಕತ್ತರಿಸಿದ ಸಂಶಯವುಳ್ಳವನು. ಇಲ್ಲಿ ಜ್ಞಾನವೆಂದರೆ ಆತ್ಮಾನಾತ್ಮವಿವೇಕಜ್ಞಾನ. ಸಂಶಯವೆಂದರೆ ದೇಹವೂ–ಆತ್ಮವೂ ಒಂದೇ ಆಗಿರುವುದೇ? ಪ್ರತ್ಯೇಕವಾಗಿರುವುದೇ? ಆತ್ಮನು ಒಬ್ಬನೇ? ಅನೇಕ

ಪ್ರಕಾರವಾಗಿದ್ದಾನೆಯೇ? ಅವನ ಸ್ವರೂಪವೇನು?–ಇತ್ಯಾದಿ ಸಂಶಯ ಗಳು.

**ಯೋಗಸಂನ್ಯಸ್ತಕರ್ಮಾಣಂ** : ಪರಮಾರ್ಥಜ್ಞಾನರೂಪವಾದ ಯೋಗ ದಿಂದ ಧರ್ಮಾಧರ್ಮರೂಪವಾದ ಎಲ್ಲ ಕರ್ಮಗಳನ್ನೂ ತ್ಯಾಗ ಮಾಡಿದವನನ್ನು ಎಂದರ್ಥ. **ಜ್ಞಾನಸಂಛಿನ್ನಸಂಶಯಂ** ಎಂಬುವುದಕ್ಕೆ ಆತ್ಮ ಮತ್ತು ಈಶ್ವರರ ಏಕತ್ವದರ್ಶನವೆಂಬ ಜ್ಞಾನದಿಂದ ನಷ್ಟವಾದ ಸಂಶಯವುಳ್ಳವನನ್ನು ಎಂದರ್ಥ. **ಆತ್ಮವನ್ತಂ** = ಪ್ರಮಾದವಿಲ್ಲದವನನ್ನು ಎಂದರ್ಥ. ಇಂತಹವನನ್ನು ಕರ್ಮಗಳು ಬಂಧಿಸುವುದಿಲ್ಲ. (ಶಂ.ಭಾ.)

**ಯೋಗ...ಕರ್ಮಾಣಾಂ**–ಜ್ಞಾನಾಕಾರವನ್ನು ಹೊಂದಿದ ಕರ್ಮವುಳ್ಳವ ನನ್ನೂ, **ಜ್ಞಾನ...ಸಂಶಯಂ** ಮೇಲೆ ಹೇಳಿದಂತೆ ಉಪದೇಶಮಾಡಲ್ಪಟ್ಟ ಆತ್ಮ ಜ್ಞಾನದಿಂದ ಆತ್ಮನ ವಿಷಯದಲ್ಲಿ ಯಾವ ಸಂಶಯವೂ ಇಲ್ಲದವನನ್ನೂ, **ಆತ್ಮವನ್ತಂ**-ಉಪದಿಷ್ಟವಾದ ಅರ್ಥದಲ್ಲಿ ದೃಢವಾಗಿ ನೆಲೆಗೊಂಡ ಮನಸ್ಸುಳ್ಳ ವನನ್ನೂ ಎಂದರ್ಥ. ಇಂತಹವನನ್ನು ಕರ್ಮಗಳು ಬಂಧಿಸುವುದಿಲ್ಲ.)

(ರಾ.ಭಾ.)

**ಓಂ ತಸ್ಮಾದಜ್ಞಾನಸಮ್ಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ ।**
**ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥೪೨॥**

ಆದುದರಿಂದ ಅಜ್ಞಾನದಿಂದಲೇ ಹುಟ್ಟಿ ನಿನ್ನ ಹೃದಯದಲ್ಲಿ ಸೇರಿ ಕೊಂಡಿರುವ ಈ ಸಂಶಯವನ್ನು ಜ್ಞಾನವೆಂಬ ಖಡ್ಗದಿಂದ ಕತ್ತರಿಸಿ ಕರ್ಮ ಯೋಗವನ್ನು ಆಚರಿಸು. ಯುದ್ಧಮಾಡಲು ಎದ್ದುನಿಲ್ಲು.

* * *

(ಅರ್ಜುನನಿಗೆ ಅಜ್ಞಾನದ ಕಾರಣದಿಂದಾಗಿ ಸಂಶಯವೇ ಇರಬಾರದೆಡೆ ಯಲ್ಲಿ ಸಂಶಯವು ಮೂಡಿದ್ದಿತು. 'ಗುರುಜನರನ್ನು ಕೊಲ್ಲಬಹುದೇ? ಯುದ್ಧದಿಂದ ಅನೇಕರು ಪ್ರಾಣನೀಗಿ ವರ್ಣಸಂಕರಕ್ಕೆ ಕಾರಣವಾಗುವು ದಿಲ್ಲವೇ? ಯುದ್ಧಕ್ಕಿಂತಲೂ ಭಿಕ್ಷಾವೃತ್ತಿಯೇ ಲೇಸಲ್ಲವೇ?'–ಇಂತಹ ಸಂಶಯಗಳೂ ಹೃದ್ಗತವಾಗಿದ್ದುವು.

ತಾನೇ ಇದುವರೆಗೂ ಉಪದೇಶಿಸಿರುವ ಜ್ಞಾನವೆಂಬ ಕತ್ತಿಯಿಂದ ಇಂತಹ ಸಂಶಯವನ್ನು ಕತ್ತರಿಸಿಬಿಡು, ಎನ್ನುತ್ತಾನೆ ಶ್ರೀಕೃಷ್ಣ.

ಸಂಶಯವು ಹೋದನಂತರ ಏನು ಮಾಡಬೇಕು? **'ಯೋಗಮಾತಿಷ್ಠ**

ಕರ್ಮಯೋಗವನ್ನು ಅವಲಂಬಿಸು. ಸ್ವಾರ್ಥಕ್ಕಾಗಿ ಯುದ್ಧಮಾಡಬೇಡ. ಫಲಕಾಮನೆಯಿಂದ ಯುದ್ಧಮಾಡಬೇಡ. ಫಲಾಭಿಸಂಧಿಯನ್ನು ಬಿಟ್ಟು ಈಶ್ವರಪ್ರೀತ್ಯರ್ಥವಾಗಿ ಸ್ವಧರ್ಮೋಚಿತವಾದ ಯುದ್ಧಮಾಡಲು ಮೇಲೆದ್ದು ನಿಲ್ಲು.'

ಈಶಾವಾಸ್ಯೋಪನಿಷತ್ತಿನ ೧೧ನೆಯ ಮಂತ್ರದ ಅರ್ಥವನ್ನೇ ಶ್ರೀಕೃಷ್ಣನು ಇಲ್ಲಿ ಹೇಳಿದ್ದಾನೆಂದು ಶ್ರೀತಿಲಕರ ಅಭಿಪ್ರಾಯವಾಗಿದೆ.

**ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಂ ಸಹ ।**
**ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಽಮೃತಮಶ್ನುತೇ ॥**

ವಿದ್ಯೆ (ಜ್ಞಾನ) ಅವಿದ್ಯೆ (ಕರ್ಮ) ಇವೆರಡೂ ಒಂದಕ್ಕೊಂದು ಕೂಡಿರುವುದಾಗಿ ಯಾರು ನೋಡುತ್ತಾರೆಯೋ–ಅವರು ಅವಿದ್ಯೆಯಿಂದ ಎಂದರೆ ಕರ್ಮದಿಂದ ಮೃತ್ಯುವನ್ನು ದಾಟಿ, ವಿದ್ಯೆಯಿಂದ ಎಂದರೆ ಬ್ರಹ್ಮ ಜ್ಞಾನದಿಂದ ಅಮೃತತತ್ತ್ವವನ್ನು ಹೊಂದುತ್ತಾರೆ.

ಜ್ಞಾನಾಸಿನಾ= ಶೋಕ-ಮೋಹಾದಿ ದೋಷಗಳನ್ನು ಹೋಗಲಾಡಿಸುವ ಸಮ್ಯಗ್ದರ್ಶನ ಎಂಬ ಕತ್ತಿಯಿಂದ. ಯೋಗಂ=ಸಮ್ಯಗ್ದರ್ಶನಕ್ಕೆ ಉಪಾಯ ವಾದ ಕರ್ಮಾನುಷ್ಠಾನವನ್ನು. (ಶಂ.ಭಾ.)

ಅಜ್ಞಾನಸಂಭೂತಂ–ಅನಾದಿಯಾದ ಅಜ್ಞಾನದಿಂದ ಉಂಟಾಗಿರುವ. (ರಾ.ಭಾ.)

ಹೃತ್ಸ್ಥಂ : ಹೃದಯದಲ್ಲಿ ಬಾಣದಂತೆ ನಾಟಿಕೊಂಡಿರುವ ಅಥವಾ ಒಳಗೆ ಸೇರಿಕೊಂಡಿರುವ.
(ಶ್ರೀವೇದಾಂತದೇಶಿಕರು.)

ಭಾರತ ಎಂಬ ಪದವು ಭರತಕುಲಸಂಭೂತನಾದ ಅರ್ಜುನನಿಗೆ ಸ್ವಧರ್ಮವಾದ ಯುದ್ಧಕ್ಕೋಸ್ಕರ ಏಳುವುದೇ ಕರ್ಮಯೋಗಾರ್ಥವಾದ ಏಳುವಿಕೆ ಎಂದು ಸೂಚಿಸುತ್ತದೆ. (ಶ್ರೀವೇದಾಂತದೇಶಿಕರು.)

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು
ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ
ಜ್ಞಾನಕರ್ಮಸಂನ್ಯಾಸಯೋಗೋ ನಾಮ ಚತುರ್ಥೋಽಧ್ಯಾಯಃ
ಭಗವದ್ಗೀತೆಯಲ್ಲಿ ೪ನೆಯ ಅಧ್ಯಾಯವು ಮುಗಿಯಿತು.

ಭೀಷ್ಮಪರ್ವದಲ್ಲಿ-೨೮ನೆಯ ಅಧ್ಯಾಯವು ಮುಗಿಯಿತು.

# ಭಗವದ್ಗೀತಾ-೫ನೆಯ ಅಧ್ಯಾಯ

೨೯ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ಸಾಂಖ್ಯಯೋಗ, ನಿಷ್ಕಾಮಕರ್ಮಯೋಗ, ಜ್ಞಾನಯೋಗ ಮತ್ತು ಭಕ್ತಿಸಹಿತವಾದ ಧ್ಯಾನಯೋಗಗಳ ವರ್ಣನೆ

**ಅರ್ಜುನ ಉವಾಚ :**

**ಓಂ ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।**
**ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್ ॥೧॥**

ಕೃಷ್ಣ! ಕರ್ಮಗಳ ಸಂನ್ಯಾಸವನ್ನು ಹೊಗಳುತ್ತೀಯೆ. ಬಳಿಕ ಕರ್ಮಯೋಗವನ್ನೂ ಹೊಗಳುತ್ತೀಯೆ. ಇವೆರಡರಲ್ಲಿ ಯಾವುದು ಒಳ್ಳೆಯದೋ ಅದನ್ನು ನಿಶ್ಚಯಮಾಡಿ ಹೇಳು.

* * *

(ಅರ್ಜುನನು ಮೂರನೆಯ ಅಧ್ಯಾಯದ ಪ್ರಾರಂಭದಲ್ಲಿ ಪ್ರಶ್ನಿಸಿದ್ದನ್ನೇ ಶಬ್ದಾಂತರಗಳಿಂದ ಇಲ್ಲಿಯೂ ಪ್ರಶ್ನಿಸುತ್ತಾನೆ. ಈಗಲೂ ಸಹ ಅವನಿಗೆ ಹಿಂದಿನ ಸಂದೇಹವೇ ಉಳಿದಿದೆ.

ಯದ್ಯಪಿ ನಾಲ್ಕನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಕರ್ಮಯೋಗವನ್ನೇ ಸಂಪೂರ್ಣವಾಗಿ ಹೇಳಿದ್ದರೂ ಸಹ ನಿರಾಶೀರ್ಯತಚಿತ್ತಾತ್ಮಾ (೪-೨೧) **ಯದೃಚ್ಛಾಲಾಭಸನ್ತುಷ್ಟಃ**(೪-೨೨) ಈ ಶ್ಲೋಕಗಳಲ್ಲಿ ಕರ್ಮಸಂನ್ಯಾಸವನ್ನೂ ಹೊಗಳಿದ್ದಾನೆ.

ಈಗ ಅರ್ಜುನನು ಕರ್ಮಸಂನ್ಯಾಸಮಾಡಲು ಇಚ್ಛಿಸಿರತಕ್ಕವನು. ಕರ್ಮಯೋಗಕ್ಕೆ ಅವನಿಗೆ ಅಷ್ಟಾಗಿ ಇಚ್ಛೆಯಿಲ್ಲ. ಯುದ್ಧವು ತಪ್ಪಿದರೆ ಸಾಕೆಂಬ ಆಸೆ ಅವನದು. ಆದರೆ ಉಪದೇಶಮಾಡುತ್ತಿರುವಾಗಲೇ ಶ್ರೀಕೃಷ್ಣನು **ಯುಧ್ಯಸ್ವ ವಿಗತಜ್ವರಃ, ಉತ್ತಿಷ್ಠ ಭಾರತ ।** ಮುಂತಾದ ವಾಕ್ಯಗಳಿಂದ ಯುದ್ಧಮಾಡಲು ಅರ್ಜುನನನ್ನು ಪ್ರಚೋದಿಸುತ್ತಲೇ ಇದ್ದಾನೆ. ಈ ಕಾರಣದಿಂದಾಗಿ ಅರ್ಜುನನು ಪುನಃ ತನ್ನ ಸಂಶಯವನ್ನು ಶ್ರೀಕೃಷ್ಣನ ಮುಂದಿಡುತ್ತಾನೆ.

"ನೀನು ಕರ್ಮಸಂನ್ಯಾಸ ಎಂದರೆ ಕರ್ಮಗಳನ್ನೇ ಬಿಟ್ಟುಬಿಡುವುದು ಶ್ರೇಷ್ಠವೆಂದು ಒಮ್ಮೆ ಹೇಳುತ್ತೀಯೆ. ಮತ್ತೊಮ್ಮೆ ಫಲದ ಅಭಿಲಾಷೆಯಿಲ್ಲದೇ ಈಶ್ವರಾರ್ಪಣಬುದ್ಧಿಯಿಂದ ಕರ್ಮಮಾಡಬೇಕು ಎನ್ನುವೆ. ಈ ಎರಡರಲ್ಲಿ ಯಾವುದು ಶ್ರೇಯಸ್ಕರವಾದುದು? ಶ್ರೇಯಸ್ಸಿಗೆ (ಮೋಕ್ಷಕ್ಕೆ) ಯಾವುದು ದಾರಿಮಾಡಿಕೊಡುತ್ತದೆ?–ಎಂಬುದನ್ನು ನಿಶ್ಚಯಮಾಡಿ ಹೇಳು. ಅದೂ ಸರಿ; ಇದೂ ಸರಿ–ಎಂದು ಡೋಲಾಯಮಾನವಾಗಿ ಹೇಳಬೇಡ. ಕರ್ಮ ಯೋಗವನ್ನು ನನಗೆ ಬೋಧಿಸಿ ಕರ್ಮಸಂನ್ಯಾಸವು ಶ್ರೇಷ್ಠವೆಂದು ನೀನು ಹೇಳಿದರೆ ನಾನು ಕರ್ಮಯೋಗವನ್ನು ಹೇಗೆ ತಾನೇ ಅವಲಂಬಿಸಲಿ? ನನ್ನ ಮನಸ್ಸು ಸದ್ಯದಲ್ಲಿ ಕರ್ಮಸಂನ್ಯಾಸದ ಕಡೆಗೆ ಹೋಗಿದೆ. ಯುದ್ಧಮಾಡಲು ಆಸಕ್ತಿಯನ್ನು ಹೊಂದಿಲ್ಲ. ಯುದ್ಧದಲ್ಲಿ ಅನೇಕದೋಷಗಳು ಕಾಣುತ್ತಿವೆ. ಆದುದರಿಂದ 'ಈ ಒಂದು ಮಾರ್ಗವೇ ನಿನ್ನ ಶ್ರೇಯಸ್ಸಿಗೆ ಅನುಕೂಲ ವಾದುದು' ಎಂಬುದನ್ನು ನಿಶ್ಚಯಮಾಡಿ, ಪುನಃ ಪುನಃ ಸಂಶಯಕ್ಕೆ ಎಡೆಯಿಲ್ಲದ ರೀತಿಯಲ್ಲಿ ಹೇಳು.

### ಅರ್ಜುನನು ಪ್ರಶ್ನೆಮಾಡುವ ಆಶಯ

**ಕರ್ಮಣ್ಯಕರ್ಮ ಯಃ ಪಶ್ಯೇತ್** ಮುಂತಾದ ಮಾತುಗಳಿಂದ ಸರ್ವಕರ್ಮಸಂನ್ಯಾಸವನ್ನು ಭಗವಂತನು ಹೇಳಿದ್ದಾನೆ. **ಛಿತ್ತ್ವೈನಂ ಸಂಶಯಂ ಯೋಗಂ** ಮುಂತಾದ ಮಾತಿನಿಂದ ಕರ್ಮಾನುಷ್ಠಾನವೆಂಬ ಯೋಗವನ್ನು ಆಚರಿಸಲೂ ಹೇಳಿದ್ದಾನೆ.

ಕರ್ಮಾನುಷ್ಠಾನ ಕರ್ಮಸಂನ್ಯಾಸ–ಈ ಎರಡೂ ಸ್ಥಿತಿ-ಗತಿಗಳಂತೆ ಪರಸ್ಪರವಿರೋಧಿಗಳು. ಒಬ್ಬನೇ ಏಕಕಾಲದಲ್ಲಿ ಇವುಗಳನ್ನು ಮಾಡುವುದ ಕ್ಕಾಗುವುದಿಲ್ಲ. ಕಾಲಭೇದದಿಂದ ಇವುಗಳನ್ನು ಅನುಷ್ಠಾನಮಾಡಬೇಕೆಂದು ವಿಧಾನವನ್ನೇನೂ ಹೇಳಿಲ್ಲ. ಆದುದರಿಂದ ಇವೆರಡರಲ್ಲಿ ಯಾವುದಾದರೂ ಒಂದು ಮಾತ್ರವೇ ಕರ್ತವ್ಯ. ಇವುಗಳಲ್ಲಿ ಯಾವುದು ಶ್ರೇಷ್ಠವೋ ಅದನ್ನೇ ಆಚರಿಸಬೇಕು. ಮತ್ತೊಂದನ್ನಲ್ಲ. ಆದುದರಿಂದ ಇವೆರಡರಲ್ಲಿ ಯಾವುದು ಶ್ರೇಷ್ಠತರ ಎಂದು ಅರ್ಜುನನ ಪ್ರಶ್ನೆ. (ಶಂ.ಭಾ.)

ಈ ಅಧ್ಯಾಯದಲ್ಲಿ ಕರ್ಮಯೋಗವು ಆತ್ಮಪ್ರಾಪ್ತಿಗೆ ಜ್ಞಾನನಿಷ್ಠೆ

ಗಿಂತಲೂ ಶೀಘ್ರವಾಗಿ ಫಲಕೊಡುವ ಸಾಧನ–ಎಂಬುದನ್ನು ಕರ್ಮಯೋಗ ದಲ್ಲಿ ಅಂತರ್ಗತವಾದ ಅಕರ್ತೃತ್ವದ ಅನುಸಂಧಾನಪ್ರಕಾರವನ್ನು ಪ್ರತಿಪಾದನೆ ಮಾಡಿ ತನ್ಮೂಲವಾದ ಜ್ಞಾನವನ್ನು ವಿಮರ್ಶಿಸಿದೆ. ಎರಡನೆಯ ಅಧ್ಯಾಯ ದಲ್ಲಿ ಮುಮುಕ್ಷುವು ಮೊದಲು ಕರ್ಮಯೋಗವನ್ನೇ ಆಚರಿಸಬೇಕು. ಅದ ರಿಂದ ಅಂತಃಕರಣದ ದೋಷವನ್ನು ಕಳೆದುಕೊಂಡವನಾಗಿ ಜ್ಞಾನಯೋಗ ದಿಂದ ಆತ್ಮದರ್ಶನವನ್ನು ಮಾಡಬೇಕು–ಎಂದು ಪ್ರತಿಪಾದನೆಮಾಡಿ ಮತ್ತೆ ಮೂರನೆಯ ಮತ್ತು ನಾಲ್ಕನೆಯ ಅಧ್ಯಾಯಗಳಲ್ಲಿ–'ಜ್ಞಾನಯೋಗಾಧಿಕಾರ ದೆಶೆಯಲ್ಲಿರುವವನಿಗೂ ಕರ್ಮನಿಷ್ಠೆಯೇ ಶ್ರೇಷ್ಠವಾದುದು. ಜ್ಞಾನನಿಷ್ಠೆಯ ಅಪೇಕ್ಷೆ ಎಲ್ಲಿದೆಯೋ ಆತ್ಮಪ್ರಾಪ್ತಿಗೆ ಅದೇ ಸಾಧನವಾಗುತ್ತದೆ'–ಎಂದು ಕರ್ಮನಿಷ್ಠೆಯನ್ನು ಪ್ರಶಂಸೆಮಾಡಿದ್ದೀಯೆ. ಹೀಗಿರುವಾಗ ಈ ಎರಡು ಯೋಗಗಳಲ್ಲಿ ಆತ್ಮಪ್ರಾಪ್ತಿಸಾಧನಗಳು, ಸೌಕರ್ಯ ಮತ್ತು ಶೀಘ್ರತೆ–ಇವುಗಳ ದೃಷ್ಟಿಯಿಂದ ಯಾವುದು ಶ್ರೇಷ್ಠ ಎಂದು ಅರ್ಜುನನ ಪ್ರಶ್ನೆ. (ರಾ.ಭಾ.)

ಮೂರನೆಯ ಅಧ್ಯಾಯದಲ್ಲಿ ಹೇಳಲ್ಪಟ್ಟ ಕರ್ಮಯೋಗವನ್ನೇ ಈ ಅಧ್ಯಾಯದಲ್ಲಿ ಭಗವಂತನು ವಿಸ್ತರಿಸುತ್ತಾನೆ. ಯದೃಚ್ಛಾಲಾಭ... ಇತ್ಯಾದಿಗಳಿಂದ ಸಂನ್ಯಾಸವನ್ನೂ, ಕುರು ಕರ್ಮೈವ ಮುಂತಾದುವುಗಳಿಂದ ಕರ್ಮಯೋಗವನ್ನೂ ಶ್ರೀಕೃಷ್ಣನು ಹೇಳಿದ್ದಾನೆ. ಇವೆರಡರಲ್ಲಿ ಯಾವುದು ಶ್ರೇಷ್ಠ?–ಎಂಬುದು ಅರ್ಜುನನ ಪ್ರಶ್ನೆ.

ಕೃಷ್ಣ ಎಂದರೆ ನಿಯಮನ ಮುಂತಾದುವುಗಳಿಂದ ಎಲ್ಲ ಲೋಕಗಳನ್ನೂ ಎಳೆದುಕೊಳ್ಳುವವನು.

**ಯತಃ ಕರ್ಷಸಿ ದೇವೇಶ ನಿಯಮ್ಯ ಸಕಲಂ ಜಗತ್ ।**
**ಅತೋ ವದನ್ತಿ ಮುನಯಃ ಕೃಷ್ಣಂ ತ್ವಾಂ ಬ್ರಹ್ಮವಾದಿನಃ ॥)**

ಸಂನ್ಯಾಸಶಬ್ದಕ್ಕೆ ಭಗವಂತನೇ ಅರ್ಥವನ್ನು ಮುಂದೆ ಹೇಳುತ್ತಾನೆ.

**ಶ್ರೀಭಗವಾನುವಾಚ :**

**ಓಂ ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।**
**ತಯೋಸ್ತು ಕರ್ಮಸಂನ್ಯಾಸಾತ್ಕರ್ಮಯೋಗೋ ವಿಶಿಷ್ಯತೇ ॥೨॥**

ಶ್ರೀಭಗವಂತನು ಹೇಳುತ್ತಾನೆ :

"ಅರ್ಜುನ! ಸಂನ್ಯಾಸ ಮತ್ತು ಕರ್ಮಯೋಗ–ಎರಡೂ ಸಹ ಮೋಕ್ಷವನ್ನು ಕೊಡತಕ್ಕುವುಗಳೇ ಆಗಿವೆ. ಆದರೆ ಅವೆರಡರಲ್ಲಿ ಕರ್ಮ ಸಂನ್ಯಾಸಕ್ಕಿಂತಲೂ (ಕರ್ಮಗಳನ್ನು ಬಿಟ್ಟುಬಿಡುವುದಕ್ಕಿಂತಲೂ) ಕರ್ಮ ಯೋಗವೇ ಹೆಚ್ಚಿನದು.

* * *

(ಸಂನ್ಯಾಸ (ಸಾಂಖ್ಯಯೋಗ) ಮತ್ತು ಕರ್ಮಯೋಗಗಳೆರಡೂ ಮೋಕ್ಷಕ್ಕೆ ಸಾಧನಗಳಾಗಿರತಕ್ಕುವುಗಳೇ ಆಗಿವೆ. ಇದರಲ್ಲಿ ಸಂಶಯವೇ ಇಲ್ಲ. ಆದರೆ ಬರಿಯ ಕರ್ಮಸಂನ್ಯಾಸಕ್ಕಿಂತಲೂ ಅಥವಾ ಕರ್ಮತ್ಯಾಗಕ್ಕಿಂತಲೂ ಕರ್ಮಯೋಗವನ್ನು ಈಶ್ವರಾರ್ಪಣಬುದ್ಧಿಯಿಂದ ಮಾಡುವುದೇ ಶ್ರೇಷ್ಠ ವಾದುದು. ಸಂನ್ಯಾಸಯೋಗ ಮತ್ತು ಕರ್ಮಯೋಗಗಳ ಗುರಿಯು ಮೋಕ್ಷವೇ ಆದರೂ ಮಾರ್ಗವು ಭಿನ್ನ-ಭಿನ್ನವಾಗಿಯೇ ಇರುತ್ತವೆ. ಎರಡನ್ನೂ ಒಬ್ಬನೇ ಆಚರಿಸುವುದಕ್ಕಾಗುವುದಿಲ್ಲ.

ಸಂನ್ಯಾಸಿಯು ಕರ್ಮತ್ಯಾಗೀ. ಆತ್ಮಜ್ಞಾನಸಾಧನೆಗೆ ಮಾಡಬೇಕಾದ ಕರ್ಮವೊಂದನ್ನು ಹೊರತಾಗಿ ಮತ್ತಾವ ಕರ್ಮಗಳನ್ನೂ ಮಾಡುವುದಿಲ್ಲ. ಯಾವ ಕರ್ಮಗಳೂ ತನಗೆ ಸಂಬಂಧಿಸಿಲ್ಲವೆಂಬ ಭಾವನೆಯಿಂದಿರುತ್ತಾನೆ. ಇಂದ್ರಿಯಗಳು ಅವುಗಳ ಕರ್ಮಗಳನ್ನು ಮಾಡುತ್ತವೆಯೇ ಹೊರತು ಕರ್ಮಮಾಡುತ್ತಿರುವವನು 'ನಾನಲ್ಲ' ಎಂಬ ಭಾವನೆಯಿಂದ ಅಹಂ ಭಾವ ವನ್ನು ಸಂಪೂರ್ಣವಾಗಿ ತೊರೆದಿರುತ್ತಾನೆ. ಇವನಿಗೆ 'ನಮ್ಮವರು ; ತಮ್ಮವರು' ಎಂಬುವರೇ ಇರುವುದಿಲ್ಲ. ಇವನು ಯಾವುದರಲ್ಲಿಯೂ ಭೇದವನ್ನು ಕಾಣುವುದಿಲ್ಲ. ಸರ್ವವೂ ಬ್ರಹ್ಮಮಯವೆನ್ನುತ್ತಾನೆ. ಕರ್ಮಯೋಗಿಯು ಸಮಾಜದಲ್ಲೇ ಇರುತ್ತಾನೆ. ಕರ್ಮಗಳೆಲ್ಲವನ್ನೂ ಮಾಡುತ್ತಾನೆ. ನಿಷ್ಕಾಮನೆ ಯಿಂದ ಮಾಡುತ್ತಾನೆ. ಕರ್ಮಗಳೆಲ್ಲವೂ ಬಹಿರಂಗವೇ ಆಗಿರುವುದರಿಂದ ಮಾಡಲು ಸುಲಭವಾಗಿರುತ್ತದೆ. ಸಂನ್ಯಾಸಯೋಗವು ಕೇವಲ ಅಂತಃ ಕರಣಕ್ಕೆ ಸಂಬಂಧಿಸಿದುದಾಗಿರುತ್ತದೆ. ಬಹಳ ಕಷ್ಟಕರವಾದುದು. ಕರ್ಮ ಯೋಗದಲ್ಲಿ ಮನುಷ್ಯನು ಜಾರುವುದಿಲ್ಲ. ಆತ್ಮಜ್ಞಾನವಾದನಂತರ ಕರ್ಮವನ್ನು ಬಿಡಬಹುದು ಅಥವಾ ಲೋಕಸಂಗ್ರಹಾರ್ಥವಾಗಿ ಮಾಡ

ಬಹುದು. ಆದರೆ ಆತ್ಮಜ್ಞಾನವಾಗುವ ಮೊದಲೇ ಸಂನ್ಯಾಸಾಶ್ರಮವನ್ನೇ ಸ್ವೀಕರಿಸಿ ಕರ್ಮಗಳನ್ನು ಬಿಟ್ಟುಬಿಟ್ಟರೆ–'ಇತೋ ಭ್ರಷ್ಟಸ್ತತೋ ಭ್ರಷ್ಟ' ನಾಗಬಹುದು. ಈ ಕಾರಣದಿಂದಲೇ ಶ್ರೀಕೃಷ್ಣನು ಕರ್ಮಯೋಗವೇ ಶ್ರೇಷ್ಠವೆನ್ನುತ್ತಾನೆ ಮತ್ತು ಮುಂದಿನ ಶ್ಲೋಕದಲ್ಲಿ ನಿತ್ಯಸಂನ್ಯಾಸಿಯ ಲಕ್ಷಣಗಳನ್ನೂ ಹೇಳುತ್ತಾನೆ.

**ತಯೋಸ್ತು....ವಿಶಿಷ್ಯತೇ**

ಕರ್ಮಸಂನ್ಯಾಸ ಮತ್ತು ಕರ್ಮಯೋಗ–ಎರಡೂ ಜ್ಞಾನೋತ್ಪತ್ತಿಗೆ ಕಾರಣಗಳಾಗಿರುವುದರಿಂದ ಮೋಕ್ಷಪ್ರದಗಳೇ ಆಗಿವೆ. ಹಾಗಿದ್ದರೂ ಕೇವಲ ಕರ್ಮಸಂನ್ಯಾಸಕ್ಕಿಂತಲೂ ಕರ್ಮಯೋಗವೇ ಶ್ರೇಷ್ಠವಾದುದು ಎಂದು ಭಗವಂತನು ಕರ್ಮಯೋಗವನ್ನು ಸ್ತುತಿಸುತ್ತಾನೆ. (ಶಂ.ಭಾ.)

ಸಂನ್ಯಾಸಃ ಎಂದರೆ ಜ್ಞಾನಯೋಗ. ಜ್ಞಾನಯೋಗ ಮತ್ತು ಕರ್ಮ ಯೋಗಗಳೆರಡೂ ಸ್ವತಂತ್ರವಾಗಿ ಮೋಕ್ಷಪ್ರದಗಳೇ ಆದರೂ ಅವೆರಡರಲ್ಲಿ ಕರ್ಮಸಂನ್ಯಾಸಕ್ಕಿಂತಲೂ ಎಂದರೆ ಜ್ಞಾನಯೋಗಕ್ಕಿಂತಲೂ ಕರ್ಮ ಯೋಗವೇ ಶ್ರೇಷ್ಠವಾದುದು. (ರಾ.ಭಾ.)

ಅರ್ಜುನನ ಪ್ರಶ್ನೆಯ ಆಶಯವೆಂದರೆ : ಸಂನ್ಯಾಸಶಬ್ದಕ್ಕೆ ಸರ್ವ ಕರ್ಮಪರಿತ್ಯಾಗ ಎಂಬ ಅರ್ಥವಿಲ್ಲದೆ ದ್ವೇಷ ಮೊದಲಾದುವುಗಳನ್ನು ಬಿಡು ವುದೇ ಸಂನ್ಯಾಸಶಬ್ದಕ್ಕೆ ಅರ್ಥವಾಗಿದ್ದರೆ ಅದಕ್ಕೆ ಲೋಕವಿರೋಧವೇ ಇಲ್ಲ. ಅವೆರಡಕ್ಕೂ ವಿರೋಧವಿದೆಯೆಂಬ ಅಭಿಪ್ರಾಯವಿದ್ದರೆ ಯಾವುದು ಶ್ರೇಯಸ್ಸು ಎಂದು ಪ್ರಶ್ನೆಮಾಡುವುದು ಅನುಚಿತವಾಗುತ್ತದೆ. ಆದುದರಿಂದ ಇಲ್ಲಿ (ಶ್ರೀಕೃಷ್ಣನ ಪರಿಹಾರವಾಕ್ಯದಲ್ಲಿ) ಹೇಳಿರುವ ಸಂನ್ಯಾಸ ಎಂಬುದು ಯತ್ಯಾಶ್ರಮವಲ್ಲ. (ಮ.ಭಾ.)

**ನಾಯಂ ಸಂನ್ಯಾಸೋ ಯತ್ಯಾಶ್ರಮಃ**

ಸಂನ್ಯಾಸಾಶ್ರಮವು ಶ್ರೇಷ್ಠ ಎಂಬುದಕ್ಕೆ ಶಾಸ್ತ್ರಪ್ರಮಾಣವೇ ಇದೆ.

**ದ್ವಂದ್ವತ್ಯಾಗಾತ್ತು ಸಂನ್ಯಾಸಾತ್ ಮತ್ತೂಜ್ಯೈವ ಗರೀಯಸೀ ।**
**ತಾನಿ ವಾ ಏತಾನ್ಯವರಾಣಿ ತಪಾಂಸಿ ನ್ಯಾಸ ಏವಾತ್ಯರೇಚಯೇತ್ ।**

**ಸಂನ್ಯಾಸಸ್ತು ತುರಿಯೋ ಯಃ ನಿಷ್ಕ್ರಿಯಾಖ್ಯಃ ಸಧರ್ಮಕಃ ।**
**ನ ತಸ್ಮಾದುತ್ತಮೋ ಧರ್ಮಃ ಲೋಕೇ ಕಶ್ಚನ ವಿದ್ಯತೇ ॥**

**ಬ್ರಹ್ಮಚರ್ಯಾದೇವ ಪ್ರವ್ರಜೇತ್....**

**ಸಂನ್ಯಾಸೇ ತು ತುರೀಯೇ ವೈ ಪ್ರೀತಿರ್ಮಮ ಮಹೀಯಸೀ ।**
**ಯೇಷಾಮತ್ರಾಧಿಕಾರೋ ನ ತೇಷಾಂ ಕರ್ಮೇತಿ ನಿಶ್ಚಯಃ ॥**

ಆದುದರಿಂದ ಇಲ್ಲಿ ಸಂನ್ಯಾಸಶಬ್ದವು ಸಂನ್ಯಾಸಾಶ್ರಮವನ್ನು ಹೇಳುವುದಿಲ್ಲ. ಕರ್ಮಯೋಗದಲ್ಲಿ ಎರಡು ಅಂಶಗಳು=ಕಾಮಾದಿವರ್ಜನ, ಈಶ್ವರಾರ್ಪಣಬುದ್ಧಿಯಿಂದ ಕರ್ಮಾನುಷ್ಠಾನ. ಇವುಗಳಲ್ಲಿ ಮೊದಲನೆಯದು ಸಂನ್ಯಾಸಶಬ್ದದಿಂದಲೂ, ಎರಡನೆಯದು ಔಪಚಾರಿಕವಾಗಿ ಕರ್ಮಯೋಗ ಎಂಬ ಶಬ್ದದಿಂದಲೂ ಹೇಳಲ್ಪಟ್ಟಿದೆ–ಎಂದು ಶ್ರೀಜಯತೀರ್ಥರ ಟೀಕೆಯಿದೆ.

**ಕಾಮಾದಿವರ್ಜನಂ ಈಶ್ವರಾರ್ಪಣಬುದ್ಧ್ಯಾ ಕರ್ಮಾನುಷ್ಠಾನಂ ಚೇತಿ। ತತ್ರ ಆದ್ಯಂ ಸಂನ್ಯಾಸಶಬ್ದೋಕ್ತಂ ದ್ವಿತೀಯಂ ಉಪಚಾರೇಣ ಕರ್ಮಯೋಗಶಬ್ದೋಕ್ತಂ)**

**ಓಂ ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।**
**ನಿರ್ದ್ವನ್ದ್ವೋ ಹಿ ಮಹಾಬಾಹೋ ಸುಖಂ ಬನ್ಧಾತ್ಪ್ರಮುಚ್ಯತೇ ॥**

ಮಹಾಬಾಹೋ! ಯಾವನು ದ್ವೇಷಿಸುವುದಿಲ್ಲವೋ ಮತ್ತು ಆಶಿಸುವುದಿಲ್ಲವೋ ಅವನು ನಿತ್ಯಸಂನ್ಯಾಸಿ ಎಂದು ತಿಳಿಯತಕ್ಕದ್ದು. ಏಕೆಂದರೆ : ದ್ವಂದ್ವರಹಿತನಾದ ಅವನು ಸುಖವಾಗಿ ಬಂಧನದಿಂದ ಬಿಡುಗಡೆಹೊಂದುತ್ತಾನೆ.

* * *

(ಹಿಂದೆ ಒಮ್ಮೆ ಹೇಳಿದಂತೆ ರಾಗ-ದ್ವೇಷಗಳೇ ಮನುಷ್ಯನ ಬಂಧನಕ್ಕೆ ಮೂಲಕಾರಣಗಳು. 'ರಾಗ-ದ್ವೇಷಗಳಿಲ್ಲದವನು' ಎಂದರೆ ಸುಖ-ದುಃಖಗಳು ಮತ್ತು ಅವುಗಳ ಸಾಧನೆಗಳಲ್ಲಿ ರಾಗ-ದ್ವೇಷಗಳಿಲ್ಲದೇ ಇರುವವನು ಕರ್ಮದಲ್ಲಿ ನಿರತನಾಗಿದ್ದರೂ ಅವನನ್ನು ಸದಾ ಸಂನ್ಯಾಸಿಯೆಂದೇ ತಿಳಿಯಬೇಕು. ಏಕೆಂದರೆ : ಅವನಲ್ಲಿ ಶೀತೋಷ್ಣ, ಸುಖ-ದುಃಖ, ಮಾನಾಪಮಾನ,

ಲಾಭಾಲಾಭ, ಜಯಾಪಜಯ–ಇವೇ ಮೊದಲಾದ ದ್ವಂದ್ವಗಳಿರುವುದಿಲ್ಲ. ಅಂತಹವನು ಅನಾಯಾಸವಾಗಿಯೇ ಬಂಧನದಿಂದ ಬಿಡುಗಡೆಹೊಂದುತ್ತಾನೆ.

ಯಾವ ಕರ್ಮಯೋಗಿಯು ಈ ಯೋಗದಲ್ಲಿ ಅಂತರ್ಗತವಾಗಿರುವ ಆತ್ಮಾನುಭವದಿಂದ ತೃಪ್ತನಾಗಿ ಅದನ್ನು ಬಿಟ್ಟು ಬೇರೆ ಯಾವುದನ್ನೂ ಬಯಸುವುದಿಲ್ಲವೋ, ಹಾಗೆ ಬೇರೆ ಯಾವುದರ ಬಯಕೆಯೂ ಇಲ್ಲದ ಕಾರಣದಿಂದ ಸುಖ-ದುಃಖಾದಿ ದ್ವಂದ್ವಗಳನ್ನು ಸಹಿಸುವವನಾಗಿರುತ್ತಾನೆಯೋ–ಅವನನ್ನು ನಿತ್ಯಜ್ಞಾನನಿಷ್ಠನೆಂದೇ ತಿಳಿಯಬೇಕು. ಏಕೆಂದರೆ ಸುಕರವಾದ ಕರ್ಮಯೋಗದಲ್ಲಿ ನಿಷ್ಠನಾಗಿರುವುದರಿಂದ ಅವನು ಬಂಧನದಿಂದ ಸುಲಭವಾಗಿ ಬಿಡುಗಡೆಹೊಂದುತ್ತಾನೆ. (ರಾ.ಭಾ.)

ಭಗವಂತನು ಈ ಶ್ಲೋಕದಲ್ಲಿ ಸಂನ್ಯಾಸೀಶಬ್ದದ ಅರ್ಥವನ್ನು ಹೇಳುತ್ತಾನೆ:

ಜ್ಞೇಯಃ ಸಂನ್ಯಾಸವು ಮುಕ್ತಿಯನ್ನು ಕೊಡತಕ್ಕದ್ದು ಎಂಬುದನ್ನು ಜ್ಞಾಪಿಸಲು ಸಃ ಎಂಬ ಶಬ್ದಾರ್ಥವನ್ನು ನೆನಪಿಗೆ ತರುತ್ತಾನೆ.

**ಜ್ಞೇಯ ಇತಿ ಸಂನ್ಯಾಸಸ್ಯ ನಿಃಶ್ರೇಯಸಕರತ್ವಂ ಜ್ಞಾಪಯಿತುಂ ತಚ್ಛಬ್ದಾರ್ಥಂ ಸ್ಮಾರಯತುಂ** (ಮ.ಭಾ.)

**ಏವಂವಿಧಃ ಯಃ ಕರ್ಮಣಿ ವರ್ತಮಾನೋಽಪಿ ಸಃ ನಿತ್ಯಸಂನ್ಯಾಸೀ ಇತಿ ಜ್ಞಾತವ್ಯಃ** (ಶಂ.ಭಾ.)

ಇಂತಹವನು ಬಹುಸುಖವಾಗಿ ಬಂಧನದಿಂದ (ಕರ್ಮಬಂಧನದಿಂದ) ಪಾರಾಗುತ್ತಾನೆ.)

**ಓಂ ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದನ್ತಿ ನ ಪಣ್ಡಿತಾಃ ।**
**ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿನ್ದತೇ ಫಲಮ್ ॥೪॥**

ಸಾಂಖ್ಯಯೋಗ ಮತ್ತು ಕರ್ಮಯೋಗ ಇವುಗಳು ಬೇರೆ-ಬೇರೆ ಎಂದು ಅವಿವೇಕಿಗಳು ಹೇಳುತ್ತಾರೆ. ಪಂಡಿತರಾದವರು ಹೇಳುವುದಿಲ್ಲ. ಈ

ಎರಡರಲ್ಲಿ ಯಾವುದೊಂದು ಮಾರ್ಗವನ್ನೇ ಚೆನ್ನಾಗಿ ಆಚರಿಸಿದರೂ ಎರಡ ರಿಂದ ಪಡೆಯಬಹುದಾದ ಫಲವನ್ನೂ ಪಡೆದುಕೊಳ್ಳುತ್ತಾನೆ.

* * *

(ಕೇವಲ ಅಜ್ಞರಾದವರು ಸಾಂಖ್ಯವೇ ಬೇರೆ, ಯೋಗವೇ ಬೇರೆ– ಎಂದು ಹೇಳುತ್ತಾರೆ. ಅವನವನ ಪ್ರಕೃತಿಗೆ ಅನುಗುಣವಾಗಿ ಈ ಎರಡು ಮಾರ್ಗಗಳಲ್ಲಿ ಯಾವುದೊಂದನ್ನಾದರೂ ಶ್ರದ್ಧಾಪೂರ್ವಕವಾಗಿ ಹಿಡಿದು ಪ್ರಯತ್ನಮಾಡಿದಲ್ಲಿ ಎರಡರ ಫಲವನ್ನೂ ಎಂದರೆ ಎರಡಕ್ಕೂ ಫಲವಾಗಿ ರುವ ಮೋಕ್ಷವೆಂಬ ಫಲವನ್ನು ಪಡೆಯುತ್ತಾನೆ.

ಬಾಲ ಎಂದರೆ 'ಅಜ್ಞ' **'ಅಜ್ಞಂ ಚ ಬಾಲ ಇತ್ಯಾಹುಃ'** ಎಂದು ಧರ್ಮಶಾಸ್ತ್ರದಲ್ಲಿ ವಚನವಿದೆ.

ಒಂದನ್ನು ಚೆನ್ನಾಗಿ ಶ್ರದ್ಧೆಯಿಂದ ಮಾಡಿದರೂ ಎರಡರ ಫಲವನ್ನೂ ಪಡೆಯುತ್ತಾನೆಂದು ಶ್ರೀಕೃಷ್ಣನು ಹೇಳುತ್ತಾನೆ. ಸಾಂಖ್ಯಯೋಗ ಮತ್ತು ಕರ್ಮಯೋಗಗಳಿಗೆ ಪ್ರತ್ಯೇಕವಾದ ಎರಡು ಫಲಗಳಿವೆಯೇ? ಒಂದೇ ಮಾರ್ಗದಿಂದ ಈ ಎರಡೂ ಫಲಗಳೂ ಸಿಕ್ಕುವುವೇ?

ಪ್ರತ್ಯೇಕವಾದ ಎರಡು ಫಲಗಳಿಲ್ಲ. **ಉಭಯೋಃ ತದೇವ ಹಿ ನಿಃಶ್ರೇಯಸಂ ಫಲಂ.** ಸಾಂಖ್ಯ-ಯೋಗಗಳೆರಡಕ್ಕೂ ಮೋಕ್ಷವೇ ಫಲ ವಾಗಿರುತ್ತದೆ. ಆದುದರಿಂದ ಈ ಎರಡು ಮಾರ್ಗಗಳಲ್ಲಿ ಯಾವುದೇ ಒಂದು ಮಾರ್ಗವನ್ನು ಅನುಸರಿಸಿದರೂ ಮೋಕ್ಷವು ಸಿಕ್ಕುತ್ತದೆ.

ಈ ವಿಷಯವನ್ನೇ ಶ್ರೀಕೃಷ್ಣನು ಮುಂದಿನ ಶ್ಲೋಕದಲ್ಲಿ ಇನ್ನೂ ಸ್ಪಷ್ಟವಾಗಿ ವಿವರಿಸಿ ಹೇಳುತ್ತಾನೆ.

ಕರ್ಮಯೋಗವು ಜ್ಞಾನಯೋಗವನ್ನೇ ಸಾಧಿಸುತ್ತದೆ. ಜ್ಞಾನಯೋಗ ವಾದರೋ ಆತ್ಮಸಾಕ್ಷಾತ್ಕಾರವನ್ನು ಸಾಧಿಸುತ್ತದೆ. ಎರಡಕ್ಕೂ ಫಲ ಭೇದವಾದುದರಿಂದ ಈ ಎರಡು ಯೋಗಗಳೂ ಬೇರೆ ಬೇರೆ ಎಂದು ಹೇಳುವವರು ಅವಿವೇಕಿಗಳು. ಎರಡಕ್ಕೂ ಆತ್ಮಾವಲೋಕನವೇ ಫಲ. ಇವೆರಡರಲ್ಲಿ ಯಾವುದನ್ನು ಆಶ್ರಯಿಸಿದರೂ ಅದೇ ಫಲವನ್ನೇ ಹೊಂದ ಬಹುದು.) (ರಾ.ಭಾ.)

**ಓಂ ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ ।**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥೫॥**

ಸಾಂಖ್ಯರಿಗೆ ಯಾವ ಸ್ಥಾನವು ಪ್ರಾಪ್ತವಾಗುವುದೋ ಅದೇ ಯೋಗಿಗಳಿಗೂ ಲಭಿಸುತ್ತದೆ. ಸಾಂಖ್ಯವೂ–ಯೋಗವೂ ಒಂದೇ ಫಲವನ್ನು ಕೊಡತಕ್ಕುವುಗಳು–ಎಂದು ಯಾವನು ಕಂಡುಕೊಳ್ಳುವನೋ ಅವನೇ 'ನಿಜವನ್ನು ತಿಳಿದವನು' ಎನಿಸಿಕೊಳ್ಳುತ್ತಾನೆ.

* * *

(ಸಾಂಖ್ಯಯೋಗಿಗಳು ಎಂದರೆ ಜ್ಞಾನನಿಷ್ಠರಾದ ಯೋಗಿಗಳು ಯಾವ ಪರಮಪದವನ್ನು ಪಡೆದುಕೊಳ್ಳುತ್ತಾರೆಯೋ–ಕರ್ಮಗಳನ್ನು ಫಲಾಭಿಸಂಧಿಯಿಲ್ಲದೇ ಈಶ್ವರಾರ್ಪಣಬುದ್ಧಿಯಿಂದ ಮಾಡಿದ ಕರ್ಮಯೋಗಿಗಳೂ ಸಹ ಅದೇ ಪರಮಪದವನ್ನೇ ಪಡೆದುಕೊಳ್ಳುತ್ತಾರೆ. ಆದುದರಿಂದ 'ಸಾಂಖ್ಯಯೋಗ ಮತ್ತು ಕರ್ಮಯೋಗ–ಈ ಎರಡೂ ಸಹ ಒಂದೇ ಫಲವನ್ನು ಕೊಡತಕ್ಕ ಮಾರ್ಗಗಳು'–ಎಂದು ಯಾವನು ತಿಳಿದುಕೊಳ್ಳುತ್ತಾನೆಯೋ ಅವನೇ ಪಂಡಿತನು.

ಇಲ್ಲಿ ಶ್ರೀಕೃಷ್ಣನು 'ಯೋಗ' ಎಂಬ ಪದವನ್ನು ಬಳಸಿದ್ದಾನೆ. ಯೋಗಿ ಎಂದು ಹೇಳಿಲ್ಲ. ಯೋಗಶಬ್ದದ ಅರ್ಥವನ್ನು ಶ್ರೀಶಂಕರರು ಹೀಗೆ ಹೇಳಿದ್ದಾರೆ:

**ಈಶ್ವರೇ ಸಮರ್ಪ್ಯ ಕರ್ಮಾಣಿ ಆತ್ಮನಃ ಫಲಂ ಅನಭಿಸನ್ಧಾಯ ಅನುತಿಷ್ಠನ್ತಿ ಯೇ ತೇ ಯೋಗಿನಃ**

ಈಶ್ವರನಿಗೆ ಕರ್ಮಗಳನ್ನು ಸಮರ್ಪಿಸಿ ತಮಗಾಗಿ ಫಲವನ್ನು ಬಯಸದೇ ಯಾರು ಕರ್ಮಗಳನ್ನು ಮಾಡುತ್ತಾರೆಯೋ ಅವರು ಯೋಗರು. ಅರ್ಥಾತ್ ಯೋಗಿಗಳು.

ಈ ಅಧ್ಯಾಯದ ಮೊದಲನೆಯ ಶ್ಲೋಕದಲ್ಲಿ ಅರ್ಜುನನು-'ಕರ್ಮಗಳ ಸಂನ್ಯಾಸವನ್ನೂ ಹೊಗಳುವೆ, ಪುನಃ ಯೋಗವನ್ನೂ ಹೊಗಳುವೆ. ಇವೆರಡರಲ್ಲಿ ಯಾವುದು ಉತ್ತಮವೆಂಬುದನ್ನು ನಿಶ್ಚಯಿಸಿ ಹೇಳು'-ಎನ್ನುತ್ತಾನೆ. ಅದಕ್ಕೆ ಉತ್ತರವಾಗಿ ಶ್ರೀಕೃಷ್ಣನು ಎರಡನೆಯ ಶ್ಲೋಕದಲ್ಲಿ 'ಕರ್ಮಸಂನ್ಯಾಸಾತ್

**ಕರ್ಮಯೋಗೋ ವಿಶಿಷ್ಯತೇ'** 'ಕರ್ಮಸಂನ್ಯಾಸಕ್ಕಿಂತಲೂ ಕರ್ಮ ಯೋಗವೇ ಶ್ರೇಷ್ಠ'–ಎನ್ನುತ್ತಾನೆ.

ಆದರೆ ಈ ಶ್ಲೋಕ ಮತ್ತು ಹಿಂದಿನ ಶ್ಲೋಕಗಳಲ್ಲಿ–ಎರಡೂ ಒಂದೇ. ಒಂದೇ ಫಲಕೊಡತಕ್ಕುವುಗಳು. ಒಂದಕ್ಕೊಂದಕ್ಕೆ ಯಾವ ವ್ಯತ್ಯಾಸವೂ ಇಲ್ಲ ಎಂದು ಹೇಳುತ್ತಾನೆ. ಶ್ರೀಕೃಷ್ಣನೇನು ಚಮತ್ಕಾರದಿಂದ ಮಾತನಾಡು ತ್ತಿರುವನೇ? ಎಂಬ ಪ್ರಶ್ನೆಗೆ ಶ್ರೀಶಂಕರರು ಹೀಗೆ ಸಮಾಧಾನಹೇಳಿದ್ದಾರೆ.

ಅರ್ಜುನನು ಪ್ರಶ್ನಿಸಿದ್ದು ಕರ್ಮಸಂನ್ಯಾಸ ಮತ್ತು ಕರ್ಮಯೋಗಗಳ ವಿಷಯ. ಶ್ರೀಕೃಷ್ಣನೂ ಸಹ ಕರ್ಮಸಂನ್ಯಾಸ ಮತ್ತು ಕರ್ಮಯೋಗಗಳ ವಿಷಯವನ್ನೇ ಎರಡನೆಯ ಶ್ಲೋಕದಲ್ಲಿ ಉತ್ತರಿಸಿದ್ದಾನೆ.

**ಕರ್ಮಸಂನ್ಯಾಸಃ**= ಕರ್ಮವನ್ನು ಬಿಡುವುದು. **ಕರ್ಮಯೋಗಃ**= ಕರ್ಮವನ್ನು ಮಾಡುವುದು. ಈ ಎರಡರಲ್ಲಿ ಕರ್ಮಯೋಗವೇ (ಕರ್ಮವನ್ನು ಮಾಡುವುದೇ) ಶ್ರೇಷ್ಠವೆಂದು ಹೇಳಿದ್ದಾನೆ. ಯಾವ ವಿಧವಾದ ಆಧ್ಯಾತ್ಮಿಕ ಜ್ಞಾನವಾಗಲೀ ಸಾಧನೆಯಾಗಲೀ ಇಲ್ಲದೇ ಕರ್ಮಗಳನ್ನು ಬಿಡುವುದರಿಂದ ಮನುಷ್ಯನು ಕರ್ಮಭ್ರಷ್ಟನಾಗುತ್ತಾನೆ. ಹೀಗೆ ಕರ್ಮಗಳನ್ನು ಬಿಡು ವುದಕ್ಕಿಂತಲೂ ಸ್ವಧರ್ಮೋಚಿತವಾದ ನಿತ್ಯ-ನೈಮಿತ್ತಿಕ-ಕಾಮ್ಯಕರ್ಮಗಳನ್ನು ಮಾಡುವುದೇ ಶ್ರೇಷ್ಠ.

ಈ ಉತ್ತರವು ಸಮಂಜಸವಾಗಿಯೇ ಇದೆ. ಮೂರನೆಯ ಶ್ಲೋಕದಲ್ಲಿ ಸಂನ್ಯಾಸಿಯ ಲಕ್ಷಣಗಳನ್ನು ಹೇಳಿ ನಾಲ್ಕನೆಯ ಶ್ಲೋಕದಲ್ಲಿ ಇಂತಹ ಲಕ್ಷಣಯುಕ್ತನಾದ ಸಂನ್ಯಾಸಿಗೆ ಶ್ರೀಕೃಷ್ಣನು ಸಾಂಖ್ಯನೆಂದು ಕರೆಯುತ್ತಾನೆ. ಕರ್ಮಯೋಗವನ್ನು ಯೋಗವೆಂಬ ಶಬ್ದದಿಂದ ಕರೆದಿದ್ದಾನೆ. ಈ ಎರಡು ಶಬ್ದಗಳ ಪ್ರಯೋಗದಿಂದ ಕರ್ಮಸಂನ್ಯಾಸ ಮತ್ತು ಕರ್ಮಯೋಗಗಳ ಅರ್ಥಗಳನ್ನು ಪೂರ್ಣಗೊಳಿಸಿ ಅನಂತರ ಎರಡರ ಫಲವೂ ಒಂದೇ ಎಂದು ಹೇಳಿದ್ದಾನೆ. ಆದುದರಿಂದ ಶ್ರೀಕೃಷ್ಣನ ಮಾತಿನಲ್ಲಿ ಯಾವ ವಿರೋಧವೂ ಇರುವುದಿಲ್ಲ.)

**ಓಂ ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ ನಚಿರೇಣಾಧಿಗಚ್ಛತಿ ॥೬॥**

ಮಹಾಬಾಹೋ! ಅರ್ಜುನ! ಆದರೆ ಸಂನ್ಯಾಸವನ್ನು ಯೋಗವಿಲ್ಲದೇ ಪಡೆದುಕೊಳ್ಳುವುದು ಕಷ್ಟ. ಯೋಗದಿಂದ ಕೂಡಿರುವ ಮುನಿಯು ಬ್ರಹ್ಮವನ್ನು ಬಲುಬೇಗ ಪಡೆದುಕೊಳ್ಳುತ್ತಾನೆ.

* * *

(ಸಂನ್ಯಾಸ ಎಂದರೆ ಇಲ್ಲಿ ಸಾಂಖ್ಯಯೋಗ ; ಜ್ಞಾನಯುಕ್ತನಾಗಿ ಕರ್ಮಗಳನ್ನು ಬಿಡುವುದು. ಇಂತಹ ಸಂನ್ಯಾಸವನ್ನು ಕರ್ಮಯೋಗದ ನೆರವಿಲ್ಲದೇ ಪಡೆಯುವುದು ಬಹಳ ಕಷ್ಟವೆಂದು ಶ್ರೀಕೃಷ್ಣನು ಹೇಳುತ್ತಾನೆ. ಕರ್ಮವನ್ನು ಬಿಟ್ಟುಬಿಡುವುದು ಸುಲಭ. ಆದರೆ ಇಂದ್ರಿಯಗಳನ್ನು ಗೆದ್ದು, ಸರ್ವಸಮಬುದ್ಧಿಯಿಂದ ದ್ವಂದ್ವಗಳನ್ನು ದಾಟಿ, ಮನಸ್ಸನ್ನೂ, ಬುದ್ಧಿಯನ್ನೂ ಪರಿಶುದ್ಧಗೊಳಿಸಿಕೊಂಡು, ಆ ಬುದ್ಧಿಯನ್ನು ಆತ್ಮನಲ್ಲಿ ಲೀನಗೊಳಿಸುವುದು ಅಥವಾ ಆ ಪರಿಶುದ್ಧವಾದ ಬುದ್ಧಿಯಿಂದ ಆತ್ಮದರ್ಶನವನ್ನು ಮಾಡಿಕೊಳ್ಳುವುದು ಬಹು ಕಷ್ಟವಾದ ವಿಷಯ. ಅನೇಕಜನ್ಮಗಳಲ್ಲಿ ಸಂಸ್ಕಾರವಾಗಿದ್ದರೆ ಮಾತ್ರವೇ ಈ ಜನ್ಮದಲ್ಲೊಬ್ಬನು ಕರ್ಮಯೋಗವಿಲ್ಲದೇ ಜ್ಞಾನಿಯಾಗುವನು. ಯೋಗಯುಕ್ತನಾದ ಎಂದರೆ ಕರ್ಮಯೋಗಯುಕ್ತನಾದ ಮುನಿಯು ಬಲುಬೇಗ ಬ್ರಹ್ಮವಸ್ತುವನ್ನು ಪಡೆದುಕೊಳ್ಳುತ್ತಾನೆ. ಕರ್ಮಯೋಗಯುಕ್ತನಾದವನೆಂದರೆ ತಾನು ಮಾಡುವ ಸಕಲಕರ್ಮಗಳನ್ನೂ ಶ್ರೀಕೃಷ್ಣಾರ್ಪಣಬುದ್ಧಿಯಿಂದ ಫಲಾಭಿಸಂಧಿಯಿಲ್ಲದೇ ಮಾಡತಕ್ಕವನು. ಇಂತಹವನು ಚಿತ್ತಶುದ್ಧಿಯನ್ನು ಪಡೆದು ಕೂಡಲೇ ಬ್ರಹ್ಮವಸ್ತುವನ್ನು ಕಂಡುಕೊಳ್ಳುತ್ತಾನೆ.

ಇಲ್ಲಿ ಬ್ರಹ್ಮಶಬ್ದಕ್ಕೆ ಶ್ರೀಶಂಕರರು ಸಂನ್ಯಾಸ ಎಂದು ಹೇಳಿದ್ದಾರೆ. 'ಪರಮಾತ್ಮಜ್ಞಾನವನ್ನು ಸೂಚಿಸುವುದರಿಂದ ಪ್ರಕೃತವಾದ ಸಂನ್ಯಾಸವನ್ನು ಬ್ರಹ್ಮ ಎಂದು ಕರೆಯಬಹುದು' ಎಂದು ಅವರ ಮತ. 'ಕರ್ಮಯೋಗವಿಲ್ಲದೇ ಸಂನ್ಯಾಸವನ್ನು (ಜ್ಞಾನಯೋಗವನ್ನು) ಸಿದ್ಧಿಸಿಕೊಳ್ಳಲು ಬಹು ಕಷ್ಟ. ಕರ್ಮಯೋಗದ ಮೂಲಕ ಅದೇ ಸಂನ್ಯಾಸವನ್ನು ಬಲುಬೇಗ ಸಿದ್ಧಿಮಾಡಿಕೊಳ್ಳಬಹುದು'–ಎಂಬುದು ಅವರ ಅಭಿಪ್ರಾಯವಾಗಿದೆ. ಬ್ರಹ್ಮಶಬ್ದಕ್ಕೆ ನ್ಯಾಸಶಬ್ದಾರ್ಥವು ತೈತ್ತಿರೀಯದ ಮಹಾನಾರಾಯಣಪ್ರಶ್ನೆಯಲ್ಲಿ ಬರುತ್ತದೆ.

**ನ್ಯಾಸ ಇತಿ ಬ್ರಹ್ಮಾ । ಬ್ರಹ್ಮಾ ಹಿ ಪರಃ.**

ಮುನಿಃ= ಈಶ್ವರಸ್ವರೂಪವನ್ನು ಮನನಮಾಡುವವನು. ಮನನಾತ್ ಈಶ್ವರಸ್ವರೂಪಸ್ಯ ಮುನಿಃ (ಶಂ.ಭಾ.)

ಆತ್ಮಮನನಶೀಲಃ = ಮುನಿಃ (ರಾ.ಭಾ.)

ಕಾಮ-ಕ್ರೋಧ ಮುಂತಾದುವುಗಳಿಂದ ವರ್ಜಿತನಾದ ಸಂನ್ಯಾಸೀ.

**ಸ ಹಿ ಲೋಕೇ ಮುನಿರ್ನಾಮ ಯಃ ಕಾಮಕ್ರೋಧವರ್ಜಿತಃ ।**

ಬ್ರಹ್ಮ = ಆತ್ಮಾ (ಮ.ಭಾ.)

ಕರ್ಮಯೋಗಿಯಾದ ಮುನಿಯು ಸುಖವಾಗಿ ಆ ಯೋಗವನ್ನು ಸಾಧಿಸಿ ಅಲ್ಪಕಾಲದಲ್ಲೇ ಆತ್ಮವನ್ನು ಪಡೆಯುತ್ತಾನೆ. ಜ್ಞಾನಯೋಗಿಗಾದರೋ ಬಹಳ ಕಷ್ಟದಿಂದ ತನ್ನ ಜ್ಞಾನಯೋಗವನ್ನು ಸಾಧಿಸಲು ಸಾಧ್ಯ. ದುಃಖಸಾಧ್ಯವಾದುದರಿಂದ ಆತನಿಗೆ ಆತ್ಮವನ್ನು ಪಡೆಯಲು ಹೆಚ್ಚುಕಾಲ ಬೇಕು. (ರಾ.ಭಾ.)

ಸಂನ್ಯಾಸಕ್ಕಿಂತಲೂ ಯೋಗವು ಶ್ರೇಷ್ಠ ಎನ್ನುವುದಕ್ಕೆ ಬೇರೆ ಕಾರಣವನ್ನು ಭಗವಂತನು ಇಲ್ಲಿ ಹೇಳುತ್ತಾನೆ. ಯೋಗವಿಲ್ಲದ ಸಂನ್ಯಾಸದಿಂದ ಮೋಕ್ಷಾದಿ ಫಲವು ಸಿಕ್ಕುವುದಿಲ್ಲ. ಕಾಮಜಯ ಮುಂತಾದುವನ್ನೂ ಸಂನ್ಯಾಸದಿಂದ ಸಾಧಿಸಬಹುದು. ಆದರೆ ಯೋಗಕ್ಕೆ ಮೋಕ್ಷವೇ ಪರಮಫಲ. ಬೇರೆ ಫಲಗಳು (ಕಾಮಜಯ ಮುಂತಾದುವು) ಅಲ್ಪವಾದುದರಿಂದ ಅದನ್ನು ಫಲವಲ್ಲವೆಂದೇ ಕರೆಯಬೇಕು.

**ವಿನಾ ಮೋಕ್ಷಫಲಂ ಯತ್ತು ನ ತತ್ಫಲಮುದೀರ್ಯತೇ ।**

ಮಹಾಫಲಯೋಗ್ಯವಾದ ಕೆಲಸಕ್ಕೆ ಅಲ್ಪಫಲವು ದೊರೆತರೆ ಅದು ಫಲವೇ ಅಲ್ಲ. ಪದ್ಮರಾಗಮಣಿಯು ದೊರೆಯಬೇಕಾದ ಜಾಗದಲ್ಲಿ ಒಂದು ಹಿಡಿಯಷ್ಟು ಅಕ್ಕಿಯು ದೊರೆತಂತೆ ಅದು. ಆದರೆ ಸಂನ್ಯಾಸವು ಯೋಗ ಯುಕ್ತವಾದರೆ ಅದಕ್ಕೆ ಮಹಾಫಲವುಂಟು.) (ಮ.ಭಾ.)

**ಓಂ ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇನ್ದ್ರಿಯಃ ।**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥೭॥**

ಯೋಗದಿಂದ ಕೂಡಿದವನಾಗಿ, ವಿಶುದ್ಧಾಂತಃಕರಣವುಳ್ಳವನಾಗಿ, ಆತ್ಮ ವನ್ನು ಜಯಿಸಿದವನಾಗಿ, ಜಿತೇಂದ್ರಿಯನಾಗಿ, ಸರ್ವಪ್ರಾಣಿಗಳಿಗೂ ಆತ್ಮ

ನಾಗಿರುವ ಆತ್ಮನನ್ನೇ ಆತ್ಮವುಳ್ಳವನಾಗಿ ಇರುವವನು ಕರ್ಮವನ್ನು ಮಾಡುತ್ತಿದ್ದರೂ ಅದರಿಂದ ಅವನು ಲಿಪ್ತನಾಗುವುದಿಲ್ಲ. ಕರ್ಮಫಲಲೇಪವು ಅವನಿಗುಂಟಾಗುವುದಿಲ್ಲ.

* * *

(ಯೋಗಯುಕ್ತನಾಗಿರತಕ್ಕ ಅರ್ಥಾತ್ ಕರ್ಮಯೋಗಯುಕ್ತನಾಗಿರತಕ್ಕ, ಈಶ್ವರಪ್ರೀತ್ಯರ್ಥವಾಗಿ ಫಲಾಭಿಸಂಧಿಯಿಲ್ಲದೇ ಕರ್ಮವನ್ನು ಮಾಡತಕ್ಕ, ಹೀಗೆ ಮಾಡುವುದರಿಂದಲೇ ವಿಶುದ್ಧವಾದ ಆತ್ಮವಿರತಕ್ಕ, ಸತ್ತ್ವಶುದ್ಧಿಯಿರತಕ್ಕ, ಪರಿಶುದ್ಧವಾದ ದೇಹವನ್ನು ಹೊಂದಿರತಕ್ಕ, ಮನಸ್ಸನ್ನು ಜಯಿಸಿರತಕ್ಕ, ಜಿತೇಂದ್ರಿಯನಾಗಿರತಕ್ಕ, ಸಕಲಪ್ರಾಣಿಗಳಿಗೂ ಆತ್ಮಭೂತನಾಗಿರತಕ್ಕ ಸಚ್ಚಿದಾನಂದಸ್ವರೂಪವಾದ ಆತ್ಮವೇ ಆತ್ಮನಾಗಿ ಉಳ್ಳ, ತನ್ನಲ್ಲಿರುವಂತೆಯೇ ಬ್ರಹ್ಮನಿಂದ ಹಿಡಿದು ಸ್ತಂಬದವರೆಗಿನ ಸಕಲಪ್ರಾಣಿಗಳಲ್ಲಿಯೂ ಸಚ್ಚಿದಾನಂದಸ್ವರೂಪವಾದ ಪರಮಾತ್ಮನಿರುವನೆಂದು ಭಾವಿಸಿ, ಸಕಲಪ್ರಾಣಿಗಳನ್ನೂ ಸಮಭಾವದಿಂದ ಕಾಣತಕ್ಕ ಕರ್ಮಯೋಗಿಯು ಕರ್ಮ ಮಾಡುತ್ತಿದ್ದರೂ ಸಹ ಕರ್ಮಫಲಗಳಿಗೆ ಅಂಟಿಕೊಂಡಿರುವುದಿಲ್ಲ. ಕರ್ಮಗಳು ಅವನನ್ನು ಬಂಧಿಸುವುದಿಲ್ಲ. ಈ ಶ್ಲೋಕದಲ್ಲಿ ನಾಲ್ಕು ಬಗೆಯ ಶುದ್ಧಿಗಳನ್ನು ಶ್ರೀಕೃಷ್ಣನು ಹೇಳಿರುತ್ತಾನೆ. **ವಿಶುದ್ಧಾತ್ಮಾ** ಎಂಬುದರಿಂದ ಕಾಯಶುದ್ಧಿ, **ವಿಜಿತಾತ್ಮಾ** ಎಂಬುದರಿಂದ ಮನಃಶುದ್ಧಿ, **ಜಿತೇಂದ್ರಿಯ** ಎಂಬುದರಿಂದ ಇಂದ್ರಿಯಶುದ್ಧಿ, **ಸರ್ವಭೂತಾತ್ಮಭೂತಾತ್ಮಾ** ಎಂಬುದರಿಂದ ಬುದ್ಧಿಯ ಶುದ್ಧಿ.

ಜ್ಞಾನಿಯು ಲೋಕಸಂಗ್ರಹಕ್ಕೋಸ್ಕರ ಕರ್ಮವನ್ನು ಆಚರಿಸುತ್ತಿದ್ದರೂ ಅವನಿಗೆ ಕರ್ಮಬಂಧನವಿಲ್ಲ.

**ಲೋಕಸಂಗ್ರಹಾಯ ಕರ್ಮ ಕುರ್ವನ್ನಪಿ ಕರ್ಮಭಿಃ ನ ಬಧ್ಯತೇ** (ಶಂ.ಭಾ.)

ಕರ್ಮಯೋಗನಿಷ್ಠನು ಶಾಸ್ತ್ರೀಯವಾದ, ಭಗವದಾರಾಧನಾರೂಪವಾದ, ಪರಿಶುದ್ಧವಾದ ಕರ್ಮವನ್ನು ಮಾಡುತ್ತಾ ಅದರಿಂದ ಪರಿಶುದ್ಧವಾದ ಮನಸ್ಸುಳ್ಳವನಾಗುತ್ತಾನೆ. ತಾನು ಅಭ್ಯಾಸಮಾಡಿರುವ ಕರ್ಮದಲ್ಲಿ ಅವನ ಮನಸ್ಸು ಆಸಕ್ತವಾಗಿರುವುದರಿಂದ ಅವನು ಮನಸ್ಸನ್ನು ಸುಖವಾಗಿ

ಜಯಿಸುತ್ತಾನೆ. ಆ ಕಾರಣದಿಂದ ಜಿತೇಂದ್ರಿಯನೂ ಆಗುತ್ತಾನೆ. ತನ್ನ ಆತ್ಮ ಯಾಥಾತ್ಮ್ಯದ ಅನುಸಂಧಾನದಲ್ಲಿ ನಿಷ್ಠನಾಗಿರುವುದರಿಂದ ಎಲ್ಲ ಭೂತಗಳಿಗೂ ಆತ್ಮಭೂತವಾದ ಆತ್ಮವೇ ಆಗುತ್ತಾನೆ. ಎಂದರೆ ಪ್ರಕೃತಿನಿಯುಕ್ತವಾದ ಎಲ್ಲ ದೇಹಗಳಲ್ಲಿಯೂ ಇರುವ ಆತ್ಮಗಳೆಲ್ಲವೂ ಜ್ಞಾನಾಕಾರವಾದುದರಿಂದ ಸಮಾನಾಕಾರವೆಂದು ಭಾವಿಸುತ್ತಾನೆ. ಅಂತಹವನು ಕರ್ಮಗಳನ್ನು ಆಚರಿಸುತ್ತಿದ್ದರೂ ಅವನಿಗೆ ಅನಾತ್ಮದಲ್ಲಿ ಆತ್ಮಾಭಿಮಾನದ ಲೇಪವು ಇರುವುದಿಲ್ಲ. ಆದುದರಿಂದ ಶೀಘ್ರವಾಗಿಯೇ ಅವನಿಗೆ ಆತ್ಮಲಾಭವಾಗುತ್ತದೆ.

(ರಾ.ಭಾ.)

ಈ ಶ್ಲೋಕವು ಯೋಗಯುಕ್ತವಾದ ಸಂನ್ಯಾಸವು ಮಹಾಫಲವುಳ್ಳದ್ದು ಎಂಬುದನ್ನೇ ವಿವರಿಸುತ್ತದೆ. ಸರ್ವಭೂತಾತ್ಮಭೂತಾತ್ಮಾ = ಸರ್ವಭೂತಾತ್ಮಭೂತಃ ಪರಮೇಶ್ವರಃ ಅವನನ್ನೇ ಆತ್ಮವಾಗಿ ಉಳ್ಳವನು. ತನ್ನ ಸಮೀಪಕ್ಕೆ ಅವನಿಂದ ಎಳೆಯಲ್ಪಡುವವನು ಮುಂತಾದ ಅರ್ಥದಲ್ಲಿ ಅವನನ್ನು ಆತ್ಮನನ್ನಾಗಿ ಹೊಂದಿರುವವನು.

ಸರ್ವಭೂತಾತ್ಮಭೂತಃ ಪರಮೇಶ್ವರಃ ಯಚ್ಚಾಪ್ನೋತಿ ಇತ್ಯಾದೇಃ ಸಃ ಆತ್ಮಭೂತಃ ಸ್ವಸಮೀಪಂ ಪ್ರತಿ ಆದಾನಾದಿಕರ್ತಾ ಯಸ್ಯ ಸಃ

ಆತ್ಮಾ ಎಂದರೆ ಯಾವುದು ಸ್ವೀಕರಿಸುತ್ತದೆಯೋ ; ಹೊಂದುತ್ತದೆಯೋ ಅದು. ಪರಮಾತ್ಮನು ಜೀವಗಳನ್ನು ತನ್ನ ಒಳಗೆ ಎಳೆದುಕೊಳ್ಳುವುದರಿಂದ ಅವನು ಅವುಗಳಿಗೆ ಆತ್ಮ.) (ಮ.ಭಾ.)

ಓಂ ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।
ಪಶ್ಯಞ್ಶೃಣ್ವನ್ಸ್ಪೃಶಞ್ಜಿಘ್ರನ್ನಶ್ನನ್ಗಚ್ಛನ್ಸ್ವಪಞ್ಶ್ವಸನ್ ॥೮॥
ಓಂ ಪ್ರಲಪನ್ವಿಸೃಜನ್ಗೃಹ್ಣನ್ನುನ್ಮಿಷನ್ನಿಮಿಷನ್ನಪಿ ।
ಇನ್ದ್ರಿಯಾಣೀನ್ದ್ರಿಯಾರ್ಥೇಷು ವರ್ತನ್ತ ಇತಿ ಧಾರಯನ್ ॥೯॥

ತಾನು ನೋಡುವಾಗಲೂ, ಕೇಳುವಾಗಲೂ, ಮುಟ್ಟುವಾಗಲೂ, ವಾಸನೆ ನೋಡುವಾಗಲೂ, ತಿನ್ನುವಾಗಲೂ, ನಡೆಯುವಾಗಲೂ, ನಿದ್ರಿಸುವಾಗಲೂ, ಉಸಿರಾಡುವಾಗಲೂ, ಮಾತನಾಡುವಾಗಲೂ, ವಿಸರ್ಜಿಸುವಾಗಲೂ, ತೆಗೆದುಕೊಳ್ಳುವಾಗಲೂ, ಕಣ್ಣುಬಿಡುವಾಗಲೂ, ಕಣ್ಣುಮುಚ್ಚು

ವಾಗಲೂ–ಇಂದ್ರಿಯಗಳು ಇಂದ್ರಿಯವಿಷಯಗಳಲ್ಲಿ ತೊಡಗುತ್ತವೆ. ನಾನು ಮಾತ್ರ ಏನನ್ನೂ ಮಾಡುತ್ತಿಲ್ಲ–ಎಂದು ತಿಳಿಯಬೇಕು.

* * *

(ಈ ಎರಡು ಶ್ಲೋಕಗಳು ಸಾಮಾನ್ಯರಿಗೆ ಅರ್ಥಮಾಡಿಕೊಳ್ಳಲೂ ಸಾಧ್ಯವಾಗುವುದಿಲ್ಲ. ಆಚರಣೆಗಂತೂ ಬಹುಕಷ್ಟವೇ ಸರಿ. ಆದುದರಿಂದಲೇ ಶ್ರೀಕೃಷ್ಣನು : 'ತತ್ತ್ವವಿದನು, ಪರಮಾರ್ಥವನ್ನು ಕಂಡುಕೊಂಡಿರುವಾತನು ಯುಕ್ತನಾಗಿ ಎಂದರೆ ಸಮಾಹಿತಚಿತ್ತನಾಗಿ, ತತ್ತ್ವದಲ್ಲಿಯೇ ನೆಲೆನಿಂತು '**ನೈವ ಕಿಂಚಿತ್ ಕರೋಮಿ**' 'ನಾನು ಏನನ್ನೂ ಮಾಡುತ್ತಿಲ್ಲ' ಎಂದು ಭಾವಿಸಬೇಕು'–ಎನ್ನುತ್ತಾನೆ. ತತ್ತ್ವವಿದನೆಂದರೆ ಆತ್ಮಜ್ಞಾನೀ. ಆತ್ಮಾನಾತ್ಮವಿವೇಕವಿರುವವನು. ದೇಹವು ನಾನಲ್ಲ. ಇದು ಕೇವಲ ತಾತ್ಕಾಲಿಕವಚದಂತೆ ಎಂದು ಭಾವಿಸಿರುವವನು. '**ನೈವ ಕಿಂಚಿತ್ ಕರೋಮಿ**' ಎಂದು ಭಾವಿಸಲು ಸಾಧ್ಯವಾಗಬಹುದು. ಈ ದೇಹವನ್ನು ತಾತ್ಕಾಲಿಕವಾದ 'ಕವಚ' ಎಂದು ಭಾವಿಸುವುದು ಮಾತ್ರವಲ್ಲದೇ ಆ ಕವಚದ ಮೇಲಿನ ಅಭಿಮಾನವನ್ನೂ ಸಂಪೂರ್ಣವಾಗಿ ತೊರೆದುಬಿಟ್ಟರೆ ಆ ಕವಚದಲ್ಲಡಗಿರುವ ಇಂದ್ರಿಯಗಳೆಲ್ಲವೂ ತಬ್ಬಲಿಗಳಾಗುವುವು. ಅವು ಕವಚದೊಡನೆ ಆತ್ಮನ ಸಂಬಂಧವಿರುವುದರಿಂದ ತಮ್ಮ-ತಮ್ಮ ಶಕ್ತಿಯನ್ನು ಕಳೆದುಕೊಂಡಿರುವುದಿಲ್ಲ. ಆದರೂ ಆತ್ಮನ ಔದಾಸೀನ್ಯದಿಂದಾಗಿ ಅವುಗಳ ಕಾರ್ಯಗಳೆಲ್ಲವೂ ನಿರರ್ಥಕವೇ ಆಗುವುದು.

ಕಣ್ಣು ನೋಡುವುದು ; ಸುಂದರವಸ್ತುವನ್ನೇ ನೋಡುವುದು. ಆದರೆ ಪ್ರಯೋಜನವೇನು? ಮನಸ್ಸು ಅದನ್ನು ತೆಗೆದುಕೊಳ್ಳುವುದಿಲ್ಲ. ಎಂದರೆ ನೋಡಿದ್ದೂ ನಿರರ್ಥಕವಾಗುವುದು. ನೋಡುವ ಶಕ್ತಿಯಿದೆ. ನೋಡುತ್ತದೆ. ಅಷ್ಟೇ ಹೊರತಾಗಿ ಅದರ ಹಿಂದಿರುವ ಕಾಮನೆಯು ಸುಟ್ಟುಹೋಗಿಬಿಟ್ಟಿರುತ್ತದೆ. ಕಾಮನೆ ಎಂಬುದೇ ಈ ಇಂದ್ರಿಯಗಳಿಗೆಲ್ಲಾ ಜೀವನಾಡಿ. ಇಂದ್ರಿಯ, ಮನಸ್ಸು, ಬುದ್ಧಿ, ಆತ್ಮಗಳಿಗೆ ಸಂಬಂಧಕಲ್ಪಿಸುವ ಸುವರ್ಣದ ತಂತಿ. ಆತ್ಮನು ಈ ಸುವರ್ಣದ ಸಂಕೋಲೆಯನ್ನು ಬಿಚ್ಚಿಬಿಟ್ಟರೆ ಇಂದ್ರಿಯಗಳ ವ್ಯಾಪಾರವು ನಿಷ್ಪ್ರಯೋಜನವಾಗುತ್ತದೆ. ಈ ಹಿನ್ನೆಲೆಯಲ್ಲಿಯೇ ಶ್ರೀಕೃಷ್ಣನು ಇಂದ್ರಿಯಗಳ ವ್ಯಾಪಾರಗಳೆಲ್ಲವನ್ನೂ ವಿವರಿಸಿ ಹೇಳುತ್ತಾನೆ. ಕಣ್ಣು ಒಂದು

ಸುಂದರವಸ್ತುವನ್ನು ನೋಡಿದರೂ–ನಾನು ನೋಡಲಿಲ್ಲ. ಕಣ್ಣಿಗೆ ನೋಡುವ ಶಕ್ತಿಯಿದೆ. ಅದು ನೋಡಿತು. ನೋಡಿಕೊಳ್ಳಲಿ. ಅದರಿಂದ ನನಗೇನೂ ಆಗಬೇಕಾಗಿಲ್ಲ. ನನಗೂ ಅದಕ್ಕೂ ಸಂಬಂಧವಿಲ್ಲ. ಆ ವಿಷಯವು ನನ್ನನ್ನು ಮುಟ್ಟುವುದಿಲ್ಲ ಅಥವಾ ಆ ವಿಷಯವನ್ನು ನಾನು ಪರಿಗ್ರಹಿಸುವುದಿಲ್ಲ– ಎಂದು ತತ್ತ್ವವಿದನು ಭಾವಿಸಬೇಕು. ಹೀಗೆಯೇ ಎಲ್ಲ ಇಂದ್ರಿಯಕರ್ಮ ಗಳನ್ನೂ ಭಾವಿಸಬೇಕು. ಕಿವಿಯು ಕೇಳಿಸಿಕೊಳ್ಳುತ್ತಿದೆ. ಚರ್ಮವು ಮುಟ್ಟಿಸಿ ಕೊಳ್ಳುತ್ತಿದೆ. ಮೂಗು ವಾಸನೆ ನೋಡುತ್ತಿದೆ. ನಾಲಿಗೆಯು ತಿನ್ನುತ್ತಿದೆ. ಕಾಲು ಹೋಗುತ್ತಿದೆ. ಶರೀರವು ಮಲಗಿದೆ. ಕವಚರೂಪವಾದ ದೇಹದಲ್ಲಿ ಉಚ್ಛ್ವಾಸ-ನಿಶ್ವಾಸಗಳಾಗುತ್ತಿವೆ. ಬಾಯಿ ಮಾತನಾಡುತ್ತಿದೆ. ಗುಹ್ಯೇಂ ದ್ರಿಯಗಳು ಮಲ-ಮೂತ್ರವಿಸರ್ಜನೆ ಮಾಡುತ್ತಿವೆ. ಕೈ ಪದಾರ್ಥವನ್ನು ತೆಗೆದುಕೊಳ್ಳುತ್ತಿದೆ. ಕಣ್ಣು ರೆಪ್ಪೆಹೊಡೆಯುತ್ತಿದೆ. ಐದು ಕರ್ಮೇಂದ್ರಿಯಗಳೂ ತಮ್ಮ-ತಮ್ಮ ಕಾರ್ಯಗಳನ್ನು ಮಾಡುತ್ತಿವೆ–ಎಂದು ತತ್ತ್ವಜ್ಞಾನಿಯು ಭಾವಿಸಬೇಕು. ಇವುಗಳು ತಮ್ಮ-ತಮ್ಮ ಕಾರ್ಯಗಳನ್ನು ಮಾಡಿಕೊಳ್ಳು ತ್ತಿವೆಯೇ ಹೊರತು ತಮ್ಮ ಕಾಮನೆಗೆ ವಿಷಯವಾದ ಕಾರ್ಯಗಳನ್ನು ಮಾಡಿಕೊಳ್ಳುತ್ತಿಲ್ಲ. ಆತ್ಮನು ಸ್ವತಂತ್ರನಾಗಿಬಿಟ್ಟರೆ ಇವುಗಳ ಸ್ವೇಚ್ಛಾವರ್ತನೆಗೆ ಅವಕಾಶವಿಲ್ಲ. ಇಂದ್ರಿಯಗಳಿಗೆ ಸ್ವಾತಂತ್ರ್ಯ ಸಿಕ್ಕಿಬಿಟ್ಟರೆ ಆತ್ಮನು ಗುಲಾಮ ನಾಗುತ್ತಾನೆ. ತತ್ತ್ವಜ್ಞಾನಿಯು ಆತ್ಮದ ಸ್ವಾತಂತ್ರ್ಯವನ್ನು ಪಡೆದಿರತಕ್ಕವನು. ಆದುದರಿಂದ ಇಂದ್ರಿಯಗಳು ಸೇವಕರಂತೆ ವರ್ತಿಸುತ್ತಿರುತ್ತವೆ. ಈ ಸೇವಕರನ್ನೂ ಸಹ ತತ್ತ್ವವಿದನು ತನ್ನವರೆಂದು ಭಾವಿಸಕೂಡದು. ಪ್ರಕೃತಿ ನಿಯಮದಂತೆ ಕವಚರೂಪವಾದ ಈ ದೇಹದಲ್ಲಿ ಇರುತ್ತವೆ. ಪ್ರಕೃತಿನಿಯಮ ದಂತೆ ಎಷ್ಟೋ ಅಷ್ಟು ಕೆಲಸಮಾಡಿಕೊಂಡಿದ್ದು ಕವಚರೂಪವಾದ ಈ ದೇಹದೊಡನೆ ಹೊರಟುಹೋಗುತ್ತವೆ ಎಂದು ಭಾವಿಸಬೇಕು–ಎಂದು ಶ್ರೀಕೃಷ್ಣನು ಹೇಳುತ್ತಾನೆ.

ಯಾವಾಗ ತತ್ತ್ವಜ್ಞಾನಿಯು–'ಇಂದ್ರಿಯಗಳು ಇಂದ್ರಿಯಾರ್ಥಗಳಲ್ಲಿ ತೊಡಗುತ್ತವೆ. ಅವುಗಳ ಕಾರ್ಯವು ನನಗೆ ಸಂಬಂಧಿಸಿದುದಲ್ಲ'– ಎಂದು ತಿಳಿಯುತ್ತಾನೆಯೋ ಆಗ ಅವನಿಗೆ ಕರ್ಮವೇ ಇಲ್ಲ ಎಂದ ಹಾಗಾಯಿತು.

ಪಾರಮಾರ್ಥಿಕವಾಗಿ ಜ್ಞಾನಿಯು ಯಾವ ಕರ್ಮವನ್ನೂ ಮಾಡುತ್ತಿಲ್ಲ. ಆದುದರಿಂದ ಅವನು 'ನಾನು ಯಾವುದನ್ನೂ ಮಾಡುತ್ತಿಲ್ಲ' ಎಂಬುದಾಗಿಯೇ ತಿಳಿಯಬೇಕು. ಹೀಗೆ ತತ್ತ್ವಜ್ಞಾನಿಯಾಗಿ ಕರ್ಮಗಳಲ್ಲಿ ಅಕರ್ಮವನ್ನೇ ನೋಡುತ್ತಿರುವ ಸಮ್ಯಗ್ದರ್ಶನಸಂಪನ್ನನಾದ ಮಹಾತ್ಮನಿಗೇ ಸರ್ವ ಕರ್ಮಸಂನ್ಯಾಸದಲ್ಲಿ ಅಧಿಕಾರ. ಏಕೆಂದರೆ ಅವನು ಕರ್ಮಗಳ ಅಭಾವವನ್ನೇ ನೋಡುತ್ತಾನೆ.

ಬಿಸಿಲ್ಗುದುರೆ (ಮರೀಚಿಕೆ) ಯಲ್ಲಿ ನೀರಿರುವುದೆಂಬ ಬುದ್ಧಿಯಿಂದ ನೀರು ಕುಡಿಯಲು ಹೋದವನು ಅಲ್ಲಿ ನೀರಿಲ್ಲವೆಂದು ತಿಳಿದನಂತರವೂ ನೀರನ್ನರಸಿಕೊಂಡು ಹೋಗುವುದಿಲ್ಲ.

**ನ ಹಿ ಮೃಗತೃಷ್ಣಿಕಾಯಾಂ ಉದಕಬುದ್ಧ್ಯಾ ಪಾನಾಯ ಪ್ರವೃತ್ತಃ ಉದಕಾಭಾವಜ್ಞಾನೇಽಪಿ ತತ್ರೈವ ಪಾನಪ್ರಯೋಜನಾಯ ಪ್ರವರ್ತತೇ.**
**(ಶಂ.ಭಾ.)**

ಕರ್ಮಯೋಗದಲ್ಲಿ ಸೌಕರ್ಯವೂ ಮತ್ತು ಶೀಘ್ರವಾಗಿ ಫಲ ಪ್ರಾಪ್ತಿಯೂ ಆಗುವುದರಿಂದ ಕರ್ಮಯೋಗವೇ ಶ್ರೇಯಸ್ಕರವಾದುದು. **ಸ್ಪಷ್ಟನಂ ಚ ಪ್ರಾಗನುಕ್ತಸಂಕಲ್ಪತ್ಯಾಗಸ್ಯಾಭಿಧಾನಾತ್** ಎಂದು ಶ್ರೀಜಯತೀರ್ಥರು ಇದನ್ನು ವಿವರಿಸುತ್ತಾರೆ.

ಅದೇ ರೀತಿಯಲ್ಲಿ ತತ್ತ್ವಜ್ಞನು ಕರ್ಮದಲ್ಲಿ ಪ್ರವರ್ತಿಸುವುದಿಲ್ಲ. ಅವನೇ ಕರ್ಮಮಾಡಿದಂತೆ ಕಂಡರೂ ಅವನು ಕರ್ಮಮಾಡುತ್ತಿಲ್ಲವೆಂದೇ ತಿಳಿಯಬೇಕು.)

**ಓಂ ಬ್ರಹ್ಮಣ್ಯಾಧಾಯ ಕರ್ಮಾಣಿ ಸಙ್ಗಂ ತ್ಯಕ್ತ್ವಾ ಕರೋತಿ ಯಃ ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಮ್ಭಸಾ ॥೧೦॥**

ಬ್ರಹ್ಮನಲ್ಲಿ ಕರ್ಮಗಳನ್ನು ಇಟ್ಟು ಸಂಗವನ್ನು ಬಿಟ್ಟು ಯಾವನು ಕರ್ಮಮಾಡುತ್ತಿರುವನೋ ಅವನಿಗೆ–ತಾವರೆ ಎಲೆಗೆ ನೀರು ಹೇಗೆ ಅಂಟು ವುದಿಲ್ಲವೋ–ಹಾಗೆ ಪಾಪವು ಅಂಟುವುದಿಲ್ಲ.

* * *

(ಬ್ರಹ್ಮದಲ್ಲಿ ಕರ್ಮವನ್ನು ಇಟ್ಟು ಎಂದರೆ ಮಾಡಿದ ಕರ್ಮಗಳನ್ನೆಲ್ಲಾ ಈಶ್ವರಾರ್ಪಣಮಾಡಬೇಕು. ಯಜಮಾನನಿಗಾಗಿ ದುಡಿಯುತ್ತಿರುವ ಭೃತ್ಯ

ನಂತೆ ಕರ್ಮಗಳನ್ನು ಪರಮೇಶ್ವರನಿಗಾಗಿಯೇ ಮಾಡಬೇಕು. ಕರ್ಮಗಳೆಂದರೆ ಈಶ್ವರಭಕ್ತಿ, ದೇವರಪೂಜೆ, ಮಾತಾ-ಪಿತೃಸೇವೆ, ಯಜ್ಞ, ದಾನ, ತಪಸ್ಸು, ಅತಿಥಿಸತ್ಕಾರ–ಇವೇ ಮುಂತಾದ ಶಾಸ್ತ್ರವಿಹಿತಕರ್ಮಗಳು. ಸಂಗವನ್ನು ಬಿಡಬೇಕು. ಫಲಾಭಿಸಂಧಿಯಿಲ್ಲದೇ ಕರ್ಮಮಾಡಬೇಕು. ಕರ್ಮವನ್ನೇ ಪೂರ್ಣವಾಗಿ ಭಗವದರ್ಪಣಮಾಡಿಬಿಟ್ಟರೆ ಫಲವು ಪ್ರತ್ಯೇಕವಾಗಿ ಉಳಿಯುವುದೇ ಇಲ್ಲ. ಆದುದರಿಂದ **ಸಙ್ಗಂ ತ್ಯಕ್ತ್ವಾ** ಎಂಬುದಕ್ಕೆ 'ಸ್ತ್ರೀ, ಪುತ್ರ, ಧನ, ಗೃಹ–ಮುಂತಾದುವುಗಳಲ್ಲಿ ಆಸಕ್ತಿಯನ್ನು ಬಿಟ್ಟು' ಎಂದೂ ಅರ್ಥಮಾಡಬಹುದಾಗಿದೆ. ಹೀಗೆ ಕರ್ಮಮಾಡಿದಲ್ಲಿ ಕಮಲದ ಎಲೆಯು ನೀರಿನಿಂದ ತೋಯ್ದುಹೋಗದಂತೆ ಯಾವ ವಿಧವಾದ ಪಾಪದಿಂದಲೂ ಸಾಧಕನು ಲಿಪ್ತನಾಗುವುದಿಲ್ಲ. ಕರ್ಮಯೋಗಿಯು ಶಾಸ್ತ್ರವಿಹಿತವಾದ ಸತ್ಕರ್ಮಗಳನ್ನೇ ಮಾಡುವುದರಿಂದ ಅವನಿಗೆ ಪಾಪದ ಸಂಘಟನೆಯು ಹೇಗೆ ತಾನೇ ಆಗುವುದು? '**ಸರ್ವಾರಮ್ಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ**' ಎಂದು ಶ್ರೀಕೃಷ್ಣನೇ ಮುಂದೆ ಹೇಳುತ್ತಾನೆ. ಕರ್ಮದ ಆಚರಣೆಯಲ್ಲಿ ಯಾವುದಾದರೂ ದೋಷಗಳಿದ್ದೇ ಇರುತ್ತವೆ. ಇದು ಸ್ವಾಭಾವಿಕ. ಈ ಕಾರಣದಿಂದಲೇ ಪ್ರತಿಯೊಂದು ಕರ್ಮದ ಅಂತ್ಯದಲ್ಲಿಯೂ ಪ್ರಾಯಶ್ಚಿತ್ತವನ್ನೂ ವಿಧಿಸಿರುತ್ತಾರೆ. (**ಮಧ್ಯೇ ಮನ್ತ್ರತನ್ತ್ರಸ್ವರವರ್ಣನ್ಯೂನಾತಿರಿಕ್ತ ಲೋಪದೋಷಪ್ರಾಯಶ್ಚಿತ್ತಾರ್ಥಂ ನಾಮತ್ರಯಮಹಾಮನ್ತ್ರಜಪಂ ಕರಿಷ್ಯೆ. ಅಚ್ಯುತಾಯನಮಃ, ಅನನ್ತಾಯನಮಃ, ಗೋವಿನ್ದಾಯನಮಃ**) ಇದೇ ರೀತಿಯಲ್ಲಿ ಪ್ರತಿಯೊಂದು ಕರ್ಮಕ್ಕೂ ಪ್ರಾಯಶ್ಚಿತ್ತವಿರುತ್ತದೆ. ಇಂತಹ ದೋಷಗಳೂ ಸಹ ಕರ್ಮಯೋಗಿಗೆ ಅಂಟುವುದಿಲ್ಲ. ಕಮಲದ ಎಲೆಯ ಸಾದೃಶ್ಯವು ಬಲುಸೊಗಸಾಗಿದೆ. ಕಮಲದ ಎಲೆಯ ಮೇಲೆ ನೀರುಹಾಕಿದರೆ ಅದು ಮುತ್ತಿನಂತೆ ಅತ್ತಲಿತ್ತ ಚಲಿಸುತ್ತದೆಯೇ ಹೊರತು ಎಲೆಗೆ ಅಂಟಿರುವುದಿಲ್ಲ. ಶ್ರೀಜ್ಞಾನೇಶ್ವರರು ಮತ್ತೊಂದು ಸ್ವಾರಸ್ಯವಾದ ಉದಾಹರಣೆಯನ್ನು ಕೊಟ್ಟಿದ್ದಾರೆ : ದೀಪದ ಬೆಳಕಿನಲ್ಲಿ ಸತ್ಕಾರ್ಯಗಳೂ ನಡೆಯಬಹುದು, ದುಷ್ಕಾರ್ಯಗಳೂ ನಡೆಯಬಹುದು. ಆದರೆ ದೀಪಕ್ಕೆ ಯಾವ ದೋಷವೂ ಅಂಟುವುದಿಲ್ಲ. ಶ್ರೀರಾಮಕೃಷ್ಣರ ಮಾತಿನಲ್ಲಿ ; ಕರ್ಮನದಿಯ ಮೇಲೆ ಪುರುಷನೆಂಬ ದೋಣಿಯು ತೇಲುತ್ತಿರು

ವುದು. ಆದರೆ ಆ ದೋಣಿಯು ಕರ್ಮಯೋಗಸಂಧಾನದಿಂದ ಯಾವ ರಂಧ್ರವೂ ಇಲ್ಲದೇ ಜೋಪಾನವಾಗಿರುವುದರಿಂದ ಕರ್ಮದ ನೀರು ಅದರೊಳಗೆ ಪ್ರವೇಶಮಾಡುವುದಿಲ್ಲ.

ಶ್ರೀಶಂಕರರು **ಸಙ್ಗಂ ತ್ಯಕ್ತ್ವಾ** ಎಂಬುದಕ್ಕೆ ಮೋಕ್ಷವೆಂಬ ಫಲದಲ್ಲಿಯೂ ಸಂಗವನ್ನು ಬಿಟ್ಟು (ಮೋಕ್ಷವೆಂಬ ಫಲದಲ್ಲಿಯೂ ಅನಾಸಕ್ತನಾಗಿ) **ಮೋಕ್ಷೇಽಪಿ ಫಲೇ ಸಙ್ಗಂ ತ್ಯಕ್ತ್ವಾ** ಎಂದು ವ್ಯಾಖ್ಯಾನಮಾಡಿದ್ದಾರೆ.

ಇಲ್ಲಿ ಬ್ರಹ್ಮ ಎಂದರೆ ಪ್ರಕೃತಿ : ಇಂದ್ರಿಯಾಕಾರದಲ್ಲಿರುವ ಪ್ರಕೃತಿಯಲ್ಲಿ ಕರ್ಮಗಳನ್ನಿರಿಸಿ–'**ಪಶ್ಯನ್ ಶೃಣ್ವನ್**' ಎಂದು ಹಿಂದೆ ಹೇಳಿದಂತೆ ಇಂದ್ರಿಯ ಗಳೆಲ್ಲವೂ ತಮ್ಮ ತಮ್ಮ ವಿಷಯಗಳಲ್ಲಿ ಇವೆ. ಕರ್ತೃತ್ವವು ನನಗಿಲ್ಲ–ಎಂಬ ಭಾವನೆಯಿಂದ ಕರ್ಮಗಳನ್ನು ಪ್ರಕೃತಿಯಲ್ಲಿರಿಸಿ ಶಾಸ್ತ್ರೀಯವಾದ ಕರ್ಮ ಗಳನ್ನಾಚರಿಸಿದರೆ ಅವನು ಪ್ರಕೃತಿಯಲ್ಲಿದ್ದರೂ ಪ್ರಕೃತಿಯಲ್ಲಿ ಆತ್ಮಾಭಿಮಾನ ವೆಂಬ ಬಂಧನಹೇತುವಾದ ಪಾಪವು ಅವನನ್ನು ಸೋಂಕುವುದಿಲ್ಲ.

(ರಾ.ಭಾ.)

'**ಪದ್ಮಪತ್ರಮಿವಾಮ್ಭಸಾ**' ಈ ದೃಷ್ಟಾಂತವನ್ನು ಇನ್ನೂ ವಿಶೇಷವಾದ ಅರ್ಥದಲ್ಲಿ ತೆಗೆದುಕೊಳ್ಳಬೇಕು. ತಾವರೆ ಎಲೆಯು ನೀರಿನಲ್ಲಿಯೇ ಹುಟ್ಟಿ ಬೆಳೆದು ಅಲ್ಲಿಯೇ ಇದ್ದರೂ ನೀರಿನ ಕಾರ್ಯವಾದ ಲೇಪವೇ ಮುಂತಾದುವು ಅದಕ್ಕಿರುವುದಿಲ್ಲ. ಹಾಗೆಯೇ ಕರ್ಮಯೋಗಿಯ ಭೋಗ, ಸ್ಥಿತಿ ಮುಂತಾದುವುಗಳು ಪ್ರಕೃತಿಗೆ ಅಧೀನವಾಗಿದ್ದರೂ ಅದರ ಕಾರ್ಯವಾದ ದೇಹಾತ್ಮಭ್ರಮೆಯೇ ಮುಂತಾದುವು ಅವನಿಗೆ ಇರುವುದಿಲ್ಲ.

–ಶ್ರೀವೇದಾಂತದೇಶಿಕರು.

ಸಂನ್ಯಾಸ ಮತ್ತು ಯೋಗಗಳಿಂದ ಯುಕ್ತನಾದವನೇ ಕರ್ಮದ ಲೇಪಕ್ಕೆ ಒಳಗಾಗುವುದಿಲ್ಲ ಎಂದು ಈ ಶ್ಲೋಕವು ಹೇಳುತ್ತದೆ.

**ಸಂನ್ಯಾಸಯೋಗಯುಕ್ತ ಏವ ಚ ಕರ್ಮಣಾ ನ ಲಿಪ್ಯತೇ ।**

ಸಂನ್ಯಾಸ ಮತ್ತು ಯೋಗಗಳು ಒಟ್ಟುಗೂಡಿಯೇ ಫಲಕ್ಕೆ ಸಾಧನ ವಾಗುತ್ತವೆ–ಎಂಬ ನಿಯಮವು ಉಪಚಾರವಲ್ಲ–ಎಂಬುದನ್ನು ತೋರಿಸಲು

ಫಲವನ್ನು ಮತ್ತೆ ಮತ್ತೆ ಹೇಳಿದೆ. **ಸಾಧನನಿಯಮಸ್ಯ ಉಪಚಾರ ವ್ಯಾವೃತ್ಯರ್ಥಂ ಪುನಃ ಪುನಃ ಫಲಕಥನಂ)** (ಮ.ಭಾ.)

**ಓಂ ಕಾಯೇನ ಮನಸಾ ಬುದ್ಧ್ಯಾ ಕೇವಲೈರಿನ್ದ್ರಿಯೈರಪಿ ।**
**ಯೋಗಿನಃ ಕರ್ಮ ಕುರ್ವನ್ತಿ ಸಙ್ಗಂ ತ್ಯಕ್ತ್ವಾತ್ಮಶುದ್ಧಯೇ ॥೧೧॥**

ಕೇವಲಶರೀರದಿಂದಲೂ, ಕೇವಲಮನಸ್ಸಿನಿಂದಲೂ, ಕೇವಲಬುದ್ಧಿಯಿಂದಲೂ ಮತ್ತು ಕೇವಲವಾದ ಇಂದ್ರಿಯಗಳಿಂದಲೂ ಸಂಗವನ್ನು ಬಿಟ್ಟು ಆತ್ಮಶುದ್ಧಿಗಾಗಿ ಯೋಗಿಗಳು ಕರ್ಮವನ್ನು ಮಾಡುತ್ತಾರೆ.

* * *

(ಇಲ್ಲಿ 'ಕೇವಲ' ಎಂದರೆ 'ತನ್ನದೆಂಬ ಬುದ್ಧಿಯಿಲ್ಲದೇ ಈಶ್ವರನಿಗಾಗಿಯೇ ಕರ್ಮಮಾಡುತ್ತಿದ್ದೇನೆ. ನನಗೆ ಫಲವಾಗಬೇಕೆಂದು ಮಾಡುತ್ತಿಲ್ಲ' ಎಂದು ಅರ್ಥಮಾಡಿಕೊಳ್ಳಬೇಕು. ಯೋಗಿಗಳಾದವರು ಶರೀರದಿಂದ ಕಾರ್ಯಮಾಡಿದರೆ ಅದನ್ನೂ ಬ್ರಹ್ಮಾರ್ಪಣಬುದ್ಧಿಯಿಂದ ಮಾಡುತ್ತಾರೆ. ಬುದ್ಧಿಯಿಂದ ಮಾಡಿದರೂ ಈಶ್ವರಾರ್ಪಣಬುದ್ಧಿಯಿಂದಲೇ ಮಾಡುತ್ತಾರೆ. ಇಂದ್ರಿಯಗಳಿಂದ (ಜ್ಞಾನೇಂದ್ರಿಯ-ಕರ್ಮೇಂದ್ರಿಯಗಳಿಂದ) ಕರ್ಮಮಾಡಿದರೂ ಸಹ ಈಶ್ವರಾರ್ಪಣಬುದ್ಧಿಯಿಂದ ಮಾಡುತ್ತಾರೆ. ಫಲದ ಸಂಗವನ್ನು ಬಿಟ್ಟು ಆತ್ಮಶುದ್ಧಿಗಾಗಿ (ಸತ್ತ್ವಶುದ್ಧಿಗಾಗಿ ; ಅಂತಃಕರಣಶುದ್ಧಿಗಾಗಿ) ಕರ್ಮ ಮಾಡುತ್ತಾರೆ. ಶರೀರದಿಂದಲೂ, ಮನಸ್ಸಿನಿಂದಲೂ, ಬುದ್ಧಿಯಿಂದಲೂ ಮತ್ತು ಸಮಗ್ರವಾದ ಇಂದ್ರಿಯಗಳಿಂದಲೂ ಫಲದಲ್ಲಿ ಆಸಕ್ತಿಯನ್ನು ಬಿಟ್ಟು ಆತ್ಮಶುದ್ಧಿಗಾಗಿ (ಅಂತಃಕರಣಶುದ್ಧಿಗಾಗಿ) ಯೋಗಿಗಳು ಕರ್ಮಮಾಡುತ್ತಾರೆ.

ಕರ್ಮಮಾಡುತ್ತಿದ್ದರೂ ಮಾಡುವೆನೆಂಬ ಅರಿವೇ ಇಲ್ಲದೇ, ಮಾಡುತ್ತಿರುವೆನೆಂಬ ಭಾವನೆಯೇ ಇಲ್ಲದೇ ಯೋಗಿಯಾದವನು ಕಾಯಕ, ಮಾನಸಿಕ ಮತ್ತು ಬೌದ್ಧಿಕಕರ್ಮಗಳನ್ನು ಹೇಗೆ ಮಾಡುವನೆಂಬುದಕ್ಕೆ ಸಂತ ಶ್ರೀಜ್ಞಾನೇಶ್ವರರು ಈ ಉದಾಹರಣೆಗಳನ್ನು ಕೊಟ್ಟಿದ್ದಾರೆ :–

ಕರ್ಮದಲ್ಲಿ ಬುದ್ಧಿಪೂರ್ವತ್ವವು ತೋರದಿದ್ದರೆ ಮಾನಸಿಕವಾಗಿ ಅಂಕುರವು ಉತ್ಪನ್ನವಾಗದಿದ್ದರೆ ಅದಕ್ಕೆ ಕಾಯಕರ್ಮ ಎಂದು ಹೆಸರು. ಚಿಕ್ಕಬಾಲಕರ ವ್ಯವಹಾರವು ಹೇಗೆ ಮನಸ್ಸು-ಬುದ್ಧಿಗಳಿಲ್ಲದೆ ಸಾಗುವುದೋ ಹಾಗೆ

ಯೋಗಿಗಳ ವ್ಯಾಪಾರವೂ ನಡೆಯುವುದು. ದೇಹವು ಮಲಗಿರುವಾಗ ಸ್ವಪ್ನದಲ್ಲಿ ಮನಸ್ಸೊಂದೇ ವ್ಯವಹರಿಸುವುದು. ದೇಹಕ್ಕೆ ತಿಳಿಯಗೊಡದಂತೆ ಅದಕ್ಕೆ ಸುಖ-ದುಃಖಗಳನ್ನು ಮಾತ್ರವೇ ಭೋಗಿಸಹಚ್ಚುವುದು. ಈ ರೀತಿಯಾಗಿ ಇಂದ್ರಿಯಗಳಿಗೆ ತಿಳಿಯಗೊಡದೆ ಆಗುವ ವ್ಯವಹಾರವು ಮಾನಸಿಕ ಕರ್ಮವೆನಿಸುವುದು. ಯೋಗಿಗಳು ಇಂತಹ ಮಾನಸಿಕವ್ಯವಹಾರವನ್ನು ಮಾಡುವರು.

ಒಬ್ಬನ ಮೇಲೆ ಭೂತಸಂಚಾರವಾಗುವುದು. ಆ ಸಮಯದಲ್ಲವನು ಮಾತನಾಡುವನು ; ಕೆಲಸಮಾಡುವನು ; ಓಡಾಡುವನು. ಆದರೆ ಪಿಶಾಚದ ಉಚ್ಚಾಟನೆಯಾದನಂತರ ಆ ವ್ಯಕ್ತಿಗೆ ತಾನು ಮಾಡಿದ ಚೇಷ್ಟೆಗಳ ಅರಿವೇ ಇರುವುದಿಲ್ಲ. ಅದೇ ರೀತಿಯಲ್ಲಿ ಯೋಗಿಯು ತನ್ನ ಮನಸ್ಸಿಗೆ ಯಾವುದನ್ನೂ ಹಚ್ಚಿಕೊಳ್ಳದೇ ಇಂದ್ರಿಯಮೂಲಕವಾದ ಕಾರ್ಯದಲ್ಲಿ ನಿರತನಾಗಿರುತ್ತಾನೆ. ಕರ್ಮಗಳಲ್ಲಿ 'ನಾನು ; ನನ್ನದು' ಎಂಬ ಭಾವನೆಯೇ ಅವನಿಗೆ ಇರುವುದಿಲ್ಲ.

ನಿಮಿತ್ತವಿಲ್ಲದೇ ಮಾಡುವ ಕರ್ಮಗಳು ಇಂದ್ರಿಯಕರ್ಮಗಳು. ಎಲ್ಲವನ್ನೂ ತಿಳಿದುಕೊಂಡು ಮಾಡುವ ಕರ್ಮಗಳು ಬುದ್ಧಿಯ ಕರ್ಮಗಳು. ಬುದ್ಧಿಯಿಂದ ದೇಹದವರೆಗೆ ಅವರಿಗೆ ಎಲ್ಲಿಯೂ ಅಹಂಕಾರವಿರುವುದಿಲ್ಲ. ಆದುದರಿಂದ ಅವರು ಕರ್ಮವನ್ನು ಮಾಡಿಯೂ ಶುದ್ಧಾತ್ಮರಾಗುತ್ತಾರೆ. ಶುದ್ಧಸತ್ತ್ವರಾಗುತ್ತಾರೆ.

**ಆತ್ಮಶುದ್ಧಯೇ** = ಆತ್ಮದಲ್ಲಿರುವ ಪ್ರಾಚೀನಕರ್ಮಬಂಧಗಳ ನಾಶಕ್ಕೋಸ್ಕರ, ಆತ್ಮವಿಶುದ್ಧಿಗೋಸ್ಕರ.

**ಸಙ್ಗಂ ತ್ಯಕ್ತ್ವಾ** = ಸ್ವರ್ಗಾದಿಫಲಗಳಲ್ಲಿ ಆಸಕ್ತಿಯನ್ನು ತೊರೆದು.

ಮೇಲೆ ಪ್ರತಿಪಾದಿಸಿದ ವಿಷಯಕ್ಕೆ ಆಚಾರವೂ ಉಂಟು. ಹಿಂದೆ ನಿಯಮಮಾತ್ರವನ್ನು ಹೇಳಿಯಾಯಿತು. ಅದಕ್ಕೆ ಆಚಾರರೂಪವಾದ ಪ್ರಮಾಣವೂ ಉಂಟು—ಎಂದು ಈ ಶ್ಲೋಕವು ನಿರೂಪಿಸುತ್ತದೆ.

**ಏವಂ ಚ ಆಚಾರ ಇತ್ಯಾಹ ಕಾಯೇನೇತಿ)** (ಮ.ಭಾ.)

**ಓಂ ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾನ್ತಿಮಾಪ್ನೋತಿ ನೈಷ್ಠಿಕೀಮ್ ।**
**ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥೧೨॥**

ಯುಕ್ತನಾದವನು ಕರ್ಮಫಲವನ್ನು ಬಿಟ್ಟು ನಿಷ್ಠೆಯ ಶಾಂತಿಯನ್ನು ಹೊಂದುವನು. ಯುಕ್ತನಲ್ಲದವನು ಬಯಕೆಯ ಪ್ರೇರಣೆಯಿಂದ ಕರ್ಮಫಲ ದಲ್ಲಿ ಆಸಕ್ತನಾಗಿ ಬಂಧನಕ್ಕೊಳಗಾಗುತ್ತಾನೆ.

* * *

(ಯುಕ್ತನೆಂದರೆ 'ಈಶ್ವರನಿಗೋಸ್ಕರ ಕರ್ಮಮಾಡುತ್ತೇನೆ. ನನಗೆ ಫಲವಾಗಬೇಕೆಂದಲ್ಲ'–ಎಂಬ ದೃಢಮನಸ್ಸಿನಿಂದ ಕೂಡಿರುವವನು ; ಸಮಾ ಹಿತನು. ಕರ್ಮಫಲವನ್ನು ಬಿಟ್ಟು (ಮಾಡಿದ ಕರ್ಮವನ್ನು ಈಶ್ವರನಿಗೇ ಅರ್ಪಿಸಿ) ನಿಷ್ಠೆಯಿಂದ ಪ್ರಾಪ್ತವಾಗತಕ್ಕ ಮೋಕ್ಷವನ್ನು ಪಡೆದುಕೊಳ್ಳುತ್ತಾನೆ.

ಸತ್ತ್ವಶುದ್ಧಿ, ಜ್ಞಾನಪ್ರಾಪ್ತಿ, ಸರ್ವಕರ್ಮಸಂನ್ಯಾಸರೂಪವಾದ ಜ್ಞಾನನಿಷ್ಠೆ–ಈ ಕ್ರಮದಲ್ಲಿ ಮೋಕ್ಷವನ್ನು ಪಡೆಯುವನೆಂದು ಶ್ರೀಶಂಕರರು ವಿವರಣೆ ನೀಡಿದ್ದಾರೆ.

ಅಯುಕ್ತನು ; ಈಶ್ವರಾರ್ಪಣಬುದ್ಧಿಯಿಲ್ಲದವನು ಅನೇಕಾನೇಕ ಕಾಮನೆಗಳಿಂದ ಪ್ರೇರಿತನಾಗಿ ಕರ್ಮಫಲದಲ್ಲಿಯೇ ಆಸಕ್ತನಾಗಿ ಸಂಸಾರ ಬಂಧನದಲ್ಲಿ ಸಿಕ್ಕಿಹಾಕಿಕೊಳ್ಳುತ್ತಾನೆ. ಫಲಾಭಿಸಂಧಿಯೇ ಸಂಸಾರಬಂಧನಕ್ಕೆ ಮೂಲಕಾರಣ.

**ಯುಕ್ತಃ** = ಆತ್ಮವೊಂದರಲ್ಲಿಯೇ ನಿಷ್ಠೆಯುಳ್ಳವನು. ಆತ್ಮವ್ಯತಿರಿಕ್ತ ವಾದ ವಿಷಯಗಳಲ್ಲಿ ಚಾಪಲ್ಯವಿಲ್ಲದವನು. ಸಮಾಹಿತವಾದ ಮನಸ್ಸುಳ್ಳ ವನು. (ರಾ.ಭಾ.)

ಯೋಗಯುಕ್ತಿ ಮುಂತಾದುವುಗಳ ನಿಯಮಕ್ಕೋಸ್ಕರ ಯುಕ್ತಾ ಯುಕ್ತರ ಫಲವನ್ನು ಪುನಃ ಇಲ್ಲಿ ಹೇಳಿದೆ. **ಪುನಃ ಯುಕ್ತ್ಯಾದಿ ನಿಯಮನಾರ್ಥಂ ಯುಕ್ತಾಯುಕ್ತಫಲಮಾಹ** ಹಿಂದೆ 'ಸಂನ್ಯಾಸ ಮತ್ತು ಯೋಗಗಳು ಒಟ್ಟುಗೂಡಿಯೇ ಇದ್ದರೆ ಫಲಕ್ಕೆ ಸಾಧನ. ಒಂದನ್ನು ಬಿಟ್ಟು ಮತ್ತೊಂದು ಫಲಸಾಧನವಾಗುವುದಿಲ್ಲ'–ಎಂಬ ನಿಯಮವನ್ನು ಜ್ಞಾಪಿಸಲು ಅವುಗಳ ಫಲವನ್ನು ಹೇಳಲಾಗಿತ್ತು. ಈಗ–'ಅವೆರಡೇ ಮೋಕ್ಷಸಾಧನ ; ಅವೆರಡನ್ನು ಬಿಟ್ಟು ಬೇರೆ ಯಾವುದೂ ಇಲ್ಲ'–ಎಂಬ ನಿಯಮವನ್ನು ಜ್ಞಾಪಿ ಸಲು ಯೋಗಯುಕ್ತನೂ ಮತ್ತು ಯೋಗಯುಕ್ತನಲ್ಲದವನೂ ಹೊಂದುವ ಫಲವನ್ನು ಹೇಳಿದೆ.) (ಮ.ಭಾ.)

**ಓಂ ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ॥೧೩॥**

ಎಲ್ಲ ಕರ್ಮಗಳನ್ನೂ ಮನಸ್ಸಿನಿಂದ ಪರಿತ್ಯಜಿಸಿ, ಜಿತೇಂದ್ರಿಯನಾದ, ಒಂಬತ್ತು ಬಾಗಿಲುಗಳುಳ್ಳ ದೇಹದಲ್ಲಿರುವ ಜ್ಞಾನಿಯು ಏನನ್ನೂ ಮಾಡದೇ ಯಾವುದನ್ನೂ ಮಾಡಿಸದೇ ಸುಖವಾಗಿರುವನು.

* * *

(ಒಂಬತ್ತು ಬಾಗಿಲುಗಳಿರುವ ಪುರ ಅಥವಾ ಪಟ್ಟಣವೆಂದರೆ ಶರೀರ. ಎರಡು ಕಣ್ಣುಗಳು, ಎರಡು ಕಿವಿಗಳು, ಎರಡು ಮೂಗಿನ ಹೊಳ್ಳೆಗಳು, ಒಂದು ಬಾಯಿ, ಗುಹ್ಯೇಂದ್ರಿಯಗಳು ಎರಡು–ಈ ಒಂಬತ್ತು ಬಾಗಿಲು ಗಳಿಂದ ಈ ದೇಹವು ಯುಕ್ತವಾಗಿದೆ.

**ಅಷ್ಟಾಚಕ್ರಾ ನವದ್ವಾರಾ । ದೇವಾನಾಂ ಪೂರಯೋಧ್ಯಾ ॥**
–ತೈತ್ತಿರೀಯ ಆರಣ್ಯಕ

ಎಂಟು ಚಕ್ರಗಳುಳ್ಳದ್ದಾಗಿಯೂ ಒಂಬತ್ತು ಬಾಗಿಲುಗಳುಳ್ಳದ್ದಾಗಿಯೂ ಇರುವ ದೇವತೆಗಳ ಪಟ್ಟಣಕ್ಕೆ ಅಯೋಧ್ಯಾ ಎಂದು ಹೆಸರು.

ನವದ್ವಾರದ ಈ ದೇಹದಲ್ಲಿ ಎಲ್ಲ ಕರ್ಮಗಳನ್ನೂ (ನಿತ್ಯ-ನೈಮಿತ್ತಿಕ-ಕಾಮ್ಯ-ನಿಷಿದ್ಧ) ವಿವೇಕಬುದ್ಧಿಯಿಂದ ತ್ಯಜಿಸಿ, ತಾನು ಯಾವುದೊಂದು ಕಾರ್ಯವನ್ನೂ ಮಾಡದೇ ಇಂದ್ರಿಯಗಳಿಂದ ಯಾವುದೊಂದು ಕಾರ್ಯ ವನ್ನೂ ಮಾಡಿಸಹೋಗದೇ ಜಿತೇಂದ್ರಿಯನಾದ, ದೇಹಕ್ಕೆ ಅಧಿಪತಿಯಾದ ಆತ್ಮನು (ಜ್ಞಾನಿಯು) ಸುಖವಾಗಿದ್ದುಬಿಡುತ್ತಾನೆ.

೮ ಮತ್ತು ೯ನೆಯ ಶ್ಲೋಕಗಳಲ್ಲಿ ಹೇಳಿರುವುದನ್ನೇ ಶ್ರೀಕೃಷ್ಣನು ಪುನಃ ಈ ಶ್ಲೋಕದಲ್ಲಿಯೂ ಪ್ರತಿಪಾದಿಸಿದ್ದಾನೆ.

ನಾವು ನಾಲ್ಕಾರು ಬಾಗಿಲುಗಳಿರುವ ಮನೆಯನ್ನು ನಮ್ಮದನ್ನಾಗಿ ಮಾಡಿಕೊಂಡಿದ್ದೇವೆ. ನಾವು ಅಜ್ಞರು. ನಾವು ಒಂಬತ್ತು ಬಾಗಿಲುಗಳಿರುವ ಮನೆಯಲ್ಲಿದ್ದೇವೆಂಬುದನ್ನು ತಿಳಿದುಕೊಂಡಿಲ್ಲ. ನಮಗೆ ದೇಹಾತ್ಮಬುದ್ಧಿ ಯಿರುವುದರಿಂದ ದೇಹವನ್ನೇ 'ನಾನು' ಎಂದು ಭಾವಿಸಿ ಮಣ್ಣಿನ ಮನೆ ಯಲ್ಲಿರುವಂತೆ ಭಾವಿಸಿಕೊಳ್ಳುತ್ತೇವೆ. ಆದರೆ ಆತ್ಮಜ್ಞಾನಿಯು ಹಾಗಲ್ಲ.

ಅವನಿಗೆ ಆತ್ಮಾನಾತ್ಮವಿವೇಕವಿರುತ್ತದೆ. ಶರೀರವೆಂಬ ಮನೆಯೊಂದರಲ್ಲಿ ತಾನಿದ್ದುಕೊಂಡು ಎಲ್ಲ ಕರ್ಮಗಳನ್ನೂ ತಾನಿರುವ ಮನೆಗೇ ವಹಿಸಿಬಿಡು ತ್ತಾನೆ. ಮಣ್ಣಿನ ಮನೆಗೂ ದೇಹಕ್ಕೂ ಅದೊಂದೇ ವ್ಯತ್ಯಾಸ. ದೇಹವೆಂಬ ಮನೆಯು–ದೇಹಿಯು ತನ್ನಲ್ಲಿ ಇರುವವರೆಗೂ ಅವನು ಇಚ್ಛಿಸಲಿ ; ಇಚ್ಛಿಸ ದಿರಲಿ–ತನ್ನ ಉಳಿವಿಗಾಗಿ ಕೆಲವು ಕರ್ಮಗಳನ್ನು ಮಾಡುತ್ತದೆ. ಆದರೆ ಮಣ್ಣಿನ ಮನೆಯು ನಮಗೆ ಆಶ್ರಯಕೊಡುವುದೊಂದನ್ನು ಹೊರತಾಗಿ ಮತ್ತೇನನ್ನೂ ಮಾಡುವುದಿಲ್ಲ. ಜ್ಞಾನಿಯು ನವದ್ವಾರವಿರುವ ಮನೆಯಲ್ಲಿ ಸುಖವಾಗಿದ್ದುಬಿಡುತ್ತಾನೆ. ಯಾವ ಕೆಲಸವನ್ನೂ ಮಾಡುವುದಿಲ್ಲ. ದೇಹ ದಲ್ಲಿರುವ ಇಂದ್ರಿಯಗಳ ಮೂಲಕವಾಗಿ ಯಾವ ಕೆಲಸವನ್ನೂ ಮಾಡಿಸಲೂ ಹೋಗುವುದಿಲ್ಲ. ಅವುಗಳನ್ನೆಲ್ಲಾ ಜಯಿಸಿ ಅವುಗಳ ಆಟವು ತನ್ನ ಮೇಲೆ ನಡೆಯದಂತೆ ನಿಯಂತ್ರಿಸಿರುತ್ತಾನೆ. ಅವುಗಳು ಹೃದಯಾಂತರಾಳದಲ್ಲಿರುವ ಆತ್ಮನ ಹತ್ತಿರಕ್ಕೂ ಹೋಗಲಾರವು. ಯಾವುದಕ್ಕೂ ಸಂಬಂಧವಿಟ್ಟುಕೊಳ್ಳದೇ, ಯಾವ ಕಾರ್ಯವನ್ನೂ ಮಾಡದೇ, ಮಾಡೆಂದು ಪ್ರೇರಿಸದೇ ಆತ್ಮಾರಾಮನಾಗಿ ಜ್ಞಾನಿಯು ಇದ್ದುಬಿಡುತ್ತಾನೆ.

ಇದು (ಶರೀರವು) ಆತ್ಮನ ಉಪಪತ್ತಿಗೆ ದ್ವಾರಗಳಾದ ಒಂಬತ್ತು ಬಾಗಿಲುಗಳುಳ್ಳ ಪುರ. ಆತ್ಮನೊಬ್ಬನೇ ಇದರ ಸ್ವಾಮೀ. ಆತ್ಮಪ್ರಯೋಜನ ಕ್ಕೋಸ್ಕರವೇ ಇದ್ದು ಅನೇಕಫಲಗಳನ್ನೂ ಮತ್ತು ವಿಜ್ಞಾನಗಳನ್ನೂ ಉಂಟು ಮಾಡುವ ಇಂದ್ರಿಯ, ಮನಸ್ಸು, ಬುದ್ಧಿ ಮತ್ತು ವಿಷಯಗಳು ಇದರ ಪೌರರು.

ಆತ್ಮನು ಸ್ವತಃ ಕರ್ತೃವೂ ಅಲ್ಲ ; ಕರ್ಮಮಾಡಿಸುವವನೂ ಅಲ್ಲ.

**ಅವಿಕಾರ್ಯೋಽಯಮುಚ್ಯತೇ ।** (ಗೀತಾ)

**ಧ್ಯಾಯತೀವ ಲೇಲಾಯತೀವ** (ಬೃ-೪-೩-೫ ಶಂ.ಭಾ.)

**ಮನಸಾ ಸಂನ್ಯಸ್ಯ:** ಆತ್ಮನಿಗೆ ಕರ್ಮಗಳ ಕರ್ತೃತ್ವವು ಸ್ವರೂಪವೆಂಬ ಕಾರಣದಿಂದ ಬಂದಿದ್ದಲ್ಲ. ಪ್ರಾಚೀನಕರ್ಮಮೂಲವಾದ ದೇಹ ಸಂಬಂಧದಿಂದಲೇ ಬಂದದ್ದು–ಎಂಬ ವಿಷಯವಾದ ಮನಸ್ಸಿನಿಂದ ತ್ಯಜಿಸಿ. (ರಾ.ಭಾ.)

ಓಂ ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।
ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥೧೪॥

ಈಶ್ವರನು ಜನರಿಗೆ ಕರ್ತೃತ್ವವನ್ನಾಗಲೀ–ಕರ್ಮಗಳನ್ನಾಗಲೀ ಸೃಷ್ಟಿಸುವುದಿಲ್ಲ. ಕರ್ಮಫಲಸಂಯೋಗವನ್ನೂ ಸೃಷ್ಟಿಸುವುದಿಲ್ಲ. ಆದರೆ ಸ್ವಭಾವವೇ ಕೆಲಸಮಾಡುತ್ತಿರುವುದು.

* * *

(ಪ್ರಭುವಾದ ಪರಮಾತ್ಮನು ಪ್ರಪಂಚದಲ್ಲಿರುವ ಪ್ರಾಣಿಗಳಿಗೆ ಇಂತಹ ಕರ್ಮವನ್ನು ಮಾಡೆಂದು ಹೇಳಿ ಅವುಗಳಿಗೆ ಕರ್ತೃತ್ವವನ್ನು ಕೊಟ್ಟಿರುವುದಿಲ್ಲ.

ಹುಟ್ಟಿದ ಜೀವಿಗೆ ಇಂತಹುದೇ ಕೆಲಸಮಾಡಬೇಕೆಂದು ಪರಮಾತ್ಮನು ಹೇಳಹೋಗುವುದಿಲ್ಲ. ಕರ್ಮಗಳನ್ನೂ ಅವನು ಸೃಷ್ಟಿಸಿಲ್ಲ. ಇಂತಹುದೇ ಕರ್ಮವು ಇಂತಹವನದೆಂದೂ ಸಹ ಅವನು ನಿರ್ದೇಶಿಸಿರುವುದಿಲ್ಲ. ಹಾಗೇನಾದರೂ ಮಾಡಿದ್ದರೆ ಅವನು ಪಕ್ಷಪಾತಿಯಾಗುತ್ತಿದ್ದನು. ಅವನು ಕೇವಲ ಕರ್ಮಾಧ್ಯಕ್ಷ. ಜೀವಿಗೆ ಒಳ್ಳೆಯದನ್ನು ಮಾಡಿಕೊಳ್ಳಲೂ ಅವಕಾಶವಿದೆ ; ಕೆಟ್ಟುದನ್ನು ಮಾಡಿಕೊಳ್ಳಲೂ ಅವಕಾಶವಿದೆ. ಎರಡಕ್ಕೂ ಅವಕಾಶವನ್ನು ಪ್ರಭುವು ಕಲ್ಪಿಸಿಕೊಟ್ಟಿದ್ದಾನೆ. ಭಗವಂತನು ಕೊಟ್ಟಿರುವ ದೀಪದ ಬೆಳಕಿನಲ್ಲಿ ಗೀತಾಪಾರಾಯಣವನ್ನಾದರೂ ಮಾಡಬಹುದು ; ಜೂಜನ್ನಾದರೂ ಆಡಬಹುದು. ಏನು ಮಾಡಬೇಕೆಂಬುದರ ನಿರ್ದೇಶಕನು ಅವನಲ್ಲ.

ಮಳೆಯು ಎಲ್ಲರ ಜಮೀನುಗಳ ಮೇಲೂ ಪಕ್ಷಪಾತವಿಲ್ಲದೇ ಬೀಳುವುದು. ಭೂಮಿಯನ್ನು ಉತ್ತು-ಬಿತ್ತಿ ಹಸನುಮಾಡಿ ಗೊಬ್ಬರಹಾಕಿದವನು ಒಳ್ಳೆಯ ಬೆಳೆಯನ್ನು ತೆಗೆಯುತ್ತಾನೆ. ಸೋಮಾರಿಯ ಜಮೀನಿನಲ್ಲಿ ಒಳ್ಳೆಯ ಬೆಳೆಯು ಬರುವುದಿಲ್ಲ. ಇದರಲ್ಲಿ ಮಳೆಯದೇನೂ ದೋಷವಿಲ್ಲ. ಅಂತೆಯೇ ಹುಟ್ಟಿದ ಜೀವಿಗೆ ಸತ್ಕರ್ಮಮಾಡಲು ಅಥವಾ ದುಷ್ಕರ್ಮಮಾಡಲು ಎಲ್ಲ ಅವಕಾಶಗಳೂ ಇರುತ್ತವೆ. ವಿಧಿ-ನಿಷೇಧಗಳೂ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿವೆ. ಆದರೆ ಒಳ್ಳೆಯದನ್ನು ಅಥವಾ ಕೆಟ್ಟುದನ್ನು ಆರಿಸಿಕೊಳ್ಳುವುದು ಜೀವಿಗೆ ಸೇರಿರುತ್ತದೆ. ಜೀವಿಯು ಮಾಡಿದ ಕರ್ಮಗಳಿಗೆ ಫಲವನ್ನು ಸಂಯೋಜಿಸಲು

ಕೂಡ ಅವನು ಹೋಗುವುದಿಲ್ಲ. ಜೀವಿಯ ಸ್ವಭಾವಾನುಗುಣವಾಗಿ ಅವಿದ್ಯಾ ಲಕ್ಷಣವಾದ ಪ್ರಕೃತಿಯಿಂದ ಎಲ್ಲವೂ ನಡೆಯುತ್ತಿರುತ್ತದೆ.

ಪರಮಾತ್ಮನು ಕೇವಲ ಕರ್ಮಸಾಕ್ಷೀ. ಯಾರು ಏನು ಮಾಡು ತ್ತಿರುವರೆಂಬುದನ್ನು ಸದಾಕಾಲದಲ್ಲಿಯೂ ನೋಡುತ್ತಿರುತ್ತಾನೆ. ಅದು ಹೊರತಾಗಿ ಅವನು ಮತ್ತೇನನ್ನೂ ಮಾಡುವುದಿಲ್ಲ. ಜೀವಿಯು ತನ್ನ ಇಂದಿನ ಹುಟ್ಟಿಗೂ ಮುಂದಿನ ಹುಟ್ಟಿಗೂ ತಾನೇ ಕಾರಣನಾಗಿರುತ್ತಾನೆ. 'ಮಾಡಿದ್ದುಣ್ಣೋ ಮಹಾರಾಯ' ಅವನು ಮಾಡಿದ್ದನ್ನು ಅವನೇ ಅನು ಭವಿಸುತ್ತಾನೆ. ಇದರಲ್ಲಿ ಪರಮಾತ್ಮನ ಪಾತ್ರವೇನೂ ಇರುವುದಿಲ್ಲ.

ಈಶ್ವರನು ವ್ಯವಹಾರದೃಷ್ಟಿಯಿಂದ ಫಲವನ್ನು ಕೊಡುತ್ತಾನಾದರೂ ಪರಮಾರ್ಥವಾಗಿ ಕ್ರಿಯಾಕಾರಕಗಳಾದ ಫಲಗಳೇ ಇಲ್ಲ.

ಪ್ರಭುಃ ಎಂದರೆ ಚಿದಾತ್ಮನು–ಸೂರ್ಯನಂತೆ ನಮ್ಮೆಲ್ಲರಿಗೂ ಪ್ರಕಾಶಕ ನಾದರೂ–ನಾವು ಮಾಡುವ ಕರ್ಮಾದಿಗಳಿಗೆ ಅವನು ಕಾರಣನಾಗುವುದಿಲ್ಲ. ಚಿದಾತ್ಮನು ಜಡವರ್ಗಕ್ಕೆ ಫಲಸಂಯೋಜನೆಯನ್ನೂ ಮಾಡುವುದಿಲ್ಲ. ಯಾವ ಪ್ರಾಣಿವರ್ಗದ ಸ್ವಭಾವವು ಹೇಗಿರುವುದೋ ಆಯಾ ಸ್ವಭಾವಾನುಗುಣವಾಗಿ ಪ್ರಾಣಿವರ್ಗವು ಕಾರ್ಯಮಾಡುತ್ತಿರುತ್ತದೆ. ಸೂರ್ಯನು ಹುಟ್ಟುತ್ತಲೇ ಕಮಲಗಳು ವಿಕಸಿತವಾಗುತ್ತವೆ. ಕುಮುದಗಳು ಮುಚ್ಚಿಕೊಳ್ಳುತ್ತವೆ. ಇದು ಕಮಲ ಮತ್ತು ಕುಮುದಗಳ ಸ್ವಭಾವಗುಣವಾಗಿರುತ್ತದೆ. ಅದೇ ರೀತಿಯಲ್ಲಿ ಚಿದಾತ್ಮನು ಪ್ರಕಾಶಮಾನನಾಗಿರಲಾಗಿ ಮನುಷ್ಯನು ತನ್ನ ಸ್ವಾಭಾವಿಕವಾದ ಕರ್ಮಗಳನ್ನು ಮಾಡುತ್ತಿರುತ್ತಾನೆ. ಆದರೆ ಚಿದಾತ್ಮನು ಕರ್ಮಪ್ರವರ್ತಕನೂ ಅಲ್ಲ ; ನಿವರ್ತಕನೂ ಅಲ್ಲ. ಲೋಹ ಮತ್ತು ಸೂಜಿಗಲ್ಲುಗಳು ಒಂದಕ್ಕೊಂದು ಅಂಟಿಕೊಂಡಿರುವುದೇನೋ ನಿಜ. ಆದರೆ ಲೋಹವೇ ಬೇರೆ ; ಸೂಜಿಗಲ್ಲೇ ಬೇರೆ. ಅದರಂತೆಯೇ ಚಿದಾತ್ಮನನ್ನು ಬಿಟ್ಟು ದೇಹ ಉಳಿಯದಾದರೂ ಚಿದಾತ್ಮನೇ ಬೇರೆ ; ಅನಾತ್ಮವಾದ ದೇಹವೇ ಬೇರೆ. ದೇಹವ್ಯಾಪಾರದಲ್ಲಿ ಚಿದಾತ್ಮನು ಬೆರೆಯುವುದಿಲ್ಲ.

ಪ್ರಭುಃ = ಎಂದರೆ ಕರ್ಮವಶನಲ್ಲದೇ ಸ್ವಾಭಾವಿಕಸ್ವರೂಪದಲ್ಲಿರುವ ಆತ್ಮನು, ಪ್ರಕೃತಿಸಂಬಂಧದಿಂದ, ದೇವಕಾರ್ಯಕ್ಕೆ, ಮನುಷ್ಯ-ಸ್ಥಾವರರೂಪ

ದಲ್ಲಿರುವ ಈ ಲೋಕದ ದೇವತ್ವವೇ ಮುಂತಾದ ಅಸಾಧಾರಣವಾದ ಕರ್ತೃತ್ವವನ್ನೂ, ಅವುಗಳಿಗೆ ಅಸಾಧಾರಣವಾದ ಕರ್ಮಗಳನ್ನೂ, ಆಯಾ ಕರ್ಮಗಳಿಂದುಂಟಾದ ದೇವತ್ವವೇ ಮುಂತಾದ ಫಲಸಂಯೋಗವನ್ನೂ ಉಂಟುಮಾಡುವುದಿಲ್ಲ. ಆದರೆ ಅವುಗಳನ್ನೆಲ್ಲಾ ಉಂಟುಮಾಡುವುದು ಯಾವುದು ಎಂದರೆ ಸ್ವಭಾವ ; ಪ್ರಕೃತಿ ; ವಾಸನೆ. ಕರ್ತೃತ್ವವೇ ಮುಂತಾದು ವೆಲ್ಲವೂ ಆತ್ಮನಿಗೆ ಸ್ವರೂಪದಿಂದ ಬಂದಿದ್ದಲ್ಲ. ಪ್ರಕೃತಿಸಂಸರ್ಗದಿಂದ ಆಯಾ ಆತ್ಮಾಭಿಮಾನದಿಂದ ಉಂಟಾದ ವಾಸನೆಯಿಂದ ಬಂದದ್ದು. (ರಾ.ಭಾ.)

'ಜೀವನು ನಿಜವಾಗಿಯೂ ಕರ್ತೃವಲ್ಲ'–ಎಂದು ಈ ಶ್ಲೋಕವು ಹೇಳುತ್ತದೆ. ಪ್ರಭು ಎಂದರೆ ಜೀವ. ಜಡದ ದೃಷ್ಟಿಯಿಂದ ಅವನೇ ಪ್ರಭುವು. (ಪರಮೇಶ್ವರನಿಂದ ಪ್ರೇರಿತನಾಗಿಯೇ ಜೀವನು ಕರ್ಮಗಳನ್ನು ಮಾಡು ತ್ತಾನೆ ; ಮಾಡಿಸುತ್ತಾನೆ. ವಸ್ತುತಃ ಸ್ವಾತಂತ್ರ್ಯದಿಂದ ಅವನು ಅವುಗಳನ್ನು ಮಾಡುವುದಿಲ್ಲ.) **ನ ಚ ಕರೋತಿ ವಸ್ತುತಃ ಇತ್ಯಾಹ ನ ಕರ್ತೃತ್ವಮಿತಿ । ಪ್ರಭುರಿತಿ ಜೀವೋ ಜಡಮಪೇಕ್ಷ್ಯ। ಸ್ವಯಮೇವ ಭಾವಯತಿ ಜಗದುತ್ಪಾದಯತಿ ಇತಿ ಸ್ವಭಾವಃ ಭಗವಾನ್** )

(ಮ.ಭಾ.)

**ಓಂ ನಾದತ್ತೇ ಕಸ್ಯಚಿತ್ಪಾಪಂ ನ ಚೈವ ಸುಕೃತಂ ವಿಭುಃ ।**
**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯನ್ತಿ ಜನ್ತವಃ ॥೧೫॥**

ವಿಭುವು ಯಾವನೊಬ್ಬನ ಪಾಪವನ್ನಾಗಲೀ, ಪುಣ್ಯವನ್ನಾಗಲೀ ತೆಗೆದುಕೊಳ್ಳುವುದಿಲ್ಲ. ಅಜ್ಞಾನದಿಂದ ಜ್ಞಾನವು ಮುಚ್ಚಲ್ಪಟ್ಟಿರುವುದು. ಆದುದರಿಂದ ಜೀವರು ಮೋಹಗೊಳ್ಳುತ್ತಿರುವರು.

* * *

(ಸರ್ವವ್ಯಾಪಿಯಾದ ಪರಮಾತ್ಮನು ನಿರ್ಲಿಪ್ತ. ಯಾವನೊಬ್ಬನ ಪಾಪವನ್ನೂ ತೆಗೆದುಕೊಳ್ಳುವುದಿಲ್ಲ. ಯಾವನೊಬ್ಬನ ಪುಣ್ಯವನ್ನೂ ತೆಗೆದು ಕೊಳ್ಳುವುದಿಲ್ಲ.

ಪುಣ್ಯ-ಪಾಪಗಳು ಜೀವಗಳಿಗೆ ಒದಗುತ್ತವೆ. ಅಜ್ಞಾನಸಂಬಂಧದಿಂದ ಉಂಟಾಗುತ್ತವೆ. ಜೀವಗಳ ಸ್ವರೂಪಭೂತವಾದ ಜ್ಞಾನವು ಅಜ್ಞಾನದಿಂದ

ಆವರಿಸಲ್ಪಟ್ಟಿದೆ. ಆದುದರಿಂದ ಜೀವಗಳು ಪುಣ್ಯ-ಪಾಪಗಳೇ ಮುಂತಾದ ಕರ್ಮಗಳ ಗೊಂದಲಕ್ಕೆ ಸಿಕ್ಕಿ ಮೋಹದಲ್ಲಿ ತೊಳಲುತ್ತವೆ. ಸರ್ವವ್ಯಾಪಿ ಯಾದ ಪರಮಾತ್ಮನು ಯಾರ ಪಾಪವನ್ನೂ–ಭಕ್ತನ ಪಾಪವನ್ನೂ ಕೂಡ–ತೆಗೆದುಕೊಳ್ಳುವುದಿಲ್ಲ. ಅವರು ಅರ್ಪಿಸಿದ ಸುಕೃತವನ್ನೂ ಸ್ವೀಕರಿಸುವುದಿಲ್ಲ. ಹಾಗಾದರೆ ಭಕ್ತರಿಂದ ಪೂಜೆಯೇ ಮುಂತಾದ ಸತ್ಕರ್ಮಗಳೂ–ಯಜ್ಞ, ದಾನ, ಹೋಮ ಮುಂತಾದ ಪುಣ್ಯಕರ್ಮಗಳೂ ಏಕೆ ಮಾಡಲ್ಪಡುತ್ತವೆ? ಎಂದರೆ ಜೀವಿಗಳ ವಿವೇಕವಿಜ್ಞಾನವು ಅಜ್ಞಾನದಿಂದ ಮುಚ್ಚಲ್ಪಟ್ಟಿರುವುದ ರಿಂದ ; ಅವಿವೇಕಿಗಳಾದ ಸಂಸಾರಜೀವಿಗಳು ಮಾತ್ರವೇ–'ನಾನು ಮಾಡು ತ್ತೇನೆ ; ಮಾಡಿಸುತ್ತೇನೆ. ತಿನ್ನುತ್ತೇನೆ ; ತಿನ್ನಿಸುತ್ತೇನೆ'–ಮುಂತಾದ ಭಾವದಿಂದ ಮೋಹಕ್ಕೆ ಒಳಗಾಗುತ್ತಾರೆ.

ವಿಭುವಾದ ಜೀವನು ತನಗೆ ಇಷ್ಟರಾದ ಪತ್ನೀ-ಪುತ್ರಾದಿಗಳ ಪಾಪ ವನ್ನೂ ಹೋಗಲಾಡಿಸುವುದಿಲ್ಲ. ಅನಿಷ್ಟನಾದ ಶತ್ರುವಿನ ಸುಖವನ್ನೂ ತೊಡೆದುಹಾಕುವುದಿಲ್ಲ. ಏಕೆಂದರೆ : ಇವನು ವಿಭು. ನಿರ್ದಿಷ್ಟವಾದ ದೇಹ-ದೇಶಗಳಿಗೆ ಸಂಬಂಧಪಟ್ಟವನಲ್ಲ. ಆದುದರಿಂದ ಯಾರಿಗೂ ಸಂಬಂಧಿಯೂ ಅಲ್ಲ ; ಯಾರಿಗೂ ಪ್ರತಿಕೂಲನೂ ಅಲ್ಲ. ಇವೆಲ್ಲವೂ ವಾಸನೆಯಿಂದ ಉಂಟಾದುದು. ಹಾಗಾದರೆ ಇಂತಹ ಸ್ವಭಾವವುಳ್ಳ ಜೀವನಿಗೆ ಈ ವಿಪರೀತ ವಾಸನೆಯು ಹೇಗೆ ಉಂಟಾಯಿತು?–ಎಂದರೆ ಜ್ಞಾನವು ಅಜ್ಞಾನದಿಂದ ಆವರಿಸಲ್ಪಟ್ಟಿದೆ. ಜ್ಞಾನವಿರೋಧಿಯಾದ ಪೂರ್ವಕರ್ಮದಿಂದ ತಮ್ಮ ಫಲವನ್ನು ಅನುಭವಿಸುವ ಯೋಗ್ಯತೆಯನ್ನುಂಟುಮಾಡಲು ಅವನ ಜ್ಞಾನವು ಆವೃತವಾಗುತ್ತದೆ. ಸಂಕುಚಿತವಾಗುತ್ತದೆ. ಜ್ಞಾನಾವರಣರೂಪವಾದ ಆ ಕರ್ಮದಿಂದ ಬಗೆ-ಬಗೆಯ ದೇಹಸಂಯೋಗವೂ ಆಯಾ ಆತ್ಮಾಭಿಮಾನ ರೂಪವಾದ ಮೋಹವೂ ಉಂಟಾಗುತ್ತದೆ. (ರಾ.ಭಾ.)

ಅಜ್ಞಾನೇನ ಜನ್ತವಃ

ಜೀವಗಳ ಸ್ವರೂಪವು ಅಜ್ಞಾನದಿಂದ ಆವರಿಸಲ್ಪಟ್ಟಿರುವುದರಿಂದ ಅವು ಭಗವಂತನನ್ನು ಅರಿಯುತ್ತಿಲ್ಲ.

ಎಂದು ಮಧ್ವಸಂಪ್ರದಾಯದ ವಿದ್ವಾಂಸರು ಅರ್ಥಹೇಳುತ್ತಾರೆ.)

**ಓಂ ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।**
**ತೇಷಾಮಾದಿತ್ಯವಜ್ಜ್ಞಾನಂ ಪ್ರಕಾಶಯತಿ ತತ್ಪರಮ್ ॥೧೬॥**

ಆದರೆ ಯಾರಿಗೆ ಆತ್ಮನ ಈ ಅಜ್ಞಾನವು ಜ್ಞಾನದಿಂದ ನಾಶವಾಗಿ ರುವುದೋ–ಅವರಿಗೆ ಆ ಜ್ಞಾನವು ಸೂರ್ಯನಂತೆ ಆ ಪರತತ್ತ್ವವನ್ನು ಪ್ರಕಾಶಪಡಿಸುತ್ತದೆ.

* * *

(ನಾವೀಗ ಅಜ್ಞಾನಾಂಧಕಾರದಲ್ಲಿ ಮುಳುಗಿಬಿಟ್ಟಿದ್ದೇವೆ. ನಮಗಿರು ವುದು ಆತ್ಮವಿಷಯಕವಾದ ಅಜ್ಞಾನ. ಪ್ರಾಪಂಚಿಕವ್ಯವಹಾರಗಳಲ್ಲಿ ನಾವು ಅಜ್ಞಾನಿಗಳಲ್ಲ. ಆದರೆ ಗೀತೆಯಲ್ಲಿ ಆತ್ಮವಿಷಯವಾದ ಜ್ಞಾನಾಜ್ಞಾನಗಳನ್ನೇ ಶ್ರೀಕೃಷ್ಣನು ಹೇಳುತ್ತಿದ್ದಾನೆ.

ಇಲ್ಲಿ ಅಜ್ಞಾನದ ನಾಶವೆಂದರೆ ಆತ್ಮವಿಷಯವಾದ ಅಜ್ಞಾನದ ನಾಶ. ಆತ್ಮವಿಷಯವಾದ ಅಜ್ಞಾನವೆಂದರೆ ಆತ್ಮನು ಯಾವುದೆಂಬುದನ್ನು ಗುರುತಿ ಸದೇ ಇರುವುದು. ದೇಹವೇ ಆತ್ಮವೆಂದು ಭಾವಿಸಿರುವುದು. ಈ ಅಜ್ಞಾನ ವನ್ನು ಹೋಗಲಾಡಿಸಿಕೊಳ್ಳಬೇಕಾದರೆ ಆತ್ಮವು ಯಾವುದು? ಅನಾತ್ಮವು ಯಾವುದು?–ಎಂಬ ವಿವೇಕವುಂಟಾಗಬೇಕು. ವಿಷಯಗಳೆಲ್ಲವನ್ನೂ ವ್ಯವ ಸಾಯಾತ್ಮಿಕವಾದ ಬುದ್ಧಿಯಿಂದ ಮಥಿಸಿ 'ಆತ್ಮವು' ಯಾವುದೆಂಬುದನ್ನು ಗುರುತಿಸುವುದೇ ಜ್ಞಾನ.

ಯಾರು ಈ ವಿಧವಾದ ಜ್ಞಾನದಿಂದ ಅಜ್ಞಾನವನ್ನು 'ನಾನು ನನ್ನದು ಎಂಬ ದೇಹಾತ್ಮಬುದ್ಧಿಯನ್ನು' ತೊರೆದಿರುವರೋ–ಅವರಿಗೆ ಆ ಜ್ಞಾನವೇ ಆದಿತ್ಯನ ರೂಪದಲ್ಲಿದ್ದು, ಸೂರ್ಯನು ಪೂರ್ವದಲ್ಲಿ ಹುಟ್ಟುತ್ತಲೇ ಎಲ್ಲ ದಿಕ್ಕುಗಳ ಕತ್ತಲೆಯನ್ನೂ ನಾಶಮಾಡಿಬಿಡುವಂತೆ–ಹೃದಯಾಂಧಕಾರವೆಲ್ಲ ವನ್ನೂ ಹೋಗಲಾಡಿಸಿ ಜ್ಞೇಯವಾದ, ಪರಮಶ್ರೇಷ್ಠವಾದ ಆ ಬ್ರಹ್ಮವಸ್ತು ವನ್ನು ತಿಳಿಸಿಕೊಡುತ್ತದೆ. (ತೋರಿಸಿಕೊಡುತ್ತದೆ.)

ಆತ್ಮಯಾಥಾರ್ಥ್ಯದ ಉಪದೇಶದಿಂದುಂಟಾದ ಅತ್ಯಂತಪವಿತ್ರವಾದ ಜ್ಞಾನದಿಂದ–ಜ್ಞಾನಕ್ಕೆ ಆವರಣವಾಗಿರುವ, ಅನಾದಿಕಾಲಪ್ರವೃತ್ತವಾದ, ಅನಂತಕರ್ಮಸಂಚಯರೂಪವಾದ ಅಜ್ಞಾನವು ಯಾರಿಗೆ ನಾಶವಾಗಿ

ದೆಯೋ–ಅವರಿಗೆ ಅಪರಿಮಿತವೂ ಅಸಂಕುಚಿತವೂ ಆದ ಪರಜ್ಞಾನವು ಆದಿತ್ಯನಂತೆ ಎಲ್ಲವನ್ನೂ ಯಥಾವಸ್ಥಿತವಾಗಿ ಪ್ರಕಾಶಪಡಿಸುತ್ತದೆ.

ಆದಿತ್ಯನ ದೃಷ್ಟಾಂತವನ್ನು ಕೊಟ್ಟಿರುವುದರಿಂದ ಜ್ಞಾತೃ ಮತ್ತು ಜ್ಞಾನ ಇವುಗಳು ತೇಜಸ್ವೀ ಮತ್ತು ತೇಜಸ್ಸುಗಳಂತೆ ಇವೆ–ಎಂದು ಸೂಚಿತ ವಾಗುತ್ತದೆ ಮತ್ತು ಅದರಿಂದ–'ಸಂಸಾರದೆಶೆಯಲ್ಲಿ ಜ್ಞಾನವು ಕರ್ಮದಿಂದ ಸಂಕುಚಿತವಾಗಿರುತ್ತದೆ. ಮೋಕ್ಷದೆಶೆಯಲ್ಲಿ ವಿಕಾಸಗೊಳ್ಳುತ್ತದೆ'–ಎಂಬುದು ಹೊಂದಿಕೆಯಾಗುತ್ತದೆ. (ರಾ.ಭಾ.)

'ಜ್ಞಾನವೇ ಅಜ್ಞಾನವನ್ನು ನಾಶಪಡಿಸುತ್ತದೆ' ಎಂದು ಇಲ್ಲಿ ಪ್ರತಿ ಪಾದಿತವಾಗಿದೆ. ಮೊದಲು ಹೇಳಿರುವ ಜ್ಞಾನವು ಪರೋಕ್ಷಜ್ಞಾನ.

**ಜ್ಞಾನಮೇವ ಅಜ್ಞಾನನಾಶಕಮಿತ್ಯಾಹ ಜ್ಞಾನೇನೇತಿ । ಪ್ರಥಮ ಜ್ಞಾನಂ ಪರೋಕ್ಷಂ**

ಸ್ವರೂಪಜ್ಞಾನವು ಅವಿದ್ಯೆಯಿಂದ ಆವರಿಸಲ್ಪಟ್ಟಿದೆ–ಎಂದು ಹಿಂದಿನ ಶ್ಲೋಕದ ಉತ್ತರಾರ್ಧದ ಭಾವ. ಈ ಶ್ಲೋಕದಲ್ಲಿ ಹೇಳಿರುವ ಜ್ಞಾನ ಎಂಬ ಮೊದಲನೆಯ ಶಬ್ದವು ಪರೋಕ್ಷಜ್ಞಾನವನ್ನು ಹೇಳುತ್ತದೆ. ಈ ವೃತ್ತಿಜ್ಞಾನವು ಅವಿದ್ಯೆಯನ್ನು ಶಿಥಿಲಪಡಿಸುತ್ತದೆ.) (ಮ.ಭಾ.)

**ಓಂ ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛನ್ತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥೧೭॥**

ಯಾರು ಪರಾತ್ಪರವಸ್ತುವಿನಲ್ಲಿಯೇ ಲೀನವಾದ ಬುದ್ಧಿಯುಳ್ಳವರೋ, ತದಾತ್ಮರಾಗಿರುವರೋ, ಆ ಪರಬ್ರಹ್ಮವಸ್ತುವಿನಲ್ಲಿಯೇ ಏಕನಿಷ್ಠರಾಗಿ ಅದರಲ್ಲೇ ಪರಾಯಣರಾಗಿ ಜ್ಞಾನದಿಂದ ತೊಳೆದುಹಾಕಲ್ಪಟ್ಟ ಪಾಪವುಳ್ಳ ವರಾಗುವರೋ–ಅವರು ಪುನರಾವೃತ್ತಿಯಿಲ್ಲದಿರುವಿಕೆಯನ್ನು (ಮೋಕ್ಷವನ್ನು) ಹೊಂದುತ್ತಾರೆ.

* * *

(ಹಿಂದಿನ ಶ್ಲೋಕದಲ್ಲಿ **ಜ್ಞಾನಂ ತತ್ಪರಂ ಪ್ರಕಾಶಯತಿ** ಜ್ಞಾನವು ಪರಮಾರ್ಥವನ್ನು ಪೂರ್ಣವಾಗಿ ತಿಳಿಸಿಕೊಡುವುದು–ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಜ್ಞಾನನಿಷ್ಠೆಯಿಂದಾಗುವ ಮಹಾಫಲವನ್ನು ಈ ಶ್ಲೋಕದಲ್ಲಿ ಹೇಳುತ್ತಾನೆ.

ಪರತತ್ತ್ವದಲ್ಲಿಯೇ ಬುದ್ಧಿಯುಳ್ಳವರ ಬುದ್ಧಿಯು ಉತ್ತರಮುಖಿ ಯಂತೆ ಯಾವಾಗಲೂ ಆತ್ಮದ ಕಡೆಗೇ ತಿರುಗಿರುತ್ತದೆ. ಈ ರೀತಿಯಲ್ಲಿ ಆತ್ಮಾನುಸಂಧಾನದಲ್ಲಿಯೇ ಬುದ್ಧಿಯಿರತಕ್ಕವರು ಆತ್ಮಾನಾತ್ಮವಿವೇಕದಿಂದ ಪರಬ್ರಹ್ಮವಸ್ತುವೇ ತಮ್ಮ ಆತ್ಮವೆಂಬ ಅರಿವನ್ನು ಹೊಂದಿದವರಾಗಿ, ಆತ್ಮದಲ್ಲಿಯೇ ಏಕನಿಷ್ಠರಾಗಿ, ಆ ಬ್ರಹ್ಮವಸ್ತುವೇ ಎಲ್ಲಕ್ಕಿಂತಲೂ ಶ್ರೇಷ್ಠವಾದ ಅಯನವು (ಆಶ್ರಯವು) ಎಂಬ ನಿಶ್ಚಯಬುದ್ಧಿಯಿಂದ ತತ್ಪರಾಯಣರಾಗಿ ಇರುವರು. ಜ್ಞಾನದಿಂದ ಅವರು ಪಾಪವೇ ಮೊದಲಾದ ಸಂಸಾರಕ್ಕೆ ಕಾರಣವಾದ ದೋಷಗಳನ್ನು ತೊಲಗಿಸಿಕೊಂಡಿರುತ್ತಾರೆ ಮತ್ತು ಶುದ್ಧ ರಾಗಿರುವುದರಿಂದ ಪುನರಾವೃತ್ತಿರಹಿತವಾದ (ಜನನ-ಮರಣಾದಿಗಳಿಲ್ಲದ) ಮೋಕ್ಷವನ್ನು ಹೊಂದುತ್ತಾರೆ.

**ತನ್ನಿಷ್ಠಾಃ :** ನಿಷ್ಠಾ=ಅಭಿನಿವೇಶಃ ಅಭಿಮಾನ. **ಸರ್ವಾಣಿ ಕರ್ಮಾಣಿ ಸಂನ್ಯಸ್ಯ ತಸ್ಮಿನ್ ಬ್ರಹ್ಮಣ್ಯೇವ ಅವಸ್ಥಾನಂ ಯೇಷಾಂ ತೇ ತನ್ನಿಷ್ಠಾಃ.**

ಕರ್ಮಗಳೆಲ್ಲವನ್ನೂ ಸಂನ್ಯಾಸಮಾಡಿ ಬ್ರಹ್ಮನಲ್ಲಿಯೇ ನೆಲೆಗೊಂಡಿರು ವವರು ತನ್ನಿಷ್ಠರು. (ಶಂ.ಭಾ.)

**ತದಾತ್ಮಾನಃ :** ಪರಬ್ರಹ್ಮವನ್ನೇ ಆತ್ಮವನ್ನಾಗಿ ಉಳ್ಳವರು. (ಶಂ.ಭಾ.)

**ತನ್ನಿಷ್ಠಾಃ** = ಅದರ ಅಭ್ಯಾಸದಲ್ಲಿಯೇ ನಿರತರಾದವರು. **ತದಾತ್ಮಾನಃ** = ಅದೇ ವಿಷಯವಾದ ಮನಸ್ಸುಳ್ಳವರು. **ತತ್ಪರಾಯಣಾಃ** = ಅದನ್ನೇ ಪರಮಪ್ರಯೋಜನವೆಂದು ತಿಳಿದಿರುವವರು.

**ಅಪುನರಾವೃತ್ತಿಂ ಗಚ್ಛನ್ತಿ** = ಪುನರಾವೃತ್ತಿಯಿಲ್ಲದ ಎಂದರೆ ಸ್ವಸ್ವ ರೂಪದಲ್ಲಿರುವ ಆತ್ಮನನ್ನು ಹೊಂದುತ್ತಾರೆ. (ರಾ.ಭಾ.)

ಈ ಶ್ಲೋಕವು ಅಪರೋಕ್ಷಜ್ಞಾನಕ್ಕೆ ಅವ್ಯವಹಿತವಾದ ಸಾಧನವನ್ನು ಹೇಳುತ್ತದೆ. ಪರೋಕ್ಷಜ್ಞಾನವು ಅಪರೋಕ್ಷಜ್ಞಾನಕ್ಕೆ ಸಾಧನವೇನೋ ಹೌದು. ಆದರೆ ಅದು ವ್ಯವಹಿತವಾದ ಸಾಧನ. ಏಕೆಂದರೆ : ಶ್ರವಣ-ಮನನಗಳು ಆದೊಡನೆಯೇ ಜ್ಞಾನವು ಬರುವುದಿಲ್ಲ. ಆದರೆ ಇಲ್ಲಿ ಅದಕ್ಕೆ ಅವ್ಯವಹಿತವಾದ (ಸಾಕ್ಷಾತ್ಕಾರ) ಸಾಧನವನ್ನು ತಿಳಿಸುತ್ತದೆ.) (ಮ.ಭಾ.)

**ಓಂ ವಿದ್ಯಾವಿನಯಸಮ್ಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।**
**ಶುನಿ ಚೈವ ಶ್ವಪಾಕೇ ಚ ಪಣ್ಡಿತಾಃ ಸಮದರ್ಶಿನಃ ॥೧೮॥**

ವಿದ್ಯಾ-ವಿನಯಗಳಿಂದ ಕೂಡಿದ ಬ್ರಾಹ್ಮಣನಲ್ಲಿ, ಗೋವಿನಲ್ಲಿ, ಆನೆಯಲ್ಲಿ, ನಾಯಿಯಲ್ಲಿ ಮತ್ತು ಚಂಡಾಲನಲ್ಲಿ ಪಂಡಿತರು ಸಮದರ್ಶಿಗಳಾಗಿರುವರು.

* * *

(ಇಲ್ಲಿ 'ಪಂಡಿತರು' ಎಂದರೆ ಹಿಂದೆ ಹೇಳಿದಂತೆಯೇ ಜ್ಞಾನದಿಂದ ಅಜ್ಞಾನವನ್ನು ತೊಲಗಿಸಿಕೊಂಡವರು. 'ಪಂಡಾ' ಎಂದರೆ ಆತ್ಮವಿಷಯವಾದ ಬುದ್ಧಿ; ಅದನ್ನು ಪಡೆದವರು ಪಂಡಿತರು. ಬ್ರಾಹ್ಮಣ, ಗೋವು–ಮುಂತಾದವರು ಸಂಸ್ಕಾರ, ಗುಣ, ಶೀಲ, ಜಾತಿ, ಆಕಾರ, ವೃತ್ತಿ ಎಲ್ಲದರಲ್ಲಿಯೂ ಭಿನ್ನಭಿನ್ನವಾಗಿದ್ದರೂ ಪಂಡಿತರು ಅವೆಲ್ಲದರಲ್ಲೂ ಸಮವನ್ನೇ ಕಾಣುತ್ತಾರೆ ಎಂದರೆ ಅವಿಕಾರವಾದ ಬ್ರಹ್ಮವನ್ನೇ ಕಾಣುತ್ತಾರೆ. ಎಲ್ಲದರಲ್ಲಿಯೂ ಇರುವ, ಏಕವೂ ಅವಿಕಾರವೂ ಆದ ಬ್ರಹ್ಮವು ಎಲ್ಲರಲ್ಲಿಯೂ ಇರುವುದರಿಂದ ಎಲ್ಲದರಲ್ಲಿಯೂ ಸಮಭಾವನೆಯನ್ನು ಹೊಂದುತ್ತಾರೆ. ವಿದ್ಯಾ-ವಿನಯಸಂಪನ್ನನಾದ ಬ್ರಾಹ್ಮಣನಲ್ಲಿಯೂ (ಅವನ ಹೃದಯದಲ್ಲಿಯೂ) ತಾವು ತಮ್ಮ ಹೃದಯಗುಹೆಯಲ್ಲಿ ಕಂಡುಕೊಂಡ ಆತ್ಮವಸ್ತುವನ್ನೇ ಕಾಣುವರು. ರಾಜಸಸ್ವಭಾವವುಳ್ಳ ಹಸುವಿನಲ್ಲಿಯೂ ಕಾಣುವರು. ತಾಮಸಸ್ವಭಾವವುಳ್ಳ ಆನೆಯಲ್ಲೂ ಕಾಣುವರು. ಅನೇಕರಿಗೆ ಅಪವಿತ್ರವೆನಿಸಿರುವ ನಾಯಿಯಲ್ಲೂ ಕಾಣುವರು ಮತ್ತು ಅಪವಿತ್ರವಾದ ನಾಯಿಯ ಮಾಂಸವನ್ನೇ ತಿನ್ನುವ ಶ್ವಪಾಕ ಎಂದರೆ ಚಂಡಾಲನಲ್ಲಿಯೂ ಕಾಣುವರು. ಪಂಡಿತರಾದವರಿಗೆ ಈ ಪ್ರಾಣಿಗಳಲ್ಲಿರುವ ಸತ್ತ್ವ-ರಜಸ್ತಮೋಗುಣಗಳೊಂದೂ ಕಾಣುವುದಿಲ್ಲ. ಸರ್ವಾಂತರ್ಯಾಮಿಯಾದ ಪರಮಾತ್ಮನನ್ನು ಅವರು ಎಲ್ಲವಸ್ತುಗಳಲ್ಲಿಯೂ ಕಾಣುತ್ತಾರೆ. ಆತ್ಮದ್ರಷ್ಟಾರರಾದ ಪಂಡಿತರು ಈ ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ಸಮದರ್ಶಿಗಳಾಗಿರುತ್ತಾರೆ. ಕೇವಲ ಇಷ್ಟೇ ಪ್ರಾಣಿಗಳೇ ಏಕೆ? ಒಂದು ಸ್ಥಿತಿಯಲ್ಲಿ ಅವರಿಗೆ ಎಲ್ಲವೂ ಬ್ರಹ್ಮಮಯವಾಗಿಯೇ ಕಾಣುತ್ತದೆ. ಸಕ್ಕರೆಯಲ್ಲಿ ಬಗೆ-ಬಗೆಯ ಪ್ರಾಣಿಗಳನ್ನು ಮಾಡುತ್ತಾರೆ. ನಾಯಿ, ಕೋಳಿ, ತುಳಸೀ, ಬೃಂದಾವನ–ಇತ್ಯಾದಿ. ಆದರೆ ಅವು

ಗಳೆಲ್ಲದರಲ್ಲಿಯೂ ಸಕ್ಕರೆಯೇ ಇದೆಯೆಂಬುದನ್ನು ನಾವು ಮನಗಾಣ ಬೇಕಾಗಿದೆ. ಸೂರ್ಯನ ಬಿಂಬವು ಗಂಗಾನದಿಯ ಪವಿತ್ರಜಲದಲ್ಲಿಯೂ ಬೀಳುತ್ತದೆ. ಸಣ್ಣಕುಂಟೆಯಲ್ಲೂ, ಕೊಳಚೇ ನೀರಿನಲ್ಲೂ ಬೀಳುತ್ತದೆ. ಆದರೆ ಸೂರ್ಯನು ಇದರಿಂದ ಪವಿತ್ರನಾಗಲೀ–ಅಪವಿತ್ರನಾಗಲೀ ಆಗುವುದಿಲ್ಲ. ಆದರೆ ಇಲ್ಲಿ ಪಂಡಿತನು (ಜ್ಞಾನಿಯು) ಸಮದರ್ಶನನೇ ಹೊರತು ಸಮವರ್ತನನಲ್ಲ. ಇವನು ಪ್ರಪಂಚದ ಎಲ್ಲ ಪ್ರಾಣಿಗಳಲ್ಲಿಯೂ ತನ್ನಲ್ಲಿರುವ ಪರಮಾತ್ಮನನ್ನು ಕಾಣುತ್ತಾನೆ. ಆ ಆತ್ಮನೇ ಎಲ್ಲರಲ್ಲಿಯೂ ಇದೆಯೆಂದು ಭಾವಿಸುತ್ತಾನೆ. ಆದರೆ ವ್ಯವಹಾರದಲ್ಲಿ ಪ್ರಾಣಿಗಳ ಸಹಜಗುಣಕ್ಕೆ ಅನುಗುಣವಾಗಿಯೇ ವ್ಯವಹರಿಸಬೇಕಾಗುತ್ತದೆ.

ಒಬ್ಬ ಗುರುಗಳು ಶಿಷ್ಯರಿಗೆ ಇದೇ ಶ್ಲೋಕವನ್ನೇ ಮನದಟ್ಟಾಗುವಂತೆ ಪಾಠಹೇಳಿದ್ದರು. ಶಿಷ್ಯನು ತಾನೂ ಪಂಡಿತನೆಂದು ಭಾವಿಸಿದನು. ಹಾದಿಯಲ್ಲಿ ಹೋಗುತ್ತಿದ್ದಾಗ ಮದಿಸಿದ ಆನೆಯೊಂದು ಎದುರಾಗಿ ಬಂದಿತು. ಮಾವಟಿಗನು ಹಿಂದೆ ಸರಿಯುವಂತೆ ಹೇಳಿದನು. ಗುರುಗಳು ಹೇಳಿದ್ದ ಪಾಠ ವಿನ್ನೂ ಶಿಷ್ಯನ ಸ್ಮೃತಿಯಲ್ಲಿ ಚೆನ್ನಾಗಿ ಉಳಿದಿತ್ತು. ತಾನೂ ಬ್ರಹ್ಮ ; ಆನೆಯೂ ಬ್ರಹ್ಮ. ನಾವಿಬ್ಬರೂ ಒಂದೇ ಎಂದು ಭಾವಿಸಿ ಅಲ್ಲಿಯೇ ಶಿಷ್ಯನು ನಿಂತುಕೊಂಡ. ಆನೆಯು ಅವನನ್ನು ತನ್ನ ಸೊಂಡಿಲಿನಿಂದ ಎತ್ತಿ ದೂರಕ್ಕೆ ಎಸೆಯಿತು. ಗಾಯಗೊಂಡ ಶಿಷ್ಯನನ್ನು ಕನಿಕರದಿಂದ ಗುರುಗಳು ಪ್ರಶ್ನಿಸಿದರು: 'ಆನೆಯು ಬರುತ್ತಿದ್ದಾಗ ಹಾದಿಯಲ್ಲೇಕೆ ನಿಂತುಕೊಂಡೆ?'

ಶಿಷ್ಯನು ಒಡನೆಯೇ ಉತ್ತರಕೊಟ್ಟನು. **'ಪಣ್ಡಿತಾಃ ಸಮದರ್ಶಿನಃ'** 'ನಾನೂ ಬ್ರಹ್ಮ. ಆನೆಯನ್ನೂ ಬ್ರಹ್ಮವೆಂದೇ ಭಾವಿಸಿದೆನು.'

'ಅದು ಸರಿ ; ಆನೆಯ ಮೇಲಿದ್ದ ಮಾವಟಿಗನೆಂಬ ಬ್ರಹ್ಮನ ಮಾತನ್ನೇಕೆ ನೀನು ಕೇಳಲಿಲ್ಲ?'

ಶಿಷ್ಯನು ನಿರುತ್ತರನಾದನು.

ಸಾಧು, ಚೋರ, ಹುಲಿ–ಇವರ ಹೃದಯಾಂತರಾಳದಲ್ಲಿರುವ ನಾರಾ ಯಣನಿಗೆ ಜ್ಞಾನಿಯು ನಮಸ್ಕರಿಸಿದರೂ ವ್ಯವಹಾರದಲ್ಲಿ ಸಾಧುವಿನೊಡನೆ ಸೌಜನ್ಯವಾದ ವ್ಯವಹಾರವನ್ನು ನಡೆಸುತ್ತಾನೆ. ಕಳ್ಳನೊಡನೆ ಜಾಗರೂಕತೆ ಯಿಂದಿರುತ್ತಾನೆ. ಹುಲಿರಾಯನ ಹತ್ತಿರಕ್ಕೂ ಹೋಗದೇ ಅವನು ಪಂಜರ

ದಲ್ಲಿದ್ದಾಗ ದೂರದಿಂದಲೇ ದರ್ಶನಮಾಡುತ್ತಾನೆ. ಹೀಗೆ ವರ್ತಿಸಬೇಕಾದುದು ಅನಿವಾರ್ಯ. ಜ್ಞಾನಿಗೆ ಸಮದರ್ಶಿತ್ವವು ಸಾಧ್ಯ. ಸಮವರ್ತಿತ್ವವು ಸಾಧ್ಯವಿಲ್ಲ. ಆದರೆ ವ್ಯವಹಾರದಲ್ಲಿ ವ್ಯತ್ಯಾಸವಾಗಿ ನಡೆಯಬೇಕಾದುದು ಅನಿವಾರ್ಯವಾದರೂ ಆತ್ಮಜ್ಞಾನಿಯ ದೃಷ್ಟಿಯಲ್ಲಿ ಸರ್ವತ್ರ ಸಮಭಾವವಿರುತ್ತದೆ.

**ಪಣ್ಡಿತಾಃ ಸಮದರ್ಶಿನಃ** ಎಂಬುದಕ್ಕೆ **ಸಮಂ ಏಕಂ ಅವಿಕ್ರಿಯಂ ಬ್ರಹ್ಮದೃಷ್ಟುಂ ಶೀಲಂ ಯೇಷಾಂ ತೇ ಪಣ್ಡಿತಾಃ ಸಮದರ್ಶಿನಃ** ಎಂದು ಶ್ರೀಶಂಕರರು ಭಾಷ್ಯಮಾಡಿರುತ್ತಾರೆ. 'ಸಮವನ್ನು' ಎಂದರೆ ಒಂದೇ ಆಗಿ ಯಾವ ವಿಕಾರವೂ ಇಲ್ಲದೇ ಇರುವ ಬ್ರಹ್ಮವನ್ನು ಕಾಣುವ ಸ್ವಭಾವವು ಯಾರದೋ ಆ ಪಂಡಿತರು ಸಮದರ್ಶಿಗಳಾಗಿರುವರು.

ಪಂಡಿತರು (ಆತ್ಮಯಾಥಾರ್ಥ್ಯವನ್ನರಿತವರು) ವಿದ್ಯಾ-ವಿನಯ ಸಂಪನ್ನನಲ್ಲಿ ಬ್ರಹ್ಮಜಾತಿಯವನಲ್ಲಿ ; ಹಸು, ಆನೆ, ನಾಯಿ, ಶ್ವಪಚ ಮುಂತಾದ ವಿಷಮಾಕಾರಗಳೆಂದು ತೋರಿಬರುವ ಆತ್ಮಗಳಲ್ಲಿ ಸಮವನ್ನೇ ನೋಡುತ್ತಾರೆ. ಎಲ್ಲವೂ ಜ್ಞಾನಾಕಾರವೆಂದು ಸಮಭಾವದಿಂದ ನೋಡು ತ್ತಾರೆ. ವಿಷಮಾಕಾರವು ಪ್ರಕೃತಿಯದು. ಆತ್ಮನಾದರೋ ಎಲ್ಲೆಡೆಗಳಲ್ಲಿಯೂ ಕೇವಲ ಜ್ಞಾನಾಕಾರನಾಗಿರುವುದರಿಂದ ಸಮನೆಂದು ನೋಡುತ್ತಾರೆ.

(ರಾ.ಭಾ.)

'ಪರಮೇಶ್ವರನ ಸ್ವರೂಪಗಳು ಎಲ್ಲೆಲ್ಲಿಯೂ ಎಲ್ಲದರಲ್ಲಿಯೂ ಸಮ' ಎಂಬ ಸಾಮ್ಯದರ್ಶನವನ್ನು ಮಾಡುವುದು ಅಪರೋಕ್ಷಜ್ಞಾನಕ್ಕೆ ಸಾಧನ– ಎಂಬ ಆಶಯದಿಂದ ಈ ಶ್ಲೋಕವು ಹೇಳಲ್ಪಟ್ಟಿದೆ.

**ಪರಮೇಶ್ವರಸ್ವರೂಪಾಣಾಂ ಸರ್ವತ್ರ ಸಾಮ್ಯದರ್ಶನಂ ಚ ।**
**ಅಪರೋಕ್ಷಜ್ಞಾನಸಾಧನಂ ಇತ್ಯಾಶಯವಾನಾಹ ।**

ಬ್ರಾಹ್ಮಣ ಮುಂತಾದವರಲ್ಲಿರುವ ಪರಮೇಶ್ವರಸ್ವರೂಪಗಳಲ್ಲಿ ಎಲ್ಲೆಡೆಗಳಲ್ಲಿಯೂ ದೋಷಾಭಾವಗಳಲ್ಲಿ ಸಾಮ್ಯವನ್ನು ತಾರತಮ್ಯವಿಲ್ಲದೇ ಇರುವಿಕೆಯನ್ನು ನೋಡುತ್ತಾರೆ.

ಪಂಡಿತಶಬ್ದವು ಪರೋಕ್ಷಜ್ಞಾನವನ್ನು ಹೇಳುತ್ತದೆ. **ಪಾಂಡಿತ್ಯಮಾಗಮಜ್ಞಾನಂ** ಎಂಬ ವಚನದಂತೆ.) (ಶ್ರೀಟೀಕಾಚಾರ್ಯರು)

**ಓಂ ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ |**
**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ||**

ಯಾರ ಮನಸ್ಸು ಸಾಮ್ಯದಲ್ಲಿ ಸಮಭಾವದಲ್ಲಿ (ಬ್ರಹ್ಮದಲ್ಲಿ) ನಿಂತಿರುವುದೋ ಅವರು ಸರ್ಗವನ್ನು (ಜನ್ಮವನ್ನು) ಇಲ್ಲಿಯೇ ಜಯಿಸಿದವರಾಗುತ್ತಾರೆ. ಬ್ರಹ್ಮವು ದೋಷರಹಿತವಾದುದು ಮತ್ತು ಸಮವಾದುದು– ಅಲ್ಲವೇ? ಆದುದರಿಂದ ಅವರು ಬ್ರಹ್ಮದಲ್ಲಿಯೇ ಇರುತ್ತಿರುವರು.

* * *

(ಸರ್ವಭೂತಗಳಲ್ಲಿಯೂ ಸಮಭಾವದಿಂದ ಉಪಸ್ಥಿತನಾಗಿರುವ ಬ್ರಹ್ಮನಲ್ಲಿ ಯಾರ ಮನಸ್ಸು ಪ್ರತಿಷ್ಠಿತವಾಗಿರುವುದೋ ಅವರು ಜನನ-ಮರಣಾದಿಗಳನ್ನು ಇಲ್ಲಿಯೇ (ಜೀವಂತರಾಗಿರುವಾಗಲೇ) ಜಯಿಸಿದವರು– ಎಂದು ತಿಳಿಯಬೇಕು. ಬ್ರಹ್ಮವು ನಾಯಿ, ಶ್ವಪಾಕ ಮುಂತಾದ ದೋಷ ವುಳ್ಳದ್ದು ಎಂದು ಮೂಢರು ಅದನ್ನು ಭಾವಿಸಬಹುದು. ಆದರೆ ಅದಕ್ಕೆ ಆ ದೋಷಗಳ ಸ್ಪರ್ಶವೇ ಇಲ್ಲ. ದೋಷರಹಿತವಾದ ಅದು ಏಕವೂ ಮತ್ತು ಸರ್ವಸಮವೂ ಆಗಿದೆ. ಆದುದರಿಂದ ಅಂತಹ ಬ್ರಹ್ಮದಲ್ಲಿ ನೆಲೆಗೊಂಡ ಮಹಾತ್ಮರನ್ನು ದೋಷಗಂಧವೂ ಕೂಡ ಮುಟ್ಟಲಾರದು.

ವಿದ್ಯುತ್ತಿನ ದೀಪಗಳು ಅನೇಕ ಬಣ್ಣಗಳಿಂದ ಕೂಡಿರಬಹುದು. ಕೆಲವು ದೀಪಗಳು ಹೆಚ್ಚು ಪ್ರಕಾಶಮಾನವಾಗಿಯೂ ಮತ್ತೆ ಕೆಲವು ದೀಪಗಳು ಕಡಿಮೆ ಪ್ರಕಾಶವುಳ್ಳದ್ದಾಗಿಯೂ ಇರಬಹುದು. ಆದರೆ ವಿದ್ಯುತ್ತಿನಲ್ಲಿ ಯಾವ ದೋಷವೂ ಇಲ್ಲ. ಅದು ಎಲ್ಲದರ ಮೇಲೂ ಪ್ರವಹಿಸುತ್ತದೆ. ಬೆಳಗುವ ದೀಪದಲ್ಲಿ (ಉಪಾಧಿಯಲ್ಲಿ) ತಾರತಮ್ಯಗಳಿರುತ್ತವೆ. ಸೂರ್ಯನ ಬೆಳಕು ಅರಮನೆಯ ಮೇಲೂ ಬೀಳುತ್ತದೆ. ಬಡವನ ಮನೆಯ ಮೇಲೂ ಬೀಳುತ್ತದೆ. ಚರಂಡಿಯಲ್ಲೂ ಬೀಳುತ್ತದೆ. ಸೂರ್ಯನ ಕಿರಣಗಳಿಗೆ ಯಾವ ತಾರತಮ್ಯವೂ ಇಲ್ಲ. ಉಪಾಧಿಗಳು ಸೂರ್ಯನ ಕಾಂತಿಯನ್ನು ಪ್ರತಿಬಿಂಬಿಸುವುದರಲ್ಲಿ ಹೆಚ್ಚು-ಕಡಿಮೆಯನ್ನು ನಾವು ನೋಡುತ್ತೇವೆ. ಇದು ಉಪಾಧಿಯ ದೋಷವೇ ಹೊರತು ಸೂರ್ಯಕಿರಣದ ದೋಷವಲ್ಲ. ಸೂರ್ಯನ ಬೆಳಕು ನೆಲದ ಮೇಲೆ ಬೀಳುವುದು, ನೀರಿನ ಮೇಲೆ ಬೀಳುವುದು, ಕನ್ನಡಿಯ ಮೇಲೆ ಬೀಳುವುದು. ಇಲ್ಲಿ ಬೆಳಕಿನ ಪ್ರತಿಬಿಂಬಗಳು ಒಂದಕ್ಕಿಂತ ಮತ್ತೊಂದ

ರಲ್ಲಿ ಹೆಚ್ಚಾಗಿ ಕಂಡರೂ ಇದು ಸೂರ್ಯನ ಕಿರಣಗಳ ದೋಷವಲ್ಲ. ಉಪಾಧಿಯ ದೋಷ. ಉಪಾಧಿಸಹಿತವಾಗಿ ನೋಡಿದರೆ–'ಇದು ನಾಯಿ, ಇವನು ಶ್ವಪಾಕ, ಇವನು ಪಂಡಿತ'–ಎಂಬ ಭೇದಭಾವನೆಯುಂಟಾಗುತ್ತದೆ. ದೇಹಾತ್ಮಬುದ್ಧಿಯಿರುವವನು ಉಪಾಧಿಯೊಡನೆ ನೋಡಿ ಎಲ್ಲದರಲ್ಲಿಯೂ ಭೇದವನ್ನೇ ಕಾಣುತ್ತಾನೆ. ಆತ್ಮಜ್ಞಾನಿಯು ಉಪಾಧಿರಹಿತನಾದ ಆತ್ಮನನ್ನು ಎಲ್ಲದರಲ್ಲಿಯೂ ಕಂಡು **ಸರ್ವಂ** ಖಲ್ವಿದಂ ಬ್ರಹ್ಮ ಎನ್ನುತ್ತಾನೆ. ಸರ್ವ ಸಮವಾದ ಬ್ರಹ್ಮವು ಯಾವಾಗಲೂ ದೋಷರಹಿತವಾದುದರಿಂದ ಜ್ಞಾನಿ ಗಳಾದವರು ಯಾವಾಗಲೂ ಬ್ರಹ್ಮಭಾವದಲ್ಲಿಯೇ ಇದ್ದುಬಿಡುತ್ತಾರೆ. ಅವರಿಗೆ ಯಾವ ದೋಷವೂ ಇಲ್ಲ.

ಮೇಲೆ ಹೇಳಿದಂತೆ ಎಲ್ಲ ಆತ್ಮಗಳಲ್ಲಿಯೂ ಯಾರ ಮನಸ್ಸು ಸಾಮ್ಯ ಭಾವದಲ್ಲಿದೆಯೋ ಅವರು ಸಾಧನಾನುಷ್ಠಾನದೆಶೆಯಲ್ಲಿಯೇ ಸಂಸಾರವನ್ನು ಗೆದ್ದರೆಂದು ತಿಳಿಯಬೇಕು. ಪ್ರಕೃತಿಸಂಬಂಧದೋಷವು ಇಲ್ಲವಾದುದರಿಂದ ಸಮವಾಗಿರುವ ಆತ್ಮವಸ್ತುವೇ ಬ್ರಹ್ಮವಲ್ಲವೇ? ಆತ್ಮಸಾಮ್ಯದಲ್ಲಿ ಇದ್ದರೆ ಅವರು ಬ್ರಹ್ಮದಲ್ಲಿ ಇದ್ದಂತೆಯೇ. ಬ್ರಹ್ಮನಲ್ಲಿ ಇರುವಿಕೆಯೇ ಸಂಸಾರದ ಜಯವು. ಆದುದರಿಂದ ಆತ್ಮಗಳಲ್ಲಿ ಕೇವಲ ಜ್ಞಾನಾಕಾರವಾಗಿ ಸಾಮ್ಯವನ್ನು ಅನುಸಂಧಾನಮಾಡುವವರು ಮುಕ್ತರೇ ಎಂದು ತಿಳಿಯಬೇಕು. (ಇಲ್ಲಿ ಬ್ರಹ್ಮಶಬ್ದವು ಶುದ್ಧಾತ್ಮವನ್ನು ಹೇಳುತ್ತದೆ.) (ಶ್ರೀವೇದಾಂತದೇಶಿಕರು)

ಹಿಂದೆ ಹೇಳಿದ ಸಾಮ್ಯದರ್ಶನವು ಅಪರೋಕ್ಷಜ್ಞಾನಕ್ಕೆ ಸಾಧನ–ಎಂಬ ವಿಷಯವನ್ನೇ ಇಲ್ಲಿ ಸ್ತುತಿಸಿದೆ. ಅಂತಹ ಸಮದರ್ಶನವುಳ್ಳವರು ಈ ದೇಹ ದಲ್ಲಿದ್ದರೂ ಮುಕ್ತರೇ ಎಂದು ಸ್ತೋತ್ರಮಾಡಿದೆ.) (ಮ.ಭಾ.)

**ಓಂ ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ಪ್ರಾಪ್ಯ ಚಾಪ್ರಿಯಮ್ ।**
**ಸ್ಥಿರಬುದ್ಧಿರಸಂಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ॥೨೦॥**

ಪ್ರಿಯವಸ್ತುವನ್ನು ಪಡೆದು ಸಂತುಷ್ಟನಾಗಬಾರದು. ಅಪ್ರಿಯವಸ್ತುವನ್ನು ಪಡೆದು ಉದ್ವಿಗ್ನನೂ ಆಗಬಾರದು. ಸ್ಥಿರಬುದ್ಧಿಯುಳ್ಳವನಾಗಿ, ಮೋಹವರ್ಜಿತನಾಗಿ, ಬ್ರಹ್ಮಜ್ಞಾನಿಯಾಗಿ ಬ್ರಹ್ಮದಲ್ಲಿ ನೆಲೆಗೊಳ್ಳಬೇಕು.

* * *

(ಮನಸ್ಸು, ಬುದ್ಧಿ, ಇಂದ್ರಿಯಗಳಿಗೆ ಯಾವುದು ಅನುಕೂಲವಾಗಿ ಕಾಣುವುದೋ ಅದನ್ನು ಜನಸಾಮಾನ್ಯರು ಪ್ರಿಯವೆನ್ನುವರು. ಅದು ದೊರಕಿದಾಗ ಹಿಗ್ಗುವರು. ಹಾಗೆಯೇ ಇಂದ್ರಿಯಗಳಿಗೆ ಬೇಡದ ಅನಿಷ್ಟ ವಸ್ತುವಿನ ಸಮಾಗಮವಾದಾಗ ಕುಗ್ಗಿಹೋಗುವರು. ಆದರೆ ವಿವೇಕಿಯು ಇವುಗಳಿಗೆ ಒಳಗಾಗಬಾರದು. ಈ ಪ್ರಿಯ ಮತ್ತು ಅಪ್ರಿಯಗಳು ವಿಷಮ ವಾದ ಪ್ರಕೃತಿಸಂಬಂಧದಿಂದ ಬಂದವುಗಳು. ನಿರ್ದೋಷವೂ ಸಮವೂ ಆದ ಬ್ರಹ್ಮವೇ ಎಲ್ಲದರಲ್ಲೂ ಇದೆ. ಎಲ್ಲ ಆತ್ಮಗಳೂ ಜ್ಞಾನಸ್ವರೂಪ. ಅಲ್ಲಿ ಪ್ರಿಯ-ಅಪ್ರಿಯಗಳ ವಿಭಾಗವೇ ಇಲ್ಲ. ಆದುದರಿಂದ ಸಮವೂ ನಿರ್ದೋಷವೂ ಆದ ಆತ್ಮನಲ್ಲಿ ಸ್ಥಿರವೂ ಸಂಶಯರಹಿತವೂ ಆದ ಬುದ್ಧಿಯುಳ್ಳವನಾಗಬೇಕು. ಮೋಹರಹಿತನಾಗಬೇಕು. ಬ್ರಹ್ಮಜ್ಞಾನಿಯಾಗಿ ಬ್ರಹ್ಮನಲ್ಲಿ ನೆಲೆಗೊಳ್ಳಬೇಕು.

ದೇಹಮಾತ್ರದಲ್ಲಿ ಆತ್ಮಬುದ್ಧಿಯುಳ್ಳವರಿಗೆ ಪ್ರಿಯ-ಅಪ್ರಿಯಗಳ ಪ್ರಾಪ್ತಿಯು ಹರ್ಷವನ್ನೂ-ಶೋಕವನ್ನೂ ಉಂಟುಮಾಡುತ್ತದೆ. ನಿರುಪಾಧಿಕವಾದ ಆತ್ಮಸಾಕ್ಷಾತ್ಕಾರವುಳ್ಳವನಿಗೆ ಅವು ಹರ್ಷ-ವಿಷಾದಗಳನ್ನು ಉಂಟುಮಾಡುವುದಿಲ್ಲ. ಅವನಿಗೆ ಪ್ರಿಯಾಪ್ರಿಯಗಳ ಪ್ರಾಪ್ತಿಯು ಒದಗುವ ಸಂಭವವೇ ಇಲ್ಲ. (ಶಂ.ಭಾ.)

'ಕರ್ಮಯೋಗಿಯು ಯಾವ ರೀತಿಯಲ್ಲಿದ್ದರೆ ಅವನಿಗೆ ಸಮದರ್ಶನ ರೂಪವಾದ ಜ್ಞಾನಪರಿಪಾಕವುಂಟಾಗುತ್ತದೆ.?'–ಎಂಬ ಪ್ರಕಾರವನ್ನು ಇಲ್ಲಿ ಭಗವಂತನು ಉಪದೇಶಿಸುತ್ತಾನೆ.

ಪ್ರಿಯಾಪ್ರಿಯಗಳು ಒದಗಿದಾಗ ಆತನು ಹರ್ಷೋದ್ವೇಗಗಳನ್ನು ಹೊಂದಬಾರದು. ಅದಕ್ಕಾಗಿ ಸ್ಥಿರನಾದ ಆತ್ಮನಲ್ಲಿ ಬುದ್ಧಿಯುಳ್ಳವನಾಗಬೇಕು. ಅಸ್ಥಿರವಾದ ಶರೀರದೊಡನೆ ಸ್ಥಿರನಾದ ಆತ್ಮನನ್ನು ಒಂದಾಗಿ ಭಾವಿಸುವ ಮೋಹವನ್ನು ತೊರೆಯಬೇಕು. ಅದಕ್ಕಾಗಿ ಉಪದೇಶದಿಂದ ಬ್ರಹ್ಮಜ್ಞಾನವನ್ನು ಪಡೆದು ಬ್ರಹ್ಮಾಭ್ಯಾಸವುಳ್ಳವನಾಗಿರಬೇಕು.

ತತ್ತ್ವಜ್ಞರೂ ಉಪದೇಶದಿಂದ ಆತ್ಮಯಾಥಾರ್ಥ್ಯಜ್ಞಾನವನ್ನು ಪಡೆದು ಅದರಲ್ಲೇ ಪ್ರಯತ್ನಮಾಡುತ್ತಾ, ದೇಹಾತ್ಮಾಭಿಮಾನವನ್ನು ತೊರೆದು, ಸ್ಥಿರ ರೂಪವಾದ ಆತ್ಮಾವಲೋಕನವೆಂಬ ಆನಂದವನ್ನು ( ಪ್ರಿಯವನ್ನು ) ಅನು

ಭವಿಸುತ್ತಿರಬೇಕು. ಅದರಲ್ಲಿ ನೆಲೆಗೊಂಡು ಅಸ್ಥಿರವೂ ಪ್ರಾಕೃತವೂ ಆದ ಪ್ರಿಯಾಪ್ರಿಯಗಳು ಒದಗಿದಾಗ ಹರ್ಷೋದ್ವೇಗಗಳಿಗೆ ವಶನಾಗಬಾರದು.

(ರಾ.ಭಾ.)

ನ ಪ್ರಹೃಷ್ಯೇತ್ ಎಂಬ ಶ್ಲೋಕವು ಸಂನ್ಯಾಸವನ್ನು ವಿವರಿಸುತ್ತದೆ.

(ಮ.ಭಾ.)

ಈ ಅಧ್ಯಾಯದ ಉಳಿದ ಶ್ಲೋಕಗಳು ಸಂನ್ಯಾಸಯೋಗ ಮತ್ತು ಜ್ಞಾನ ಯೋಗಗಳನ್ನು ಸೇರಿಸಿ ವಿಸ್ತಾರಪಡಿಸುತ್ತವೆ.)

**ಓಂ ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿನ್ದತ್ಯಾತ್ಮನಿ ಯತ್ಸುಖಮ್ ।**
**ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯಮಶ್ನುತೇ ॥೨೧॥**

ಹೊರಗಿನ ಸ್ಪರ್ಶಗಳಲ್ಲಿ (ಸುಖಗಳಲ್ಲಿ) ಆಸಕ್ತವಾದ ಅಂತಃಕರಣ ವುಳ್ಳವನಾಗಿ ಸುಖವೆಂಬುದು ಯಾವುದೋ ಅದನ್ನು ಆತ್ಮನಲ್ಲಿಯೇ ಪಡೆದು ಕೊಳ್ಳುತ್ತಾನೆ. ಬ್ರಹ್ಮಯೋಗದಿಂದ ಕೂಡಿದ ಆತ್ಮವುಳ್ಳ ಅವನು ಅಕ್ಷಯವಾದ ಸುಖವನ್ನು ಹೊಂದುತ್ತಾನೆ.

* * *

(ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳು ಬಾಹ್ಯಸ್ಪರ್ಶಗಳು. ಇವುಗಳಲ್ಲಿ ಆಸಕ್ತಿಯಿಲ್ಲದೇ ಇರತಕ್ಕವನು ಅರ್ಥಾತ್ ಬಾಹ್ಯವಿಷಯಗಳಲ್ಲಿ ಆಸಕ್ತಿಯಿಲ್ಲದ ಅಂತಃಕರಣವುಳ್ಳವನು–ಆತ್ಮನಲ್ಲಿ ; ಆತ್ಮದರ್ಶನದಲ್ಲಿ ಅಂತಹ ಅನಿ ರ್ವಾಚ್ಯವಾದ, ಅಕ್ಷಯವಾದ, ಅವರ್ಣನೀಯವಾದ ಸುಖವಿದೆಯೆಂಬುದನ್ನು ಅರಿತುಕೊಳ್ಳುತ್ತಾನೆ. ಬಾಹ್ಯಸ್ಪರ್ಶಸುಖ ಅಥವಾ ಬಾಹ್ಯಸುಖವು ಕ್ಷಣಿಕ ವಾದುದು. ಮೇಲಾಗಿ ಅನ್ಯಾಶ್ರಯವಾದುದು. ಚಿರೋಟಿಯನ್ನು ತಿನ್ನಲು ಬಯಸುತ್ತೇವೆ. ನಾವು ಬಯಸಿದೊಡನೆಯೇ ಅದು ಸಿದ್ಧವಾಗಿಬಿಡುವುದಿಲ್ಲ. ಅದಕ್ಕೆ ಇತರರನ್ನೇ ಆಶ್ರಯಿಸಬೇಕು. ಒಂದು ವೇಳೆ ನಮ್ಮ ಬಯಕೆಯಂತೆ ಸಿದ್ಧವಾಯಿತು ಎಂದು ಇಟ್ಟುಕೊಳ್ಳೋಣ. ಎರಡನ್ನು ತಿನ್ನುತ್ತೇವೆ. ಮೂರನೆ ಯದು ಬೇಡವಾಗುತ್ತದೆ. ಚಿರೋಟಿಯನ್ನು ತಿನ್ನುವುದು ನಮಗೆ ತಾತ್ಕಾಲಿಕ ವಾಗಿ ಸುಖವಾಗಿ ಕಂಡುಬಂದರೂ ಅದನ್ನು ಒಮ್ಮೆಯೇ ಹೆಚ್ಚು ತಿನ್ನುವ ಸಾಧ್ಯತೆಯಿಲ್ಲ. ಹೆಚ್ಚು ತಿಂದರೆ ಅಜೀರ್ಣವಾಗುತ್ತದೆ. ಇದು ಅದರ ಗುಣ-ದೋಷಗಳ ಮತ್ತು ಸುಖದ ಪರಿಮಿತಿ. ಇವುಗಳು ನಮಗೆ ತಿಳಿದಿದ್ದರೂ

ಸಹ ನಾವದನ್ನು ಪದೇ ಪದೇ ಬಯಸುತ್ತೇವೆ. ಈ ನಮ್ಮ ಆಶೆಯನ್ನು ಪೂರೈಸಿಕೊಳ್ಳಲು ನಾವು ವಿಷಯಗಳ ಗುಲಾಮರಾಗುತ್ತೇವೆ. ಆದರೆ ಬಾಹ್ಯ ಸ್ಪರ್ಶದಲ್ಲಿ ಅನಾಸಕ್ತರಾದವರ ವಿಷಯವು ಹಾಗಲ್ಲ. ಅನಾಸಕ್ತಿಯುಂಟಾಗಲು ಬಹಳ ಕಷ್ಟಪಡಬೇಕಾಗುವುದೆಂಬುದೇನೋ ನಿಜ. ಬಾಹ್ಯಸುಖದಲ್ಲಿ ಅನಾಸಕ್ತಿಯುಂಟಾಗಿ ಆತ್ಮದರ್ಶನದ ಸಾಧನೆಗೆ ಪ್ರಾರಂಭಿಸಿದರೆ ಆ ಸುಖವು ಎಷ್ಟೆಂಬುದು ಸಾಧಕನಿಗೆ ಮಾತ್ರವೇ ತಿಳಿಯತಕ್ಕ ವಿಷಯವಾಗಿದೆ.

ಪ್ರಾಪಂಚಿಕಸುಖವು ಕೇವಲ ಆಭಾಸಮಾತ್ರವೆಂಬುದನ್ನು ಅವನು ಬಲುಬೇಗ ಮನಗಾಣುತ್ತಾನೆ. ಆತ್ಮಾನಂದವು ಸಾಕೆನ್ನಿಸುವುದಿಲ್ಲ. ಅನು ಭವಿಸಿದಷ್ಟೂ ಆನಂದವಾಗುತ್ತಿರುತ್ತದೆಯೇ ಹೊರತು ಪ್ರಾಪಂಚಿಕಸುಖದಂತೆ ಹೇವರಿಕೆಯುಂಟಾಗುವುದಿಲ್ಲ ಅಥವಾ ಹೆಚ್ಚು ಅನುಭವಿಸಿದ್ದರಿಂದ ಅಜೀರ್ಣವುಂಟಾಗುವುದಿಲ್ಲ. ಆತ್ಮರತಿಯಾದವನು ಆತ್ಮವಿಯೋಗವನ್ನೇ ಸಹಿಸಿಕೊಳ್ಳಲಾರನು. ಬ್ರಹ್ಮಸಮಾಧಿಯಲ್ಲಿಯೇ ಯುಕ್ತವಾದ, ಸಮಾಸಕ್ತ ವಾದ, ಏಕಾಗ್ರವಾದ ಬುದ್ಧಿಯುಳ್ಳ ಬ್ರಹ್ಮಜ್ಞಾನಿಯು ಕ್ಷಯವೇ ಇಲ್ಲದ ಅನಂತವಾದ, ಅನಿರ್ಬಾಧವಾದ ಸುಖವನ್ನು ಪಡೆಯುತ್ತಾನೆ.

ಆದುದರಿಂದ ಆತ್ಮದರ್ಶನದಲ್ಲಿರುವ ಅಕ್ಷಯಸುಖವನ್ನು ಬಯಸು ವವನು ಬಾಹ್ಯಸ್ಪರ್ಶಗಳಿಂದ ಪ್ರಾಪ್ತವಾಗುವ ಕ್ಷಣಿಕಸುಖಗಳಿಂದ ಇಂದ್ರಿಯ ಗಳನ್ನು ಹಿಮ್ಮೆಟ್ಟಿಸಬೇಕು.

**ಬ್ರಹ್ಮಯೋಗಯುಕ್ತಾತ್ಮಾ** = ಬ್ರಹ್ಮದಲ್ಲಿ ಸಮಾಧಿಯೇ ಯೋಗ. ಅದರಲ್ಲಿ ಸಮಾಹಿತನಾಗಿ ಅದರಲ್ಲಿ ತೊಡಗಿದ ಅಂತಃಕರಣವುಳ್ಳವನು.

(ಶಂ.ಭಾ.)

**ಬ್ರಹ್ಮ...ಅಶ್ನುತೇ** ಬ್ರಹ್ಮಾಭ್ಯಾಸದಲ್ಲಿ ಯುಕ್ತವಾದ ಮನಸ್ಸುಳ್ಳವನು ಬ್ರಹ್ಮಾನುಭವರೂಪವಾದ ಅಕ್ಷಯಸುಖವನ್ನು ಹೊಂದುತ್ತಾನೆ.

**ಬಾಹ್ಯಸ್ಪರ್ಶೇಷು** = ಆತ್ಮವ್ಯತಿರಿಕ್ತವಾದ ವಿಷಯಾನುಭವಗಳಲ್ಲಿ.

(ರಾ.ಭಾ.)

ಮತ್ತೆ ಯೋಗದ ಆಧಿಕ್ಯವನ್ನು ಈ ಶ್ಲೋಕದಲ್ಲಿ ಸ್ಪಷ್ಟಪಡಿಸ ಲಾಗಿದೆ. ಬ್ರಹ್ಮಯೋಗಃ = ಬ್ರಹ್ಮವಿಷಯವಾದ ಯೋಗ ಬ್ರಹ್ಮವಿಷಯಃ

**ಯೋಗಃ ಧ್ಯಾನ ಮುಂತಾದುವುಗಳಿಂದ ಯುಕ್ತನಾದರೆ ಮಾತ್ರವೇ ಅಕ್ಷಯವಾದ ಆತ್ಮಸುಖ. ಇಲ್ಲದಿದ್ದರೆ ಇಲ್ಲ.**

**ಧ್ಯಾನಾದಿ ಯುಕ್ತಸ್ಯೈವ ಆತ್ಮಸುಖಂ ಅಕ್ಷಯಂ ಅನ್ಯಥಾ ನ ಇತ್ಯರ್ಥಃ)**
**(ಮ.ಭಾ.)**

**ಓಂ ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।**
**ಆದ್ಯನ್ತವನ್ತಃ ಕೌನ್ತೇಯ ನ ತೇಷು ರಮತೇ ಬುಧಃ ॥೨೨॥**

ಕೌಂತೇಯ! ಯಾವ ಭೋಗಗಳು ವಿಷಯೇಂದ್ರಿಯಸಂಸ್ಪರ್ಶದಿಂದ ಉಂಟಾಗುವುವೋ ಅವುಗಳೆಲ್ಲವೂ ದುಃಖಕ್ಕೇ ಕಾರಣವಾಗತಕ್ಕುವುಗಳೇ ಆಗಿವೆ. ಅವು ಆದಿ ಮತ್ತು ಅಂತ್ಯ ಎಂಬುದಿರತಕ್ಕುವುಗಳು. (ಮೊದಲು ಕೊನೆಗಳುಳ್ಳವುಗಳು.) ಆದುದರಿಂದ ಅಂತಹ ಸುಖದಲ್ಲಿ ಪಂಡಿತನಾದವನು ರಮಿಸುವುದಿಲ್ಲ.

* * *

(ಪ್ರಪಂಚದ ಭೋಗಗಳೆಲ್ಲವೂ ಸಂಸ್ಪರ್ಶದಿಂದ ಉಂಟಾಗತಕ್ಕುವು ಗಳು. ನಮ್ಮಲ್ಲಿರುವ ಇಂದ್ರಿಯಗಳಿಗೂ–ಹೊರಗಡೆ ಇರುವ ಇಂದ್ರಿಯಾರ್ಥ ಗಳಿಗೂ ಉಂಟಾಗುವ ಸಂಸ್ಪರ್ಶದಿಂದ (ಮಿಲನದಿಂದ) ಆಗತಕ್ಕುವುಗಳು. ಮಾವಿನಹಣ್ಣು ಬಹಿರಂಗದಲ್ಲಿರುವ ವಸ್ತು. ಅದು ನಾಲಿಗೆಗೆ ಸ್ಪರ್ಶವಾಗು ವುದೇ ಭೋಗ. ಇದೇ ರೀತಿಯಲ್ಲಿ ಪ್ರತಿಯೊಂದು ಇಂದ್ರಿಯವೂ ತನಗೆ ಬೇಕಾದುದನ್ನು ಕೇಳುತ್ತಲೇ ಇರುತ್ತದೆ. ಅದನ್ನು ಕಷ್ಟದಿಂದಲಾದರೂ ಸಂಪಾ ದಿಸಿ ಆಯಾ ಇಂದ್ರಿಯಗಳಿಗೆ ಒದಗಿಸಿಕೊಡುವುದೇ ಭೋಗ. ಭೋಗಗಳನ್ನೇ ದುಃಖಕ್ಕೆ ಉಗಮಸ್ಥಾನಗಳೆಂದು ಶ್ರೀಕೃಷ್ಣನು ಹೇಳುತ್ತಾನೆ.

ಮನುಷ್ಯನು ತನ್ನ ಸುಖಕ್ಕೆಂದೇ ಭಾವಿಸಿ ಇಂದ್ರಿಯಗಳನ್ನು ತೃಪ್ತಿ ಪಡಿಸುವಾಗ ಅವುಗಳು ದುಃಖಕ್ಕೆ ಹೇಗೆ ಉಗಮಸ್ಥಾನಗಳಾಗುತ್ತವೆ? ಇಂದ್ರಿಯಗಳ ಚಾಪಲ್ಯವನ್ನು ತಡೆಯುವುದು ಅಸಾಧ್ಯ. ಉದಾಹರಣೆಗೆ : ಕಾಫಿ ಮುಂತಾದ ಉತ್ತೇಜಕವಾದ ಪಾನೀಯಗಳನ್ನು ಕುಡಿಯುವ ಚಟವು ಪ್ರಾರಂಭವಾಗುತ್ತದೆ. ಮನಸ್ಸಿಗೆ ಉತ್ತೇಜನವನ್ನು ಕೊಡುತ್ತದೆಂಬ ಭ್ರಮೆಯಿಂದ ಮನುಷ್ಯನು ಅದನ್ನು ಕುಡಿಯಲು ಪ್ರಾರಂಭಿಸುತ್ತಾನೆ. ಒಂದು ದಿವಸ ಆ ಪಾನೀಯವಿಲ್ಲದಿದ್ದರೂ ತಲೆನೋವು ಪ್ರಾರಂಭವಾಗು

ತ್ತದೆ. ಅದರಿಂದ ಶರೀರದಲ್ಲಿ ಅನೇಕರೋಗಗಳೂ ಹುಟ್ಟಿಕೊಳ್ಳುತ್ತವೆ. ಮದ್ಯಪಾನವೂ ಇಂತಹುದೇ ಒಂದು ಚಟ. ಕುಡಿಯಲು ಪ್ರಾರಂಭಿಸಿಬಿಟ್ಟರೆ ಬಿಡಲು ಸಾಧ್ಯವೇ ಆಗುವುದಿಲ್ಲ. ಸುಖಕ್ಕೆಂದು ಕುಡಿಯಲು ಪ್ರಾರಂಭಿಸಿದ ವಸ್ತುವು ಅಸುಖಕ್ಕೆ ಕಾರಣವಾಗುತ್ತದೆ. ಹೀಗೆಯೇ ಸ್ತ್ರೀಲಂಪಟತ್ವವೇ ಮುಂತಾದ ವಿಷಯೋಪಭೋಗಗಳೂ ಮನುಷ್ಯನ ದುಃಖಕ್ಕೇ ಕಾರಣ ಗಳಾಗುತ್ತವೆ. ಮೇಲಾಗಿ ಈ ಸುಖಗಳಿಗೆ ಆದಿ ಎಂಬುದು ಇದೆ. ಅಂತ್ಯ ವೆಂಬುದೂ ಇದೆ. ಇವು ಶಾಶ್ವತಸುಖಗಳಲ್ಲ. ಕ್ಷಣಿಕಸುಖಗಳು. ಸ್ವರ್ಗ ಸುಖವೇ ಆದರೂ ಅದೂ ಸಹ ಅಂತ್ಯವುಳ್ಳದ್ದಾಗಿರುತ್ತದೆ. ಯದ್ಯಪಿ ಇಂದ್ರಿಯಸುಖಗಳು ಕ್ಷಣಕಾಲದ್ದೇ ಆದರೂ ಆ ಸುಖದ ಮುದ್ರೆಯು ಮನಸ್ಸಿನಲ್ಲಿ ಅಚ್ಚೊತ್ತಿದ್ದು ಅಂತಹ ಸುಖವನ್ನು ಪದೇ-ಪದೇ ಅನುಭವಿಸ ಬೇಕೆಂದು ಇಂದ್ರಿಯಗಳು ತವಕಿಸುತ್ತಿರುತ್ತವೆ. ಇಂದ್ರಿಯಪಟುತ್ವವು ಕಡಿಮೆ ಯಾದರೂ ಚಾಪಲ್ಯವು ಮಾತ್ರ ಹೋಗಿರುವುದಿಲ್ಲ. ಶಾಶ್ವತವಾದ ಶ್ರೇಷ್ಠ ವಾದ ಆತ್ಮಾನಂದಸುಖವನ್ನು ಕಂಡುಕೊಂಡಿರುವ ಪಂಡಿತನು ಇಂತಹ ಕ್ಷಣಿಕವಾದ ಮತ್ತು ದುಃಖಕ್ಕೆ ಕಾರಣವಾದ ವಿಷಯೋಪಭೋಗಗಳಲ್ಲಿ ಆಸಕ್ತನಾಗುವುದಿಲ್ಲ.

ಸಂಸ್ಪರ್ಶದಿಂದ ಉಂಟಾಗುವ ಭೋಗಗಳು ಅವಿದ್ಯೆಯಿಂದ ಉಂಟಾ ಗಿರುವುದರಿಂದ ಅವು ದುಃಖಕ್ಕೆ ಕಾರಣಗಳು. ಏಕೆಂದರೆ : ಆಧ್ಯಾತ್ಮಿಕವೇ ಮುಂತಾದ ಮುಬ್ಬಗೆಯ ದುಃಖಗಳು ಅವಿದ್ಯೆಯಿಂದಲೇ ಉಂಟಾಗುತ್ತವೆ. ಶ್ಲೋಕದಲ್ಲಿರುವ ಏವ ಎಂಬ ಪದವು ಆ ಭೋಗಗಳು ಇಹಲೋಕದಲ್ಲಿ **ಹೇಗೋ ಹಾಗೆಯೇ ಪರಲೋಕದಲ್ಲಿಯೂ ಕೂಡ ದುಃಖಕ್ಕೆ ಕಾರಣಗಳು** ಎಂಬುದನ್ನು ಸೂಚಿಸುತ್ತದೆ. ಪಶು ಮುಂತಾದುವುಗಳಿಗೆ ಹೇಗೋ ಹಾಗೆ ಅತ್ಯಂತಮೂಢರಿಗೆ ಮಾತ್ರವೇ ವಿಷಯಗಳಲ್ಲಿ ರತಿಯುಂಟಾಗು ತ್ತದೆ. (ಶಂ.ಭಾ.)

**ದುಃಖಯೋನಯಃ** = ಪರಿಣಾಮದಲ್ಲಿ ದುಃಖವನ್ನುಂಟುಮಾಡ ತಕ್ಕುವುಗಳು. **ದುಃಖೋದರ್ಕಾಃ ।**

**ಆದ್ಯನ್ತವನ್ತಃ** = ಅಲ್ಪಕಾಲ ಇರತಕ್ಕುವುಗಳು. (ರಾ.ಭಾ.)

ಸಂನ್ಯಾಸಕ್ಕೋಸ್ಕರ ಇಲ್ಲಿ ಕಾಮಭೋಗವನ್ನು ನಿಂದಿಸಲಾಗಿದೆ. ಸಂನ್ಯಾಸಾರ್ಥಂ ಕಾಮಭೋಗಂ ನಿನ್ದಯತಿ ॥ ) (ಮ.ಭಾ.)

**ಓಂ ಶಕ್ನೋತೀಹೈವ ಯಃ ಸೋಢುಂ ಪ್ರಾಕ್ಶರೀರವಿಮೋಕ್ಷಣಾತ್ ।**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥**

ಈ ಶರೀರದಿಂದ ಬಿಡುಗಡೆಯಾಗುವ ಮೊದಲೇ ಯಾವಾತನು ಕಾಮ ಮತ್ತು ಕ್ರೋಧಗಳಿಂದ ಉಂಟಾಗುವ ವೇಗವನ್ನು ಸಹಿಸಿಕೊಳ್ಳಲು ಸಮರ್ಥನಾಗುತ್ತಾನೆಯೋ–ಅವನೇ ಯುಕ್ತನು (ಯೋಗಯುಕ್ತನು) ಮತ್ತು ಸುಖಿಯು.

* * *

(ಸಾಯುವ ಮೊದಲೇ ಕಾಮ-ಕ್ರೋಧಗಳ ವೇಗವನ್ನು ತಡೆಹಿಡಿಯಬೇಕೆಂದು ಇಲ್ಲಿ ಶ್ರೀಕೃಷ್ಣನು ಹೇಳುತ್ತಾನೆ. ಸಾಯುವ ಮೊದಲೆಂದರೆ ವಯಸ್ಸಾದ ಮೇಲಲ್ಲ. ವಯಸ್ಸಾದವನಿಗೆ ಯದ್ಯಪಿ ಚಾಪಲ್ಯವಿದ್ದರೂ ಅವನ ಇಂದ್ರಿಯಗಳು ಪಟುತ್ವವಿಲ್ಲದೇ ಇರುವುದರಿಂದ ಕುಗ್ಗಿಬಿಟ್ಟಿರುತ್ತವೆ. ಮೇಲಾಗಿ ಆ ಸಮಯದಲ್ಲಿ ಅವನ ಕೋಪವೂ ಸಹ ಪ್ರಯೋಜನಕಾರಿಯಾಗುವುದಿಲ್ಲ. ಆದುದರಿಂದ ಇಳಿವಯಸ್ಸಿನಲ್ಲೇ ಕಾಮ-ಕ್ರೋಧಗಳನ್ನು ತ್ಯಜಿಸಬೇಕೆಂಬ ಅರ್ಥವಲ್ಲ. ಶರೀರವಿಮೋಕ್ಷಣವು ಯಾವಾಗ ಬೇಕಾದರೂ ಆಗಬಹುದು. ವಯಸ್ಸಾದ ಮೇಲೆ ಸಾವು-ಎಂಬುದು ಸ್ವಾಭಾವಿಕವಾಗಿದ್ದರೂ ಎಲ್ಲರಿಗೂ ಅದಕ್ಕಿಂತ ಮೊದಲೇ ಸಾವು ಬರಬಾರದೆಂಬ ನಿಯಮವೇನೂ ಇಲ್ಲ. ಆದುದರಿಂದ ಶರೀರವನ್ನೇ ಅಶಾಶ್ವತವೆಂದು ದೃಢಪಡಿಸಿಕೊಂಡು, ಸಾವು ಯಾವ ನಿಮಿಷದಲ್ಲಾದರೂ ಬರಬಹುದೆಂಬ ತತ್ತ್ವವನ್ನು ಸ್ಮರಿಸಿ, ಕಾಮ-ಕ್ರೋಧಗಳ ವೇಗವು ಹುಟ್ಟಿಕೊಳ್ಳುವ ಯೌವನದಲ್ಲಿ ಅವುಗಳನ್ನು ತಡೆಯಲು ಯತ್ನಿಸಬೇಕೆಂಬುದು ಇಲ್ಲಿಯ ಅಭಿಪ್ರಾಯ. ಕಟ್ಟೆಯಲ್ಲಿರುವ ನೀರೆಲ್ಲವೂ ಹರಿದು ಹೋದ ಮೇಲೆ ತೂಬುಹಾಕಿ ಪ್ರಯೋಜನವಿಲ್ಲ. ನೀರು ಮೇಲಿನಿಂದ ವೇಗವಾಗಿ ಬಂದು ಸಂಗ್ರಹವಾಗುತ್ತಿರುವಾಗ ತೂಬುಹಾಕಿ ನೀರನ್ನು ಸಂಗ್ರಹಿಸಿ ಅನಂತರ ಯಥಾಯೋಗ್ಯವಾಗಿ ಅದನ್ನು ಬಳಸಿಕೊಳ್ಳಬಹುದು. ಅದರಂತೆಯೇ ಯೌವನದಲ್ಲಿ ಇಂದ್ರಿಯಗಳಿನ್ನೂ ಬಲಿಷ್ಠವಾಗಿರುವಾಗ ಅವುಗಳನ್ನು ನಿಗ್ರಹಿಸುವ ಅಭ್ಯಾಸಮಾಡಿ ಅದೇ ಇಂದ್ರಿಯಗಳನ್ನು

ಪರಮಾತ್ಮನ ಕಡೆಗೆ ತಿರುಗಿಸಬೇಕು. ಇಂದ್ರಿಯಗಳಿಗೆ ಪಟುತ್ವವಿರುವಾಗಲೇ ಅವುಗಳನ್ನು ಸೆಳೆದು ಅಂತರ್ಮಾರ್ಗದಲ್ಲಿ ಪ್ರವಹಿಸಲು ಬಿಟ್ಟರೆ ಆತ್ಮದರ್ಶನದ ಸಾಧನೆಗೆ ಅವುಗಳೇ ಸಹಕಾರ ನೀಡುವುವು. ಮೇಲಾಗಿ 'ಶರೀರ ಮೋಕ್ಷಣೆಗೆ ಮೊದಲೇ ಕಾಮ-ಕ್ರೋಧಗಳ ವೇಗವನ್ನು ತಡೆಯಬೇಕು. ತಡೆಯಲು ಅಭ್ಯಾಸಮಾಡಬೇಕು' ಎಂಬ ಅಭಿಪ್ರಾಯವು ಶ್ರೀಕೃಷ್ಣನದು. ಅರ್ಥಾತ್ ಈ ಮನುಷ್ಯಜನ್ಮದಲ್ಲಿಯೇ ಸಾಧನೆಯನ್ನು ಮಾಡಬೇಕು. ನಾವೀಗ ಸ್ವಲ್ಪವಾದರೂ ಸಾಧನೆಯನ್ನು ಮಾಡದಿದ್ದರೆ ಮುಂದೆ ಮನುಷ್ಯಜನ್ಮವು ಸಿಕ್ಕುವುದೆಂಬ ಭರವಸೆಯಿಲ್ಲ. ಮನುಷ್ಯಜನ್ಮವಲ್ಲದೇ ಬೇರೆ ಯಾವ ಜನ್ಮದಲ್ಲಿಯೂ ಮೋಕ್ಷಸಾಧನೆಯು ಸುಲಭಸಾಧ್ಯವಲ್ಲ.

**ಇಹ ಚೇದವೇದೀದಥ ಸತ್ಯಮಸ್ತಿ ।**
**ನ ಚೇದಿಹಾವೇದೀನ್ಮಹತೀ ವಿನಷ್ಟಿಃ ॥**

ಅಧಿಕಾರಿಯಾದ ಮನುಷ್ಯನು ಇಲ್ಲಿಯೇ ಅರಿತುಕೊಂಡರೆ (ಆತ್ಮಜ್ಞಾನವನ್ನು ಪಡೆದುಕೊಂಡರೆ) ಪರಮಾರ್ಥವಾದ ಸತ್ಯವುಂಟು. ಇಲ್ಲಿ ಅರಿತುಕೊಳ್ಳದಿದ್ದರೆ ದೊಡ್ಡ ಹಾನಿಯೇ ಆಗುತ್ತದೆ.

ಆದುದರಿಂದ ಈ ಮನುಷ್ಯಜನ್ಮದಲ್ಲಿಯೇ ಆತ್ಮಸಾಕ್ಷಾತ್ಕಾರವನ್ನು ಸಾಧಿಸಿಕೊಳ್ಳಬೇಕು.

ಕಾಮ-ಕ್ರೋಧಗಳ ವೇಗವೆಂದು ಶ್ರೀಕೃಷ್ಣನು ಹೇಳುತ್ತಾನೆ. ಕಾಮದ ಮತ್ತು ಕ್ರೋಧದ ವೇಗವು ಎಷ್ಟೆಂಬುದು ಜನಸಾಮಾನ್ಯಕ್ಕೆ ತಿಳಿದಿದೆ. **ಕಾಮಾತುರಾಣಾಂ ನ ಭಯಂ ನ ಲಜ್ಜಾ**-ಕಾಮಾತುರರಾದವರಿಗೆ ಭಯವಾಗಲೀ–ಲಜ್ಜೆಯಾಗಲೀ ಇರುವುದಿಲ್ಲ. ಕಾಮ-ಕ್ರೋಧಗಳು ಒಂದೇ ನಾಣ್ಯದ ಎರಡು ಮುಖಗಳು. ಕಾಮಕ್ಕೆ ತಡೆಬಂತೆಂದರೆ ಕೋಪವುಂಟಾಗುತ್ತದೆ. ಇವುಗಳ ವೇಗವನ್ನು ಅನೇಕ ಋಷಿ-ಮುನಿಗಳೇ ತಡೆದುಕೊಳ್ಳಲು ಅಸಮರ್ಥರಾದರೆಂಬುದನ್ನು ನಾವು ಪುರಾಣಗಳಲ್ಲಿ ಓದಿದ್ದೇವೆ. ಶಾಪವೆಂಬುದೇ ಕ್ರೋಧದ ಮರಿ. ಅನೇಕಾನರ್ಥಗಳಿಗೆ ಕಾರಣವಾದುದು.

ಋಷಿಗಳಿಗೂ ಮತ್ತು ಮುನಿಗಳಿಗೂ ಕಾಮ-ಕ್ರೋಧಗಳ ವೇಗವನ್ನು ತಡೆದುಕೊಳ್ಳಲಾಗಲಿಲ್ಲವೆಂದು ನಾವು ನಿರಾಶರಾಗಬೇಕಾಗಿಲ್ಲ. ಅವುಗಳ ವೇಗವನ್ನು ತಡೆಯುವುದು ಅಭ್ಯಾಸದಿಂದ ; ಸಾಧನೆಯಿಂದ ಸಾಧ್ಯ.

ಕಾಮ-ಕ್ರೋಧಗಳ ವೇಗವನ್ನು ತಡೆದುಕೊಂಡವನೇ ಯೋಗಯುಕ್ತನು ಮತ್ತು ಸುಖಿಯು ಎನ್ನುತ್ತಾನೆ ಶ್ರೀಕೃಷ್ಣ.

**ಧನ್ಯಾಸ್ತೇ ಪುರುಷಶ್ರೇಷ್ಠಾಃ ಯೇ ಬುದ್ಧ್ಯಾ ಕೋಪಮುತ್ಥಿತಮ್ ।**
**ನಿರುನ್ಧನ್ತಿ ಮಹಾತ್ಮಾನೋ ದೀಪ್ತಮಗ್ನಿಮಿವಾಮ್ಭಸಾ ॥**

ಯಾರು ಹುಟ್ಟಿದ ಕೋಪವನ್ನು–ಉರಿಯುತ್ತಿರುವ ಅಗ್ನಿಯನ್ನು ನೀರಿನಿಂದ ಆರಿಸುವಂತೆ–ವಿವೇಕಬುದ್ಧಿಯಿಂದ ಉಪಶಮನಗೊಳಿಸುತ್ತಾರೆಯೋ ಅವರೇ ಮಹಾತ್ಮರು ಮತ್ತು ಧನ್ಯರು. **ನಾಶಾನಾಮಾಕರಃ ಕ್ರೋಧಃ ಆಶಾ ಪರಿಭವಾಕರಃ ।** ಕ್ರೋಧವು ನಾಶದ ಗಣಿಯೆಂದೂ–ಆಶೆಯು ತಿರಸ್ಕಾರಕ್ಕೆ ಗಣಿಯೆಂದೂ ಹೇಳುತ್ತಾರೆ.

ಜಿತೇಂದ್ರಿಯತ್ವವು ಆತ್ಮಸಾಕ್ಷಾತ್ಕಾರಕ್ಕೆ ಮೊದಲನೆಯ ಹೆಜ್ಜೆ. ಕೆಳಮುಖವಾಗಿ ರಭಸದಿಂದ ಹರಿದುಹೋಗುತ್ತಿರುವ ಇಂದ್ರಿಯಗಳನ್ನು ಮೇಲ್ಮುಖವಾಗಿ ಸೆಳೆದುಕೊಳ್ಳಬೇಕು. ಅವು ಹೋಗುತ್ತಿರುವಷ್ಟೇ ವೇಗದಿಂದ ಮೇಲಕ್ಕೆ ಸೆಳೆದುಕೊಳ್ಳಬೇಕು. ಇದು ಕಷ್ಟಸಾಧ್ಯವೆಂಬುದೇನೋ ನಿಜ. ಆದರೆ ಇದನ್ನು ಸಾಧಿಸಿದವನು ಪರಮಸುಖಿ. ಶಾಶ್ವತವಾದ ಸುಖವನ್ನನು ಭವಿಸತಕ್ಕವನು.

**ಶರೀರವಿಮೋಕ್ಷಣಾತ್ ಪ್ರಾಕ್** = ಶರೀರವನ್ನು ಬಿಡುವುದಕ್ಕೆ ಹಿಂದು ಹಿಂದಿನವರೆಗೂ ಮರಣಪರ್ಯಂತವಾಗಿಯೂ. (**ಆಮರಣಾತ್**) '**ಕಾಮ**' ಎಂದರೆ ಸುಖವನ್ನು ಕೊಡುವ ಯಾವುದಾದರೂ ಇಷ್ಟವಿಷಯವು ಇಂದ್ರಿಯಕ್ಕೆ ಗೋಚರವಾದಾಗ, ಕಿವಿಗೆ ಬಿದ್ದಾಗ ಅಥವಾ ನೆನಪಿಗೆ ಬಂದಾಗ ಅದನ್ನು ಪಡೆಯಬೇಕು–ಎಂಬ ಲಾಲಸೆ. ಕ್ರೋಧ ಎಂದರೆ ತನಗೆ ಪ್ರತಿಕೂಲವಾಗಿ ದುಃಖವನ್ನುಂಟುಮಾಡುವ ವಿಷಯಗಳನ್ನು ಕಂಡಾಗ, ಕೇಳಿದಾಗ ಅಥವಾ ನೆನೆದಾಗ ಅವುಗಳಲ್ಲಿ ಉಂಟಾಗುವ ದ್ವೇಷ. ಅವುಗಳಿಂದ ಉಂಟಾಗುವ ವೇಗವನ್ನು ಸಹಿಸಲು ಉತ್ಸಾಹವುಳ್ಳವನೇ ಈ ಸಂಸಾರದಲ್ಲಿ ಯೋಗೀ ಮತ್ತು ಸುಖೀ. (ಶಂ.ಭಾ.)

ಶರೀರವನ್ನು ತೊರೆಯುವುದಕ್ಕೆ ಮೊದಲು ಇಲ್ಲಿಯೇ ಸಾಧನೆ ಮತ್ತು ಅನುಷ್ಠಾನಗಳ ಸ್ಥಿತಿಯಲ್ಲಿಯೇ ಆತ್ಮಾನುಭಾವದಲ್ಲಿರುವ ಪ್ರೀತಿಯಿಂದ ಯಾವನು ಕಾಮ-ಕ್ರೋಧಗಳಿಂದುಂಟಾದ ವೇಗವನ್ನು ತಡೆಯಲು ಸಮರ್ಥ

ನಾಗುತ್ತಾನೆಯೋ ಅವನೇ ಯುಕ್ತನು. ಆತ್ಮಾನುಭವಕ್ಕೆ ಯೋಗ್ಯನು ಮತ್ತು ಸುಖಿಯು. ಶರೀರವು ಹೋದ ಮೇಲೆ ಉಂಟಾಗುವ ಆತ್ಮಾನುಭವೈಕ ಸುಖಿಯೂ ಆಗುವನು. (ರಾ.ಭಾ.)

ಕಾಮಭೋಗದ ಪರಿತ್ಯಾಗವನ್ನು ಇಲ್ಲಿ ಪ್ರಶಂಸೆಮಾಡಲಾಗಿದೆ. ಕಾಮ-ಕ್ರೋಧಗಳಿಂದ ಉಂಟಾದ ವೇಗವನ್ನು ಯಾವ ಮನುಷ್ಯನು ಶರೀರವನ್ನು ತ್ಯಜಿಸುವುದಕ್ಕೆ ಮೊದಲೇ ಸಹಿಸಲು ಸಮರ್ಥನಾಗುತ್ತಾನೆಯೋ ಅವನು ಯುಕ್ತ ಮತ್ತು ಸುಖಿ. ಮನುಷ್ಯಶರೀರದಲ್ಲಿ ಕಾಮ-ಕ್ರೋಧಗಳ ಆವೇಗವನ್ನು ತಡೆಯುವುದು ಸಾಧ್ಯ. ಉಳಿದ ಪ್ರಾಣಿಗಳ ಶರೀರಗಳಲ್ಲಿ ಅದು ದುಸ್ಸಾಧ್ಯ ಎಂದು ಭಾವ. ಬ್ರಹ್ಮಾದಿ ಲೋಕಗಳಾದರೋ ಕಾಮವನ್ನು ಜಯಿಸಿದವರಿಗೇ ಉಂಟಾಗುತ್ತದೆ.) (ಮ.ಭಾ.)

**ಓಂ ಯೋಽನ್ತಃಸುಖೋಽನ್ತರಾರಾಮಸ್ತಥಾನ್ತರ್ಜ್ಯೋತಿರೇವ ಯಃ ।**
**ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥೨೪॥**

ಯಾವನು ಅಂತಃಸುಖನಾಗಿರುವನೋ ಹಾಗೂ ಅಂತರಾರಾಮನಾಗಿರುವನೋ, ಅಂತರ್ಜ್ಯೋತಿಯಾಗಿರುವನೋ–ಆ ಯೋಗಿಯು ಬ್ರಹ್ಮಭೂತನಾಗಿ ಬ್ರಹ್ಮನಿರ್ವಾಣವನ್ನು ಪಡೆಯುವನು.

* * *

(ಯಾವನು ಅಂತಃಸುಖನೋ ಅವನು ಬ್ರಹ್ಮನಿರ್ವಾಣವನ್ನು ಪಡೆಯುತ್ತಾನೆ. ನಾವೆಲ್ಲರೂ ಬಹಿಃಸುಖರು. ಹೊರಗಿನ ವಿಷಯಗಳಿಂದ 'ಸುಖ' ಎಂಬುದನ್ನು ಪಡೆಯುತ್ತೇವೆ. ಪತ್ನೀ-ಪುತ್ರರಿಂದ, ಧನ-ಕನಕ-ವಸ್ತು-ವಾಹನಗಳಿಂದ, ಗೃಹಾರಾಮಗಳಿಂದ ಪಡೆಯುವ ಸುಖವು ಶಾಶ್ವತವಲ್ಲ. ಸ್ವಪ್ನದಂತೆ ಕ್ಷಣಿಕವಾದುದು.

ಅಂತಃಸುಖವು ವಸ್ತುಗತವಾದುದಲ್ಲ. ಯಾರ ಅವಲಂಬನೆಯೂ ಇಲ್ಲದೇ ಕೇವಲ ಗುರುವಿನ ದಿವ್ಯಾನುಗ್ರಹದಿಂದ ಪಡೆಯಬಹುದಾದ ಪರಮಶ್ರೇಷ್ಠವಾದ ಆತ್ಮಸುಖ. ಇದು ಹೊರಗೆ ಸಿಕ್ಕತಕ್ಕುದಲ್ಲ. ಹೃದಯ ಗುಹೆಯಲ್ಲಿ ಸಿಕ್ಕತಕ್ಕುದು. ವ್ಯವಸಾಯಾತ್ಮಿಕವಾದ ಬುದ್ಧಿಗೆ ಮಾತ್ರವೇ ಸಿಕ್ಕತಕ್ಕುದು. ಇಂತಹ ಅಂತಃಸುಖವನ್ನು ಪಡೆದಿರುವ ಆತ್ಮಜ್ಞಾನಿಯು ಬ್ರಹ್ಮನಿರ್ವಾಣವನ್ನು ಹೊಂದುತ್ತಾನೆ.

**ಅಂತರಾರಾಮಃ :** ನಾವೆಲ್ಲರೂ ಆರಾಮವನ್ನು ಬಯಸುವವರೇ ಆಗಿದ್ದೇವೆ. 'ಸ್ವಲ್ಪ ಆರಾಮವಾಗಿರಬೇಕಪ್ಪ ;' ಎಂದುಕೊಳ್ಳುತ್ತೇವೆ. ಆರಾಮ ವಾಗಿ ಸುತ್ತಾಡಲು ಹೋಗುತ್ತೇವೆ. ಆರಾಮ ಎಂಬ ಪದಕ್ಕೆ ಉದ್ಯಾನ, ಕೈದೋಟ, ಉಪವನ–ಎಂದೂ ಅರ್ಥವಾಗುತ್ತದೆ. **ಆರಮ್ಯತೇಽತ್ರ** ಎಂಬುದರಿಂದ ಕ್ರೀಡೆ ಅಥವಾ ಕ್ರೀಡೋದ್ಯಾನ ಎಂಬ ಅರ್ಥವೂ ಆಗುತ್ತದೆ. ಆದರೆ ನಾವು ಆಟಕ್ಕೆ ಹೋದರೆ ಅಥವಾ ಸುತ್ತಾಡಿದರೆ ನೆಮ್ಮದಿ ಇರುತ್ತದೆಯೇ? ಯಾವ ಕೆಲಸವನ್ನೂ ಮಾಡದೇ ಸುಮ್ಮನೆ ಕುಳಿತಿರ ಬಹುದು. ಆದರೆ ಮನಸ್ಸಿಗೆ ಮಾತ್ರ ಅದರಿಂದ ವಿಶ್ರಾಂತಿಯು ಸಿಕ್ಕುವುದಿಲ್ಲ. ಎದ್ದರೆ, ಕುಳಿತರೆ, ತಿರುಗಾಡಿದರೆ, ಮಲಗಿದರೂ ಸಹ ಮನಸ್ಸು ತನ್ನ ಪಾಡಿಗೆ ತಾನು ಏನೇನನ್ನೋ ಯೋಚಿಸುತ್ತಲೇ ಇರುತ್ತದೆ. ಸ್ವಪ್ನದಲ್ಲಿಯೂ ಮನಸ್ಸಿನ ಈ ಚಿತ್ರಗಳೇ ಹರಿದಾಡುವುವು. ಆದುದರಿಂದ ಈ ಹೊರಗಿನ ಆರಾಮದಿಂದ ಯಾವ ವಿಧವಾದ ವಿಶ್ರಾಂತಿಯೂ ಸಿಗದು. ಆತ್ಮಾರಾಮನಾಗಿರಬೇಕು. ಆತ್ಮಾವಲೋಕನಮಾಡುತ್ತಿದ್ದರೆ ಮನಸ್ಸು ಪ್ರಫುಲ್ಲಿತವಾಗುತ್ತದೆ. ರೋಮಾಂಚನವಾಗುತ್ತದೆ. ಆತ್ಮದೊಡನೆ ಸೇರಿ ಈ ವಿಧವಾದ ಕ್ರೀಡೆಯನ್ನಾಡಬೇಕು.

**ಆತ್ಮಕ್ರೀಡಃ ಆತ್ಮರತಿಃ ಕ್ರಿಯಾವಾನೇಷ ಬ್ರಹ್ಮವಿದಾಂ ವರಿಷ್ಠಃ** ಎಂಬ ಉಪನಿಷದ್ವಾಣಿಯನ್ನು ಇಲ್ಲಿ ಸ್ಮರಿಸಬಹುದು.

**ಅನ್ತರ್ಜ್ಯೋತಿಃ=** ನಾವೆಲ್ಲರೂ ಹೊರಗಡೆಯ ಸೂರ್ಯನನ್ನು ಮಾತ್ರ ಕಾಣುತ್ತಿದ್ದೇವೆ. ಹೊರಗಡೆಯ ಸೂರ್ಯನು ರಾತ್ರಿಯಲ್ಲಿ ನಮಗೆ ಕಾಣು ವುದಿಲ್ಲ. ಆತ್ಮಸೂರ್ಯನು ; ಆತ್ಮಜ್ಯೋತಿಯು ಸದಾಕಾಲದಲ್ಲಿಯೂ ದೇದೀಪ್ಯಮಾನವಾಗಿ ಪ್ರಕಾಶಿಸುತ್ತಾನೆ. ಅಂತರ್ಜ್ಯೋತಿಯನ್ನು ಎಲ್ಲರೂ ಕಾಣಲಾರರು. ಆತ್ಮಜ್ಞಾನಿಯು ಮಾತ್ರ ಈ ದಿವ್ಯಜ್ಯೋತಿಯನ್ನು ಅಂತ ರ್ದೃಷ್ಟಿಯಿಂದ ಕಂಡುಕೊಳ್ಳುತ್ತಾನೆ. ಈ ದಿವ್ಯಜ್ಯೋತಿಯನ್ನು ಭೌತವೈಜ್ಞಾ ನಿಕರು ಕಂಡುಕೊಳ್ಳಲಾರರು. ಇಂತಹ ದಿವ್ಯಜ್ಯೋತಿಯನ್ನು ನಮ್ಮ ಋಷಿ ಶ್ರೇಷ್ಠರು ಕಂಡುಕೊಂಡು ಆತ್ಮಾನಂದವನ್ನು ಪಡೆದು ನಮಗೂ ಸಹ ಶಾಸ್ತ್ರ ಗಳ ಮೂಲಕವಾಗಿ ಈ ದಿವ್ಯಜ್ಯೋತಿಯು ಇರುವುದೆಂಬುದನ್ನು ಹೇಳಿ ದ್ದಾರೆ. ಇಲ್ಲಿ ಶ್ರೀಕೃಷ್ಣನೂ ಸಹ ಈ ದಿವ್ಯರಹಸ್ಯವನ್ನು ಅರ್ಜುನನಿಗೆ ಹೇಳುವ

ನೆಪದಲ್ಲಿ ನಮ್ಮೆಲ್ಲರಿಗೂ ಹೇಳಿದ್ದಾನೆ. ಇದನ್ನು ಕಂಡುಕೊಳ್ಳಲು ಭಾರತೀಯ ರಾದ ನಾವೆಲ್ಲರೂ ಸತತವಾಗಿ ಪ್ರಯತ್ನಿಸಬೇಕು.

ಸಂಧ್ಯಾವಂದನೆಯೆಂಬ ಪರಮಪವಿತ್ರವಾದ ಮಹಾಯೋಗದಲ್ಲಿಯೂ ಈ ರಹಸ್ಯವನ್ನು ಬಿಚ್ಚಿ ಹೇಳಿದ್ದಾರೆ. ಗಾಯತ್ರೀಜಪಕ್ಕೆ ಮೊದಲು ಆತ್ಮಾನುಸಂಧಾನಮಾಡುವ ಪರಮಪವಿತ್ರವಾದ ಧ್ಯಾನಶ್ಲೋಕವಿದು :

**ಹೃದಯಕಮಲಮಧ್ಯೇ ದೀಪವದ್ವೇದಸಾರಂ**
**ಪ್ರಣವಮಯಮತರ್ಕ್ಯಂ ಯೋಗಿಹೃದ್ಧ್ಯಾನಗಮ್ಯಮ್ ।**
**ಹರಿಗುರುಶಿವಯೋಗಂ ಸರ್ವಭೂತಸ್ಥಮೇಕಂ**
**ಸಕೃದಪಿ ಮನಸಾ ವೈ ಚಿನ್ತಯೇದ್ಯಃ ಸ ಮುಕ್ತಃ ॥**

ಹೃದಯಕಮಲಮಧ್ಯದಲ್ಲಿರುವ, ಜ್ಯೋತಿಯಂತಿರುವ, ವೇದಸಾರ ನಾಗಿರುವ, ಓಂಕಾರಮಯನಾಗಿರುವ, ತರ್ಕಕ್ಕೆ ಸಿಕ್ಕದೇ ಯೋಗಿಗಳ ಹೃತ್ಪೂ ರ್ವಕವಾದ ಧ್ಯಾನಕ್ಕೆ ಮಾತ್ರವೇ ಗಮ್ಯನಾಗಿರುವ, ಹರಿ-ಗುರು-ಶಿವರೂಪ ನಾಗಿರುವ, ಸರ್ವಭೂತಗಳಲ್ಲಿಯೂ ಇರುವವನು ಒಬ್ಬನೇ ಆಗಿರುವ ಪರ ಮಾತ್ಮನನ್ನು ಯಾವನು ಕೇವಲ ಒಂದು ಬಾರಿಯಾದರೂ ಧ್ಯಾನಮಾಡು ತ್ತಾನೆಯೋ ಅವನು ಮುಕ್ತನಾಗುತ್ತಾನೆ.

ಗೀತೆಯ ಸಾರವನ್ನೇ ಮೇಲಿನ ಧ್ಯಾನಶ್ಲೋಕದಲ್ಲಿ ಹೇಳಿಬಿಟ್ಟಿದ್ದಾರೆ.

**ಹಿರಣ್ಮಯೇ ಪದೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಮ್ ।**
**ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಸ್ತದ್ಯದಾತ್ಮವಿದೋ ವಿದುಃ ॥**

—ಮುಂಡಕ ೨-೨

ಬುದ್ಧಿಯ ವಿಜ್ಞಾನದಿಂದ ಪ್ರಕಾಶಿಸುವ, ಹಿರಣ್ಮಯವೂ ಶ್ರೇಷ್ಠವೂ ಆದ ಹೃದಯಕೋಶದಲ್ಲಿ ಅವಿದ್ಯಾದಿ ಕಲ್ಮಶವಿಲ್ಲದ ಅವಯವವಿಲ್ಲದ ಬ್ರಹ್ಮವು ಇರುವುದು. ಅದು ಶುದ್ಧವೂ ಎಲ್ಲವನ್ನೂ ಪ್ರಕಾಶಿಸುವ ಅಗ್ನಿಯೇ ಮೊದಲಾದ ಜ್ಯೋತಿಗಳಿಗೆಲ್ಲಾ ಜ್ಯೋತಿಯೂ ಆಗಿರುವುದು. ಅಂತಹ ಪರಂಜ್ಯೋತಿಸ್ಸ್ವರೂಪವಾದ ಬ್ರಹ್ಮವನ್ನು ಆತ್ಮವಿದರು ತಿಳಿದಿರುತ್ತಾರೆ.

ಇಂತಹ ಅಂತರ್ಜ್ಯೋತಿಯು ಯಾವನಿಗಿರುವುದೋ ಅರ್ಥಾತ್ ಅಂತ ರ್ಜ್ಯೋತಿಯನ್ನು ಯಾವನು ದರ್ಶನಮಾಡಿದ್ದಾನೆಯೋ ಅಂತಹವನು ಬ್ರಹ್ಮ

ಭೂತನಾಗಿ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ಎಂಬ ಶ್ರುತಿವಚನದಂತೆ ಬ್ರಹ್ಮರೂಪವಾದ ಮೋಕ್ಷವನ್ನು ಹೊಂದುತ್ತಾನೆ.

**ಅನ್ತಃಸುಖಃ** = ಅಂತರಾತ್ಮದಲ್ಲಿ ಸುಖವುಳ್ಳವನು. **ಅಂತರಾ-ರಾಮಃ** = ಒಳಗೇ ಆತ್ಮನಲ್ಲಿ ಚೆನ್ನಾಗಿ ಕ್ರೀಡಿಸುವವನು. **ಅನ್ತರ್ಜ್ಯೋತಿಃ**= ಅಂತರಾತ್ಮವನ್ನೇ ಪ್ರಕಾಶವನ್ನಾಗಿ ಉಳ್ಳವನು. ಅಂತಹ ಯೋಗಿಯು ಜೀವಂತನಾಗಿರುವಾಗಲೇ ಬ್ರಹ್ಮಭೂತನಾಗಿ ಬ್ರಹ್ಮನಿರ್ವಾಣರೂಪವಾದ ಮೋಕ್ಷವನ್ನು ಹೊಂದುತ್ತಾನೆ. (ಶಂ.ಭಾ.)

**ಅನ್ತಃಸುಖಃ** = ಬಾಹ್ಯವಿಷಯಾನುಭವಗಳೆಲ್ಲವನ್ನೂ ಬಿಟ್ಟು ಆತ್ಮಾನುಭವವೊಂದರಲ್ಲೇ ಸುಖವುಳ್ಳವನು. **ಅನ್ತರಾರಾಮಃ** = ಆತ್ಮವೊಂದನ್ನೇ ಉದ್ಯಾನವನವನ್ನಾಗಿ ಹೊಂದಿರುವವನು. ತನ್ನ ಗುಣಗಳಿಂದ ಆತ್ಮವೊಂದೇ ಯಾವನ ಸುಖವನ್ನು ವೃದ್ಧಿಪಡಿಸುತ್ತದೆಯೋ ಅವನು. **ಅನ್ತರ್ಜ್ಯೋತಿಃ** = ಆತ್ಮೈಕಜ್ಞಾನವುಳ್ಳವನು. **ಬ್ರಹ್ಮನಿರ್ವಾಣಂ** = ಆತ್ಮಾನುಭವಸುಖವನ್ನು. (ರಾ.ಭಾ.)

**ಅನ್ತರಾರಾಮಃ**= ಆರಾಮ ಎಂದರೆ ಉದ್ಯಾನ. ಉದ್ಯಾನವು ಭೋಗಸ್ಥಾನ. ನೆರಳು, ಪಲ್ಲವ, ಪುಷ್ಪ, ಫಲ–ಮುಂತಾದ ತನ್ನ ಗುಣಗಳಿಂದ ಸುಖವನ್ನು ವೃದ್ಧಿಪಡಿಸುತ್ತದೆ. ಹಾಗೆಯೇ ಇಲ್ಲಿಯೂ ಆತ್ಮನು ಜ್ಞಾನ, ಆನಂದ–ಮುಂತಾದ ಗುಣಗಳಿಂದ ಸುಖವನ್ನು ವೃದ್ಧಿಪಡಿಸುವುದರಿಂದ ಅವನನ್ನು ಆರಾಮವೆಂದು ರೂಪಿಸಿದೆ. (ಶ್ರೀವೇದಾಂತದೇಶಿಕರು.)

ಈ ಮುಂದಿನ ಶ್ಲೋಕಗಳಿಂದ ಜ್ಞಾನಿಯ ಲಕ್ಷಣವನ್ನು ಭಗವಂತನು ವಿಸ್ತರಿಸುತ್ತಾನೆ. **ಅನ್ತರಾರಾಮಃ**–ಆರಾಮ ಎಂದರೆ ಇತರರ ದರ್ಶನ ಮುಂತಾದ ಕಾರಣದಿಂದ ಉಂಟಾಗುವ ಸುಖ. ಇಲ್ಲಾದರೋ ಪರಮಾತ್ಮನ ದರ್ಶನವೇ ಮುಂತಾದ ಕಾರಣಗಳಿಂದ ಉಂಟಾಗುವ ಸುಖ. ಸುಖವೆಂಬುದು ಉಪದ್ರವವು ನಾಶವಾದಾಗ ವ್ಯಕ್ತವಾಗುತ್ತದೆ. ಇಲ್ಲಿ ಕಾಮವೇ ಮುಂತಾದುವುಗಳನ್ನು ಗೆದ್ದಬಳಿಕ ಆತ್ಮಸುಖವು ವ್ಯಕ್ತವಾಗುತ್ತದೆ. **ಅನ್ತರ್ಜ್ಯೋತಿಃ** ಭಗವಂತನು ಸ್ವಯಂಜ್ಯೋತಿ. ಜ್ಞಾನಿಗೆ ಅವನು ವ್ಯಕ್ತನಾಗುವುದರಿಂದ ಅವನು ಅಂತರ್ಜ್ಯೋತಿ. ಭಗವಂತನು ಎಲ್ಲರಿಗೂ ಅಂತರ್ಜ್ಯೋತಿಯಾಗಿ

ದ್ದಾನೆ. ಆದರೆ ಜ್ಞಾನಿಗೆ ಅವನು ವ್ಯಕ್ತನಾಗುವುದರಿಂದ ವಿಶೇಷ. (ಜ್ಞಾನಿಗೆ ಆ ಪದವನ್ನು ವಿಶೇಷಣವನ್ನಾಗಿ ಹೇಳಿದೆ.)

ಅಸಂಪ್ರಜ್ಞಾತಸಮಾಧಿಯಲ್ಲಿರುವವರಿಗೆ ಹೊರಗಿನದು ಯಾವುದೂ ದರ್ಶನಕ್ಕೆ ಬರುವುದಿಲ್ಲ. ದರ್ಶನಕ್ಕೆ ಬಂದರೂ ಕಾರ್ಯಕಾರಿಯಾಗುವುದಿಲ್ಲ. ಅದಕ್ಕೋಸ್ಕರ ಶ್ಲೋಕದಲ್ಲಿ 'ಏವ' ಎಂಬ ಒತ್ತಿಹೇಳುವ ಶಬ್ದ.

**ದರ್ಶನಸ್ಪರ್ಶಸಂಭಾಷಾದ್ಯತ್ಸುಖಂ ಜಾಯತೇ ನೃಣಾಮ್ ।**
**ಆರಾಮಃ ಸ ತು ವಿಜ್ಞೇಯಃ ಸುಖಂ ಪಾಪಕ್ಷಯೋದಿತಮ್ ।**
**ಸ್ವಯಂಜ್ಯೋತಿಷ್ಟ್ವಾನ್ಮಹಾವಿಷ್ಣೋರನ್ತರ್ಜ್ಯೋತಿಃ ಸ ತತ್ಸ್ಥಿತಃ ॥**

ಬ್ರಹ್ಮಭೂತಃ ಎಂಬ ಪದವು ಅಂತಸ್ಸುಖತ್ವವೇ ಮುಂತಾದುವುಗಳಿಗೆ ಕಾರಣವನ್ನು ಹೇಳುತ್ತದೆ. ಬ್ರಹ್ಮಭೂತ ಎಂದರೆ ಬ್ರಹ್ಮದಲ್ಲಿ ಸತ್ತೆಯುಳ್ಳವನು. ಬ್ರಹ್ಮಣಿ ಭೂತಃ : ಹಾಗಿರುವುದರಿಂದಲೇ ಜ್ಞಾನಿಗೆ ಅಂತಃಸುಖತ್ವ ಮುಂತಾದುವುಗಳು.) (ಮ.ಭಾ.)

**ಓಂ ಲಭನ್ತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣಕಲ್ಮಷಾಃ ।**
**ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇ ರತಾಃ ॥೨೫॥**

ಪಾಪಗಳೆಲ್ಲವನ್ನೂ ಕಳೆದುಕೊಂಡು ಸಂಶಯಗಳೆಲ್ಲವನ್ನೂ ನಿವಾರಣೆ ಮಾಡಿಕೊಂಡು ಪ್ರಯತ್ನಶೀಲರಾಗಿ ಸರ್ವಪ್ರಾಣಿಗಳ ಹಿತದಲ್ಲಿಯೇ ಆಸಕ್ತ ರಾಗಿ ಇರತಕ್ಕ ಋಷಿಗಳು ಮೋಕ್ಷವನ್ನು ಪಡೆಯುವರು.

* * *

(ಋಷಿಗಳು ಕರ್ಮಯೋಗದಿಂದ ತಮ್ಮ ಪಾಪಗಳನ್ನೆಲ್ಲಾ ಕಳೆದು ಕೊಂಡಿರುತ್ತಾರೆ. ದ್ವೈಧ ಎಂದರೆ ಎರಡು ಬಗೆಯದು. ಡೋಲಾಯಮಾನ ವಾದ ಬುದ್ಧಿ. ಇದು ಸರಿಯೋ? ಅದು ಸರಿಯೋ?–ಎಂಬ ಸಂದೇಹ. ಇದನ್ನು ಸಂಪೂರ್ಣವಾಗಿ ಆತ್ಮಾನಾತ್ಮವಿವೇಕದಿಂದ ಅವರು ಕಳೆದು ಕೊಂಡಿರುತ್ತಾರೆ. ದ್ವೈಧಂ ಎಂದರೆ ದ್ವಂದ್ವಗಳೆಂದೂ ಆಗುತ್ತದೆ. ಶೀತೋಷ್ಣ, ಸುಖ-ದುಃಖ, ಮಾನಾಪಮಾನ, ಲಾಭಾಲಾಭ, ಜಯಾಪಜಯ–ಇತ್ಯಾದಿ ದ್ವಂದ್ವಗಳೆಲ್ಲವನ್ನೂ ದಾಟಿ ಸರ್ವಸಮತ್ವದಿಂದಿರುತ್ತಾರೆ. ಜಿತೇಂದ್ರಿಯರಾಗಿ ರುತ್ತಾರೆ. ಇಂದ್ರಿಯಗಳನ್ನೆಲ್ಲಾ ಆತ್ಮನಲ್ಲಿ ಲೀನಗೊಳಿಸಿಬಿಟ್ಟಿರುತ್ತಾರೆ. ಸರ್ವ

ಪ್ರಾಣಿಗಳ ಹಿತದಲ್ಲಿಯೂ ನಿರತರಾಗಿರುತ್ತಾರೆ. **'ಲೋಕಾಃ ಸಮಸ್ತಾಃ ಸುಖಿನೋ ಭವಂತು'** ಎಂದು ಆತ್ಮಾನುಗತವಾದ ಶುದ್ಧಮನಸ್ಸಿನಿಂದ ಭಾವಿಸಿ ಅದರಂತೆ ಆಚರಿಸುತ್ತಾರೆ. ಇವರ ಈ ವಾಕ್ಯವೇ ರಾಮಬಾಣದಂತೆ ಸಕಲಪ್ರಾಣಿಗಳ ಕಷ್ಟವನ್ನೂ ನಿವಾರಣೆಮಾಡಿ ಎಲ್ಲರಿಗೂ ಹಿತವನ್ನುಂಟು ಮಾಡುತ್ತದೆ. ಮಹಾತ್ಮರು ಆಡಿದಂತೆ ನಡೆದುಹೋಗಿರುವುದನ್ನು ನಾವು ಅನೇಕ ಸಾಧು-ಸಂತರ ಜೀವನಚರಿತ್ರೆಗಳಲ್ಲಿ ಓದಿದ್ದೇವೆ. ಅವರ ಒಂದು ದಿವ್ಯಾನುಗ್ರಹವೇ ಪ್ರಾಣಿಗಳ ಸಕಲಸುಖಕ್ಕೂ ಕಾರಣವಾಗುತ್ತದೆ. ಇಂತಹ ತತ್ತ್ವಾರ್ಥದರ್ಶಿಗಳಾದ ಋಷಿಗಳು ಈ ವಿಧವಾದ ಬ್ರಹ್ಮನಿರ್ವಾಣವನ್ನು ಪಡೆಯುತ್ತಾರೆ.

ಆತ್ಮಸಾಕ್ಷಾತ್ಕಾರವಾದನಂತರ, ಆ ಪರಾತ್ಪರವಸ್ತುವನ್ನು ಹೃದಯ ಕಮಲದಲ್ಲಿ ಕಂಡುಕೊಂಡನಂತರ ಏನಾಗುವುದೆಂಬುದನ್ನು ಮುಂಡಕದಲ್ಲಿ ಹೀಗೆ ಹೇಳಿದ್ದಾರೆ :

**ಭಿದ್ಯತೇ ಹೃದಯಗ್ರನ್ಥಿಃ ಛಿದ್ಯನ್ತೇ ಸರ್ವಸಂಶಯಾಃ ।**
**ಕ್ಷೀಯನ್ತೇ ಚಾಸ್ಯ ಕರ್ಮಾಣಿ ತಸ್ಮಿನ್ದೃಷ್ಟೇ ಪರಾವರೇ ॥೮॥**

—ಮುಂಡಕ-೨೨-೨

ಕಾರಣರೂಪದಿಂದ ಪರನೂ—ಕಾರ್ಯರೂಪದಿಂದ ಅಪರನೂ ಆದ ಬ್ರಹ್ಮನನ್ನು ಸಾಕ್ಷಾತ್ಕರಿಸಿಕೊಂಡಿದ್ದೇ ಆದರೆ (ಹೃದಯಕಮಲದಲ್ಲಿ ನೋಡಿದ್ದೇ ಆದರೆ) ಹೃದಯಗ್ರಂಥಿಯು (ಹೃದಯದ ಗಂಟು ; ಅಜ್ಞಾನವು) ನಾಶವಾಗುತ್ತದೆ. ಸರ್ವಸಂಶಯಗಳೂ ಚೂರು-ಚೂರಾಗಿ ಹೋಗುತ್ತವೆ. ಎಲ್ಲ ಕರ್ಮಗಳೂ (ಸಂಚಿತ ಮತ್ತು ಆಗಾಮಿಕರ್ಮಗಳು) ಕ್ಷೀಣಿಸಿ ಹೋಗುತ್ತವೆ.

ಛಿನ್ನದ್ವೈಧಾಃ = ಕ್ಷೀಣವಾದ ಸಂಶಯವುಳ್ಳವರು. (ಛಿನ್ನ ಸಂಶಯಾಃ) (ಶಂ.ಭಾ.)

ಛಿನ್ನದ್ವೈಧಾಃ = ಶೀತ-ಉಷ್ಣ ಮುಂತಾದ ದ್ವಂದ್ವಗಳಿಂದ ಬಿಡುಗಡೆ ಹೊಂದಿದವರು. (ರಾ.ಭಾ.)

ಛಿನ್ನದ್ವೈಧಾಃ=ಸಂಶಯ ಅಥವಾ ವಿಪರ್ಯಯವಿಲ್ಲದವರು. ದ್ವೇಧಾ ಭಾವಃ ದ್ವೈಧಂ ಸಂಶಯಃ ವಿಪರ್ಯಯೋ ವಾ (ಮ.ಭಾ.)

ಶ್ರೀಮಧ್ವಾಚಾರ್ಯರು **ಆಯತಾತ್ಮಾನಃ** ಎಂದು ಪದವಿಭಾಗಮಾಡಿ ದೀರ್ಘವಾದ ಮನಸ್ಸುಳ್ಳವರು ; ಸರ್ವಜ್ಞರು–ಎಂದು ಅರ್ಥಮಾಡುತ್ತಾರೆ.

ಬ್ರಹ್ಮನಿರ್ವಾಣವು ಪಾಪಕ್ಷಯದಿಂದ ಉಂಟಾಗುತ್ತದೆ–ಎಂದು ಈ ಶ್ಲೋಕದಲ್ಲಿ ಪ್ರತಿಪಾದಿಸಿದೆ. (ಮ.ಭಾ.)

**ಋಷಯಃ** = ದ್ರಷ್ಟಾರರು ; ಆತ್ಮಾವಲೋಕನಪರರಾದವರು.)

(ರಾ.ಭಾ.)

**ಓಂ ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್ ।**
**ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥೨೬॥**

ಕಾಮ-ಕ್ರೋಧಗಳಿಂದ ಬಿಡುಗಡೆಹೊಂದಿ ಜಿತಮನಸ್ಕರಾದ ಆತ್ಮವನ್ನು ತಿಳಿದಿರುವ ಯತಿಗಳಿಗೆ ಎಲ್ಲೆಲ್ಲಿಯೂ ಬ್ರಹ್ಮನಿರ್ವಾಣವಿರುತ್ತದೆ.

* * *

(ಶ್ರೀಕೃಷ್ಣನು ಹಿಂದಿನ ಶ್ಲೋಕದಲ್ಲಿ ಯತಾತ್ಮರಾದ (ಜಿತೇಂದ್ರಿಯರಾದ) ಋಷಿಗಳು ಎಂದು ಹೇಳಿ, ಈ ಶ್ಲೋಕದಲ್ಲಿ ಜಿತಮನಸ್ಕರಾದ ಯತಿಗಳು ಎಂದು ಹೇಳಿದ್ದಾರೆ. ನಾವು ಸಾಮಾನ್ಯವಾಗಿ ಯತಿಗಳು ಎಂದರೆ ಸಂನ್ಯಾಸಿಗಳು ಎಂದು ತಿಳಿಯುತ್ತೇವೆ. ಯತಿಶಬ್ದವು ಸಂನ್ಯಾಸೀ ಎಂಬ ಅರ್ಥದಲ್ಲಿ ರೂಢವಾಗಿದೆ. ಪ್ರಾಪಂಚಿಕವ್ಯವಹಾರಗಳನ್ನು ಬಿಟ್ಟು ಜಿತೇಂದ್ರಿಯರಾಗಿ ಆತ್ಮಪ್ರಯತ್ನಶೀಲರಾದ ಇತರ ಸಾಧುಗಳನ್ನೂ ಯತಿ ಎಂದು ಕರೆಯಬಹುದು. ಹಿಂದಿನ ಶ್ಲೋಕದಲ್ಲಿರುವ ಋಷಿಶಬ್ದಕ್ಕೆ ಯತಿಶಬ್ದವು ಪರ್ಯಾಯಪದವೆಂದು ಇಟ್ಟುಕೊಳ್ಳಬಹುದು. ಗತ್ಯರ್ಥದ ಋಷ್ ಧಾತು ವಿಗೆ ಭಾವಾರ್ಥವಾದ ಜ್ಞಾನ ಅಥವಾ ತತ್ತ್ವಾರ್ಥದರ್ಶನ ಎಂದೇ ಆಗುತ್ತದೆ.

ಒಬ್ಬ ವ್ಯಾಖ್ಯಾನಕಾರರು ಮಲ, ವಿಕ್ಷೇಪ ಮತ್ತು ಆವರಣ–ಈ ಮೂರೂ ಜ್ಞಾನಕ್ಕೆ ದೊಡ್ಡ ಪ್ರತಿಬಂಧಕಗಳೆಂದೂ, ಜ್ಞಾನದಲ್ಲಿ ಈ ಮೂರೂ ದೋಷಗಳ ಅಭಾವವಿರುತ್ತದೆಂದೂ ಹೇಳಿದ್ದಾರೆ. ಈ ಶ್ಲೋಕದಲ್ಲಿ ಬರುವ ಯತಿಶಬ್ದಕ್ಕೂ ಇದನ್ನು ಅನ್ವಯಿಸಿ **ಕಾಮಕ್ರೋಧವಿಯುಕ್ತಾನಾಂ** ಎಂದರೆ ಮಲದೋಷವರ್ಜಿತರಾಗಿರತಕ್ಕವರ ; **ಯತಚೇತಸಾಂ** ಎಂದರೆ

ವಿಕ್ಷೇಪದೋಷವರ್ಜಿತರಾಗಿರತಕ್ಕವರ ; ವಿದಿತಾತ್ಮನಾಂ ಆವರಣದೋಷ ವರ್ಜಿತರಾದ ಯತಿಗಳ ಎಂದು ವ್ಯಾಖ್ಯಾನಮಾಡಿರುತ್ತಾರೆ.

ಶ್ರೀಕೃಷ್ಣನು ಕಾಮ-ಕ್ರೋಧಗಳ ವಿಷಯವಾಗಿ ಹೆಜ್ಜೆ-ಹೆಜ್ಜೆಗೂ ಹೇಳುತ್ತಲೇ ಇರುತ್ತಾನೆ. ಕಾಮ, ಕಾಮಜನ್ಯವಾದ ಕ್ರೋಧ–ಇವುಗಳಿದ್ದುಬಿಟ್ಟರೆ ಯಾವ ಸಾಧನೆಯೂ ಆಗುವುದಿಲ್ಲ. ಈ ಎರಡರಿಂದ ಪ್ರಾಪಂಚಿಕವ್ಯವಹಾರಗಳೇ ಅಸ್ತವ್ಯಸ್ತವಾಗುತ್ತವೆ. ಕ್ರೋಧವೇ ಕಲಹಕ್ಕೆ ಮೂಲ. ಕಾಮವೇ ಸ್ವಾರ್ಥಕ್ಕೆ ಮೂಲ. ಕಾಮ-ಕ್ರೋಧಗಳ ಕಾರಣದಿಂದ ಅನೇಕ ಒಳ್ಳೆಯ ಕೆಲಸಗಳೂ ಕೆಟ್ಟುಹೋಗುತ್ತವೆ.

ಅಧ್ಯಾತ್ಮಮಾರ್ಗದಲ್ಲಂತೂ ಕಾಮ-ಕ್ರೋಧಗಳ ಸುಳಿವೇ ಇರಕೂಡದು. ತಪಸ್ಸಿನಿಂದ ಉನ್ನತಶಿಖರಕ್ಕೆ ಹತ್ತಿದ್ದವನೂ ಸಹ ಈ ಎರಡರ ಉಪಟಳದಿಂದಾಗಿ ಕೆಳಕ್ಕೆ ಬೀಳುತ್ತಾನೆ. ಪರಮೇಶ್ವರನ ತಪಸ್ಸನ್ನು ಕೆಡಿಸಲು ಕಾಮದೇವನೇ ಪಂಚಬಾಣಗಳನ್ನು ಹಿಡಿದು ಅವನೆದುರಾಗಿ ನಿಂತನು. ಮನುಷ್ಯನು ಅಧ್ಯಾತ್ಮಮಾರ್ಗವನ್ನು ಹಿಡಿಯುವುದು ದೇವತೆಗಳಿಗೂ ಇಷ್ಟವಿಲ್ಲ. ಆದುದರಿಂದ ಅವರೂ ಸಹ ಮನುಷ್ಯರಲ್ಲಿರುವ ಈ ಕಾಮ-ಕ್ರೋಧಗಳನ್ನೇ ಉದ್ಬೋಧಿಸಿ ಅಧ್ಯಾತ್ಮಮಾರ್ಗಕ್ಕೆ ತಡೆಯನ್ನುಂಟುಮಾಡುತ್ತಾರೆ. ವಿಶ್ವಾಮಿತ್ರನ ತಪಸ್ಸನ್ನು ದೇವತೆಗಳೇ ಸ್ತ್ರೀಮೂಲಕವಾದ ಪ್ರಲೋಭನೆಯಿಂದ ಕೆಡಿಸಿದರು.

ಶ್ರೀಶಂಕರರು ಭಜಗೋವಿಂದಸ್ತೋತ್ರದಲ್ಲಿಯೂ ಇದನ್ನೇ ಒತ್ತಿಯೊತ್ತಿ ಹೇಳಿದ್ದಾರೆ :

**ಕಾಮಂ ಕ್ರೋಧಂ ಲೋಭಂ ಮೋಹಂ**
**ತ್ಯಕ್ತ್ವಾತ್ಮಾನಂ ಭಾವಯ ಸೋಽಹಂ ।**
**ಆತ್ಮಜ್ಞಾನವಿಹೀನಾ ಮೂಢಾಃ**
**ತೇ ಪಚ್ಯನ್ತೇ ನರಕನಿಗೂಢಾಃ ॥೨೪॥**

ಕಾಮ, ಕ್ರೋಧ, ಲೋಭ, ಮೋಹ–ಇವುಗಳೆಲ್ಲವನ್ನೂ ಪರಿತ್ಯಜಿಸು. ಆತ್ಮಸ್ವರೂಪವನ್ನು ಕುರಿತು ಭಾವಿಸು (ಚಿಂತಿಸು.) 'ನಾನಾರು ?' ಎಂಬುದನ್ನು ವಿವೇಚಿಸಿ ನೋಡು. ಆತ್ಮಜ್ಞಾನದಿಂದ ವಿಹೀನರಾದ ಮೂಢರು ನರಕವೆಂಬ ಗುಡಾಣದಲ್ಲಿ ಸಿಕ್ಕಿ ಬೆಂದುಹೋಗುವರು.

ಕಾಮ-ಕ್ರೋಧಗಳು ಇಂತಹ ಬಲವಾದ ಶತ್ರುಗಳಾಗಿರುವಾಗ ಇವುಗಳಿಂದ ತಪ್ಪಿಸಿಕೊಳ್ಳುವವನು ನಿಜವಾಗಿಯೂ ಶ್ರೇಷ್ಠನೇ ಅಲ್ಲವೇ? ಅವನೇ ಯತಿ. ಯತಚೇತಸ್ಕರಿಗೆ ಮಾತ್ರವೇ ಕಾಮ-ಕ್ರೋಧಾದಿಗಳಿಂದ ಪಾರಾಗಲು ಸಾಧ್ಯ. ಯತ ಎಂದರೆ ತಡೆಹಿಡಿಯಲ್ಪಟ್ಟ, ಚೇತಸ್ಕರು ಎಂದರೆ ಮನಸ್ಸುಳ್ಳವರು. ಮನಸ್ಸೇ ಎಲ್ಲಕ್ಕೂ ಮೂಲ. ಬಂಧ ಮತ್ತು ಮೋಕ್ಷ–ಎರಡಕ್ಕೂ ಅದೇ ಕಾರಣ. ಅದು ಹಿಡಿತಕ್ಕೆ ಸಿಕ್ಕುವುದು ಬಹುಕಷ್ಟ. ಸಾಮಾನ್ಯವಾಗಿ ಎಲ್ಲರೂ ಆ ಮನಸ್ಸಿಗೇ ದಾಸರಾಗಿಬಿಟ್ಟಿರುತ್ತಾರೆ. ಸಾಮಾನ್ಯಮನುಷ್ಯನಿಗೆ ಸಾಯುವವರೆಗೂ ಮನಸ್ಸಿಗೆ ದಾಸರಾಗಿದ್ದೇವೆಂಬ ಅರಿವೇ ಆಗುವುದಿಲ್ಲ. ದೇಹಾತ್ಮಬುದ್ಧಿಯು ಬೆಳೆದುಬಿಟ್ಟಿರುವುದೇ ಇದಕ್ಕೆ ಮುಖ್ಯಕಾರಣ. ಇಂತಹ ಮನಸ್ಸನ್ನು ಪತ್ತೆಹಚ್ಚಿ ಅದನ್ನು ನಿಯಂತ್ರಿಸುವುದೆಂದರೆ ಸಾಮಾನ್ಯವಾದ ಕೆಲಸವಲ್ಲ. ಮನಸ್ಸು ಇಂದ್ರಿಯಗಳಿಗೆಲ್ಲಾ ಅಧಿಪತಿಯಾಗಿರುತ್ತದೆ. ಆದುದರಿಂದ ಮನಸ್ಸನ್ನು ಗೆದ್ದರೆ ಇಂದ್ರಿಯಗಳನ್ನು ಗೆದ್ದಂತೆಯೇ ಸರಿ. ಈ ರೀತಿಯಲ್ಲಿ ಮನಸ್ಸನ್ನು ಗೆದ್ದವರು ಮಾತ್ರವೇ ಕಾಮ-ಕ್ರೋಧಗಳಿಂದ ಪಾರಾಗಬಲ್ಲರು. ಜಿತಮನಸ್ಕರಾಗಬೇಕು. ತನ್ಮೂಲಕವಾಗಿ ಕಾಮ-ಕ್ರೋಧಗಳನ್ನು ವರ್ಜಿಸಬೇಕು. ಅನಂತರವೇ ಆತ್ಮಪರಿಜ್ಞಾನವಾಗುತ್ತದೆ. ಅದುವರೆಗೂ ಆತ್ಮವೆಂಬುದು ಕೇವಲ ನಾಮಮಾತ್ರವಾಗುತ್ತದೆ.

ವಿದಿತಾತ್ಮನಾಂ = ಆತ್ಮವನ್ನು ಅರಿತವರಾದ. ಆತ್ಮವನ್ನು ತಿಳಿಯುವುದೆಂದರೆ ಶಾಸ್ತ್ರಗಳ ಮತ್ತು ಗುರೂಪದೇಶದ ಮೂಲಕವೂ ಮತ್ತು ಅನುಭವದಿಂದಲೂ ಆತ್ಮಸ್ವರೂಪವನ್ನು ತಿಳಿದುಕೊಳ್ಳುವುದು.

ಬ್ರಹ್ಮನಿರ್ವಾಣಂ ಅಭಿತಃ ವರ್ತತೇ ಎಂಬುದಕ್ಕೆ ಶ್ರೀಶಂಕರರು ಹೀಗೆ ವ್ಯಾಖ್ಯಾನಮಾಡಿರುತ್ತಾರೆ : **ಅಭಿತಃ ಉಭಯತಃ ಜೀವತಾಂ ಮೃತಾನಾಂ ಚ ಬ್ರಹ್ಮನಿರ್ವಾಣಂ ಮೋಕ್ಷಃ ವರ್ತತೇ**

ಅಂತಹವರಿಗೆ ಎಲ್ಲೆಲ್ಲಿಯೂ ಎಂದರೆ ಬದುಕಿರುವಾಗ ಮತ್ತು ಸತ್ತ ಬಳಿಕ–ಹೀಗೆ ಎರಡು ಕಡೆಗಳಲ್ಲಿಯೂ ಬ್ರಹ್ಮನಿರ್ವಾಣವು ಎಂದರೆ ಮೋಕ್ಷವು ಇದ್ದುಕೊಂಡಿರುವುದು.

ಶ್ರೀರಾಮಾನುಜರಿಂದ ವಿದಿತಾತ್ಮನಾಂ ಎಂಬುದರ ಬದಲು ವಿಜಿ-

ತಾತ್ಮನಾಂ ಎಂಬ ಪಾಠವು ಆದರಿಸಲ್ಪಟ್ಟಿದೆ. ಮನಸ್ಸನ್ನು ಜಯಿಸಿದವರಾದ, ವಿಜಿತಮನಸಾಂ ಎಂದು ಅವರು ಅದಕ್ಕೆ ಅರ್ಥಮಾಡುತ್ತಾರೆ.

ಅಭಿತಃ = ಎಲ್ಲ ಕಡೆಗಳಲ್ಲಿಯೂ ಸರ್ವತಃ (ಮ.ಭಾ.)

ಬ್ರಹ್ಮನಿರ್ವಾಣಮಭಿತೋ ವರ್ತತೇ ಏವಂಭೂತಾನಾಂ ಹಸ್ತಸ್ಥಂ ಬ್ರಹ್ಮ ನಿರ್ವಾಣಮಿತ್ಯರ್ಥಃ– ಅಂತಹವರಿಗೆ ಆತ್ಮಾನುಭವರೂಪವಾದ ಆನಂದವು ಕರಗತವಾದಂತೆಯೇ ನಿಲ್ಲುತ್ತದೆ–ಎಂದು ಶ್ರೀರಾಮಾನುಜರು ವ್ಯಾಖ್ಯಾನಮಾಡಿದ್ದಾರೆ.)

ಓಂ ಸ್ಪರ್ಶಾನ್ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾನ್ತರೇ ಭ್ರುವೋಃ ।
ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯನ್ತರಚಾರಿಣೌ ॥೨೭॥

ಓಂ ಯತೇನ್ದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।
ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥೨೮॥

ಹೊರಗಿನ ಶಬ್ದಾದಿ ವಿಷಯಗಳನ್ನು ಹೊರಕ್ಕೆ ಹಾಕಿ, ಕಣ್ಣುಗಳ ನೋಟವನ್ನು ಹುಬ್ಬುಗಳ ನಡುವೆ ಇಟ್ಟು, ಮೂಗಿನ ಒಳಗೆ ಸರಿದಾಡುವ ಪ್ರಾಣಾಪಾನಗಳನ್ನು ಸಮಗೊಳಿಸಿ, ಇಂದ್ರಿಯ-ಮನಸ್ಸು-ಬುದ್ಧಿಗಳನ್ನು ಸ್ವಾಧೀನದಲ್ಲಿಟ್ಟುಕೊಂಡು ಮೋಕ್ಷಪರಾಯಣನಾಗಿ ಕಾಮ-ಭಯ-ಕ್ರೋಧ ಗಳನ್ನು ಬಿಟ್ಟಿರುವ ಮುನಿಯು ಯಾವನೋ ಅವನು ಯಾವಾಗಲೂ ಮುಕ್ತನೇ ಆಗಿರುತ್ತಾನೆ.

(ಹೊರಗಡೆಯ ಸ್ಪರ್ಶಗಳೆಂದರೆ ಶಬ್ದ-ಸ್ಪರ್ಶ-ರೂಪ-ರಸ-ಗಂಧಗಳು ; ಇಂದ್ರಿಯವಿಷಯಗಳು. ಇವುಗಳನ್ನು ಹೊರಗಡೆಯೇ ಇಟ್ಟಿರಬೇಕು. ಒಳಕ್ಕೆ ಸೇರಿಸಿಕೊಳ್ಳಕೂಡದು. ಇದು ಧ್ಯಾನಯೋಗದ ಮೊದಲನೆಯ ನಿಯಮ. ಕೇಳುವುದು, ನೋಡುವುದು, ಮುಟ್ಟುವುದು, ಆಘ್ರಾಣಿಸುವುದು, ರುಚಿ ನೋಡುವುದು–ಇವುಗಳೇ ಮನುಷ್ಯನ ಹುಟ್ಟುಗುಣಗಳಾಗಿರುವಾಗ ಇವು ಗಳನ್ನು ಹೊರಗಡೆಯೇ ಬಿಟ್ಟುಬಿಡುವುದೆಂದರೆ ಹೇಗೆ?–ನಿರ್ಜನವಾದ, ನಿಶ್ಶಬ್ದವಾದ ಪರಿಶುದ್ಧವಾದ ಸ್ಥಳದಲ್ಲಿ ಧ್ಯಾನಕ್ಕೆ ಕುಳಿತುಕೊಳ್ಳಬೇಕು. ಇದರಿಂದ ಬಾಹ್ಯಸ್ಪರ್ಶಗಳೆಲ್ಲವನ್ನೂ ದೂರಮಾಡಲು ಸಹಾಯವಾಗುತ್ತದೆ. ಆ ಸಮಯದಲ್ಲಿ ಸಣ್ಣ ಶಬ್ದವಾದರೂ ಅದು ಕೇಳಬಹುದು. ಆದರೆ ಧ್ಯಾನಕ್ಕೆ

ಆರಂಭಿಸಿ ಮನಸ್ಸು ಏಕಾಗ್ರವಾದಾಗ ಬಾಹ್ಯಸ್ಪರ್ಶಗಳು ಅಂತಃಕರಣವನ್ನು ಪ್ರವೇಶಿಸುವುದಿಲ್ಲ. ನಾವು ಪ್ರಾಪಂಚಿಕವ್ಯವಹಾರದಲ್ಲಿರುವಾಗಲೂ ಯಾವುದೋ ಪ್ರಾಪಂಚಿಕವಿಷಯವನ್ನು ಕುರಿತು ಆಳವಾಗಿ ಯೋಚಿಸುತ್ತಿರು ವಾಗ ನಮ್ಮನ್ನು ಯಾರಾದರೂ ಕೂಗಿದರೂ ನಮಗದು ಕೇಳಿಸುವುದಿಲ್ಲ. ನಮ್ಮ ಮುಂದೆ ಯಾರಾದರೂ ಸುಳಿದಾಡಿದರೂ ಸಹ ನಮ್ಮ ಕಣ್ಣು ಗ್ರಹಿಸುವುದಿಲ್ಲ. ಇಂತಹ ಅನುಭವವು ಎಲ್ಲರಿಗೂ ಇದೆ. ನಿರ್ಜನಪ್ರದೇಶಗಳಲ್ಲಿ ಧ್ಯಾನಕ್ಕೆಂದೇ ಕುಳಿತಾಗ ಮನಸ್ಸು ಏಕಾಗ್ರವಾದಾಗ ಹೊರಗಿನ ವಿಷಯಗಳು ಒಳಹೋಗುವುದಿಲ್ಲವೆಂಬುದರಲ್ಲಿ ಸಂದೇಹವೇ ಇಲ್ಲ.

**ಸಮೇ ಶುಚೌ ಶರ್ಕರವಹ್ನಿವಾಲುಕಾಂ-**
**ವಿವರ್ಜಿತೇ ಶಬ್ದಜಲಾಶಯಾದಿಭಿಃ ।**
**ಮನೋನುಕೂಲೇ ನ ತು ಚಕ್ಷುಪೀಡನೇ**
**ಗುಹಾನಿವಾತಾಶ್ರಯಣೇ ಪ್ರಯೋಜಯೇತ್ ॥**

ನುರುಜುಗಲ್ಲು, ಬೆಂಕಿ, ಮಳಲು ಇವುಗಳಿಲ್ಲದ ಶುದ್ಧವಾದ ಮತ್ತು ಸಮವಾದ ಪ್ರದೇಶದಲ್ಲಿ ತೊಂದರೆಯನ್ನುಂಟುಮಾಡುವ ಜಲಾಶಯಾದಿಗಳ ಶಬ್ದವಾಗಲೀ, ಕಣ್ಣುಕೋರೈಸುವ ಬೆಳಕಾಗಲೀ, ಬಿರುಗಾಳಿಯಾಗಲೀ ಇಲ್ಲ ದಿರುವ, ಮನಸ್ಸಿಗೆ ಹಿತವಾದ ಜಾಗದಲ್ಲಿ ಕುಳಿತು ಧ್ಯಾನಿಸಬೇಕು.

**ಚಕ್ಷುಶ್ಚೈವಾನ್ತರೇ ಭ್ರುವೋಃ** = ಎರಡು ಹುಬ್ಬುಗಳ ಮಧ್ಯೆ ಕಣ್ಣಿನ ದೃಷ್ಟಿಯನ್ನಿಡಬೇಕು. ಇದು ಧ್ಯಾನಕ್ಕೆ ಎರಡನೆಯ ನಿಯಮ. ಇಲ್ಲಿ ಚಕ್ಷುಃ ಎಂದು ಏಕವಚನವಿದೆ. ಒಂದು ಕಣ್ಣನ್ನು ಹೇಳಿದರೂ ಎರಡಕ್ಕೂ ಅದು ಉಪಲಕ್ಷಣವು. ಹುಬ್ಬಿನ ನಡುವೆ ದೃಷ್ಟಿಯನ್ನು ಏಕೆ ನಿಲ್ಲಿಸಬೇಕೆಂಬುದಕ್ಕೆ ಕಾರಣವನ್ನು ಯೋಗಶಾಸ್ತ್ರದಲ್ಲಿ ಹೀಗೆ ಹೇಳಿದೆ : ಎರಡು ಹುಬ್ಬುಗಳ ಮಧ್ಯ ದಲ್ಲಿ ಎರಡು ದಳಗಳಿಂದ ಕೂಡಿರುವ ಆಜ್ಞಾಚಕ್ರವಿದೆ. ಅದರ ಸಮೀಪ ದಲ್ಲಿಯೇ ಸಪ್ತಕೋಶವಿದೆ. ಅದರ ಕಡೆಯ ಕೋಶಕ್ಕೆ 'ಉನ್ಮನೀ' ಎಂದು ಹೆಸರು. ಉನ್ಮನಿಯನ್ನು ತಲುಪಿದರೆ ಜೀವಕ್ಕೆ ಪುನರಾವೃತ್ತಿಯಿಲ್ಲವೆಂದು ಹೇಳುತ್ತಾರೆ. ಆದುದರಿಂದಲೇ ಯೋಗಿಗಳು ಆಜ್ಞಾಚಕ್ರದ ಮೇಲೆ ಮನ ಸ್ಸನ್ನು ಸಂಯಮಮಾಡುತ್ತಾರೆ. ಈ ಕಾರಣದಿಂದ ದೃಷ್ಟಿಯನ್ನು ಹುಬ್ಬುಗಳ ನಡುವೆ ನಿಲ್ಲಿಸಬೇಕು.

**ಪ್ರಾಣಾಪಾನೌ ಸಮೌ ಕೃತ್ವಾ** = ಮೂಗಿನ ಹೊರಗೂ ಒಳಗೂ (ಉಚ್ಛ್ವಾಸ-ನಿಃಶ್ವಾಸ) ಹೋಗಿಬರುತ್ತಿರುವ ಪ್ರಾಣಾಪಾನವಾಯುಗಳು ಸಮವಾಗಿರಬೇಕು. ನಾವು ಮೂಗಿನ ಮೂಲಕ ಒಳಕ್ಕೆ ತೆಗೆದುಕೊಳ್ಳುವುದಕ್ಕೆ ಅಪಾನವಾಯುವೆಂದೂ ಹೊರಕ್ಕೆ ಬಿಡುವುದಕ್ಕೆ ಪ್ರಾಣವಾಯುವೆಂದೂ ಹೆಸರು. ಇವುಗಳು ಸಮನಾಗಿರುವುದೆಂದರೇನು? ಈಗ ಸಮನಾಗಿಲ್ಲವೇ? ಇದರ ಸೂಕ್ಷ್ಮವನ್ನು ಜನಸಾಮಾನ್ಯರು ಅರಿಯುವುದಿಲ್ಲ. ಈ ಪ್ರಾಣಾಪಾನ ಗಳು (ಉಚ್ಛ್ವಾಸ-ನಿಶ್ವಾಸಗಳು) ಒಮ್ಮೆ ಮೂಗಿನ ಎಡಹೊಳ್ಳೆಯಲ್ಲೇ ಆಗುತ್ತಿರುತ್ತವೆ. ಮತ್ತೊಮ್ಮೆ ಬಲಹೊಳ್ಳೆಯಲ್ಲೇ ಆಗುತ್ತಿರುತ್ತವೆ. ಎಡ ಹೊಳ್ಳೆಯಲ್ಲಿ ಶ್ವಾಸೋಚ್ಛ್ವಾಸಗಳಾಗುತ್ತಿದ್ದರೆ ಇಡಾನಾಡಿಯಲ್ಲಾಗುತ್ತಿದೆ ಯೆಂದೂ, ಬಲಹೊಳ್ಳೆಯಲ್ಲಿ ಆಗುತ್ತಿದ್ದರೆ ಪಿಂಗಳಾನಾಡಿಯಲ್ಲಾಗುತ್ತಿದೆ ಯೆಂದೂ ಹೇಳುತ್ತಾರೆ. ಈ ಎರಡರಲ್ಲಿ ಯಾವ ನಾಡಿಯಲ್ಲೇ ಶ್ವಾಸೋ ಚ್ಛ್ವಾಸಗಳಾಗುತ್ತಿದ್ದರೂ ಮನುಷ್ಯನ ಮನಸ್ಸು ಚಂಚಲವಾಗಿಯೇ ಇರು ತ್ತದೆ. ಒಮ್ಮೊಮ್ಮೆ ಒಂದೊಂದು ಹೊಳ್ಳೆಯಲ್ಲಿ ಆಗುತ್ತಿರುವ ಶ್ವಾಸೋಚ್ಛ್ವಾಸ ಗಳನ್ನು ಎರಡು ಹೊಳ್ಳೆಗಳಲ್ಲಿಯೂ ಸಮನಾಗಿ ಆಗುವಂತೆ ಮಾಡಬೇಕು. ಹಾಗೆ ಎರಡು ಹೊಳ್ಳೆಗಳಲ್ಲಿಯೂ ಸಮನಾಗಿ ಶ್ವಾಸೋಚ್ಛ್ವಾಸಗಳಾಗುತ್ತಿದ್ದರೆ ಪ್ರಾಣಾಪಾನವಾಯುಗಳು ಸುಷುಮ್ನಾನಾಡಿಯಲ್ಲಿ ಸಂಚರಿಸುತ್ತಿವೆಯೆಂದು ತಿಳಿದುಕೊಳ್ಳಬೇಕು. ಸುಷುಮ್ನಾನಾಡಿಯಲ್ಲಿ ಸಂಚರಿಸುವಾಗ ಪ್ರಾಣಾಪಾನಗಳು ಬಹು ಸೂಕ್ಷ್ಮವಾಗಿಯೂ ಶಾಂತವಾಗಿಯೂ ಇರುತ್ತವೆ. ಹೀಗಿರುವ ಸಮಯದಲ್ಲಿ ಅದು ಪರಮಾತ್ಮನ ಧ್ಯಾನಕ್ಕೆ ಅನುವುಮಾಡಿ ಕೊಡುತ್ತದೆ. ಎರಡು ವಾಯುಗಳನ್ನೂ ಸಮಮಾಡಬೇಕಾದರೆ ಅದಕ್ಕಾಗಿ ಅಭ್ಯಾಸಮಾಡಬೇಕು. ಮೊದಲು ಎಡಹೊಳ್ಳೆಯಿಂದ ಅಪಾನವಾಯುವನ್ನು ಒಳಕ್ಕೆ ಸೆಳೆದುಕೊಂಡು ಬಲಹೊಳ್ಳೆಯಿಂದ ಪ್ರಾಣವಾಯುವನ್ನು ಹೊರಕ್ಕೆ ಬಿಡಬೇಕು. ಎರಡನೆಯ ಬಾರಿಗೆ ಅಪಾನವಾಯುವನ್ನು ಬಲಹೊಳ್ಳೆಯಿಂದ ಒಳಕ್ಕೆ ಸೆಳೆದುಕೊಂಡು ಪ್ರಾಣವಾಯುವನ್ನು ಎಡಹೊಳ್ಳೆಯಿಂದ ಹೊರಕ್ಕೆ ಬಿಡಬೇಕು. ಹೀಗೆ ಅಭ್ಯಾಸಮಾಡುವುದರಿಂದ ಪ್ರಾಣಾಪಾನಗಳು ಸಮನಾಗು ತ್ತವೆ. ಪ್ರಶಾಂತವಾದ ಮನಸ್ಸುಂಟಾಗಿ ಧ್ಯಾನಕ್ಕೆ ಅನುಕೂಲವಾಗುತ್ತದೆ.

**ಯತೇನ್ದ್ರಿಯಮನೋಬುದ್ಧಿಃ** = ಇಂದ್ರಿಯಗಳು ಯಾವಾಗಲೂ

ವಿಷಯಗಳಲ್ಲಿಯೇ ಪ್ರವಹಿಸುತ್ತಿರುತ್ತವೆ. ಅದನ್ನು ತಡೆಯಬೇಕು. ಇದಕ್ಕೆ ಪ್ರತ್ಯಾಹಾರವೆಂದು ಹೆಸರು.

**ಇನ್ದ್ರಿಯಾಣಾಂ ವಿಚರತಾಂ ವಿಷಯೇಷು ಸ್ವಭಾವತಃ ।**
**ಬಲಾದಾಹರಣಂ ತೇಷಾಂ ಪ್ರತ್ಯಾಹಾರಃ ಸ ಉಚ್ಯತೇ ॥**

ಸ್ವಾಭಾವಿಕವಾಗಿಯೇ ವಿಷಯಗಳಲ್ಲಿ ಪ್ರವರ್ತಿಸುವ ಇಂದ್ರಿಯಗಳನ್ನು ಬಲಾತ್ಕಾರಪೂರ್ವಕವಾಗಿ ಒಳಕ್ಕೆ ಸೆಳೆದುಕೊಳ್ಳುವುದಕ್ಕೆ ಪ್ರತ್ಯಾಹಾರವೆಂದು ಹೆಸರು.

**ಸ್ವವಿಷಯಾಸಂಪ್ರಯೋಗೇ ಚಿತ್ತಸ್ಯ ಸ್ವರೂಪಾನುಕಾರ ಇವೇನ್ದ್ರಿಯಾಣಾಂ ಪ್ರತ್ಯಾಹಾರಃ** (ಪಾತಂಜಲಯೋಗಸೂತ್ರ.) ಇಂದ್ರಿಯಗಳು ಸ್ವವಿಷಯಗಳಲ್ಲಿ ಸಂಸ್ಪರ್ಶವಾಗದಿರುವಾಗ ನಿರುದ್ಧವಾದ ಅವು ಮನಸ್ಸನ್ನೇ ಹೋಲುತ್ತವೆ. ಇದು ಪ್ರತ್ಯಾಹಾರ.

ಮನಸ್ಸಿನ ಸಂಸ್ಪರ್ಶವಿಲ್ಲದೇ ಇಂದ್ರಿಯಗಳೇನೂ ಮಾಡಲಾರವು. ಅರ್ಥಾತ್ ಇಂದ್ರಿಯನಿಗ್ರಹವೆಂದರೆ ಅದು ಮನಸ್ಸಿನ ನಿಗ್ರಹವೇ ಆಗುತ್ತದೆ. ಇಂದ್ರಿಯಗಳನ್ನು ಇಂದ್ರಿಯಾರ್ಥಗಳಿಂದ ಒಳಕ್ಕೆ ಸೆಳೆದುಕೊಳ್ಳಬೇಕಾದರೆ ದೃಢವಾದ ವಶವಾದ ಮನಸ್ಸಿರಬೇಕು. ಮನಸ್ಸು ವಶವಾಯಿತೆಂದರೆ ಬುದ್ಧಿಯು ನಿಶ್ಚಲವಾಗುವುದು. ಧ್ಯಾನಯೋಗ್ಯವಾಗುವುದು. **ಮೋಕ್ಷಪರಾಯಣಃ** = ಪರಮಾತ್ಮನ ಪ್ರಾಪ್ತಿ ; ಪರಮಪದಪ್ರಾಪ್ತಿ ; ಪರಮಗತಿ ಅಥವಾ ಮುಕ್ತಿ–ಈ ಎಲ್ಲಕ್ಕೂ ಮೋಕ್ಷವೆನ್ನುತ್ತಾರೆ. ಮೋಕ್ಷಪ್ರಾಪ್ತಿಯ ಪ್ರಯತ್ನದಲ್ಲಿಯೇ ಸಂಲಗ್ನನಾಗಿರುವವನು ಮೋಕ್ಷಪರಾಯಣನೆನಿಸಿಕೊಳ್ಳುತ್ತಾನೆ. ಮೋಕ್ಷವೇ ಶ್ರೇಷ್ಠವಾದ ಆಶ್ರಯವೆಂದು ಭಾವಿಸಿರುವವನು ಮೋಕ್ಷಪರಾಯಣ.

**ವಿಗತೇಚ್ಛಾಭಯಕ್ರೋಧಃ**–ಇಚ್ಛೆ, ಭಯ ಮತ್ತು ಕ್ರೋಧ–ಈ ಮೂರನ್ನೂ ಸಂಪೂರ್ಣವಾಗಿ ಬಿಟ್ಟಿರುವವನು. ಇಚ್ಛೆ ಎಂದರೆ ಆಸೆ. ಆಸೆಯನ್ನು ಸಂಪೂರ್ಣವಾಗಿ ತೊರೆದವನು. ಇಚ್ಛೆ-ಭಯ-ಕ್ರೋಧಗಳು ಒಂದಕ್ಕೊಂದು ಸಂಬಂಧಿಸಿವೆ. ಭಯ-ಕ್ರೋಧಗಳಿಗೂ ಇಚ್ಛೆಯೇ ಮೂಲ. ನಾವು ಆಸೆಪಟ್ಟು ಯಾವುದೋ ಅಪೂರ್ವವಾದ ವಸ್ತುವನ್ನು ಮನೆಗೆ ತಂದು

ಅದನ್ನು ಒಂದುಕಡೆ ಇಡುತ್ತೇವೆ. ಆ ವಸ್ತುವಿನ ಸಮೀಪಕ್ಕೆ ಮಕ್ಕಳೇನಾದರೂ ಹೋಗಿಬಿಟ್ಟರೆ ಅದನ್ನು ಎಲ್ಲಿ ಒಡೆದುಹಾಕುತ್ತವೋ ಎಂದು ಭಯಪಡುತ್ತೇವೆ. ಒಡನೆಯೇ 'ಅಲ್ಲಿಗೆ ಹೋಗಬೇಡಿ' ಎಂದು ಕೂಗಿಕೊಳ್ಳುತ್ತೇವೆ. ಒಂದು ವೇಳೆ ಮಕ್ಕಳು ನಮ್ಮ ಮಾತನ್ನು ಕೇಳದೆ ವಸ್ತುವಿನ ಹತ್ತಿರಕ್ಕೆ ಹೋಗಿ ಅದನ್ನು ಕೈಗೆತ್ತಿಕೊಂಡು ಒಡೆದೇಹಾಕಿಬಿಟ್ಟರೆ ಆ ಸಮಯದಲ್ಲಿ ನಮ್ಮ ಕೋಪವನ್ನು ತಡೆಯಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ಸಾಮಾನ್ಯವಾಗಿ ಇದು ಎಲ್ಲರ ಅನುಭವದಲ್ಲಿಯೂ ಇರುವ ವಿಷಯ. ಆದುದರಿಂದ ಭಯ ಮತ್ತು ಕ್ರೋಧಗಳಿಗೆ ಮೂಲವಾದುದೇ ಇಚ್ಛೆ ಅಥವಾ ಆಸೆ. ಅದೊಂದನ್ನು ತೊರೆದುಬಿಟ್ಟರೆ ಉಳಿದೆರಡಕ್ಕೆ ನಮ್ಮಲ್ಲಿ ಅವಕಾಶವೇ ಇರುವುದಿಲ್ಲ. ಆಸೆ ಯನ್ನು ತೊರೆದವನು ಯಾರಿಗೂ ಭಯಪಡಬೇಕಾಗಿಲ್ಲ. ಹಣದ ಮೇಲೆ ಆಸೆಯಿದ್ದರಲ್ಲವೇ ಸಂಪಾದಿಸಬೇಕೆಂದು ಹೊರಡುವುದು? ಸಂಪಾದಿಸಿಟ್ಟ ರಲ್ಲವೇ ಕಳ್ಳರ ಭಯ? ಹೀಗೆ ಇದೊಂದು ಸರಪಣಿ. ಆದುದರಿಂದ ಆಸೆ ಯನ್ನು ಬಿಟ್ಟವನಿಗೆ ಭಯವೂ ಇರುವುದಿಲ್ಲ. ಕೋಪವೂ ಬರುವುದಿಲ್ಲ. ಆಸೆ ಯನ್ನು ಬಿಟ್ಟಿದ್ದವನು ಈ ಎರಡನ್ನೂ ಬಿಟ್ಟೇ ಇರುತ್ತಾನೆ. ಇಂತಹ ಮನನ ಶೀಲನಾದ, ಸದಾ ಪರಮಾತ್ಮನನ್ನೇ ಧ್ಯಾನಮಾಡುತ್ತಿರುವ ಮುನಿಯು ಸದಾ ಕಾಲದಲ್ಲಿಯೂ ಮುಕ್ತನಾದವನಂತೆಯೇ ಇರುತ್ತಾನೆ. ಈ ಸಾಧನೆಗಳುಳ್ಳವನು ಮುಕ್ತಿಗಾಗಿ ಬೇರೆ ಏನನ್ನೂ ಮಾಡಬೇಕಾಗಿಲ್ಲ.

**ಸ್ಪರ್ಶಾನ್ಕೃತ್ವಾ ಬಹಿರ್ಬಾಹ್ಯಾನ್** = ಕಿವಿಯೇ ಮುಂತಾದ ಇಂದ್ರಿಯ ಗಳ ಮೂಲಕ ಶಬ್ದವೇ ಮುಂತಾದ ವಿಷಯಗಳನ್ನು ಬುದ್ಧಿಯೊಳಗೆ ಪ್ರವೇಶ ಮಾಡಿಸಿ ಅವುಗಳನ್ನು ಚಿಂತನೆಮಾಡದೇ ಇರುವುದೇ ಅವುಗಳನ್ನು ಹೊರಗೆ ಹಾಕುವುದು.

**ತಾನ್ ಅಚಿನ್ತಯತಃ ಬಾಹ್ಯಾನ್ ಬಹಿರೇವ ಕೃತಾ ಭವನ್ತಿ**

**ಯಃ ಮುಕ್ತ ಏವ ಸಃ** ಹೀಗೆ ಇರುವ ಸಂನ್ಯಾಸಿಯು ಸದಾ ಮುಕ್ತನೇ. ಅವನು ಬೇರೆ ಯಾವ ಮುಕ್ತಿಯನ್ನೂ ಪಡೆಯಬೇಕಾಗಿಲ್ಲ. (ಶಂ.ಭಾ.)

**ಸ್ಪರ್ಶಾನ್ ಕೃತ್ವಾ** = ಹೊರಗಡೆಯ ಇಂದ್ರಿಯಗಳ ವ್ಯಾಪಾರವೆಲ್ಲ ವನ್ನೂ ಉಪಸಂಹಾರಮಾಡಿ **ಪ್ರಾಣಾಪಾನೌ ಸಮೌ ಕೃತ್ವಾ** ಉಚ್ಛ್ವಾಸ-

ನಿಶ್ವಾಸಗಳನ್ನು ಸಮಗತಿಯುಳ್ಳವುಗಳನ್ನಾಗಿ ಮಾಡಿ ಸದಾ ಮುಕ್ತ ಏವ ಸಾಧ್ಯದಶೆಯಲ್ಲಿ ಹೇಗೋ ಹಾಗೆ ಸಾಧನದಶೆಯಲ್ಲೂ ಕೂಡ ಆ ಮುನಿಯು ಮುಕ್ತಪ್ರಾಯನೇ. (ರಾ.ಭಾ.)

ಈ ಶ್ಲೋಕಗಳು ಧ್ಯಾನದ ಪ್ರಕಾರವನ್ನು ತಿಳಿಸುತ್ತವೆ. **ಸ್ಪರ್ಶಾನ್ ಬಾಹ್ಯಾನ್** = ಕಿವಿಯೇ ಮುಂತಾದ ಇಂದ್ರಿಯಗಳನ್ನು ಯೋಗದಿಂದ ಸಂಯಮಮಾಡಿ. **ಚಕ್ಷುಃ...ಭ್ರುವೋಃ** ಹುಬ್ಬುಗಳ ಮಧ್ಯವನ್ನು ನೋಡುತ್ತಾ **ನಾಸಾಗ್ರೇ ವಾ ಭ್ರುವೋರ್ಮಧ್ಯೇ ಧ್ಯಾನೀ ಚಕ್ಷುರ್ನಿಧಾಪಯೇತ್...ಪ್ರಾಣಾಪಾನೌ ಸಮೌ ಕೃತ್ವಾ**= **ಕುಂಭಕೇ ಸ್ಥಿತ್ವಾ** ಕುಂಭದಲ್ಲಿದ್ದಾಗ (ಕುಂಭಕಪ್ರಾಣಾಯಾಮದಲ್ಲಿದ್ದು ) ಪ್ರಾಣಾಪಾನಗಳೆರಡೂ ಸಮವಾಗುತ್ತವೆ. ನಿರ್ವಿಕಾರವಾಗುತ್ತವೆ. ನಿಶ್ಚಲವಾಗುತ್ತವೆ.)

(ಮ.ಭಾ.)

**ಓಂ ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾನ್ತಿಮೃಚ್ಛತಿ ॥**

ನಾನು ಯಜ್ಞಗಳ ಮತ್ತು ತಪಸ್ಸುಗಳ ಭೋಕ್ತೃವೂ, ಸರ್ವಲೋಕಗಳಿಗೂ ಮಹೇಶ್ವರನೂ, ಸರ್ವಭೂತಗಳಿಗೂ ಗೆಳೆಯನೂ ಆಗಿರುವೆನೆಂದು ನನ್ನನ್ನು ತಿಳಿದುಕೊಂಡವನು ಶಾಂತಿಯನ್ನು ಹೊಂದುತ್ತಾನೆ.

* * *

(ಯಜ್ಞ ಎಂದರೆ ಪಂಚಮಹಾಯಜ್ಞಗಳು ಮತ್ತು ಶ್ರೌತಯಜ್ಞಗಳು. ಇಂದ್ರಾದಿದೇವತೆಗಳ ಸಲುವಾಗಿ ಮಾಡುವ ಜ್ಯೋತಿಷ್ಟೋಮಾದಿಗಳು. ಔಪಾಸನ-ವೈಶ್ವದೇವಾದಿಗಳು. ಗುರುಶುಶ್ರೂಷೆ, ಮಾತಾ-ಪಿತೃಸೇವೆ, ಅತಿಥಿ ಸತ್ಕಾರ, ಭಗವದಾರಾಧನೆ–ಇತ್ಯಾದಿಗಳು. ಇವುಗಳಲ್ಲದೇ ಭಗವಂತನ ಪೂಜಾರ್ಥವಾದ ಯಾವುದೇ ಕರ್ಮವಾದರೂ ಅದು ಯಜ್ಞವೆನಿಸಿಕೊಳ್ಳುತ್ತದೆ. ಪೂಜಾರ್ಥವಾದ ಯಜಧಾತುವಿನಿಂದ ಸಿದ್ಧವಾಗಿರುವ ಪದ ಯಜ್ಞ. ಭೀಷ್ಮಾಚಾರ್ಯರು ತಾವು ಮಾಡಿದ ಶ್ರೀಕೃಷ್ಣಸ್ತುತಿರೂಪವಾದ ವಾಣಿಯನ್ನು ವಾಗ್ಯಜ್ಞ ಎಂದು ಕರೆಯುತ್ತಾರೆ. ತಪಸ್ಸೆಂದರೆ ಕಾಯಕ-ವಾಚಿಕ-ಮಾನಸಿಕ ತಪಸ್ಸುಗಳು. ('ಯಜ್ಞ ಮತ್ತು ತಪಸ್ಸು ಎಲ್ಲಕ್ಕೂ ಭೋಕ್ತೃವು ನಾನೆಂದು ತಿಳಿ' ಎಂದು ಶ್ರೀಕೃಷ್ಣನು ಹೇಳುತ್ತಾನೆ. 'ಯಾವುದೇ ದೇವತೆಗಳಿಗೆ

ಯಾವುದೇ ರೂಪದಲ್ಲಿ ಯಾವುದೇ ಪೂಜೆಯನ್ನು ಸಲ್ಲಿಸಿದರೂ ಅದು ನನಗೇ ಸೇರುತ್ತದೆ. ಭೂಮಿಯ ಮೇಲಿನ ನದಿಗಳ ನೀರೆಲ್ಲವೂ ಸಮುದ್ರಕ್ಕೆ ಸೇರುವಂತೆ–ಯಜ್ಞ ಮತ್ತು ತಪಸ್ಸುಗಳ ಮೂಲಕವಾಗಿ ಮಾಡುವ ಆರಾಧನೆ ಗಳೆಲ್ಲವೂ ನನ್ನನ್ನೇ ಸೇರುವುವು.'

ಶ್ರೀಕೃಷ್ಣನು–'ನನ್ನನ್ನು ಸರ್ವಲೋಕಮಹೇಶ್ವರ ಎಂಬುದಾಗಿಯೂ ತಿಳಿ'–ಎನ್ನುತ್ತಾನೆ.

ಹದಿನಾಲ್ಕು ಲೋಕಗಳಿಗೂ ಮತ್ತು ಅವುಗಳನ್ನಾಳುವ ದೇವತೆಗಳಿಗೂ ನಾನೇ ಸರ್ವಶ್ರೇಷ್ಠನಾದ ಪರಮೇಶ್ವರನು ಎಂದು ಭಾವಿಸು. ಈಶ್ವರರೆಲ್ಲರಿಗೂ ಈಶ್ವರನಾದುದರಿಂದ ಮಹೇಶ್ವರ. ಶ್ವೇತಾಶ್ವತರೋಪನಿಷತ್ತಿನಲ್ಲಿ ಹೀಗೆ ಹೇಳಿದೆ :

**ತಮೀಶ್ವರಾಣಾಂ ಪರಮಂ ಮಹೇಶ್ವರಂ**
**ತಂ ದೇವತಾನಾಂ ಪರಮಂ ಚ ದೈವತಮ್ ।**
**ಪತಿಂ ಪತೀನಾಂ ಪರಮಂ ಪರಸ್ತಾ-**
**ದ್ವಿದಾಮ ದೇವಂ ಭುವನೇಶಮೀಡ್ಯಮ್ ॥೭॥**

ಅಧ್ಯಾಯ–೬

ಈಶ್ವರರಿಗೆ–ವೈವಸ್ವತ, ಯಮ ಮೊದಲಾದವರಿಗೆ ಪರಮೇಶ್ವರನಾದ, ಇಂದ್ರಾದಿದೇವತೆಗಳಿಗೆ ಪರಮದೈವತನಾದ, ಪ್ರಜಾಪತಿಗಳಿಗೆ ಪತಿಯಾದ, ಪರವಾದುದಕ್ಕಿಂತಲೂ, (ಶ್ರೇಷ್ಠವಾದ ಅಕ್ಷರಕ್ಕಿಂತಲೂ) ಶ್ರೇಷ್ಠನಾದ, ಭುವನೇಶ್ವರನಾದ, ಸ್ತುತ್ಯರ್ಹನಾದ ದೇವನನ್ನು ನಾವು ಪ್ರಾರ್ಥನೆ ಮಾಡುತ್ತೇವೆ.

**ಸುಹೃದಂ ಸರ್ವಭೂತಾನಾಂ** = ಸರ್ವಪ್ರಾಣಿಗಳಿಗೂ ಸ್ವಾಭಾವಿಕ ನಾದ ಸುಹೃದ. ಹಿಂದಿನ ಪಾದದಲ್ಲಿ ಹೇಳಿರುವಂತೆ ಅವನು ಬ್ರಹ್ಮಾಂಡಕ್ಕೇ ಈಶ್ವರ. ಅವನು ಎಲ್ಲ ಪ್ರಾಣಿಗಳಿಗೂ ಸ್ನೇಹಿತ. ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವನ್ನು ಬಯಸದ ನಿರ್ವ್ಯಾಜಸ್ನೇಹಿತ. ಅನೇಕಲಕ್ಷ-ಕೋಟಿ ಪ್ರಾಣಿಗಳಿಗೂ ಈಶ್ವರನಾಗಿದ್ದು ಪ್ರತಿಯೊಂದು ಪ್ರಾಣಿಗೂ ಸ್ನೇಹಿತನಾಗಿರು ತ್ತಾನೆ. ಅವನ ಸರ್ವವ್ಯಾಪಕತ್ವವನ್ನೂ, ದಯಾಪರತೆಯನ್ನೂ ನಾವು ತಿಳಿದುಕೊಳ್ಳಬೇಕಾಗಿದೆ. 'ನಾನು ನಿನ್ನ ಸ್ನೇಹಿತ. ಯಾವಾಗ ಬೇಕಾದರೂ

ನೀನು ನನ್ನ ಸಹಾಯವನ್ನು ಕೇಳಬಹುದು. ನಾನು ಬ್ರಹ್ಮಾಂಡಕ್ಕೇ ಸ್ವಾಮಿಯಾಗಿದ್ದೇನೆ. ಆದುದರಿಂದ ನೀನು ಕೇಳಿದುದನ್ನು ನಾನು ಕೊಡಲಾಗುವುದಿಲ್ಲವೆಂಬ ಸಂಶಯಕ್ಕೆ ಆಸ್ಪದವಿಲ್ಲ. ಯಾವಾಗ ಬೇಕಾದರೂ ಕೇಳು. ಏನನ್ನು ಬೇಕಾದರೂ ಕೇಳು'–ಇಷ್ಟು ಸ್ಪಷ್ಟವಾಗಿ ಶ್ರೀಕೃಷ್ಣನೇ ಹೇಳಿರುವಾಗ ನಾವಿನ್ನೂ ಅದನ್ನು ಅರಿತುಕೊಂಡಿಲ್ಲ. ಭಗವಂತನೇ ಏಕೈಕಶರಣ್ಯನೆಂಬ ನಿಶ್ಚಲಭಾವನೆಯನ್ನು ಹೊಂದಿರುವುದಿಲ್ಲ.

ಕಡೆಯ ಪಾದದಲ್ಲಿ ಶ್ರೀಕೃಷ್ಣನು ಹೇಳುತ್ತಾನೆ :

**ಜ್ಞಾತ್ವಾ ಮಾಂ ಶಾನ್ತಿಮೃಚ್ಛತಿ** = ನನ್ನನ್ನು ಹೀಗೆ ತಿಳಿದುಕೊಂಡವನು ಪರಮಶಾಂತಿಯನ್ನು ಹೊಂದುತ್ತಾನೆ. ಹೀಗೆ ಭಾವಿಸಿ ನನ್ನನ್ನು ಅನನ್ಯ ಭಕ್ತಿಯಿಂದ ಧ್ಯಾನಮಾಡುವವನಿಗೆ ಪರಮಶಾಂತಿಯು ಲಭ್ಯವಾಗುತ್ತದೆ.

**ಯಜ್ಞತಪಸಾಂ ಭೋಕ್ತಾರಂ** = ಎಲ್ಲ ಯಜ್ಞಗಳಿಗೂ ಮತ್ತು ತಪಸ್ಸುಗಳಿಗೂ ಕರ್ತೃವೂ ಮತ್ತು ದೇವತೆಯೂ ಆಗಿರುವ ನಾರಾಯಣನಾದ ನನ್ನನ್ನು–ಎಲ್ಲ ಭೂತಗಳ ಹೃದಯಗಳಲ್ಲಿಯೂ ವಾಸಮಾಡುವ, ಎಲ್ಲ ಕರ್ಮಫಲಗಳಿಗೂ ಅಧ್ಯಕ್ಷನಾಗಿರುವ ಮತ್ತು ಎಲ್ಲ ಸಂಕಲ್ಪಗಳಿಗೂ ಸಾಕ್ಷಿಯಾಗಿರುವ ನಾರಾಯಣನು ನಾನೇ–ಎಂದು ಅರಿತು ಸರ್ವಸಂಸಾರದ ವಿರಾಮವೆಂಬ ಶಾಂತಿಯನ್ನು ಪಡೆಯುತ್ತಾನೆ. (ಶಂ.ಭಾ.)

ನನ್ನನ್ನು ಎಲ್ಲ ಲೋಕಗಳ ಮಹೇಶ್ವರ ಮತ್ತು ಸರ್ವರ ಮಿತ್ರ–ಎಂದು ತಿಳಿದು, ನನ್ನ ಆರಾಧನಾರೂಪವಾದುದು ಕರ್ಮಯೋಗವಾದುದರಿಂದ ಸುಖವಾಗಿ ಅದರಲ್ಲಿ ತೊಡಗುತ್ತಾನೆ. ಸ್ನೇಹಿತನನ್ನು ಆರಾಧಿಸುವುದಕ್ಕೆ ತಾನೇ ಎಲ್ಲರೂ ತೊಡಗುವುದು? (ರಾ.ಭಾ.)

**ಯಜ್ಞತಪಸಾಂ** = ಇಲ್ಲಿ ಹೇಳುವ ಯಜ್ಞ ಮತ್ತು ತಪಸ್ಸುಗಳು ಇಡೀ ಕರ್ಮಯೋಗವನ್ನೇ ಸೂಚಿಸುತ್ತದೆ. ಕರ್ಮಯೋಗದಿಂದ ಆರಾಧಿಸಲ್ಪಡಬೇಕಾದವನು ಅವನೇ ಆಗಿರುತ್ತಾನೆ. ಅವನು ಸರ್ವೇಶ್ವರನಾಗಿರುವಂತೆಯೇ ಸರ್ವಸುಹೃದನೂ ಆಗಿರುವುದರಿಂದ–ಐಶ್ವರ್ಯಮದ, ಗರ್ವಮೂಲವಾದ ದೌರ್ಮುಖ್ಯ ಮುಂತಾದುವು ಕಿಂಚಿತ್ತೂ ಅವನಲ್ಲಿ ಇಲ್ಲ.

(ಶ್ರೀವೇದಾಂತದೇಶಿಕರು.)

ಧ್ಯೇಯನಾದ ಭಗವಂತನನ್ನು ಇಲ್ಲಿ ನಿರೂಪಿಸಿದೆ. (ಶ್ಲೋಕದಲ್ಲಿರುವ ಜ್ಞಾತ್ವಾ ಎಂಬುದಕ್ಕೆ **ಧ್ಯಾತ್ವಾ**=ಧ್ಯಾನಮಾಡಿ ಎಂದು ಅರ್ಥಮಾಡಬೇಕು.) ಭಗವಂತನು ಯಜ್ಞ-ತಪಸ್ಸುಗಳ ಭೋಕ್ತ್ರ, ಸರ್ವಭೂತಗಳ ಸುಹೃದ ಮತ್ತು ಪರಮಶಾಂತಿಗೆ ಸಾಧನ–ಎಂಬ ಗುಣವೈಭವದೊಡನೆ ಅವನನ್ನು ಧ್ಯಾನಿಸಬೇಕು. (ಶ್ರೀಜಯತೀರ್ಥರು.)

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಕರ್ಮಸಂನ್ಯಾಸ**
**ಯೋಗೋ ನಾಮ ಪಞ್ಚಮೋಧ್ಯಾಯಃ**

ಭಗವದ್ಗೀತೆಯಲ್ಲಿ ೫ನೆಯ ಅಧ್ಯಾಯವು ಮುಗಿಯಿತು.

ಭೀಷ್ಮಪರ್ವದಲ್ಲಿ ೨೯ನೆಯ ಅಧ್ಯಾಯವು ಮುಗಿಯಿತು.

# ಭಗವದ್ಗೀತಾ - ೬ನೆಯ ಅಧ್ಯಾಯ

೩೦ನೆಯ ಅಧ್ಯಾಯ ಶ್ರೀಮದ್ಭಗವದ್ಗೀತಾಪರ್ವ (ಮುಂದುವರಿದಿದೆ.)

## ಆತ್ಮೋದ್ಧಾರಕ್ಕೆ ಪ್ರೇರಣೆ : ಮನೋನಿಗ್ರಹಪೂರ್ವಕವಾದ ಧ್ಯಾನಯೋಗ : ಯೋಗಭ್ರಷ್ಟನಾದವನ ವರ್ಣನೆ

**ಶ್ರೀಭಗವಾನುವಾಚ :**

**ಓಂ ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।**
**ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ॥೧॥**

**ಶ್ರೀಕೃಷ್ಣನು ಹೇಳುತ್ತಾನೆ :**

ಕರ್ಮಫಲವನ್ನು ಆಶ್ರಯಿಸದೇ ಮಾಡಬೇಕಾದ ಕರ್ಮವನ್ನು ಯಾವನು ಮಾಡುತ್ತಿರುವನೋ ಅವನು ಸಂನ್ಯಾಸಿಯೂ–ಯೋಗಿಯೂ ಆಗಿರುತ್ತಾನೆ. ಕೇವಲ ಅಗ್ನಿಯಿಲ್ಲದವನೂ ಕರ್ಮವಿಲ್ಲದವನೂ ಅಲ್ಲ.

* * *

(ಶ್ರೀಕೃಷ್ಣನು ಈ ಮಂತ್ರದಲ್ಲಿ ತಾತ್ತ್ವಿಕವಾಗಿ ಸಂನ್ಯಾಸಿಯು ಯಾರು ಮತ್ತು ಯೋಗಿಯು ಯಾರು ಎಂಬುದನ್ನು ಹೇಳುತ್ತಾನೆ. ಕರ್ಮಫಲವನ್ನು ಬಯಸದೇ ತಾನು ಅವಶ್ಯವಾಗಿ ಮಾಡಬೇಕಾದ ನಿತ್ಯ-ನೈಮಿತ್ತಿಕಾದಿ ಕರ್ಮಗಳನ್ನು ಯಾವನು ಮಾಡುತ್ತಾನೆಯೋ–ಅವನೇ ಸಂನ್ಯಾಸಿಯು

ಮತ್ತು ಅವನೇ ಯೋಗಿಯು. ಶ್ರೀಕೃಷ್ಣನ ಈ ಮಾತಿನಲ್ಲಿ ಎರಡು ವಿಧವಾದ ಸಮಸ್ಯೆಗಳು ಉದ್ಭವಿಸುತ್ತವೆ. ಕರ್ಮಫಲವನ್ನು ಅಪೇಕ್ಷಿಸದೇ ಈಶ್ವರ ಪ್ರೀತ್ಯರ್ಥವಾಗಿ ಕರ್ಮಮಾಡುವವನು ಕರ್ಮಯೋಗೀ ಎಂದು ಈ ಹಿಂದೆ ಬಂದಿರುತ್ತದೆ. ಕರ್ಮಮಾಡುವವರೆಲ್ಲರೂ ಸಾಮಾನ್ಯವಾಗಿ ಅಗ್ನಿಯನ್ನಿಟ್ಟು ಕೊಂಡು ಸಪತ್ನೀಕರಾಗಿಯೇ ಇರುತ್ತಾರೆ. ಶ್ರೀಕೃಷ್ಣನು ಮೇಲೆ ಹೇಳಿರುವಂತೆ ಫಲತ್ಯಾಗಸಹಿತವಾದ ಕರ್ತವ್ಯಕರ್ಮಗಳನ್ನು ಮಾಡುತ್ತಿದ್ದರೆ ಸಪತ್ನೀಕರಾದ ಗೃಹಸ್ಥರನ್ನೂ ಸಂನ್ಯಾಸಿಗಳೆಂದು ತಿಳಿಯಬಹುದೇ? ಸಂನ್ಯಾಸಿಯಾದವನಿಗೆ ಅಗ್ನಿಯಿಲ್ಲವೆಂಬ ವಿಷಯವು ಶ್ರುತಿ-ಸ್ಮೃತಿಗಳಲ್ಲಿಯೂ ಧರ್ಮಶಾಸ್ತ್ರ ಗಳಲ್ಲಿಯೂ ಹೇಳಲ್ಪಟ್ಟಿದೆ. ಅದಕ್ಕೆ ವಿರೋಧವಾಗಿ ಶ್ರೀಕೃಷ್ಣನಿಲ್ಲಿ ಗೃಹಸ್ಥನನ್ನೇ ಸಂನ್ಯಾಸೀ ಎನ್ನುತ್ತಾನೆಯೇ? ಅವನೇ ಸಂನ್ಯಾಸೀ–ಅವನೇ ಯೋಗೀ ಎಂದು ಹೇಳುತ್ತಾನೆ. ಪರಮಾತ್ಮನೊಡನೆ ಯೋಗಸಂಬಂಧವನ್ನು ಹೊಂದತಕ್ಕವನು ಸಂನ್ಯಾಸಿಯು ಮಾತ್ರವೇ? ಬ್ರಹ್ಮಚಾರೀ-ಗೃಹಸ್ಥ-ವಾನಪ್ರಸ್ಥರು ಯೋಗದಿಂದ ಜ್ಞಾನವನ್ನು ಪಡೆಯಲು ಸಾಧ್ಯವಿಲ್ಲವೇ? ಮುಂದಿನ ಪಾದದಲ್ಲಿ ಶ್ರೀಕೃಷ್ಣನು **ನ ನಿರಗ್ನಿರ್ನ ಚಾಕ್ರಿಯಃ**–ಅಗ್ನಿಯಿಲ್ಲದವನೂ ಏನನ್ನೂ ಮಾಡದೇ ಇರುವವನೂ ಸಂನ್ಯಾಸಿಯಲ್ಲ ಎಂದು ಹೇಳಿದ್ದಾನೆ. ಇದರಿಂದಿವನು ಸಂನ್ಯಾಸಿಗೆ ಹೊರಗಿನ ಅಗ್ನಿಯಿಲ್ಲ ; ಕರ್ಮವಿಲ್ಲ–ಎಂಬುದನ್ನು ಒಪ್ಪಿದಂತಾಗಿದೆ. ಆದರೆ ಇಷ್ಟುಮಾತ್ರದಿಂದಲೇ ಸಂನ್ಯಾಸಿಯಾಗಲಾರ–ಎಂಬುದು ಶ್ರೀಕೃಷ್ಣನ ಅಭಿಪ್ರಾಯ.

ಗೃಹಸ್ಥಾಶ್ರಮದಲ್ಲಿ ಅಗ್ನಿಹೋತ್ರಾದಿಗಳನ್ನು ಮಾಡಬೇಕು. ಯಜ್ಞ-ಯಾಗಾದಿಗಳನ್ನು ಮಾಡಬೇಕು. ಆದರೆ ಸಂನ್ಯಾಸಿಯಾದವನಿಗೆ ಅಗ್ನಿ ಯನ್ನಿಟ್ಟುಕೊಳ್ಳಲು ಅಧಿಕಾರವಿಲ್ಲ. ಅವನು ನಿರಗ್ನಿಯಾಗಿ ಭಿಕ್ಷೆಯಿಂದ ಶರೀರಯಾತ್ರೆಯನ್ನು ನಿರ್ವಹಿಸಬೇಕು.

**ಅನಗ್ನಿರನಿಕೇತಸ್ಸ್ಯಾತ್ । ತ್ಯಕ್ತ್ವಾ ದ್ರವ್ಯಾಗ್ನಿಸಾಧ್ಯಾನಿ ಕರ್ಮಾಣಿ**

ಜಗತ್ತಿನ ವ್ಯವಹಾರದಲ್ಲಿ ಮನಸ್ಸು ಹಾಕಬಾರದು–ಎಂದು ಮನು ಸ್ಮೃತಿಯಲ್ಲಿ ಹೇಳಿದೆ. ಈ ಸ್ಮೃತಿವಚನವನ್ನು ತೆಗಳುವ ಅಭಿಪ್ರಾಯವೂ ಶ್ರೀಕೃಷ್ಣನದಲ್ಲ. ಒಂದು ವಿಷಯವು ಮಾತ್ರ ನಿಶ್ಚಯ. ಸಂನ್ಯಾಸಿತ್ವವು

ಬೌದ್ಧಿಕವಾದುದು. ಕೇವಲ ಒಂದು ಆಶ್ರಮ ಅಥವಾ ಹೊರಗಿನ ವೇಷಗಳಿಗೆ ಸೀಮಿತವಾದುದಲ್ಲ. ಅದು ಒಂದು ಶ್ರೇಷ್ಠವಾದ ಮನೋಧರ್ಮ. ನಿಷ್ಕಾಮ ಕರ್ಮಗಳನ್ನು ಮಾಡುತ್ತಾ ಮುನಿಗಳಾಗಿ (ಜ್ಞಾನಿಗಳಾಗಿ) ಅನಂತರ ತಮ್ಮ ಇಚ್ಛೆಯಂತೆ ಸಂನ್ಯಾಸವನ್ನು ಸ್ವೀಕರಿಸುತ್ತಿದ್ದರೆಂಬುದಕ್ಕೆ ಬೃಹದಾರಣ್ಯಕದಲ್ಲಿ ಮಂತ್ರವಿದೆ :

**ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ ಯಜ್ಞೇನ ದಾನೇನ ತಪಸಾನಾಶಕೇನ ಏತಮೇವ ವಿದಿತ್ವಾ ಮುನಿರ್ಭವತಿ ।**

ನಿತ್ಯಸ್ವಾಧ್ಯಾಯದಿಂದಲೂ, ಯಜ್ಞದಿಂದಲೂ, ದಾನದಿಂದಲೂ, ನಾಶ ಕರವಲ್ಲದ (ನಾಶವಿಲ್ಲದ) ತಪಸ್ಸಿನಿಂದಲೂ ಇವನನ್ನು ಅರಿತುಕೊಳ್ಳಲು ಬಯಸುತ್ತಾರೆ. ಇವನನ್ನೇ ಅರಿತುಕೊಂಡ ಪುರುಷನು ಮುನಿಯಾಗುತ್ತಾನೆ.

ಈ ವಾಕ್ಯದಿಂದ ನಿಷ್ಕಾಮಕರ್ಮವನ್ನು ಮಾಡುತ್ತಿದ್ದಾಗಲೇ ಅವರು ಆತ್ಮಶುದ್ಧಿಯನ್ನು ಪಡೆದು ಮುನಿಗಳು (ಜ್ಞಾನಿಗಳು) ಆಗುತ್ತಾರೆ–ಎಂದಂತಾಯಿತು. ಅನಂತರ ಅವರು ಸಂನ್ಯಾಸವನ್ನು ಸ್ವೀಕರಿಸಬಹುದು. ಜನಕನೇ ಮೊದಲಾದವರಂತೆ ಸ್ವೀಕರಿಸದೆಯೂ ಇರಬಹುದು. ಅಂತಹವರು ವೇಷದಲ್ಲಿ ಸಂನ್ಯಾಸಿಗಳಾಗಿರದಿದ್ದರೂ ವಸ್ತುತಃ ಸಂನ್ಯಾಸಿಗಳೇ ಆಗಿರುತ್ತಾರೆ. ಕರ್ಮಯೋಗಿಗಳೂ ಸಂನ್ಯಾಸಿಗಳೆಂಬುದಕ್ಕೆ ಈ ಕಾರಣಗಳನ್ನು ಕೊಡಬಹು ದಾಗಿದೆ. ಕರ್ಮಯೋಗಿಗಳು ಕರ್ಮಗಳನ್ನು ಕಾಮ್ಯಕರ್ಮಗಳು (ಫಲ ಕ್ಕಾಗಿಯೇ ಮಾಡುವ ಕರ್ಮಗಳು) ಮತ್ತು ನಿಷ್ಕಾಮಕರ್ಮಗಳು ಎಂದು ಎರಡು ವಿಧವಾಗಿ ವಿಂಗಡಿಸುತ್ತಾರೆ. ಇದಕ್ಕೆ ಮನುಸ್ಮೃತಿಯಲ್ಲಿ ಅನುಕ್ರಮವಾಗಿ ಪ್ರವೃತ್ತಕರ್ಮ–ನಿವೃತ್ತಕರ್ಮಗಳೆಂದು ಕರೆದಿದ್ದಾರೆ.

**ಪ್ರವೃತ್ತಂ ಚ ನಿವೃತ್ತಂ ಚ ದ್ವಿವಿಧಂ ಕರ್ಮ ವೈದಿಕಮ್ ।**
**ಇಹ ಚಾಮುತ್ರ ವಾ ಕಾಮ್ಯಂ ಪ್ರವೃತ್ತಂ ಕರ್ಮ ಕೀರ್ತ್ಯತೇ ।**
**ನಿಷ್ಕಾಮಜ್ಞಾನಪೂರ್ವಂ ತು ನಿವೃತ್ತಮುಪದಿಶ್ಯತೇ ॥೧೫೬॥**

ಈ ಎರಡರಲ್ಲಿ ಕಾಮ್ಯಕರ್ಮಗಳನ್ನು ಕರ್ಮಯೋಗಿಯು ಬಿಟ್ಟೇಬಿಡು ತ್ತಾನೆ. ಅಂದರೆ ಅವುಗಳನ್ನು ಸಂನ್ಯಾಸಮಾಡುತ್ತಾನೆ. ತ್ಯಾಗಮಾಡುತ್ತಾನೆ.

ಉಳಿದ ಕರ್ಮಗಳನ್ನು ಬ್ರಹ್ಮನಲ್ಲಿ ನ್ಯಾಸಮಾಡಿ ಆಚರಿಸುತ್ತಾನೆ. ಹೀಗೆ ಮಾಡುವುದರಿಂದ ಕರ್ಮಯೋಗಿಯೂ ಸಂನ್ಯಾಸ ಮತ್ತು ತ್ಯಾಗ–ಈ ಎರಡನ್ನೂ ಮಾಡಿದಂತಾಗುತ್ತದೆ. ಶ್ರೀಕೃಷ್ಣನು ಐದನೆಯ ಅಧ್ಯಾಯದಲ್ಲಿ ಕರ್ಮಯೋಗದ ವೈಶಿಷ್ಟ್ಯವನ್ನು ಹೇಳಿದನಂತರ ದ್ವಂದ್ವಾತೀತನಾದ, ರಾಗ-ದ್ವೇಷಗಳಿಲ್ಲದ ಕರ್ಮಯೋಗಿಯು 'ನಿತ್ಯಸಂನ್ಯಾಸೀ' ಎಂದೇ ಹೇಳಿದ್ದಾನೆ. ಆದುದರಿಂದ ಇಲ್ಲಿಯೂ ಸಹ ನಿರಗ್ನಿತ್ವವಾಗಲೀ, ಕೇವಲ ಸಂನ್ಯಾಸಾಶ್ರಮ ಸ್ವೀಕಾರವಾಗಲೀ, ನಿಷ್ಕ್ರಿಯತ್ವವಾಗಲೀ (ಕರ್ಮಮಾಡದೇ ಇರುವುದಾಗಲೀ) ಸಂನ್ಯಾಸಿಯ ಲಕ್ಷಣವಲ್ಲ–ಎಂಬುದೇ ಶ್ರೀಕೃಷ್ಣನ ಖಚಿತವಾದ ಅಭಿಪ್ರಾಯ ವಾಗಿದೆ. ಗೃಹಸ್ಥನು ಫಲಾಭಿಸಂಧಿಯಿಲ್ಲದೇ ನಿತ್ಯ-ನೈಮಿತ್ತಿಕಕರ್ಮಗಳನ್ನು ಪರಮೇಶ್ವರಪ್ರೀತ್ಯರ್ಥವಾಗಿ ಮಾಡಿಕೊಂಡಿದ್ದು, ಜಿತೇಂದ್ರಿಯನಾಗಿ, ಜಿತಮನಸ್ಕನಾಗಿ ಪರಮಾತ್ಮನೊಡನೆ ಯೋಗವನ್ನು ಹೊಂದಿದರೆ ಅವನು ಸ್ಥಿತಪ್ರಜ್ಞ ಅಥವಾ ಮುನಿಯೇ ಆಗುತ್ತಾನೆ. ಅವನು ತನ್ನ ಕರ್ಮಗಳೆಲ್ಲವನ್ನೂ ಪರಮಾತ್ಮನಲ್ಲಿಯೇ ಸಂಪೂರ್ಣವಾಗಿ ನ್ಯಾಸಮಾಡುವುದರಿಂದ ಅವನನ್ನು ಅನ್ವರ್ಥನಾಮದಿಂದ 'ಸಂನ್ಯಾಸೀ' ಎಂದೂ ಕರೆಯಬಹುದು. ಬೃಹದಾರಣ್ಯಕದಲ್ಲಿ ಹೇಳಿರುವಂತೆ ಅವನು ನಿಷ್ಕಾಮಕರ್ಮಗಳನ್ನು ಮಾಡುತ್ತಲಿದ್ದು ಜ್ಞಾನವನ್ನು ಪಡೆದುಕೊಂಡನಂತರ ಸಂನ್ಯಾಸಾಶ್ರಮವನ್ನಾದರೂ ಸ್ವೀಕರಿಸಬಹುದು. ಅಥವಾ ಜ್ಞಾನವನ್ನು ಪಡೆದುಕೊಂಡ ಮೇಲೂ ಅವನು ಜನಕಾದಿಗಳಂತೆ ಲೋಕಕಲ್ಯಾಣಕ್ಕಾಗಿ ಕರ್ಮಮಾಡುತ್ತಲೂ ಇರಬಹುದು. ಹೇಗಿದ್ದರೂ ಅವನು ಸಂನ್ಯಾಸಿಯೇ. ಇಷ್ಟು ಅಭಿಪ್ರಾಯವನ್ನು ನಾವು ಈ ಶ್ಲೋಕದಿಂದ ಹೊಂದಬಹುದಾಗಿದೆ.

ಅಗ್ನಿತ್ಯಾಗಮಾಡಿದವನನ್ನೂ ಮತ್ತು ಕರ್ಮತ್ಯಾಗಮಾಡಿದವನನ್ನೂ ಸಂನ್ಯಾಸಿಯೆಂದೂ–ಯೋಗಿಯೆಂದೂ ಶ್ರುತಿ-ಸ್ಮೃತಿ-ಯೋಗಶಾಸ್ತ್ರಗಳಲ್ಲಿ ಕರೆದಿರುವುದು ಪ್ರಸಿದ್ಧವಾಗಿದೆ. ಹಾಗಿರುವಾಗ ಇಲ್ಲಿ ಅಗ್ನಿಯುಳ್ಳವನನ್ನೂ ಕರ್ಮವನ್ನು ಆಚರಿಸುತ್ತಿರುವನನ್ನೂ ಸಂನ್ಯಾಸಿಯೆಂದೂ ಯೋಗಿಯೆಂದೂ ಕರೆದಿರುವುದು ಹೇಗೆ ಸರಿ? ಎಂದರೆ : ಗುಣವಿಶೇಷವನ್ನು ಕಾರಣವನ್ನಾಗಿಟ್ಟುಕೊಂಡು ನಿಷ್ಕಾಮಕರ್ಮಮಾಡುವ ಸದ್ಗೃಹಸ್ಥನಲ್ಲಿ ಸಂನ್ಯಾಸಿತ್ವವನ್ನೂ ಯೋಗಿತ್ವವನ್ನೂ ಹೇಳುವುದು ಭಗವಂತನಿಗೆ ಇಷ್ಟವಾಗಿದೆ. ಅದು

ಹೇಗೆಂದರೆ : ಕರ್ಮಫಲಸಂಕಲ್ಪವನ್ನು ಸಂನ್ಯಾಸಮಾಡುವುದರಿಂದ ಅವನನ್ನು (ಗೃಹಸ್ಥನನ್ನು ) ಸಂನ್ಯಾಸೀ ಎನ್ನಬಹುದು ಮತ್ತು ಯೋಗಾಂಗವಾಗಿ ಕರ್ಮವನ್ನು ಅನುಷ್ಠಾನಮಾಡುವುದರಿಂದಲೂ ಅಥವಾ ಚಿತ್ತವಿಕ್ಷೇಪಕ್ಕೆ ಕಾರಣವಾದ ಕರ್ಮಫಲದ ಸಂಕಲ್ಪಗಳನ್ನು ಪರಿತ್ಯಾಗಮಾಡುವುದರಿಂದಲೂ ಅವನನ್ನು ಯೋಗೀ ಎಂದೂ ಕರೆಯಬಹುದು. ಹೀಗೆ ಗೌಣರೂಪದಲ್ಲಿ ಅವನಲ್ಲಿ ಸಂನ್ಯಾಸಿತ್ವ ಮತ್ತು ಯೋಗಿತ್ವ ಎರಡೂ ಇದೆ ಎನ್ನಬಹುದು.

(ಶಂ.ಭಾ.)

ಸ್ವರ್ಗಾದಿ ಕರ್ಮಫಲಗಳನ್ನು ಬಯಸದೇ ಕರ್ಮಾನುಷ್ಠಾನವೆಂಬ ಕಾರ್ಯವನ್ನೇ ಯಾವನು ಆಚರಿಸುತ್ತಾನೆಯೋ ಅವನು–'ಪರಮಪುರುಷನ ಆರಾಧನಾರೂಪವಾಗಿರುವ ಕರ್ಮವೇ ನನಗೆ ಪ್ರಯೋಜನ. ಅದರಿಂದ ಸಾಧ್ಯವಾಗಬೇಕಾದ ಬೇರೆ ಯಾವ ಪ್ರಯೋಜನವೂ ಇಲ್ಲ'–ಎಂದು ಕರ್ಮವನ್ನಾಚರಿಸುವನು. ಸಂನ್ಯಾಸಿಯು ಎಂದರೆ ಜ್ಞಾನಯೋಗನಿಷ್ಠನು. ಯೋಗಿಯು ಎಂದರೆ ಕರ್ಮಯೋಗನಿಷ್ಠನು. ಶಾಸ್ತ್ರವು ಹೇಳುವ ಯಜ್ಞಾದಿ ಕರ್ಮಗಳಲ್ಲಿ ತೊಡಗದವನೂ ಅಲ್ಲ ; ಕೇವಲ ಜ್ಞಾನನಿಷ್ಠನೂ ಅಲ್ಲ. ಅಂತಹವನಿಗೆ ಕೇವಲ ಜ್ಞಾನನಿಷ್ಠೆಯು ಮಾತ್ರವಿರುತ್ತದೆ. ಕರ್ಮಯೋಗನಿಷ್ಠನಿಗಾದರೋ ಎರಡೂ ಉಂಟು. (ರಾ.ಭಾ.)

ಅಗ್ನಿಯಿಲ್ಲದವನೂ ಮತ್ತು ಕರ್ಮರಹಿತನೂ ಆದವನು ಸಂನ್ಯಾಸಿಯೂ ಯೋಗಿಯೂ ಆಗುವುದಿಲ್ಲ. ದೈವಮೇವಾಪರೇ ಎನ್ನುವ ಶ್ಲೋಕದಲ್ಲಿ ನಾಲ್ಕನೆಯ ಆಶ್ರಮದವರಿಗೂ ಕೂಡ ಅಗ್ನಿಯನ್ನೂ ಕ್ರಿಯೆಯನ್ನೂ ಹೇಳಿದೆ. **ಅಗ್ನಿರ್ಬ್ರಹ್ಮ ಚ ತತ್ಪೂಜಾ ಕ್ರಿಯಾ ನ್ಯಾಸಾಶ್ರಮೇ ಸ್ಮೃತಾ** ಎಂಬ ಶಾಸ್ತ್ರಪ್ರಮಾಣವೂ ಇದೆ. ಹಾಗಾದರೆ ಸಂನ್ಯಾಸಿಗೆ ಅಗ್ನಿಯಿಲ್ಲ ; ಕರ್ಮವಿಲ್ಲ ಎನ್ನುವ ಮಾತು ಯಾವ ಆಧಾರದ ಮೇಲೆ ಬಂದಿದೆಯೆಂದರೆ : ಅವನಿಗೆ ಹೊರಗಿನ ಅಗ್ನಿ ಹೊರಗಿನ ಕರ್ಮ ಇವುಗಳು ಇಲ್ಲ–ಎನ್ನುವ ಅರ್ಥದಲ್ಲಿ. **ಅನಗ್ನಿತ್ವಾದಿ ಪ್ರವಾದಶ್ಚ ಬಾಹ್ಯಾಗ್ನ್ಯಾದ್ಯಭಾವನಿಬನ್ಧನ ಇತಿ ಭಾವಃ ।**

ಈ ಅಧ್ಯಾಯದ ವಿಷಯವೇನೆಂದರೆ : ಹಿಂದಿನ ಅಧ್ಯಾಯದ ಕೊನೆಯಲ್ಲಿ ಜ್ಞಾನಕ್ಕೆ ಅಂತರಂಗಸಾಧನವಾದ ಧ್ಯಾನಯೋಗಕ್ಕೆ ಸೂತ್ರವಾಗಿರುವ

ಸ್ಪರ್ಶಾನ್ಕೃತ್ವಾ ಮುಂತಾದ ಶ್ಲೋಕಗಳ ಉಪಾಯವು ಉಪದಿಷ್ಟವಾಗಿದೆ. ಆ ಶ್ಲೋಕಗಳ ವೃತ್ತಿ (ವ್ಯಾಖ್ಯಾನ) ರೂಪವಾಗಿ ಈ ಅಧ್ಯಾಯವು ಆರಂಭ ವಾಗುತ್ತದೆ. ಧ್ಯಾನಯೋಗವನ್ನು ಹತ್ತುವುದಕ್ಕೆ ಅಸಮರ್ಥನಾಗಿ ಎಲ್ಲಿಯ ವರೆಗೆ ಇರುತ್ತಾನೆಯೋ ಅಲ್ಲಿಯವರೆಗೂ ಗೃಹಸ್ಥನು ಕರ್ತವ್ಯಕರ್ಮವನ್ನು ಆಚರಿಸಬೇಕು ಎಂದು ಮೊದಲು ಕರ್ಮಯೋಗವನ್ನು ಸ್ತುತಿಸಲಾಗಿದೆ. (ಶಂ.ಭಾ.)

ಹಿಂದೆ ಪರಿಕರಸಹಿತವಾದ ಕರ್ಮಯೋಗವನ್ನು ಉಪದೇಶಿಸಿದ್ದಾ ಯಿತು. ಈಗ ಜ್ಞಾನಯೋಗ-ಕರ್ಮಯೋಗಗಳಿಂದ ಸಾಧ್ಯವಾಗುವ ಆತ್ಮಾವ ಲೋಕನರೂಪವಾದ ಯೋಗಾಭ್ಯಾಸವಿಧಿಯನ್ನು ಈ ಅಧ್ಯಾಯದಲ್ಲಿ ಉಪದೇಶಿಸಲಾಗಿದೆ. ಕರ್ಮಯೋಗವು ಇತರ ಯೋಗದ ಅಪೇಕ್ಷೆಯಿಲ್ಲದ ಯೋಗಸಾಧನೆ–ಎಂಬುದನ್ನು ದೃಢಪಡಿಸಲು ಜ್ಞಾನಾಕಾರವಾಗಿ ಯೋಗ ಶಿರಸ್ಕವಾಗಿರುವ ಕರ್ಮಯೋಗವನ್ನು ಅನುವಾದಮಾಡಲಾಗಿದೆ. (ರಾ.ಭಾ.)

ಈ ಅಧ್ಯಾಯದಲ್ಲಿ ಜ್ಞಾನಕ್ಕೆ ಅಂತರಂಗಸಾಧನವಾದ ಸಮಾಧಿಯೋಗ ವನ್ನು ಹೇಳಲಾಗಿದೆ.) (ಮ.ಭಾ.)

**ಓಂ ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಣ್ಡವ ।**
**ನ ಹ್ಯಸಂನ್ಯಸ್ತಸಙ್ಕಲ್ಪೋ ಯೋಗೀ ಭವತಿ ಕಶ್ಚನ ॥೨॥**

ಪಾಂಡವ! ಯಾವುದನ್ನು ಸಂನ್ಯಾಸವೆಂದು ಕರೆಯುವರೋ ಅದನ್ನು ಯೋಗವೆಂದು ತಿಳಿ. ಏಕೆಂದರೆ : ಸಂಕಲ್ಪವನ್ನು ಸಂನ್ಯಾಸಮಾಡದ ಯಾವನೂ ಯೋಗಿಯಾಗುವುದಿಲ್ಲ.

* * *

(ಸಂನ್ಯಾಸ ಎಂದರೇನು? **'ಸರ್ವಕರ್ಮತತ್ಫಲಪರಿತ್ಯಾಗಲಕ್ಷಣಂ ಪರಮಾರ್ಥಸಂನ್ಯಾಸಂ ಸಂನ್ಯಾಸಂ ವದನ್ತಿ**–ಎಲ್ಲ ಕರ್ಮಗಳನ್ನೂ ಅವುಗಳ ಫಲಗಳನ್ನೂ ಬಿಡುವ ರೂಪವಾಗಿರುವ ಪರಮಾರ್ಥ ಸಂನ್ಯಾಸವನ್ನು ಶ್ರುತಿ-ಸ್ಮೃತಿಗಳನ್ನು ಬಲ್ಲವರು ಸಂನ್ಯಾಸ ಎನ್ನುತ್ತಾರೆ' ಎಂದು ಶ್ರೀಶಂಕರರು ಹೇಳಿದ್ದಾರೆ. ಶರೀರ, ಇಂದ್ರಿಯಗಳು ಮತ್ತು ಮನಸ್ಸುಗಳಿಂದಾಗುವ ಎಲ್ಲ ಕರ್ಮಗಳನ್ನೂ ಮತ್ತು ಅವುಗಳ ಫಲಗಳನ್ನೂ

ಬಿಟ್ಟು ಮನಸ್ಸನ್ನು ಪರಮಾತ್ಮನಲ್ಲಿ ವಿಲೀನಗೊಳಿಸುವುದೇ ಸಂನ್ಯಾಸ. ಕರ್ಮಗಳೆಲ್ಲವನ್ನೂ ಮಮತೆ, ಆಸಕ್ತಿ, ಕಾಮನೆಗಳಿಲ್ಲದೇ ಪರಮೇಶ್ವರ ಪ್ರೀತ್ಯರ್ಥವಾಗಿ ಮಾಡುವುದೇ ಯೋಗ. ಸಂನ್ಯಾಸ ಮತ್ತು ಯೋಗ ಎರಡ ರಲ್ಲಿಯೂ ತ್ಯಾಗವಿದೆ. ಎರಡರ ಉದ್ದೇಶವೂ ಒಂದೇ ಆಗಿದೆ. ಆದುದರಿಂದ ಇಂತಹ ಕರ್ಮ ಮತ್ತು ಕರ್ಮಫಲಾಸಂಗವಿಲ್ಲದ, ಪರಮಾತ್ಮನಲ್ಲಿಯೇ ಸರ್ವದಾ ನ್ಯಾಸವಾಗಿರುವ ಮನಸ್ಸುಳ್ಳ ಸಂನ್ಯಾಸವೇ ಯೋಗ ಎಂದು ತಿಳಿ–ಎನ್ನುತ್ತಾನೆ ಶ್ರೀಕೃಷ್ಣ.

**ಅಸಂನ್ಯಸ್ತಸಙ್ಕಲ್ಪಃ**–ಸಂನ್ಯಾಸ ಎಂದರೆ ತ್ಯಾಗ. ಸಂನ್ಯಸ್ತಸಂಕಲ್ಪ ಎಂದರೆ ಸಂಕಲ್ಪತ್ಯಾಗಮಾಡಿದವನು. ಅಸಂನ್ಯಸ್ತಸಂಕಲ್ಪ ಎಂದರೆ ಸಂಕಲ್ಪವನ್ನು ತ್ಯಾಗಮಾಡದೇ ಇರುವವನು. ಅರ್ಥಾತ್ ಫಲಾಭಿಸಂಧಿಯಿಂದ, ಫಲೇಚ್ಛೆಯಿಂದ ಕರ್ಮಮಾಡುವವನು ಯೋಗಿಯಾಗುವುದಿಲ್ಲ ; ಕರ್ಮ ಯೋಗಿಯಾಗುವುದಿಲ್ಲ. ಇದನ್ನು ಹೀಗೆ ವಿವರಿಸಿ ಹೇಳಬಹುದಾಗಿದೆ : ಸಂಕಲ್ಪತ್ಯಾಗಮಾಡದವನು ಎಂದರೆ ಫಲಾಭಿಸಂಧಿಯನ್ನಿಟ್ಟುಕೊಂಡು ನಿತ್ಯ-ನೈಮಿತ್ತಿಕಕರ್ಮಗಳನ್ನು ಮಾಡುವವನು ಯೋಗಿಯಾಗುವುದಿಲ್ಲ. ಫಲಾಭಿ ಸಂಧಿಯಿಲ್ಲದೇ ನಿಃಸಂಕಲ್ಪನಾಗಿ ಕರ್ಮಮಾಡುವವನು ಯೋಗಿ ಎನಿಸಿ ಕೊಳ್ಳುತ್ತಾನೆ. ಈ ಯೋಗಿಯೇ ಸಂನ್ಯಾಸೀ.

ಮೇಲೆ ಲಕ್ಷಿತವಾಗಿರುವ ಕರ್ಮಯೋಗದಲ್ಲಿ ಜ್ಞಾನಯೋಗವೂ ಉಂಟು ಎಂದು ಇಲ್ಲಿ ಪ್ರತಿಪಾದಿಸಲಾಗಿದೆ. ಸಂನ್ಯಾಸ ಎಂದರೆ ಜ್ಞಾನ ಯೋಗ–ಆತ್ಮಯಾಥಾತ್ಮ್ಯಜ್ಞಾನ. ಇದನ್ನು ಕರ್ಮಯೋಗವೆಂದೇ ತಿಳಿಯ ಬೇಕು. ಏಕೆಂದರೆ : ಸಂಕಲ್ಪವನ್ನು ಪರಿತ್ಯಾಗಮಾಡದವನು–ಆತ್ಮಯಾಥಾ ತ್ಮ್ಯಾನುಸಂಧಾನದಿಂದ ಅನಾತ್ಮವಾದ ಪ್ರಕೃತಿಯಲ್ಲಿ ಆತ್ಮಸಂಕಲ್ಪವನ್ನು ತ್ಯಾಗ ಮಾಡದವನು ಯಾವನೂ ಕರ್ಮಯೋಗಿ ಎನಿಸುವುದಿಲ್ಲ. ಏಕೆಂದರೆ : **ಯಸ್ಯ ಸರ್ವೇ ಸಮಾರಮ್ಭಾಃ ಕಾಮಸಙ್ಕಲ್ಪವರ್ಜಿತಾಃ ।** ಎಂದು ಕರ್ಮ ಯೋಗಿಯನ್ನು ಭಗವಂತನು ಹಿಂದೆ ವರ್ಣಿಸಿದ್ದಾನಲ್ಲವೇ? (ರಾ.ಭಾ.)

ಸಂನ್ಯಾಸವೂ ಯೋಗದಲ್ಲಿ ಅಂತರ್ಭೂತವಾಗಿದೆ. ಆದುದರಿಂದ ಎರಡೂ ಒಂದೇ ಎಂದು ತಿಳಿಯಬೇಕು. ಕಾಮಸಂಕಲ್ಪವೇ ಮುಂತಾದುವು ಗಳನ್ನು ಪರಿತ್ಯಾಗಮಾಡದಿದ್ದರೆ ಯಾವನೂ ಉಪಾಯವಂತನಾಗಿ (ಯೋಗಿ

ಯಾಗಿ) ಆಗುವುದಿಲ್ಲ. ಇಲ್ಲಿ ಯೋಗಶಬ್ದಕ್ಕೆ 'ಜ್ಞಾನ ಮುಂತಾದುವುಗಳೇ ಉಪಾಯ' ಎಂಬ ಯೋಗಶಬ್ದದ ಮುಖ್ಯಾರ್ಥವನ್ನೇ ಗ್ರಹಿಸಬೇಕು.

(ಮ.ಭಾ.)

**ಓಂ ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ ।**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥೩॥**

ಯೋಗವನ್ನು ಹತ್ತಬೇಕೆಂಬ ಆಸೆಯುಳ್ಳವನಿಗೆ ಕರ್ಮವೇ ಕಾರಣ (ಸಾಧನ) ಎಂದು ಹೇಳಲ್ಪಟ್ಟಿದೆ. ಯೋಗವನ್ನು ಹತ್ತಿದ ಸ್ಥಿತಿಯಲ್ಲಿರುವ ಅವನಿಗೇ ಶಮವು ಕಾರಣವೆಂದು ಹೇಳಲ್ಪಟ್ಟಿದೆ.

* * *

(ಯೋಗ ಎಂದರೆ ಇಲ್ಲಿ ಧ್ಯಾನಯೋಗವೆಂದು ಇಟ್ಟುಕೊಳ್ಳಬೇಕು. ಧ್ಯಾನಕ್ಕೆ ಮುಖ್ಯವಾಗಿ ಮನಸ್ಸು ಶಾಂತಿಯಿಂದಿರಬೇಕು ; ತಿಳಿಯಾಗಿರಬೇಕು. ವಾಸನೆಯೆಂಬ ಝಂಝಾವಾತಕ್ಕೆ ಸಿಕ್ಕಿಕೊಂಡಿರಕೂಡದು. ಈ ಒಂದು ಸ್ಥಿತಿಯನ್ನು ಮುಟ್ಟಬೇಕಾದರೆ ; ಧ್ಯಾನಯೋಗಕ್ಕೆ ಹತ್ತಬೇಕಾದರೆ ಅಥವಾ ಹತ್ತುವ ಇಚ್ಛೆಯುಳ್ಳ ಮುನಿಯ ಕಾರ್ಯಸಿದ್ಧಿಗೆ ಕರ್ಮವು ಕಾರಣವಾಗಿರುತ್ತದೆ. ಕರ್ಮದ ಅವಲಂಬನೆಯಿಂದ ಮಾನವನು ಧ್ಯಾನಯೋಗಸ್ಥಿತಿಗೆ ಹತ್ತುತ್ತಾನೆ. ಕರ್ಮಯೋಗವೆಂಬುದು ಧ್ಯಾನಯೋಗಕ್ಕೆ ಮೆಟ್ಟಲಿದ್ದಂತೆ. ನಿಷ್ಕಾಮನಾಗಿ ಈಶ್ವರಪ್ರೀತ್ಯರ್ಥವಾಗಿ ಕರ್ಮವನ್ನು ಮಾಡುತ್ತಿರಬೇಕು. ಇದರಿಂದ ಮನಸ್ಸಿನ ಮೇಲೆ ಒಂದು ಸಂಸ್ಕಾರವಾಗುತ್ತದೆ. 'ನಾನು ನನಗಾಗಿ ಏನನ್ನೂ ಮಾಡಿಕೊಳ್ಳುತ್ತಿಲ್ಲ. ಈಶ್ವರಪ್ರೀತ್ಯರ್ಥವಾಗಿ ಮಾಡುತ್ತಿದ್ದೇನೆ. ಫಲಾಫಲಗಳು ನನಗೆ ಸಂಬಂಧಿಸಿದ್ದಲ್ಲ. ಸುಖ-ದುಃಖಗಳೂ ನನಗೆ ಸಂಬಂಧಿಸಿದುವುಗಳಲ್ಲ. ಇಂದ್ರಿಯಗಳಿಗೆ ಸಂಬಂಧಿಸಿದುವುಗಳು'–ಈ ರೀತಿಯಾಗಿ ಅನುಸಂಧಾನಮಾಡಿಕೊಂಡು ಕರ್ಮಮಾಡುತ್ತಿದ್ದರೆ ವಿಷಯಗಳಿಂದ ಇಂದ್ರಿಯಗಳು ಹಿಮ್ಮೆಟ್ಟುತ್ತವೆ. ಇಂದ್ರಿಯಗಳು ಮನಸ್ಸಿನಲ್ಲಿ ಲೀನವಾಗುತ್ತವೆ. ಮನಸ್ಸು ತಿಳಿಯಾದ ಸರೋವರದಂತೆ ಶಾಂತವಾಗುತ್ತದೆ. ಅರ್ಥಾತ್ ಅಂತಹ ಶಾಂತಿಯನ್ನು ಅಥವಾ ಶಮವನ್ನು ಸಾಧಿಸಿಕೊಳ್ಳಬೇಕಾದರೆ ನಿಷ್ಕಾಮಕರ್ಮವೇ ಕಾರಣವಾಯಿತು. ಯೋಗಾರೂಢನಾದ ಅವನಿಗೇ ಶಮವು ಕಾರಣವೆಂದು ಹೇಳಲ್ಪಟ್ಟಿದೆ. ಅದೇ ಮುನಿಯು ಯೋಗಾರೂಢನಾಗಿಬಿಟ್ಟರೆ–ಧ್ಯಾನಯೋಗಕ್ಕೆ ಹತ್ತಿಬಿಟ್ಟರೆ ಅವನಿಗೆ ಧ್ಯಾನಯೋಗದಲ್ಲಿ ಸದಾ

ನೆಲೆಸಿರುವುದಕ್ಕೆ ಯಾವುದು ಸಾಧನ ಎಂದರೆ ಶಮ, ಉಪಶಮ–ಎಲ್ಲ ಕರ್ಮಗಳ ನಿವೃತ್ತಿ.

ಪರಮಾರ್ಥಪ್ರಾಪ್ತಿಗೆ ಕರ್ಮವು ಕಾರಣವೇ? ಅಥವಾ ಕರ್ಮನಿವೃತ್ತಿಯು (ಶಮವು) ಕಾರಣವೇ? ಒಮ್ಮೊಮ್ಮೆ ಒಂದೊಂದನ್ನು ಕಾರಣವೆಂದು ಹೇಳಲು ಕಾರಣವೇನು?–ಎಂಬ ಅರ್ಜುನನ ಪ್ರಶ್ನೆಗೆ ಇಲ್ಲಿ ಅನೇಕವಾದ ಉತ್ತರವಿದೆ. ಧ್ಯೇಯಸಾಧನೆಗೆ ಕರ್ಮವೂ ಕಾರಣವಾಗುತ್ತದೆ. ಶಮವೂ (ಕರ್ಮಸಂನ್ಯಾಸವೂ) ಕಾರಣವಾಗುತ್ತದೆ. ಅವನು ಆರುರುಕ್ಷುವಾಗಿರುವಾಗ ಎಂದರೆ ಧ್ಯಾನಯೋಗವನ್ನು ಇನ್ನೂ ಹತ್ತಿಲ್ಲ. ಆದರೆ ಹತ್ತಬೇಕೆಂಬ ಇಷ್ಟವುಳ್ಳವನಾಗಿದ್ದಾನೆ–ಎನ್ನುವ ಸ್ಥಿತಿಯಲ್ಲಿ ನಿಷ್ಕಾಮವಾದ ಕರ್ಮದ ಆಚರಣೆಯು ಅವನಿಗೆ ಇಷ್ಟಸಿದ್ಧಿಗೆ ಕಾರಣವಾಗುತ್ತದೆ. ಅವನೇ ಧ್ಯಾನ ಯೋಗವನ್ನು ಹತ್ತಿಬಿಟ್ಟರೆ ಆಗ ಆ ಸ್ಥಿತಿಯಲ್ಲಿ ನೆಲೆಸಿರುವುದಕ್ಕೆ ಕರ್ಮ ನಿವೃತ್ತಿಯು ಕಾರಣವಾಗುತ್ತದೆ. ಭಗವಂತನು ಪರಮಾರ್ಥಪ್ರಾಪ್ತಿಗೆ ಯೋಗವು ಕಾರಣ ಎಂದು ಹೇಳಿದ್ದೂ ಸರಿಯೇ. ಕರ್ಮಸಂನ್ಯಾಸವು ಕಾರಣ ಎಂದು ಹೇಳಿದ್ದೂ ಸರಿಯೇ. ಯೋಗಿಯ ಅವಸ್ಥೆಗಳ ಭೇದದಿಂದ ಎರಡಕ್ಕೂ ಸಮನ್ವಯವೆಂದು ಭಗವಂತನೇ ವ್ಯಾಖ್ಯಾನಿಸುತ್ತಾನೆ. ಯೋಗಾರೂಢನಿಗೆ ಶಮವೇ ಕಾರಣ–ಎಂಬುದನ್ನು ತೋರಿಸುವ ಮಹಾಭಾರತದ ಶ್ಲೋಕವೊಂದನ್ನು ಶ್ರೀಶಂಕರರು ಹೀಗೆ ಉದ್ಧರಿಸುತ್ತಾರೆ :

**ನೈತಾದೃಶಂ ಬ್ರಾಹ್ಮಣಸ್ಯಾಸ್ತಿ ವಿತ್ತಂ**
**ಯಥೈಕತಾ ಸಮತಾ ಸತ್ಯತಾ ಚ ।**
**ಶೀಲಂ ಸ್ಥಿತಿರ್ದಣ್ಡನಿಧಾನಮಾರ್ಜವಂ**
**ಸತತಶ್ಚೋಪರಮಃ ಕ್ರಿಯಾಭ್ಯಃ ॥**

ಮೋಕ್ಷಧರ್ಮ ೧೭೫-೩೭

ಏಕಾಕಿಯಾಗಿರುವುದು, ಸರ್ವರಲ್ಲಿಯೂ ಸಮಬುದ್ಧಿಯುಳ್ಳವ ನಾಗಿರುವುದು, ಸತ್ಯವನ್ನು ನುಡಿಯುವುದು, ಒಳ್ಳೆಯ ನಡತೆ, ಸ್ಥಿರಚಿತ್ತನಾಗಿ ರುವುದು, ಹಿಂಸೆಮಾಡದೇ ಇರುವುದು, ಸರಳತನ, ಕ್ರಿಯೆಗಳನ್ನು ಆಗಾಗಲೇ ಬಿಡುತ್ತಿರುವುದು–ಇವುಗಳಿಗಿಂತಲೂ ಮಿಗಿಲಾದ ಧನವು ಬ್ರಾಹ್ಮಣನಿಗೆ ಮತ್ತೊಂದಿಲ್ಲ.

ಈ ಶ್ಲೋಕವನ್ನು ಉದಾಹರಿಸಿ ಶ್ರೀಶಂಕರರು ಶಮಃ ಎಂಬುದಕ್ಕೆ ಸರ್ವಕರ್ಮಗಳನ್ನೂ ಬಿಡುವುದು–ಎಂದು ಅರ್ಥಮಾಡಿರುತ್ತಾರೆ.

ಯೋಗವನ್ನು (ಆತ್ಮಾವಲೋಕನವನ್ನು ) ಹೊಂದುವ ಇಷ್ಟವುಳ್ಳ ಮುಮುಕ್ಷುವಿಗೆ ಕರ್ಮಯೋಗವೇ ಕಾರಣವಾಗುತ್ತದೆ. ಅವನೇ ಯೋಗಾ ರೂಢನಾಗಿಬಿಟ್ಟರೆ ಅವನಿಗೆ ಶಮವು (ಕರ್ಮನಿವೃತ್ತಿಯು) ಕಾರಣವಾಗುತ್ತದೆ. ಆದುದರಿಂದ ಆತ್ಮಾವಲೋಕನರೂಪವಾದ ಮೋಕ್ಷಪ್ರಾಪ್ತಿಯಾಗುವವರೆಗೂ ಕರ್ಮವನ್ನು ಆಚರಿಸುತ್ತಿರಬೇಕು. ಕರ್ಮವನ್ನು ಯಾವ ಕಾಲದವರೆಗೆ ಆಚರಿಸಬೇಕು ಎಂಬುದನ್ನು ಇಲ್ಲಿ ನಿರೂಪಿಸಲಾಗಿದೆ. (ರಾ.ಭಾ.)

ಸಮಾಧಿಯೋಗಕ್ಕೆ ಸಾಧನವಾಗಿ ಹೇಳಿರುವ ಕರ್ಮವನ್ನು ಒಮ್ಮೆ ಅನು ಷ್ಠಾನಮಾಡಿದರೆ ಸಾಕೇ? ಅಥವಾ ಫಲಪ್ರಾಪ್ತಿಯಾಗುವವರೆಗೂ ಮಾಡ ಬೇಕೇ?–ಎಂದು ಪ್ರಶ್ನೆಯ ಅರ್ಥ (ಶ್ರೀಜಯತೀರ್ಥರು.)

ಯೋಗವನ್ನು ಹತ್ತುವ ಇಷ್ಟವುಳ್ಳವನಿಗೆ ಎಂದರೆ ಉಪಾಯಸಂಪೂರ್ತಿ ಯನ್ನು ಬಯಸುವ ಮುನಿಗೆ ಕರ್ಮವು ಕಾರಣವಾಗುತ್ತದೆ. ಅವನು ಯೋಗಾರೂಢನಾಗಿಬಿಟ್ಟರೆ, ಅವನ ಉಪಾಯವು ಸಂಪೂರ್ಣವಾಗಿಬಿಟ್ಟರೆ ಎಂದರೆ ಅವನು ಅಪರೋಕ್ಷಜ್ಞಾನಿಯಾಗಿಬಿಟ್ಟರೆ–ಆಗ ಶಮವೇ (ಸಮಾಧಿಯೇ) ಕಾರಣವಾಗುತ್ತದೆ.

**ಕಾರಣಂ** = ಪರಮಸುಖಕ್ಕೆ ಕಾರಣವಾಗುತ್ತದೆ. ಅವನಿಗೆ ಎಲ್ಲವೂ ಉಪಶಮನವಾಗಿಬಿಟ್ಟಿರುವುದರಿಂದ ಸಮಾಧಿಯೇ ಮುಖ್ಯಕಾರಣವಾಗು ತ್ತದೆ. ಭೋಕ್ತವ್ಯವೆಲ್ಲವೂ ಎಂದರೆ ಪ್ರತಿಬಂಧಕವಾದ ಪ್ರಾರಬ್ಧಕರ್ಮಗಳೆ ಲ್ಲವೂ ಪೂರ್ಣವಾಗಿ ಮುಗಿದುಹೋದಾಗಲೇ ಅಸಂಪ್ರಜ್ಞಾತಸಮಾಧಿಯು ಚೆನ್ನಾಗಿ ಉಂಟಾಗುತ್ತದೆ. ಬೇರೆ ಸಮಯದಲ್ಲಾದರೋ ಭಗವಂತನ ಚಿಂತನೆ, ಜಪ–ಮುಂತಾದುವುಗಳಲ್ಲಿ ಯೋಗಿಯು ಇರುತ್ತಾನೆ.

**ಯೇ ತ್ವಾಂ ಪಶ್ಯನ್ತಿ ಭಗವನ್ ತ ಏವ ಸುಖಿನಃ ಪರಮ್ ।**
**ತೇಷಾಮೇವ ತು ಸಂಕ್ರಮ್ಯ ಸಮಾಧಿರ್ಜಾಯತೇ ನೃಣಾಮ್ ॥**

**ಭೋಕ್ತವ್ಯಕರ್ಮಣ್ಯಕ್ಷೀಣೇ ಜಪೇನ ಕಥಯಾಪಿ ವಾ ।**
**ವರ್ತಯನ್ತಿ ಮಹಾತ್ಮಾನಃ ತದ್ಭಕ್ತಾಸ್ತತ್ಪರಾಯಣಾಃ ॥ )**

(ಮ.ಭಾ.)

**ಓಂ ಯದಾ ಹಿ ನೇನ್ದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।**
**ಸರ್ವಸಙ್ಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ ॥೪॥**

ಯಾವಾಗ ಯೋಗಿಯು ಇಂದ್ರಿಯವಿಷಯಗಳಲ್ಲಿ ಮತ್ತು ಅವುಗಳಿಗೆ ಸಂಬಂಧಿಸಿದ ಕರ್ಮಗಳಲ್ಲಿ ಆಸಕ್ತನಾಗಿರುವುದಿಲ್ಲವೋ, ಎಲ್ಲ ಸಂಕಲ್ಪಗಳನ್ನೂ ತ್ಯಾಗಮಾಡಿರುವನೋ–ಆಗ ಅವನನ್ನು ಯೋಗಾರೂಢನೆಂದು ಹೇಳುತ್ತಾರೆ.

* * *

(ಈ ಶ್ಲೋಕದಲ್ಲಿ ಶ್ರೀಕೃಷ್ಣನು ಯೋಗಾರೂಢನ ಲಕ್ಷಣವನ್ನು ಹೇಳುತ್ತಾನೆ: ಯಾರು ಇಂದ್ರಿಯವಿಷಯಕರ್ಮಗಳಲ್ಲಿ (ಪ್ರತಿಷ್ಠಿತವಾದುದು) ನೋಡುವುದು, ಕೇಳುವುದು, ರುಚಿನೋಡುವುದು–ಇತ್ಯಾದಿಗಳಲ್ಲಿ ಮತ್ತು ಕಾಮ್ಯಕರ್ಮಗಳಲ್ಲಿ ತೊಡಗದೆ, ಸರ್ವಸಂಕಲ್ಪಗಳನ್ನೂ ಪರಿತ್ಯಾಗಮಾಡಿರುವನೋ ಅಂತಹವನನ್ನು ಯೋಗಾರೂಢ ಎನ್ನುತ್ತಾರೆ. ಸಂಕಲ್ಪವೆಂಬುದೇ ಕಾಮದ ಮೂಲ.

**ಸಙ್ಕಲ್ಪಮೂಲಃ ಕಾಮೋ ವೈ ಯಜ್ಞಾಃ ಸಙ್ಕಲ್ಪಸಮ್ಭವಾಃ ।**

ಕಾಮಕ್ಕೆ ಸಂಕಲ್ಪವೇ ಮೂಲ. ಸಂಕಲ್ಪದಿಂದಲೇ ಯಜ್ಞಗಳು ಹುಟ್ಟಿವೆ.
(ಮನು ೨-೩)

**ಕಾಮ ಜಾನಾಮಿ ತೇ ಮೂಲಂ ಸಙ್ಕಲ್ಪಾತ್ಕಿಲ ಜಾಯಸೇ ।**
**ನ ತ್ವಾಂ ಸಙ್ಕಲ್ಪಯಿಷ್ಯಾಮಿ ತೇನ ಮೇ ನ ಭವಿಷ್ಯಸಿ ॥**
ಮೋಕ್ಷಧರ್ಮ ೧೭೭-೨೫

ಕಾಮವೇ! ನಿನ್ನ ಮೂಲವನ್ನು ಅರಿತುಕೊಂಡೆನು. ಸಂಕಲ್ಪದಿಂದಲೇ ನೀನು ಹುಟ್ಟಿರುವೆ. ಇನ್ನು ಮುಂದೆ ನಾನು ಸಂಕಲ್ಪವನ್ನೇ ಮಾಡುವುದಿಲ್ಲ. ಆದುದರಿಂದ ನೀನು ನನ್ನ ಪಾಲಿಗೆ ಇರುವುದೇ ಇಲ್ಲ.

ಶ್ರೀಶಂಕರರು **ಕರ್ಮಸು** ಎಂಬುದಕ್ಕೆ **ನಿತ್ಯ–ನೈಮಿತ್ತಿಕ–ಕಾಮ್ಯ–ಪ್ರತಿಷಿದ್ಧೇಷು ಪ್ರಯೋಜನಾಭಾವಬುದ್ಧ್ಯಾ ನಾನುಷಜ್ಜತೇ ಅನುಷಂಗಂ ಕರ್ತವ್ಯತಾಬುದ್ಧಿಂ ನ ಕರೋತಿ ।** ನಿತ್ಯ-ನೈಮಿತ್ತಿಕ-ಕಾಮ್ಯ-ಪ್ರತಿಷಿದ್ಧ–ಎಂಬ ಕರ್ಮಗಳಲ್ಲಿ ಅವುಗಳಿಂದ ಯಾವ ಪ್ರಯೋಜನವೂ ತನಗೆ ಆಗ ಬೇಕಾಗಿಲ್ಲವೆಂಬ ಬುದ್ಧಿಯಿಂದ ಅವುಗಳಲ್ಲಿ ಆಸಕ್ತನಾಗಿರುವುದಿಲ್ಲ–ಎಂದು ಅರ್ಥಮಾಡಿರುತ್ತಾರೆ. ಸರ್ವಸಂಕಲ್ಪಸಂನ್ಯಾಸೀ ಎಂದು ಭಗವಂತನು

ಹೇಳಿರುವುದರಿಂದ ಸರ್ವಕಾಮಗಳನ್ನೂ ಸರ್ವಕರ್ಮಗಳನ್ನೂ ಬಿಟ್ಟುಬಿಡ ಬೇಕೆಂಬುದೇ ಅವನ ಅಭಿಪ್ರಾಯವೆಂದು ಶ್ರೀಶಂಕರರು ಹೇಳಿದ್ದಾರೆ.

ಆದುದರಿಂದ ಆರುರುಕ್ಷುವು ವಿಷಯಾನುಭವಕ್ಕೆ ಅರ್ಹನಾಗಿರುವುದ ರಿಂದ ಅದರಲ್ಲಿ ಸಂಗವಿಲ್ಲದಿರುವಿಕೆಯನ್ನು ಅಭ್ಯಾಸಮಾಡುವ ರೂಪವಾದ ಕರ್ಮಯೋಗವೇ ಅವನಿಗೆ ಯೋಗನಿಷ್ಪತ್ತಿಗೆ ಕಾರಣವಾಗುತ್ತದೆ. ಅವನು ವಿಷಯಾಸಂಗದ ಅಭ್ಯಾಸರೂಪವಾದ ಕರ್ಮಯೋಗವನ್ನೇ ಆಚರಿಸಬೇಕು. (ರಾ.ಭಾ.)

ಅನನುಷಂಗವು (ಸಂಗವಿಲ್ಲದಿರುವಿಕೆಯು) ಚೆನ್ನಾಗಿ ಆಗುವುದು ಯೋಗಾರೂಢನಿಗೆ ಮಾತ್ರವೇ. **ಯಸ್ಯ ಸಮ್ಯಗನನುಷಙ್ಗಃ ತಸ್ಯೈವ ಭವತಿ ।** ಪರಮಾತ್ಮನನ್ನು ಕಂಡವರಿಗೆ ದೋಷಲಯವು ತಾನಾಗಿಯೇ ಆಗು ತ್ತದೆ. ಇತರರಿಗಾದರೋ ಅದು ಪ್ರಯತ್ನಸಾಧ್ಯ.

**ಸ್ವತೋ ದೋಷಲಯೋ ದೃಷ್ಟ್ವಾ ತ್ವಿತರೇಷಾಂ ಪ್ರಯತ್ನತಃ**

(ಮ.ಭಾ.)

**ಓಂ ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।**
**ಆತ್ಮೈವ ಹ್ಯಾತ್ಮನೋ ಬನ್ಧುರಾತ್ಮೈವ ರಿಪುರಾತ್ಮನಃ ॥೫॥**

ತನ್ನಿಂದ ತನ್ನನ್ನು ಉದ್ಧಾರಮಾಡಿಕೊಳ್ಳಬೇಕು. ತನ್ನನ್ನು ತಾನು ಕೆಳಕ್ಕೆ ತಳ್ಳಬಾರದು. ಏಕೆಂದರೆ : ತನಗೆ ತಾನೇ ಬಂಧು. ತನಗೆ ತಾನೇ ಶತ್ರು.

* * *

(ತನ್ನಿಂದ ತನ್ನನ್ನು ತಾನೇ ಉದ್ಧಾರಮಾಡಿಕೊಳ್ಳಬೇಕು–ಎಂಬುದು ಶ್ರೀಕೃಷ್ಣನ ಮೊದಲನೆಯ ಸಂದೇಶ. ದಯಾಮಯನಾದ ಪರಮಾತ್ಮನು ಮನುಷ್ಯನಿಗೆ ತನ್ನನ್ನು ತಾನೇ ಉದ್ಧಾರಮಾಡಿಕೊಳ್ಳುವುದಕ್ಕಾಗಿ ಎಲ್ಲ ಸಲಕರಣೆಗಳನ್ನೂ ಒದಗಿಸಿಕೊಟ್ಟಿದ್ದಾನೆ.

ತತ್ತ್ವವನ್ನು ತಿಳಿದುಕೊಳ್ಳಲು ವೇದಾಂತಶಾಸ್ತ್ರಗಳಿವೆ. ಪ್ರವಚನ ಮಾಡಲು ದೊಡ್ಡ-ದೊಡ್ಡ ಆಚಾರ್ಯರಿದ್ದಾರೆ. ಆದರೆ ಪ್ರವಚನಗಳಾಗಲೀ, ತತ್ತ್ವಗಳ ಕೇವಲ ತಿಳಿವಳಿಕೆಯಾಗಲೀ–ಆತ್ಮನನ್ನು ಉದ್ಧಾರಮಾಡುವುದಿಲ್ಲ.

ಎಲ್ಲ ದೇಶಗಳಲ್ಲಿಯೂ ತತ್ತ್ವಶಾಸ್ತ್ರಗಳಿವೆ. ತತ್ತ್ವಜ್ಞರೂ ಇದ್ದಾರೆ. ಆದರೆ ಇದು ಕೇವಲ ತಿಳಿವಳಿಕೆಯಲ್ಲೇ ಪರ್ಯವಸಾನಹೊಂದುತ್ತದೆ. ಇದರಿಂದ ಮನಸ್ಸು ಸಂಸ್ಕೃತವಾಗಬಹುದು. ಆದರೆ ಭಾರತೀಯತತ್ತ್ವಶಾಸ್ತ್ರವು ಇಷ್ಟಕ್ಕೆ ಮಾತ್ರವೇ ಸೀಮಿತವಾಗಿಲ್ಲ. ಕೇವಲ ತಿಳಿವಳಿಕೆಯಿಂದ ಆತ್ಮೋದ್ಧಾರವಾಗುವುದಿಲ್ಲ. ಅದನ್ನು ಸಾಧಿಸಬೇಕು. ಆತ್ಮದರ್ಶನಮಾಡಿಕೊಳ್ಳಬೇಕು. ತನ್ಮೂಲಕ ಜನನ-ಮರಣರಹಿತವಾದ ಮುಕ್ತಿಯನ್ನು ಪಡೆಯಬೇಕು. ಶ್ರೀಕೃಷ್ಣನು ಹೇಳಿರುವ ಆತ್ಮೋದ್ಧಾರವೆಂದರೆ ಇದೇ ಆಗಿದೆ. ಈ ಆತ್ಮೋದ್ಧಾರವನ್ನು ನಮಗಾಗಿ ಬೇರೆಯವರು ಮಾಡಲಾರರು. ಪರಮ ಗುರುವೂ ಮತ್ತು ಶಾಸ್ತ್ರಗಳೂ ಮಾರ್ಗದರ್ಶನವನ್ನು ಮಾತ್ರ ಮಾಡಬಹುದು. ಗುರುವು ತನ್ನ ಶಕ್ತಿಯನ್ನೂ ಶಿಷ್ಯನಲ್ಲಿ ಹರಿಸಬಹುದು. ಆದರೆ ಮುಂದೆ ಶಿಷ್ಯನೇ ಅದನ್ನು ಅನವರತವಾದ ಸಾಧನೆಯ ಮೂಲಕ ಕೃಷಿಮಾಡಿ ಆತ್ಮಜ್ಞಾನವನ್ನು ಪಡೆದುಕೊಳ್ಳಬೇಕು. ಪ್ರಾಪಂಚಿಕಜೀವನದಲ್ಲಿ ಮಾತ್ರ ಪ್ರತಿಯೊಂದಕ್ಕೂ ಮತ್ತೊಬ್ಬರ ನೆರವು ಅತ್ಯಾವಶ್ಯಕ. ಸಾಂಸಾರಿಕಜೀವನದಲ್ಲಿ ಮನುಷ್ಯನು ಕ್ಷಣಮಾತ್ರವೂ ಸ್ವತಂತ್ರನಲ್ಲ. ಪ್ರತಿಯೊಂದು ಪದಾರ್ಥಕ್ಕೂ ಸಹ ಬೇರೆಯವರನ್ನೇ ಆಶ್ರಯಿಸಬೇಕಾಗುವುದು. ಹುಟ್ಟಿದಂದಿನಿಂದಲೂ ಮನುಷ್ಯನು ಅಸ್ವತಂತ್ರನೇ ಆಗಿರುತ್ತಾನೆ. ಮನುಷ್ಯಜೀವನವೇ ಸಹಕಾರ ಜೀವನ. ಅನ್ಯೋನ್ಯಾಶ್ರಯಿ. ಆದರೂ ಸಹ ಮನುಷ್ಯನು ತಾನು ಸ್ವತಂತ್ರನೆಂದು ಭ್ರಮಿಸುತ್ತಾನೆ. ಕಾಮ-ಕ್ರೋಧಾದಿಗಳನ್ನು ಗೆದ್ದು, 'ಇಂದ್ರಿಯಗಳ ಹಂಗಿಗೆ ಸಿಕ್ಕಿಕೊಳ್ಳದೆ' ಬುದ್ಧಿಯನ್ನು ಆತ್ಮನಲ್ಲಿ ಲೀನಗೊಳಿಸಿ, ಆತ್ಮದರ್ಶನಮಾಡಿ ಆತ್ಮೋದ್ಧಾರಮಾಡಿಕೊಂಡಾಗಲೇ ನಿಜವಾದ ಸ್ವಾತಂತ್ರ್ಯವನ್ನು ಪಡೆದಂತಾಗುತ್ತದೆ. ನಾವು ನಮ್ಮ ರೋಗವನ್ನು ವಾಸಿಮಾಡಿಕೊಳ್ಳಲು ನಾವೇ ಔಷಧಿಯನ್ನು ಕುಡಿಯಬೇಕು. ವೈದ್ಯನು ಔಷಧಿಯನ್ನು ಕುಡಿದರೆ ನಮ್ಮ ರೋಗವು ವಾಸಿಯಾಗುವುದಿಲ್ಲ. ಒಬ್ಬ ರಾಜನು ತನ್ನ ಗುರುಗಳನ್ನು ಕುರಿತು "ನನ್ನನ್ನು ಮಾಯೆಯಿಂದ ಪಾರುಮಾಡಿ" ಎಂದು ಕೇಳಿಕೊಳ್ಳುತ್ತಿದ್ದನು. ಗುರುಗಳು ರಾಜನಿಗೆ ಅಧ್ಯಾತ್ಮದ ಮೇಲೆ ಉತ್ಕಟೇಚ್ಛೆಯುಂಟಾಗಲೆಂದು ಅನೇಕದಿವಸಗಳವರೆಗೆ ಉದಾಸೀನರಾಗಿಯೇ ಇದ್ದುಬಿಟ್ಟರು. ರಾಜನ ಆಧ್ಯಾತ್ಮಿಕಜಿಜ್ಞಾಸೆಯು ಬಲವಾಯಿತು. ಗುರುಗಳನ್ನು

ಹಿಂದು-ಮುಂದು ಬಿಡದೇ ಪೀಡಿಸತೊಡಗಿದನು. ಆಗ ಗುರುಗಳು ಕಾಲವು ಪರಿಪಕ್ವವಾಗಿರುವುದೆಂದು ಭಾವಿಸಿ ಅರಮನೆಯಲ್ಲೇ ಇದ್ದ ಒಂದು ಕಂಬವನ್ನು ಬಲವಾಗಿ ತಬ್ಬಿಕೊಂಡು, ರಾಜನನ್ನು ಬಿಡಿಸಲು ಹೇಳಿದರು. ರಾಜನಿಗೆ ಅಚ್ಚರಿಯಾಯಿತು. 'ನೀವೇ ಬಲವಾಗಿ ತಬ್ಬಿಕೊಂಡಿರುವಿರಿ. ನೀವೇ ಬಿಟ್ಟರೆ ಆಯಿತು' ಎಂದನು. ಗುರುಗಳು ಒಡನೆಯೇ 'ನೀನೇ ಮಾಯೆಯನ್ನು ತಬ್ಬಿಕೊಂಡಿರುವೆ. ನೀನೇ ಅದನ್ನು ಬಿಟ್ಟರಾಯಿತು' ಎಂದರು. ರಾಜನಿಗೆ ಜ್ಞಾನೋದಯವಾಯಿತು. ಹೀಗೆ ನಮ್ಮನ್ನು ನಾವೇ ಉದ್ಧಾರ ಮಾಡಿಕೊಳ್ಳಬೇಕು. ಆಚಾರ್ಯರೂ ಮತ್ತು ಶಾಸ್ತ್ರಗಳೂ ನಮಗೆ ಮಾರ್ಗದರ್ಶನಮಾಡಬಹುದು.

ಎರಡನೆಯದಾಗಿ : ಶ್ರೀಕೃಷ್ಣನು **ನಾತ್ಮಾನಮವಸಾದಯೇತ್** ಎನ್ನುತ್ತಾನೆ. ಆತ್ಮನನ್ನು ಕೀಳುಮಾಡಿಬಿಡಬೇಡ. ಅಧೋಗತಿಗೆ ಹೋಗುವಂತೆ ಮಾಡಬೇಡ. ತತ್ತ್ವವನ್ನು ತಿಳಿದು ಸಾಧನೆಮಾಡಿ ಆತ್ಮನನ್ನು ಕಂಡುಕೊಂಡರೆ ಆತ್ಮೋದ್ಧಾರವಾಗುತ್ತದೆ. ತತ್ತ್ವವನ್ನು ತಿಳಿದುಕೊಳ್ಳದೇ ಸಂಸಾರಸಾಗರದಲ್ಲಿಯೇ ತೊಳಲುತ್ತಿದ್ದರೆ ಸಂಸಾರಬಂಧನವೂ ಬಿಡುವುದಿಲ್ಲ. ಮುಂದಿನ ಜನ್ಮವೂ ಅನಿಶ್ಚಿತವಾಗುತ್ತದೆ. ಆತ್ಮಘಾತಿಗಳಾದವರು ಅರ್ಥಾತ್ ಆತ್ಮೋದ್ಧಾರಕ್ಕಾಗಿ ಪ್ರಯತ್ನಿಸದೇ ಇರುವವರು ಅಸುರ್ಯಗಳೆಂಬ ಲೋಕಗಳಿಗೆ ಹೋಗುತ್ತಾರೆಂದು ಈಶಾವಾಸ್ಯದಲ್ಲಿ ಹೇಳಿದೆ :

**ಅಸುರ್ಯಾ ನಾಮ ತೇ ಲೋಕಾ ಅನ್ಧೇನ ತಮಸಾವೃತಾಃ ।**
**ತಾಂಸ್ತೇ ಪ್ರೇತ್ಯಾಭಿಗಚ್ಛನ್ತಿ ಯೇ ತೇ ಚಾತ್ಮಹನೋ ಜನಾಃ ॥೩॥**

ಅಸುರ್ಯ ಎಂಬ ಹೆಸರಿನ ಕಗ್ಗತ್ತಲೆಯಿಂದ ಆವೃತವಾಗಿರುವ ಲೋಕಗಳಿವೆ. ಯಾರು ಆತ್ಮಹನರೋ (ಆತ್ಮವನ್ನು ಅರಿಯದವರೋ) ಅಜ್ಞರೋ ಅವರು ಆ ಲೋಕಗಳಿಗೆ ಹೋಗುತ್ತಾರೆ.

ಉತ್ತರಾರ್ಧದಲ್ಲಿ ಶ್ರೀಕೃಷ್ಣನು ಮತ್ತೊಂದು ರಹಸ್ಯವನ್ನು ಹೊರಗೆಡಹಿದ್ದಾನೆ. ಆತ್ಮೈವ ಹ್ಯಾತ್ಮನೋ ಬನ್ಧುಃ ಆತ್ಮೈವ ರಿಪುರಾತ್ಮನಃ ॥ ತನಗೆ ತಾನೇ ಬಂಧು, ತನಗೇ ತಾನೇ ಶತ್ರು, ಹೇಗೆ? ಬಂಧು ಎಂಬ ಪದವು ಬಂಧನಸೂಚಕವಾದುದು. ಪತ್ನೀ-ಪುತ್ರ-ಪುತ್ರೀ–ಮುಂತಾದವರನ್ನು ನಾವು ಬಂಧುಗಳೆಂದು ಭಾವಿಸಿದರೆ ನಾವು ಸಂಸಾರಬಂಧನಕ್ಕೆ ಸಿಕ್ಕಿ ನಮಗೆ

(ಆತ್ಮಕ್ಕೆ) ಶತ್ರುಪ್ರಾಯರಾಗುತ್ತೇವೆ. ಈ ಬಂಧನವಿದ್ದರೆ ಆತ್ಮನ ಬಿಡುಗಡೆಯಾಗುವುದಿಲ್ಲ. ಸಂಸಾರವೇ ಬಂಧನ ಎಂದು ಭಾವಿಸಿ ಅದನ್ನು ಶತ್ರುವಾಗಿ ಕಂಡರೆ ; ಮನಸ್ಸಿನಿಂದ ಆ ಬಂಧನವನ್ನು ಬಿಡಿಸಿಕೊಂಡರೆ–ನಮ್ಮ ಆತ್ಮಕ್ಕೆ ನಾವೇ ಬಂಧುಗಳಾಗುತ್ತೇವೆ. ಹಿತಚಿಂತಕರಾಗುತ್ತೇವೆ. ಆತ್ಮೋದ್ಧಾರದ ಹಾದಿಯನ್ನು ಹಿಡಿಯುತ್ತೇವೆ.

ಮನುಷ್ಯನಿಗೆ ಪ್ರವೃತ್ತಿ ಮತ್ತು ನಿವೃತ್ತಿ ಎರಡಕ್ಕೂ ಅವಕಾಶವಿದೆ. ಸಲಕರಣೆಗಳಿವೆ. ಪ್ರವೃತ್ತಿಮಾರ್ಗವನ್ನು ಹಿಡಿದವನು ಆತ್ಮಕ್ಕೆ ದ್ರೋಹವನ್ನೆಸಗುತ್ತಾನೆ. ತನಗೇ (ಆತ್ಮಕ್ಕೆ) ಶತ್ರುವಾಗುತ್ತಾನೆ. ಜೀವನಿಗೆ ಅನೇಕ ಜನ್ಮಗಳು ಪ್ರಾಪ್ತವಾಗುವಂತೆ ಮಾಡುತ್ತಾನೆ. ನಿವೃತ್ತಿಮಾರ್ಗವನ್ನು ಹಿಡಿದ ವನು ಮೋಕ್ಷಕ್ಕೆ ಪ್ರಯತ್ನಿಸುತ್ತಾನೆ. ಇದರಿಂದ ಆತ್ಮಕ್ಕೆ ಹಿತವನ್ನುಂಟು ಮಾಡುತ್ತಾನೆ. ಆದುದರಿಂದ ಆತ್ಮಕ್ಕೆ ಬಂಧುವಾಗುತ್ತಾನೆ. ಆತ್ಮೋದ್ಧಾರ ವಾಗಲೀ, ಆತ್ಮನ ಅಧೋಗತಿಯಾಗಲೀ–ಇತರರಿಂದ ಆಗತಕ್ಕುವುಗಳಲ್ಲ. ಎರಡಕ್ಕೂ ತಾನೇ ಕಾರಣನು.

ಆತ್ಮನಿಗೆ ಆತ್ಮನೇ ಬಂಧು. ಅವನ ಸಂಸಾರಮುಕ್ತಿಗೆ ಬೇರೆ ಯಾವ ಬಂಧುವೂ ಕಾರಣನಾಗುವುದಿಲ್ಲ. ಅಷ್ಟೇ ಅಲ್ಲ ; ಬಂಧುವು ಮೋಕ್ಷಕ್ಕೆ ಪ್ರತಿಕೂಲನೇ ಆಗುತ್ತಾನೆ. ಏಕೆಂದರೆ : ಸ್ನೇಹವೇ ಮುಂತಾದುವು ಬಂಧನಕ್ಕೆ ಕಾರಣವಾಗಿರುವುದರಿಂದ ಅವನ್ನು ಮೋಕ್ಷಕ್ಕೆ ಪ್ರತಿಕೂಲವೆಂದೇ ಹೇಳಬೇಕು. ಅಂತೆಯೇ ತನಗೆ ತಾನೇ ಶತ್ರು. ಅನಿಷ್ಟವನ್ನುಂಟುಮಾಡುವ ಹೊರಗಡೆಯ ಶತ್ರುವೂ ಕೂಡ ತನ್ನ ಭಾವನೆಯಿಂದಲೇ ಉಂಟಾಗಿರುವವನು. ಆದುದರಿಂದ ತನಗೆ ತಾನೇ ಶತ್ರು–ಎಂದು ಒತ್ತಿಹೇಳುವುದು ಸಾಧುವಾಗಿದೆ.

(ಶಂ.ಭಾ.)

**ಆತ್ಮನಾ** ಎಂದರೆ ಮನಸ್ಸಿನಿಂದ ಎಂದು ಅರ್ಥ. ವಿಷಯಾನುಷಂಗವಿಲ್ಲದ ಮನಸ್ಸಿನಿಂದ ತನ್ನನ್ನು ಉದ್ಧರಿಸಿಕೊಳ್ಳಬೇಕು. ಅದಕ್ಕೆ ವಿಪರೀತವಾದ ಮನಸ್ಸಿನಿಂದ ಆತ್ಮನನ್ನು ಕೆಳಕ್ಕೆ ತರಬಾರದು. ಏಕೆಂದರೆ : ಆತ್ಮವೇ (ಮನಸ್ಸೇ) ಆತ್ಮನಿಗೆ ಬಂಧು. ಅದೇ ಆತ್ಮನಿಗೆ ಶತ್ರು. (ರಾ.ಭಾ.)

**ಉದ್ಧರೇತ್** –ಯೋಗಾರೂಢತ್ವವನ್ನು ದೊರಕಿಸಿಕೊಂಡು ಸಂಸಾರ ಸಮುದ್ರದಿಂದ ದಾಟಿಸಬೇಕು. (ಶ್ರೀವೇದಾಂತದೇಶಿಕರು.)

ಯೋಗಾರೋಹಣವನ್ನು ಪ್ರಯತ್ನಪೂರ್ವಕವಾಗಿ ಮಾಡಬೇಕು ಎಂದು ಈ ಶ್ಲೋಕವು ನಿರೂಪಿಸುತ್ತದೆ.) ಮ.ಭಾ.)

ಈ ವಿಷಯವನ್ನೇ ಇನ್ನೂ ವಿಸ್ತರಿಸಿ ಶ್ರೀಕೃಷ್ಣನು ಮುಂದಿನ ಶ್ಲೋಕದಲ್ಲಿ ಹೇಳುತ್ತಾನೆ :

**ಓಂ ಬನ್ಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥೬॥**

ಯಾವನು ತನ್ನನ್ನು ತಾನೇ ಜಯಿಸಿಕೊಂಡಿರುವನೋ ಅವನು ತನಗೆ ತಾನೇ ಬಂಧು. ಆದರೆ ಜಿತಾತ್ಮನಲ್ಲದವನು ತನಗೆ ತಾನೇ ಶತ್ರುವಾಗುತ್ತಾನೆ.

* * *

(ಹಿಂದಿನ ಶ್ಲೋಕದ ಉತ್ತರಾರ್ಧಕ್ಕೆ ಇದು ವ್ಯಾಖ್ಯಾನವಾಗಿದೆ. ತನಗೆ ತಾನೇ ಬಂಧುವು ಹೇಗಾದಾನು? ಬಂಧನದಿಂದ ಹೇಗೆ ತಾನೇ ಬಿಡಿಸಿ ಕೊಂಡಾನು? ಯಾವನು ದೇಹೇಂದ್ರಿಯಾದಿಗಳನ್ನು ಜಯಿಸಿರುವನೋ, ದೇಹೇಂದ್ರಿಯಾದಿಗಳು ತನ್ನ ಕಟ್ಟಿಗೆ ಒಳಪಟ್ಟಿರುವಂತೆ ಮಾಡಿಕೊಂಡಿ ರುವನೋ–ಅವನು ಆತ್ಮನಿಗೆ ಬಂಧುವಾಗುತ್ತಾನೆ. ಜಿತಮನಸ್ಕನಾಗಿ ಜ್ಞಾನ ವೆಂಬ ಕತ್ತಿಯಿಂದ ಸಂಸಾರವೆಂಬ ಹೊರಗಿನ ಬಾಂಧವ್ಯವನ್ನು ಕಡಿದು ಕೊಂಡರೆ ಆತ್ಮನಿಗೆ ಬಂಧುವಾಗುತ್ತಾನೆ. ದೇಹೇಂದ್ರಿಯಗಳನ್ನು ಗೆಲ್ಲಲಾರ ದವನು ತನಗೆ ತಾನೇ ಶತ್ರುವಿನೋಪಾದಿಯಲ್ಲಿ ಶತ್ರುಸ್ಥಾನದಲ್ಲಿರುತ್ತಾನೆ. ನಮ್ಮ ಹೊರಗಡೆಯ ಶತ್ರುವು ನಮ್ಮ ದೇಹಕ್ಕೆ ಮಾತ್ರವೇ ಸ್ವಲ್ಪ ತೊಂದರೆಯನ್ನು ಕೊಡಬಹುದು. ಅದನ್ನು ಸರಿಪಡಿಸಿಕೊಳ್ಳಬಹುದು. ಆದರೆ ನಮಗೆ ನಾವೇ ಶತ್ರುಗಳಾದಾಗ, ಕಾಮ-ಕ್ರೋಧಗಳು ನಮ್ಮ ಶತ್ರುಗಳೆಂಬುದನ್ನು ಗುರುತಿಸದೇ ಅವುಗಳಿಗೆ ನಾವು ವಶರಾದಾಗ–ನಮ್ಮ ಆತ್ಮಕ್ಕೆ ನಾವೇ ಘಾತವನ್ನುಂಟುಮಾಡಿಕೊಳ್ಳುತ್ತೇವೆ. ಜಿತೇಂದ್ರಿಯತೆ ಎಂದರೆ ಇಂದ್ರಿಯ ಗಳನ್ನು ಗೆಲ್ಲುವುದು. ಇದು ಆತ್ಮೋದ್ಧಾರಕ್ಕೆ ದಾರಿ. ಅನಾತ್ಮ ಎಂದರೆ ದೇಹೇಂದ್ರಿಯಗಳನ್ನು ಗೆಲ್ಲದವನು. ಕಾಮ-ಕ್ರೋಧಪರವಶನಾದವನು. ಇಂತಹವನು ಆತ್ಮದ್ರೋಹಿ. ಆತ್ಮಕ್ಕೆ ಶತ್ರು. ಆತ್ಮನ ಉದ್ಧಾರವನ್ನು ಮಾಡಲಾಗದವನು.

**ಯೇನ ಆತ್ಮೈವ ಆತ್ಮನಾ ಜಿತಃ** = ಕಾರ್ಯ-ಕಾರಣಗಳ ಸಂಘಾತ

ವಾದ ಶರೀರರೂಪವಾದ ಆತ್ಮನನ್ನು ವಶಪಡಿಸಿಕೊಂಡಿರುವವನು ಎಂದರೆ ಜಿತೇಂದ್ರಿಯನಾದವನು. (ಶಂ.ಭಾ.)

ಯಾವ ಪುರುಷನು ತಾನೇ ತನ್ನ ಮನಸ್ಸನ್ನು ವಿಷಯಗಳ ದೆಸೆಯಿಂದ ಗೆದ್ದುಬಿಡುತ್ತಾನೆಯೋ ಅವನ ಮನಸ್ಸು ಅವನಿಗೆ ಬಂಧು. ಅನಾತ್ಮನಿಗಾದರೋ (ಮನಸ್ಸನ್ನು ಗೆಲ್ಲದವನಿಗಾದರೋ) ಅವನ ಮನಸ್ಸೇ ಶತ್ರುವಿನಂತಾಗುತ್ತದೆ. ಮೋಕ್ಷಕ್ಕೆ ವಿರೋಧಿಯಾಗುತ್ತದೆ.

**ಮನ ಏವ ಮನುಷ್ಯಾಣಾಂ ಕಾರಣಂ ಬನ್ಧಮೋಕ್ಷಯೋಃ ।**
**ಬನ್ಧಾಯ ವಿಷಯಾಸಙ್ಗಂ ಮುಕ್ತ್ಯೈ ನಿರ್ವಿಷಯಂ ಮನಃ ॥**

(ರಾ.ಭಾ.)

ಆತ್ಮಾ ಎಂದರೆ–ಮನಸ್ಸು, ಆತ್ಮನಃ ಎಂದರೆ ಜೀವಕ್ಕೆ, ಆತ್ಮನಾ–ಮನಸ್ಸಿನಿಂದ, ಆತ್ಮಾನಂ ಜೀವವನ್ನು, ಆತ್ಮೈವ ಮನಸ್ಸೇನೇ, ಆತ್ಮನಾ ಬುದ್ಧಿಯಿಂದ ಅಥವಾ ಜೀವದಿಂದ. ಅವನೇ ಅಲ್ಲವೇ ಬುದ್ಧಿಯಿಂದ (ಮನಸ್ಸನ್ನು ) ಗೆಲ್ಲುವುದು ?

**ಮನಃ ಪರಂ ಕಾರಣಮಾಮನನ್ತಿ । ಮನ ಏವ ಮನುಷ್ಯಾಣಾಂ ಕಾರಣಂ ಬನ್ಧಮೋಕ್ಷಯೋಃ । ಉದ್ಧರೇನ್ಮನಸಾ ಜೀವಂ ನ ಜೀವಮುವಸಾದಯೇತ್ । ಜೀವಸ್ಯ ಬನ್ಧುಃ ಶತ್ರುಶ್ಚ ಮನ ಏವ ನ ಸಂಶಯಃ ॥** ಜೀವನು ಬುದ್ಧಿಯಿಂದ ಮನಸ್ಸನ್ನು ಯಾವಾಗ ಗೆಲ್ಲುತ್ತಾನೆಯೋ ಆಗ ಮನಸ್ಸು ಅವನಿಗೆ ಬಂಧುವಾಗುತ್ತದೆ. ಇಲ್ಲದಿದ್ದರೆ ಶತ್ರು. **ತತೋ ಜಯೇತ್ ಬುದ್ಧಿಬಲೋ ನರಸ್ತತ್ ದೇವೇ ಚ ಭಕ್ತ್ಯಾ ಮಧುಕೈಟಭಾರೌ**

**ಅನಾತ್ಮನಃ.... ಶತ್ರುವತ್** = ಅನಾತ್ಮನಃ ಎಂದರೆ ಮನಸ್ಸನ್ನು ಗೆಲ್ಲದ ಮನುಷ್ಯನಿಗೆ ಎಂದು ಅರ್ಥ. ಅವನು ಆತ್ಮವಿದ್ದರೂ ಅನಾತ್ಮನೇ. ಅವನಿಗೆ ಮನಸ್ಸಿದ್ದರೂ ಉಪಕಾರಮಾಡದೇ ಇರುವುದರಿಂದ ಇಲ್ಲದಿದ್ದಂತೆಯೇ. ಸೇವಕನು ಇದ್ದರೂ ಅವನು ಯಜಮಾನನಿಗೆ ಸೇವೆಯನ್ನು ಮಾಡದಿದ್ದರೆ ಆ ಯಜಮಾನನು ಭೃತ್ಯನಿದ್ದರೂ ಭೃತ್ಯನಿಲ್ಲದವನೇ ಅಲ್ಲವೇ? ) (ಮ.ಭಾ.)

**ಓಂ ಜಿತಾತ್ಮನಃ ಪ್ರಶಾನ್ತಸ್ಯ ಪರಮಾತ್ಮಾ ಸಮಾಹಿತಃ ।**
**ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ॥೭॥**

ಮನಸ್ಸನ್ನು ಜಯಿಸಿ ಪ್ರಶಾಂತನಾಗಿರುವವನು ಪರಮಾತ್ಮನು (ಆತ್ಮನು) ಶೀತೋಷ್ಣ-ಸುಖ-ದುಃಖಗಳಲ್ಲಿ ಮತ್ತು ಮಾನಾಪಮಾನಗಳಲ್ಲಿ ಚೆನ್ನಾಗಿ ಸಮಾಧಾನವಾಗಿಯೇ ಇರುತ್ತಾನೆ.

* * *

(ದೇಹಾತ್ಮಬುದ್ಧಿಯಿರುವಾಗ ಆತ್ಮವು ಸುಖ-ದುಃಖಗಳ ಉಪಾಧಿಯಲ್ಲಿ ಮಗ್ನವಾಗಿರುತ್ತದೆ. ದೇಹಕ್ಕಾಗುವ ಸುಖ-ದುಃಖಗಳೇ ತನ್ನವೆಂಬ ಭಾವನೆ ಯಿರುತ್ತದೆ. ಈ ಭಾವನೆಯು ಹೋಗಬೇಕಾದರೆ ಆತ್ಮಾನಾತ್ಮವಿವೇಕ ವುಂಟಾಗಬೇಕು. 'ದೇಹಗಳೇ ಬೇರೆ ; ನಾನೇ ಬೇರೆ. ನಾನು ದೇಹವಲ್ಲ' ಎಂಬುದು ಮನದಟ್ಟಾಗಬೇಕು. ಸುಖ-ಕಷ್ಟಗಳನ್ನು ಆತ್ಮನಿಗೆ ತಲುಪಿಸುತ್ತಿದ್ದ ಇಂದ್ರಿಯಗಳನ್ನು ಬಿಗಿಹಿಡಿಯಬೇಕು. ಇದು ಮನಸ್ಸಿನ ಕೆಲಸ. ಅರ್ಥಾತ್ ಮನಸ್ಸನ್ನು ಜಯಿಸಬೇಕು. ಮನಸ್ಸನ್ನು ಹತೋಟಿಗೆ ತೆಗೆದುಕೊಳ್ಳಬೇಕು. ಮನಸ್ಸನ್ನು ಜಯಿಸಿ ಇಂದ್ರಿಯಗಳೆಂಬ ಸರ್ಪಗಳ ಹಲ್ಲುಕಿತ್ತಾಗ ಮನಸ್ಸು ಯಾವ ವಿಧವಾದ ದುಗುಡವೂ ಇಲ್ಲದೇ ಪ್ರಶಾಂತವಾಗುವುದು. ಇಂತಹ ಪ್ರಶಾಂತಮನಸ್ಕನಾದವನ ಆತ್ಮವು ಶೀತೋಷ್ಣ-ಸುಖ-ದುಃಖಗಳಲ್ಲಿಯೂ ಮಾನಾಪಮಾನಗಳಲ್ಲಿಯೂ ಏಕಪ್ರಕಾರವಾಗಿರುವುದು. ಯಾವ ವಿಧವಾದ ವ್ಯತ್ಯಾಸವನ್ನೂ ಕಾಣುವುದಿಲ್ಲ. ಶೀತಬಂದಾಗ ನಡುಗುವುದಿಲ್ಲ. ಬಿಸಿಲಿನಿಂದ ಬೇಯುವುದಿಲ್ಲ. ನಡುಗುವುದಾಗಲೀ, ಬೇಯುವುದಾಗಲೀ ಆತ್ಮನಿಗಲ್ಲ. ಅಂಗಿಯ ರೂಪವಾದ ದೇಹಕ್ಕಿರುತ್ತದೆ. 'ದೇಹವು ನಾನಲ್ಲ' ಎಂಬುದನ್ನು ನಿಶ್ಚಯಿಸಿಕೊಂಡು ಅದನ್ನು ಸಾಧಿಸಿಕೊಂಡಾಗ ದೇಹಕ್ಕುಂಟಾಗುವ ಶೀತೋಷ್ಣಗಳು, ಸುಖ-ದುಃಖಗಳು, ಮಾನಾಪಮಾನಗಳು ಆತ್ಮನಿಗೆ ಸಂಘಟಿಸುವುದಿಲ್ಲ. ಪ್ರಶಾಂತಮನಸ್ಕನಾದವನ ಆತ್ಮಕ್ಕೆ ಈ ಬಾಧೆಗಳೊಂದೂ ಇರುವುದಿಲ್ಲ. ನಾವು ಉಟ್ಟುಕೊಂಡಿರುವ ವಸ್ತ್ರವು ಹರಿದರೂ ನಮಗೆ ಅದರ ಪರಿವೆಯು ಇರುವುದಿಲ್ಲ. ಅದರಂತೆಯೇ ದೇಹವೆಂಬ ಅಂಗಿಗಾಗುವ ದ್ವಂದ್ವವಿಕಾರಗಳು ಆತ್ಮನ ಪರಿವೆಯಲ್ಲಿರುವುದಿಲ್ಲ.

**ಪರಮಾತ್ಮಾ ಸಮಾಹಿತಃ** –ಪರಮಾತ್ಮನು ಸಾಕ್ಷಾತ್ ಆತ್ಮಭಾವದಲ್ಲಿ ಇರುತ್ತಾನೆ.

ಇಲ್ಲಿ ಪರಮಾತ್ಮಾ ಎಂಬ ಪದವಿದೆ. ಜೀವಾತ್ಮನೇ ತನ್ನ ಪ್ರಾಕೃತಿಕ

ಗುಣಗಳನ್ನು ಕಳೆದುಕೊಂಡರೆ ಪರಮಾತ್ಮನಾಗುತ್ತಾನೆ–ಎಂಬ ವಚನವು ಮಹಾಭಾರತದ ಶಾಂತಿಪರ್ವದಲ್ಲಿದೆ :

**ಆತ್ಮಾ ಕ್ಷೇತ್ರಜ್ಞ ಇತ್ಯುಕ್ತಃ ಸಂಯುಕ್ತಃ ಪ್ರಾಕೃತೈರ್ಗುಣೈಃ ।**
**ತೈರೇವ ತು ವಿನಿರ್ಮುಕ್ತಃ ಪರಮಾತ್ಮೇತ್ಯುದಾಹೃತಃ ॥**

(೧೮೭-೨೪)

ಪ್ರಾಕೃತ ಎಂದರೆ ಪ್ರಕೃತಿಯ ಗುಣಗಳಿಂದ ಸುಖ-ದುಃಖಾದಿ ದ್ವಂದ್ವ ಗಳಿಂದ ಆತ್ಮನು ಬದ್ಧನಾಗಿದ್ದರೆ ಅದಕ್ಕೆ ಕ್ಷೇತ್ರಜ್ಞ ಎಂದರೆ ಶರೀರದಲ್ಲಿರುವ ಜೀವಾತ್ಮಾ ಎನ್ನುತ್ತಾರೆ. ಆ ವಿಕಾರಗಳಿಂದ ಮುಕ್ತನಾದರೆ ಅದೇ ಆತ್ಮನೇ ಪರಮಾತ್ಮನಾಗುತ್ತಾನೆ. (ಶಂ.ಭಾ.)

ಶೀತೋಷ್ಣ-ಸುಖ-ದುಃಖಗಳಲ್ಲಿಯೂ, ಮಾನಾಪಮಾನಗಳಲ್ಲಿಯೂ ಜಿತಾತ್ಮನಾಗಿ ಎಂದರೆ ವಿಕಾರರಹಿತವಾದ ಮನಸ್ಸುಳ್ಳವನಾಗಿ ಪ್ರಶಾಂತ ನಾಗಿರುವವನ ಮನಸ್ಸಿನಲ್ಲಿ ಪರಮಾತ್ಮನು ಚೆನ್ನಾಗಿ (ವಿಶದವಾಗಿ) ಅನುಭವಕ್ಕೆ ಬರುತ್ತಾನೆ. ಇಲ್ಲಿ ಪರಮಾತ್ಮಾ ಎಂದರೆ ಸ್ವರೂಪದಲ್ಲಿರುವ ಪ್ರತ್ಯಗಾತ್ಮಾ. ಅವನು ತನ್ನ ಹಿಂದು-ಹಿಂದಿನ ಅವಸ್ಥೆಯ ದೃಷ್ಟಿಯಿಂದ ಪರಮಾತ್ಮನೇ ಆಗುತ್ತಾನೆ. ಅಥವಾ ಆತ್ಮಾ ಪರಂ ಸಮಾಹಿತಃ ಎಂದು ಅನ್ವಯಮಾಡಿ ಅವನ ಆತ್ಮವು ಚೆನ್ನಾಗಿ ಸಮಾಧಿಯಲ್ಲಿರುತ್ತದೆ–ಎಂದೂ ಅರ್ಥಮಾಡಬಹುದು. (ರಾ.ಭಾ.)

ಜಿತಾತ್ಮನಾಗಿರುವುದರ ಫಲವನ್ನು ಇಲ್ಲಿ ಹೇಳಿದೆ. ಜಿತಾತ್ಮನು ತಾನೇ ಪ್ರಶಾಂತನಾಗಿರುತ್ತಾನೆ. ಅವನ ಮನಸ್ಸು ಸಾಮಾನ್ಯವಾಗಿ ವಿಷಯಗಳಿಗೆ ಹೋಗುವುದಿಲ್ಲ ಮತ್ತು ಆಗ ಪರಮಾತ್ಮನು ಚೆನ್ನಾಗಿ ಸ್ಥಾಪಿತನಾಗಿರುತ್ತಾನೆ. ಹೃದಯದಲ್ಲಿ ಸನ್ನಿಹಿತನಾಗಿರುತ್ತಾನೆ ಎಂದರೆ ಅವನು ಅಪರೋಕ್ಷ ಜ್ಞಾನಿಯಾಗುತ್ತಾನೆ-ಎಂದು ಅರ್ಥ. ಅಪರೋಕ್ಷಜ್ಞಾನಿಯ ಲಕ್ಷಣವೇನೆಂದರೆ ಅವನು ಶೀತ, ಉಷ್ಣ ಮುಂತಾದುವುಗಳಲ್ಲಿ ಕೂಟಸ್ಥನಾಗಿರುತ್ತಾನೆ.)

(ಮ.ಭಾ.)

**ಓಂ ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇನ್ದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಞ್ಚನಃ ॥೮॥**

ಜ್ಞಾನದಿಂದಲೂ-ವಿಜ್ಞಾನದಿಂದಲೂ ತೃಪ್ತಿಹೊಂದಿದ ಆತ್ಮವುಳ್ಳವನೂ,

ಜಿತೇಂದ್ರಿಯನೂ, ಕೂಟಸ್ಥನೂ ಮಣ್ಣು, ಕಲ್ಲು, ಚಿನ್ನ–ಇವುಗಳನ್ನು ಒಂದೇಸಮನಾಗಿ ಕಾಣುವವನೂ ಆದ ಯೋಗಿಯು ಯುಕ್ತನೆಂದು ಕರೆಯಲ್ಪಡುತ್ತಾನೆ.

* * *

(ಜ್ಞಾನ ಎಂದರೆ ಶಾಸ್ತ್ರಜ್ಞಾನ. ವಿಜ್ಞಾನವೆಂದರೆ ಶಾಸ್ತ್ರಜ್ಞಾನದಿಂದ ಆದ ಅನುಭವ. ಇವೆರಡರ ಲಾಭದಿಂದ ತೃಪ್ತಿಹೊಂದಿದ ಆತ್ಮವುಳ್ಳವನು ಜ್ಞಾನ-ವಿಜ್ಞಾನತೃಪ್ತಾತ್ಮನು. ಇವೆರಡೂ ಇರುವುದು ಅಪರೂಪ. ಶಾಸ್ತ್ರಜ್ಞಾನವಿರಬಹುದು ; ಅನುಭವವಿರಲಾರದು. ಪೂರ್ವಜನ್ಮಸಂಸ್ಕಾರದಿಂದ ಆತ್ಮಾನುಭವವನ್ನು ಪಡೆದಿರಬಹುದು. ಆದರೆ ಶಾಸ್ತ್ರಜ್ಞಾನವಿಲ್ಲದೆಯೂ ಇರಬಹುದು. ಈ ಎರಡರ ಲಾಭವೂ ಇದ್ದರೆ ಅವನು ಸಂತೃಪ್ತನಾಗುವುದರಲ್ಲಿ ಸಂಶಯವೇ ಇಲ್ಲ. ಕೂಟಸ್ಥಃ : ಕೂಟ ಎಂದರೆ ಅಡಿಗಲ್ಲು. ಅಡಿಗಲ್ಲಿನಂತೆ ಸ್ಥಿರವಾಗಿರತಕ್ಕವನು. ಅಡಿಗಲ್ಲಿನ ಮೇಲೆ ಕಬ್ಬಿಣವನ್ನು ಸುತ್ತಿಗೆಯಿಂದ ಬಡಿಯುತ್ತಾರೆ. ಕಬ್ಬಿಣವು ತನ್ನ ಸ್ವರೂಪದಲ್ಲಿ ವ್ಯತ್ಯಾಸಹೊಂದುತ್ತದೆ. ಅಡಿಗಲ್ಲು ಮಾತ್ರ ಸುಸ್ಥಿರವಾಗಿರುತ್ತದೆ. ಕೂಟಸ್ಥನು ಅಪ್ರಕಮ್ಪ್ಯ. ಚಲಿಸುವವನಲ್ಲ. ಸುಸ್ಥಿರನಾಗಿರತಕ್ಕವನು. ಇದಕ್ಕೆ ಕಾರಣ ಜ್ಞಾನ-ವಿಜ್ಞಾನತೃಪ್ತಾತ್ಮನಾಗಿರುವುದೇ ಆಗಿದೆ. ಇವನು ಸತ್ಯದರ್ಶನಮಾಡಿದ್ದಾನೆ. ಆದುದರಿಂದ ಯಾವ ವಿಧವಾದ ಚಂಚಲತ್ವವೂ ಇಲ್ಲದೇ ಸುಸ್ಥಿರನಾಗಿದ್ದಾನೆ. ವಿಜಿತೇಂದ್ರಿಯನಾಗಿದ್ದಾನೆ. ಇವನು ಆತ್ಮಾನುಭವವನ್ನು ಪಡೆದಿರುವುದರಿಂದ ಇವನ ಇಂದ್ರಿಯಗಳಲ್ಲಿ ಯಾವ ರಸವೂ ಕೂಡ ಉಳಿದಿರುವುದಿಲ್ಲ. ಇಂದ್ರಿಯಗಳು ಇವನ ಸೇವಕರಂತೆ ಕಾರ್ಯಮಾಡುತ್ತವೆ. ಅವು ತಮ್ಮ ಸ್ವಾತಂತ್ರ್ಯವನ್ನೂ ಸಂಪೂರ್ಣವಾಗಿ ಕಳೆದುಕೊಂಡುಬಿಡುತ್ತವೆ. ಅವುಗಳಲ್ಲಿ ಸತ್ವವೇನೂ ಉಳಿದಿಲ್ಲ. ಆದುದರಿಂದಲೇ ಇವನು ವಿಜಿತೇಂದ್ರಿಯನಾಗಿದ್ದಾನೆ.

ಶ್ರೀಕೃಷ್ಣನು ಯೋಗಿಯ ಹೊಸದಾದ ಗುಣವೊಂದನ್ನು ಈ ಶ್ಲೋಕ ದಲ್ಲಿ ಸೇರಿಸಿದ್ದಾನೆ. **ಸಮಲೋಷ್ಟಾಶ್ಮಕಾಞ್ಚನಃ** ಮಣ್ಣು, ಕಲ್ಲು ಮತ್ತು ಚಿನ್ನ–ಈ ಮೂರನ್ನೂ ಸಮವಾಗಿ ಭಾವಿಸುವವನು. ಪ್ರಾಪಂಚಿಕ ವ್ಯವಹಾರದಲ್ಲಿ ಚಿನ್ನದ ಬೆಲೆ ಅಧಿಕ. ಚಿನ್ನವನ್ನು ಮಣ್ಣುಹೆಂಟೆಯಂತೆ ಅಥವಾ ಕಲ್ಲಿನಂತೆ ಕಾಣಲು ಸಾಧ್ಯವೇ ಇಲ್ಲ. ಮನುಷ್ಯನ ಪ್ರಾಪಂಚಿಕ

ಜೀವನಕ್ಕೆ ಚಿನ್ನವೇ (ಹಣ) ಬೇಕು. ಆದರೆ ಯೋಗಿಯು ಪ್ರಾಪಂಚಿಕ ಜೀವನವನ್ನು ನಡೆಸತಕ್ಕವನಲ್ಲ. ಎಲ್ಲವನ್ನೂ ತೊರೆದವನು. ಪ್ರಾಪಂಚಿಕ ಸುಖವನ್ನು ಬಯಸುವ ಇಂದ್ರಿಯಗಳನ್ನೇ ಬಗ್ಗುಬಡಿದವನು. ಆಸೆ ಎಂಬು ದನ್ನೇ ಆತ್ಮಾಗ್ನಿಯಲ್ಲಿ ಹೋಮಮಾಡಿಬಿಟ್ಟಿರುವವನು. ಮೇಲಾಗಿ ಆತ್ಮಾನು ಭವಕ್ಕೆ ಚಿನ್ನದ ಅಗತ್ಯವೂ ಇಲ್ಲ ; ಮಣ್ಣಿನ ಅಗತ್ಯವೂ ಇಲ್ಲ. ಯಾವಾಗ ಅಗತ್ಯವಿಲ್ಲವೋ ಆಗ ಆ ವಸ್ತುವಿಗೆ ಅವನ ದೃಷ್ಟಿಯಿಂದ ಬೆಲೆಯೂ ಇಲ್ಲ. ಯೋಗಿಯ ದೃಷ್ಟಿಯಿಂದ ಮಣ್ಣಿಗೆ ಎಷ್ಟು ಬೆಲೆಯೋ ಚಿನ್ನಕ್ಕೂ ಅಷ್ಟೇ ಬೆಲೆ. ಇಂತಹ ಯೋಗಿಯನ್ನು ಯುಕ್ತನೆಂದು ಕರೆಯುತ್ತಾರೆ. ಯುಕ್ತನೆಂದರೆ ಭಗವಂತನೊಡನೆ ಸೇರಿಕೊಂಡಿರುವವನು ; ಆತ್ಮದರ್ಶನಮಾಡಿರುವವನು ; ಆತ್ಮಾನುಭವವನ್ನು ಪಡೆದುಕೊಂಡಿರುವವನು ; ಯೋಗಸಿದ್ಧಿಯನ್ನು ಪಡೆದವನು ; ಯೋಗಾರೂಢನಾದವನು–ಎನಿಸಿಕೊಳ್ಳುತ್ತಾನೆ.

**ಜ್ಞಾನ...ಆತ್ಮಾ** = ಜ್ಞಾನ ಎಂದರೆ : ಆತ್ಮಸ್ವರೂಪವಿಷಯವಾದ ಜ್ಞಾನ. ವಿಜ್ಞಾನ ಎಂದರೆ : ಆತ್ಮವು ಪ್ರಕೃತಿವಿಜಾತೀಯವಾದ ಆಕಾರವುಳ್ಳದ್ದು ಎಂಬ ವಿಷಯವಾದ ಜ್ಞಾನ. ಈ ಎರಡನ್ನೂ ಪಡೆದು ತೃಪ್ತವಾದ ಮನಸ್ಸುಳ್ಳ ವನಾಗಿರುತ್ತಾನೆ. ಯೋಗಿಯು ಕೂಟಸ್ಥನಾಗಿ ಎಂದರೆ ದೇವತೆ ಮುಂತಾದ ಎಲ್ಲ ಅವಸ್ಥೆಗಳಲ್ಲಿಯೂ ಏಕರೂಪದಲ್ಲಿ ಸರ್ವಸಾಧಾರಣವಾಗಿರುವ ಜ್ಞಾನೈಕಾಕಾರವಾಗಿರುವ ಆತ್ಮದಲ್ಲಿ ನೆಲೆಸಿದವನಾಗಿರುತ್ತಾನೆ. ಇದೇ ಕಾರಣದಿಂದ ಇಂದ್ರಿಯಗಳನ್ನು ಚೆನ್ನಾಗಿ ಜಯಿಸಿದವನಾಗಿರುತ್ತಾನೆ. **ಸಮ..ಕಾಂಚನಃ** = ಪ್ರಕೃತಿಯುಕ್ತವಾದ ಆತ್ಮಸ್ವರೂಪನಿರತನಾಗಿರುವುದ ರಿಂದ ಪ್ರಾಕೃತಿಕವಾದ ವಸ್ತುವಿಶೇಷಗಳಲ್ಲಿ ಅವನಿಗೆ ಭೋಗ್ಯತ್ವವಿಲ್ಲ. ಮಣ್ಣು, ಕಲ್ಲು, ಚಿನ್ನ ಎಲ್ಲದರಲ್ಲೂ ಅವನಿಗೆ ಸಮಪ್ರಯೋಜನ. ಹೀಗಿರುವ ಕರ್ಮಯೋಗಿಯು ಯುಕ್ತ. ಆತ್ಮಾವಲೋಕನರೂಪವಾದ ಯೋಗಾಭ್ಯಾಸಕ್ಕೆ ಯೋಗ್ಯ–ಎನಿಸುತ್ತಾನೆ. (ರಾ.ಭಾ.)

ಅಪರೋಕ್ಷಜ್ಞಾನಿಯು ಜ್ಞಾನ-ವಿಜ್ಞಾನತೃಪ್ತಾತ್ಮನಾಗಿರುತ್ತಾನೆ. ಅವನು ವಿಜಿತೇಂದ್ರಿಯನಾಗಿರುವುದರಿಂದಲೇ ಕೂಟಸ್ಥನೂ ಆಗಿದ್ದಾನೆ. ಕೂಟಸ್ಥ ಎಂದರೆ ನಿರ್ವಿಕಾರೀ. ಕೂಟದಂತೆ ಇರುವವನು. **ಕೂಟವತ್ ಸ್ಥಿತಃ** ಕೂಟ ಎಂದರೆ ಆಕಾಶ. **ಕೂಟಂ ಖಂ ವಿದಲಂ ವ್ಯೋಮ ಸನ್ಧಿ**

**ರಾಕಾಶ ಉಚ್ಯತೇ ।** ಅದರಂತೆ ನಿರ್ವಿಕಾರವಾಗಿರುವವನು. ವಿಜ್ಞಾನವೆಂದರೆ ವಿಶೇಷಜ್ಞಾನ ಅಥವಾ ಅಪರೋಕ್ಷಜ್ಞಾನ. ಯೋಗೀ ಎಂದರೆ ಯೋಗವನ್ನು ಆಚರಿಸುತ್ತಿರುವವನು. ಯುಕ್ತಃಎಂದರೆ ಯೋಗಸಂಪೂರ್ಣನಾಗಿರು ವವನು.) (ಮ.ಭಾ.)

**ಓಂ ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬನ್ಧುಷು ।**
**ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥೯॥**

ಸುಹೃದ, ಮಿತ್ರ, ಶತ್ರು, ಉದಾಸೀನ, ಮಧ್ಯಸ್ಥ, ದ್ವೇಷ್ಯ, ಬಂಧು– ಇವರಲ್ಲಿಯೂ, ಸಾಧುಗಳಲ್ಲಿಯೂ, ಪಾಪಿಗಳಲ್ಲಿಯೂ ಸಮಬುದ್ಧಿಯಿರು ವವನು ಯೋಗಾರೂಢರಾದವರಲ್ಲಿ ಶ್ರೇಷ್ಠನೆನಿಸುತ್ತಾನೆ.

* * *

(ಸುಹೃತ್ ಎಂಬ ಪದಕ್ಕೆ ಒಳ್ಳೆಯ ಹೃದಯವುಳ್ಳವನು ಎಂದರ್ಥ. ಅವನ ಸ್ವಭಾವವು ಯಾವಾಗಲೂ ಮತ್ತೊಬ್ಬರಿಗೆ ಒಳ್ಳೆಯದನ್ನು ಮಾಡು ವುದೇ ಆಗಿರುತ್ತದೆ. ಮತ್ತೊಬ್ಬರು ತನಗೆ ಪ್ರತ್ಯುಪಕಾರಮಾಡಲಿ–ಎಂಬ ಭಾವನೆಯಿಲ್ಲದೇ ಉಪಕಾರಮಾಡುವವನು. ಅದೂ ಅಲ್ಲದೇ ಅವನಿಗೆ, 'ಇಂತಹವನಿಗೇ ಉಪಕಾರಮಾಡಬೇಕು, ಇಂತಹವನಿಗೆ ಉಪಕಾರಮಾಡ ಕೂಡದು'–ಎಂಬ ಭಾವನೆಯೂ ಸಹ ಇರುವುದಿಲ್ಲ. ಕಷ್ಟದಲ್ಲಿರುವವರು ಯಾರೇ ಆಗಲೀ ತನ್ನ ಕೈಲಾದ ಸಹಾಯಮಾಡುತ್ತಾನೆ.

ಮಿತ್ರ ಮತ್ತು ಸುಹೃತ್ ಎರಡನ್ನೂ ಸಹ ನಾವು ಸ್ನೇಹಿತ ಎಂಬ ಅರ್ಥದಲ್ಲಿ ಬಳಸುತ್ತೇವೆ. ಮಿತ್ರನಿಗೂ–ಸುಹೃದನಿಗೂ ಸ್ವಲ್ಪ ವ್ಯತ್ಯಾಸವಿದೆ. ಮಿತ್ರ ಎಂಬುವವನು ಪತ್ನೀ-ಪುತ್ರರಂತೆ ಒಬ್ಬನ ಬಳಗಕ್ಕೆ ಸೇರಿದವನೇ ಆಗಿರುತ್ತಾನೆ.

**ತನ್ಮಿತ್ರಮಾಪದಿ ಸುಖೇ ಚ ಸಮಕ್ರಿಯಂ ಯತ್ ।** ಆಪತ್ತಿನಲ್ಲಿಯೂ ಸುಖದಲ್ಲಿಯೂ ಸಮವಾಗಿ ಭಾಗವಹಿಸುವುದಕ್ಕೆ ಮಿತ್ರತ್ವವೆಂದು ಕರೆಯುತ್ತಾರೆ. ಮಿತ್ರರು ಪರಸ್ಪರವಾಗಿ ಸುಖ-ಕಷ್ಟಗಳೆರಡರಲ್ಲಿಯೂ ಸಹಕರಿಸಿಕೊಂಡಿರುತ್ತಾರೆ.

**ಅರಿಃ** = ಯಾವುದೋ ನಿಮಿತ್ತದಿಂದ ವೈರವನ್ನು ಕಟ್ಟಿಕೊಳ್ಳುವವನು.

**ಉದಾಸೀನಃ**= ಮಿತ್ರನೂ ಅಲ್ಲದವನು ಅರಿಯೂ ಅಲ್ಲದವನು. **ಮಧ್ಯಸ್ಥಃ**= ಇಬ್ಬರು ಶತ್ರುಗಳ ನಡುವ ಸಂಧಿಯನ್ನು ಮಾಡುವವನು. **ದ್ವೇಷ್ಯಃ** = ಯಾವ ಕಾರಣವೂ ಇಲ್ಲದೇ ಅಸೂಯೆಯಿಂದ ದ್ವೇಷಮಾಡುವ ಸ್ವಭಾವವಿರ ತಕ್ಕವನು. **ಬನ್ಧುಃ**= ಮಾವ, ಅಳಿಯ, ಸೋದರಮಾವ ಮುಂತಾದ ನೆಂಟರು. **ಸಾಧುಃ**= ಸತ್ಪುರುಷನು, **ಪಾಪಾಃ**= ಪಾಪಿಷ್ಠರು. ಇವರೆಲ್ಲರನ್ನೂ ಸಮವಾಗಿ ಕಾಣುವ ಯೋಗಾರೂಢನು ಹೆಚ್ಚಿನವನೆನಿಸಿಕೊಳ್ಳುತ್ತಾನೆ. ಸುಹೃತ್, ಮಿತ್ರ, ಬಂಧುಗಳು, ಸಾಧುಗಳು–ಇವರನ್ನು ಪ್ರೀತಿಸುವುದು ; ಉದಾಸೀನ, ಮಧ್ಯಸ್ಥ–ಇವರ ವಿಷಯದಲ್ಲಿ ಉದಾಸೀನನಾಗಿರುವುದು ; ಅರಿ, ದ್ವೇಷ್ಯ ಮತ್ತು ಪಾಪಿಗಳು–ಇವರನ್ನು ದ್ವೇಷಿಸುವುದು ಮನುಷ್ಯನ ಸ್ವಭಾವವಾಗಿರುತ್ತದೆ. ಯೋಗಿಗೂ ಸಹ ತನಗೆ ಸಮಯದಲ್ಲಿ ಉಪಕಾರ ಮಾಡಿದವನ ಮೇಲೆ ; ತನ್ನ ಶುಶ್ರೂಷೆಮಾಡಿದವನ ಮೇಲೆ ವಿಶೇಷವಾದ ಅನುಕಂಪವಿರುವುದು ಅಸ್ವಾಭಾವಿಕವಲ್ಲ. ಹಾಗೆ ಅನುಕಂಪವನ್ನು ತೋರಿಸ ದಿದ್ದರೆ ಜನರು ಅವನನ್ನು ನಿರ್ಘೃಣ ಎನ್ನುತ್ತಾರೆ. ಆದರೆ ಯೋಗಾರೂಢ ನಾದವನಿಗೆ ; ಸದಾಕಾಲದಲ್ಲಿಯೂ ಬ್ರಹ್ಮಚಿಂತನೆಯಲ್ಲಿಯೇ ಇರುವವನಿಗೆ ಪ್ರಾಣಿಮಾತ್ರದಲ್ಲಿಯೇ ವ್ಯತ್ಯಾಸವು ಕಾಣುವುದಿಲ್ಲ. ಅವನ ನಖ-ಶಿಖಾಂತ ದವರೆಗೆ ಬ್ರಹ್ಮರಸವು ಹೊರತಾಗಿ ಬೇರೆಯ ರಸವೇ ಇರುವುದಿಲ್ಲ. ತನ್ನ ಅಂತರಂಗದಲ್ಲಿ ಏನಿದೆಯೋ ಅದನ್ನೇ ಅವನು ತನ್ನ ಹೊರಗಡೆಯೂ ಕಾಣುತ್ತಾನೆ. ಅವನಿಗೆ ಯಾವುದರಲ್ಲಿಯೂ ಭೇದಭಾವವೇ ಕಾಣುವುದಿಲ್ಲ. ಪರಮಾತ್ಮನೆಂಬ ರಸವೊಂದನ್ನು ಬಿಟ್ಟು ಬೇರೆಯ ರಾಗ-ದ್ವೇಷಾದಿಭಾವಗಳೇ ಅವನಲ್ಲಿ ಇಲ್ಲದೇ ಇರುವುದರಿಂದ 'ಮಿತ್ರ' ರಲ್ಲಾಗಲೀ 'ದ್ವೇಷಿ' ಗಳಲ್ಲಾಗಲೀ ಅವನಿಗೆ ಯಾವ ವ್ಯತ್ಯಾಸವೂ ಕಾಣುವುದಿಲ್ಲ. ಯೋಗಾರೂಢನ ಧರ್ಮವೇ ಇದಾಗಿರುತ್ತದೆ. ಅವನು ಎಲ್ಲದರಲ್ಲಿಯೂ ನಿರ್ದುಷ್ಟವೂ ಸಮವೂ ಆಗಿರುವ ಬ್ರಹ್ಮನನ್ನೇ ನೋಡುವುದರಿಂದ ಸಮಬುದ್ಧಿ. ಇಂತಹವನು ಯೋಗಾ ರೂಢರಲ್ಲಿಯೂ ಅತಿಶ್ರೇಷ್ಠನಾದವನು.

**ಸುಹೃತ್** = ವಯಸ್ಸನ್ನು ಲೆಕ್ಕಿಸದೇ ಹಿತವನ್ನು ಬಯಸುವವನು. ಸಮಾನವಯಸ್ಸಿನವರಾಗಿ ಹಿತವನ್ನು ಬಯಸುವವರು ಮಿತ್ರರು. ಕಾರಣ ವಿಶೇಷದಿಂದ ಅನರ್ಥವನ್ನು ಬಯಸುವವರು ಅರಿಗಳು. ಈ ಎರಡು

ಕಾರಣಗಳೂ ಇಲ್ಲದೇ ಮೇಲೆ ಹೇಳಿದ ಎರಡು ಭಾವವೂ ಇಲ್ಲದಿದ್ದವರು ಉದಾಸೀನರು. ಹುಟ್ಟಿನಿಂದಲೇ ಆ ಎರಡೂ ಇಲ್ಲದವರು ಮಧ್ಯಸ್ಥರು. ಹುಟ್ಟಿನಿಂದಲೇ ಅನಿಷ್ಟವನ್ನು ಬಯಸುವವರು ದ್ವೇಷ್ಯರು. ಹುಟ್ಟಿನಿಂದಲೇ ಹಿತವನ್ನು ಬಯಸುವವರು ಬಂಧುಗಳು. ಸಾಧುಗಳೆಂದರೆ ಧರ್ಮಶೀಲರು. ಪಾಪರು ಪಾಪಶೀಲರು. ಮಹಾಯೋಗಿಗೆ ಆತ್ಮವೊಂದರಿಂದಲೇ ಪ್ರಯೋಜನ. **ಸುಹೃತ್**, ಮಿತ್ರ ಮುಂತಾದವರಿಂದ ಅವನಿಗೆ ಯಾವ ಪ್ರಯೋಜನವೂ ಇಲ್ಲ. ಆದುದರಿಂದ ಅವರಲ್ಲಿ ಸಮಬುದ್ಧಿಯುಳ್ಳವನಾಗಿರುತ್ತಾನೆ. ಇಂತಹ ಮಹಾಯೋಗಿಯು ಯೋಗಾಭ್ಯಾಸಕ್ಕೆ ಯೋಗ್ಯರಾದವರಲ್ಲಿ ವಿಶಿಷ್ಟನು. (ರಾ.ಭಾ.)

**ಸುಹೃತ್** = ಪ್ರತ್ಯುಪಕಾರದ ಅಪೇಕ್ಷೆಯಿಲ್ಲದೇ ಉಪಕಾರಮಾಡುವವನು. ಮಿತ್ರಂ = ಕಷ್ಟದ ಸ್ಥಿತಿಯನ್ನು ಕಂಡು ರಕ್ಷಿಸುವವನು. ಅರಿಃ= ಸಂಹಾರ ಮುಂತಾದುವನ್ನು ಮಾಡುವವನು. ಮಾಡಬೇಕಾದ ಉಪಕಾರ–ಅಪಕಾರಗಳಲ್ಲಿ ಸುಮ್ಮನಿರುವವನು ಉದಾಸೀನ. ಎರಡು ಕರ್ತವ್ಯಗಳನ್ನೂ ಮಾಡುವವನು ಮಧ್ಯಸ್ಥ. ಅಪ್ರಿಯವನ್ನು ಮಾಡುವವನು ದ್ವೇಷ್ಯ. ಎಲ್ಲರಿಗಿಂತಲೂ ವಿಶಿಷ್ಟನಾಗಿರುವ ಜ್ಞಾನಿಯ ಲಕ್ಷಣವನ್ನು ಇಲ್ಲಿ ಹೇಳಿದೆ. ಅವನು ಸುಹೃತ್ ಮುಂತಾದವರಲ್ಲಿಯೂ, ಸಾಧುಗಳಲ್ಲಿಯೂ ಮತ್ತು ಪಾಪಿಗಳಲ್ಲಿಯೂ ಸಮಬುದ್ಧಿಯುಳ್ಳವನಾಗಿರುತ್ತಾನೆ. ಜ್ಞಾನಿಯು ಇವರಲ್ಲಿ ಹೇಗೆ ಸಮಬುದ್ಧಿಯಾಗಿರುತ್ತಾನೆ ಎಂದರೆ : 1) ಸುಹೃತ್ ಮುಂತಾದ ಎಲ್ಲ ಜೀವಿಗಳೂ ಚಿದ್ರೂಪರಾಗಿರುವುದರಿಂದ ಸಮ. (ಅಂತಃಕರಣದ ಉಪಾಧಿಯಿಂದ ಅವರಲ್ಲಿ ವಿಶೇಷಗಳು ಕಂಡುಬರುತ್ತವೆ.) 2) ಅವರೆಲ್ಲರಲ್ಲೂ ಇರುವ ಪರಮಾತ್ಮನು ಒಬ್ಬನೇ. 3) ಅವರಲ್ಲಿರುವ ಸುಹೃತ್ತ್ವ-ಸಾಧುತ್ವ ಮುಂತಾದುವುಗಳೆಲ್ಲವೂ ಈಶ್ವರಕೃತವೇ ಆಗಿರುವುದರಿಂದ ಎಲ್ಲವೂ ಸಮ.

**ಸ್ವತಃ ಸರ್ವೇಽಪಿ ಚಿದ್ರೂಪಾಃ ಸರ್ವದೋಷವಿವರ್ಜಿತಾಃ ।**
**ಜೀವಾಸ್ತೇಷಾಂ ತು ಯೇ ದೋಷಾಃ ತ ಉಪಾಧಿಕೃತಾ ಮತಾಃ ॥**

**ಸರ್ವಂ ಚೇಶ್ವರತಸ್ತೇಷಾಂ ನ ಕಿಂಚಿತ್ ಸ್ವತ ಏವ ತು ।**
**ಸಮಾ ಏವಂ ಹ್ಯತಃ ಸರ್ವೇ ವೈಷಮ್ಯಂ ಭ್ರಾಂತಿಸಮ್ಭವಮ್ ॥**

ಸಾಧುಗಳು, ಪಾಪಿಗಳು–ಮುಂತಾದವರಲ್ಲಿ, ಪೂಜೆ ಮುಂತಾದುವು ಗಳಲ್ಲಿ ಸಾಮ್ಯವನ್ನು ತೋರಿಸಬಾರದು. ಹಾಗೇ ಮಾಡುವುದು ದೋಷ.

**ಸಮಾನಾಂ ವಿಷಮಾ ಪೂಜಾ ವಿಷಮಾನಾಂ ಸಮಾ ತಥಾ ।**
**ಕ್ರಿಯತೇ ಯೇನ ದೇವೋಽಪಿ ಸ್ವಪದಾದ್ಭ್ರಶ್ಯತೇ ಪುಮಾನ್ ॥**

ಸುಹೃತ್ ಮುಂತಾದ ಎಲ್ಲರಲ್ಲೂ ಶಾಸ್ತ್ರೋಕ್ತವಾದ ರೀತಿಯಲ್ಲಿ ಹೆಚ್ಚು ಕಡಿಮೆ ಇಲ್ಲದೇ ಉಚಿತವಾದ ಪೂಜಾದಿಗಳನ್ನು ಮಾಡುವುದು ಸಮಬುದ್ಧಿ.)

(ಮ.ಭಾ.)

**ಓಂ ಯೋಗೀ ಯುಞ್ಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥೧೦॥**

ಯೋಗಿಯಾದವನು ಏಕಾಂತದಲ್ಲಿ ಏಕಾಕಿಯಾಗಿದ್ದುಕೊಂಡು ಮನಸ್ಸನ್ನು ಆತ್ಮನಲ್ಲಿ ಲೀನಗೊಳಿಸಬೇಕು. ಮನಸ್ಸನ್ನೂ ಮತ್ತು ಇಂದ್ರಿಯಗಳನ್ನೂ ಜಯಿಸಿದವನಾಗಿಯೂ, ಆಶಾರಹಿತನಾಗಿಯೂ, ದಾನವನ್ನು ತೆಗೆದುಕೊಳ್ಳದವನಾಗಿಯೂ ಇರಬೇಕು.

* * *

(ಶ್ರೀಕೃಷ್ಣನು ಧ್ಯಾನಯೋಗದ ಕ್ರಮವನ್ನು ಹೇಳುತ್ತಾನೆ :

ಯೋಗಿಯು ಯಾವಾಗಲೂ ಏಕಾಂತದಲ್ಲಿರಬೇಕು. ಏಕಾಂತ ಎಂದರೆ ಊರು ಅಥವಾ ಪಟ್ಟಣಗಳಿಗೆ ದೂರದಲ್ಲಿರುವ ಕಾಡು ಅಥವಾ ಪರ್ವತ ಗುಹೆಗಳಾಗಬಹುದು. ನದೀತೀರವಾಗಬಹುದು. ಅವನು ಧ್ಯಾನಮಾಡುವ ಸ್ಥಳವು ಬಹಳ ರಹಸ್ಯದಲ್ಲಿರಬೇಕು. ಯಾರಿಗೂ ತಿಳಿದಿರಬಾರದು. ಧ್ಯಾನ ಮಾಡುವ ಸ್ಥಳವು ಬಹಿರಂಗವಾಗಿಬಿಟ್ಟರೆ ನಾನಾವಿಧವಾದ ಉಪಟಳಗಳು ಪ್ರಾರಂಭವಾಗುತ್ತವೆ. ಧ್ಯೇಯವು ಸಾಧನೆಯಾಗುವ ಮೊದಲೇ ಅವನನ್ನು ಬಯಲಿಗೆಳೆದು ಬಿಡುತ್ತಾರೆ. ಆದುದರಿಂದ ಧ್ಯಾನಕಾರ್ಯವನ್ನು ಯಾವಾ ಗಲೂ ರಹಸ್ಯಸ್ಥಳದಲ್ಲಿಯೇ ಮಾಡಬೇಕು. ಏಕಸ್ತಪೋ ದ್ವಿರಧ್ಯಾಯೀ ತಪಸ್ಸಿಗೆ ಯಾವಾಗಲೂ ಒಬ್ಬನೇ ಇರಬೇಕಲ್ಲದೇ ಶಿಷ್ಯನಾಗಲೀ, ಸ್ನೇಹಿತ ನಾಗಲೀ ಇರಬಾರದು. ಮನಸ್ಸನ್ನೂ ಇಂದ್ರಿಯಗಳನ್ನೂ ನಿಗ್ರಹಿಸಿದವ ನಾಗಿರಬೇಕು. ಮನೋನಿಗ್ರಹವಿಲ್ಲದಿದ್ದರೆ ಕ್ಷಣಕಾಲವೂ ಧ್ಯಾನದಲ್ಲಿ ಕುಳಿತು

ಕೊಳ್ಳಲು ಸಾಧ್ಯವಾಗುವುದಿಲ್ಲ. ಒಂದು ವೇಳೆ ಬಲಾತ್ಕಾರವಾಗಿ ಕುಳಿತರೂ ಮನಸ್ಸು ಯಾವುದನ್ನೋ ಯೋಚಿಸುತ್ತಿರುತ್ತದೆಯೇ ಹೊರತು ಧ್ಯೇಯ ವನ್ನು ಮನಸ್ಸು ಧ್ಯಾನಮಾಡುತ್ತಿರುವುದಿಲ್ಲ. ಯಾವ ವಿಧವಾದ ಕಾಮನೆ ಯನ್ನೂ ಮನಸ್ಸಿನಲ್ಲಿಟ್ಟುಕೊಂಡು ಧ್ಯಾನಮಾಡಬಾರದು. ಪರಮಾತ್ಮ ದರ್ಶನವೇ ಏಕೈಕಧ್ಯೇಯವಾಗಿರಬೇಕು. ವ್ಯವಸಾಯಾತ್ಮಿಕವಾದ ಬುದ್ಧಿ ಯುಳ್ಳವನಾಗಿರಬೇಕು. ಅಪರಿಗ್ರಹನಾಗಿರಬೇಕು. ಪದಾರ್ಥಗಳನ್ನು ಸಂಗ್ರಹಮಾಡಬಾರದು. ಈ ರೀತಿಯಾಗಿದ್ದುಕೊಂಡು ಸತತವಾಗಿ ತೈಲಧಾರೆ ಯಂತೆ ಮನಸ್ಸನ್ನು ಆತ್ಮನಲ್ಲಿ ಯೋಜಿಸಬೇಕು. ಸತತವಾಗಿ ಧ್ಯಾನಪರ ನಾಗಿರಬೇಕು.

**ತತ್ರ ಪ್ರತ್ಯಯೈಕತಾನತಾ ಧ್ಯಾನಮ್** (ಪಾ.ಯೋಗಸೂತ್ರ ೩-೨)

ಧ್ಯಾನವೆಂದರೆ ಅದರ ಮೇಲೆ ಪ್ರತ್ಯಯವು ನಿರಂತರವಾಗಿ ಹರಿಯು ವಿಕೆ. ಅದರ ಮೇಲೆ ಎಂದರೆ ಧ್ಯೇಯದ ಮೇಲೆ (ಆತ್ಮನ ಮೇಲೆ) ಬೇರೆ ಪ್ರತ್ಯಯಗಳಿಂದ ಸೋಂಕಲ್ಪಡದೇ ಪ್ರತ್ಯಯದ ನಿರಂತರವಾದ ಮತ್ತು ಏಕರೀತಿಯ ಪ್ರವಾಹವೇ ಧ್ಯಾನ.

ಉತ್ತಮಫಲಪ್ರಾಪ್ತಿಗೋಸ್ಕರ ಏನು ಮಾಡಬೇಕೆಂಬುದನ್ನು ಇಲ್ಲಿ ಹೇಳಲಾಗಿದೆ. ಯಾವ ಸಂಗ್ರಹವನ್ನೂ ಮಾಡದೇ ಯೋಗವನ್ನು ಅಭ್ಯಾಸ ಮಾಡಬೇಕು. **ಆತ್ಮಾನಂ** = ಅಂತಃಕರಣವನ್ನು (ಶಂ.ಭಾ.)

ನಿರಾಶೀಃ= ಆತ್ಮವ್ಯತಿರಿಕ್ತವಾದ ಯಾವ ವಸ್ತುವಿನಲ್ಲಿಯೂ ಅಪೇಕ್ಷೆ ಯಿಲ್ಲದಿರುವನು. **ಅಪರಿಗ್ರಹಃ**= ಆತ್ಮವ್ಯತಿರಿಕ್ತವಾದ ಯಾವ ವಸ್ತು ವಿನಲ್ಲಿಯೂ ಮಮತೆಯಿಲ್ಲದವನು. (ರಾ.ಭಾ.)

ಸಮಾಧಿಯೋಗದ ಪ್ರಕಾರವನ್ನು ಇಲ್ಲಿ ಹೇಳಿದೆ. **ಆತ್ಮಾನಂ** = ಮನ ಸ್ಸನ್ನು **ಯುಞ್ಜೀತ** ಸಮಾಧಿಯೋಗವುಳ್ಳದ್ದನ್ನಾಗಿ ಮಾಡಬೇಕು.)

(ಮ.ಭಾ.)

**ಓಂ ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।**
**ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಮ್ ॥೧೧॥**

**ಓಂ ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇನ್ದ್ರಿಯಕ್ರಿಯಃ ।**
**ಉಪವಿಶ್ಯಾಸನೇ ಯುಞ್ಜ್ಯಾದ್ಯೋಗಮಾತ್ಮವಿಶುದ್ಧಯೇ ॥೧೨॥**

ಶುಚಿಯಾದ ಪ್ರದೇಶದಲ್ಲಿ, ಅತಿಯಾಗಿ ಎತ್ತರವಾಗಿರದ, ಅತಿಯಾಗಿ ತಗ್ಗೂ ಆಗಿರದ, ಬಟ್ಟೆ-ಚರ್ಮ-ದರ್ಭೆ ಇವುಗಳನ್ನು ಒಂದರ ಮೇಲೊಂದನ್ನು ಹಾಕಿರುವ ಸ್ಥಿರವಾದ ಆಸನವನ್ನು ತನಗಾಗಿ ಹಾಕಿಕೊಂಡು, ಆ ಆಸನದಲ್ಲಿ ಕುಳಿತುಕೊಂಡು ಚಿತ್ತದ ಮತ್ತು ಇಂದ್ರಿಯಗಳ ಕ್ರಿಯೆಗಳನ್ನು ಬಿಗಿಹಿಡಿದುಕೊಂಡು ಮನಸ್ಸನ್ನು ಏಕಾಗ್ರಮಾಡಿಕೊಂಡು ಆತ್ಮವಿಶುದ್ಧಿಗಾಗಿ ಯೋಗವನ್ನು ಮಾಡಬೇಕು.

* * *

(ಏಕಾಂತಸ್ಥಳದಲ್ಲಿ ಧ್ಯಾನಕ್ಕಾಗಿ ಒಂದು ಸ್ಥಳವನ್ನು ಗೊತ್ತುಮಾಡಿ ಕೊಳ್ಳಬೇಕು. ಅದು ಸ್ವಾಭಾವಿಕವಾಗಿ ಅಥವಾ ಗೋಮಯದಿಂದ ಸಾರಿಸು ವುದು ಮುಂತಾದ ಸಂಸ್ಕಾರಗಳಿಂದ ಶುದ್ಧವಾಗಿರಬೇಕು. ಅಲ್ಲಿ ತೀರಾ ಎತ್ತ ರವೂ ಅಲ್ಲದ ತೀರಾ ನೆಲಮಟ್ಟಕ್ಕೂ ಇಲ್ಲದಿರುವ ಒಂದು ಸುಸ್ಥಿರವಾದ ಆಸನವನ್ನು ಸಿದ್ಧಮಾಡಿಕೊಳ್ಳಬೇಕು. ಅನಂತರ ಅದರ ಮೇಲೆ ದರ್ಭೆ, ಕೃಷ್ಣಾಜಿನ ಮತ್ತು ಬಟ್ಟೆಗಳನ್ನು ಅನುಕ್ರಮವಾಗಿ ಹಾಸಬೇಕು. ಇಂತಹ ಆಸನ ದಲ್ಲಿ ಕುಳಿತು ಇಂದ್ರಿಯಕ್ರಿಯೆಗಳನ್ನೂ ಮನಸ್ಸಿನ ಕ್ರಿಯೆಗಳನ್ನೂ ತಡೆಯ ಬೇಕು. ಚಲನಚಿತ್ರದ ತೆರೆಯ ಮೇಲೆ ಚಿತ್ರವು ಬೀಳಬೇಕಾದರೆ ಹೊರಗಿನ ಬೆಳಕು ಬಾರದಂತೆ ಎಲ್ಲ ಬಾಗಿಲುಗಳನ್ನೂ ಹಾಕಿಬಿಡುತ್ತಾರೆ. ಅದೇ ರೀತಿ ಯಲ್ಲಿ ಅಂತಃಕರಣವೆಂಬ ತೆರೆಯ ಮೇಲೆ ಪರಮಾತ್ಮನನ್ನು ಕಾಣಲು ಹೊರ ಗಿನ ಸಂಸ್ಕಾರಗಳು ಒಳಕ್ಕೆ ಸರಿಯದಂತೆ ಇಂದ್ರಿಯಗಳನ್ನೂ ಮತ್ತು ಮನ ಸ್ಸನ್ನೂ ತಡೆಹಿಡಿಯಬೇಕು. ಅನಂತರ ಏಕಾಗ್ರಮನಸ್ಕನಾಗಿ ಆತ್ಮವಿಶುದ್ಧಿಗಾಗಿ (ಮನಃಶುದ್ಧಿಗಾಗಿ) ಧ್ಯಾನಯೋಗವನ್ನು ಮಾಡಬೇಕು. ಆತ್ಮನಲ್ಲಿ ಧ್ಯಾನಾ ಸಕ್ತನಾಗಬೇಕು. ನಮ್ಮ ಮನಸ್ಸು ಶುದ್ಧಿಯಾದೊಡನೆಯೇ ಪಾರದರ್ಶಕ ವಾಗುವುದು. ಅದರ ಮೂಲಕ ಬುದ್ಧಿಗೂ ಆಚೆ ಇರುವ ಪರಮಾತ್ಮನನ್ನು ಚೆನ್ನಾಗಿ ಕಂಡುಕೊಳ್ಳಬಹುದು. ಇಲ್ಲಿ ಯಾವ ಆಸನದಲ್ಲಿ ಕುಳಿತುಕೊಳ್ಳ ಬೇಕೆಂಬುದನ್ನು ಶ್ರೀಕೃಷ್ಣನು ಹೇಳಿಲ್ಲ. ಸಾಮಾನ್ಯವಾಗಿ ಹೆಚ್ಚುಹೊತ್ತು

ಕುಳಿತುಕೊಳ್ಳಬಹುದಾದ ಸುಖಾಸನದಲ್ಲಾಗಲೀ, ಸ್ವಸ್ತಿಕ-ಸಿದ್ಧ-ಪದ್ಮಾಸನ ಗಳಲ್ಲಾಗಲೀ ಕುಳಿತುಕೊಳ್ಳಬಹುದು.

**ಚೈಲಾಜಿನಕುಶೋತ್ತರಂ**–ಗ್ರಂಥದಲ್ಲಿ ಬಟ್ಟೆ, ಕೃಷ್ಣಾಜಿನ, ದರ್ಭೆ ಎಂಬ ಕ್ರಮವಿದ್ದರೂ ಆಚರಣೆಯಲ್ಲಿ ಅದಕ್ಕೆ ವಿರುದ್ಧವಾದ ಕ್ರಮವನ್ನು ಎಂದರೆ: ದರ್ಭೆ, ಅದರ ಮೇಲೆ ಮೃಗಚರ್ಮ ಮತ್ತು ಅದರ ಮೇಲೆ ವಸ್ತ್ರ ಎಂಬ ಕ್ರಮವನ್ನು ಅನುಸರಿಸಬೇಕು.

**ಆತ್ಮವಿಶುದ್ಧಯೇ** = ಅಂತಃಕರಣದ ಶುದ್ಧಿಗೋಸ್ಕರ (ಶಂ.ಭಾ.)

**ಶುಚೌ ದೇಶೇ** = ಅಶುಚಿಗಳಾದ ಜನರಿಂದ ಆಕ್ರಮಿಸಲ್ಪಡದೇ ಮತ್ತು ಪರಿಗ್ರಹಿಸಲ್ಪಡದೇ ಇರುವ ಮತ್ತು ಅಶುಚಿಗಳಾದ ವಸ್ತುಗಳ ಸ್ಪರ್ಶವಿಲ್ಲದೇ ಇರುವ ಪವಿತ್ರವಾದ ಜಾಗದಲ್ಲಿ–**ಆತ್ಮವಿಶುದ್ಧಯೇ ಯೋಗಂ ಯುಞ್ಜ್ಯಾತ್ ।** ಬಂಧನಿವೃತ್ತಿಗೋಸ್ಕರ ಆತ್ಮಾವಲೋಕನವನ್ನು ಮಾಡ ಬೇಕು. (ರಾ.ಭಾ.)

**ಉಪವಿಶ್ಯ** = ಕುಳಿತು. ನಿಂತುಕೊಂಡಿರುವ ಅಥವಾ ಮಲಗಿರುವ ಸ್ಥಿತಿಯು ಧ್ಯಾನಕ್ಕೆ ಉಚಿತವಲ್ಲ ; ಶ್ರೇಷ್ಠವಲ್ಲ. ಆಯಾಸ, ನಿದ್ರೆ ಮುಂತಾ ದುವುಗಳ ಸಂಭವವು ಇರುವುದರಿಂದ ಆ ಸ್ಥಿತಿಗಳಲ್ಲಿ ಯೋಗವು ಸಂಭ ವಿಸುವುದಿಲ್ಲ. ಅದಕ್ಕಾಗಿ ಬ್ರಹ್ಮಸೂತ್ರವು **ಆಸೀನಃ ಸಮ್ಭವಾನ್** ೪-೧-೭ ಎಂದು ಹೇಳುತ್ತದೆ. (ಶ್ರೀವೇದಾಂತದೇಶಿಕರು.)

**ಯೋಗಂ** = ಸಮಾಧಿಯೋಗವನ್ನು ) (ಮ.ಭಾ.)

**ಓಂ ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।**
**ಸಮ್ಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥೧೩॥**

**ಓಂ ಪ್ರಶಾನ್ತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।**
**ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥೧೪॥**

ಶರೀರ, ತಲೆ, ಕತ್ತು–ಇವುಗಳನ್ನು ಸಮವಾಗಿ ಮತ್ತು ಅಚಲವಾಗಿ ನಿಲ್ಲಿಸಿಕೊಂಡು ಸ್ಥಿರನಾಗಿ ತನ್ನ ಮೂಗಿನ ತುದಿಯನ್ನು ನೋಡುತ್ತಾ ದಿಕ್ಕು ಗಳನ್ನು ನೋಡದೇ ಪ್ರಶಾಂತಾತ್ಮನಾಗಿ, ಭಯವಿಲ್ಲದವನಾಗಿ, ಬ್ರಹ್ಮಚರ್ಯ

ವ್ರತದಲ್ಲಿ ಇರುವವನಾಗಿ, ಮನಸ್ಸನ್ನು ಸಂಯಮಮಾಡಿಕೊಂಡು, ನನ್ನಲ್ಲಿಯೇ ಮನಸ್ಸುಳ್ಳವನಾಗಿ, ನಾನೇ ಪರಮಶ್ರೇಷ್ಠನಾದವನೆಂದು ಭಾವಿಸಿ ಧ್ಯಾನಯೋಗದಲ್ಲಿರಬೇಕು.

* * *

(ಹಿಂದಿನ ಶ್ಲೋಕದಲ್ಲಿ ಧ್ಯಾನಕ್ಕೆ ಕುಳಿತುಕೊಳ್ಳಬೇಕಾದ ಸ್ಥಳ, ಆಸನ ಮತ್ತು ವಿಧಾನ–ಇವುಗಳನ್ನು ಹೇಳಿಯಾಯಿತು. ಈ ಎರಡು ಶ್ಲೋಕಗಳಲ್ಲಿ ಶ್ರೀಕೃಷ್ಣನು ಧ್ಯಾನಯೋಗದ ಪ್ರಕ್ರಿಯೆಯನ್ನು ಇನ್ನೂ ವಿವರವಾಗಿ ಹೇಳುತ್ತಾನೆ.

ಶಿರ ಎಂದು ಪ್ರತ್ಯೇಕವಾಗಿ ಹೇಳಿರುವುದರಿಂದ ಇಲ್ಲಿ ಕಾಯ ಎಂದರೆ ಮುಂಡ ಮಾತ್ರ. ಮುಂಡ, ಕತ್ತು, ತಲೆ–ಇವುಗಳನ್ನು ಸಮನಾಗಿ ನೆಟ್ಟಗೆ ಇಟ್ಟುಕೊಳ್ಳಬೇಕು. ತಲೆಯಾಗಲೀ, ಕತ್ತಾಗಲೀ, ಶರೀರವಾಗಲೀ ಅಲುಗಾಡ ಕೂಡದು. ಆಸನದಿಂದ ನೆತ್ತಿಯವರೆಗೂ ಶರೀರವು ಸರಳರೇಖೆಯಲ್ಲಿರ ಬೇಕು. ಬೆನ್ನುಮೂಳೆ ಅಥವಾ ಮೇರುದಂಡವು ಸಮಸ್ಥಿತಿಯಲ್ಲಿ ಎಂದರೆ ನೇರವಾಗಿರಬೇಕು. ದೇಹವನ್ನು ಬಗ್ಗಿಸಿಕೊಂಡು ಕುಳಿತರೆ ಮನಸ್ಸನ್ನು ತಮಸ್ಸು ಆವರಿಸುವುದು. ನಿದ್ರೆಬರುವುದು. ಅದಕ್ಕಾಗಿ ಸರಳರೇಖೆಯಂತೆ ನೆಟ್ಟಗೆ ಕುಳಿತುಕೊಳ್ಳಬೇಕು. ಸ್ಥಿರವಾಗಿ ಕುಳಿತುಕೊಳ್ಳಬೇಕು. ಕ್ಷಣಕ್ಕೊಮ್ಮೆ ಏಳಕೂಡದು. ಮೂರುಘಂಟೆಗಳಕಾಲ ಒಂದೇ ಆಸನದಲ್ಲಿ ಸ್ಥಿರವಾಗಿ ಕುಳಿತಿರುವುದಕ್ಕೆ ಆಸನಜಯವೆಂದು ಹೆಸರು. ನಿಯಮಿತಕಾಲದವರೆಗೆ ಸ್ಥಿರ ವಾಗಿ ಕುಳಿತು ಧ್ಯಾನಮಾಡಬೇಕು. ಕಣ್ಣುಗಳಿಂದ ತನ್ನ ಮೂಗಿನ ಅಗ್ರಭಾಗ ವನ್ನು ನೋಡುತ್ತಿರಬೇಕು. ಇಲ್ಲಿ ಅಗ್ರಭಾಗವೆಂದರೆ ಐದನೇ ಅಧ್ಯಾಯದ ೨೭ನೆಯ ಶ್ಲೋಕದಲ್ಲಿ ಹೇಳಿರುವಂತೆ **'ಚಕ್ಷುಶ್ಚೈವಾನ್ತರೇ ಭ್ರುವೋಃ'** ಹುಬ್ಬುಗಳ ನಡುಭಾಗದಲ್ಲಿರುವ ಮೂಗಿನ ಭಾಗ.

ಹಿಂದೆ-ಮುಂದೆ, ಮೇಲೆ-ಕೆಳಗೆ ನೋಡುತ್ತಿರಬಾರದು. ಮನಸ್ಸು ಪ್ರಶಾಂತವಾಗಿರಬೇಕು. ಮನಸ್ಸಿನಲ್ಲಿ ಯಾವ ವಿಧವಾದ ಉದ್ವೇಗವೂ ಇರ ಬಾರದು. ಭಯರಹಿತನಾಗಿರಬೇಕು. ಕಾಮದಿಂದ ಭಯ-ಕ್ರೋಧಗಳು ಉಂಟಾಗುತ್ತವೆಯೆಂದು ಈ ಹಿಂದೆಯೇ ಹೇಳಿದೆ. **'ವಿಗತೇಚ್ಛಾಭಯ ಕ್ರೋಧಃ'** ಆಶೆ, ಭಯ ಮತ್ತು ಕ್ರೋಧಗಳನ್ನೂ ತ್ಯಜಿಸಬೇಕೆಂದು

ಶ್ರೀಕೃಷ್ಣನು ಹಿಂದೆ ಹೇಳಿದ್ದಾನೆ. ಇಲ್ಲಿ ಕಾಮ ಮತ್ತು ಕ್ರೋಧಗಳನ್ನು ಬಿಟ್ಟು ಭಯವನ್ನು ಮಾತ್ರವೇ ಹೇಳಿದ್ದಾನೆ. ಇದು ಯಾವ ಭಯ? ಧ್ಯಾನಯೋಗದಲ್ಲಿ ಮೇಲಕ್ಕೆ ಹೋಗುತ್ತಾ ಹೋಗುತ್ತಾ ವಾಸನೆಗಳೆಲ್ಲವೂ ಕಳಚಿಹೋಗುತ್ತವೆ. ಆ ಸ್ಥಿತಿಯನ್ನು ತಡೆದುಕೊಳ್ಳಲು ಮನುಷ್ಯನಿಗೆ ಸಾಧ್ಯವಾಗುವುದಿಲ್ಲ. ಭಯಪಟ್ಟುಕೊಂಡು ಹಿಂದಿರುಗುವುದೂ ಉಂಟು. ಬೆಸ್ತರವಳೊಬ್ಬಳು ಮಳೆಯು ಬಂದಿದ್ದರಿಂದ ಪೇಟೆಯಲ್ಲಿಯೇ ಉಳಿಯಬೇಕಾಯಿತಂತೆ. ಹೂವು ಮಾರುವವಳ ಅಂಗಡಿಯಲ್ಲಿ ಸ್ವಲ್ಪ ಸ್ಥಳವನ್ನು ಬೇಡಿ ಆ ರಾತ್ರಿ ಅವಳು ಆ ಅಂಗಡಿಯಲ್ಲೇ ಮಲಗಿದಳಂತೆ. ಆ ಸುವಾಸನೆಯು ಅವಳಿಗೆ ಹಿಡಿಸದೇ ಇದ್ದುದರಿಂದ ರಾತ್ರಿ ಪೂರ್ತಿಯಾಗಿ ನಿದ್ದೆಯನ್ನೇ ಮಾಡಲಿಲ್ಲವಂತೆ. ಹೀಗೆಯೇ ಅನೇಕವಾಸನೆಗಳನ್ನು ಅಂಟಿಸಿಕೊಂಡು ಬಂದಿರುವ ನಾವು ಆ ವಾಸನೆಗಳು ಬಿಟ್ಟುಹೋಗುವ ಸಮಯಬಂದಾಗ ಭಯಪಡುತ್ತೇವೆ. ಆದುದರಿಂದ ಧ್ಯಾನಯೋಗಿಯು ಭಯವನ್ನು ಸಂಪೂರ್ಣವಾಗಿ ತೊರೆದಿರಬೇಕು.

ಬ್ರಹ್ಮಚಾರಿವ್ರತೇ ಸ್ಥಿತಃ = ಬ್ರಹ್ಮಚರ್ಯವ್ರತದಲ್ಲಿರತಕ್ಕವನು. ಇಲ್ಲಿ ಶ್ರೀಕೃಷ್ಣನು ಮೊದಲನೆಯ ಆಶ್ರಮವನ್ನು ಮಾತ್ರವೇ ನಿರ್ದೇಶಿಸಿ ಹೇಳಿಲ್ಲ. ಬ್ರಹ್ಮಚಾರಿಯಾಗಬಹುದು ; ಗೃಹಸ್ಥನಾಗಬಹುದು ಅಥವಾ ಸಂನ್ಯಾಸಿಯೇ ಆಗಬಹುದು. ಧ್ಯಾನಯೋಗವನ್ನು ಅಭ್ಯಸಿಸಲಿಚ್ಛಿಸುವವನು ಯಾರೇ ಆದರೂ ಬ್ರಹ್ಮಚಾರಿವ್ರತದಲ್ಲಿರಬೇಕು. ಹೂವು ಮುಡಿದುಕೊಳ್ಳಬಾರದು. ತಾಂಬೂಲಚರ್ವಣಮಾಡಬಾರದು. ಬ್ರಹ್ಮಚರ್ಯಕ್ಕೆ ಭಂಗತರುವ ಗಾನ-ನೃತ್ಯಗಳನ್ನು ನೋಡಬಾರದು. ಸ್ತ್ರೀಭಿಃ ಯಾವದರ್ಥಸಮ್ಭಾಷೀ–ಸ್ತ್ರೀಯರೊಡನೆ ಎಷ್ಟು ಅವಶ್ಯವೋ ಅಷ್ಟು ಮಾತ್ರ ಮಾತನಾಡಬೇಕು. ಏಕಾಕಿಯಾಗಿ ಮಲಗಬೇಕು. ರೇತಸ್ಖಲನವಾಗದಂತೆ ಎಚ್ಚರಿಕೆಯಿಂದಿರಬೇಕು. ಈ ವ್ರತಗಳಲ್ಲಿ ಎಲ್ಲಕ್ಕಿಂತಲೂ ಪ್ರಕೃತಸಂದರ್ಭಕ್ಕೆ ಬಹುಮುಖ್ಯವಾದುದು ಅಸ್ಖಲಿತಬ್ರಹ್ಮಚರ್ಯವ್ರತ. ಮನುಷ್ಯನಿಗೆ ತೇಜಸ್ಸನ್ನು ಕೊಡತಕ್ಕದ್ದೇ ರೇತಸ್ಸು. ಮುನಿಗಳನ್ನು ಊರ್ಧ್ವರೇತಸ್ಕರೆಂದೂ ಹೇಳುತ್ತಾರೆ. ಅಸ್ಖಲಿತ ಬ್ರಹ್ಮಚರ್ಯದಲ್ಲಿದ್ದು ಧ್ಯಾನಯೋಗದಲ್ಲಿ ನಿರತನಾಗುವವನಿಗೆ ಬಲು ಬೇಗ ಆತ್ಮದರ್ಶನವಾಗುವುದು. ವೀರ್ಯದ ಅಪವ್ಯಯವು ಭ್ರೂಣಹತ್ಯಾ

ದೋಷಕ್ಕೆ ಸಮಾನವೆಂದು ಹೇಳುತ್ತಾರೆ. ಹೀಗೆ ಯೋಗಸಾಧನೆಮಾಡಬೇಕು ಎಂಬುದು ಅಭಿಪ್ರಾಯ.

**ಮನಃ ಸಂಯಮ್ಯ** = ಮನಸ್ಸನ್ನು ಬಲಾತ್ಕಾರವಾಗಿಯೇ ಆದರೂ ವಿಷಯಗಳಿಂದ ಒಳಕ್ಕೆ ಸೆಳೆದುಕೊಳ್ಳಬೇಕು. ಧ್ಯಾನಕಾರ್ಯವೆಂದರೆ ಅದು ಮುಖ್ಯವಾಗಿ ಮನಸ್ಸಿನ ಕಾರ್ಯವೇ ಆಗಿದೆ. ಅದಕ್ಕೂ ಜ್ಞಾನೇಂದ್ರಿಯಗಳೆಂಬ ಐದು ರಂಧ್ರಗಳಿವೆ. ಆ ಐದು ರಂಧ್ರಗಳನ್ನೂ ಭದ್ರವಾಗಿ ಮುಚ್ಚಿ ಮನಸ್ಸನ್ನು ಅಂತರಾತ್ಮನೆಡೆಗೆ ಸೆಳೆಯಬೇಕು.

ಈ ಶ್ಲೋಕದಲ್ಲಿ ಶ್ರೀಕೃಷ್ಣನು ಧ್ಯೇಯವಸ್ತುವನ್ನು ಕೊಟ್ಟಿದ್ದಾನೆ. **ಮಚ್ಚಿತ್ತಃ ಮತ್ಪರಃ**= ನನ್ನನ್ನೇ ನೀನು ಧ್ಯಾನಕ್ಕೆ ವಿಷಯನನ್ನಾಗಿ ಮಾಡಿಕೋ. ಅನಂತರ ನಿನ್ನ ಮನಸ್ಸನ್ನು ನನ್ನಲ್ಲಿಯೇ ನಿಲ್ಲಿಸು. ನನ್ನನ್ನೇ ಪರಮಶ್ರೇಷ್ಠನು ಎಂದು ಯಾವನು ತಿಳಿದಿರುವನೋ–ಅವನು ಮತ್ಪರನು.

ಶ್ವೇತಾಶ್ವತರೋಪನಿಷತ್ತಿನಲ್ಲಿಯೂ ಇದೇ ಅಭಿಪ್ರಾಯದ ಶ್ಲೋಕವು ಬಂದಿದೆ :

**ತ್ರಿರುನ್ನತಂ ಪ್ರಾಪ್ಯ ಸಮಂ ಶರೀರಂ**
**ಹೃದೀನ್ದ್ರಿಯಾಣಿ ಮನಸಾ ಸಂನಿವೇಶ್ಯ ।**
**ಬ್ರಹ್ಮೋಡುಪೇನ ಪ್ರತರೇತ ವಿದ್ವಾನ್**
**ಸ್ರೋತಾಂಸಿ ಸರ್ವಾಣಿ ಭಯಾವಹಾನಿ ॥** ೨-೮

ವಿದ್ವಾಂಸನು ಉನ್ನತವಾದ ತಲೆ, ಕೊರಳು ಮತ್ತು ಎದೆ–ಎಂಬ ಮೂರು ಅಂಗಗಳುಳ್ಳ ಶರೀರವನ್ನು ಸಮವಾಗಿ ನಿಲ್ಲಿಸಿ, ಇಂದ್ರಿಯಗಳನ್ನು ಹೃದಯದಲ್ಲಿ ನಿಯಮಿಸಿ, ಭಯಾನಕವಾದ ಸಮಸ್ತಸಂಸಾರಪ್ರವಾಹಗಳನ್ನೂ ಬ್ರಹ್ಮವೆಂಬ ತೆಪ್ಪದ ಸಹಾಯದಿಂದ ದಾಟಬೇಕು.

ಕಣ್ಣುಗಳ ದೃಷ್ಟಿಯನ್ನು ಮೂಗಿನ ಅಗ್ರದಮೇಲೆ ಇರಿಸುವುದು **ಸಂಪ್ರೇಕ್ಷ್ಯ** ಎಂಬ ಪದಕ್ಕೆ ಅರ್ಥ. ಭಗವಂತನು ಈ ಹಿಂದೆ–ಮನಸ್ಸನ್ನು ಆತ್ಮದಲ್ಲಿ ಇಡಬೇಕು. **ಆತ್ಮಸಂಸ್ಥಂ ಮನಃ ಕೃತ್ವಾ** ಎಂದಿದ್ದಾನೆ. ಆದುದರಿಂದ **ಸಂಪ್ರೇಕ್ಷ್ಯ** ಎಂಬ ಪದದ ಅನಂತರ ಇವ ಎಂಬ ಶಬ್ದವು ಲೋಪವಾಗಿದೆ ಎಂದು ತಿಳಿಯಬೇಕು. **'ಸ್ವಂ ನಾಸಿಕಾಗ್ರಂ ಸಂಪ್ರೇಕ್ಷ ಸಮ್ಯಕ್ ಪ್ರೇಕ್ಷಣಂ ದರ್ಶನಂ ಕೃತ್ವಾ ( ಇವ )**–ನಾಸಿಕಾಗ್ರವನ್ನು

ಚೆನ್ನಾಗಿ ನೋಡುತ್ತಿರುವವನಂತೆ, ಕಣ್ಣುಗಳ ದೃಷ್ಟಿಯನ್ನು ವಿಷಯಗಳ ಕಡೆ ಯಿಂದ ತಡೆದು ಅಲ್ಲಿ ಸ್ಥಾಪಿಸಬೇಕು. ಈ ದೃಷ್ಟಿಯ ಸ್ಥಾಪನೆಯು ಅಂತಃಕರಣದ ಸಮಾಧಾನಕ್ಕೂ ಅವಶ್ಯವಾಗಿರುವುದರಿಂದ ಉಪಾದೇಯ ವಾಗಿದೆ. ಏಕೆಂದರೆ: ಒಂದು ವೇಳೆ ಕಣ್ಣುಗಳು ಮೂಗಿನ ತುದಿಯನ್ನು ನೋಡುವುದೇ ವಿಧಾನವಾಗಿದ್ದರೆ ಮನಸ್ಸೂ ಸಹ ದೃಷ್ಟಿಯೊಡನೆ ನಾಸಿಕಾಗ್ರ ದಲ್ಲಿರುವುದೇ ಹೊರತು ಆತ್ಮನಲ್ಲಿ ನಿಲ್ಲಲಾರದು.

**ಮಚ್ಚಿತ್ತಃ ಮತ್ಪರಃ** = ಚಿತ್ತವೂ ನನ್ನಲ್ಲಿಯೇ ಇರಬೇಕು. ನನ್ನನ್ನೇ ಸರ್ವಶ್ರೇಷ್ಠನೆಂದೂ ತಿಳಿಯಬೇಕು.

ಸಾಮಾನ್ಯವಾಗಿ ಮನುಷ್ಯನು ಒಬ್ಬನಲ್ಲಿಯೇ ಮನಸ್ಸನ್ನು ಇಟ್ಟು ಅವನೇ ಶ್ರೇಷ್ಠನೆಂದು ಭಾವಿಸಬೇಕೆಂಬ ನಿಯಮವಿಲ್ಲ. ಕಾಮಿಯು ಸ್ತ್ರೀಚಿತ್ತ ನಾಗಿರುತ್ತಾನೆ. ಆದರೆ ಸ್ತ್ರೀಯು ಪರಮಶ್ರೇಷ್ಠಳೆಂಬುದನ್ನು ಅವನು ಒಪ್ಪು ವುದಿಲ್ಲ. ರಾಜನನ್ನೋ ಮಹಾದೇವನನ್ನೋ ಪರಮಶ್ರೇಷ್ಠನೆಂದು ಹೇಳು ತ್ತಾನೆ. ಆದರೆ ರಾಜನಲ್ಲಿ ಅಥವಾ ಮಹಾದೇವನಲ್ಲಿ ಅವನ ಚಿತ್ತವು ಸಂಯತ ವಾಗಿರುವುದೆಂದು ಹೇಳುವುದಕ್ಕಾಗುವುದಿಲ್ಲ. ಇಲ್ಲಿ ಶ್ರೀಕೃಷ್ಣನು–ಧ್ಯಾನ ಯೋಗಿಯು ನನ್ನಲ್ಲಿ ಮನಸ್ಸುಳ್ಳವನೂ ಆಗಬೇಕು. ನನ್ನನ್ನೇ ಸರ್ವಶ್ರೇಷ್ಠನೆಂದು ಭಾವಿಸಲೂ ಬೇಕು–ಎಂದು ಹೇಳುತ್ತಾನೆ. (ಶಂ.ಭಾ.)

ಬ್ರಹ್ಮಚರ್ಯ ಎಂದರೆ ಹೆಂಗಸರಲ್ಲಿ ಭೋಗ್ಯತಾಬುದ್ಧಿಯನ್ನು ಬಿಡುವುದು. ಅಷ್ಟಾಂಗಮೈಥುನವನ್ನು ಬಿಡುವುದು.

**ಸ್ಮರಣಂ ಕೀರ್ತನಂ ಕೇಳಿಃ ಪ್ರೇಕ್ಷಣಂ ಗುಹ್ಯಭಾಷಣಮ್ ।**
**ಸಙ್ಕಲ್ಪೋಽಧ್ಯವಸಾಯಶ್ಚ ಕ್ರಿಯಾನಿರ್ವೃತ್ತಿರೇವ ಚ ॥**

ಈ ಎಂಟು ದೋಷಗಳು ಇಲ್ಲದಿರುವುದೇ ಬ್ರಹ್ಮಚರ್ಯೆ.

**ಮಚ್ಚಿತ್ತಃ-ಮತ್ಪರಃ** = **ಮಚ್ಚಿತ್ತಃ**ಎಂಬ ಪದವು ಭಗವಂತನಲ್ಲಿ ಚಿತ್ತದ ಅನುಪ್ರವೇಶವನ್ನು ಹೇಳುತ್ತದೆ. **ಮತ್ಪರಃ** ಎನ್ನುವುದು ತದೇಕಚಿತ್ತತ್ವವನ್ನು ಅಥವಾ ಅದರ ಅನುವೃತ್ತಿಯನ್ನು ಹೇಳುತ್ತದೆ.)

(ಶ್ರೀವೇದಾಂತದೇಶಿಕರು.)

**ಓಂ ಯುಞ್ಜನ್ನೇವಂ ಸದಾತ್ಮಾನಂ ಯೋಗೀ ನಿಯತಮಾನಸಃ ।**
**ಶಾನ್ತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥೧೫॥**

ಜಿತವಾದ ಮನಸ್ಸುಳ್ಳ ಯೋಗಿಯು ಹೀಗೆ ಯಾವಾಗಲೂ ಧ್ಯಾನ ಯೋಗದಿಂದ ಆತ್ಮಾನುಸಂಧಾನಮಾಡುತ್ತಾ ನನ್ನಲ್ಲಿರುವ ಮೋಕ್ಷವೇ ಅಂತ್ಯ ವಾಗಿರುವ ಪರಮಶಾಂತಿಯನ್ನು ಹೊಂದುತ್ತಾನೆ.

* * *

(ಈ ರೀತಿಯಾಗಿ ಯಾವಾಗಲೂ ಯೋಗಿಯು ಮನಸ್ಸನ್ನು ನಿಯಮನ ಗೊಳಿಸಿ, ಮನಸ್ಸನ್ನು ನಿಗ್ರಹಿಸಿ, ತನ್ನನ್ನು (ತನ್ನ ಮನಸ್ಸನ್ನು ) ಧ್ಯಾನದಲ್ಲಿಯೇ ತೊಡಗಿಸಬೇಕು. ನಿಗೃಹೀತವಾದ ಮನಸ್ಸಿನಿಂದ ಏನನ್ನು ಬೇಕಾದರೂ ಮಾಡಬಹುದು. ಜನಪೀಡಕವಾದ ಚಾರಣ, ಮಾರಣ, ವಶೀಕರಣ– ಇತ್ಯಾದಿ ಸಾಧನೆಗಳನ್ನೂ ಮನೋನಿಗ್ರಹದಿಂದ ಸಾಧಿಸಿಕೊಳ್ಳಬಹುದು. ಹೀಗೆ ಮಾಡಿದಲ್ಲಿ ಮತ್ತಷ್ಟು ಪಾಪಸಂಗ್ರಹಕ್ಕೆ ಕಾರಣವಾಗುತ್ತದೆ. ಅಂತಹವನಿಗೆ ಮೋಕ್ಷವೆಂಬುದು ಬಹಳ ದೂರ ಸರಿಯುತ್ತದೆ. ಆದುದರಿಂದ ಶ್ರೀಕೃಷ್ಣನು **ನಿಯತಮಾನಸಃ ಯೋಗೀ ಆತ್ಮಾನಂ ಏವಂ ಯುಞ್ಜನ್** ಎನ್ನುತ್ತಾನೆ. ನಿಗ್ರಹವಾದ ಮನಸ್ಸನ್ನು ಪರಮಾತ್ಮನಲ್ಲಿ ಜೋಡಣೆ ಮಾಡಬೇಕು. ಇದನ್ನು ಸದಾಕಾಲದಲ್ಲಿಯೂ ಮಾಡುತ್ತಿರಬೇಕು. ಸದಾ ಎಂದರೆ ನಿಯತವಾಗಿ ಎರಡು ಸಂಧ್ಯೆಗಳಲ್ಲಿಯೂ–ಧ್ಯಾನಯೋಗವನ್ನು ಎಷ್ಟು ಹೆಚ್ಚುಹೊತ್ತು ಸಾಧ್ಯವಾಗುತ್ತದೆಯೋ ಅಷ್ಟು ಹೊತ್ತು– ಮಾಡಬೇಕು. ಉಳಿದ ವೇಳೆಯಲ್ಲಿಯೂ ಮನಸ್ಸು ಪರಮಾತ್ಮನ ಸಂಬಂಧವನ್ನು ಕಡಿದುಕೊಳ್ಳಬಾರದು. ದಿವ್ಯಪುರುಷನನ್ನು ಸದಾಕಾಲದಲ್ಲಿಯೂ ಸ್ಮರಣೆಮಾಡುತ್ತಲೇ ಇರಬೇಕು.

ಈ ನಿರಂತರಧ್ಯಾನಯೋಗದ ಫಲವೇನು? ನಿರ್ವಾಣ ಎಂದರೆ ಮೋಕ್ಷಶಾಂತಿಗೆ ಕಡೆಯ ನಿಲ್ದಾಣವಾಗಿ ಯಾವುದಿರುವುದೋ ಅದು. ನಿರ್ವಾಣಪರಮವಾದುದು. ಅಂತಹ ನನ್ನಲ್ಲಿರುವ ಶಾಂತಿಯನ್ನು ; ಪರಮ ಶಾಂತಿಯನ್ನು ಪಡೆಯುತ್ತಾನೆ. ಮೂಸೆಯಲ್ಲಿ ಒಂದು ವಸ್ತುವನ್ನಿಟ್ಟು ಕಾಯಿ ಸುತ್ತಿದ್ದರೆ ಹೇಗೆ ಆ ವಸ್ತುವೂ ಸಹ ಕೆಂಡದಂತೆಯೇ ಕೆಂಪಗಾಗುವುದೋ ಹಾಗೆಯೇ ಧ್ಯಾನದ ಮೂಲಕವಾಗಿ ಭಗವಂತನೆಂಬ ಮೂಸೆಯಲ್ಲಿ ಮನ

ಸ್ಸನ್ನು ಕಾಯಿಸಿದರೆ ಭಗವಂತನ ಆಕಾರವನ್ನೇ ಮನಸ್ಸು ಪಡೆದುಕೊಳ್ಳುತ್ತದೆ. ಧ್ಯಾನಿಸುವವನಿಗೂ ಧ್ಯೇಯವಸ್ತುವಿನ ಧರ್ಮಗಳೇ ಬರುತ್ತವೆ. ಪರಮಾತ್ಮನಲ್ಲಿ ಪರಮಶ್ರೇಷ್ಠವಾದ ಶಾಶ್ವತವಾದ ಶಾಂತಿಯು ಅಡಗಿದೆ. ಶಾಂತಿಯ ಸಾಕ್ಷಾತ್ ಸ್ವರೂಪನೇ ಅವನಾಗಿದ್ದಾನೆ. ಅಂತಹವನನ್ನು ಧ್ಯಾನ ಮಾಡಿದವನಿಗೂ ಅದೇ ವಿಧವಾದ ಪರಮಶಾಂತಿಯು ಲಭ್ಯವಾಗುತ್ತದೆ.

**ನಿರ್ವಾಣಪರಮಾಂ** = ಮೋಕ್ಷವೇ ನಿಷ್ಠೆಯಾಗಿ ಉಳ್ಳ. (ಶಂ.ಭಾ.)

**ಆತ್ಮಾನಂ ಸದಾ ಯುಞ್ಜನ್** = ಮನಸ್ಸನ್ನು ಯಾವಾಗಲೂ ಮನಸ್ಸಿಗೆ ಶುಭಾಶ್ರಯನಾದ ಪರಬ್ರಹ್ಮಪುರುಷೋತ್ತಮನಾದ ನನ್ನಲ್ಲಿ ಯೋಜಿಸುತ್ತಾ (ರಾ.ಭಾ.)

**ಮತ್ಸಂಸ್ಥಾಮಧಿಗಚ್ಛತಿ**

ಶಾಂತಿಯೆಂಬುದು ಹೊರಗಿನ ಪ್ರಪಂಚದಲ್ಲಿ ಎಲ್ಲಿಯೂ ಇಲ್ಲ. ಮನಃಶಾಂತಿಯೆಂದು ನಾವು ವ್ಯಾವಹಾರಿಕವಾಗಿ ಹೇಳಿದರೂ ಮನಸ್ಸು ಇರುವವರಿಗೂ ಶಾಂತಿಯು ದೊರಕುವುದೇ ಇಲ್ಲ. ಅದಕ್ಕೆ ಜಾಗ್ರತ ಮತ್ತು ಸ್ವಪ್ನಸ್ಥಿತಿಗಳಲ್ಲಿ ಶಾಂತಿಯು ದೊರಕುವುದಿಲ್ಲ. ಮನಸ್ಸು ಸಂಪೂರ್ಣವಾಗಿ ಲಯಹೊಂದಿರುವ ಸ್ಥಿತಿಯಲ್ಲೇ ಶಾಂತಿಯ ಅನುಭವವಾಗುವುದು. ಆ ಶಾಂತಿಯು ಎಲ್ಲಿದೆ ಎಂದರೆ **ಮತ್‌ಸಂಸ್ಥಾ** ಎಂದು ಭಗವಂತನು ಹೇಳು ವಂತೆ ಅವನಲ್ಲಿಯೇ ಇದೆ. ಶಾಂತಿಸಮೃದ್ಧನಾದ ಅಮೃತನು ಅವನೇ ಅಲ್ಲವೇ?

**ನಿರ್ವಾಣಪರಮಾಂ** = ಶರೀರತ್ಯಾಗೋತ್ತರಕಾಲದಲ್ಲಿ ಬರುವ. ಶರೀರ **ತ್ಯಾಗೋತ್ತರಕಾಲೀನಾಂ** (ಮ.ಭಾ.)

**ಓಂ ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾನ್ತಮನಶ್ನತಃ ।**
**ನ ಚಾತಿ ಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥೧೬॥**

ಅತಿಯಾಗಿ ಊಟಮಾಡುವವನಿಗೆ ಯೋಗವಿಲ್ಲ. ಎಷ್ಟು ಮಾತ್ರವೂ ಊಟಮಾಡದೇ ಇರುವವನಿಗೂ ಯೋಗವಿಲ್ಲ. ಅತಿಯಾಗಿ ನಿದ್ರಿಸುವವ ನಿಗೂ ಯೋಗವಿಲ್ಲ. ನಿದ್ರೆಯನ್ನೇ ಮಾಡದಿರುವವನಿಗೂ ಯೋಗವಿಲ್ಲ.

* * *

(ಯೋಗಕ್ಕೆ ಆಹಾರಾದಿ ನಿಯಮಗಳನ್ನು ಶ್ರೀಕೃಷ್ಣನು ಹೇಳುತ್ತಾನೆ. ಹೆಚ್ಚು ತಿಂದವನಿಗೆ ಧ್ಯಾನಕಾರ್ಯವು ಸಾಧ್ಯವಾಗುವುದಿಲ್ಲ. ಮಿತಿಮೀರಿ

ತಿಂದರೆ ದೇಹಕ್ಕೆ ಆಯಾಸವಾಗುವುದು. ತಿಂದಿದ್ದು ಅರಗುವವರೆಗೂ ಮನಸ್ಸಿಗೆ ಸಮಾಧಾನವಿರುವುದಿಲ್ಲ. ಆಹಾರವನ್ನು ಜೀರ್ಣಮಾಡುವುದರಲ್ಲಿ ಸಹಕರಿಸಬೇಕಾದ ಮನಸ್ಸನ್ನು ಬಲವಂತವಾಗಿ ಧ್ಯಾನಕ್ಕೆ ಎಳೆಯಬೇಕಾಗುತ್ತದೆ. ಆಗ ಎರಡು ಕೆಲಸಗಳಿಗೂ ಪ್ರತಿಬಂಧಕವುಂಟಾಗುತ್ತದೆ. ಮಿತಿಮೀರಿ ತಿಂದ ಆಯಾಸದಿಂದಲೇ ಮಲಗಬೇಕಾಗುವುದು. ಅತಿ ಹೆಚ್ಚಿನ ಊಟದಿಂದ ಅತಿ ಹೆಚ್ಚಿನ ನಿದ್ರೆಯು ಬರುತ್ತದೆ. ಮಾಡಿದ ಊಟವನ್ನು ಅರಗಿಸಿಕೊಳ್ಳಬೇಕಾದರೆ ನಿದ್ರೆಯೂ ಒಂದು ಔಷಧ. ಆದುದರಿಂದ ಹೆಚ್ಚು ಊಟಮಾಡಿದವನು ಅನಿವಾರ್ಯವಾಗಿ ಹೆಚ್ಚು ಕಾಲ ನಿದ್ರಿಸಬೇಕಾಗುತ್ತದೆ. ಹೆಚ್ಚು ನಿದ್ರೆಮಾಡುವವನು ತಮೋಗುಣಿ. ಅತಿಯಾದ ಆಹಾರವು ಜಾಡ್ಯವನ್ನುಂಟುಮಾಡುತ್ತದೆ. ಅಂತಹವನಿಗೆ ಧ್ಯಾನದಲ್ಲಿ ಆಸಕ್ತಿಯೇ ಹುಟ್ಟುವುದಿಲ್ಲ. ಮತ್ತೆ ಕೆಲವರು ಹೆಚ್ಚಿನ ನಿಷ್ಠೆಯುಳ್ಳವರಂತೆ ಉಪವಾಸಾದಿಗಳನ್ನು ಮಿತಿಮೀರಿ ಮಾಡುತ್ತಾರೆ. ದೇಹವನ್ನು ಮಿತಿಮೀರಿ ದಂಡಿಸುತ್ತಾರೆ. ಇಂತಹವರಿಗೂ ಧ್ಯಾನಯೋಗವು ಸಾಧ್ಯವಿಲ್ಲ. ಬಲಾತ್ಕಾರವಾಗಿ ಆಹಾರ ತಿನ್ನುವುದನ್ನು ಬಿಟ್ಟರೂ ಸಹ ಮನಸ್ಸು ಆಹಾರಕ್ಕಾಗಿ ತಳಮಳಿಸುತ್ತಿರುತ್ತದೆ. ಆ ಸಮಯದಲ್ಲಿ ಮನಸ್ಸನ್ನು ಬಿಗಿ ಹಿಡಿದು ಧ್ಯಾನಾಸಕ್ತನಾಗಲು ಸಾಧ್ಯವಾಗುವುದಿಲ್ಲ. ಉಪವಾಸವಿರುವವನಿಗೆ ನಿದ್ರೆಯೂ ಬರುವುದಿಲ್ಲ. ನಿದ್ರಾಹಾರಗಳಿಲ್ಲದೇ ಇರುವುದರಿಂದ ಶರೀರವು ದುರ್ಬಲವಾಗುತ್ತದೆ. ಏಕಾಗ್ರತೆಯಿಂದ ಧ್ಯಾನಕಾರ್ಯವನ್ನು ಮಾಡಲು ಸಾಧ್ಯವಾಗುವುದಿಲ್ಲ.

ಮನಸ್ಸು ದೃಢವಾಗಬೇಕಾದರೆ ದೈಹಿಕಶಕ್ತಿಯೂ ಸಾಕಷ್ಟಿರಬೇಕು. ಆದುದರಿಂದ ಯೋಗಿಯಾದವನು ಅತಿಯಾಗಿಯೂ ತಿನ್ನಬಾರದು ; ತಿನ್ನದೆಯೂ ಇರಬಾರದು. ದೇಹಪೋಷಣೆಗೆ ಸಾಕಷ್ಟು ತಿನ್ನಬೇಕು. ಅವನು ಮಿತಾಹಾರಿಯಾಗಿದ್ದರೆ ನಿದ್ರೆಯೂ ಮಿತವಾಗಿಯೇ ಇರುತ್ತದೆ. ಧ್ಯಾನಕಾರ್ಯವು ಸುಗಮವಾಗಿ ನಡೆಯುತ್ತದೆ. ತಂತಿಯು ಸಡಿಲವಾಗಿದ್ದರೂ ತಂಬೂರಿಯಲ್ಲಿ ಶ್ರುತಿಯು ಹೊರಡುವುದಿಲ್ಲ. ತುಂಬ ಬಿಗಿಯಾದರೆ ತಂತಿಯೇ ಕಿತ್ತುಹೋಗಬಹುದು. ಆದುದರಿಂದ ತಂತಿಯನ್ನು ಎಷ್ಟು ಮಾತ್ರ ಸೆಳೆದು ಕಟ್ಟಿದರೆ ಒಳ್ಳೆಯ ಶ್ರುತಿಯು ಹೊರಡುವುದೋ ಅಷ್ಟು ಮಾತ್ರ ಎಳೆದುಕಟ್ಟಬೇಕು.

ಯುಕ್ತಪ್ರಮಾಣದಲ್ಲಿ ಆಹಾರವನ್ನು ಉಪಯೋಗಿಸುವ ಬಗೆಗೆ ಶ್ರೀಶಂಕರರು ಈ ಕೆಳಗಿನ ಶ್ರುತಿವಚನವನ್ನು ಉದ್ಧರಿಸುತ್ತಾರೆ.

**ಯದು ಹ ವಾ ಆತ್ಮಸಮ್ಮಿತಮನ್ನಂ ತದವತಿ ತನ್ನ ಹಿನಸ್ತಿ । ಯದ್ಭೂಯೋ ಹಿನಸ್ತಿ ತದ್ಯತ್ಕನೀಯೋ ನ ತದವತಿ**

ಯಾವ ಅನ್ನವು ತನಗೆ ಸಾಕಷ್ಟಿರುವುದೋ ಅದು ರಕ್ಷಣೆಮಾಡುವುದು. ತೊಂದರೆಯನ್ನುಂಟುಮಾಡುವುದಿಲ್ಲ. ಅಳತೆಗಿಂತ ಹೆಚ್ಚಾಗಿದ್ದರೂ ತೊಂದರೆಮಾಡುವುದು. ಬೇಕಾದಷ್ಟಕ್ಕಿಂತ ಕಡಿಮೆಯಾಗಿದ್ದರೂ ಅದು ರಕ್ಷಿಸುವುದಿಲ್ಲ. (ಶಂ.ಭಾ.)

ಯೋಗಶಾಸ್ತ್ರದಲ್ಲಿ ಯೋಗಿಯು ತೆಗೆದುಕೊಳ್ಳಬೇಕಾದ ಅನ್ನ ಮತ್ತು ನೀರಿನ ಪರಿಮಿತಿಯನ್ನು ಈ ರೀತಿ ಗೊತ್ತುಮಾಡಿದ್ದಾರೆ :

**ಅರ್ಧಂ ಸವ್ಯಞ್ಜನಾನ್ನಸ್ಯ ತೃತೀಯಮುದಕಸ್ಯ ಚ ।**
**ವಾಯೋಃ ಸಂಚರಣಾರ್ಥಂ ತು ಚತುರ್ಥಮವಶೇಷಯೇತ್ ॥**

ವ್ಯಂಜನಸಹಿತವಾದ ಅನ್ನದಿಂದ ಹೊಟ್ಟೆಯನ್ನು ಅರ್ಧ ತುಂಬಿಸಿಕೊಳ್ಳ ಬೇಕು. ಮೂರನೆಯ ಕಾಲುಭಾಗವನ್ನು ನೀರಿನಿಂದ ತುಂಬಿಸಿಕೊಳ್ಳಬೇಕು. ಗಾಳಿಯ ಸಂಚಾರಕ್ಕಾಗಿ ನಾಲ್ಕನೆಯ ಒಂದಂಶವನ್ನು ಖಾಲಿಬಿಡಬೇಕು.

ಆದುದರಿಂದ ಯೋಗಿಯು ತನಗೆ ಉಪಯುಕ್ತವಾದುದಕ್ಕಿಂತಲೂ ಕಡಿಮೆ ಅಥವಾ ಹೆಚ್ಚು ಅನ್ನವನ್ನು ತಿನ್ನಬಾರದು. ಯೋಗಶಾಸ್ತ್ರದಲ್ಲಿ ಹೇಳಲ್ಪ ಟ್ಟಿರುವ ಯಾವ ಅನ್ನದ ಪರಿಮಾಣವುಂಟೋ ಅದಕ್ಕಿಂತಲೂ ಹೆಚ್ಚು ತಿನ್ನು ವವನಿಗೆ ಯೋಗವು ಸಿದ್ಧಿಸುವುದಿಲ್ಲ.

**ಯುಕ್ತ** ಎಂಬ ಶಬ್ದವು ಕಡಿಮೆ ಹೆಚ್ಚು ಮುಂತಾದ ಯಾವ ದೋಷವೂ ಇರಬಾರದು–ಎಂಬ ಅಭಿಪ್ರಾಯವನ್ನು ಹೇಳುತ್ತದೆ.

(ಶ್ರೀವೇದಾಂತದೇಶಿಕರು.)

ಈ ಅನಶನ ಮುಂತಾದುವುಗಳ ನಿಷೇಧ, ಜಾಗರಣನಿಷೇಧ–ಇವು ಗಳು ಅಶಕ್ತನಿಗೆ ಮಾತ್ರ. ಶಕ್ತನಿಗಾದರೋ ಅದನ್ನು ಶಾಸ್ತ್ರವೇ ವಿಧಿಸುತ್ತದೆ :

**ನಿದ್ರಾಶನಭಯಶ್ವಾಸಚೇಷ್ಟಾತನ್ದ್ರಾದಿವರ್ಜನಮ್ ।**
**ಕೃತ್ವಾ ನಿಮೀಲಿತಾಕ್ಷಸ್ತು ಶಕ್ತೋ ಧ್ಯಾಯನ್ಪ್ರಸೀದತಿ ॥** (ಮ.ಭಾ.)

**ಓಂ ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।**
**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥೧೭॥**

ಯುಕ್ತವಾದ ಆಹಾರವನ್ನು ಸೇವಿಸುತ್ತಾ, ವಿಹಾರವನ್ನೂ ಕರ್ಮಗಳನ್ನೂ ಮಾಡುತ್ತಾ, ನಿಯತಕಾಲದಲ್ಲಿ ಯೋಗ್ಯಪ್ರಮಾಣದಲ್ಲಿ ನಿದ್ರೆ ಮಾಡುತ್ತಾ, ನಿಯತವಾದ ಪರಿಮಾಣದಲ್ಲಿ ಎಚ್ಚರಗೊಳ್ಳುತ್ತಾ ಧ್ಯಾನ ಕಾರ್ಯಮಾಡುವವನಿಗೆ ಧ್ಯಾನಯೋಗವು ದುಃಖನಾಶಕವಾಗುತ್ತದೆ.

* * *

(ಯುಕ್ತವಾದ ಆಹಾರ-ವಿಹಾರವುಳ್ಳವನಿಗೆ ಯೋಗವು ಸಿದ್ಧಿಸುತ್ತದೆ. ಯುಕ್ತವಾದ ಆಹಾರ ಎಂದರೆ ಹಿಂದಿನ ಶ್ಲೋಕದಲ್ಲಿ ಹೇಳಿರುವಂತೆ ಎಷ್ಟು ಬೇಕೋ ಅಷ್ಟು ಮಿತವಾದ ಆಹಾರವನ್ನು ತೆಗೆದುಕೊಳ್ಳುವುದು. ದೇಹ ಧಾರಣೆಗೆ ಎಷ್ಟು ಬೇಕೋ ಅಷ್ಟು. ಜಿಹ್ವಾಚಾಪಲ್ಯವನ್ನು ತೊರೆಯಬೇಕು. ಇಷ್ಟುಮಾತ್ರವಲ್ಲದೇ ಯುಕ್ತವಾದ ಆಹಾರವನ್ನೇ ತೆಗೆದುಕೊಳ್ಳುವುದು. ಧ್ಯಾನಯೋಗಕ್ಕೆ ಅನುಕೂಲವಾಗುವಂತೆ ಸಾತ್ತ್ವಿಕವಾದ ಆಹಾರವನ್ನು ಮಾತ್ರವೇ ತೆಗೆದುಕೊಳ್ಳಬೇಕು. ಹಾಲು, ಹಣ್ಣು, ಮಧುರಪದಾರ್ಥಗಳು–ಇತ್ಯಾದಿ. ತಾಮಸಗುಣವನ್ನುಂಟುಮಾಡುವಂತಹ ಈರುಳ್ಳಿಯೇ ಮುಂತಾದುವನ್ನು ತಿನ್ನಬಾರದು. ಸತ್ಯನಿಷ್ಠೆಯಿಂದ ಮತ್ತು ನ್ಯಾಯರೀತಿಯಲ್ಲಿ ಸಂಪಾದಿಸಿದ ಹಣದಿಂದ ಪ್ರಾಪ್ತವಾದ ಆಹಾರವನ್ನು ತಿನ್ನಬೇಕು. ಯಾವುದೇ ಆಹಾರವನ್ನಾದರೂ ದೇವರಿಗೆ ನಿವೇದನೆಮಾಡಿ ತಿನ್ನಬೇಕು. ಇದಕ್ಕೆ ಯುಕ್ತವಾದ ಆಹಾರವೆಂದು ಹೆಸರು. ಆಹಾರಶುದ್ಧೌ ಸತ್ತ್ವಶುದ್ಧಿಃ.

ನಮ್ಮ ಮನಸ್ಸಿನ ನೈರ್ಮಲ್ಯಕ್ಕೆ ಆಹಾರವೇ ಬಹುಮುಖ್ಯವಾದುದು. ಆದುದರಿಂದ ಆಹಾರವು ಸಾತ್ತ್ವಿಕವಾಗಿರಬೇಕಲ್ಲವೇ?–ಆಹಾರವನ್ನು ನಮಗೆ ಕೊಡುವವರೂ ಸತ್ತ್ವಗುಣದವರೇ ಆಗಿರಬೇಕು. ಸಾತ್ತ್ವಿಕವಾದ ಮತ್ತು ಧಾರ್ಮಿಕವಾದ ರೀತಿಯಿಂದಲೇ ಸಂಪಾದಿಸಿದ ಆಹಾರವಾಗಿರಬೇಕು. ಆಹಾರವನ್ನು ಯುಕ್ತಕಾಲದಲ್ಲಿಯೇ ಸೇವಿಸಬೇಕು.

ವಿಹಾರ ಎಂದರೆ ಓಡಾಟ. ಕೈಕಾಲುಗಳ ಕೆಲಸ. ಅದೂ ಸಹ ನಿಯತವಾದ ಪರಿಮಿತಿಯಲ್ಲಿಯೇ ಇರಬೇಕು. ನಿಯತವಾದ ಕಾಲದಲ್ಲಿ ಆಚರಿಸಲ್ಪಡಬೇಕು.

**ಯುಕ್ತಚೇಷ್ಟಸ್ಯ ಕರ್ಮಸು** = ಚೇಷ್ಟೆ ಎಂದರೆ ಕರ್ಮ. ಕರ್ಮ ಮಾಡುವುದರಲ್ಲಿ ಯುಕ್ತವಾದ ಕರ್ಮವನ್ನು ಮಾಡಬೇಕು. ನಿಯತವಾದ ಸಮಯದಲ್ಲಿ ನಿಯತವಾದ ಪ್ರಮಾಣದಲ್ಲಿ ಕರ್ಮಮಾಡಬೇಕು.

**ಯುಕ್ತಸ್ವಪ್ನಾವಬೋಧಸ್ಯ** –ಹಿಂದಿನ ಶ್ಲೋಕದಲ್ಲಿಯೂ ಮತ್ತು ಈ ಶ್ಲೋಕದಲ್ಲಿಯೂ ನಿದ್ರೆ ಎಂಬುದಕ್ಕೆ 'ಸ್ವಪ್ನ' ಎಂಬ ಪದವೇ ಹೇಳಲ್ಪಟ್ಟಿದೆ. ಸ್ವಪ್ನ ಎಂಬುದಕ್ಕೆ ಕನಸು ಎಂಬ ಅರ್ಥವು ಇಲ್ಲಿ ಸರಿಹೋಗುವುದಿಲ್ಲ. ಇಲ್ಲಿ ಯುಕ್ತವಾದಷ್ಟು ಕಾಲ ನಿದ್ರೆಮಾಡುವವನು ; ಯುಕ್ತಸಮಯದಲ್ಲಿ ಧ್ಯಾನಕಾರ್ಯಕ್ಕಾಗಿ ಎದ್ದೇಳುವವನು ಎಂದರ್ಥಮಾಡಬೇಕು. ಧ್ಯಾನ ಕಾರ್ಯಕ್ಕೆ ಬ್ರಾಹ್ಮಮುಹೂರ್ತವು ಪ್ರಶಸ್ತವಾದುದು. ಬೆಳಗಿನಜಾವ ಮೂರು ಘಂಟೆಗೆ ಬ್ರಾಹ್ಮಮುಹೂರ್ತವು ಬರುವುದು. ಆ ಸಮಯವು ಧ್ಯಾನಕಾರ್ಯಕ್ಕೆ ಪ್ರಶಸ್ತವಾದ ಕಾಲ. ಕದಡಿಹೋದ ಸರೋವರವೂ ಸಹ ಆ ಸಮಯದಲ್ಲಿ ತಿಳಿಯಾಗುತ್ತದೆ. ಅಂತೆಯೇ ಸಾಧಕನ ಮನಸ್ಸು ಆ ಸಮಯದಲ್ಲಿ ಬಹಳ ತಿಳಿಯಾಗಿರುವುದರಿಂದ ಧ್ಯಾನಕ್ಕೆ ಆ ಕಾಲವು ಪ್ರಶಸ್ತವೆನ್ನುತ್ತಾರೆ. ಆರೋಗ್ಯಶಾಸ್ತ್ರದ ಪ್ರಕಾರ ಯುವಕನಿಗೆ ಐದು ಅಥವಾ ಆರು ಘಂಟೆಗಳ ನಿದ್ದೆ ಸಾಕೆಂದು ವೈದ್ಯರು ಹೇಳುತ್ತಾರೆ. ರಾತ್ರಿ ಹತ್ತು ಘಂಟೆಗೆ ಮಲಗಿ ಬೆಳಗಿನ ಜಾವ ಮೂರು ಘಂಟೆಗೆ ಏಳುವವನು ಯುಕ್ತಸ್ವಪ್ನಾವಬೋಧನಾಗುತ್ತಾನೆ. ಇಂತಹವನಿಗೆ ಯೋಗವು (ಧ್ಯಾನಯೋಗವು) ದುಃಖನಾಶಕವಾಗುವುದು. ಚಿನ್ಮಯಾನಂದರೂಪಿಯಾದ ಪರಮಾತ್ಮನನ್ನು ಹೃತ್ಕಮಲದಲ್ಲಿ ನೋಡುವಂತಾಗಿ ದುಃಖಮಯವಾದ ಸಂಸಾರವು ಕಳಚಿಬೀಳುವುದು.

**ಯುಕ್ತಾಹಾರವಿಹಾರಸ್ಯ** = **ಸೋಪಾಯ ಆಹಾರಾದೇಃ** ಉಪಾಯಕ್ಕೆ ವಿರೋಧವಿಲ್ಲದಂತೆ ಆಹಾರಾದಿಗಳನ್ನು ಸೇವಿಸುವ. (ಎಷ್ಟು ಆಹಾರವನ್ನು ತೆಗೆದುಕೊಂಡರೆ ಆಲಸ್ಯ-ಶ್ರಮಾದಿಗಳು ಉಂಟಾಗುವುದಿಲ್ಲವೋ ಅಷ್ಟು ಆಹಾರವನ್ನು ಸೇವಿಸುವ.) ಯೋಗ ಎಂದರೆ, ಉಪಾಯ ; ಸಮಾಧಿ. ಯುಜ್‌ಧಾತುವಿಗೆ ಸಮಾಧಿ ಎಂದು ಅರ್ಥ.) (ಮ.ಭಾ.)

**ಓಂ ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।**
**ನಿಃಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥೧೮॥**

ಯಾವಾಗ ನಿಯತವಾದ ಚಿತ್ತವು ಆತ್ಮನಲ್ಲಿಯೇ ಪ್ರತಿಷ್ಠಿತವಾಗುವುದೋ, ಯಾವಾಗ ಸಾಧಕನು ಸರ್ವಕಾಮಗಳಲ್ಲಿಯೂ ಸ್ಪೃಹೆಯಿಲ್ಲದವನಾಗುವನೋ–ಆಗ ಸಾಧಕನು ಯುಕ್ತನೆನಿಸುವನು.

* * *

(ಈ ಶ್ಲೋಕದಲ್ಲಿ ಶ್ರೀಕೃಷ್ಣನು ಯುಕ್ತ ಎಂಬುದಕ್ಕೆ ನಿರುಕ್ತಾರ್ಥವನ್ನು ಹೇಳುತ್ತಾನೆ :

ವಿನಿಯತಂ –ಎಂದರೆ ವಿಶೇಷವಾಗಿ ನಿಯತವಾದುದು ; ಅಭ್ಯಾಸಬಲದಿಂದ ವಿಷಯಗಳ ಸಂಪರ್ಕವನ್ನು ಸಂಪೂರ್ಣವಾಗಿ ಬಿಟ್ಟಿದ್ದು. ಇಂತಹ ಮನಸ್ಸು ಯಾವಾಗ ಆತ್ಮದಲ್ಲಿಯೇ ಸ್ಥಿರವಾಗಿರುತ್ತದೆಯೋ, ಧ್ಯಾನಕ್ಕೆ ಕುಳಿತೊಡನೆಯೇ ಲಗಾಮಿಲ್ಲದ ಕುದುರೆಯಂತೆ ಅತ್ತಲಿತ್ತ ಚಲಿಸುವುದಿಲ್ಲವೋ ಅಂತಹ ಮನಸ್ಸುಳ್ಳ ಯೋಗಿಯು ಯುಕ್ತನೆನಿಸಿಕೊಳ್ಳುತ್ತಾನೆ.

ಸರ್ವಕಾಮನೆಗಳಲ್ಲಿಯೂ ನಿಃಸ್ಪೃಹನಾದವನು ; ಇಂದ್ರಿಯಾರ್ಥಗಳಿಂದ ದೂರವಾದ ಚಿತ್ತವುಳ್ಳವನು–ಎಂದು ಶ್ರೀಕೃಷ್ಣನು ಹೇಳಿದ್ದಾನೆ.

ಸರ್ವಕಾಮನೆಗಳು ಎಂದರೆ : ಇಹಲೋಕ ಮತ್ತು ಪರಲೋಕಗಳ ಕಾಮನೆಗಳು. ಯಾವ ವಿಧವಾದ ಕಾಮನೆಗಳೂ ಇಲ್ಲದವನು. ಕೇವಲ ಆತ್ಮಕಾಮನು ; ಆತ್ಮನಲ್ಲಿಯೇ ಯಾವಾಗಲೂ ಮನಸ್ಸಿಟ್ಟಿರುವವನು. ಸರ್ವದಾ ಆತ್ಮಾನಂದವನ್ನೇ ಅನುಭವಿಸುತ್ತಿರುವವನು ; ಆತ್ಮರತಿಯು ಯುಕ್ತನೆಂದು ಕರೆಯಲ್ಪಡುತ್ತಾನೆ. ಯುಕ್ತ ಎಂದರೆ (ಯುಜಿರ್ಯೋಗೇ) ಆತ್ಮನೊಡನೆ ಯೋಗವನ್ನು, ಮನಸ್ಸಿನ ಮೂಲಕ ಸಂಬಂಧವನ್ನು ಇಟ್ಟುಕೊಂಡಿರುವವನು–ಎಂದೇ ಯುಕ್ತಪದದ ಅರ್ಥವೂ ಆಗುತ್ತದೆ.

ವಿನಿಯತಂ = ವಿಶೇಷವಾಗಿ ನಿಯತವಾದ, ನಿರತಿಶಯಪ್ರಯೋಜನವಾದ್ದರಿಂದ ನಿಶ್ಚಲವಾಗಿರುವ (ರಾ.ಭಾ.)

ಈ ಶ್ಲೋಕದಲ್ಲಿ ಆತ್ಮನಿ ಎಂಬುದಕ್ಕೆ ಭಗವಂತನಲ್ಲಿ ಎಂದು ಅರ್ಥ. ಇಲ್ಲದಿದ್ದರೆ ಜ್ಞಾತ್ವಾ ಮಾಂ ಶಾನ್ತಿಮೃಚ್ಛತಿ ಮುಂತಾದ ವಾಕ್ಯಗಳಿಗೆ ವಿರೋಧವಾಗುವುದು.) (ಮ.ಭಾ.)

**ಓಂ ಯಥಾ ದೀಪೋ ನಿವಾತಸ್ಥೋ ನೇಙ್ಗತೇ ಸೋಪಮಾ ಸ್ಮೃತಾ ।**
**ಯೋಗಿನೋ ಯತಚಿತ್ತಸ್ಯ ಯುಞ್ಜತೋ ಯೋಗಮಾತ್ಮನಃ ॥**

ಗಾಳಿಯಿಲ್ಲದ ಸ್ಥಳದಲ್ಲಿ ಇರುವ ದೀಪವು ಹೇಗೆ ಅಳ್ಳಾಡುವುದಿಲ್ಲವೋ ಹಾಗೆಯೇ ಆತ್ಮನ ಯೋಗವನ್ನು ಮಾಡುತ್ತಿರುವ ಯೋಗಿಯ ನಿಗ್ರಹಿಸಿದ ಮನಸ್ಸಿಗೆ ಅದೊಂದು ಉಪಮಾನವೆನಿಸುವುದು.

* * *

(ಇಲ್ಲಿ ಶ್ರೀಕೃಷ್ಣನು ಕೊಟ್ಟಿರುವ ಉಪಮೆಯು ಬಹಳ ಸೊಗಸಾಗಿದೆ. ಜ್ಞಾನಿಯ ಮನಸ್ಸನ್ನು ದೀಪಕ್ಕೆ ಹೋಲಿಸಲಾಗಿದೆ. ದೀಪವೆಂದರೆ ತುಪ್ಪದ ಅಥವಾ ಎಣ್ಣೆಯ ದೀಪ. ಸೊಡರಿನಲ್ಲಿ ಹೊತ್ತಿಸಿಟ್ಟಿರುವುದು. ದೀಪವು ಎಷ್ಟು ಚಂಚಲವೋ ಮನಸ್ಸೂ ಅಷ್ಟೇ ಚಂಚಲ. ದೀಪದ ಶಿಖೆಯು ಒಂದೇ ರೀತಿಯಲ್ಲಿ ನಿಂತೇ ಉರಿಯುವುದನ್ನು ನೋಡುವುದು ಕಷ್ಟ. ಸ್ವಲ್ಪವೇ ಗಾಳಿ ಆಡಿದರೂ ಸಹ ಅದು ಅಲುಗಾಡುತ್ತದೆ. ಹಾಗೆಯೇ ಮನಸ್ಸೂ ಸಹ ಅತ್ಯಲ್ಪಕಾರಣದಿಂದ ಚಲಿಸುತ್ತದೆ. ಎಂದರೆ ಎಲ್ಲಿಗೋ ಹೋಗಿಬಿಡುತ್ತದೆ. ಹಿಡಿತಕ್ಕೆ ಸಿಕ್ಕುವುದಿಲ್ಲ. ಧ್ಯಾನಕಾರ್ಯಕ್ಕೆಂದು ಕುಳಿತರೆ ಮನಸ್ಸು ಅಂಗಡಿಯಲ್ಲಿ ವ್ಯಾಪಾರಮಾಡುತ್ತಿರುತ್ತದೆ. ಅದು ಅಷ್ಟು ಚಂಚಲವಾದುದು. ದೀಪಕ್ಕೆ ನಿವಾತಸ್ಥಃ ಗಾಳಿಯಿಲ್ಲದ ಜಾಗದಲ್ಲಿ ಹಚ್ಚಿದ ದೀಪ ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಕಾಮನಾರೂಪವಾದ ಗಾಳಿಯಿಲ್ಲದಿದ್ದರೆ ಮನಸ್ಸೆಂಬ ದೀಪವು ಚಲಿಸುವುದಿಲ್ಲ. ಸ್ವಲ್ಪವೇ ಕಾಮವಾಸನೆಯಿದ್ದರೂ ಮನಸ್ಸು ಚಲಿಸುತ್ತದೆ.

ಈ ಕಾರಣದಿಂದಲೇ ನಿವಾತಸ್ಥವಾದ ದೀಪವು **ಯೋಗಿನಃ ಯತ ಚಿತ್ತಸ್ಯ ಉಪಮಾ** ಯೋಗಿಯ ಸಂಪೂರ್ಣವಾಗಿ ತಡೆಹಿಡಿಯಲ್ಪಟ್ಟ ಮನಸ್ಸಿಗೆ ಉಪಮೆ–ಎಂದು ಶ್ರೀಕೃಷ್ಣನು ಹೇಳಿದ್ದಾನೆ. ಯೋಗಿಯು ಎಂತಹವನೆಂದರೆ ಪರಮಾತ್ಮನೊಡನೆ ಯೋಗವನ್ನು ಹೊಂದಿರುವವನು. ಜೀವಾತ್ಮಾ-ಪರಮಾತ್ಮರ ಸಂಯೋಗವೇ ಯೋಗ. **ಸಂಯೋಗೋ ಯೋಗ ಇತ್ಯುಕ್ತಃ ಜೀವಾತ್ಮಪರಮಾತ್ಮನೋಃ** = ತಡೆಹಿಡಿಯಲ್ಪಟ್ಟ ಯೋಗಿಯ ಅಂತಹ ಮನಸ್ಸು ಗಾಳಿಯಿಲ್ಲದ ಸ್ಥಳದಲ್ಲಿರುವ ಅಲುಗಾಡದ ದೀಪದಂತಿದೆ. ಆತ್ಮ ನೊಡನೆ ಲೀನವಾಗಿಹೋದ ಮನಸ್ಸು ದೀಪದಂತೆಯೇ ಪ್ರಕಾಶಮಾನವೂ ಆಗಿರುತ್ತದೆ.

ಈ ಶ್ಲೋಕಕ್ಕೆ ಇನ್ನೊಂದು ವಿಧವಾಗಿಯೂ ಅರ್ಥಮಾಡಬಹುದು.

ಧ್ಯಾನಯೋಗವನ್ನು ಅನುಷ್ಠಾನಮಾಡುತ್ತಿರುವ, ತಡೆಹಿಡಿಯಲ್ಪಟ್ಟ ಮನಸ್ಸುಳ್ಳ ಯೋಗಿಯ ಆತ್ಮನಿಗೆ–ಗಾಳಿಯಿಲ್ಲದಿರುವ ಸ್ಥಳದಲ್ಲಿರುವ ದೀಪವು ಹೇಗೆ ಅಲುಗಾಡುವುದಿಲ್ಲವೋ–ಹಾಗೆ ಅಲುಗಾಡದೇ ಪ್ರಕಾಶಮಾನವಾಗಿ ರುವುದೆಂಬ ಉಪಮೆಯನ್ನು ಯೋಗಜ್ಞರಾದವರು ಕೊಡುತ್ತಾರೆ. ಆತ್ಮವಸ್ತುವು ಅಲುಗಾಡದೇ ಇರುವ ಪ್ರಕಾಶಮಾನವಾದ ಜ್ಯೋತಿಯಂತಿದೆ ಎಂಬ ಅಭಿಪ್ರಾಯ.

ಶ್ರೀತಿಲಕರು ಹೀಗೆ ಅರ್ಥಮಾಡಿದ್ದಾರೆ : ಗಾಳಿಯಿಲ್ಲದ ಸ್ಥಳದಲ್ಲಿ ದೀಪವು ಇರುವಾಗ ಅದರ ಉರಿಯು ಹೊಯ್ದಾಡದೇ ಇರುವ ಉಪಮೆಯೇ ಚಿತ್ತವನ್ನು ಸಂಯಮಿಸಿ ತನ್ನ ಯೋಗವನ್ನು ನೆರವೇರಿಸುವ ಯೋಗಿಗೆ ಕೊಡಲ್ಪಟ್ಟಿದೆ.

ಇದೇ ತೆರದ ಉಪಮಾನವನ್ನು ಮಹಾಭಾರತದ ಶಾಂತಿಪರ್ವದಲ್ಲಿ ಕೊಟ್ಟಿರುತ್ತಾರೆ :

**ಸ್ನೇಹಪೂರ್ಣಂ ಯಥಾ ಪಾತ್ರೇ ಮನ ಆಧಾಯ ನಿಶ್ಚಲಮ್ ।**
**ಪುರುಷೋ ಯುಕ್ತ ಆರೋಹೇತ್ಸೋಪಾನಂ ಯುಕ್ತಮಾನಸಃ ॥**
**ಯುಕ್ತಸ್ತಥಾಯಮಾತ್ಮಾನಂ ಯೋಗಃ ಪಾರ್ಥಿವ ನಿಶ್ಚಲಮ್ ।**
**ಕರೋತ್ಯಮಲಮಾತ್ಮಾನಂ ಭಾಸ್ಕರೋಪಮದರ್ಶನಮ್ ॥**

ತಲೆಯ ಮೇಲಿರುವ ಎಣ್ಣೆ ತುಂಬಿದ ಪಾತ್ರೆಯ ಮೇಲೆ ಏಕಾಗ್ರವಾದ ಮನಸ್ಸನ್ನಿಟ್ಟು ಯಾವ ರೀತಿಯಲ್ಲಿ ಮನುಷ್ಯನು ಎಣ್ಣೆಯು ಚೆಲ್ಲಿ ಹೋಗದಂತೆ ಮೆಟ್ಟಲುಗಳನ್ನು ಹತ್ತಿಹೋಗುತ್ತಾನೆಯೋ–ಅದೇ ರೀತಿಯಲ್ಲಿ ಯೋಗಿಯೂ ಸಹ ಯಾವಾಗ ಯೋಗಯುಕ್ತನಾಗಿ ಏಕಾಗ್ರಚಿತ್ತನಾಗಿ ಆತ್ಮನನ್ನು ಪರಮಾತ್ಮನಲ್ಲಿ ಸ್ಥಿರಗೊಳಿಸುತ್ತಾನೆಯೋ–ಆಗ ಅವನ ಆತ್ಮನು ಅಮಲನೂ, ಅಚಲನೂ, ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳವನೂ ಆಗುತ್ತಾನೆ. (ಇಲ್ಲಿ ಉಪಮಾನವನ್ನು ಯೋಗಿಗೆ ಕೊಟ್ಟಿರುತ್ತಾನೆ.)

**ಯೋಗಂ** = ಸಮಾಧಿಯನ್ನು (ಶಂ.ಭಾ.)

ನಿರ್ವಾತಪ್ರದೇಶದಲ್ಲಿರುವುದರಿಂದ ನಿಶ್ಚಲವಾಗಿ ಪ್ರಭೆಯಿಂದ ಕೂಡಿ ರುವ ದೀಪದಂತೆ ಉಳಿದ ಎಲ್ಲ ಮನೋವೃತ್ತಿಗಳೂ ಹೊರಟುಹೋಗಿರು ವುದರಿಂದ ಯೋಗಿಯ ಆತ್ಮನು ನಿಶ್ಚಲನೂ ಜ್ಞಾನಪ್ರಭನೂ ಆಗಿರುತ್ತಾನೆ.

(ರಾ.ಭಾ.)

ಓಂ ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।
ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥೨೦॥

ಓಂ ಸುಖಮಾತ್ಯನ್ತಿಕಂ ಯತ್ತದ್ಬುದ್ಧಿಗ್ರಾಹ್ಯಮತೀನ್ದ್ರಿಯಮ್ ।
ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥೨೧॥

ಓಂ ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।
ಯಸ್ಮಿನ್ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥೨೨॥
ಓಂ ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ।
ನ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ ॥೨೩॥

ನಿರುದ್ಧವಾದ ಚಿತ್ತವು ಯಾವಾಗ ಧ್ಯಾನಯೋಗದಿಂದ ಪರಮಶಾಂತಿ ಯನ್ನು ಹೊಂದುವುದೋ–ಯಾವಾಗ ಯೋಗಿಯು ಆತ್ಮನಿಂದ ಆತ್ಮನನ್ನು ಕಂಡುಕೊಂಡು ತನ್ನಲ್ಲಿಯೇ ಸಂತುಷ್ಟನಾಗುವನೋ ಕೇವಲ ಬುದ್ಧಿಗ್ರಾಹ್ಯ ವಾದ, ಇಂದ್ರಿಯಾತೀತವಾದ ಕಟ್ಟಕಡೆಯ ಸುಖವೆಂಬುದು ಯಾವು ದುಂಟೋ–ಅಂತಹ ಮೋಕ್ಷಸುಖವನ್ನು ಯಾವಾಗ ಯೋಗಿಯು ಅರಿತು ಕೊಳ್ಳುವನೋ–ಯಾವಾಗ ಅವನು ಆತ್ಮತತ್ತ್ವದಲ್ಲಿ ನಿಂತು ಅಲ್ಲಿಂದ ವಿಚಲಿತ ನಾಗದೇ ಇರುವನೋ–ಯಾವ ಆತ್ಮಲಾಭವನ್ನು ಹೊಂದಿದ ಬಳಿಕ ಮಿಕ್ಕ ಲಾಭವನ್ನು ಅದಕ್ಕಿಂತ ಹೆಚ್ಚಿನದು ಎಂದು ಎಣಿಸುವುದಿಲ್ಲವೋ–ಯಾವುದ ರಲ್ಲಿ (ಯಾವ ಆತ್ಮತತ್ತ್ವದಲ್ಲಿ ) ನಿಂತನಂತರ ಮಹಾದುಃಖವು ಒದಗಿದರೂ ಸಹ ವಿಚಲಿತನಾಗುವುದಿಲ್ಲವೋ–ಅಂತಹ ಒಂದು ಸ್ಥಿತಿಗೆ ; ದುಃಖಸಂಯೋಗದ ಅಗಲಿಕೆಯುಳ್ಳ ಸ್ಥಿತಿಗೆ ಯೋಗವೆಂದು ಹೆಸರು–ಎಂದು ತಿಳಿಯಬೇಕು. ನಿರ್ವೇದವಿಲ್ಲದ ಚಿತ್ತದಿಂದ ಯೋಗವು ನಿಶ್ಚಯವಾಗಿಯೂ ಸಾಧಿಸಲ್ಪಡ ಬೇಕು.

* * *

(ಈ ನಾಲ್ಕು ಶ್ಲೋಕಗಳಲ್ಲಿ ಭಗವಂತನು ಯೋಗಸ್ಥಿತಿಯ ಮಹಿಮೆ ಯನ್ನು ವರ್ಣಿಸುತ್ತಾನೆ.

ಯೋಗದ ಸೇವನೆಯಿಂದ : ಸತತವಾದ ಧ್ಯಾನಕಾರ್ಯದಿಂದ ಚಿತ್ತವು ನಿರುದ್ಧವಾಗಿ ತನ್ನ ವ್ಯಾಪಾರವನ್ನು ನಿಲ್ಲಿಸುತ್ತದೆ. ಚಿತ್ತನಿರೋಧವು ಒಂದೆರಡು ದಿವಸಗಳಲ್ಲಿ ಆಗುವ ಕೆಲಸವಲ್ಲ. ಸತತವಾಗಿ ಮಾಡುತ್ತಿರ

ಬೇಕು. ಮೊದಲು-ಮೊದಲು ತರಂಗ-ತರಂಗವಾಗಿ ಮನಸ್ಸಿನಲ್ಲಿ ಅಲೆ ಗಳೆದ್ದು–ಸಮುದ್ರವು ಅಲೆಗಳ ಮೂಲಕ ತನ್ನಲ್ಲಿರುವುದನ್ನು ದಡಕ್ಕೆ ಎಸೆಯುವಂತೆ–ಪ್ರಾಪಂಚಿಕವಾದ ವಿಷಯಗಳ ಕಡೆಗೆ ಒಯ್ದುಬಿಡುವುದು. ಆನೆಯನ್ನು ಪಳಗಿಸುವಂತೆ ಮನಸ್ಸನ್ನು ಸಾಧಕನು ಸ್ವಲ್ಪ-ಸ್ವಲ್ಪವಾಗಿ ಪಳಗಿಸಬೇಕು. ಅದು ಹೊರಗೆ ಹೋದಂತೆಲ್ಲಾ ಅದನ್ನು ಸೆಳೆದುತಂದು ದಯಾಮಯನ ಪಾದಾರವಿಂದಗಳಲ್ಲಿ ಕೆಡುಹಬೇಕು. ಹೀಗೆ ಮಾಡುವ ಅನವರತವಾದ ಧ್ಯಾನಕಾರ್ಯದಿಂದ ಮನಸ್ಸು ಸಂಪೂರ್ಣವಾಗಿ ಹತೋಟಿಗೆ ಸಿಕ್ಕಿ ಪರಮಾತ್ಮನಲ್ಲಿಯೇ ಸೇರಿಹೋಗಿ ಶಾಂತವಾಗುವುದು.

**ಆತ್ಮನಾ ಆತ್ಮಾನಂ ಪಶ್ಯನ್ ಆತ್ಮನಿ ತುಷ್ಯತಿ**

ಮನಸ್ಸು ಪ್ರಶಾಂತವಾದನಂತರ, ಮನಸ್ಸು ತಿಳಿಯಾದನಂತರ ಅದೇ ಮನಸ್ಸಿನಿಂದ ಆತ್ಮನನ್ನು ನೋಡುತ್ತಾನೆ. ಮನಸ್ಸು ಮೊದಲು ಕನ್ನಡಿಯಂತೆ ಇರುತ್ತದೆ. ಮುಂದಿರುವ ವಸ್ತುಗಳು ಕನ್ನಡಿಯಲ್ಲಿ ಕಾಣಿಸಿಕೊಳ್ಳುವಂತೆ ಕೇವಲ ಪ್ರಪಂಚದ ವಸ್ತುಗಳು ಮಾತ್ರವೇ ಮನಸ್ಸಿಗೆ ಗೋಚರವಾಗುತ್ತಿರುತ್ತವೆ. ಕನ್ನಡಿಯ ಹಿಂದಿರುವ ಪಾದರಸವನ್ನು ಉಜ್ಜಿಬಿಟ್ಟರೆ ಅದು ಗಾಜಾಗಿ ಅದರ ಹಿಂದಿರುವುದೂ ಕಾಣುತ್ತದೆ. ಅದೇ ರೀತಿಯಲ್ಲಿ ಮನಸ್ಸಿನಲ್ಲಿರುವ ಕೊಳೆಯೆಲ್ಲವೂ ಹೋಗಿಬಿಟ್ಟರೆ ಅದು ಪಾರದರ್ಶಕವಾಗಿ ಹಿಂದಿರುವ ಆತ್ಮನನ್ನು ಸ್ಪಷ್ಟವಾಗಿ ಕಂಡುಕೊಳ್ಳುತ್ತದೆ. ಕೊಳದಲ್ಲಿರುವ ನೀರು ಅಲೆಗಳಿಂದ ಕೂಡಿದ್ದರೆ ಅದರ ತಳಭಾಗವು ಕಾಣುವುದಿಲ್ಲ. ಪ್ರಶಾಂತವಾಗಿದ್ದರೆ ಅದರ ತಳಭಾಗವು ಸ್ಪಷ್ಟವಾಗಿ ಕಾಣುತ್ತದೆ. ಅದರಂತೆಯೇ ಸತತವಾದ ಅಭ್ಯಾಸದಿಂದ ಪ್ರಪಂಚದ ವಿಷಯಗಳಿಂದ ತಡೆಯಲ್ಪಟ್ಟ ಮನಸ್ಸು ಪ್ರಶಾಂತ ವಾಗಿ ಆತ್ಮನನ್ನು ಕಂಡುಕೊಳ್ಳುತ್ತದೆ. ತನ್ನಲ್ಲಿಯೇ ತಾನು ಸಂತೋಷ ಸಂತೃಪ್ತಿ ಯನ್ನು ಹೊಂದುತ್ತದೆ. ವಿಷಯಾನಂದವನ್ನು ಬಿಟ್ಟು ಸ್ವಸ್ವರೂಪದಲ್ಲಿಯೇ ಸಂತೋಷಸಂತೃಪ್ತಿಯನ್ನು ಅನುಭವಿಸುತ್ತದೆ.

ಈ ಆತ್ಮದರ್ಶನಸುಖವು ಬುದ್ಧಿಗೆ ಮಾತ್ರವೇ ತಿಳಿಯತಕ್ಕದ್ದಾಗಿದೆ. ಇಂದ್ರಿಯಗಳಿಗೆ ಇದು ತಿಳಿಯುವುದಿಲ್ಲ. ಈ ಸುಖವನ್ನು ಮಾತುಗಳಲ್ಲಿ ಬಣ್ಣಿಸುವ ಸಾಧ್ಯತೆಯಿಲ್ಲ. ಇದನ್ನು ನಾರದಭಕ್ತಿಸೂತ್ರದಲ್ಲಿ–ಮೂಕ ನೊಬ್ಬನು ರುಚಿಕರವಾದ ತಿಂಡಿಯನ್ನು ತಿಂದಂತೆ–ಎಂದು ಬಣ್ಣಿಸಿದ್ದಾರೆ.

**ಮೂಕಾಸ್ವಾದನವತ್** (ನಾ.ಭ.ಸೂ.೫೨) ಮೂಕನು ತಿಂಡಿಯ ರುಚಿಯನ್ನು ಸವಿಯುತ್ತಾನೆ. ಆದರೆ ಬಣ್ಣಿಸಲಾರ. ಅದೇ ರೀತಿಯಲ್ಲಿ ಬುದ್ಧಿಯು ಆತ್ಮದರ್ಶನಮಾಡಿ ಪರಮಸುಖವನ್ನು ಅನುಭವಿಸುತ್ತದೆ. ಈ ಆತ್ಮಸುಖ ವಾದರೋ ಕ್ಷಣಿಕವಾದುದಲ್ಲ. ಪ್ರಾಪಂಚಿಕಸುಖದಂತೆ ತೋರಿ ಹಾರುವು ದಲ್ಲ. ಆತ್ಯಂತಿಕವಾದುದು ; ಶಾಶ್ವತವಾದುದು ; ಅನಂತವಾದುದು.

ಶ್ರೀವಿದ್ಯಾರಣ್ಯರು ಪಂಚದಶಿಯಲ್ಲಿ ಹೇಳಿರುವಂತೆ **ನ ಶಕ್ಯತೇ ವರ್ಣಯಿತುಂ ಗಿರಾ ತದಾ ಸ್ವಯಂ ತದನ್ತಃಕರಣೇನ ಗೃಹ್ಯತೇ |** ಆಗ ಆ ಸುಖವನ್ನು ಮಾತುಗಳಿಂದ ಬಣ್ಣಿಸಲಾಗುವುದಿಲ್ಲ. ಅಂತಃಕರಣದಿಂದ ತನಗೆ ತಾನೇ ಅನುಭವಿಸಬೇಕು.

ಇದನ್ನು ಮನಗಂಡನಂತರ ಯೋಗದಲ್ಲಿರತಕ್ಕವನು ತತ್ತ್ವದಿಂದ (ಆತ್ಮ ತತ್ತ್ವದಿಂದ) ಚಲಿಸುವುದಿಲ್ಲ. ಅಮೃತದ ಸವಿಯನ್ನು ತಿಳಿದನಂತರ ಮದ್ಯ ಪಾನಮಾಡಲು ಯಾವ ಮೂರ್ಖನೂ ಹೋಗುವುದಿಲ್ಲ. ಪರಮಾನಂದ ದಾಯಕವಾದ ಶಾಶ್ವತವಾದ ಆತ್ಮಸುಖವನ್ನು ಕಂಡುಕೊಂಡನಂತರ ಯಾವುದೇ ಕಾರಣದಿಂದಲೂ ಜೀವನು ಅದರಿಂದ ವಿಮುಖನಾಗುವುದಿಲ್ಲ. ಧ್ಯಾನಯೋಗಿಯು ಆತ್ಮಲಾಭವನ್ನು ಪಡೆದುಕೊಂಡನಂತರ ಅವನಿಗೆ ಅದ ಕ್ಕಿಂತಲೂ ಹೆಚ್ಚಿನ ಲಾಭವು ಭೂಲೋಕದಲ್ಲಾಗಲೀ, ಸ್ವರ್ಗಲೋಕದಲ್ಲಾಗಲೀ ಸಿಗುವುದು ಎನಿಸುವುದಿಲ್ಲ. ಆತ್ಮದರ್ಶನಲಾಭದ ಮುಂದೆ ಸ್ವರ್ಗಸುಖ ಲಾಭವೂ ಸಹ ನಿಹೀನವಾಗಿ ಕಾಣುತ್ತದೆ.

ಒಂದು ನದೀತೀರದಲ್ಲಿ ಒಬ್ಬ ಧ್ಯಾನಯೋಗಿಯು ಧ್ಯಾನಕಾರ್ಯವನ್ನು ಮಾಡುತ್ತಾ ಆನಂದತುಂದಿಲನಾಗಿದ್ದನು. ಅವನ ಸಮೀಪಕ್ಕೆ ಒಬ್ಬ ಭಿಕ್ಷುಕನು ಬಂದು ಏನಾದರೂ ಕೊಡಬೇಕೆಂದು ಕೇಳಿದನು. ಯೋಗಿಯು ಸಮೀಪ ದಲ್ಲಿದ್ದ ಕಲ್ಲೊಂದನ್ನು ತೋರಿಸಿ–'ಅದರ ಕೆಳಗಡೆ ಇರುವುದನ್ನು ತೆಗೆದು ಕೊಂಡು ಹೋಗು'–ಎಂದನು. ಭಿಕ್ಷುಕನು ಕಲ್ಲನ್ನೆತ್ತಿ ನೋಡಲಾಗಿ ಅದರ ಕೆಳಭಾಗದಲ್ಲಿ ಬಹುಮೂಲ್ಯವಾದ ರತ್ನದ ಹಾರವಿದ್ದಿತು. ಅದನ್ನು ಕೈಗೆ ತೆಗೆದುಕೊಂಡ ಭಿಕ್ಷುಕನಿಗೆ ಅಚ್ಚರಿಯಾಯಿತು. ರತ್ನಹಾರವನ್ನು ಉದಾ ಸೀನವಾಗಿ ಕಾಣುತ್ತಿರುವ ಈ ಬೈರಾಗಿಯ ಬಳಿ ಅದಕ್ಕಿಂತಲೂ ಹೆಚ್ಚು ಬೆಲೆ

ಬಾಳುವ ಯಾವುದೋ ವಸ್ತುವಿರಬಹುದೆಂದು ಊಹಿಸಿ ರತ್ನಹಾರವನ್ನು ಅಲ್ಲಿಯೇ ಹಾಕಿ ಯೋಗಿಯ ಬಳಿಗೆ ಹೋಗಿ ಕೈಮುಗಿದು ಕೇಳಿಕೊಂಡನು : 'ರತ್ನಹಾರವನ್ನು ನೀನು ಇಷ್ಟು ತಿರಸ್ಕಾರದಿಂದ ಕಾಣಬೇಕಾದರೆ ನಿನ್ನಲ್ಲಿ ಅದಕ್ಕಿಂತಲೂ ಬಹುಮೂಲ್ಯವಾದ ಯಾವುದೋ ವಸ್ತುವು ಇರಲೇಬೇಕು. ಅದನ್ನೇ ನನಗೆ ಕೊಟ್ಟು ಉದ್ಧಾರಮಾಡು.'

ಯೋಗಿಯು ನಸುನಕ್ಕು ಅವನಿಗೆ ಧ್ಯಾನಯೋಗವನ್ನು ಉಪದೇಶಿಸಿದನು. ಆದುದರಿಂದ ಆತ್ಮಲಾಭಕ್ಕಿಂತಲೂ ಹೆಚ್ಚಿನ ಲಾಭವು ಬೇರೆ ಯಾವುದೂ ಇಲ್ಲ–ಎಂಬುದನ್ನು ಈ ಕಥೆಯು ವಿಶದಪಡಿಸುತ್ತದೆ.

ಧ್ಯಾನಯೋಗಿಯು ಧ್ಯಾನಯೋಗದಲ್ಲಿ ಸುಸ್ಥಿರನಾಗಿ ನಿಂತನಂತರ ಯಾವುದೇ ದುಃಸ್ಸಹವಾದ ದುಃಖವೊದಗಿದರೂ ಅದರಿಂದವನು ವಿಚಲಿತನಾಗುವುದಿಲ್ಲ. ದೇಹಿಗೆ ದೈಹಿಕವಾದ ತೊಂದರೆಯೇ ಆಗಬಹುದು. ಪ್ರಾರಬ್ಧ ಕರ್ಮಾನುಸಾರವಾಗಿ ಆರೋಗ್ಯವೇ ಕೆಡಬಹುದು. ಆದರೂ ಸಹ ಯೋಗಿಯು ತನ್ನ ಧ್ಯಾನಕಾರ್ಯದಿಂದ ಮಾತ್ರ ವಿಚಲಿತನಾಗುವುದಿಲ್ಲ. ಅವನು ಆತ್ಮಾನಾತ್ಮವಿವೇಕವನ್ನು ಪಡೆದುಕೊಂಡಿರುತ್ತಾನೆ. ಬರುವ ಖಾಯಿಲೆ-ಕಸಾಲೆಗಳು ಕೇವಲ ಕವಚದಂತಿರುವ ದೇಹಕ್ಕೆ ಮಾತ್ರ–ಎಂಬುದನ್ನವನು ಮನಗಂಡಿರುತ್ತಾನೆ. ಕೊಬ್ಬರಿಗೆ ಆವರಣವಾಗಿರುವ ಕಾಯಿ ಮೊಟ್ಟೆಗೆ ಏಟು ಬೀಳಬಹುದು. ಕೊಬ್ಬರಿಗೆ ಯಾವ ತೊಂದರೆಯೂ ಬರುವುದಿಲ್ಲ. ಅದರಂತೆ ಯೋಗಿಯಾದವನು ಆಧ್ಯಾತ್ಮಿಕ-ಆಧಿಭೌತಿಕ-ಆಧಿದೈವಿಕಗಳ ಮೂಲಕವಾಗಿ ಯಾವುದೇ ವಿಧವಾದ ದುಃಖವೊದಗಿದರೂ ಸಹ ತನ್ನ ನೆಲೆಯಿಂದ ಸ್ವಲ್ಪವೂ ವಿಚಲಿತನಾಗುವುದಿಲ್ಲ.

ಆತ್ಮವಸ್ತುವನ್ನು ನೋಡುವವರೆಗೂ ದುಃಖಸಂಯೋಗ ; ಅನಂತರ ದುಃಖಸಂಯೋಗದ ದೂರವಾಗುವಿಕೆ ; ವಿಯೋಗ. ಪರಿಶುದ್ಧವಾದ ಮನಸ್ಸು ಜ್ಯೋತಿಸ್ವರೂಪವಾದ ಆತ್ಮನನ್ನು ಕಂಡೊಡನೆಯೇ ಹಿರಿಹಿಗ್ಗುತ್ತದೆ. ವಿಷಯ ವಸ್ತುಗಳ ಉಪಭೋಗದಲ್ಲಿ ಮನಸ್ಸಿಗೆ ಒಮ್ಮೆ ಬೇಸರಿಕೆಯಾಗುತ್ತಿದ್ದಿತು. ಮತ್ತೊಮ್ಮೆ ಅದೇ ವಸ್ತುವಿನ ಮೇಲೆ ಅಭಿಲಾಷೆಯು ಮೂಡುತ್ತಿದ್ದಿತು. ಆದರೆ ಆತ್ಮವಸ್ತುವನ್ನು ಕಂಡುಕೊಂಡ ಮನಸ್ಸಿಗೆ ಬೇಸರವೆಂಬುದೇ ಇಲ್ಲ. ಅಲ್ಲಿಯೇ ಲೀನವಾಗಿದ್ದುಬಿಡಬೇಕೆಂದು ತವಕಿಸುತ್ತದೆ. ಅದಕ್ಕೆ ಹೊರಬರುವ

ಇಚ್ಛೆಯೇ ಇರುವುದಿಲ್ಲ. ಅಂತಹ ಒಂದು ಅನಿರ್ವಚನೀಯವಾದ ಆನಂದ ವನ್ನು ಆತ್ಮದರ್ಶನಮಾಡಿದ ಮನಸ್ಸು ಅನುಭವಿಸಿ ಸಂತೋಷಪಡುತ್ತದೆ.

ಇದಕ್ಕೆ ದುಃಖಸಂಯೋಗವಿಯೋಗಯೋಗವೆಂದು ಹೆಸರು. ಮೊದಲು ಸಾಧನೆಯನ್ನು ಪ್ರಾರಂಭಿಸುವುದೇ ದುಃಖಸಂಯೋಗ. ಈ ಕಾರ್ಯವು ಕಷ್ಟಸಾಧ್ಯವಾದುದು ಎಂದರ್ಥ. ಅನವರತವಾದ ಅಭ್ಯಾಸದಿಂದ ಪ್ರಾರಂಭ ದಲ್ಲಿದ್ದ ದುಃಖದ ವಿಯೋಗವಾಗುತ್ತದೆ. ಪರಮಶಾಂತಿ, ಪರಮಸುಖ ಸಿಕ್ಕು ತ್ತದೆ. ಈ ಕಾರಣದಿಂದ ಶ್ರೀಕೃಷ್ಣನು ಧ್ಯಾನಯೋಗವನ್ನು ದುಃಖಸಂಯೋಗ ವಿಯೋಗ–ಎಂದು ಕರೆದಿದ್ದಾನೆ. ಅದು ಯೋಗವಾಗಿದ್ದರೂ ವಿಯೋಗವೇ. ಇಲ್ಲಿ ಯೋಗಸ್ವರೂಪವನ್ನು ವರ್ಣನೆ ಮಾಡಿದೆ.

ಶ್ರೀಕೃಷ್ಣನು ಕಡೆಯದಾಗಿ ಒಂದು ಎಚ್ಚರಿಕೆಯನ್ನೂ ನೀಡುತ್ತಾನೆ.

**ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ ॥**

ಈ ಯೋಗವನ್ನು ಸಾಧಿಸಿಯೇ ಬಿಡುವೆನೆಂಬ ನಿಶ್ಚಯವೂ ಇರಬೇಕು. ಆತ್ಮಲಾಭವನ್ನು ಪಡೆಯಬೇಕಾದರೆ ಎಷ್ಟು ವರ್ಷಗಳವರೆಗೆ ಧ್ಯಾನಮಾಡ ಬೇಕಾಗುವುದೋ ಎಂಬ ಬೇಸರಿಕೆಯೂ ಇರಬಾರದು. ಗುರಿಮುಟ್ಟು ವವರೆಗೂ ಉತ್ಸಾಹಹೀನನಾಗದೆ ಸಾಧನೆಮಾಡುತ್ತಲೇ ಇರಬೇಕು.

ಮೊದಲು ಮೊದಲು ದುಃಖಸಂಯೋಗವೇ ಆಗುತ್ತದೆ. ಕಣ್ಣುಮುಚ್ಚಿ ಕುಳಿತರೂ ಮನಸ್ಸು ಎಲ್ಲಿಗೋ ಹೋಗಿ ಏನನ್ನೋ ಮಾಡುತ್ತಿರುತ್ತದೆ. ಗಂಟೆ- ಗಂಟೆಗಳು ಕುಳಿತರೂ ಧ್ಯಾನಮೂರ್ತಿಯೇ ಕಾಣುವುದಿಲ್ಲ. ಬೇಸರವೂ ಆಗುತ್ತದೆ. ಇಂತಹ ಧ್ಯಾನದಿಂದ ಪ್ರಯೋಜನವೇನು?–ಎಂಬ ಸಂದೇಹವೂ ಬರಬಹುದು. ಆದರೆ ಇದರಿಂದ ನಾವು ಅಧೀರರಾಗಕೂಡದು. '**ಯೋಗ ಸೇವಯಾ ನಿರುದ್ಧ ಚಿತ್ತಂ ಉಪರಮತೇ**–ಅನವರತವಾದ ಯೋಗಾಭ್ಯಾಸ ದಿಂದ ಮನಸ್ಸು ನಿರೋಧಿತವಾಗಿ ಶಾಂತಿಯನ್ನು ಹೊಂದುತ್ತದೆ' ಎಂದು ಭಗವಂತನೇ ಹೇಳಿದ್ದಾನೆ. ಅವರವರ ಪ್ರಕೃತಿಗೆ ಅನುಗುಣವಾಗಿ ಧ್ಯಾನ ಯೋಗದ ಸಾಧನೆಯಾಗುತ್ತದೆ. ಕೆಲವರಿಗೆ ಒಂದೇ ದಿವಸದಲ್ಲೇ ಆಗ ಬಹುದು. ಮತ್ತೆ ಕೆಲವರಿಗೆ ಹತ್ತಾರು ವರ್ಷಗಳು ಕಳೆದಮೇಲಾಗಬಹುದು. ಮತ್ತೆ ಕೆಲವರಿಗೆ ಈ ಜನ್ಮದಲ್ಲಿಯೇ ಆಗದೆಯೂ ಇರಬಹುದು. ಆದರೆ

ಅಭ್ಯಾಸಿಗೆ ಧ್ಯಾನಯೋಗದ ಕ್ರಿಯೆಯು ಹೃದಯದಲ್ಲಿ ಆಗದೇ ಇರುವುದಿಲ್ಲ. ದಿನ-ದಿನಕ್ಕೂ ಅದರಿಂದ ಉತ್ತಮಸಂಸ್ಕಾರವಾಗುತ್ತಲೇ ಇರುತ್ತದೆ. ಈ ಜನ್ಮದಲ್ಲಲ್ಲದಿದ್ದರೂ ಮುಂದಿನ ಜನ್ಮದಲ್ಲಾದರೂ ಧ್ಯಾನಯೋಗದ ಸಿದ್ಧಿಯಾಗುತ್ತದೆ. ಆದುದರಿಂದ ಸಾಧಕನು ಯಾವುದೇ ಕಾರಣದಿಂದಲೂ ಬೇಸರಪಡಬಾರದು. ಈ ಸಂದರ್ಭದಲ್ಲಿ ಒಂದು ಕಥೆಯನ್ನು ನೆನೆಯಬಹುದು.

ಒಂದು ಸಲ ತ್ರಿಲೋಕಸಂಚಾರಿಗಳಾದ ನಾರದರು ಒಂದು ಕಾಡಿನ ಮೂಲಕ ಹೋಗುತ್ತಿದ್ದರು. ಆ ಕಾಡಿನಲ್ಲಿದ್ದ ವೃಕ್ಷಗಳ ಕೆಳಗಡೆಯಲ್ಲಿ ಇಬ್ಬರು ಯೋಗಿಗಳು ಕುಳಿತಿದ್ದರು. ಅವರಲ್ಲೊಬ್ಬನು ಯೋಗಸಿದ್ಧಿಗಾಗಿ ಬಹಳವಾಗಿ ತಪಸ್ಸುಮಾಡುತ್ತಿದ್ದನು. ಮತ್ತೊಬ್ಬನ ಧ್ಯೇಯವೂ ಸಹ ಯೋಗಸಿದ್ಧಿಯೇ ಆಗಿದ್ದರೂ ಅಷ್ಟೊಂದು ಕಠೋರವಾಗಿ ತಪಸ್ಸುಮಾಡುತ್ತಿರಲಿಲ್ಲ. ಇಬ್ಬರೂ ಎದ್ದುಬಂದು ನಾರದರಿಗೆ ನಮಸ್ಕರಿಸಿ–'ಎತ್ತಕಡೆ ಹೋಗುತ್ತಿರುವಿರಿ?'–ಎಂದು ಪ್ರಶ್ನಿಸಿದರು. ನಾರದರು–'ವೈಕುಂಠಕ್ಕೆ ಹೋಗುತ್ತಿದ್ದೇನೆ'–ಎಂದು ಉತ್ತರಿಸಿದರು. ತಮ್ಮ ತಪಸ್ಸಿನ ಭವಿಷ್ಯವೇನೆಂಬುದನ್ನು ತಿಳಿದುಕೊಳ್ಳಬೇಕೆಂದು ಇಬ್ಬರಿಗೂ ಆಸೆಯಾಯಿತು. ಇಬ್ಬರೂ ನಾರದರಿಗೆ ಕೈಮುಗಿದು ಪ್ರಾರ್ಥಿಸಿದರು : 'ಮುನಿವರ್ಯರೇ! ನಮಗೆ ನಮ್ಮ ತಪಸ್ಸಿನ ಸಿದ್ಧಿಯು ಯಾವಾಗ ಆಗುವುದೆಂಬುದನ್ನು ದಯಮಾಡಿ ಮಹಾವಿಷ್ಣುವನ್ನು ಕೇಳಿ ತಿಳಿದುಬರುವಿರಾ?'

ನಾರದರು **'ತಥಾಸ್ತು'** ಎಂದರು. ಸ್ವಲ್ಪದಿನಗಳು ಕಳೆದನಂತರ ನಾರದರು ಅದೇ ಮಾರ್ಗವಾಗಿ ಬಂದು ಆ ತಪಸ್ವಿಗಳನ್ನು ಸಂಧಿಸಿದರು. ಕಠೋರತಪಸ್ವಿಯು ಮುಂದೆ ಬಂದು–'ನಾರದರೇ! ನಮಗೆ ಯಾವಾಗ ಸಿದ್ಧಿಯಾಗುವುದೆಂಬುದನ್ನು ಭಗವಂತನನ್ನು ಕೇಳಿ ತಿಳಿದುಕೊಂಡು ಬಂದಿರುವಿರಾ?'

"ತಿಳಿದುಕೊಂಡು ಬಂದಿದ್ದೇನೆ."

"ಹಾಗಾದರೆ ಯಾವಾಗ ಸಿದ್ಧಿಯಾಗುವುದು ನಾರದರೇ?"

"ಕೇವಲ ಏಳು ಜನ್ಮಗಳನ್ನು ಕಳೆದನಂತರ ನಿನಗೆ ಸಿದ್ಧಿಯಾಗುವುದೆಂದು ಭಗವಂತನು ಹೇಳಿದ್ದಾನೆ."

"ಏಳು ಜನ್ಮಗಳೇ? ಅಬ್ಬಾ! ಹೇಗೆ ತಾನೇ ಈ ತಪಸ್ಸನ್ನು ಅಲ್ಲಿಯ

ವರೆಗೂ ಮುಂದುವರಿಸಲಿ?"–ಎಂದು ಹೇಳುತ್ತಾ ಆ ಯೋಗಿಯು ನಿರ್ವಿಣ್ಣನಾದನು.

ಮತ್ತೊಬ್ಬ ಯೋಗಿಯು ಬಂದು ನಾರದರನ್ನು ಅದೇ ವಿಷಯವಾಗಿ ಕೇಳಿದನು.

"ನೀನು ಆಶ್ರಯಿಸಿರುವ ಈ ಮರದಲ್ಲಿ ಎಷ್ಟು ಎಲೆಗಳಿವೆಯೋ ಅಷ್ಟು ಜನ್ಮಗಳು ಕಳೆದನಂತರ ನಿನಗೆ ಸಿದ್ಧಿಯಾಗುವುದೆಂದು ಭಗವಂತನು ಹೇಳಿದ್ದಾನೆ"-ಎಂದು ನಾರದರು ಹೇಳುತ್ತಲೇ ಆ ಯೋಗಿಯು ಕುಣಿದು ಕುಪ್ಪಳಿಸಿಬಿಟ್ಟನು. ಅವನ ಆನಂದಕ್ಕೆ ಪಾರವೇ ಇಲ್ಲದೇ ಹೋಯಿತು. 'ತನಗೂ ಮುಕ್ತಿಯು ಸಿಕ್ಕಿಯೇ ಸಿಕ್ಕುತ್ತದೆ ಎಂಬುದು ನಿಶ್ಚಯವಾಯಿತಲ್ಲಾ'– ಎಂಬುದೇ ಅವನ ಆನಂದಕ್ಕೆ ಕಾರಣವಾಗಿತ್ತು. ಒಡನೆಯೇ ಪರಮಾತ್ಮನು ಅವನಿಗೆ ಮುಕ್ತಿಯನ್ನು ದಯಪಾಲಿಸಿದನು. ಆದುದರಿಂದ ಯೋಗಾಭ್ಯಾಸದಲ್ಲಿ ಬೇಸರವಿರಬಾರದು. ಬೇಸರಪಡದೇ–ಯೋಗಸಿದ್ಧಿಯು ; ಆತ್ಮದರ್ಶನವು ಆಗಿಯೇ ತೀರುವುದೆಂಬ ನಿಶ್ಚಯದಿಂದ ಧ್ಯಾನಯೋಗವನ್ನು ಮಾಡಬೇಕು–ಎಂಬುದು ಶ್ರೀಕೃಷ್ಣನ ಮಹಾಸಂದೇಶವಾಗಿದೆ.

**ಯಂ ಲಬ್ಧ್ವಾ.....ವಿಚಾಲ್ಯತೇ** = ಯಾವುದನ್ನು ಪಡೆದು 'ಅದಕ್ಕಿಂತಲೂ ಹೆಚ್ಚಿನ ಲಾಭವು ಯಾವುದೂ ಇಲ್ಲ'–ಎಂದು ತಿಳಿಯುತ್ತಾನೆಯೋ ಆ ಯೋಗಿಯು ಯೋಗದಿಂದ ಬಾಹ್ಯಸ್ಥಿತಿಗೆ ಬಂದ ಸಮಯದಲ್ಲಿಯೂ ಕೂಡ ಆ ಯೋಗದ ಆನಂದವನ್ನೇ ಶ್ರೇಷ್ಠತಮವೆಂದು ತಿಳಿಯುತ್ತಾನೆ. ಯೋಗದಶೆಯಲ್ಲಿ ಬೇರೆ ಲಾಭದ ಪ್ರತಿಸಂಧಾನದ ಪ್ರಶ್ನೆಯೇ ಇಲ್ಲ. ಸಮಾಧಿಯಿಂದ ಹೊರಗೆ ಬಂದಮೇಲೂ ಆ ಆನಂದವೇ ಹೊರಗಿನ ಎಲ್ಲ ಆನಂದಗಳಿಗಿಂತಲೂ ಶ್ರೇಷ್ಠವೆಂದು ಅವನು ತಿಳಿಯುತ್ತಾನೆ. ಗುಣವಂತನಾದ ಪುತ್ರನ ಜನ್ಮ–ಅಗಲಿಕೆಯೇ ಮುಂತಾದುವುಗಳಿಂದ ಉಂಟಾಗುವ ಸುಖ-ದುಃಖಗಳೂ ಕೂಡ ಅವನ ಮನಸ್ಸನ್ನು ಕದಲಿಸುವುದಿಲ್ಲ.

**ಪುತ್ರಜನ್ಮವಿಪತ್ತಿಭ್ಯಾಂ ನ ಪರಂ ಸುಖದುಃಖಯೋಃ**–ಆದರೆ ಅಂತಹ ದುಃಖವೂ ಇವನನ್ನು ಕದಲಿಸುವುದಿಲ್ಲ. (ಶ್ರೀವೇದಾಂತದೇಶಿಕರು.)

**ದುಃಖಸಂಯೋಗವಿಯೋಗ** ಎಂದರೆ ದುಃಖಸಂಯೋಗದ ಅಸಂಬಂಧ; ಅಭಾವ. ಅದು ಒಂದು ಭಾವಾಂತರ.

**ಅನಿರ್ವಿಣ್ಣಚೇತಸಾ** = ನಿರ್ವೇದವಿಲ್ಲದ ಮನಸ್ಸಿನಿಂದ.

ಯೋಗಿಗೆ ನಿರ್ವೇದವಿರಬೇಕಲ್ಲವೇ? ಎಂದರೆ ಸಂಸಾರವಿಷಯದಲ್ಲಿ ವಿರಕ್ತಿ ಎಂಬ ನಿರ್ವೇದವಿರಬೇಕು. ಆದರೆ ಈ ಶ್ಲೋಕದಲ್ಲಿ ಹೇಳಿರುವ ಅನಿರ್ವೇದವು ಬೇರೆ. ಅದು ಸಮಾಧಾನರೂಪವಾದುದು. ಆನಂದರೂಪ ವಾದುದು. ಅದು ಯೋಗಿಗೆ ಇರಲೇಬೇಕು.

**ಅನಿರ್ವೇದಂ ಮುನಿರ್ಗಚ್ಛನ್ ಕುರ್ಯಾದೇವಾತ್ಮನೋ ಹಿತಮ್.** ಎಂದು ಮನುವು ಹೇಳುವುದು ಇದನ್ನೇ. (ಶ್ರೀವೇದಾಂತದೇಶಿಕರು.)

**ಆತ್ಮನಾ** = ಮನಸ್ಸಿನಿಂದ. **ಆತ್ಮನಿ** = ದೇಹದಲ್ಲಿ. **ಆತ್ಮಾನಂ** = ಭಗವಂತನನ್ನು. **ಯತ್ರ...ತುಷ್ಯತಿ** = ದೇಹದಲ್ಲಿ ಮನಸ್ಸಿನಿಂದ ಭಗವಂತ ನನ್ನು ಕಂಡು ಆನಂದಿಸುತ್ತಾನೆ.

**ತತ್ತ್ವತಃ**= ಭಗವದ್ರೂಪದ ದೆಸೆಯಿಂದ.

**ದುಃಖಸಂಯೋಗವಿಯೋಗಂ**= ದುಃಖಸಂಯೋಗವು ಯಾವುದ ರಿಂದ ವಿಯೋಗವನ್ನು ಹೊಂದಿಸಲ್ಪಡುತ್ತದೆಯೋ ಆ ಸ್ಥಿತಿ. ಅದು ಯೋಗ. ಅದು ಉತ್ಪನ್ನವಾದ ದುಃಖವನ್ನೇ ನಾಶಪಡಿಸುವುದಿಲ್ಲ. ಉತ್ಪತ್ತಿಯನ್ನೇ ನಿವಾರಿಸಿಬಿಡುತ್ತದೆ-ಎಂಬ ಆಶಯವನ್ನು ಸಂಯೋಗಶಬ್ದವು ಸೂಚಿಸುತ್ತದೆ.)

(ಮ.ಭಾ.)

**ಓಂ ಸಂಕಲ್ಪಪ್ರಭವಾನ್ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ ।**
**ಮನಸೈವೇನ್ದ್ರಿಯಗ್ರಾಮಂ ವಿನಿಯಮ್ಯ ಸಮನ್ತತಃ ॥೨೪॥**

**ಓಂ ಶನೈಃ ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ ।**
**ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿನ್ತಯೇತ್ ॥೨೫॥**

ಸಂಕಲ್ಪದಿಂದ ಹುಟ್ಟುವ ಕಾಮಗಳನ್ನು ಒಂದೂ ಉಳಿಯದಂತೆ ಎಲ್ಲ ವನ್ನೂ ಬಿಟ್ಟು, ಮನಸ್ಸಿನಿಂದಲೇ ಇಂದ್ರಿಯಗ್ರಾಮವನ್ನು ಎಲ್ಲ ಕಡೆಗಳಿಂದಲೂ ಚೆನ್ನಾಗಿ ತಡೆದುಕೊಂಡು, ಧೈರ್ಯದಿಂದ ಕೂಡಿದ ಬುದ್ಧಿಯಿಂದ ಮೆಲ್ಲ-ಮೆಲ್ಲನೆ (ವಿಷಯಗಳಿಂದ) ಹಿಂದಿರುಗಬೇಕು. ಮನಸ್ಸನ್ನು ಆತ್ಮನಲ್ಲಿ ಪ್ರತಿಷ್ಠಾಪಿಸಿ ಆತ್ಮನನ್ನಲ್ಲದೇ ಮತ್ತೇನನ್ನೂ ಚಿಂತಿಸಲೂ ಹೋಗಬಾರದು.

* * *

(ಸಂಕಲ್ಪಪ್ರಭವಗಳೆಂದರೆ ಮನಸ್ಸಿನಲ್ಲಿ ಹುಟ್ಟತಕ್ಕುವುಗಳು. (**ಸಂಕಲ್ಪಃ ಕರ್ಮ ಮಾನಸಂ-ಅಮರ**) ಮನಸ್ಸಿನ ಕ್ರಿಯೆಗೆ ಸಂಕಲ್ಪ ಎಂದು ಹೆಸರು. ಎಲ್ಲ ವಿಧವಾದ ಕಾಮನೆಗಳಿಗೂ ಸಂಕಲ್ಪ ಅಥವಾ ಮಾನಸಿಕ ಕ್ರಿಯೆಯು ಬೇರಿನ ರೂಪದಲ್ಲಿರುತ್ತದೆ. ಆ ಬೇರಿನಿಂದ ಹುಟ್ಟುವ ಸಕಲಕಾಮನೆಗಳನ್ನೂ ನಿಃಶೇಷವಾಗಿ ಕಿತ್ತುಬಿಡಬೇಕು. ಬೇರು ಕಿಂಚಿತ್ ಉಳಿದುಕೊಂಡರೂ ಸಹ ಅದು ಗರಿಕೆಹುಲ್ಲಿನಂತೆ ಅಗಾಧವಾಗಿಬಿಡುವುದು.

**ತರಙ್ಗಾಯತಾ ಅಪೀಮೇ ಸಙ್ಗಾತ್ ಸಮುದ್ರಾಯನ್ತಿ**

(ನಾ.ಭ.ಸೂ ೪೫)

ಕಾಮ-ಕ್ರೋಧಾದಿಗಳು ಒಂದೊಂದೂ ಒಂದೊಂದು ಅಲೆಯಂತೆ ಇದ್ದರೂ ಒಂದಕ್ಕೊಂದು ಕಾರಣವಾಗಿ ದಾಟಲಶಕ್ಯವಾದ ಸಮುದ್ರವೇ ಆಗಿಬಿಡುತ್ತವೆ. ಆದುದರಿಂದ ಕಾಮನೆಗಳನ್ನು ನಿಃಶೇಷವಾಗಿ ಬಿಡಬೇಕೆಂದು ಶ್ರೀಕೃಷ್ಣನು ಹೇಳಿದ್ದಾನೆ. ಇದರಲ್ಲಿ ದುಷ್ಕಾಮನೆ ಅಥವಾ ಸತ್ಕಾಮನೆ ಎಂಬ ವ್ಯತ್ಯಾಸವೂ ಇಲ್ಲ. ಒಂದು ಕಬ್ಬಿಣದ ಸರಪಣಿಯಾದರೆ ಮತ್ತೊಂದು ಚಿನ್ನದ ಸರಪಣಿ. ಆತ್ಮಸಾಕ್ಷಾತ್ಕಾರದ ದೃಷ್ಟಿಯಿಂದ ಎರಡೂ ಬಂಧನಗಳೇ ಆಗುವುವು. ಆದುದರಿಂದ ಯೋಗಿಯಾದವನು ಆತ್ಮಕಾಮನೆಯೊಂದನ್ನುಳಿದು ಉಳಿದ ಕಾಮನೆಗಳನ್ನೆಲ್ಲವನ್ನೂ ಸಂಪೂರ್ಣವಾಗಿ ಪರಿತ್ಯಜಿಸಬೇಕು. ಬಲ್ಲವರು–ರೋಗಶೇಷ, ಶತ್ರುಶೇಷ ಮತ್ತು ಅಗ್ನಿಶೇಷ–ಇವುಗಳನ್ನು ಸಂಪೂರ್ಣವಾಗಿ ನಿರ್ನಾಮಮಾಡಬೇಕೆನ್ನುವರು. ರೋಗವು ಸ್ವಲ್ಪವೇ ಉಳಿದಿದ್ದರೂ ಕಾಲಾನುಗುಣವಾಗಿ ಉಲ್ಬಣಿಸುತ್ತದೆ. ಶತ್ರುವು ಒಬ್ಬನೇ ಉಳಿದಿದ್ದರೂ, ದುರ್ಬಲನಾಗಿದ್ದರೂ ಕಾಲಾನುಗುಣವಾಗಿ ವೃದ್ಧಿಹೊಂದಿ ಬಲಿಷ್ಠನಾಗಿ ಆಕ್ರಮಣಮಾಡುವ ಸಂಭವವುಂಟು. ಅಗ್ನಿಯ ಒಂದು ಕಿಡಿಯೇ ಉಳಿದಿದ್ದರೂ ಅದು ಸಾಧನಸಂಪರ್ಕದಿಂದ ಬೃಹತ್ತಾಗಿ ಪರಿಣಮಿಸುವುದು. ಈ ಕಾರಣದಿಂದ ಅವುಗಳ ಶೇಷವನ್ನು ಬಿಡಕೂಡದೆನ್ನುತ್ತಾರೆ. ಕಾಮಶೇಷವೂ ಹಾಗೆಯೇ. ಯಾವುದಾದರೂ ವಿಷಯದಲ್ಲಿ ಸ್ವಲ್ಪ ಕಾಮನೆಯಿದ್ದರೂ ಅದರಿಂದ ದೊಡ್ಡ ಸಂಸಾರವೇ ಹುಟ್ಟಿಕೊಳ್ಳುತ್ತದೆ. **ಕೌಪೀನಸಂರಕ್ಷಣಾರ್ಥಂ ಮಾರ್ಜಾರಃ । ಮಾರ್ಜಾರಸಂರಕ್ಷಣಾರ್ಥಂ ಗೌಃ । ಗೋಸಂರಕ್ಷಣಾರ್ಥಂ ಗೋಪಾಲಃ । ಗೋಪಾಲಸಂರಕ್ಷ**

**ಣಾರ್ಥಂ ಗೋಪಾಲಪತ್ನೀ ।** ಒಬ್ಬ ಸಂನ್ಯಾಸಿಗೆ ಇಲಿಗಳಿಂದ ಕೌಪೀನವನ್ನು ಸಂರಕ್ಷಿಸಬೇಕಾದ ಸಮಸ್ಯೆಯೊದಗಿತು. ಅದಕ್ಕೆ ಆ ಸಂನ್ಯಾಸಿಯು ಸ್ವಲ್ಪಯೋಚಿಸಿ ಬೆಕ್ಕೊಂದನ್ನು ತಂದನು. ಕೌಪೀನಸಂರಕ್ಷಣೆಯೇನೋ ಆಯಿತು. ಆಗ ಬೆಕ್ಕನ್ನು ಸಾಕುವ ಕೆಲಸವು ಸಂನ್ಯಾಸಿಯದಾಯಿತು. ಅದಕ್ಕೆ ಹಾಲಿಗಾಗಿ ಹಸುವನ್ನು ತರಬೇಕಾಯಿತು. ಹಸುವನ್ನು ತಂದನು. ಹಸುವನ್ನು ಸಾಕಲು ಗೋಪಾಲನು ಬರಬೇಕಾಯಿತು. ಗೋಪಾಲನೊಡನೆ ಪತ್ನಿಯೂ ಬಂದಳು. ಹೀಗೆ ಸಂನ್ಯಾಸಿಯ ಸಂಸಾರವು ಬೆಳೆಯಿತು. ಒಂದು ಸಣ್ಣ ಕಾಮನೆಯು ಸಂಸಾರವನ್ನೇ ತಂದು ಒಡ್ಡುವುದೆಂಬುದಕ್ಕೆ ಇದೊಂದು ಉದಾಹರಣೆ. ಆದುದರಿಂದ **ಸರ್ವಾನಶೇಷತಃ** ಎಲ್ಲ ಕಾಮನೆಗಳನ್ನು ನಿಃಶೇಷವಾಗಿ ಪರಿತ್ಯಾಗಮಾಡಬೇಕೆಂದು ಶ್ರೀಕೃಷ್ಣನು ಹೇಳುತ್ತಾನೆ.

ಇಂದ್ರಿಯಗ್ರಾಮವನ್ನು ; ಇಂದ್ರಿಯಸಮೂಹವನ್ನು ಎಲ್ಲ ಕಡೆಗಳಿಂದಲೂ ಮನಸ್ಸಿನಿಂದಲೇ ನಿಗ್ರಹಿಸಬೇಕು. ಇಂದ್ರಿಯಗಳು ಅವುಗಳಿಗೆ ಬೇಕಾದ ಇಂದ್ರಿಯವಿಷಯಗಳನ್ನು ಹುಡುಕಿಕೊಂಡು ಎಲ್ಲೆಲ್ಲೋ ಹೋಗಿಬಿಡುತ್ತವೆ. ಅವುಗಳ ಸ್ವಭಾವವೇ ಅಂತಹುದು. ಹಸುಗಳು ಅಲ್ಲಲ್ಲಿ ಹುಲ್ಲು ಮೇಯುತ್ತಿರುತ್ತವೆ. ಒಂದೆಡೆ ಮೇಯುತ್ತಿರುವಾಗ ಅವುಗಳಿಗೆ ಮುಂದೆ ಸ್ವಲ್ಪ ದೂರದಲ್ಲಿ ಅಲ್ಲಿರುವ ಹುಲ್ಲಿಗಿಂತ ಹೆಚ್ಚು ಹುಲ್ಲಿರುವಂತೆ ಕಾಣುತ್ತದೆ. ಅಲ್ಲಿಗೆ ಹೋಗುತ್ತವೆ. ಅಲ್ಲಿ ಮೇಯುವಾಗ ಇನ್ನೂ ಮುಂದೆ ಇನ್ನೂ ಹೆಚ್ಚು ಹುಲ್ಲಿರುವಂತೆ ಅವುಗಳಿಗೆ ಭಾಸವಾಗುತ್ತದೆ. ಈ ಇಂದ್ರಿಯಗಳೂ ಹಾಗೆಯೇ. ದುಂಬಿಯು ಒಂದು ಹೂವಿನಿಂದ ಮತ್ತೊಂದು ಹೂವಿಗೆ ಹಾರುವಂತೆ ಇಂದ್ರಿಯಗಳು ಒಂದು ಸುಖದಿಂದ ಮತ್ತೊಂದು ಸುಖದ ಕಡೆಗೆ ಹಾರುತ್ತಿರುತ್ತವೆ. ಇಂತಹ ಇಂದ್ರಿಯಗಳನ್ನು ಮನಸ್ಸಿನಿಂದಲೇ ತಡೆಹಿಡಿಯಬೇಕು.

ಮನಸ್ಸು ಇಂದ್ರಿಯಗಳಿಗೆಲ್ಲಾ ಮೂಲವಾದುದು. ಅದನ್ನು ತಡೆದರೆ ಉಳಿದ ಇಂದ್ರಿಯಗಳೆಲ್ಲವೂ ತಾವಾಗಿಯೇ ಹತೋಟಿಗೆ ಬರುತ್ತವೆ.

**ಧೃತಿಗೃಹೀತಯಾ ಬುದ್ಧ್ಯಾ ಶನೈಃ ಶನೈಃ ಉಪರಮೇತ್ ।**

ಬುದ್ಧಿಯು ಧೈರ್ಯತಂದುಕೊಳ್ಳಬೇಕು. ದುರ್ಬಲವಾದ ಬುದ್ಧಿಯಿರುವವನಿಗೆ ಯೋಗವು ಸಾಧ್ಯವಿಲ್ಲ. ಕಾಮ-ಕ್ರೋಧಾದಿ ಆರು ಮಂದಿ

ಶತ್ರುಗಳನ್ನು ಎದುರಿಸಿ ನಿಂತು ಯುದ್ಧಮಾಡಿ ಜಯಿಸಬೇಕು. ಮೆಲ್ಲ- ಮೆಲ್ಲಗೆ ಈ ಇಂದ್ರಿಯಗಳ ಉಪಟಳದಿಂದ ತಪ್ಪಿಸಿಕೊಳ್ಳಬೇಕು–ಎನ್ನುತ್ತಾನೆ ಶ್ರೀಕೃಷ್ಣ. ಇಂದ್ರಿಯಗಳನ್ನು ಬಲಾತ್ಕಾರವಾಗಿ ತತ್‌ಕ್ಷಣ ಅದುಮಿಹಿಡಿಯಲು ಸಾಧ್ಯವಿಲ್ಲ. ಉಪಾಯವಾಗಿ ಅವುಗಳ ಹಿಡಿತದಿಂದ ತಪ್ಪಿಸಿಕೊಂಡು ಅವು ಗಳನ್ನು ನಮ್ಮ ಹಿಡಿತದಲ್ಲಿಟ್ಟುಕೊಳ್ಳಬೇಕು. ಮುಳ್ಳುತಂತಿಯ ಮೇಲಿರುವ ಬಟ್ಟೆಯನ್ನು ಉಪಾಯವಾಗಿ ತೆಗೆದುಕೊಳ್ಳುವಂತೆ–ಇಂದ್ರಿಯಗಳನ್ನು ಇಂದ್ರಿಯಾರ್ಥಗಳಿಂದ ಹಿಂತೆಗೆಸಬೇಕು. ಇಷ್ಟೆಲ್ಲಾ ಸಾಧನೆಗಳನ್ನು ಮಾಡಿದ ನಂತರ ಮನಸ್ಸನ್ನು ಆತ್ಮಸಂಸ್ಥವನ್ನಾಗಿ ಮಾಡಿಕೊಳ್ಳಬೇಕು. ಆತ್ಮನಲ್ಲಿಯೇ ಪ್ರತಿಷ್ಠಿತವಾಗುವಂತೆ ಮಾಡಬೇಕು. ಹೊರಕ್ಕೆ ಹೊರಡದಂತೆ ಅಲ್ಲಿಯೇ ಕಟ್ಟಿಹಾಕಿಬಿಡಬೇಕು. ಆತ್ಮನನ್ನು ಕಂಡ ಮನಸ್ಸು ; ಆತ್ಮಾನಂದವನ್ನು ಅನು ಭವಿಸಿದ ಮನಸ್ಸು ಆತ್ಮನಿಂದ ಹಿಂದಿರುಗುವುದೇ ಇಲ್ಲ. ಯಾವುದೊಂದನ್ನೂ ಚಿಂತಿಸುವುದೂ ಇಲ್ಲ. ಆದರೂ ಸಹ ಸಾಧನೆಯ ಸಮಯದಲ್ಲಿ ಮನಸ್ಸು ಆತ್ಮನಲ್ಲಿ ಇನ್ನೂ ಪೂರ್ಣವಾಗಿ ಲೀನವಾಗದೇ ಇದ್ದಾಗ ಅನೇಕಯೋಚನೆಗಳು ಹುಟ್ಟಿಕೊಳ್ಳುವುವು. ಅಥವಾ ಆತ್ಮಾನುಭವದ ಹಾದಿಯಲ್ಲಿ ಅನೇಕ ಸಣ್ಣ-ಸಣ್ಣ ಸಿದ್ಧಿಗಳೂ ಕಾಣಿಸಿಕೊಳ್ಳಬಹುದು. ಆ ವಿಷಯವಾಗಿಯೂ ಯೋಚನೆಮಾಡಲು ಹೋಗದೇ ಅವುಗಳೆಲ್ಲವೂ ಆತ್ಮಲಾಭದ ಮುಂದೆ ಅಲ್ಪಲಾಭಗಳೆಂದು ನಿರ್ಧರಿಸಬೇಕು.

**ಧೃತಿಗೃಹೀತಯಾ** = ವಿವೇಕವಿಷಯವುಳ್ಳ.

**ಮನಸೈವ ಇನ್ದ್ರಿಯಗ್ರಾಮಂ** = ಇಂದ್ರಿಯಸಮುದಾಯವನ್ನು ಮನಸ್ಸಿನಿಂದಲೇ ಕಟ್ಟಿಹಾಕಲು ಸಾಧ್ಯ. ಬೇರೆ ಯಾವುದರಿಂದಲೂ ಸಾಧ್ಯವಿಲ್ಲ ಎಂದು ಒತ್ತಿಹೇಳಲು **ಮನಸೈವ** ಎಂದು ಇಲ್ಲಿ ಏವ ಎಂಬ ಪದವನ್ನು ಹೇಳಿದೆ.

**ಮನಸೈವ ನಿಯನ್ತುಂ ಶಕ್ಯತೇ ನಾನ್ಯೇನ ಇತ್ಯೇವಶಬ್ದಃ....**

**ಬುದ್ಧ್ಯಾ ಧೃತಿಗೃಹೀತಯಾ** = ಬುದ್ಧಿಯು ಮನೋನಿಗ್ರಹಕ್ಕೂ ಮತ್ತು ಆತ್ಮರತಿಗೂ ಎರಡಕ್ಕೂ ಕಾರಣವಾಗುತ್ತದೆ.) (ಮ.ಭಾ.)

ಓಂ ಯತೋ ಯತೋ ನಿಶ್ಚರತಿ ಮನಶ್ಚಞ್ಚಲಮಸ್ಥಿರಮ್ ।
ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥೨೬॥

ಚಂಚಲವೂ ಅಸ್ಥಿರವೂ ಆಗಿರುವ ಮನಸ್ಸು ಯಾವ-ಯಾವುದರಿಂದ ಹೊರಕ್ಕೆ ಬರುವುದೋ ಅದರಿಂದ ಅದನ್ನು ಬಿಗಿಹಿಡಿದು ಅದನ್ನು ಆತ್ಮನಲ್ಲಿಯೇ ವಶಪಡಿಸಬೇಕು.

* * *

(ಧ್ಯಾನದ ಸಮಯದಲ್ಲಿ ಮಾಡಬೇಕಾದ ಮನೋನಿಗ್ರಹದ ವಿಧಾನವನ್ನು ಶ್ರೀಕೃಷ್ಣನಿಲ್ಲಿ ಹೇಳುತ್ತಾನೆ. ಧ್ಯಾನಸಮಯದಲ್ಲಿ ಇಂದ್ರಿಯಗಳೇನೂ ತೊಂದರೆಕೊಡುವುದಿಲ್ಲ. ಏಕೆಂದರೆ : ನಿರ್ಜನಪ್ರದೇಶದಲ್ಲಿ ಸುಖಾಸನದಲ್ಲಿ ಕುಳಿತುಬಿಟ್ಟರೆ ಇಂದ್ರಿಯಗಳೇನು ಮಾಡಿಯಾವು? ಆದರೆ ಆ ಸಮಯದಲ್ಲಿ ಮನಸ್ಸೇ ಕೆಲಸಮಾಡುತ್ತಿರುತ್ತದೆ. ಅದು ಪಾದರಸದಂತೆ ಚಂಚಲವಾದುದು ಮತ್ತು ಒಂದುಕಡೆ ಸ್ಥಿರವಾಗಿ ಉಳಿಯುವುದಿಲ್ಲ. ಧ್ಯಾನಕ್ಕೆ ಕುಳಿತೊಡನೆಯೇ ಮನಸ್ಸು ಪ್ರಪಂಚವನ್ನೆಲ್ಲಾ ಸುತ್ತಲು ಮೊದಲಿಡುತ್ತದೆ. ಅದು ಎಲ್ಲೆಲ್ಲಿ ಹೋಗುವುದೋ ಅಲ್ಲಿಂದಲೇ ಅದನ್ನು ಎಳೆದು ತರಬೇಕು. ಎಳೆದು ತರುವುದು ಯಾವುದು? ದೃಢವಾಗಿರುವ ಬುದ್ಧಿ. ಮನಸ್ಸು ದಾರಿಬಿಟ್ಟು ಹೋಗುತ್ತಿದೆಯೆಂದು ಬುದ್ಧಿಗೆ ಗೊತ್ತಾಗುತ್ತದೆ. ಒಡನೆಯೇ ಅದನ್ನು ತಡೆಹಿಡಿಯಬೇಕು ; ನಿರೋಧಿಸಬೇಕು. ಧ್ಯಾನಮೂರ್ತಿಯಲ್ಲಿ ಲೀನಗೊಳಿಸಬೇಕು. ಈ ಕಾರ್ಯವು ಸತತವಾಗಿ ನಡೆಯಬೇಕು. ಚಂಚಲತ್ವವನ್ನೂ ಅಸ್ಥಿರತ್ವವನ್ನೂ ಮನಸ್ಸು ಬಹುಬೇಗ ಕಳೆದುಕೊಂಡುಬಿಡುವುದಿಲ್ಲ. ಧ್ಯಾನಕ್ಕೆ ಕುಳಿತಿರುವಾಗ ಮನಸ್ಸು ಒಮ್ಮೆ ಸಂತೆಗೆ ಹೋದರೆ ಮತ್ತೊಮ್ಮೆ ಚಿತ್ರಮಂದಿರಕ್ಕೆ ಹೋಗುತ್ತದೆ. ಒಮ್ಮೆ ಬೀದಿಯಲ್ಲಿ ಅಲೆದಾಡುತ್ತದೆ. ಒಮ್ಮೆ ರುಚಿ ನೋಡುತ್ತದೆ. ಅಲ್ಲಿಗೆ ಹೋಗದಂತೆ ಅದನ್ನು ಆಯಾ ವಿಷಯಗಳಿಂದ ಹಿಂದಕ್ಕೆ ಎಳೆದುಕೊಳ್ಳಬೇಕು. ಇದೂ ಒಂದು ಮಹಾಸಾಹಸ. ಅದು ಅಲ್ಲಿಯೇ ಉಳಿಯುವಂತೆ ಮಾಡುವುದು ಒಂದು ಮಹಾಸಾಧನೆ. ಮನಸ್ಸು ಸ್ತಿಮಿತಕ್ಕೆ ಬಾರದೇ ಇರುವುದಕ್ಕಾಗಿ ಬೇಸರಪಟ್ಟುಕೊಳ್ಳದೇ ಅನವರತವಾಗಿ ಅಭ್ಯಾಸ ಮಾಡುತ್ತಿದ್ದರೆ ಒಮ್ಮೆ ಈ ತುಂಟ ಮನಸ್ಸಿನ ಕೈ-ಕಾಲುಗಳನ್ನು ಮುರಿದು ಆತ್ಮನ ವಶಕ್ಕೆ ಒಪ್ಪಿಸಬಹುದು. ಒಮ್ಮೆ ಒಪ್ಪಿಸಿಬಿಟ್ಟೆವೆಂದರೆ

ಅದು ಪುನಃ ಅಲ್ಲಿಂದ ಹಿಂದಿರುಗುವುದಿಲ್ಲ. ಆತ್ಮಾನುಭವದ ಆನಂದಕ್ಕೂ-ವಿಷಯಾನುಭವದ ಆನಂದಕ್ಕೂ ತಾರತಮ್ಯವನ್ನು ತಿಳಿದುಕೊಳ್ಳುತ್ತದೆ.

ಆದರೆ ಮನಸ್ಸನ್ನು ಆತ್ಮವಶಮಾಡಿಕೊಳ್ಳುವವರೆಗೂ ಸತತವಾಗಿ ಧ್ಯಾನಕಾರ್ಯವನ್ನು ಮಾಡುತ್ತಲೇ ಇರಬೇಕು.

ಯುಕ್ತವಾದ (ನಿಗೃಹೀತವಾದ) ಮತ್ತು ಅಯುಕ್ತವಾದ (ನಿಗೃಹೀತ ವಾಗದ) ಮನಸ್ಸಿನ ವಿಷಯವಾಗಿ ಕಠೋಪನಿಷತ್ತಿನಲ್ಲಿ ಹೀಗೆ ಹೇಳಿದ್ದಾರೆ :

**ಯಸ್ತ್ವವಿಜ್ಞಾನವಾನ್ಭವತ್ಯಯುಕ್ತೇನ ಮನಸಾ ಸದಾ ।**
**ತಸ್ಯೇನ್ದ್ರಿಯಾಣ್ಯವಶ್ಯಾನಿ ದುಷ್ಟಾಶ್ವಾ ಇವ ಸಾರಥೇಃ ॥** ೩-೫

ಯಾವನು ಯಾವಾಗ ಅಯುಕ್ತವಾದ (ಅಸಮಾಹಿತವಾದ) ಮನಸ್ಸಿನಿಂದ ಕೂಡಿದವನಾಗಿ ಪ್ರವೃತ್ತಿಯಲ್ಲೂ ನಿವೃತ್ತಿಯಲ್ಲೂ ವಿವೇಕವಿಲ್ಲದೇ ಇರುವನೋ-ಅವನ ಇಂದ್ರಿಯಗಳು ತುಂಟಕುದುರೆಗಳಂತೆ ಸಾರಥಿಗೆ ವಶ ವಾಗದೇ ಇರುವುವು.

**ಯಸ್ತು ವಿಜ್ಞಾನವಾನ್ಭವತಿ ಯುಕ್ತೇನ ಮನಸಾ ಸದಾ ।**
**ತಸ್ಯೇನ್ದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ ॥** ೩-೬

ಯಾವನು ಯಾವಾಗಲೂ ಸಮಾಹಿತವಾದ ಮನಸ್ಸಿನಿಂದ ಕೂಡಿದವ ನಾಗಿ ನಿಪುಣನಾಗಿರುವನೋ-ಅವನ ಇಂದ್ರಿಯಗಳು ಪಳಗಿದ ಕುದುರೆ ಗಳಂತೆ ಸಾರಥಿಗೆ ವಶವಾಗಿರುತ್ತವೆ.

**ಯತೋ ಯತಃ = ಯತ್ರ ಯತ್ರ** ಯಾವ ಯಾವ ವಸ್ತುವಿನಲ್ಲಿ. **ಯತೋ ಯತಃ** ಎಂಬುದಕ್ಕೆ ಯಾವ ಯಾವ ನಿಮಿತ್ತದಿಂದ ಎಂದು ಅರ್ಥ ಮಾಡಬಾರದು.

'ಶಬ್ದವೇ ಮುಂತಾದ ಯಾವ ಯಾವ ನಿಮಿತ್ತದ ದೆಸೆಯಿಂದ'-ಎಂದು ಅರ್ಥಮಾಡಬಾರದು. ಹಾಗೆ ಮಾಡಿದರೆ ಮನಸ್ಸಿನ ಹೊರಕ್ಕೆ ಹೋಗುವ ದ್ವಾರಮಾತ್ರ ನಿಯಮನವಾಗುತ್ತದೆ. ಸ್ಮರಣೆಯನ್ನು ಹೇಗೆ ತಡೆಗಟ್ಟುವುದು? ಆದುದರಿಂದ-'ಯಾವ ಯಾವ ವಸ್ತುವಿನಲ್ಲಿ'-ಎಂದು ಅರ್ಥಮಾಡ ಬೇಕು. ಹಾಗೆ ಮಾಡಿದರೆ-'ಶಬ್ದಾದಿವಿಷಯಕವಾದ ಜ್ಞಾನಮಾತ್ರ ನಿವಾ ರಣೆ'-ಎಂಬ ಅರ್ಥವಾಗುತ್ತದೆ. ಸ್ಮರಣನಿವಾರಣೆಯೂ ಆಗುತ್ತದೆ. ಇಲ್ಲಿ

ಸಪ್ತಮ್ಯರ್ಥದಲ್ಲಿ **ತಸಿಲ್** ಪ್ರತ್ಯಯ. ಇದಕ್ಕೆ ಉದಾಹರಣೆ **ಯತೋ-ಯತೋ** ಧಾವತಿ ಮುಂತಾದ ಪ್ರಯೋಗ.)

**ಆತ್ಮನ್ಯೇವ** = ಆತ್ಮವಿಷಯದಲ್ಲಿಯೇ.) (ಮ.ಭಾ.)

**ಓಂ ಪ್ರಶಾನ್ತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।**
**ಉಪೈತಿ ಶಾನ್ತರಜಸಂ ಬ್ರಹ್ಮಭೂತಮಕಲ್ಮಷಮ್ ॥೨೭॥**

ಪ್ರಶಾಂತಮನಸ್ಕನಾಗಿರುವ, ರಜೋಗುಣವನ್ನು ಕಳೆದುಕೊಂಡಿರುವ, ಬ್ರಹ್ಮಭೂತನಾದ, ಕಲ್ಮಷರಹಿತನಾದ ಈ ಯೋಗಿಯನ್ನು ಉತ್ತಮವಾದ ಸುಖವು ಬಂದು ಸೇರುವುದು.

* * *

(ಪ್ರಶಾಂತನಾದ ಯೋಗಿಗೆ ಉತ್ತಮಸುಖವು ಸಿಕ್ಕುತ್ತದೆ. ಪ್ರಶಾಂತ ಮನಸ್ಕನೆಂದರೆ ಯಾವ ವಿಧವಾದ ಉದ್ವೇಗವೂ ಇಲ್ಲದವನು. ವಿಷಯ ಚಿಂತನವಿಲ್ಲದೇ ಇರುವವನು. ಆತ್ಮಾನುಭವದಿಂದ ತಿಳಿಯಾದ ಮನಸ್ಸಿನಿಂದ ಕೂಡಿರುವವನು.

ಇವನಲ್ಲಿ ರಜೋಗುಣವೂ ಶಾಂತವಾಗಿ ಹೋಗಿದೆ. ರಜೋಗುಣವೇ ಶಾಂತವಾಗಿದೆಯೆಂದಮೇಲೆ ತಮೋಗುಣವು ಹೋಗಿದೆಯೆಂಬುದನ್ನು ಹೇಳಬೇಕಾಗಿಯೇ ಇಲ್ಲ. ರಜೋಗುಣದ ಸಂಬಂಧವಾದ ಆಸಕ್ತಿ, ಸ್ಪೃಹೆ, ಕಾಮನೆ, ಲೋಭ-ಇವುಗಳಾವುವೂ ಇವನಲ್ಲಿರುವುದಿಲ್ಲ. ಶುದ್ಧಸತ್ತ್ವಗುಣವು ಮಾತ್ರವೇ ಇವನಲ್ಲಿ ಉಳಿದುಕೊಂಡಿದೆ. ಶ್ರೀಶಂಕರರು ಶಾನ್ತರಜಸಂ ಎನ್ನುವುದಕ್ಕೆ **ಪ್ರಕ್ಷೀಣಮೋಹಾದಿಕ್ಲೇಶರಜಸಂ**–ಮೋಹವೇ ಮುಂತಾದ ಕ್ಲೇಶಗಳ ಧೂಳು ಸಂಪೂರ್ಣವಾಗಿ ಹೋಗಿರುವವನು–ಎಂದು ಅರ್ಥಮಾಡಿರುತ್ತಾರೆ. ಬ್ರಹ್ಮಭೂತನಾಗಿರತಕ್ಕವನು : ಜೀವನ್ಮುಕ್ತನಾಗಿ ಎಲ್ಲವೂ ಬ್ರಹ್ಮವೇ ಎಂಬ ನಿಶ್ಚಯವುಳ್ಳವನು. ಇದ್ದಿಲನ್ನು ಬೆಂಕಿಗೆ ಹಾಕಿದರೆ ಅದೂ ಕೂಡ ಬೆಂಕಿಯೇ ಆಗುವುದು. ಬ್ರಹ್ಮವಸ್ತುವನ್ನು ಸತತವಾಗಿ ಧ್ಯಾನಮಾಡುವ ಮನಸ್ಸೂ ಬ್ರಹ್ಮಭಾವವನ್ನೇ ಹೊಂದುವುದು. ಇವನು ಅಕಲ್ಮಷ. ಅಧರ್ಮವೇ ಮುಂತಾದ ದೋಷವಿಲ್ಲದವನು. ಪಾಪರಹಿತನು. ಇಂತಹವನನ್ನು ಉತ್ತಮೋತ್ತಮವಾದ ಸುಖವೇ ಹೋಗಿ ಸೇರುತ್ತದೆ. ಯೋಗಿಯು ಸುಖವನ್ನು ಹುಡುಕಿಕೊಂಡು ಹೋಗುವುದಿಲ್ಲ. ನಾವು ಅರಸುವ ಸುಖವೆಲ್ಲವೂ

ಕ್ಷಣಿಕಸುಖ. ದುಃಖಮಿಶ್ರವಾದ ಸುಖ. ಯೋಗಿಗೆ ಲಭಿಸುವುದು ಶಾಶ್ವತ ಸುಖ ; ದುಃಖ-ಶ್ರಮಗಳಿಲ್ಲದ ಶುದ್ಧಸುಖ ; ನಿರತಿಶಯಸುಖ ; ನಿರುಪಾಧಿಕವಾದ ಸುಖ. ಆದುದರಿಂದ ಅದನ್ನು ಉತ್ತಮ ಎಂದು ಕರೆದಿದೆ. ಇದೇ ಧ್ಯಾನಯೋಗದ ಮುಖ್ಯಫಲ.

ಬ್ರಹ್ಮಭೂತಂ ಯೋಗಿನಂ = ಸ್ವಸ್ವರೂಪದಲ್ಲಿರುವ ಯೋಗಿಯನ್ನು ಆತ್ಮಸ್ವರೂಪಾನುಭವರೂಪವಾದ ಸುಖವು ಬಂದುಸೇರುತ್ತದೆ. ಆತ್ಮಸ್ವರೂಪವೇ ಉತ್ತಮಸುಖರೂಪವಲ್ಲವೇ? ) (ಶಂ.ಭಾ.)

**ಓಂ ಯುಞ್ಜನ್ನೇವಂ ಸದಾತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯನ್ತಂ ಸುಖಮಶ್ನುತೇ ॥೨೮॥**

ಹೀಗೆ ಯಾವಾಗಲೂ ತನ್ನನ್ನು ಯೋಗದಲ್ಲಿ ಸೇರಿಸಿಕೊಂಡಿರುವುದರಿಂದ ಯೋಗಿಯು ಪಾಪರಹಿತನಾಗಿ ಬ್ರಹ್ಮಸಂಸ್ಪರ್ಶರೂಪವಾದ ಅನಂತವಾದ ಸುಖವನ್ನು ಬಹಳ ಸುಲಭವಾಗಿ ಪಡೆಯುತ್ತಾನೆ.

* * *

(ಪುಣ್ಯ-ಪಾಪರಹಿತನಾದ ಯೋಗಿಯು ಯಾವಾಗಲೂ ತನ್ನ ಮನಸ್ಸನ್ನು ಪರಮಾತ್ಮನಲ್ಲಿಯೇ ನಿಯೋಜಿಸಿರುತ್ತಾನೆ. ಧ್ಯಾನಕಾಲದಲ್ಲಿ ಮಾತ್ರವಲ್ಲದೇ ಬೇರೆಯ ಕಾಲದಲ್ಲಿಯೂ ಅವನ ಮನಸ್ಸು–ಉತ್ತರಮುಖಿಯು ಯಾವಾಗಲೂ ಉತ್ತರದಿಕ್ಕಿಗೇ ತಿರುಗಿರುವಂತೆ–ಆತ್ಮನ ಕಡೆಗೇ ಇರುತ್ತದೆ. ಯೋಗಿಯು ಬ್ರಹ್ಮಪ್ರಾಪ್ತಿರೂಪವಾದ ಯೋಗವನ್ನು ಬಹುಸುಲಭವಾಗಿ ಪಡೆದು ಆತ್ಯಂತಿಕವಾದ–ವಿನಾಶರಹಿತವಾದ ಸುಖವನ್ನು–ಆನಂದವನ್ನು ಪಡೆಯುತ್ತಾನೆ. ಅಜ್ಞಾನದಿಂದ ಬ್ರಹ್ಮಸಾಕ್ಷಾತ್ಕಾರಕ್ಕೆ ದೂರವಾಗಿದ್ದವನು ಧ್ಯಾನಯೋಗದಿಂದ ಆತ್ಮದರ್ಶನವಾಗಿ ಬ್ರಹ್ಮನನ್ನು ತಲುಪುತ್ತಾನೆ. ಬ್ರಹ್ಮಪ್ರಾಪ್ತಿರೂಪವಾದ ಪರಮೋತ್ಕೃಷ್ಟವೂ ಅಂತರಹಿತವೂ ಆದ ಪರಮಸುಖವನ್ನು ಪಡೆಯುತ್ತಾನೆ.

ಆತ್ಮಸುಖಕ್ಕಿಂತಲೂ ಮಿಗಿಲಾದುದು ಬೇರೆ ಯಾವುದೂ ಇಲ್ಲವೆಂದು ಸನತ್ಕುಮಾರರು ಛಾಂದೋಗ್ಯದಲ್ಲಿ ಹೇಳಿದ್ದಾರೆ : **ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ ಭೂಮೈವ ಸುಖಂ ಭೂಮಾತ್ವೇವ ವಿಜಿಜ್ಞಾಸಿತವ್ಯ ಇತಿ ಭೂಮಾನಂ ಭಗವೋ ವಿಜಿಜ್ಞಾಸ ಇತಿ.**

ಯಾವುದು ಭೂಮವೋ (ಆತ್ಮವೋ) ಅದು ಸುಖವು. ಅಲ್ಪದಲ್ಲಿ ಸುಖವಿಲ್ಲ. ಭೂಮವೇ ಸುಖವು. ಭೂಮವನ್ನೇ ತಿಳಿದುಕೊಳ್ಳಲು ಬಯಸಬೇಕು. ೭-೨೩-೧

**ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾಥ ಯತ್ರಾನ್ಯತ್ ಪಶ್ಯತ್ಯನ್ಯಚ್ಛೃಣೋತ್ಯನ್ಯದ್ವಿಜಾನಾತಿ ತದಲ್ಪಂ ಯೋ ವೈ ಭೂಮಾ ತದಮೃತಮಥ ಯದಲ್ಪಂ ತನ್ಮರ್ತ್ಯಂ ಸ ಭಗವಃ ಕಸ್ಮಿನ್ ಪ್ರತಿಷ್ಠಿತ ಇತಿ ಸ್ವೇ ಮಹಿಮ್ನಿ ಯದಿ ವಾ ನ ಮಹಿಮ್ನೀತಿ ॥**
೭-೨೪-೧

ಎಲ್ಲಿ ಬೇರೊಂದನ್ನು ಕೇಳುವುದಿಲ್ಲವೋ ಬೇರೊಂದನ್ನು ಅರಿಯುವುದಿಲ್ಲವೋ–ಅದು ಭೂಮವು. ಆದರೆ ಎಲ್ಲಿ ಬೇರೊಂದನ್ನು ನೋಡುವನೋ, ಬೇರೊಂದನ್ನು ಕೇಳುವನೋ, ಬೇರೊಂದನ್ನು ಅರಿಯುವನೋ– ಅದು ಅಲ್ಪವು. ಯಾವುದು ಭೂಮವೋ ಅದು ಅಮೃತವು ; ಯಾವುದು ಅಲ್ಪವೋ ಅದು ಮರ್ತ್ಯವು.

ಬ್ರಹ್ಮಸಂಸ್ಪರ್ಶದಿಂದ ಆಗುವ ಆನಂದವು ಅನಂತವಾದುದು. ವಿಷಯ ಸುಖಗಳಂತೆ ಕ್ಷಣಿಕವಾದುದಲ್ಲ. ಮಹಾನಂದ. ಬ್ರಹ್ಮಾನಂದವೆಂದರೆ ಎಂತಹುದೆಂಬುದನ್ನು ಉಪನಿಷತ್ತಿನಲ್ಲಿ ಹೀಗೆ ವಿವರಿಸಿದ್ದಾರೆ :

**ಯುವಾಸ್ಯಾತ್ಸಾಧು ಯುವಾಧ್ಯಾಯಕಃ । ಆಶಿಷ್ಠೋ ದೃಢಿಷ್ಠೋ ಬಲಿಷ್ಠಃ। ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾ ಸ್ಯಾತ್। ಸ ಏಕೋ ಮಾನುಷ ಆನನ್ದಃ।** ಉಪನಿಷತ್ಕಾರರು ಮನುಷ್ಯನ ಆನಂದವನ್ನು ಈ ಮಂತ್ರದಲ್ಲಿ ವಿವರಿಸಿದ್ದಾರೆ.

ಯಾರಿಗಾದರೂ ಈ ಆನಂದವಿದೆಯೇ? ವಿಚಾರಮಾಡಿ ನೋಡಬಹುದು.

ಯುವಕನು ; ಯುವಕನೆಂದರೆ ಸಾಧುವಾದ ಯುವಕ. ವೇದಾಧ್ಯಯನಸಂಪನ್ನ. ಆಶೆಯುಳ್ಳವನು. ದೃಢವಾದ ಶರೀರಸೌಷ್ಠವವಿರುವವನು, ಬಲಿಷ್ಠನಾಗಿರತಕ್ಕವನು. ಸಕಲೈಶ್ವರ್ಯದಿಂದ ಪೂರ್ಣವಾದ ಈ ಪೃಥ್ವಿಯು ಅವನದೇ ಆಗಿರುತ್ತದೆ. ಇಂತಹವನೊಬ್ಬನಿಗೆ ಯಾವ ಆನಂದವಿರುತ್ತದೆಯೋ ಅದಕ್ಕೆ ಮನುಷ್ಯಾನಂದವೆಂದು ಹೇಳಬಹುದು. ನೂರು ಮನುಷ್ಯರ ಆನಂದವು ಸೇರಿದರೆ ಒಂದು ಮನುಷ್ಯಗಂಧರ್ವನ ಆನಂದ.

ನೂರು ಮನುಷ್ಯಗಂಧರ್ವರ ಆನಂದಗಳು ಸೇರಿದರೆ ಒಂದು ದೇವಗಂಧರ್ವನ ಆನಂದವಾಗುತ್ತದೆ. ನೂರು ದೇವಗಂಧರ್ವರ ಆನಂದಗಳು ಸೇರಿದರೆ ಒಂದು ಚಿರಲೋಕವುಳ್ಳ ಪಿತೃಗಳ ಆನಂದವಾಗುತ್ತದೆ. ಇಂತಹ ನೂರು ಪಿತೃಗಳ ಆನಂದಗಳು ಒಂದು ಆಜಾನಜನ ಆನಂದವಾಗುತ್ತದೆ. ನೂರು ಆಜಾನಜರ ಆನಂದಗಳು ಒಬ್ಬ ಕರ್ಮದೇವತೆಯ ಆನಂದವಾಗುತ್ತದೆ. ನೂರು ಕರ್ಮದೇವತೆಗಳ ಆನಂದಗಳು ಒಬ್ಬ ದೇವತೆಯ ಆನಂದವಾಗುತ್ತದೆ. ನೂರು ದೇವತೆಗಳ ಆನಂದಗಳು ಒಬ್ಬ ಇಂದ್ರನ ಆನಂದವಾಗುತ್ತದೆ. ನೂರುಮಂದಿ ಇಂದ್ರರ ಆನಂದಗಳು ಒಬ್ಬ ಬೃಹಸ್ಪತಿಯ ಆನಂದವಾಗುತ್ತದೆ. ನೂರು ಮಂದಿ ಬೃಹಸ್ಪತಿಗಳ ಆನಂದಗಳು ಒಬ್ಬ ಪ್ರಜಾಪತಿಯ ಒಂದು ಆನಂದಕ್ಕೆ ಸಮವಾಗಿರುತ್ತದೆ. ನೂರು ಮಂದಿ ಪ್ರಜಾಪತಿಗಳ ಆನಂದಗಳು ಬ್ರಹ್ಮಾನಂದಕ್ಕೆ ಸಮನಾಗಿರುತ್ತದೆ. ಇದೇ ಬ್ರಹ್ಮಾನಂದಕ್ಕೆ ಅಕಾಮಹತನಾದ ಬ್ರಹ್ಮಜ್ಞನಾದ ಶ್ರೋತ್ರಿಯನ ಆನಂದವು ಸಮನಾಗಿರುತ್ತದೆ. **ಶೋತ್ರಿಯಸ್ಯ ಚಾಕಾಮಹತಸ್ಯ** ಈ ಮಂತ್ರದಿಂದ ಬ್ರಹ್ಮಾನಂದದ ಮಹತ್ತ್ವವೆಷ್ಟೆಂಬುದನ್ನು ಊಹಿಸಬಹುದಾಗಿದೆ.

ಬ್ರಹ್ಮಸಂಸ್ಪರ್ಶಂ = ಬ್ರಹ್ಮಾನುಭವರೂಪವಾದ ಅತ್ಯನ್ತಂ = ಅಪರಿಮಿತವಾದ. (ರಾ.ಭಾ.)

**ಯುಞ್ಜನ್ನೇವಂ** ಹಿಂದಿನ ಶ್ಲೋಕದಲ್ಲಿ ಪ್ರತಿಪಾದಿಸಿದ ವಿಷಯವನ್ನೇ ಇಲ್ಲಿ ವಿಸ್ತಾರಪಡಿಸಿದೆ.) (ಮ.ಭಾ.)

**ಓಂ ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥೨೯॥**

ಎಲ್ಲ ಕಡೆಗಳಲ್ಲಿಯೂ ಸಮದೃಷ್ಟಿಯುಳ್ಳವನೂ–ಧ್ಯಾನಯೋಗದಲ್ಲಿ ಯುಕ್ತವಾದ ಆತ್ಮವುಳ್ಳವನೂ ಆದ ಯೋಗಿಯು ಆತ್ಮನನ್ನು ಸರ್ವಭೂತಗಳಲ್ಲಿಯೂ ಮತ್ತು ಎಲ್ಲ ಭೂತಗಳನ್ನು ಆತ್ಮನಲ್ಲಿಯೂ ಕಾಣುತ್ತಾನೆ.

* * *

(ಯೋಗಯುಕ್ತಾತ್ಮನು ಧ್ಯಾನಯೋಗದಿಂದ ಆತ್ಮನನ್ನು ಕಂಡುಕೊಂಡಿರತಕ್ಕವನು ಸರ್ವತ್ರ ಸಮದರ್ಶನನಾಗಿರುತ್ತಾನೆ. ಅವನಿಗೆ ಎಲ್ಲ ಪ್ರಾಣಿಗಳ ಅಂತರ್ಯದಲ್ಲಿಯೂ ಪರಮಾತ್ಮನೇ ಕಾಣುತ್ತಾನೆ.

ಯೋಗಯುಕ್ತಾತ್ಮನಾದ ಇವನು ಸರ್ವತ್ರ ಸಮದರ್ಶನನು. ಆನೆಯನ್ನೂ ಆಡನ್ನೂ ಒಂದೇ ಎಂದು ಭಾವಿಸುತ್ತಾನೆ ಎಂದಲ್ಲ. ಆನೆಯಲ್ಲಿರುವ ಮತ್ತು ಆಡಿನಲ್ಲಿರುವ ಚೈತನ್ಯವು ಒಂದೇ ಎಂದು ಭಾವಿಸುತ್ತಾನೆ. ಸಮ ಎಂದರೆ ಬ್ರಹ್ಮ. ನಿರ್ದೋಷಂ ಹಿ ಸಮಂ ಬ್ರಹ್ಮ । ತ್ವಯಿ ಮಯಿ ಚಾಪ್ಯತ್ರೈಕೋ ವಿಷ್ಣುಃ । ಇದರ ವಿವರಣೆಯೇ ಸರ್ವಭೂತಸ್ಥಮಾತ್ಮಾನಂ ಎಂಬುದು. ಸರ್ವಪ್ರಾಣಿಗಳಲ್ಲಿಯೂ ಇರುವ ಆತ್ಮನನ್ನು ನೋಡುತ್ತಾನೆ. ಪಂಡಿತ, ಪಾಮರ, ಪಾಪೀ, ಪುಣ್ಯವಂತ, ವೃಕ್ಷಗಳು–ಈ ಎಲ್ಲದರಲ್ಲಿಯೂ ಸಹ ಅವನು ತನ್ನಲ್ಲಿರುವ ಆತ್ಮನನ್ನೇ ಕಾಣುತ್ತಾನೆ. ಬ್ರಹ್ಮಭೂತನಾದವನಿಗೆ ಎಲ್ಲವೂ ಬ್ರಹ್ಮಮಯವಾಗಿಯೇ ಕಾಣುತ್ತದೆ. ಸರ್ವಭೂತಗಳನ್ನೂ ಆತ್ಮನಲ್ಲಿಯೂ ಕಾಣುತ್ತಾನೆ.

ಅಂತೆಯೇ ಯೋಗಿಯ ಹೃನ್ಮಂದಿರದಲ್ಲಿರುವ ಪರಮಾತ್ಮನಲ್ಲಿ ಬ್ರಹ್ಮಾಂಡವೇ ಅಡಗಿದೆ. ಪರಮಾತ್ಮನನ್ನು ಯಾವಾಗ ಕಂಡುಕೊಂಡನೋ ಆಗ ಬ್ರಹ್ಮಾಂಡವನ್ನೂ ಹೃನ್ಮಂದಿರದಲ್ಲಿ ಕಂಡುಕೊಂಡಂತೆಯೇ ಆಯಿತು. ನೀರಿನೊಳಗೆ ಬಿಂದಿಗೆಯಿದೆ ; ಬಿಂದಿಗೆಯೊಳಗೆ ನೀರಿದೆ. ನಮ್ಮಲ್ಲಿ ಪರಮಾತ್ಮ ನಿದ್ದಾನೆ ; ಪರಮಾತ್ಮನಲ್ಲಿ ಬ್ರಹ್ಮಾಂಡವಿದೆ. ಆದುದರಿಂದ ನಮ್ಮಲ್ಲಿಯೂ ಬ್ರಹ್ಮಾಂಡವಿದ್ದಂತಾಯಿತು. ಯೋಗಿಯಾದವನು ಸರ್ವಪ್ರಾಣಿಗಳಲ್ಲಿಯೂ ತನ್ನನ್ನೇ ಕಾಣುತ್ತಾನೆ. ಸರ್ವಪ್ರಾಣಿಗಳೂ ತನ್ನಲ್ಲಿರುವುದನ್ನೂ ಕಾಣುತ್ತಾನೆ.

ಈಶಾವಾಸ್ಯದಲ್ಲಿ ಇದೇ ಮಂತ್ರವೇ ಸ್ವಲ್ಪ ವ್ಯತ್ಯಾಸದಿಂದ ಬಂದಿದೆ :

**ಯಸ್ತು ಸರ್ವಾಣಿ ಭೂತಾನಿ ಆತ್ಮನ್ಯೇವಾನುಪಶ್ಯತಿ ।**
**ಸರ್ವಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ ॥೬॥**

ಯಾವನು ಸರ್ವಪ್ರಾಣಿಗಳನ್ನೂ ತನ್ನ ಆತ್ಮನಲ್ಲಿಯೇ ನೋಡುತ್ತಾನೆಯೋ ಮತ್ತು ತನ್ನ ಆತ್ಮನನ್ನು ಸರ್ವಪ್ರಾಣಿಗಳಲ್ಲಿಯೂ ನೋಡುವನೋ– ಅವನು ಹಾಗೆ ನೋಡುವುದರಿಂದ ಒಂದೇ ಆತ್ಮವಸ್ತುವು ತನ್ನಲ್ಲಿಯೂ ಮತ್ತು ಇತರರಲ್ಲಿಯೂ ಇದೆ–ಎಂದು ತಿಳಿಯುತ್ತಾನೆ. ಆತ್ಮವ್ಯತಿರಿಕ್ತವಾದ ಯಾವ ವಸ್ತುವೂ ಇಲ್ಲದಿರುವುದರಿಂದ ಯಾವುದರಲ್ಲಿಯೂ ಜುಗುಪ್ಸೆಯನ್ನು (ಅಸಹ್ಯತೆಯನ್ನು ) ತೋರಿಸುವುದಿಲ್ಲ.

**ಸರ್ವತ್ರ ಸಮದರ್ಶನಃ**–ಬ್ರಹ್ಮಾದಿ-ಸ್ಥಾವರಪರ್ಯಂತವಾದ ವಿಷಮವಾದ ಎಲ್ಲ ಪ್ರಾಣಿಗಳಲ್ಲಿಯೂ ಸಮವಾಗಿರುವ, ನಿರ್ವಿಶೇಷವಾಗಿರುವ, ಬ್ರಹ್ಮಾತ್ಮಗಳ ಐಕ್ಯವಿಷಯವಾದ ದರ್ಶನವು ಎಂದರೆ ಜ್ಞಾನವು ಯಾವನಿಗಿದೆಯೋ ಅವನು. (ಶಂ.ಭಾ.)

ಈ ಶ್ಲೋಕವು ಯೋಗವಿಪಾಕದ ಮೊದಲನೆಯ ಪ್ರಕಾರವನ್ನು ಹೇಳುತ್ತದೆ. ಪ್ರಾಣಿಗಳಲ್ಲಿ ವೈಷಮ್ಯವು ಪ್ರಕೃತಿಜನ್ಯವಾದುದು. ಆದರೆ ಪ್ರಕೃತಿನಿಯುಕ್ತವಾದ ಸ್ವರೂಪದಲ್ಲಿ ತನ್ನ ಮತ್ತು ಇತರರೆಲ್ಲರ ಆತ್ಮಗಳು ಜ್ಞಾನೈಕಾಕಾರವಾಗಿರುವುದರಿಂದ ಜ್ಞಾನಿಯು ಆ ಜ್ಞಾನೈಕಾಕಾರದಲ್ಲಿ ಎಲ್ಲ ಆತ್ಮಗಳಲ್ಲಿಯೂ ಸಾಮ್ಯವನ್ನು ನೋಡುವನು. ಅವನು ಸರ್ವಭೂತಗಳಲ್ಲಿ ಆತ್ಮನನ್ನೂ ಮತ್ತು ಆತ್ಮನಲ್ಲಿ ಸರ್ವಭೂತಗಳನ್ನೂ ನೋಡುತ್ತಾನೆ–ಎಂದರೆ ತನ್ನ ಆತ್ಮವು ಸರ್ವಾತ್ಮಸಮಾನಾಕಾರವಾಗಿದೆಯೆಂದು ನೋಡುತ್ತಾನೆ. ಒಂದು ಆತ್ಮವನ್ನು ನೋಡಿದರೆ ಎಲ್ಲ ಆತ್ಮಗಳನ್ನೂ ನೋಡಿದಂತೆಯೇ. ಏಕೆಂದರೆ : ಎಲ್ಲ ಆತ್ಮಗಳೂ ಅದಕ್ಕೆ ಸಮವೇ. (ರಾ.ಭಾ.)

ಇದರಲ್ಲಿ ಭಗವಂತನು ಧ್ಯೇಯಸ್ವರೂಪವನ್ನು ಹೇಳುತ್ತಾನೆ. **ಮಚ್ಚಿತ್ತಃ ಯುಕ್ತಃ** ಮುಂತಾದ ಪದಗಳಿಂದಲೇ ಧ್ಯೇಯವನ್ನು ಹಿಂದೆ ಹೇಳಿದ್ದರೂ ಉತ್ತಮಾಧಿಕಾರಿಗಳಿಗೆ ಧ್ಯೇಯವನ್ನು ಇಲ್ಲಿ ಹೇಳುತ್ತಾನೆ. ಎಲ್ಲ ಭೂತಗಳಲ್ಲಿ ಆತ್ಮನನ್ನೂ ಎಂದರೆ ಪರಮೇಶ್ವರನನ್ನೂ, ಹಾಗೆಯೇ ಆತ್ಮನಲ್ಲಿ ಪರಮೇಶ್ವರನಲ್ಲಿ ಎಲ್ಲ ಭೂತಗಳನ್ನೂ ಅವನು ನೋಡುತ್ತಾನೆ ಮತ್ತು ಆ ಪರಮೇಶ್ವರ ನನ್ನು ಬ್ರಹ್ಮ, ತೃಣ ಮುಂತಾದ ಬೇರೆ ಬೇರೆ ವಸ್ತುಗಳಲ್ಲಿಯೂ–ಅವನ ಐಶ್ವರ್ಯ ಮುಂತಾದುದು ಸಮವಾಗಿರುವುದರಿಂದ–ಸಾಮ್ಯಭಾವದಿಂದ ನೋಡುತ್ತಾನೆ. ಆದುದರಿಂದ ಅವನು ಸಮದರ್ಶನ.

**ಆತ್ಮಾನಂ ಸರ್ವಭೂತೇಷು ಭಗವನ್ತಮವಸ್ಥಿತಮ್ ।**
**ಅಪಶ್ಯತ್ಸರ್ವಭೂತಾನಿ ಭಗವತ್ಯಪಿ ಚಾತ್ಮನಿ ।**
**ಸಮಂ ಸರ್ವೇಷು ಭೂತೇಷು ತಿಷ್ಠನ್ತಂ ಪರಮೇಶ್ವರಮ್ ॥**

(ಮ.ಭಾ.)

**ಓಂ ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥೩೦॥**

ಯಾವನು ನನ್ನನ್ನು ಎಲ್ಲ ಕಡೆಗಳಲ್ಲಿಯೂ ನೋಡುತ್ತಾನೆಯೋ ಮತ್ತು ನನ್ನಲ್ಲಿಯೇ ಎಲ್ಲವನ್ನೂ ನೋಡುತ್ತಾನೆಯೋ–ಅಂತಹವನಿಗೆ ನಾನು ಇಲ್ಲದೇ ಹೋಗುವುದಿಲ್ಲ. ಅವನು ನನಗೆ ಇಲ್ಲದೇ ಹೋಗುವುದಿಲ್ಲ.

* * *

(ನನ್ನನ್ನೇ ಎಲ್ಲೆಲ್ಲಿಯೂ ನೋಡಬೇಕು ಎನ್ನುತ್ತಾನೆ ಶ್ರೀಕೃಷ್ಣ. ಎಲ್ಲರ ಹೃದಯಗಳಲ್ಲಿಯೂ ಅವನೇ ಇರುವನೆಂಬುದು ನಿಶ್ಚಯ. ದುಷ್ಟರ ಹೃದಯ ಗಳಲ್ಲಿಯೂ ಇದ್ದಾನೆ. ಸತ್ಪುರುಷರ ಹೃದಯಗಳಲ್ಲಿಯೂ ಇದ್ದಾನೆ. **ಸರ್ವಂ ವಿಷ್ಣುಮಯಂ ಜಗತ್**–ಅವನಿಲ್ಲದ ಸ್ಥಳವೇ ಇಲ್ಲ. ಇದು ನಿಜ. ಪ್ರಹ್ಲಾದ ನನ್ನು ಉದ್ಧರಿಸಲು ಕಂಬದಲ್ಲಿಯೇ ಕಾಣಿಸಿಕೊಂಡನು. ಮತ್ಸ್ಯ-ಕೂರ್ಮ-ವರಾಹಾದಿ ಅವತಾರಗಳನ್ನು ಮಾಡಿ ದಯಾಮಯನಾದ ಪರಮಾತ್ಮನು 'ತಾನು ಚರಾಚರಪ್ರಾಣಿಗಳಲ್ಲೂ ಇರುವೆನು' ಎಂಬುದನ್ನು ವಿಶ್ವಕ್ಕೇ ತೋರಿಸಿದ್ದಾನೆ. ಆದರೆ ಸಾಮಾನ್ಯಜನರು 'ದೇವರು ಎಲ್ಲೆಲ್ಲಿಯೂ ಇದ್ದಾನೆ.' ಎಂದು ಮಾತಿಗೆ ಮೊದಲು ಹೇಳಿದರೂ ಸಹ ಅವರಿಗೆ ಕೃತಿಯಲ್ಲದು ಸಾಧ್ಯವೇ? ಯಾರೂ ಇಲ್ಲದ ಕಡೆ ಬಾಳೇಹಣ್ಣನ್ನು ತಿಂದುಬನ್ನಿರಿ–ಎಂದು ಗುರುಗಳು ಅಪ್ಪಣೆಕೊಡಿಸಿದ್ದಕ್ಕೆ ಕನಕದಾಸನೊಬ್ಬನು ಮಾತ್ರವೇ–'ಯಾರೂ ಇಲ್ಲದ ಸ್ಥಳವು ನನಗೆ ಸಿಕ್ಕಲಿಲ್ಲ'–ಎಂದು ಹಣ್ಣನ್ನು ತಿನ್ನದೆಯೇ ಗುರುಗಳ ಬಳಿಗೆ ಬಂದನಂತೆ. ಉಳಿದ ಶಿಷ್ಯರೆಲ್ಲರೂ ಸಂದಿ-ಗೊಂದಿಗಳಲ್ಲಿ ನಿಂತು ಬಾಳೇಹಣ್ಣನ್ನು ತಿಂದು ಬಂದರಂತೆ. ಕನಕದಾಸನೊಬ್ಬನಿಗೆ ಸರ್ವವೂ ವಿಷ್ಣು ಮಯವಾಗಿದೆ ಎಂಬ ಭಾವನೆಯು ಮೂಡಿತ್ತು. (ಈ ಭಾವನೆಯೇ ಎಲ್ಲರ ಲ್ಲಿಯೂ ಮೂಡಿಬಿಟ್ಟರೆ ಯಾವ ತಪ್ಪನ್ನೂ ಯಾರೂ ಮಾಡುವುದಕ್ಕೇ ಸಾಧ್ಯವಾಗುವುದಿಲ್ಲ.)

**ಸರ್ವಂ ಚ ಮಯಿ ಪಶ್ಯತಿ** = ಯಾರು ಪ್ರಪಂಚವನ್ನೇ ನನ್ನಲ್ಲಿ ನೋಡುವನೋ–ಎಂದರ್ಥ. ಪ್ರಪಂಚವೆಲ್ಲವೂ ಅವನಲ್ಲಿಯೇ ಇದೆ. ಅವನು ಸರ್ವತ್ರ ವ್ಯಾಪ್ತನಾಗಿದ್ದಾನೆ. ಯಾರು ತಂದೆ, ತಾಯಿ, ಬಂಧು, ಬಳಗ, ಸ್ನೇಹಿತ, ಸಕಲವೂ–ನಾನೇ ಎಂದು ಭಾವಿಸುವನೋ, ಅನನ್ಯಚಿಂತಕನಾಗಿರು

ವನೋ, ಅನನ್ಯಾವಲಂಬನೆಯಿಂದ ಇರುವನೋ, ನಾನೇ ಸರ್ವಸ್ವವೂ ಎಂದು ಭಾವಿಸುವನೋ–ಅಂತಹ ಯೋಗಿಗೆ ನಾನು ಕಾಣದೇ ಹೋಗುವುದಿಲ್ಲ. ನಾನು ಯಾವಾಗಲೂ ಅವನಲ್ಲಿಯೇ ಇದ್ದುಬಿಡುತ್ತೇನೆ. ಅವನು ನನಗೆ ಕಾಣದೇ ಹೋಗುವುದಿಲ್ಲ. ಯೋಗಿಯೂ ಕೂಡ ಒಂದು ನಿಮಿಷವೂ ನನ್ನನ್ನು ಕಾಣದೇ ಇರಲಾರ. ಒಬ್ಬನ್ನೊಬ್ಬರು ಅಗಲುವುದೇ ಇಲ್ಲ.

**ತಸ್ಯಾಹಂ ನ ಪ್ರಣಶ್ಯಾಮಿ** = ಅವನಿಗೆ ನಾನು ನಾಶಹೊಂದುವುದಿಲ್ಲ ಮತ್ತು ಅವನು ನನಗೆ ನಷ್ಟವಾಗುವುದಿಲ್ಲ. ಇಲ್ಲಿ ನಾಶಹೊಂದುವುದು ಎಂದರೆ ಧ್ವಂಸವಾಗುವುದು ಎಂದು ಅರ್ಥವಲ್ಲ. ಕಾಣಿಸಿಕೊಳ್ಳದಿರುವುದು ಎಂದು ಅರ್ಥ. ಹೀಗೆ ಜ್ಞಾನೀ ಮತ್ತು ಭಗವಂತ ಇಬ್ಬರೂ ಒಬ್ಬರಿಗೊಬ್ಬರು ಸದಾ ಕೂಡಿಯೇ ಇರುತ್ತಾರೆ ಮತ್ತು ಪರಸ್ಪರದರ್ಶನವಿಷಯರೂ ಆಗಿರುತ್ತಾರೆ. ಪರಸ್ಪರವಾಗಿ ತಮ್ಮ ಕರ್ತವ್ಯಗಳಲ್ಲೂ ಎಚ್ಚರದಿಂದಿರುತ್ತಾರೆ. ಅವರಿಗೆ–'ನನ್ನ ಪಾಲಿಗೆ ನೀನಿಲ್ಲ ; ನಿನ್ನ ಪಾಲಿಗೆ ನಾನಿಲ್ಲ'–ಎಂಬ ಪ್ರಶ್ನೆಯೇ ಎಂದಿಗೂ ಉದ್ಭವಿಸುವುದಿಲ್ಲ.

**ತಸ್ಯ ಚ ಮಮ ಚ ಏಕಾತ್ಮಕತ್ವಾತ್ ಸ್ವಾತ್ಮಾ ಹಿ ನಾಮ ಆತ್ಮನಃ ಪ್ರಕಾಶ ಏವ ಭವತಿ । ಯಸ್ಮಾಚ್ಚ ಅಹಮೇವ ಸರ್ವಾತ್ಮೈಕತ್ವದರ್ಶೀ ಇತ್ಯೇತತ್ ।**

ಅವನೂ ನಾನೂ ಒಂದೇ. ಏಕಸ್ವರೂಪರು. ತನ್ನ ಆತ್ಮನೆಂಬುವನು ತನಗೆ ತೋರಿಕೊಂಡೇ ಇರಬೇಕಲ್ಲವೇ? ಎಲ್ಲರ ಆತ್ಮನೂ ಒಬ್ಬನೇ ಎಂದು ತಿಳಿದುಕೊಂಡಿರುವವನು ನಾನೇ ಆಗಿರುತ್ತೇನೆ. ಆದುದರಿಂದಲೂ ನಾವು ಒಬ್ಬರಿಗೊಬ್ಬರು ಪರೋಕ್ಷವಾಗಿರುವುದಿಲ್ಲ. (ಶಂ.ಭಾ.)

ಹಿಂದಿನ ಶ್ಲೋಕದಲ್ಲಿ ಹೇಳಿರುವುದಕ್ಕಿಂತಲೂ ಹೆಚ್ಚು ಪರಿಪಕ್ವವಾದ ಯೋಗದೆಶೆಯನ್ನು ಹೊಂದಿ ನನ್ನ ಸಾಧರ್ಮ್ಯವನ್ನು ಹೊಂದಿದವನಾಗಿ ; **ನಿರಞ್ಜನಃ ಪರಮಂ ಸಾಮ್ಯಮುಪೈತಿ**–ಎಂದು ಹೇಳಿರುವಂತೆ ಪುಣ್ಯ-ಪಾಪ ಗಳನ್ನು ಕಳೆದುಕೊಂಡು, ಸ್ವಸ್ವರೂಪದಲ್ಲಿರುವ ಎಲ್ಲ ಆತ್ಮವಸ್ತುಗಳಲ್ಲಿಯೂ ನನ್ನ ಸಾಮ್ಯವನ್ನು ಯಾವನು ನೋಡುತ್ತಾನೆಯೋ ಮತ್ತು ಎಲ್ಲ ಆತ್ಮ ವಸ್ತುಗಳನ್ನೂ ನನ್ನಲ್ಲಿ ನೋಡುತ್ತಾನೆಯೋ, ಹೀಗೆ ಅನ್ಯೋನ್ಯಸಾಮ್ಯವನ್ನು ಕಾಣುವುದರಿಂದ ಮತ್ತೊಂದು ಹೀಗೆಯೇ ಇರುವುದು ಎಂದು ನೋಡು

ವನೋ–ಅಂತಹ ಯೋಗಿಗೆ ನಾನು ಕಣ್ಮರೆಯಾಗುವುದಿಲ್ಲ. ನನ್ನನ್ನು ನೋಡಿಕೊಳ್ಳುವಾಗ ನನಗೆ ಸಮನಾಗಿರುವ ಎಲ್ಲ ಆತ್ಮಗಳನ್ನೂ ನಾನು ನೋಡುವುದರಿಂದ ನನಗೂ ಅವನು ಕಣ್ಮರೆಯಾಗುವುದಿಲ್ಲ.

ನಾನು ಸರ್ವದಾ ಸರ್ವಸಾಕ್ಷಾತ್ಕಾರಿಯಾಗಿದ್ದರೂ ನನ್ನ ಸ್ವರೂಪಾನುಸಂಧಾನಮಾಡುವ ಅಂಶದಲ್ಲಿಯೂ ಅವನ ಸಾಮ್ಯವಿರುವುದರಿಂದ ಆ ಸ್ವರೂಪವನ್ನು ಅನುಸಂಧಾನಮಾಡಿದಂತೆಯೇ ಆಯಿತು. (ರಾ.ಭಾ.)

ಮೇಲಿನ ಶ್ಲೋಕದಲ್ಲಿ ಹೇಳಿದ ಧ್ಯಾನವಿಶೇಷದ ಫಲವನ್ನು ಈ ಶ್ಲೋಕದಲ್ಲಿ ಹೇಳಿದೆ. ಅವನಿಗೆ ನಾನು ನಷ್ಟವಾಗುವುದಿಲ್ಲ ಎಂದರೆ : ಸರ್ವದಾ ಅವನ ಯೋಗ-ಕ್ಷೇಮಗಳನ್ನು ವಹಿಸುತ್ತೇನೆ–ಎಂದು ಅರ್ಥ. ಅವನು ನನಗೆ ನಷ್ಟವಾಗುವುದಿಲ್ಲ ಎಂದರೆ : ಅವನು ಸದಾ ನನ್ನ ಭಕ್ತನಾಗಿರುತ್ತಾನೆ–ಎಂದು ಅಭಿಪ್ರಾಯ. ಸ್ವಾಮಿಯು ಇದ್ದರೂ ಅವನು ರಕ್ಷಣೆಮಾಡದಿದ್ದರೆ ಅವನು ಒಡೆಯನೇ ಅಲ್ಲ. ಹಾಗೆಯೇ ಸೇವಕನು ಇದ್ದರೂ ಅವನು ಸೇವೆಮಾಡದಿದ್ದರೆ ಅವನು ಸೇವಕನೇ ಅಲ್ಲ.) (ಮ.ಭಾ.)

**ಓಂ ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥೩೧॥**

ಯಾವನು ಎಲ್ಲ ಪ್ರಾಣಿಗಳಲ್ಲಿಯೂ ಇರುವ ನನ್ನನ್ನು ಒಬ್ಬನೇ ಎಂದು ಭಾವಿಸಿ ಆಶ್ರಯಿಸುತ್ತಾನೆಯೋ–ಅವನು ಹೇಗೆಯೇ ಇದ್ದರೂ ನನ್ನಲ್ಲಿ ಇದ್ದುಬಿಡುತ್ತಾನೆ.

* * *

(ಸರ್ವಪ್ರಾಣಿಗಳಲ್ಲಿಯೂ ನಾನೇ ಇದ್ದೇನೆ. ಸಾಮಾನ್ಯರು ಈ ಹಿನ್ನೆಲೆಯಿಂದ ನೋಡದೇ ಪ್ರಪಂಚವನ್ನು ಭಿನ್ನ-ಭಿನ್ನವಾಗಿ ಕಾಣುತ್ತಾರೆ. ಸಮುದ್ರದಲ್ಲಿರುವ ನೊರೆಯಾಗಲೀ, ಗುಳ್ಳೆಗಳಾಗಲೀ, ತರಂಗಗಳಾಗಲೀ, ನೀರಿನ ಕಣಗಳಾಗಲೀ–ಸಮುದ್ರದ ಅಂಶಗಳೆಂದು ಜನರು ಭಾವಿಸುವುದಿಲ್ಲ. ಅವುಗಳನ್ನು ಪ್ರತ್ಯೇಕ-ಪ್ರತ್ಯೇಕವಾಗಿ ವರ್ಣನೆಮಾಡುತ್ತಾರೆ. ಚಿನ್ನದಲ್ಲಿ ಅನೇಕವಿಗ್ರಹಗಳನ್ನು ಮಾಡುತ್ತಾರೆ. ಲಕ್ಷ್ಮೀನಾರಾಯಣರ ವಿಗ್ರಹಗಳನ್ನೂ ಮಾಡುತ್ತಾರೆ ; ಶಿವ-ಪಾರ್ವತಿಯರ ವಿಗ್ರಹಗಳನ್ನೂ ಮಾಡುತ್ತಾರೆ. ಆದರೆ ಜನರಲ್ಲಿ ಕೆಲವರಿಗೆ ಲಕ್ಷ್ಮೀನಾರಾಯಣರ ವಿಗ್ರಹದ ಮೇಲೆ ಮಮತೆ ; ಮತ್ತೆ

ಕೆಲವರಿಗೆ ಶಿವ-ಪಾರ್ವತಿಯರ ವಿಗ್ರಹದ ಮೇಲೆ ಮಮತೆ. ಲಕ್ಷ್ಮೀ ನಾರಾಯಣರ ಮತ್ತು ಶಿವ-ಪಾರ್ವತಿಯರ ವಿಗ್ರಹಗಳನ್ನು ತಾರತಮ್ಯ ವಿಲ್ಲದೆ ನೋಡತಕ್ಕವನು ಅಕ್ಕಸಾಲಿಗ. ಅವನಿಗೆ ಅದರಲ್ಲಿ ಚಿನ್ನವು ಮಾತ್ರವೇ ಎದ್ದುಕಾಣುತ್ತದೆ. ಅಜ್ಞಾನಿಗಳು ಭಿನ್ನ-ಭಿನ್ನ ಜೀವಿಗಳಲ್ಲಿ ಪರಮಾತ್ಮನ ಚೈತನ್ಯವು ಒಂದೇ ಇರುವುದು ಎಂಬುದನ್ನು ಗಮನಿಸುವುದಿಲ್ಲ. ಪರಮಾತ್ಮ ನಿಲ್ಲದೇ ಯಾವ ಚೇತನವೂ ಇರುವುದಿಲ್ಲ. ಎಲ್ಲ ಚೇತನಗಳ ಹಿಂದೆಯೂ ಒಬ್ಬನೇ ಪರಮಾತ್ಮನಿದ್ದಾನೆ. ಈ ಹಿನ್ನೆಲೆಯಲ್ಲಿ ಮನುಷ್ಯನು ಮನುಷ್ಯನನ್ನು ನೋಡುವುದಿಲ್ಲ. ತನ್ನಲ್ಲಿರುವಂತೆಯೇ ಮತ್ತೊಬ್ಬನಲ್ಲಿಯೂ ಪರಮಾತ್ಮ ನಿದ್ದಾನೆ–ಎಂಬುದನ್ನು ತಾರ್ಕಿಕವಾಗಿ ಒಪ್ಪಿಕೊಂಡರೂ ಸಹ ಕಾರ್ಯರೂಪಕ್ಕೆ ತರಲು ಸಾಮಾನ್ಯಮನುಷ್ಯನಿಂದ ಸಾಧ್ಯವಾಗುವುದಿಲ್ಲ. ಯೋಗಿಯಾದವನು ಮಾತ್ರ ಹಾಗೆ ಮಾಡಬಲ್ಲನು. ಅವನಿಗೆ ಸರ್ವವೂ ಬ್ರಹ್ಮಮಯವಾಗಿಯೇ ಕಾಣುತ್ತದೆ. ಸರ್ವವೂ ವಿಷ್ಣುಮಯವಾಗಿಯೇ ಕಾಣುತ್ತದೆ. ಸರ್ವರಲ್ಲಿಯೂ ಅವನು ಒಂದೇ ಪರಬ್ರಹ್ಮವಸ್ತುವನ್ನು ಅಥವಾ ಒಬ್ಬನೇ ಕೃಷ್ಣಪರಮಾತ್ಮನನ್ನು ನೋಡುತ್ತಾನೆ. ಯೋಗಿಯ ಪರಮೋಚ್ಚವಾದ ಅವಸ್ಥೆಯಿದು. **ಸರ್ವಥಾ ವರ್ತಮಾನೋऽಪಿ** = ಅವನು ಎಲ್ಲಿಯೇ ಇದ್ದರೂ, ಹೇಗೆಯೇ ಇದ್ದರೂ, ಏನೇ ಕಾರ್ಯಮಾಡುತ್ತಿದ್ದರೂ, ಅವನು ನನ್ನಲ್ಲಿಯೇ ಇರುತ್ತಾನೆ–ಎಂದು ಶ್ರೀಕೃಷ್ಣನು ಹೇಳುತ್ತಾನೆ. ಸರ್ವತ್ರ ಬ್ರಹ್ಮಭಾವವನ್ನು ಕಂಡವರಲ್ಲಿ ಅನೇಕರು ಅವಧೂತರಾಗಿಬಿಡುತ್ತಾರೆ. (ದತ್ತಾತ್ರೇಯನೇ ಮುಂತಾದವರು) ಕೆಲವರು ಪರಮಭಕ್ತಿಯಿಂದಿರುತ್ತಾ ತಮ್ಮ ನಿತ್ಯಜೀವನವನ್ನೂ ನಿರ್ವಹಿಸುತ್ತಾರೆ. (ತುಲಸೀದಾಸರು, ಕಬೀರರು, ಗೋರ ಮುಂತಾದವರು.) ಕೆಲವರು ತಮ್ಮ ವರ್ಣಾಶ್ರಮೋಕ್ತವಾದ ಕರ್ತವ್ಯಗಳನ್ನು ಮಾಡುತ್ತಲೇ ಇದ್ದುಬಿಡುತ್ತಾರೆ. (ಧರ್ಮವ್ಯಾಧನೇ ಮುಂತಾದವರು.) ಅವರು ಯಾವ ರೀತಿಯಲ್ಲೇ ಇದ್ದರೂ ಸಹ ಶ್ರೀಕೃಷ್ಣನಲ್ಲಿ ಸದಾ ಅವರಿಗೆ ನಿಷ್ಠೆಯಿದ್ದೇ ಇರುತ್ತದೆ.

ಅವರು ಯಾವುದೇ ವರ್ಣ, ಯಾವುದೇ ಆಶ್ರಮ ಅಥವಾ ಯಾವುದೇ ಸ್ಥಿತಿಯಲ್ಲಿದ್ದರೂ ಭಗವಂತನಲ್ಲಿ ಅವರ ಪ್ರತಿಷ್ಠೆಯು ಇದ್ದೇ ಇರುತ್ತದೆ.

ಸಮ್ಯಗ್ದರ್ಶನವುಳ್ಳ ಯೋಗಿಯು ಯಾವುದೇ ಪ್ರಕಾರದಲ್ಲಿದ್ದರೂ

ನನ್ನಲ್ಲಿ ಎಂದರೆ ವೈಷ್ಣವಪರಮಪದರೂಪವಾದ ನನ್ನಲ್ಲಿ ಇದ್ದೇ ಇರುತ್ತಾನೆ. ಅವರು ನಿತ್ಯಮುಕ್ತರೇ ಆಗಿರುವುದರಿಂದ ಅವರ ಮೋಕ್ಷವನ್ನು ಯಾರೂ ತಡೆಯಲಾರರು. (ಶಂ.ಭಾ.)

**ಸರ್ವಥಾ ವರ್ತಮಾನೋಽಪಿ** = ಸಮಾಧಿಯನ್ನು ಬಿಟ್ಟು ವ್ಯುತ್ಥಾನ ಕಾಲದಲ್ಲಿದ್ದರೂ, ಹೇಗೆ ಹೇಗೇ ಇದ್ದರೂ........

ಈ ಶ್ಲೋಕದಲ್ಲಿ ಯೋಗವಿಪಾಕದ ಇನ್ನೂ ಉತ್ತಮಸ್ಥಿತಿಯನ್ನು ಹೇಳಲಾಗಿದೆ.

ಏಕತ್ವವನ್ನು ಹೊಂದಿ ಎಂದರೆ ಎಲ್ಲೆಡೆಗಳಲ್ಲಿಯೂ ಒಬ್ಬನೇ ಈಶ್ವರನಿದ್ದಾನೆ ಎಂದು ತಿಳಿದಿರುವವನು ಇವನು. ಯಾವ ಪ್ರಕಾರದಲ್ಲಿದ್ದರೂ ನನ್ನಲ್ಲಿಯೇ ಇರುತ್ತಾನೆ. ಹೀಗೆ ಅಪರೋಕ್ಷವನ್ನು ನೋಡುತ್ತಿರುವ ಇವನಿಗೆ ಜ್ಞಾನಫಲವು (ಮೋಕ್ಷವು) ನಿಯತ. (ರಾ.ಭಾ.)

**ಸರ್ವಥಾ ವರ್ತಮಾನೋಽಪಿ** = ನ್ಯಾಯವಾದ ಅಥವಾ ಅನ್ಯಾಯವಾದ ರೀತಿಯಲ್ಲಿದ್ದರೂ, ಅಧರ್ಮಾಚರಣೆಯಲ್ಲಿದ್ದರೂ ಅವನಿಗೆ ಜ್ಞಾನಫಲವಾದ ಮೋಕ್ಷವು ತಪ್ಪುವುದಿಲ್ಲ. ಆದರೆ ಆನಂದಹ್ರಾಸವೇ ಮುಂತಾದುವು ಮಾತ್ರ ಆಗುತ್ತವೆ. ಆದರೂ ಅವನು ಸಾಮಾನ್ಯವಾಗಿ ಅಧರ್ಮವನ್ನು ಆಚರಿಸುವುದಿಲ್ಲ. ಹಾಗೆ ಮಾಡಿದರೂ ಅಲ್ಪವಾಗಿದ್ದರೆ ಭಸ್ಮವಾಗಿ ಹೋಗುತ್ತದೆ ; ಅದು ದೊಡ್ಡ ಅಧರ್ಮವಾಗಿದ್ದರೆ ದುಃಖಸೂಚಕವಾಗುತ್ತದೆ.

**ಕದಾಚಿದಪಿ ನಾಧರ್ಮೇ ಬುದ್ಧಿರ್ವಿಷ್ಣುದೃಶಾಂ ಭವೇತ್ ।**
**ಪ್ರಮಾದಾತ್ತು ಕೃತಂ ಪಾಪಂ ಸ್ವಲ್ಪಂ ಭಸ್ಮೀಭವಿಷ್ಯತಿ ॥**

**ಆದಿರಾಜೈಸ್ತಥಾ ದೇವೈಃ ಋಷಿಭಿಃ ಕ್ರಿಯತೇ ಕಿಯತ್ ।**
**ಬಾಹುಲ್ಯಾತ್ಕರ್ಮಣಸ್ತೇಷಾಂ ದುಃಖಸೂಚಕಮೇವ ತತ್ ॥**

ಪ್ರಾರಬ್ಧಕರ್ಮವು ಪ್ರಬಲವಾಗಿದ್ದು ಚಿತ್ತವಿಕ್ಷೇಪವೇ ಮುಂತಾದುವುಗಳಿಂದ ಒಮ್ಮೊಮ್ಮೆ ಜ್ಞಾನಿಗಳಾದವರಿಂದಲೂ ಅಧರ್ಮಾಚರಣೆಯುಂಟಾಗಬಹುದು. ಮೀನುಗಳ ಆಚರಣೆಯನ್ನು ನೋಡಿ ಸೌಭರಿಮಹರ್ಷಿಗಳಿಗೆ ಚಿತ್ತಕ್ಷೋಭೆಯುಂಟಾಯಿತು.) (ಮ.ಭಾ.)

**ಓಂ ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥**

ಅರ್ಜುನ! ಯಾವನು ಎಲ್ಲೆಲ್ಲಿಯೂ ಸುಖವನ್ನಾಗಲೀ ದುಃಖವನ್ನಾಗಲೀ ತನ್ನ ಸಾದೃಶ್ಯದಿಂದ ಸಮವಾಗಿ ಕಾಣುವನೋ–ಅವನೇ ಶ್ರೇಷ್ಠತಮನಾದ ಯೋಗೀ ಎಂದು ತಿಳಿಯಲ್ಪಡುತ್ತಾನೆ.

* * *

(ಮತ್ತೊಬ್ಬನ ಕಷ್ಟವನ್ನು ತನ್ನ ಕಷ್ಟವೆಂದು ಭಾವಿಸುವವನು, ಮತ್ತೊಬ್ಬನ ಸುಖವನ್ನು ತನ್ನ ಸುಖವೆಂದು ಭಾವಿಸುವವನು, ತನ್ನಂತೆಯೇ ಇತರರು ಎಂದು ಭಾವಿಸುವವನು–ಪರಮಯೋಗೀ ಎಂಬುದು ಶ್ರೀಕೃಷ್ಣನ ಅಭಿಪ್ರಾಯವಾಗಿದೆ. ಮನುಷ್ಯಸಾಮಾನ್ಯರಿಂದ ಈ ಆತ್ಮೌಪಮ್ಯವು ಸಾಧ್ಯ ವಾಗುವುದಿಲ್ಲ. ಏಕೆಂದರೆ : ಅವರು ಆತ್ಮ ಎಂದರೆ ದೇಹ ಎಂದು ಮಾತ್ರವೇ ತಿಳಿದಿರುತ್ತಾರೆ. ಚಿದ್ವಸ್ತುವನ್ನು ತಿಳಿದವರಾಗಿರುವುದಿಲ್ಲ. ಒಂದು ದೇಹಕ್ಕೂ ಮತ್ತೊಂದು ದೇಹಕ್ಕೂ ಭಿನ್ನತೆಯಿರುವುದು ಸ್ವಾಭಾವಿಕವಾಗಿಯೇ ಇದೆ. ಆದುದರಿಂದ ಆತ್ಮಜ್ಞಾನವಿಲ್ಲದವನಿಗೆ 'ನನ್ನಂತೆ ಇತರರು' ಎಂದು ಭಾವಿಸಿ ಕಾರ್ಯಮಾಡಲು ಶಕ್ಯವಿಲ್ಲ. ಆದರೆ ಹಾಗಿರಬೇಕೆಂಬುದು ನೀತಿ.

**ನ ತತ್ಪರಸ್ಯ ಸಂದಧ್ಯಾತ್ ಪ್ರತಿಕೂಲಂ ಯದಾತ್ಮನಃ ।**
**ಏಷ ಸಂಕ್ಷೇಪತೋ ಧರ್ಮಃ ಕಾಮಾದನ್ಯಃ ಪ್ರವರ್ತತೇ ॥೮॥**

ಅನುಶಾಸನಪರ್ವ-ಅಧ್ಯಾಯ-೧೧೩

ತನಗೆ ಯಾವುದು ಪ್ರತಿಕೂಲವಾಗಿ ಕಾಣುತ್ತದೆಯೋ ಅಂತಹ ಕಾರ್ಯವನ್ನು ಇತರರಿಗೂ ಒದಗಿಸಬಾರದು–ಎಂಬುದೇ ಸಂಕ್ಷೇಪವಾದ ಧರ್ಮ. ಮಿಕ್ಕುದೆಲ್ಲವೂ ಲೋಭಮೂಲವಾಗಿರುತ್ತದೆ.

**ಯದನ್ಯೈರ್ವಿಹಿತಂ ನೇಚ್ಛೇದಾತ್ಮನಃ ಕರ್ಮ ಪೂರುಷಃ ।**
**ನ ತತ್ಪರೇಷು ಕುರ್ವೀತ ಜಾನನ್ನಪ್ರಿಯಮಾತ್ಮನಃ ॥೧೯॥**

**ಜೀವಿತಂ ಯಃ ಸ್ವಯಂ ಚೇಚ್ಛೇತ್ಕಥಂ ಸೋಽನ್ಯಂ ಪ್ರಘಾತಯೇತ್ ।**
**ಯದ್ಯದಾತ್ಮನಿ ಚೇಷ್ಟೇತ ತತ್ಪರಸ್ಯಾಪಿ ಚಿನ್ತಯೇತ್ ॥೨೦॥**

ಶಾಂತಿಪರ್ವ-ಅಧ್ಯಾಯ-೨೫೮

ಯಾವಾಗ ಮನುಷ್ಯನು ಬೇರೆಯವರಿಂದ–ವಿಹಿತವಾದುದನ್ನು ಸದ್ವರ್ತನೆಯನ್ನು ಅಪೇಕ್ಷಿಸುತ್ತಾನೆಯೋ ಆಗ ತಾನೂ ಸಹ ಬೇರೆಯವರ

ವಿಷಯದಲ್ಲಿ ಸದ್ವರ್ತನೆಯಿಂದಲೇ ಇರಬೇಕು. ಯಾವುದು ತನಗೆ ಅಪ್ರಿಯವೆಂದು ತಿಳಿದಿದೆಯೋ ಅಥವಾ ಕೆಟ್ಟುದೆಂದು ತಿಳಿದಿರುವುದೋ ಇತರರಿಗೂ ಸಹ ಅದು ಕೆಟ್ಟುದೆಂದೇ ಭಾವಿಸಬೇಕು. ಬೇರೆಯವರಿಂದ ಅದನ್ನು ಮಾಡಿಸಹೋಗಬಾರದು.

ತಾನು ಜೀವಿಸಿರಬೇಕೆಂದು ಇಚ್ಛಿಸುವವನು ಪರರನ್ನು ಹೇಗೆ ತಾನೇ ಕೊಲ್ಲುವನು? ತನಗೆ ಬೇಕಾದುದೆಲ್ಲವೂ ಪರರಿಗೂ ಬೇಕಾಗುತ್ತದೆಯೆಂದು ತಿಳಿಯಬೇಕು.

**ತಸ್ಮಾದ್ಧರ್ಮಪ್ರಧಾನೇನ ಭವಿತವ್ಯಂ ಯತಾತ್ಮನಾ ।**
**ತಥಾ ಚ ಸರ್ವಭೂತೇಷು ವರ್ತಿತವ್ಯಂ ಯಥಾತ್ಮನಿ ॥೨೧॥**

ಇಂದ್ರಿಯಗಳನ್ನು ನಿಗ್ರಹಮಾಡಿ ಧರ್ಮಪ್ರಧಾನವಾದ ಜೀವನವನ್ನು ನಡೆಸಬೇಕು. ತನ್ನಂತೆಯೇ ಸರ್ವಪ್ರಾಣಿಗಳೂ–ಎಂದು ಭಾವಿಸಿ ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ನಡೆದುಕೊಳ್ಳಬೇಕು.

**ಯಾವಾನಾತ್ಮನಿ ವೇದಾತ್ಮಾ ತಾವಾನಾತ್ಮಾ ಪರಾತ್ಮನಿ ।**
**ಯ ಏವಂ ಸತತಂ ವೇದ ಸೋಽಮೃತತ್ವಾಯ ಕಲ್ಪತೇ ॥೨೨॥**

ಶಾಂತಿಪರ್ವ-ಅಧ್ಯಾಯ-೨೩೮

ನಮ್ಮ ಶರೀರದಲ್ಲಿ ಇರುವಷ್ಟು ಆತ್ಮವೇ ಪರರ ಶರೀರದಲ್ಲಿಯೂ ಇರುತ್ತದೆ ಎಂಬುದನ್ನು ಯಾವಾಗಲೂ ಅರಿತಿರುವವನೇ ಅಮೃತತ್ವವನ್ನು ಎಂದರೆ ಮೋಕ್ಷವನ್ನು ಹೊಂದಲು ಸಮರ್ಥನಾಗುತ್ತಾನೆ.

**ಆತ್ಮೋಪಮಸ್ತು ಭೂತೇಷು ಯೋ ವೈ ಭವತಿ ಪೂರುಷಃ ।**
**ನ್ಯಸ್ತದಣ್ಡೋ ಜಿತಕ್ರೋಧಃ ಸ ಪ್ರೇತ್ಯ ಸುಖಮೇಧತೇ ॥೬॥**

ಅನುಶಾಸನಪರ್ವ-ಅಧ್ಯಾಯ-೧೨೩

ಪ್ರಾಣಿಗಳ ವಿಷಯದಲ್ಲಿ ತನ್ನಂತೆಯೇ ಇತರರೂ ಎಂದು ಯಾವ ಪುರುಷನು ಭಾವಿಸುತ್ತಾನೆಯೋ ಆ ಪುರುಷನು ಇತರರನ್ನು ಶಿಕ್ಷಿಸುವುದನ್ನು ಬಿಟ್ಟು ಕ್ರೋಧವನ್ನು ಜಯಿಸಿ ಪರಲೋಕದಲ್ಲೂ ಸುಖವನ್ನು ಹೊಂದುತ್ತಾನೆ.

**ಪ್ರತ್ಯಾಖ್ಯಾನೇ ಚ ದಾನೇ ಚ ಸುಖದುಃಖೇ ಪ್ರಿಯಾಪ್ರಿಯೇ ।**
**ಆತ್ಮೌಪಮ್ಯೇವ ಪುರುಷಃ ಪ್ರಮಾಣಮಧಿಗಚ್ಛತಿ ॥೯॥**

**ಯಥಾಪರಃ ಪ್ರಕ್ರಮತೇ ಪರೇಷು**
**ತಥಾ ಪರೇ ಪ್ರಕ್ರಮನ್ತೇಽಪರಸ್ಮಿನ್ ।**
**ತಥೈವ ತೇಷೂಪಮಾ ಜೀವಲೋಕೇ**
**ಯಥಾ ಧರ್ಮೋ ನೈಪುಣೇನೋಪದಿಷ್ಟಃ ॥೧೦॥**

ಅನುಶಾಸನಪರ್ವ-ಅಧ್ಯಾಯ-೧೧೩

ಸುಖ-ದುಃಖ, ಪ್ರಿಯ-ಅಪ್ರಿಯ, ದಾನ-ನಿಷೇಧ ಈ ಎಲ್ಲ ವಿಷಯ ಗಳಲ್ಲಿ ಪ್ರತಿಯೊಬ್ಬನೂ ತನ್ನ ಆತ್ಮಕ್ಕೆ ಏನು ಅನಿಸುವುದೆಂಬುದನ್ನು ನೋಡಿ ಇತರರ ವಿಷಯದಲ್ಲಿಯೂ ಹಾಗೆಯೇ ನಡೆದುಕೊಳ್ಳಬೇಕು. ತಾನು ಪರ ರೊಡನೆ ನಡೆಯುವಂತೆಯೇ ಪರರು ತನ್ನೊಡನೆ ನಡೆಯುತ್ತಾರೆ. ಆದ ಕಾರಣ ಅದೇ ಉಪಮೆಯನ್ನು ತೆಗೆದುಕೊಂಡು ಈ ಜಗತ್ತಿನಲ್ಲಿ ಆತ್ಮೌಪಮ್ಯ ಬುದ್ಧಿಯಿಂದ ವರ್ತಿಸುವುದೇ ಬುದ್ಧಿವಂತರಿಂದ ಉಪದಿಷ್ಟವಾದ ಧರ್ಮವು ಎಂದು ಹೇಳಿದೆ.

ಹೀಗೆ ತನ್ನಂತೆ ಇನ್ನೊಬ್ಬರನ್ನು ಕಾಣಬೇಕೆಂಬ ನೀತಿಯನ್ನು ಅನೇಕ ಪ್ರಕಾರವಾಗಿ ಅನೇಕ ಕಡೆಗಳಲ್ಲಿ ಹೇಳಿದ್ದಾರೆ.

ಗೀತೆಯಲ್ಲಿ ಶ್ರೀಕೃಷ್ಣನು ಹೇಳಿರುವ ಗುಣಗಳು ಆದರ್ಶಪುರುಷನಾದ ಮಹಾಯೋಗಿಯಾದ ಶ್ರೀರಾಮಚಂದ್ರನಿಗೂ ಇದ್ದುವು.

**ವ್ಯಸನೇಷು ಮನುಷ್ಯಾಣಾಂ ಭೃಶಂ ಭವತಿ ದುಃಖಿತಃ ।**
**ಉತ್ಸವೇಷು ಚ ಸರ್ವೇಷು ಪಿತೇವ ಪರಿತುಷ್ಯತಿ ॥೪೧॥**

ಅಯೋಧ್ಯಾ-೩ನೆಯ ಸರ್ಗ

'ತನ್ನ ಪ್ರಜೆಗಳಲ್ಲಿ ಯಾವೊಬ್ಬನಾದರೂ ಯಾವುದಾದರೂ ಕಾರಣ ದಿಂದ ದುಃಖಿಸುತ್ತಿದ್ದರೆ ಅದನ್ನು ಕಂಡು ಶ್ರೀರಾಮನು ಅವನಿಗೊದಗಿದ ದುಃಖವನ್ನು ಮನಗಂಡು ತನಗೇ ಆ ದುಃಖವು ಒದಗಿತೆಂದು ಭಾವಿಸಿಕೊಂಡು ಸಂಕಟಪಡುತ್ತಾನೆ. ತನ್ನ ಪ್ರಜೆಗಳ ಮನೆಯಲ್ಲಿ ನಡೆಯುವ ಉತ್ಸವ ಸಮಾರಂಭಗಳಲ್ಲಿ ಭಾಗವಹಿಸುತ್ತಾನೆ. ತಂದೆಯಾದವನು ತನ್ನ ಮನೆ ಯಲ್ಲಾಗುವ ತನ್ನ ಮಕ್ಕಳ ವಿವಾಹೋಪನಯನಾದಿ ಉತ್ಸವಸಮಾರಂಭ ಗಳಲ್ಲಿ ಸಂತೋಷಪಡುವಂತೆ ರಾಮನೂ ಸಹ ಸಂತೋಷಪಡುತ್ತಾನೆ'– ಎಂಬ ಶ್ರೀರಾಮಚಂದ್ರನ ವರ್ಣನೆಯೂ ಇದಕ್ಕೆ ಅನುಗುಣವಾಗಿದೆ.

ಯೋಗಿಯನ್ನು ಪರೀಕ್ಷಿಸಬೇಕಾದರೆ ಇದೇ ಒಂದು ಒರೆಗಲ್ಲು. ಅವನ ಹೃದಯವು ವಿಶಾಲವಾಗಿದೆಯೆಂಬುದಕ್ಕೆ ಕುರುಹು. ದೀಪದ ಸಮೀಪಕ್ಕೆ ಹೋದಂತೆ ಬೆಳಕು ಹೆಚ್ಚಾಗುತ್ತದೆ. ಹಾಗೆಯೇ ಪರಮಾತ್ಮನನ್ನು ಸಮೀಪಿಸಿ ದಂತೆ ಹೃದಯವು ವಿಶಾಲವಾಗುತ್ತಾ ಹೋಗುತ್ತದೆ. ನಾನು-ಅವನು ಎಂಬ ಭೇದಭಾವವು ಅಳಿಸಿಹೋಗುತ್ತದೆ.

ಸುಖ-ದುಃಖಗಳು ಹೇಗೆ ತನಗೆ ಅನುಕೂಲ-ಪ್ರತಿಕೂಲಗಳೋ ಹಾಗೆಯೇ ಇತರರಿಗೂ–ಎಂದು ಎಲ್ಲ ಭೂತಗಳನ್ನೂ ಸಮನಾಗಿ ಕಾಣು ತ್ತಾನೆ.

ಯಾರಿಗೂ ಪ್ರತಿಕೂಲವನ್ನೂ ಹಿಂಸೆಯನ್ನೂ ಮಾಡುವುದಿಲ್ಲ. ಹೀಗೆ ಅಹಿಂಸಕನಾಗಿ ಸಮ್ಯಗ್ದರ್ಶನನಿಷ್ಠನಾಗಿರುವ ಯೋಗಿಯು ಎಲ್ಲ ಯೋಗಿ ಗಳಲ್ಲಿಯೂ ಉತ್ಕೃಷ್ಟನಾದವನು. (ಶಂ.ಭಾ.)

ಇಲ್ಲಿ ಯೋಗದ ಪರಾಕಾಷ್ಠೆಯನ್ನು ಹೇಳಿದೆ. ತನ್ನ ಆತ್ಮ ಮತ್ತು ಇತರರ ಆತ್ಮಗಳು ಅಸಂಕುಚಿತವಾದ ಜ್ಞಾನೈಕಾಕಾರವಾಗಿವೆ–ಎಂಬ ಸಾದೃಶ್ಯದಿಂದ ಯಾವನು ತನ್ನ ಆತ್ಮನಲ್ಲಿ ಮತ್ತು ಇತರರಲ್ಲಿ ಇರುವ ಸುಖ-ದುಃಖಗಳನ್ನೂ ಎರಡೂ (ತನ್ನದೂ ಮತ್ತು ಇತರರದು) 'ಪ್ರಕೃತಿಸಂಬಂಧವಾದುದು ಆತ್ಮಸಂಬಂಧವಲ್ಲ' ಎಂದು ಸಾಮ್ಯದಿಂದ ನೋಡುವನೋ ಅವನೇ ಉತ್ಕೃಷ್ಟತಮನಾದ ಯೋಗಿ. ಅವನು ತನ್ನ ಪುತ್ರಜನ್ಮ-ಮರಣಾದಿ ಸುಖ-ದುಃಖಗಳನ್ನು ಇತರರ ಪುತ್ರಜನ್ಮ-ಮರಣಾದಿಗಳಂತೆ ಕಾಣುತ್ತಾನೆ.

ಇತರರ ಪುತ್ರಜನ್ಮ ಮುಂತಾದುವುಗಳಿಗೂ–ತನ್ನ ಆತ್ಮಕ್ಕೂ, ತನ್ನ ಪುತ್ರನ ಜನನಾದಿಗಳಿಗೂ-ಇತರರಿಗೂ ಹೇಗೆ ಸಂಬಂಧವಿಲ್ಲವೋ ಹಾಗೆಯೇ ತನ್ನ ಆತ್ಮದಲ್ಲಿಯೂ ಅವರೊಡನೆ ಸಂಬಂಧವನ್ನು ಇಟ್ಟುಕೊಳ್ಳುವುದಿಲ್ಲ. ಇವನು ಅಷ್ಟು ನಿರ್ಲಿಪ್ತನಾಗಿರುತ್ತಾನೆ.

ಯಾವ ಸುಖ-ದುಃಖಾದಿಗಳೂ ಇವನನ್ನು ಅಂಟುವುದಿಲ್ಲ. ಇದು ಜೀವಾತ್ಮಯೋಗದ ಪರಾಕಾಷ್ಠೆ. ಪರಮಾತ್ಮಯೋಗದ ವಿಷಯವನ್ನು ಮುಂದೆ ಶ್ರೀಕೃಷ್ಣನು ಹೇಳುತ್ತಾನೆ. (ರಾ.ಭಾ.)

ಸಾಮ್ಯವನ್ನು ಮತ್ತೊಂದು ರೀತಿಯಲ್ಲಿ ಇಲ್ಲಿ ಭಗವಂತನು ವಿವರಿಸು ತ್ತಾನೆ. ಭಗವದ್ಭಕ್ತರ ಪರವಾಗಿಯೂ ಇಲ್ಲಿ ಸಾಮ್ಯವನ್ನು ಹೇಳುತ್ತಾನೆ.

ಯಾವನು ಎಲ್ಲ ಭಗವದ್ಭಕ್ತರಲ್ಲಿಯೂ ಸುಖವನ್ನಾಗಲೀ, ದುಃಖವನ್ನಾಗಲೀ ಕಂಡಾಗ ಅದನ್ನು ತನ್ನ ಸಾದೃಶ್ಯದಿಂದ ಕಾಣುತ್ತಾನೆಯೋ ಎಂದರೆ ಅವರ ದುಃಖ ಮುಂತಾದುವುಗಳನ್ನು ತನ್ನ ದುಃಖ ಎಂದು ತಿಳಿಯುತ್ತಾನೆಯೋ ಅವನೇ ಶ್ರೇಷ್ಠನಾದ ಯೋಗೀ ಎಂದು ತಿಳಿಯಬೇಕು.)" (ಮ.ಭಾ.)

**ಅರ್ಜುನ ಉವಾಚ :**

**ಓಂ ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ ।**
**ಏತಸ್ಯಾಹಂ ನ ಪಶ್ಯಾಮಿ ಚಞ್ಚಲತ್ವಾತ್ ಸ್ಥಿತಿಂ ಸ್ಥಿರಾಮ್ ॥೩೩॥**

**ಅರ್ಜುನನು ಹೇಳುತ್ತಾನೆ :**

"ಮಧುಸೂದನ! ಮನಸ್ಸು ಚಂಚಲ. ಆದುದರಿಂದ ನೀನು ಸಾಮ್ಯಭಾವದಿಂದ ಯಾವ ಯೋಗವನ್ನು ಹೇಳಿದೆಯೋ ಅದರ ಅಚಲವಾದ ಸ್ಥಿತಿಯನ್ನು ನಾನು ಕಾಣುತ್ತಿಲ್ಲ.

* * *

(ಇಲ್ಲಿಯವರೆಗೂ ಶ್ರೀಕೃಷ್ಣನು ಸಾಮ್ಯದರ್ಶನಯೋಗವನ್ನು ಚೆನ್ನಾಗಿ ಪ್ರತಿಪಾದಿಸಿದ್ದಾನೆ. ಎಲ್ಲದರಲ್ಲೂ ಏಕರೂಪವಾಗಿ ಸಮವಾಗಿರುವ ಬ್ರಹ್ಮ ವುಂಟು. ಎಲ್ಲವೂ ಬ್ರಹ್ಮಾತ್ಮಕ. ಎಲ್ಲದರಲ್ಲಿಯೂ ಆ ಸಮವಸ್ತುವನ್ನು ನೋಡಬೇಕು. ಈ ಕಾರಣದಿಂದ ಎಲ್ಲದರ ಸುಖ-ದುಃಖಗಳಲ್ಲಿಯೂ ಆತ್ಮೌ ಪಮ್ಯದಿಂದ ಸಾಮ್ಯವನ್ನು ಕಾಣಬೇಕು–ಎಂದು ಬಗೆ-ಬಗೆಯಾಗಿ ನಿರೂಪಿಸಿ ದ್ದಾನೆ. ಈ ಬ್ರಹ್ಮರೂಪವಾದ ಸಾಮ್ಯವನ್ನು ಸಮಾಧಿಯಲ್ಲಿಯೇ ಅನುಭವಿ ಸಲು ಸಾಧ್ಯ. ಆದರೆ ಮನಸ್ಸು ಸ್ವಭಾವತಃ ಚಂಚಲ. ಆದುದರಿಂದ ಯೋಗದ ಆ ಅಚಲಸ್ಥಿತಿಯು ಉಂಟಾಗುತ್ತಿಲ್ಲ. ಅದನ್ನು ಪಡೆಯುವುದು ಹೇಗೆ? ಎಂದು ಅರ್ಜುನನ ಭಾವ.

'ಮೇಲೆ ಹೇಳಿದ ಸಮ್ಯಗ್ದರ್ಶನರೂಪವಾದ ಯೋಗವನ್ನು ಸಂಪಾದಿಸು ವುದು ಅತಿಕಷ್ಟ. ಅದನ್ನು ಪಡೆಯಲು ನಿಶ್ಚಿತವಾದ ಉಪಾಯವು ಯಾವುದು?' ಎಂದು ಕೇಳುವ ಇಷ್ಟದಿಂದ ಅರ್ಜುನನು ಇದನ್ನು ಹೇಳುತ್ತಾನೆ.

(ಶಂ.ಭಾ.)

**ಸಾಮ್ಯೇನ ಯೋ ಯೋಗಃ ಪ್ರೋಕ್ತಃ** = ಎಲ್ಲ ಆತ್ಮಗಳಲ್ಲಿಯೂ

ಸಾಮ್ಯವನ್ನು ಹೇಳಿರುವೆ. ಜ್ಞಾನೈಕಾಕಾರವಾಗಿರುವುದರಿಂದ ಎಲ್ಲ ಆತ್ಮಗಳಿಗೂ ಪರಸ್ಪರ ಸಾಮ್ಯ ಮತ್ತು ಸ್ವರೂಪತಃ ಕರ್ಮಾಧೀನತೆ ಇರುವುದಿಲ್ಲ ಎಂಬ ಕಾರಣದಿಂದ ಈಶ್ವರಸಾಮ್ಯ–ಹೀಗೆ ಸಮದರ್ಶನರೂಪವಾದ ಯೋಗವನ್ನು ಹೇಳಿರುವೆ. ಆದರೆ ಮನಸ್ಸು ಚಂಚಲವಾದುದರಿಂದ ಅದರ ಸ್ಥಿರವಾದ ಸ್ಥಿತಿಯು ನನಗೆ ತಿಳಿಯುತ್ತಿಲ್ಲ. (ರಾ.ಭಾ.)

ಏತಸ್ಯ ಎಂಬ ಪದವು ಸಾಮ್ಯಕ್ಕೆ ಅನ್ವಯಿಸುವುದಿಲ್ಲ. ಯೋಗಕ್ಕೆ ಅನ್ವಯಿಸುತ್ತದೆ. ಮನಸ್ಸು ಚಂಚಲವಾಗಿರುವುದರಿಂದ ಯೋಗದ ಸ್ಥಿರವಾದ ಸ್ಥಿತಿಯು ನನಗೆ ಉಂಟಾಗುತ್ತಿಲ್ಲ ಎಂದು ಅರ್ಜುನನ ಆಶಯ.)

(ಮ.ಭಾ.)

**ಓಂ ಚಞ್ಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥೩೪॥**

ಕೃಷ್ಣ! ಮನಸ್ಸು ಬಹಳ ಚಂಚಲವಾದುದು. ಕಡೆದು ಹಾಕುವ ಸ್ವಭಾವವುಳ್ಳದ್ದು. ಬಲವಾದುದು ಮತ್ತು ದೃಢವಾದುದು. ಇದನ್ನು ನಿಗ್ರಹಿಸುವುದು ವಾಯುವನ್ನು ನಿಗ್ರಹಿಸುವಂತೆ ಬಹಳ ಕಷ್ಟಸಾಧ್ಯವೆಂದು ನಾನು ತಿಳಿಯುತ್ತೇನೆ."

* * *

**ಭಕ್ತಜನಪಾಪಾದಿ ದೋಷಾಕರ್ಷಣಾತ್ ಕೃಷ್ಣಃ ।**

(ಕೃಷ್ಣ–ವಿಲೇಖನೇ ಎಂಬ ಅರ್ಥದಲ್ಲಿರುವ ಕೃಷ್ ಧಾತುವಿನಿಂದ ಈ ಪದವಾಗಿದೆ. ಭಕ್ತಜನರ ಪಾಪಾದಿ ದೋಷಗಳನ್ನು ಆಕರ್ಷಣೆಮಾಡುವುದರಿಂದ ಭಗವಂತನಿಗೆ ಕೃಷ್ಣ ಎಂದು ಹೆಸರು.

ಅರ್ಜುನನು ಈ ಶ್ಲೋಕದಲ್ಲಿ ಮನಸ್ಸಿನ ಚಂಚಲಸ್ವಭಾವವನ್ನು ವರ್ಣಿಸುತ್ತಾನೆ. ಮನಸ್ಸು ಚಂಚಲವೆಂಬುದು ಪ್ರಸಿದ್ಧವಿಷಯವೇ ಆಗಿದೆ. ಆದರೂ ಸಾಮಾನ್ಯವಾಗಿ ನಾವು ಇದನ್ನು ಗಮನಿಸುತ್ತಿಲ್ಲ. ನಾವು ಮನಸ್ಸಿನ ಜೊತೆಯಲ್ಲಿಯೇ–ಮನಸ್ಸು ಹೇಳಿದಂತೆಯೇ ಕೇಳಿಕೊಂಡು ಮುನ್ನಡೆಯುತ್ತಿರುವುದರಿಂದ ನಮಗೆ ಅದರ ಪ್ರಾಬಲ್ಯವೇನೆಂಬುದನ್ನು ಮನಗಾಣಲು ಸಾಧ್ಯವಾಗಿಲ್ಲ. ಮನಸ್ಸನ್ನು ಸ್ವಲ್ಪ ನಿರೋಧಿಸಲು ಪ್ರಯತ್ನಿಸಿದರೆ ಮನಸ್ಸಿಗೆ ಎಷ್ಟು ಬಲವಿದೆಯೆಂಬುದರ ಅರಿವಾಗುವುದು. 'ಚಞ್ಚಲಂ ಹಿ ಮನಃ

ಕೃಷ್ಣ' ಎನ್ನುತ್ತಾನೆ ಅರ್ಜುನ. ಚಂಚಲ ಎಂದರೆ ಯಾವಾಗಲೂ ನಿಂತಲ್ಲಿ ನಿಲ್ಲದೇ ಚಲಿಸುತ್ತಲೇ ಇರುವುದು. ಸಾಮಾನ್ಯವಾಗಿ ಮನಸ್ಸನ್ನು ಕಪಿಗೆ ಹೋಲಿಸುತ್ತಾರೆ. ಕಪಿಯು ಒಂದು ಕ್ಷಣವಾದರೂ ನಿಂತಕಡೆ ನಿಲ್ಲುವುದಿಲ್ಲ. ಈ ಕೊಂಬೆಯಿಂದ ಆ ಕೊಂಬೆಗೆ–ಆ ಕೊಂಬೆಯಿಂದ ಈ ಕೊಂಬೆಗೆ ಹಾರುತ್ತಲೇ ಇರುತ್ತದೆ. ಕಪಿಗೆ ಶಾಖಾಮೃಗವೆಂಬ ಅನ್ವರ್ಥನಾಮವೂ ಇದೆ. ಕಪಿಯಂತಹ ಚಂಚಲಮನಸ್ಸನ್ನು ಬಿಗಿಹಿಡಿದು ಏಕಾಗ್ರತೆಯನ್ನು ಸಾಧಿಸಬೇಕೆಂದು ಪ್ರಯತ್ನಿಸುವಾಗ ಅದು ಮತ್ತಷ್ಟು ಚಂಚಲವಾಗುವುದು. ಪ್ರಮಾಥಿ ಎನ್ನುತ್ತಾನೆ ಅರ್ಜುನ. ಮಥನ ಎಂದರೆ ಕಡೆಯುವುದು, ಮೊಸರನ್ನು ಕಡೆಯುವ ಹಾಗೆ. ಪ್ರಮಥನ ಎಂದರೆ ವೇಗವಾಗಿ ಕಡೆಯುವುದು. ಈ ಮನಸ್ಸು ಇಂದ್ರಿಯಗಳನ್ನೂ ದೇಹವನ್ನೂ ಸಮಯಗಳಲ್ಲಿ ವೇಗವಾಗಿ ಕಡೆದುಬಿಡುತ್ತದೆ. ಮನಸ್ಸಿಗೇನಾದರೂ ಘಾಸಿಯಾಯಿತೆಂದರೆ ಮುಖವು ಕೆಂಪಾಗುತ್ತದೆ. ಹುಬ್ಬು ಗಂಟಿಕ್ಕುತ್ತದೆ. ರಕ್ತವು ಕುದಿದು ಶರೀರದ ಶಾಖವು ಒಮ್ಮೆಲೇ ಏರಿಬಿಡುತ್ತದೆ. ಕಣ್ಣು ಕೆಂಪಾಗುತ್ತದೆ. ಈ ಕ್ರಿಯೆಗಳೆಲ್ಲಕ್ಕೂ ಮನಸ್ಸೇ ಕಾರಣವಾಗಿರುತ್ತದೆ. 'ಇಂದು ನನ್ನ ಮನಸ್ಸು ಕದಡಿಹೋಗಿದೆ' ಎನ್ನುತ್ತೇವೆ. ಇದಕ್ಕೆ ಮನಸ್ಸು ದೇಹವನ್ನು ಅಥವಾ ಇಂದ್ರಿಯಗಳನ್ನು ಕಲಕಿಬಿಟ್ಟಿದೆ ಎಂದರ್ಥ.

**ಬಲವತ್** = ಮಹಾಬಲಿಷ್ಠವಾದುದು. ಇಂದ್ರಿಯಗಳನ್ನೂ ದೇಹವನ್ನೂ ಕೆರಳಿಸುತ್ತಲೇ ಇರುತ್ತದೆ. ಮನಸ್ಸನ್ನು ಮದಿಸಿದ ಆನೆಗೆ ಹೋಲಿಸಬಹುದಾಗಿದೆ. ನಿಪುಣನಾದ ಮಾವಟಿಗನು ಎಷ್ಟೇ ಧೈರ್ಯದಿಂದ ಮತ್ತು ಚಾತುರ್ಯದಿಂದ ಅದರ ಮೇಲೆ ಕುಳಿತು ಅಂಕುಶಪ್ರಹಾರಮಾಡುತ್ತಿದ್ದರೂ ಸಹ ಅದು ಮಾವಟಿಗನ ನಿರ್ದೇಶವನ್ನು ಮೀರಿಹೋಗುತ್ತಲೇ ಇರುತ್ತದೆ. ಅದರಂತೆ ವಿವೇಕಿಯಾದವನು ಶಾಸ್ತ್ರಾರ್ಥಗಳನ್ನು ತಿಳಿದಿರುವವನು ಮನಸ್ಸನ್ನು ವಿವೇಕವೆಂಬ ಅಂಕುಶದಿಂದ ಪದೇ ಪದೇ ಪ್ರಹರಿಸುತ್ತಿದ್ದರೂ ಸಹ ಆ ಮನಸ್ಸು ಕೆಲವೊಮ್ಮೆ ಅವನ ಹಿಡಿತಕ್ಕೆ ಸಿಕ್ಕದೆ ತಪ್ಪಿಸಿಕೊಂಡು ವಿವೇಕಿಯನ್ನೂ ಸಹ ಅವಿವೇಕಿಯನ್ನಾಗಿ ಮಾಡಿಬಿಡುತ್ತದೆ. ಮನಸ್ಸು ಎಂದರೆ ಅಷ್ಟು ಬಲಿಷ್ಠವಾದುದು.

**ದೃಢಂ** = ದೃಢವಾದುದು. ಇದನ್ನು ಕತ್ತರಿಸಲು ಸಾಧ್ಯವಾಗುವು

ದಿಲ್ಲ. ನಿರ್ಮನಸ್ಕನಾಗಲು ಸಾಧ್ಯವಿಲ್ಲ. ಇದು ವಿಷಯಗಳ ಕಡೆಗಾದರೂ ಹೋಗಬೇಕು. ಆತ್ಮನ ಕಡೆಗಾದರೂ ಹೋಗಬೇಕು. ಆತ್ಮನಲ್ಲಿ ಮನಸ್ಸನ್ನು ಲೀನಗೊಳಿಸಬಹುದೇ ಹೊರತು ಮನಸ್ಸನ್ನೇ ಕತ್ತರಿಸಲು ಅಥವಾ ತೆಗೆದು ಹಾಕಲು ಸಾಧ್ಯವಿಲ್ಲ. ಉಡದಂತೆ ವಿಷಯವಸ್ತುವಿನಿಂದ ಕಿತ್ತರೂ ಹೊರಕ್ಕೆ ಬರುವುದಿಲ್ಲ. ಕೀಳಲು ಪ್ರಯತ್ನಿಸಿದಷ್ಟೂ ಅದು ವಿಷಯವಸ್ತುಗಳಲ್ಲಿಯೇ ದೃಢವಾಗಿ ಅಂಟಿಕೊಳ್ಳುತ್ತದೆ. ಕಡೆಯದಾಗಿ ಅರ್ಜುನನು ಹೇಳುತ್ತಾನೆ. **ವಾಯೋರಿವ ಸುದುಷ್ಕರಮ್** = ಬೀಸುವುದು ಗಾಳಿಯ ಸ್ವಭಾವ. ವಾತೀತಿ ವಾಯುಃ ಅದನ್ನು ತಡೆಯುವುದು ಎಷ್ಟು ಕಷ್ಟವೋ ಮನಸ್ಸನ್ನು ತಡೆಯುವುದೂ ಅಷ್ಟೇ ಕಷ್ಟ.

ಮನಸ್ಸು ಅತ್ಯಂತದೃಢ, ಅಚ್ಛೇದ್ಯ, ತಂತುನಾಗವೆಂಬ ಜಲಚರ ಪ್ರಾಣಿಯಂತೆ. (ಶಂ.ಭಾ.)

ನನಗೆ ಮನೋನಿಗ್ರಹೋಪಾಯವನ್ನು ನೀನು ಅನುಗ್ರಹಿಸಬೇಕು. ಮನಸ್ಸು ಅತ್ಯಂತಚಂಚಲವಾದುದು. ತನಗೆ ಅಭ್ಯಾಸವಾಗಿರುವ ವಿಷಯ ಗಳಲ್ಲಿಯೂ ಕೂಡ ಅದನ್ನು ತಡೆದು ನಿಲ್ಲಿಸುವುದು ಅಸಾಧ್ಯ. ಹೀಗಿರುವಾಗ ಹಿಂದೆ ಅಭ್ಯಾಸಮಾಡದೇ ಇರುವ ವಿಷಯದಲ್ಲಿ ಅದನ್ನು ಸ್ಥಾಪಿಸುವುದು ಅತಿಕಷ್ಟ. ಪ್ರತಿಕೂಲಗತಿಯುಳ್ಳ ಮಹಾವಾತವನ್ನು ಬೀಸಣಿಗೆಯಿಂದ ನಿಗ್ರಹಿಸುವಂತೆ ಅದು ಅತಿಕಷ್ಟಸಾಧ್ಯ. (ರಾ.ಭಾ.)

ಅಭ್ಯಾಸ, ವೈರಾಗ್ಯ ಮುಂತಾದುವುಗಳಿಲ್ಲದೇ ಯೋಗದ ಸ್ಥಿರತೆಯನ್ನು ಪಡೆಯುವುದು ಕಷ್ಟ. ಮನಸ್ಸು ಚಂಚಲಸ್ವಭಾವವುಳ್ಳದ್ದು ಎನ್ನುವುದಕ್ಕೆ ಮತ್ತೊಂದು ಪ್ರಮಾಣವಾಕ್ಯ.

**ಮನಸಶ್ಚಞ್ಚಲತ್ವಾದ್ಧಿ ಸ್ಥಿತಿರ್ಯೋಗಸ್ಯ ವೈ ಸ್ಥಿರಾ ।**
**ವಿನಾಭ್ಯಾಸಾನ್ನ ಶಕ್ಯಾ ಸ್ಯಾತ್ ವೈರಾಗ್ಯಾದ್ವಾ ನ ಸಂಶಯಃ ॥**

(ಮ.ಭಾ.)

ಶ್ರೀಭಗವಾನುವಾಚ :

**ಓಂ ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।**
**ಅಭ್ಯಾಸೇನ ತು ಕೌನ್ತೇಯ ವೈರಾಗ್ಯೇಣ ಚ ಗೃಹ್ಯತೇ ॥೩೫॥**

ಭಗವಂತನು ಹೇಳುತ್ತಾನೆ :

ಮಹಾಬಾಹುವೇ! ಮನಸ್ಸು ನಿಗ್ರಹಿಸುವುದಕ್ಕೆ ಕಷ್ಟವೆಂಬುದರಲ್ಲಿಯೂ ಅದು ಚಂಚಲವೆಂಬುದರಲ್ಲಿಯೂ ಸಂಶಯವೇ ಇಲ್ಲ. ಆದರೆ ಕೌಂತೇಯ! ಅಭ್ಯಾಸದಿಂದಲೂ ಮತ್ತು ವೈರಾಗ್ಯದಿಂದಲೂ ಅದು ಹಿಡಿತಕ್ಕೆ ಸಿಕ್ಕುತ್ತದೆ.

* * *

(ಶ್ರೀಕೃಷ್ಣನು, ಅರ್ಜುನನು ಹೇಳಿದುದನ್ನು ಇಲ್ಲವೆನ್ನುವುದಿಲ್ಲ. 'ಮನಸ್ಸು ಚಂಚಲವೆಂದು ನೀನು ಹೇಳಿದ್ದರಲ್ಲಿ ಸಂಶಯವೇ ಇಲ್ಲ' ಎನ್ನುತ್ತಾನೆ. 'ಆದರೆ ಅದರಿಂದ ನಿರಾಶನಾಗಬೇಕಾಗಿಲ್ಲ. ಮನಸ್ಸು ದುರ್ನಿಗ್ರಹವೇ ಹೊರತು ನಿಗ್ರಹಕ್ಕೆ ಆಗದುದೇನೂ ಅಲ್ಲ. ಅಭ್ಯಾಸ ಮತ್ತು ವೈರಾಗ್ಯ ಈ ಎರಡರಿಂದ ಮನಸ್ಸನ್ನು ಸ್ವಾಧೀನಕ್ಕೆ ತೆಗೆದುಕೊಳ್ಳಬಹುದು. ಅಭ್ಯಾಸ ಎಂದರೆ ಪುನರಾವೃತ್ತಿ; ಮಾಡಿದುದನ್ನು ಮತ್ತೆ ಮಾಡುವುದು. ಉದಾಹರಣೆಗೆ ವೇದಾಭ್ಯಾಸ : ವೇದಪಾಠವನ್ನು ಕಂಠಗತವಾಗುವಂತೆ ಪುನರಾವೃತ್ತಿ ಮಾಡುತ್ತಲೇ ಇರುವುದು. ವಿದ್ಯಾಭ್ಯಾಸ : ವಿದ್ಯೆಯನ್ನು ಹೃದ್ಗತಮಾಡಿಕೊಳ್ಳಲು ಓದಿದುದನ್ನು ಮತ್ತೆ-ಮತ್ತೆ ಓದುತ್ತಲೇ ಇರುವುದು. ಇಲ್ಲಿ ಶ್ರೀಕೃಷ್ಣನು ಹೇಳಿರುವುದು ಧ್ಯಾನದ ಅಭ್ಯಾಸ. ಹೃತ್ಕಮಲವೇ ಮುಂತಾದ ನಿರ್ದಿಷ್ಟಸ್ಥಾನಗಳಲ್ಲಿ ನಮಗೆ ಇಷ್ಟವಾದ ದೇವತಾಮೂರ್ತಿಯನ್ನು ಧ್ಯಾನ ಮಾಡುವುದು. ಇಲ್ಲಿ ಯಾವುದನ್ನು ಅಭ್ಯಾಸಮಾಡಬೇಕೆಂದರೆ : ಮನಸ್ಸು ಕ್ಷಣ-ಕ್ಷಣಕ್ಕೂ ವಿಷಯಗಳ ಕಡೆಗೆ ಓಡುತ್ತಲೇ ಇರುತ್ತದೆ. ಅದನ್ನು ಸೆಳೆದು ತಂದು ಧ್ಯಾನಮೂರ್ತಿಯಲ್ಲಿ ಸ್ಥಾಪಿಸುತ್ತಿರಬೇಕು. ಇದೇ ಒಂದು ದೊಡ್ಡ ಅಭ್ಯಾಸ ; ಕಷ್ಟಸಾಧ್ಯವಾದ ಅಭ್ಯಾಸ. ಮನಸ್ಸನ್ನು ಒಮ್ಮೆ ಎಳೆದು ತಂದರೆ ಮರುಕ್ಷಣದಲ್ಲಿಯೇ ಅದು ತಪ್ಪಿಸಿಕೊಂಡು ಓಡಿಬಿಟ್ಟಿರುತ್ತದೆ. ಅದನ್ನು ನೆಲೆಗೆ ತರುತ್ತಲೇ ಇರಬೇಕು. ಹೀಗೆ ಮಾಡುವ ಅನವರತವಾದ ಅಭ್ಯಾಸದಿಂದ ಒಮ್ಮೆ ಮನಸ್ಸು ನೆಲೆಯನ್ನು ಮುಟ್ಟೀತು.

ವೈರಾಗ್ಯ : ಅಭ್ಯಾಸದ ಜೊತೆಗೆ ವೈರಾಗ್ಯವೂ ಇರಬೇಕೆನ್ನುತ್ತಾನೆ ಶ್ರೀಕೃಷ್ಣ. ವೈರಾಗ್ಯ ಎಂದರೆ ರಾಗವಿಲ್ಲದ್ದು ; ವಿರಾಗ. ವಿರಾಗದ ಸ್ವಭಾವ ವೈರಾಗ್ಯ. ರಾಗವಿಲ್ಲದ್ದು ಎಂದರೆ ಕಾಮವಿಲ್ಲದ್ದು ; ಆಸೆಯಿಲ್ಲದ್ದು. ಐಹಿಕ

ಮತ್ತು ಆಮುಷ್ಮಿಕ್ರಫಲಗಳ ತ್ಯಾಗ. ಕಾಮವನ್ನು ಬಿಟ್ಟರೆ ರಾಮನನ್ನು ಹಿಡಿಯ ಬಹುದು. ಎರಡನ್ನೂ ಏಕಕಾಲದಲ್ಲಿ ಇಟ್ಟುಕೊಂಡಿರಲು ಸಾಧ್ಯವಿಲ್ಲ.

ಪಾತಂಜಲಯೋಗಸೂತ್ರದಲ್ಲಿಯೂ ಸಹ ಈ ಎರಡನ್ನೂ ಒಟ್ಟಾ ಗಿಯೇ ಹೇಳಿದ್ದಾರೆ.

**ಅಭ್ಯಾಸವೈರಾಗ್ಯಾಭ್ಯಾಂ ತನ್ನಿರೋಧಃ** (೧-೧೨)

ಚಿತ್ತವೃತ್ತಿಗಳನ್ನು ತಡೆಯುವುದು ಹೇಗೆಂಬ ಬಗ್ಗೆ ಈ ಸೂತ್ರವು ಹೊರಟಿದೆ.

ಅಭ್ಯಾಸ-ವೈರಾಗ್ಯಗಳಿಂದ ಅವುಗಳ ನಿರೋಧವಾಗುತ್ತದೆ. ಈ ಸೂತ್ರದ ವ್ಯಾಸಭಾಷ್ಯವು ಈ ರೀತಿಯಾಗಿದೆ :

ಚಿತ್ತವೆಂಬ ನದಿಯು ಮೇಲಕ್ಕೂ ಕೆಳಕ್ಕೂ ಎರಡು ಕಡೆಗಳಿಗೂ ಹರಿಯುತ್ತದೆ. ಕಲ್ಯಾಣಕ್ಕಾಗಿ ಹರಿಯುತ್ತದೆ. ಪಾಪಕ್ಕಾಗಿ ಹರಿಯುತ್ತದೆ. ಯಾವುದು ವಿವೇಕವೆಂಬ ಕಣಿವೆಯಲ್ಲಿ ಕೈವಲ್ಯಶಿಖರದ ಕಡೆಗೆ ಹರಿಯುತ್ತ ದೆಯೋ–ಅದು ಕಲ್ಯಾಣಕ್ಕಾಗಿ ಹರಿಯುತ್ತದೆ. ಯಾವುದು ಅವಿವೇಕವೆಂಬ ಕಣಿವೆಯಲ್ಲಿ ಸಂಸಾರಕ್ಕಾಗಿ ಹರಿಯುತ್ತದೆಯೋ–ಅದು ಪಾಪಕ್ಕಾಗಿ ಹರಿಯು ತ್ತದೆ. ವೈರಾಗ್ಯವು ವಿಷಯದ ಸ್ರೋತವನ್ನು ಅಡ್ಡಗಟ್ಟುತ್ತದೆ. ವಿವೇಕದರ್ಶನದ ಅಭ್ಯಾಸವು ವಿವೇಕಸ್ರೋತದ ತೂಬನ್ನು ತೆರೆಯುತ್ತದೆ. ಹೀಗೆ ಚಿತ್ತವೃತ್ತಿಗಳ ನಿರೋಧವು ಅಭ್ಯಾಸ-ವೈರಾಗ್ಯಗಳನ್ನು ಅವಲಂಬಿಸಿದೆ. ಚಿತ್ತವೃತ್ತಿಗಳ ನಿರೋಧವಾಗಬೇಕಾದರೆ ಅಭ್ಯಾಸ-ವೈರಾಗ್ಯಗಳೆರಡೂ ಒಟ್ಟಿಗೇ ಕೆಲಸಮಾಡಬೇಕೇ ಹೊರತು ಬೇರೆ-ಬೇರೆಯಾಗಿ ಕೆಲಸಮಾಡಕೂಡದು.

**ತತ್ರ ಸ್ಥಿತೌ ಯತ್ನೋಽಭ್ಯಾಸಃ** (೧-೧೩)

ಇವುಗಳಲ್ಲಿ ಚಿತ್ತದ ಸ್ಥಿತಿಗೆ ಪ್ರಯತ್ನಿಸುವುದು ಅಭ್ಯಾಸ. ವೃತ್ತಿರಹಿತವಾದ (ರಾಜಸ-ತಾಮಸವೃತ್ತಿರಹಿತವಾದ) ಚಿತ್ತವು ಪ್ರಶಾಂತವಾಗಿ ಹರಿಯುವ ಅವಸ್ಥೆಗೆ ಸ್ಥಿತಿಯೆಂದು ಹೆಸರು. ಇದಕ್ಕಾಗಿ ಮಾಡುವ ಪ್ರಯತ್ನವು ವೀರ್ಯ ಮತ್ತು ಉತ್ಸಾಹ ಎಂಬೀರೂಪದಲ್ಲಿರುತ್ತದೆ. ಆ ಸ್ಥಿತಿಯನ್ನು ಪಡೆಯಲು ಮಾಡುವ ಸಾಧನದ ಅನುಷ್ಠಾನವು ಅಭ್ಯಾಸವೆನಿಸುತ್ತದೆ.

**ದೃಷ್ಟಾನುಶ್ರವಿಕವಿಷಯವಿತೃಷ್ಣಸ್ಯ**
**ವಶೀಕಾರಸಂಜ್ಞಾ ವೈರಾಗ್ಯಮ್** (೧-೧೫)

ಕಾಣುವ ಮತ್ತು ಕಾಣದಿರುವ ವಿಷಯಗಳಲ್ಲಿ ತೃಷ್ಣೆಯನ್ನು ಬಿಟ್ಟವನು ವಶೀಕಾರ ಎಂಬ ಹೆಸರಿನ ವೈರಾಗ್ಯವನ್ನು ಹೊಂದುತ್ತಾನೆ. ಸ್ತ್ರೀಯರು, ಅನ್ನ, ಪಾನ, ಐಶ್ವರ್ಯ–ಮೊದಲಾದ ಕಾಣುವ ವಿಷಯಗಳಲ್ಲಿಯೂ ಮತ್ತು ಶಾಸ್ತ್ರಗಳಿಂದ ತಿಳಿದುಬರುವ ಸ್ವರ್ಗವೇ ಮೊದಲಾದ ವಿಷಯಗಳಲ್ಲಿಯೂ ಸಾಧಕನು ತೃಷ್ಣೆಯಿಲ್ಲದವನಾದಾಗ ಅವನು ದಿವ್ಯವಾದ ಮತ್ತು ಲೌಕಿಕವಾದ ವಸ್ತುಗಳೊಂದಿಗೆ ಸಂಪರ್ಕವನ್ನು ಪಡೆದರೂ ಅವನ ಮನಸ್ಸು ಆ ಲೌಕಿಕ ವಿಷಯಗಳಲ್ಲೆಲ್ಲಾ ದೋಷವನ್ನು ನೋಡುತ್ತದೆ. ಅನಂತರ ವಸ್ತುಗಳ ಯಥಾರ್ಥಜ್ಞಾನದ ಮೂಲಕ ಅವನ ಮನಸ್ಸು ವಿಷಯಗಳನ್ನು ಗ್ರಹಿಸುವುದೇ ಇಲ್ಲ–ಎಂದರೆ ಅವನಿಗೆ ಪಡೆಯಬೇಕಾದುದೂ ಇರುವುದಿಲ್ಲ. ನಿರಾಕರಿಸಬೇಕಾದುದೂ ಇರುವುದಿಲ್ಲ. ಅದೇ ವಶೀಕಾರವೆಂಬ ಹೆಸರಿನ ವೈರಾಗ್ಯ. ಇಂತಹ ಅಭ್ಯಾಸ ಮತ್ತು ವೈರಾಗ್ಯಗಳಿಂದ ಮನಸ್ಸನ್ನು ನಿಗ್ರಹ ಮಾಡಬಹುದು ಎನ್ನುತ್ತಾನೆ ಶ್ರೀಕೃಷ್ಣ.

ಅಭ್ಯಾಸವೆಂದರೆ : ಚಿತ್ತಭೂಮಿಯಲ್ಲಿ ಯಾವುದಾದರೂ ಸಮಾನ ವಾದ ವೃತ್ತಿಯನ್ನು ಮತ್ತೆ ಮತ್ತೆ ಆವರ್ತನೆಮಾಡುವುದು, ವೈರಾಗ್ಯವೆಂದರೆ : ಕಂಡ ಮತ್ತು ಕಾಣದಿರುವ ಪ್ರಿಯವಾದ ಉದ್ಯೋಗಗಳಲ್ಲಿ ಮತ್ತೆ ಮತ್ತೆ ದೋಷವನ್ನು ಕಾಣುವುದರ ಅಭ್ಯಾಸದಿಂದ ಅದರಲ್ಲಿ ಉಂಟಾಗುವ ಅನಿಚ್ಛೆ. (ಶಂ.ಭಾ.)

**ಅಭ್ಯಾಸೇನ ಗೃಹ್ಯತೇ** = ಆತ್ಮನು ಗುಣಾಕರನಾಗಿದ್ದಾನೆ ಎಂಬ ಅರಿವಿನ ಅಭ್ಯಾಸದಿಂದ ಉಂಟಾದ ಅಭಿಮುಖ್ಯದಿಂದ ಆತ್ಮಭಿನ್ನವಾದ ಎಲ್ಲ ವಸ್ತು ಗಳೂ ದೋಷಾಕರವಾದುದು ಎಂಬ ಭಾವದಿಂದ ಉಂಟಾದ ಅನಿಚ್ಛೆಯಿಂದ ದುರ್ನಿಗ್ರಹವಾದ ಆ ಮನಸ್ಸನ್ನು ಕಷ್ಟದಿಂದ ಹಿಡಿಯಬಹುದು. (ರಾ.ಭಾ.)

ಮನಸ್ಸನ್ನು ಪ್ರಯತ್ನಪೂರ್ವಕವಾಗಿ ಹಿಡಿಯಬೇಕು. ಅದು ಎಂದಿಗೂ ತಾನಾಗಿಯೇ ಹತೋಟಿಗೆ ಬರುವುದಿಲ್ಲ. 'ಮದಿಸಿದ ಆನೆಯು ಬಳಲಿ ತಾನಾ ಗಿಯೇ ಶಾಂತವಾಗುವಂತೆ ವಿಷಯಗಳಿಂದ ಆಯಾಸಗೊಂಡ ಮನಸ್ಸು ತಾನಾ ಗಿಯೇ ನಿಯತವಾಗಿಬಿಡುತ್ತದೆ. ಅಭ್ಯಾಸ-ವೈರಾಗ್ಯಗಳಿಂದೇನು?'–ಎಂದು

ಭಾವಿಸಬಾರದು. ಏಕೆಂದರೆ : ಶುಭೇಚ್ಛೆಯಿಲ್ಲದವರಿಗೆ, ಭಗವಂತನನ್ನು ದ್ವೇಷಿಸುವವರಿಗೆ ಮತ್ತು ನಾಸ್ತಿಕರಿಗೆ ಯಾವ ಕಾಲಕ್ಕೂ ಮುಕ್ತಿಯು ಸಿಕ್ಕು ವುದಿಲ್ಲ.

**ಶುಭೇಚ್ಛಾರಹಿತಾನಾಂ ಚ ದ್ವೇಷಿಣಾಂ ಚ ರಮಾಪತೌ ।**
**ನಾಸ್ತಿಕಾನಾಂ ಚ ವೈ ಪುಂಸಾಂ ಸದಾ ಮುಕ್ತಿರ್ನ ಜಾಯತೇ ॥**

(ಮ.ಭಾ.)

**ಓಂ ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।**
**ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ॥೩೬॥**

ಮನಸ್ಸನ್ನು ನಿಗ್ರಹಿಸದವನಿಗೆ ಧ್ಯಾನಯೋಗವು ದುಃಸಾಧ್ಯವಾದುದೆಂದೇ ನನ್ನ ನಿಶ್ಚಯವಾಗಿದೆ. ಆದರೆ ಜಿತೇಂದ್ರಿಯನಾಗಿ ಸತತವಾಗಿ ಪ್ರಯತ್ನಮಾಡುತ್ತಿರುವವನು ಈ ಧ್ಯಾನಯೋಗವನ್ನು ಉಪಾಯದಿಂದ ಸಾಧಿಸಿಕೊಳ್ಳಬಹುದು.

* * *

('ಜಿತೇಂದ್ರಿಯನಲ್ಲದವನಿಗೆ ಯೋಗವು ಸಾಧ್ಯವಾಗುವುದಿಲ್ಲ' ಎಂದು ಶ್ರೀಕೃಷ್ಣನು ಹೇಳುತ್ತಾನೆ. ಒಂದು ಪೂರ್ವದಿಕ್ಕು, ಮತ್ತೊಂದು ಪಶ್ಚಿಮದಿಕ್ಕು. ವಿಷಯಗಳ ಕಡೆಗೆ ಹರಿಯುವ ಮನಸ್ಸಿನಿಂದ ಧ್ಯಾನಮಾಡಲು ಎಂದಿ ಗಾದರೂ ಸಾಧ್ಯವಾದೀತೇ? ವಿಷಯಗಳ ಕಡೆಗೆ ಹರಿಯುವುದು ಪೂರ್ವ ದಿಕ್ಕಿಗೆ ಹರಿಯುವ ಪ್ರವಾಹ. ಧ್ಯಾನಯೋಗದ ಕಡೆಗೆ ಹರಿಯುವುದು ಪಶ್ಚಿಮದಿಕ್ಕಿನ ಪ್ರವಾಹ. ನದಿಗಳಲ್ಲಿ ಪೂರ್ವದಿಕ್ಕಿಗೆ ಹರಿಯುವ ನದಿಗಳೇ ಹೆಚ್ಚು. ಪಶ್ಚಿಮದಿಕ್ಕಿಗೆ ಹರಿಯುವ ನದಿಗಳು ವಿರಳ. ಅಂತೆಯೇ ಮನಸ್ಸು ಪಶ್ಚಿಮಾಭಿಮುಖವಾಗಿ ಹರಿದರೆ ಧ್ಯಾನಯೋಗವು ಸಾಧ್ಯವಾಗುವುದು. ಪೂರ್ವಾಭಿಮುಖವಾಗಿ ಹರಿದರೆ ಭೋಗಯೋಗವು ಸಾಧ್ಯವಾಗುವುದು.

ಪಶ್ಚಿಮಾಭಿಮುಖವೆಂದರೆ ಅಂತರ್ಮುಖ. ಪೂರ್ವಾಭಿಮುಖವೆಂದರೆ ಬಹಿರ್ಮುಖ. ಯೋಗ ಮತ್ತು ಭೋಗಗಳು ಒಂದಾಗಿ ಇರಲಾರವು. ಒಂದು ವೇಳೆ ಭೋಗದಲ್ಲಿ ಶರೀರವಿದ್ದರೂ ಸಹ ಮನಸ್ಸು ಮಾತ್ರ ಯೋಗದಲ್ಲಿಯೇ ಇರಬೇಕು. ಭೋಗವಸ್ತುಗಳನ್ನು ಮನಸ್ಸಿಗೆ ಅಂಟಿಸಿಕೊಳ್ಳಕೂಡದು. ಮನಸ್ಸನ್ನು ಸಂಪೂರ್ಣವಾಗಿ ಹತೋಟಿಗೆ ತಂದುಕೊಂಡು ಸತತವಾಗಿ

ಪ್ರಯತ್ನಿಸಬೇಕು. ಮನಸ್ಸನ್ನು ಹತೋಟಿಗೆ ತಂದುಕೊಂಡ ಮಾತ್ರಕ್ಕೆ ವಿಷಯೋಪಭೋಗಗಳನ್ನು ಅನುಭವಿಸದ ಮಾತ್ರಕ್ಕೆ ಧ್ಯಾನಯೋಗವು ಸಿದ್ಧಿಸುವುದಿಲ್ಲ. ಅನವರತವಾಗಿ ಎಡೆಬಿಡದೇ ಧ್ಯಾನಮಾಡಬೇಕು. ಅವಿಚ್ಛಿನ್ನವಾಗಿ ಮಾಡಬೇಕು. ಎರಡು ದಿವಸಗಳು ಮಾಡಿ ಮೂರನೆಯ ದಿವಸ ವಿಶ್ರಾಂತಿಯನ್ನು ತೆಗೆದುಕೊಳ್ಳುವುದಲ್ಲ. ಮಂತ್ರವೇ ಆಗಲೀ, ಯೋಗವೇ ಆಗಲೀ, ಪಾರಾಯಣವೇ ಆಗಲೀ–ಸಿದ್ಧಿಸಬೇಕಾದರೆ ಅದು ಅವಿಚ್ಛಿನ್ನವಾಗಿರಬೇಕೆಂಬುದೇ ಮೊದಲನೆಯ ನಿಯಮ.

ಸಮುದ್ರದ ತೀರದಲ್ಲಿದ್ದ ವೃಕ್ಷವೊಂದರ ಮೇಲೆ ಪಕ್ಷಿಯೊಂದು ಗೂಡು ಕಟ್ಟಿ ಮೊಟ್ಟೆಗಳನ್ನಿಡುತ್ತಿತ್ತು. ಮೊಟ್ಟೆಯೊಡೆದು ಮರಿಯಾಗುವುದರೊಳಗಾಗಿ ಸಮುದ್ರವು ಉಕ್ಕಿಬಂದು ಮೊಟ್ಟೆಗಳನ್ನು ತೇಲಿಸಿಬಿಡುತ್ತಿದ್ದಿತು. ಒಮ್ಮೆ ಆ ಪಕ್ಷಿಯು ಹೀಗೆಂದು ಯೋಚಿಸಿತು : 'ಈ ಸಮುದ್ರವು ಇಲ್ಲಿರುವವರೆಗೂ ನನ್ನ ಮೊಟ್ಟೆಗಳಿಗೆ ಉಳಿಗಾಲವಿಲ್ಲ. ಆದುದರಿಂದ ಈ ಸಮುದ್ರವನ್ನೇ ಬೇರೆಯ ಕಡೆಗೆ ಸಾಗಿಸಿಬಿಡುತ್ತೇನೆ' ಹೀಗೆಂಬುದಾಗಿ ನಿಶ್ಚಯಿಸಿ ಕಾರ್ಯವನ್ನು ಆರಂಭಿಸಿಯೇಬಿಟ್ಟಿತು. ಕೊಕ್ಕಿನಲ್ಲಿ ಗುಟುಕುನೀರನ್ನು ತುಂಬಿಕೊಂಡು ದೂರಕ್ಕೆ ಹೋಗಿ ಸುರಿದುಬರುತ್ತಿದ್ದಿತು. ಆ ಪಕ್ಷಿಯು ಸತತವಾಗಿ ಈ ಕಾರ್ಯವನ್ನು ಮಾಡುತ್ತಲೇ ಇದ್ದಿತು. ಒಮ್ಮೆ ನಾರದರು ಅತ್ತ ಕಡೆ ಬಂದರು. ಪಕ್ಷಿಯ ಸಡಗರವನ್ನು ಕಂಡು ಪ್ರಶ್ನಿಸಿದರು :

'ಏನು ಮಾಡುತ್ತಿರುವೆ?'

'ನನ್ನ ಮೊಟ್ಟೆಗಳಿಗೆ ಅಂತಕಪ್ರಾಯವಾಗಿರುವ ಈ ಸಮುದ್ರವನ್ನು ಬೇರೆಯ ಕಡೆಗೆ ವರ್ಗಾಯಿಸುತ್ತಿದ್ದೇನೆ.'

ನಾರದರು ಆಶ್ಚರ್ಯಚಕಿತರಾಗಿ ಕೇಳಿದರು : 'ಈ ಕಾರ್ಯವನ್ನು ಮುಗಿಸಲು ಎಷ್ಟು ಯುಗಗಳಾಗಬಹುದೆಂಬುದನ್ನಾದರೂ ಯೋಚಿಸಿರುವೆಯಾ?'

'ಎಷ್ಟಾದರೂ ಯುಗಗಳಾಗಲಿ. ನನಗೆ ಮುಂದೆ ಸಾವಿರಾರು ಜನ್ಮಗಳಿವೆ. ಪ್ರತಿಯೊಂದು ಜನ್ಮದಲ್ಲಿಯೂ ಇದೇ ಕಾರ್ಯವನ್ನು ಮಾಡುತ್ತಾ ಹೋಗುತ್ತೇನೆ. ಸಮುದ್ರನಿಗೂ ಒಂದು ಅಂತ್ಯವಿದೆ. ಈಗಿರುವುದಕ್ಕಿಂತ ಅವನು ವೃದ್ಧಿಹೊಂದಲಾರ. ಆದುದರಿಂದ ಯಾವುದೋ ಒಂದು ಯುಗದಲ್ಲಿ

ನನ್ನ ಪ್ರಯತ್ನವು ಫಲಿಸಿಯೇ ಫಲಿಸುವುದು'–ಎಂದಿತು. ನಾರದರು ಅವಾಕ್ಕಾದರು. ಇಂತಹ ಒಂದು ಸತತಪ್ರಯತ್ನ ಮತ್ತು ಸಾಧಿಸಿಯೇತೀರುವೆನೆಂಬ ಛಲ–ನಮಗಿರಬೇಕು. ನಮ್ಮ ಅಚಲವಾದ ಶ್ರದ್ಧೆಯನ್ನು ಕಂಡುಕೊಂಡನಂತರ ಗುರಿಯ ಸಾಧನೆಗೆ ಪರಮಾತ್ಮನೇ ಮಾರ್ಗದರ್ಶಕನಾಗುತ್ತಾನೆ. ಆದುದರಿಂದ ಸಾಧಕನು ಜಿತೇಂದ್ರಿಯನಾಗಿಯೂ ಇರಬೇಕು. ಸತತವಾಗಿ ಪ್ರಯತ್ನಶೀಲನೂ ಆಗಿರಬೇಕು. ಇಂತಹವನು ಹಿಂದೆ ಹೇಳಿದ ಉಪಾಯ ದಿಂದ ಧ್ಯಾನಯೋಗವನ್ನು ಸಾಧಿಸಿಕೊಳ್ಳಬಲ್ಲನು. ಹೃನ್ಮಂದಿರದಲ್ಲಿ ಪರಮಾತ್ಮನನ್ನು ಕಾಣಲು ಸಮರ್ಥನಾಗುತ್ತಾನೆ.

**ಅಸಂಯತಾತ್ಮನಾ** = ಅಭ್ಯಾಸ-ವೈರಾಗ್ಯಗಳಿಂದ ಅಂತಃಕರಣವನ್ನು ವಶದಲ್ಲಿ ತಂದುಕೊಳ್ಳದವನಿಂದ. (ಶಂ.ಭಾ.)

ಮನಸ್ಸನ್ನು ಜಯಿಸದವನು ಮಹಾಪ್ರಯತ್ನಮಾಡಿದರೂ ಯೋಗವು ಅವನಿಗೆ ದುರ್ಲಭವೇ. ಆದರೆ ಮನಸ್ಸನ್ನು ಉಪಾಯವಾಗಿ ವಶಪಡಿಸಿಕೊಂಡವನು ಎಂದರೆ ಹಿಂದೆ ಹೇಳಿದಂತೆ ಭಗವದಾರಾಧನರೂಪವಾಗಿ ಅಂತರ್ಗತಜ್ಞಾನವಾದ ಕರ್ಮದಿಂದ ಮನಸ್ಸನ್ನು ಗೆದ್ದು ಪ್ರಯತ್ನಮಾಡುವವನು ಈ ಸಮದರ್ಶನಯೋಗವನ್ನು ಪಡೆಯಬಹುದು. (ರಾ.ಭಾ.)

**ಅರ್ಜುನ ಉವಾಚ :**

**ಓಂ ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ ।**
**ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ॥೩೭॥**

ಅರ್ಜುನನು ಪ್ರಶ್ನಿಸುತ್ತಾನೆ :

ಕೃಷ್ಣ! ಶ್ರದ್ಧಾಯುಕ್ತನಾಗಿದ್ದರೂ ಸಾಕಷ್ಟು ಪ್ರಯತ್ನವನ್ನು ಮಾಡದೇ ಅಥವಾ ಸಂಯಮರಹಿತನಾಗಿರುವ ಕಾರಣ ಮನಸ್ಸು ಧ್ಯಾನಯೋಗದಿಂದ ಚ್ಯುತವಾಗಿ ಯೋಗದ ಪರಮಸಿದ್ಧಿಯನ್ನು ಪಡೆಯದಿದ್ದರೆ ಅಂತಹವನು ಯಾವ ಗತಿಯನ್ನು ಹೊಂದುತ್ತಾನೆ.

* * *

(ಒಬ್ಬ ಸಾಧಕನಿಗೆ ಅಪಾರವಾದ ಶ್ರದ್ಧೆಯಿದೆ. ಅವಸಾನಕಾಲವು ಪ್ರಾಪ್ತವಾಗಿಬಿಟ್ಟಿದೆ. ಮುಂದೆ ಸಾಧನೆಯನ್ನು ಸತತವಾಗಿ ಮಾಡಲಾರದವನಾಗಿದ್ದಾನೆ. ಅವನಿಗೆ ಸಂಯಮವೂ ಇಲ್ಲ. ಯಾವಾಗ ಅವನು ಸತತವಾಗಿ

ಪ್ರಯತ್ನಮಾಡಲಿಲ್ಲವೋ ಆಗ ಸ್ವಾಭಾವಿಕವಾಗಿಯೇ ಮನಸ್ಸು ಯೋಗದಿಂದ (ಧ್ಯಾನಯೋಗದಿಂದ) ಜಾರುತ್ತದೆ. ಅವನಿಗಿನ್ನೂ ಯೋಗಸಂಸಿದ್ಧಿ ಯಾಗಿರುವುದಿಲ್ಲ. ಹೃನ್ಮಂದಿರದಲ್ಲಿ ಪರಮಾತ್ಮನನ್ನು ಕಂಡುಕೊಂಡಿರುವುದಿಲ್ಲ. ಮುಂದವನ ಗತಿಯೇನು? ಕೃಷ್ಣ!

ಸಾಧಕರಾದವರೆಲ್ಲರಿಗೂ ಇರುವ ಪ್ರಶ್ನೆಯೇ ಇದಾಗಿದೆ. ಅವರವರ ಪ್ರಕೃತಿಗಳಿಗೆ ಅನುಗುಣವಾಗಿ ಅನೇಕರಿಗೆ ಧ್ಯಾನಯೋಗದ ಸಾಧನೆಯೇ ಆಗುವುದಿಲ್ಲ. ಹೆಚ್ಚೇಕೆ? ಅನೇಕವರ್ಷಗಳ ಪ್ರಯತ್ನದಿಂದಲೂ ಧ್ಯಾನ ಮೂರ್ತಿಯನ್ನು ಹೃನ್ಮಂದಿರದಲ್ಲಿ ಕಂಡುಕೊಳ್ಳಲು ಸಾಧ್ಯವಾಗುವುದಿಲ್ಲ. ಪ್ರಯತ್ನವೂ ಇರುತ್ತದೆ ; ಶ್ರದ್ಧೆಯೂ ಇರುತ್ತದೆ. ವಯಸ್ಸು ಕಳೆಯುತ್ತಿದ್ದಂತೆ ಶ್ರದ್ಧೆಯಿದ್ದರೂ ಪ್ರಯತ್ನವು ಶಿಥಿಲವಾಗುತ್ತದೆ. ಹತ್ತು ನಿಮಿಷಗಳು ಕೂಡ ಧ್ಯಾನಕಾರ್ಯದಲ್ಲಿ ಕುಳಿತುಕೊಳ್ಳಲು ಸಾಧ್ಯವಾಗುವುದಿಲ್ಲ. ಅದೇ ಅವಸ್ಥೆಯಲ್ಲಿಯೇ ದೇಹಾವಸಾನವಾಗಿಬಿಡುತ್ತದೆ. ಅಂತಹವನ ಗತಿಯೇನು? ನಿಶ್ಚಯವಾಗಿಯೂ ಈ ಪ್ರಶ್ನೆಯನ್ನು ಅರ್ಜುನನು ಹತಾಶರಾದ ಸಾಧಕರ ಪ್ರತಿನಿಧಿಯಂತೆ ಕೇಳಿದ್ದಾನೆ.

**ಅಯತಿಃ** ಎಂಬ ಪದಕ್ಕೆ **ಅಪ್ರಯತ್ನವಾನ್, ಅಪ್ರಯತ್ನಃ, ಯತನವಿಕಲಃ** ಎಂದು ಆಚಾರ್ಯರುಗಳು ಅರ್ಥಮಾಡಿರುತ್ತಾರೆ.

ಈ ಶಬ್ದಕ್ಕೆ ಸಂನ್ಯಾಸಿಯಲ್ಲದವನು ಎಂಬ ಅರ್ಥವಂತೂ ಅಲ್ಲ ಎಂದು ಶ್ರೀಜಯತೀರ್ಥರು ಹೇಳುತ್ತಾರೆ.

ಹಿಂದಿನ ಶ್ಲೋಕದಲ್ಲಿ **ಅಸಂಯತಾತ್ಮನಾ ಯೋಗಃ ದುಷ್ಪ್ರಾಪಃ** ಎಂದು ಹೇಳಿರುವುದರಿಂದ **ಅಯತಿಃ** ಎಂಬ ಪದಕ್ಕೆ ಸಂಯಮವಿಲ್ಲದವನು ಎಂದೂ ಅರ್ಥಹೇಳಬಹುದು.

**ಯೋಗಸಂಸಿದ್ಧಿಂ** = ಯೋಗದ ಫಲವಾದ ಸಮ್ಯಗ್ದರ್ಶನವನ್ನು.

(ಶಂ.ಭಾ.)

ಹಿಂದೆ **ನೇಹಾಭಿಕ್ರಮನಾಶೋऽಸ್ತಿ** (೨-೪೦) ಎಂಬಲ್ಲಿ ಹೇಳಿದ ಯೋಗಮಾಹಾತ್ಮ್ಯವನ್ನೇ ಯಥಾವತ್ತಾಗಿ ತಿಳಿಯಲು ಅರ್ಜುನನು ಹೀಗೆ ಪ್ರಶ್ನಿಸುತ್ತಾನೆ.

ಅಂತರ್ಗತಜ್ಞಾನವಾಗಿ ಯೋಗವನ್ನು ಶಿರಸ್ಸಿನಲ್ಲಿ ಹೊಂದಿರುವ ಹಿಂದೆ ಹೇಳಿದ ಕರ್ಮಯೋಗದ ಮಾಹಾತ್ಮ್ಯವು ಯೋಗಮಾಹಾತ್ಮ್ಯವೇ ಆಗಿದೆ.
(ರಾ.ಭಾ.)

**ಕಾಂ ಗತಿಂ** =ಕಾಮ, ಭೋಗ, ಮೋಕ್ಷ ಮತ್ತು ನರಕ–ಇವುಗಳಲ್ಲಿ ಯಾವ ಗತಿಯನ್ನು.....? ) (ವೇದಾಂತದೇಶಿಕರು.)

**ಓಂ ಕಚ್ಚಿನ್ನೋಭಯವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ ।**
**ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥೩೮॥**

ಮಹಾಬಾಹೋ! ಅಂತಹವನು ಎರಡರಿಂದಲೂ ಜಾರಿ ಬ್ರಹ್ಮದರ್ಶನದ ಹಾದಿಯಲ್ಲಿ ದಿಕ್ಕುತೋಚದೇ ಚೂರು-ಚೂರಾದ ಮೋಡದಂತೆ ನೆಲೆಗಾಣದೇ ಹಾಳಾಗಿಹೋಗುವುದಿಲ್ಲವಷ್ಟೆ?

* * *

(ಮೇಲೆ ಹೇಳಿದ ಸಾಧಕನು ಉಭಯಭ್ರಷ್ಟನಾಗಿದ್ದಾನೆ. ಕರ್ಮಫಲವನ್ನು ತ್ಯಾಗಮಾಡಿದ್ದರಿಂದ ಸ್ವರ್ಗಾದಿಗಳನ್ನು ಸಂಪಾದಿಸಿಕೊಳ್ಳಲಿಲ್ಲ. ಸತತಪ್ರಯತ್ನವಿಲ್ಲದೇ ಇದ್ದುದರಿಂದ ಅಥವಾ ಪ್ರಯತ್ನದ ಶೈಥಿಲ್ಯದಿಂದ ಆತ್ಮದರ್ಶನವನ್ನೂ ಮಾಡಿಕೊಳ್ಳಲಿಲ್ಲ. ಅಥವಾ ಪ್ರಾಪಂಚಿಕಸುಖೋಪಭೋಗಗಳನ್ನೂ ಅನುಭವಿಸಲಿಲ್ಲ. ಅತ್ತಕಡೆ ಯೋಗಭ್ರಷ್ಟನಾದುದರಿಂದ ಮುಕ್ತಿಯೂ ಸಿಗಲಿಲ್ಲ. ಅವನ ಪಾಡೇನು? ದೊಡ್ಡದೊಂದು ಮೇಘದಿಂದ ಚಿಕ್ಕದೊಂದು ಮೋಡವು ಬೇರೊಂದು ಮೇಘಕ್ಕೆ ಸೇರಿಕೊಳ್ಳಲು ಹೊರಟಿತಂತೆ. ಆದರೆ ನಡುದಾರಿಯಲ್ಲಿಯೇ ಬಿರುಗಾಳಿಗೆ ಸಿಕ್ಕಿ ಚದುರಿಹೋಯಿತು. ತುಂತುರು-ತುಂತುರುಗಳಾಗಿ ಉದುರಿಹೋಯಿತು. ಮತ್ತೊಂದು ಮೇಘಕ್ಕೆ ಸೇರಿಕೊಳ್ಳಲೇ ಇಲ್ಲ. ಇಲ್ಲಿಯೂ ಸಾಧಕನು ಮಹಾಫಲವು ಸಿಕ್ಕುವುದೆಂಬ ಆಸೆಯಿಂದ ಆಸೆಯನ್ನು ಪೂರೈಸುವ ಜೀವನಸುಖವನ್ನು ತೊರೆದು ವೈರಾಗ್ಯ ಮಾರ್ಗದಲ್ಲಿ ಹೊರಟುಬಿಟ್ಟನು. ಆದರೆ ಅಭ್ಯಾಸ-ವೈರಾಗ್ಯಗಳಿಂದ ಸಾಧಿಸಿಕೊಳ್ಳಬೇಕಾಗಿದ್ದುದನ್ನು ಸಾಧಿಸಿಕೊಳ್ಳಲಿಲ್ಲ. ಅಸುವನ್ನು ನೀಗಿಬಿಟ್ಟನು. ಅವನೂ ಸಹ ಭಿನ್ನವಾದ ಮೋಡದಂತೆಯೇ ಹಾಳಾಗುತ್ತಾನೆಯೇ?

ಉಭಯವಿಭ್ರಷ್ಟಃ = ಕರ್ಮಮಾರ್ಗ, ಯೋಗಮಾರ್ಗ–ಎರಡರಿಂದಲೂ ಜಾರಿದವನಾಗಿ. (ಶಂ.ಭಾ.)

ಅವನು ಫಲಾಭಿಸಂಧಿರಹಿತನಾಗಿ ಕರ್ಮಮಾಡಿದುದರಿಂದ ಅವನ ಕರ್ಮವು ಸ್ವರ್ಗಫಲವನ್ನು ಕೊಡದೇ ಅವನು ನೆಲೆಯಿಲ್ಲದವನಾಗುತ್ತಾನೆ ಮತ್ತು ತಾನು ಹೊರಟಿರುವ ಬ್ರಹ್ಮಮಾರ್ಗದ ದಾರಿಯಿಂದಲೂ ಜಾರು ತ್ತಾನೆ.) (ರಾ.ಭಾ.)

**ಓಂ ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ ।**
**ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ॥೩೯॥**

ಕೃಷ್ಣ! ಈ ನನ್ನ ಸಂಶಯವನ್ನು ಕಿಂಚಿತ್ತೂ ಉಳಿಯದಂತೆ ನೀನು ಕತ್ತರಿಸಬೇಕು. ಏಕೆಂದರೆ : ನಿನ್ನನ್ನು ಬಿಟ್ಟರೆ ಯಾರೂ ಈ ಸಂಶಯವನ್ನು ನಿವಾರಿಸುವವರಿಲ್ಲ.

* * *

(ಪಾರ್ಥನು ಶ್ರೀಕೃಷ್ಣನನ್ನು ಪ್ರಾರ್ಥಿಸಿಕೊಳ್ಳುತ್ತಾನೆ :

ಕೃಷ್ಣ! ಮಹಾನುಭಾವ! ಈ ನನ್ನ ಸಂಶಯವನ್ನು ನೀನು ಸಂಪೂರ್ಣವಾಗಿ ನಿವಾರಿಸಬೇಕು. ಪುನಃ ಪುನಃ ಸಂಶಯವುಳಿಯುವಂತೆ ಮಾಡಕೂಡದು. ನಿನ್ನ ಮಾತನ್ನು ಕೇಳಿದನಂತರ ನಾನು ನಿಶ್ಚಿಂತನಾಗಬೇಕು. ಆ ರೀತಿಯಲ್ಲಿ ನೀನು ನನ್ನ ಈ ಪ್ರಶ್ನೆಗೆ ಸಮಾಧಾನ ಹೇಳಬೇಕಾಗಿದೆ. ನಾನು ಇಷ್ಟು ಬಲಾತ್ಕಾರಪೂರ್ವಕವಾಗಿ ಪ್ರಾರ್ಥಿಸುವುದರ ಕಾರಣವೇನೆಂದರೆ : ಈ ನನ್ನ ಸಂಶಯವನ್ನು ನಿವಾರಿಸಲು ನೀನೊಬ್ಬನೇ ಸಮರ್ಥನು. ನೀನೇ ಹೇಳಿ ದಂತೆ ನಿನಗೆ ಎಲ್ಲ ಕಾಲ, ಎಲ್ಲ ದೇಶಗಳ ವಿಷಯಗಳೂ ಸಂಪೂರ್ಣವಾಗಿ ತಿಳಿದಿವೆ. ನೀನು ಸರ್ವಜ್ಞನು. ನಿನಗೆ ತಿಳಿಯದ ವಿಷಯವೇ ಇಲ್ಲ. ನೀನು ಚಿದಾನಂದಸ್ವರೂಪನು ; ಚಿನ್ಮಯನು ; ಗುಣಾತೀತನೂ ಆಗಿರುವೆ. ಆದುದ ರಿಂದ ಈ ಸಂಶಯನಿವಾರಣೆಗೆ ನಿನ್ನನ್ನು ಬಿಟ್ಟರೆ ಬೇರೆ ಯಾರೂ ಸಿಕ್ಕುವುದೂ ಇಲ್ಲ ; ಸಮರ್ಥರೂ ಅಲ್ಲ. ಆದುದರಿಂದ ದಯಮಾಡಿ ಈ ನನ್ನ ಸಂಶಯ ವನ್ನು ಆಮೂಲಾಗ್ರವಾಗಿ ತೊಡೆದುಹಾಕಲು ನೀನೇ ಅರ್ಹನಾಗಿರುವೆ.

**ತ್ವದನ್ಯಃ**= ನಿನ್ನಿಂದ ಬೇರೆಯಾದವನು ಋಷಿಯಾಗಲೀ, ದೇವನೇ ಆಗಲೀ–ಯಾವನೂ ಕೂಡ. **ತ್ವತ್ತಃ ಅನ್ಯಃ ಋಷಿಃ ದೇವೋ ವಾ.**

(ಶಂ.ಭಾ.)

**ಏತತ್-ಉಪಪದ್ಯತೇ** = ಸ್ವತಃ ಪ್ರತ್ಯಕ್ಷವಾಗಿ ಏಕಕಾಲದಲ್ಲಿ ಎಲ್ಲ

ವನ್ನೂ ಸದಾ ನೋಡುತ್ತಿರುವ ನಿನ್ನನ್ನು ಬಿಟ್ಟು ಬೇರೆ ಯಾವನೂ ಈ ನನ್ನ ಸಂಶಯವನ್ನು ನಿವಾರಿಸುವವನು ಇಲ್ಲ.

**ಯೋ ವೇತ್ತಿ ಯುಗಪತ್ಸರ್ವಂ ಪ್ರತ್ಯಕ್ಷೇಣ ಸದಾ ಸ್ವತಃ ।**
**ತಂ ಪ್ರಣಮ್ಯ ಹರಿಂ ಶಾಸ್ತ್ರಂ ನ್ಯಾಯತತ್ತ್ವಂ ಪ್ರಚಕ್ಷ್ಮಹೇ ॥**

(ಶ್ರೀನಾಥಮುನಿಮಿಶ್ರರು.)

**ಶ್ರೀಭಗವಾನುವಾಚ :**

**ಓಂ ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।**
**ನ ಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥೪೦॥**

ಶ್ರೀಕೃಷ್ಣನು ಹೇಳುತ್ತಾನೆ :

ಪಾರ್ಥ! ಈ ಲೋಕದಲ್ಲಾಗಲೀ ಪರಲೋಕದಲ್ಲಾಗಲೀ ಅವನಿಗೆ ವಿನಾಶವೆಂಬುದಿಲ್ಲ. ಮಗು! ಒಳ್ಳೆಯ ಕಾರ್ಯಮಾಡಿದವನು ಯಾವನೂ ಎಂದಿಗೂ ದುರ್ಗತಿಯನ್ನು ಹೊಂದುವುದೇ ಇಲ್ಲ.

* * *

(ಈ ಶ್ಲೋಕದಲ್ಲಿ ಶ್ರೀಕೃಷ್ಣನು ಶ್ರದ್ಧಾಳುವಾಗಿ ಸನ್ಮಾರ್ಗದಲ್ಲಿ ಸಾಧನೆ ಯನ್ನು ಮಾಡುವವನಿಗೆ ದುರ್ಗತಿಯು ಸಿಕ್ಕುವುದಿಲ್ಲವೆಂಬ ಸಂಪೂರ್ಣವಾದ ಭರವಸೆಯನ್ನಿತ್ತಿದ್ದಾನೆ.

**ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।**

ಯೋಗದಿಂದ ಜಾರಿದ ಮನಸ್ಸುಳ್ಳ, ಪ್ರಯತ್ನವನ್ನು ಮುಂದುವರಿಸದ ಸಾಧಕನಿಗೆ ಈ ಲೋಕದಲ್ಲಿಯೂ ವಿನಾಶವಿಲ್ಲ. ಮುಂದಿನ ಲೋಕದಲ್ಲಿಯೂ ವಿನಾಶವಿಲ್ಲ–ಎಂದಿದ್ದಾನೆ.

ಇಹದಲ್ಲಿ ವಿನಾಶವಿಲ್ಲ ಎಂಬುದಕ್ಕೆ ಅರ್ಥವೇನು? ಪರದಲ್ಲಿ ವಿನಾಶ ವಿಲ್ಲ ಎಂಬುದಕ್ಕೆ ಅರ್ಥವೇನು?

ಸಾಧಕನು ಪ್ರಯತ್ನಮಾಡದೇ ಇರುವುದರಿಂದ ಅಥವಾ ವಯಸ್ಸಿನ ಕಾರಣದಿಂದ ನಿರಂತರವಾಗಿ ಧ್ಯಾನಯೋಗದಲ್ಲಿರಲು ಸಾಧ್ಯವಾಗದೇ ಇರು ವುದರಿಂದ ಅವನ ಮನಸ್ಸು ಯೋಗದಿಂದ ವಿಚಲಿತವಾಗಿದೆ. ಆದರೆ ಅವನಿಗೆ ಶ್ರದ್ಧೆಯೂ ಹೋಗಿಲ್ಲ. 'ಶ್ರದ್ಧಯೋಪೇತಃ ' ಎಂಬುದನ್ನು ಅರ್ಜುನನು

ಸ್ಪಷ್ಟವಾಗಿ ಹೇಳಿದ್ದಾನೆ. ಅವನಿಗೆ ತಾನು ಗುರಿಮುಟ್ಟಬೇಕೆಂಬುದರಲ್ಲಿ ಸಂಪೂರ್ಣಶ್ರದ್ಧೆಯಿದೆ. ಸಾಧನೆಯಿಂದ ತಾನು ಆತ್ಮದರ್ಶನವನ್ನು ಮಾಡ ಬಲ್ಲೆನೆಂಬ ನಂಬಿಕೆಯೂ ಇದೆ. ಅರ್ಥಾತ್ ಅವನು ದಾರಿಬಿಟ್ಟು ಹೋಗಿಲ್ಲ. ಅದೇ ಹಾದಿಯಲ್ಲೇ ಇದ್ದಾನೆ. ಸ್ವಲ್ಪ ದೂರ ಮುಂದೆ ಹೋಗಿ ನಡೆಯಲಾಗದೇ ನಿಂತುಬಿಟ್ಟಿದ್ದಾನೆ. ಅವನು ಧ್ಯಾನಯೋಗವನ್ನು ಪೂರ್ಣವಾಗಿ ಸಾಧಿಸದೇ ಇದ್ದುದರಿಂದ ಇದುವರೆಗೂ ನಡೆದುಬಂದುದು ವ್ಯರ್ಥವಾಗಿ ಹೋಯಿತೇ? ಎಂಬುದಕ್ಕೆ ಉತ್ತರವಾಗಿ ಶ್ರೀಕೃಷ್ಣನು ಹೇಳುತ್ತಾನೆ. ಅತ್ರ ಇಹ ವಿನಾಶಃ **ತಸ್ಯ ನ ವಿದ್ಯತೇ**=ಇಲ್ಲಿ ಅವನು ಮಾಡಿದ ಸಾಧನೆಯು ವಿನಾಶವಾಗುವುದಿಲ್ಲ. **'ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್'** ಎಂಬ ಭಗವಂತನ ಮಾತನ್ನಿಲ್ಲಿ ಸ್ಮರಿಸಬಹುದಾಗಿದೆ. **'ಅಮುತ್ರ ವಿನಾಶಃ ತಸ್ಯ ನ ವಿದ್ಯತೇ'** ಎಂದೂ ಹೇಳಿದ್ದಾನೆ. **'ಅಮುತ್ರ'** ಪರಲೋಕದಲ್ಲಿಯೂ ವಿನಾಶವಿಲ್ಲ ಎಂದರೆ ಅರ್ಥವೇನು? ಕರ್ಮಯೋಗಿಯು ಕರ್ಮಗಳೆಲ್ಲವನ್ನೂ ಈಶ್ವರಾರ್ಪಣಬುದ್ಧಿಯಿಂದ ನಿಷ್ಕಾಮನಾಗಿ ಮಾಡತಕ್ಕವನು. ಅವನಿಗೆ ಪರಲೋಕದಲ್ಲಿ ಆಸಕ್ತಿಯೇ ಇಲ್ಲ. ಪರಲೋಕಕಾಮನೆಯು ಅವನಿಗಿಲ್ಲ. ಕಾಮಸಂಕಲ್ಪವರ್ಜಿತನಾಗಿ ಕರ್ಮಮಾಡುತ್ತಿದ್ದಾನೆ. ಇಂತಹವನಿಗೆ ಪರಲೋಕವು ಹೇಗೆ ತಾನೇ ಪ್ರಾಪ್ತವಾಗುವುದು? ಇದೊಂದು ಧರ್ಮರಹಸ್ಯ. ಈಶ್ವರಾರ್ಪಣಬುದ್ಧಿಯಿಂದ ಕರ್ಮಮಾಡಿದ್ದರೂ ಅವನು ಮಾಡಿದ್ದ ಕರ್ಮದ ಫಲವು ಇಲ್ಲದೇ ಇರುವುದಿಲ್ಲ. ಬೇಸಾಯದ ಸಾಧನೆಯಿಂದ ನೀರು ಹಾಕಿ ಬೆಳೆಸಿದ ಮಾವಿನಗಿಡದಲ್ಲಿ ಫಲಬಿಡುವುದು ಎಷ್ಟು ಸತ್ಯವೋ ಮಾಡಿದ ಕರ್ಮಕ್ಕೆ ಫಲವು ಸಿದ್ಧಿಸುವುದೂ ಅಷ್ಟೇ ಸತ್ಯ. ಆ ಫಲವನ್ನವನು ಈಶ್ವರನಿಗೆ ಅರ್ಪಿಸಿರುತ್ತಾನೆ. ಯೋಗಭ್ರಷ್ಟನಾದಾಗ ಅವನ ಆ ಕರ್ಮಫಲವೇ ಅವನಿಗೆ ನೆರವಾಗುತ್ತದೆ. ಪುಣ್ಯಲೋಕಗಳನ್ನು ಸಂಪಾದಿಸಿಕೊಡುತ್ತದೆ.

ಧ್ಯಾನಯೋಗದ ಸಾಧನೆಯಿಂದ ಆತ್ಮದರ್ಶನಮಾಡಿಕೊಂಡು ಬುದ್ಧಿ-ಚೇತನ-ಮನಸ್ಸುಗಳನ್ನು ಪರಮಾತ್ಮನಲ್ಲಿಯೇ ಲೀನಗೊಳಿಸಿಬಿಟ್ಟರೆ ಅವನ ಕರ್ಮಫಲಗಳು ಅವನನ್ನು ಬೆನ್ನಟ್ಟಿಬರಲಾರವು. ಅವನ ಕರ್ಮಫಲದಲ್ಲಿ ಒಳ್ಳೆಯವು ಮಿತ್ರರನ್ನೂ–ಕೆಟ್ಟವು ಶತ್ರುಗಳನ್ನೂ ಸೇರುತ್ತವೆ. ಹಾಗಿಲ್ಲದೇ

ಅವನೇನಾದರೂ ಯೋಗಭ್ರಷ್ಟನಾಗಿಬಿಟ್ಟರೆ ಅವನ ಕರ್ಮಫಲವು ಅವನನ್ನೇ ಅನುಸರಿಸುತ್ತದೆ. ಈ ಕಾರಣದಿಂದಲೇ ಅವನಿಗೆ ಉತ್ತಮವಾದ ಲೋಕ ಗಳೂ ಲಭ್ಯವಾಗುತ್ತವೆ.

**ನ ಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ** ಎಂದು ಶ್ರೀಕೃಷ್ಣನು ಉದ್ಘೋಷಿಸಿದ್ದಾನೆ. 'ಒಳ್ಳೆಯವರಿಗೆ ಕಾಲವಿಲ್ಲ ; ಒಳ್ಳೆಯ ಕೆಲಸಕ್ಕೆ ಪ್ರೋತ್ಸಾಹವಿಲ್ಲ' ಎಂದು ಅನೇಕ ಬಗೆಯಾಗಿ ಜನರು ಆಡಿಕೊಳ್ಳುವರು. 'ನಾವು ಮಾಡುತ್ತಿರುವುದು ಒಳ್ಳೆಯ ಕೆಲಸ' ಎಂಬುದನ್ನು ನಿರ್ಧರಿಸತಕ್ಕವರು ನಾವಲ್ಲ. ಕರ್ಮಾಧ್ಯಕ್ಷನು ನಿರ್ಧರಿಸಬೇಕಾಗಿದೆ. ನಮ್ಮ ಅಂತರಂಗವನ್ನು ಅಳೆದು ನೋಡತಕ್ಕವನು ಅವನು. ನಾವು ಎಷ್ಟೋ 'ಒಳ್ಳೆಯ' ಕಾರ್ಯಗಳನ್ನು ಕೀರ್ತಿಕಾಮನೆಯಿಂದಲೋ, ಪ್ರತಿಷ್ಠೆಗಾಗಿಯೋ, ಆಟಾಟೋಪಕ್ಕಾಗಿಯೋ, ಬಲಾತ್ಕಾರದಿಂದಲೋ ಮಾಡುತ್ತೇವೆ. ಅದಕ್ಕೆ ತಕ್ಕಂತೆ ನಮಗೆ ಫಲವು ಸಿಕ್ಕುತ್ತದೆ. ನಿಸ್ವಾರ್ಥಬುದ್ಧಿಯಿಂದ ; ಈಶ್ವರಾರ್ಪಣಬುದ್ಧಿಯಿಂದ ಕಲ್ಯಾಣಕರ್ಮಗಳನ್ನು ಮಾಡಿದ್ದೇ ಆದರೆ ಅವನು ಖಂಡಿತವಾಗಿಯೂ ದುರ್ಗತಿಯನ್ನು ಹೊಂದುವುದೇ ಇಲ್ಲ. ಆದರೆ ನಾವು ಅಂತರಾತ್ಮನಿಗೆ ಮೋಸಮಾಡಲು ಹೋಗುತ್ತೇವೆ. ಅದುಮಾತ್ರ ಸಾಧ್ಯವಾಗುವುದಿಲ್ಲ.

ಇಲ್ಲಿ ಶ್ರೀಕೃಷ್ಣನು ಅರ್ಜುನನನ್ನು 'ತಾತ' ಎಂದು ಸಂಬೋಧಿಸಿದ್ದಾನೆ. 'ತಾತ' ಎಂದರೆ ಮಗು ಎಂದು ಇಲ್ಲಿ ಅರ್ಥ. ಸಾಮಾನ್ಯವಾಗಿ ತಂದೆಯು ಮಗನನ್ನು ತಾತ! ಎಂದು ಸಂಬೋಧಿಸುತ್ತಾನೆ. ಮಗ ಮತ್ತು ಶಿಷ್ಯ–ಈ ಇಬ್ಬರೂ ಒಂದೇ ಆದುದರಿಂದ ತನ್ನ ಪ್ರೀತಿಯ ಶಿಷ್ಯನಾದ ಅರ್ಜುನನನ್ನು ಶ್ರೀಕೃಷ್ಣನು 'ತಾತ' ಎಂದು ಸಂಬೋಧಿಸಿದ್ದಾನೆ.

ವಿನಾಶಃ ಹಿಂದಿನದಕ್ಕಿಂತಲೂ ಹೀನವಾದ ಜನ್ಮದ ಪ್ರಾಪ್ತಿ.

**ಪೂರ್ವಸ್ಮಾತ್ ಹೀನಜನ್ಮಪ್ರಾಪ್ತಿಃ**

ಪ್ರಾಕೃತವಾದ ಸ್ವರ್ಗಾದಿ ಭೋಗಗಳ ಅನುಭವದಲ್ಲಿಯೂ ಮತ್ತು ಬ್ರಹ್ಮಾನುಭವದಲ್ಲಿಯೂ ಅಭೀಷ್ಟವಾದುದು ದೊರೆಯದಿರುವಿಕೆ ಎಂಬ ವಿನಾಶ ಮತ್ತು ಪ್ರತ್ಯವಾಯ ಎಂಬ ಅನಿಷ್ಟವು ಉಂಟಾಗುತ್ತದೆಯೆಂಬ ವಿನಾಶ.) (ಶಂ.ಭಾ.)

**ಓಂ ಪ್ರಾಪ್ಯ ಪುಣ್ಯಕೃತಾಂ ಲೋಕಾನುಷಿತ್ವಾ ಶಾಶ್ವತೀಃ ಸಮಾಃ ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋऽಭಿಜಾಯತೇ ॥**

ಯೋಗಭ್ರಷ್ಟನಾದವನು ಪುಣ್ಯಮಾಡಿದವರು ಪಡೆಯತಕ್ಕ ಲೋಕಗಳನ್ನು ಹೊಂದಿ ಅಲ್ಲಿ ಅನೇಕವರ್ಷಗಳವರೆಗೂ ವಾಸಮಾಡಿಕೊಂಡಿದ್ದು ಅನಂತರ ಶುದ್ಧರೂ ಶ್ರೀಮಂತರೂ ಆಗಿರುವವರ ಮನೆಯಲ್ಲಿ ಹುಟ್ಟುತ್ತಾನೆ.

* * *

(ಹಿಂದಿನ ಶ್ಲೋಕಕ್ಕೆ ವಿವರಣೆ ಕೊಟ್ಟಿರುವುದಕ್ಕೆ ಅನುಸಾರವಾಗಿಯೇ ಶ್ರೀಕೃಷ್ಣನು ಈ ಶ್ಲೋಕದಲ್ಲಿ–'ಪುಣ್ಯಕೃತಾಂ ಲೋಕಾನ್ ಪ್ರಾಪ್ಯ' 'ಪುಣ್ಯಮಾಡಿದವರ ಲೋಕಗಳನ್ನು ಅರ್ಥಾತ್ ಪುಣ್ಯಮಾಡಿದವರಿಗೆ ಲಭ್ಯವಾಗತಕ್ಕ ಲೋಕಗಳನ್ನು ಹೊಂದಿ'–ಎಂದು ಹೇಳಿದ್ದಾನೆ. ಈಶ್ವರಾರ್ಪಣಬುದ್ಧಿಯಿಂದ ಕರ್ಮಮಾಡಿದುದೇ ಕರ್ಮಯೋಗಿಯ ಪುಣ್ಯಕರ್ಮವಾಗಿದೆ. ಅಲ್ಲಿ 'ಶಾಶ್ವತೀಃ ಸಮಾಃ' ಶಾಶ್ವತವಾದ ಅನೇಕವರ್ಷಗಳಿದ್ದು, ಶಾಶ್ವತವಾಗಿ ಅಲ್ಲಿಯೇ ಇದ್ದುಬಿಡುತ್ತಾನೆಂಬ ಅರ್ಥವಲ್ಲ. ಇರಲು ಸಾಧ್ಯವೂ ಇಲ್ಲ. ಬಹಳ ಕಾಲದವರೆಗೆ ಅಲ್ಲಿರುತ್ತಾನೆ–ಎಂದು ಅರ್ಥ. ಅನಂತರ ಯೋಗಭ್ರಷ್ಟನಾದವನು, ಸದಾಚಾರಸಂಪನ್ನರಾದ ಶ್ರೀಮಂತರ ಮನೆಯಲ್ಲಿ ಹುಟ್ಟುತ್ತಾನೆ. ಶ್ರೀಮಂತರ ಮನೆ ಎಂದರೆ ಧನಿಕರ ಮನೆ ಎಂದು ಅರ್ಥ ಮಾಡಬೇಕಾಗಿಲ್ಲ. ಸದಾಚಾರಸಂಪನ್ನರಾದ, ಕಾಂತಿಮಂತರಾದ ಯೋಗ್ಯರಾದ ಗೃಹಸ್ಥರ ಮನೆ ಎಂದು ಅರ್ಥಮಾಡಬಹುದು. ಧನಿಕತನಕ್ಕೂ, ಯೋಗಕ್ಕೂ ಯಾವ ಸಂಬಂಧವೂ ಇಲ್ಲ. ಧನಿಕರ ಮನೆಯಲ್ಲಿ ಹುಟ್ಟಿದ್ದರಿಂದಲೇ ಯೋಗಮಾರ್ಗಕ್ಕೆ ತಡೆಯಾಗುವುದೆಂಬ ಕೆಲವರ ಭಾವನೆಯೂ ಸರಿಯಲ್ಲ. ಧ್ರುವಕುಮಾರ, ಮೀರಾಬಾಯಿ ಮುಂತಾದವರ ವೃತ್ತಾಂತವನ್ನು ಸ್ಮರಿಸಬಹುದು.

**ಶುಚೀನಾಂ ಶ್ರೀಮತಾಂ ಗೇಹೇ** ಎನ್ನುವುದಕ್ಕೆ ಶುದ್ಧರೂ ಯೋಗೋಪಕ್ರಮಕ್ಕೆ ಯೋಗ್ಯರೂ ಆದವರ ಕುಲದಲ್ಲಿ.

ಮುಂದಿನ ಶ್ಲೋಕದಲ್ಲಿ ಹೇಳುವ ಅಥವಾ **ಯೋಗಿನಾಮೇವ ಕುಲೇ** ಎಂದು ಹೇಳಿರುವುದು ಇದಕ್ಕಿಂತಲೂ ಅತಿಶಯವಾದ ಜನ್ಮ. ಆದುದರಿಂದ ಇಲ್ಲಿ ಹೇಳುವ ಯೋಗಭ್ರಷ್ಟನು ಯೋಗದ ಪ್ರಾರಂಭದಲ್ಲಿ ಭ್ರಷ್ಟನಾದವನು.)

(ರಾ.ಭಾ.)

**ಓಂ ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ।**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ॥೪೨॥**

ಅಥವಾ ಧೀಮಂತರಾದ ಯೋಗಿಗಳ ವಂಶದಲ್ಲಿಯೇ ಅವನು ಹುಟ್ಟಬಹುದು. ಆದರೆ ಈ ವಿಧವಾಗಿ ಜನ್ಮಸಿಕ್ಕುವುದು ಲೋಕದಲ್ಲಿ ಬಹು ದುರ್ಲಭವಾದುದು.

* * *

(ಹಿಂದಿನ ಶ್ಲೋಕದಲ್ಲಿ ಶ್ರೀಕೃಷ್ಣನು ಶುಚಿಗಳಾದ ಶ್ರೀಮಂತರ ಮನೆಯಲ್ಲಿ ಯೋಗಭ್ರಷ್ಟನಾದವನು ಹುಟ್ಟುವನು–ಎಂದು ಹೇಳಿ, ಈ ಶ್ಲೋಕದಲ್ಲಿ ಯೋಗಿಗಳ ಕುಲದಲ್ಲೇ ಅಥವಾ ಮನೆಯಲ್ಲೇ ಅವನು ಹುಟ್ಟಬಹುದು ಎಂದೂ ಹೇಳುತ್ತಾನೆ. ಯೋಗಿಗಳ ವಂಶ ಎನ್ನುತ್ತಾನೆ. ಮನೆಯಲ್ಲ. ಕುಲ ಎಂದು ಹೇಳಿರುವುದರಿಂದ ಆ ಯೋಗಿಗಳು ಗೃಹಸ್ಥರಾಗಿಯೇ ಇದ್ದಿರಬೇಕೆಂಬುದೇನಿಲ್ಲ. ಸಂನ್ಯಾಸಿಗಳೂ ಆಗಿರಬಹುದು. ಗೃಹಸ್ಥರೂ ಆಗಿರಬಹುದು. ಅಂತಹವರ ಕುಲದಲ್ಲಿ ಜನ್ಮಸಿಕ್ಕುವುದೇ ದುರ್ಲಭ ಎನ್ನುತ್ತಾನೆ ಶ್ರೀಕೃಷ್ಣ. ಕೇವಲ ಕುಲದಲ್ಲಿ ಜನ್ಮಸಿಕ್ಕಬೇಕಾದರೂ ಬಹಳ ಪುಣ್ಯಮಾಡಿರಬೇಕು. ಬ್ರಹ್ಮಜ್ಞಾನಿಯಾದವನ ಕುಲಕ್ಕೆ ಎಷ್ಟು ಪವಿತ್ರತೆ ಇದೆಯೆಂಬುದು ಶ್ರೀಕೃಷ್ಣನ ಈ ಮಾತಿನಿಂದ ಸಿದ್ಧವಾಗುತ್ತದೆ. ವಂಶದಲ್ಲಿ ಒಬ್ಬನೇ ಒಬ್ಬ ಬ್ರಹ್ಮಜ್ಞಾನಿಯು ಹುಟ್ಟಿದರೂ ವಂಶವೇ ಪವಿತ್ರವಾಗುವುದೆಂದು ಹೇಳುತ್ತಾರೆ. ಬ್ರಹ್ಮವಿದನ ಕುಲದ ಮಹಿಮೆಯನ್ನು ಮುಂಡಕೋಪನಿಷತ್ತಿನಲ್ಲಿ ಹೀಗೆ ಹೇಳಿದೆ:

**ಸ ಯೋ ಹ ವೈ ತತ್ಪರಮಂ ಬ್ರಹ್ಮ ವೇದ ।**
**ಬ್ರಹ್ಮೈವ ಭವತಿ ನಾಸ್ಯಾಬ್ರಹ್ಮವಿತ್ಕುಲೇ ಭವತಿ ।**
**ತರತಿ ಶೋಕಂ ತರತಿ ಪಾಪ್ಮಾನಂ**
**ಗುಹಾಗ್ರನ್ಥಿಭ್ಯೋ ವಿಮುಕ್ತೋಽಮತೋ ಭವತಿ ॥** ೩-೨-೯

ಯಾವನು ಆ ಪರಬ್ರಹ್ಮವನ್ನು ತಿಳಿದುಕೊಳ್ಳುವನೋ ಅವನು ಬ್ರಹ್ಮವೇ ಆಗುವನು. ಅವನ ಕುಲದಲ್ಲಿ ಬ್ರಹ್ಮನನ್ನು ಅರಿಯದವನು ಹುಟ್ಟುವುದಿಲ್ಲ. ಅವನು ಶೋಕವನ್ನು ದಾಟುತ್ತಾನೆ. ಪಾಪವನ್ನು ದಾಟುತ್ತಾನೆ. ಹೃದಯಗ್ರಂಥಿಗಳಿಂದ ಬಿಡುಗಡೆಹೊಂದಿ ಅಮೃತನಾಗುತ್ತಾನೆ.

**ಕುಲಂ ಪವಿತ್ರಂ ಜನನೀ ಕೃತಾರ್ಥಾ**
**ವಸುನ್ಧರಾ ಸಾರ್ಥವತೀ ಚ ತೇನ ।**
**ಅಪಾರಸಂವಿತ್ಸುಖಸಾಗರೇಽಸ್ಮಿನ್**
**ಲೀನಂ ಪರೇ ಬ್ರಹ್ಮಣಿ ಯಸ್ಯ ಚೇತಃ ॥**

ಯಾವನ ಮನಸ್ಸು ಅಪಾರಜ್ಞಾನಸುಖಸಾಗರವಾಗಿದೆಯೋ ಪರಬ್ರಹ್ಮದಲ್ಲಿ ಲಯಹೊಂದಿದೆಯೋ–ಅವನ ವಂಶವು ಪವಿತ್ರ. ತಾಯಿಯು ಧನ್ಯಳು. ಅವನಿಂದ ಭೂಮಿಯೂ ಕೃತಾರ್ಥವಾಗುತ್ತದೆ–ಎಂಬ ಶ್ರೀಶಂಕರರ ಸೂಕ್ತಿಯನ್ನು ಇಲ್ಲಿ ಸ್ಮರಿಸಬಹುದು.

**ಯೋಗಿನಾಮೇವ ಕುಲೇ** = ದರಿದ್ರರಾದ ಯೋಗಿಗಳ ಕುಲದಲ್ಲಿ.

ದರಿದ್ರರಾದ **ಯೋಗಿಗಳ** ವಂಶದಲ್ಲಿ ಜನ್ಮತಾಳುವುದು ಹಿಂದಿನ ಶ್ಲೋಕದಲ್ಲಿ ಹೇಳಿರುವುದಕ್ಕಿಂತಲೂ ಹೆಚ್ಚು ದುರ್ಲಭ. (ಶಂ.ಭಾ.)

**ಪರಿಪಕ್ವವಾದ ಯೋಗವುಳ್ಳವನು ಯೋಗದಿಂದ** ಚಲಿತನಾದರೆ ಸ್ವಯಂ ಯೋಗವನ್ನು ಆಚರಿಸುತ್ತಾ ಯೋಗವನ್ನು ಉಪದೇಶಮಾಡುವ ಸಾಮರ್ಥ್ಯವುಳ್ಳ ಮಹಾತ್ಮರ ಕುಲದಲ್ಲಿ ಹುಟ್ಟುತ್ತಾನೆ-ಈ ಎರಡು ಬಗೆ ಯಾದ ಜನ್ಮವು ಎಂದರೆ ಯೋಗಕ್ಕೆ ಯೋಗ್ಯರಾದವರ ಕುಲದಲ್ಲಿ ಹುಟ್ಟು ವುದು ಮತ್ತು ಯೋಗಿಗಳ ಕುಲದಲ್ಲಿ ಹುಟ್ಟುವುದು. ಈ ಎರಡೂ ಪ್ರಾಕೃತ ರಿಗೆ ಅತ್ಯಂತದುರ್ಲಭವಾದುದು. ಇದು ಯೋಗಮಾಹಾತ್ಮ್ಯದಿಂದಲೇ ಉಂಟಾದುದು. (ರಾ.ಭಾ.)

ಆದುದರಿಂದ ಧೀಮಂತರಾದ ಯೋಗಿಗಳ ವಂಶದಲ್ಲಿ ಜನ್ಮಪಡೆಯುವುದು ಸುಕೃತವಿಶೇಷ.

ಯೋಗಿಗಳ ವಂಶದಲ್ಲಿ ಜನ್ಮತಾಳುವುದರಿಂದ ಆಗುವ ಮಹಾ ಪ್ರಯೋಜನವನ್ನು ಶ್ರೀಕೃಷ್ಣನು ಈ ಶ್ಲೋಕದಲ್ಲಿ ಹೇಳುತ್ತಾನೆ.)

**ಓಂ ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೈಹಿಕಮ್ ।**
**ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನನ್ದನ ॥೪೩॥**

ಕುರುನಂದನ! ಯೋಗಭ್ರಷ್ಟನಾಗಿದ್ದವನು ಯೋಗಿಗಳ ಕುಲದಲ್ಲಿ ಪುನಃ ಹುಟ್ಟಿ ಹಿಂದಿನ ದೇಹದಲ್ಲಾಗಿದ್ದ ಬುದ್ಧಿಸಂಯೋಗವನ್ನು ಪುನಃ

ಪಡೆದುಕೊಳ್ಳುತ್ತಾನೆ ಮತ್ತು ಸಂಸಿದ್ಧಿಗಾಗಿ ಪುನಃ ಬಹುವಾಗಿ ಯತ್ನ ಮಾಡುತ್ತಾನೆ.

* * *

(ಯೋಗಿಗಳ ಕುಲದಲ್ಲಿ ಹುಟ್ಟಿದ ಯೋಗಭ್ರಷ್ಟನು ಹಿಂದಿನ ಜನ್ಮದ ಬುದ್ಧಿಯನ್ನು ಪುನಃ ಪಡೆದುಕೊಳ್ಳುತ್ತಾನೆ. ಆ ಸಂಸ್ಕಾರವು ಇವನೊಡನೆಯೇ ಇರುತ್ತದೆ. ಇವನನ್ನು ಬಿಟ್ಟು ಇವನ ಬುದ್ಧಿಯಿರುವುದಿಲ್ಲ. ಶುಚಿವಂತರ ಮನೆಯಲ್ಲಿ ಹುಟ್ಟಿದಕಾರಣ ಈ ಬುದ್ಧಿಯೇ ಇರುತ್ತದೆ. ಇದರ ಜೊತೆಗೆ ಯೋಗಿಗಳ ಕುಲದಲ್ಲಿ ಹುಟ್ಟಿದ್ದರಿಂದ ಅಪಾರಮಹಿಮರಾದ ಯೋಗಿಗಳ ಅನುಗ್ರಹವೂ ಸಹ ಆ ಚೇತನಕ್ಕೆ ಬಹುಸುಲಭವಾಗಿ ಸಿಕ್ಕುವುದರಿಂದ ಬುದ್ಧಿಯಲ್ಲಿ ಸುಪ್ತವಾಗಿದ್ದ ಪೂರ್ವಜನ್ಮದ ಕ್ರಿಯೆಯು ಒಡನೆಯೇ ತನ್ನ ಕಾರ್ಯವನ್ನು ಆರಂಭಿಸಿಬಿಡುತ್ತದೆ. ಹಿಂದಿನ ಜನ್ಮದಲ್ಲಿ ಯಾವುದೋ ಕಾರಣದಿಂದ ಮಾಡದಿದ್ದ ಪ್ರಯತ್ನವು ಪುನಃ ಪ್ರಾರಂಭವಾಗುತ್ತದೆ. ಆತ್ಮದರ್ಶನಸಿದ್ಧಿಗಾಗಿ ನೂತನಜನ್ಮದಲ್ಲಿ ಆ ಚೇತನವು ಹಿಂದಿನ ಜನ್ಮದ ಸಂಸ್ಕಾರಬಲದಿಂದ ಬಹುವಾಗಿ ಪ್ರಯತ್ನಮಾಡುತ್ತದೆ. ನಿದ್ದೆಯಿಂದ ಎಚ್ಚೆತ್ತವನು ತನ್ನ ದೈನಂದಿನ ಕಾರ್ಯವನ್ನು ಮುಂದುವರಿಸುವಂತೆ–ಅವನು ಈ ಹೊಸಜನ್ಮದಲ್ಲಿ ತನ್ನ ಯೋಗಕಾರ್ಯವನ್ನು ಮುಂದುವರಿಸುತ್ತಾನೆ. ದಾರಿಗನು ಸಾಯಂಕಾಲದ ವರೆಗೂ ನಡೆದುಹೋಗಿ ರಾತ್ರಿಯಾಗುತ್ತಲೇ ಒಂದು ಗ್ರಾಮದಲ್ಲಿ ತಂಗಿದ್ದು ಬೆಳಗಾಗುತ್ತಲೇ ತನ್ನ ಪ್ರಯಾಣವನ್ನು ಮುಂದುವರಿಸುವಂತೆ–ಯೋಗಭ್ರಷ್ಟನಾದವನು ಹೊಸಜನ್ಮದಲ್ಲಿ ಯೋಗಮಾರ್ಗದಲ್ಲಿಯೇ ತನ್ನ ಪ್ರಯಾಣವನ್ನು ಮುಂದುವರಿಸುತ್ತಾನೆ.

**ತತಃ–ಭೂಯಃ** ಹಿಂದಿನ ಜನ್ಮದಲ್ಲಿ ಮಾಡಿದ ಸಂಸ್ಕಾರಕ್ಕಿಂತಲೂ ಹೆಚ್ಚು ಪ್ರಮಾಣದಲ್ಲಿ. (ಶಂ.ಭಾ.)

**ಯತತೇ ಚ ತತಃ** –ನಿದ್ರೆಯಿಂದ ಎಚ್ಚೆತ್ತವನಂತೆ ಸಂಸಿದ್ಧಿಗಾಗಿ ಮತ್ತೆ ಪ್ರಯತ್ನಮಾಡುತ್ತಾನೆ ; ವಿಘ್ನಗಳಿಂದ ಹತನಾಗದಂತೆ ಪ್ರಯತ್ನ ಮಾಡುತ್ತಾನೆ.) (ರಾ.ಭಾ.)

ಯೋಗಭ್ರಷ್ಟನಾದ ಮಾತ್ರದಿಂದ ಅವನು ಹಿಂದೆ ಮಾಡಿದ್ದ ಅಭ್ಯಾಸವು ಸ್ವಲ್ಪವೂ ವ್ಯರ್ಥವಾಗುವುದಿಲ್ಲ.

**ಓಂ ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ |**
**ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ||೪೪||**

ಅದೇ ಪೂರ್ವಾಭ್ಯಾಸದಿಂದಲೇ ಅವನು ತನ್ನ ಸ್ವಾಧೀನದಲ್ಲಿ ಇಲ್ಲದಿದ್ದ ಆ ಯೋಗಮಾರ್ಗಕ್ಕೆ ಸೆಳೆಯಲ್ಪಡುತ್ತಾನೆ. ಯೋಗವನ್ನು ತಿಳಿಯಲು ಇಚ್ಛಿಸುವವನು ಕೂಡ ಶಬ್ದಬ್ರಹ್ಮವನ್ನು ಮೀರುತ್ತಾನೆ.

* * *

(ಹುಟ್ಟಿದ ಅವನಿಗೆ ಏನೂ ತಿಳಿದಿರುವುದಿಲ್ಲ. ಮೊದಲು ಮೊದಲು ಎಲ್ಲವೂ ಬುದ್ಧಿಯಲ್ಲಿ ಅಡಕವಾಗಿರುತ್ತದೆ. ಹುಟ್ಟಿದ ಕುಲದ ವಾತಾವರಣಕ್ಕೆ ಅನುಗುಣವಾಗಿ ಬುದ್ಧಿಯಲ್ಲಿ ಸುಪ್ತವಾಗಿದ್ದ ಸಂಸ್ಕಾರವು ಅವನಿಗೆ ತಿಳಿದೋ ತಿಳಿಯದೆಯೋ ಅರಳತೊಡಗುತ್ತದೆ. ಅದಕ್ಕೆ ಅಧೀನವಾಗಿ ಅವನು ತನ್ನ ಲ್ಲಿಯೇ ತಾನು ವೈಶಿಷ್ಟ್ಯಗಳನ್ನು ಕಂಡುಕೊಳ್ಳುತ್ತಾನೆ. ಕೆಲವು ಸಲ ಅವನು ತನಗೆ ಆಗುವ ಅನುಭವಗಳೇ ಎಲ್ಲರಿಗೂ ಆಗಬಹುದೆಂದು ತಿಳಿಯಬಹುದು. ಶ್ರೀವಿವೇಕಾನಂದರಿಗೆ ಭ್ರೂಮಧ್ಯದ ಆಜ್ಞಾಚಕ್ರದಲ್ಲಿ ಬೆಳಕು ಕಾಣುತ್ತಿದ್ದಿತಂತೆ. ಅವರು ಅದನ್ನು ಸರ್ವಸಾಮಾನ್ಯ ಎಂದು ಅನೇಕವರ್ಷಗಳವರೆಗೆ ಭಾವಿಸಿದ್ದರಂತೆ. ಹೀಗೆ ಅವನಿಗೆ ತಿಳಿಯದಂತೆಯೇ ಹಿಂದಿನ ಜನ್ಮದಲ್ಲಿ ಮಾಡಿದ್ದ ಅಭ್ಯಾಸವು ಅವನನ್ನು ಅಂತರಾತ್ಮದ ಕಡೆಗೆ ಸೆಳೆಯಲು ಪ್ರಾರಂಭಿಸುತ್ತದೆ.

ಈ ಶ್ಲೋಕದ ಉತ್ತರಾರ್ಧವು 'ಜಿಜ್ಞಾಸುರಪಿ ಅತಿ ವರ್ತತೇ' ಜಿಜ್ಞಾಸೆಗೆ ಯೋಗ್ಯವಾಗಿದೆ. ಯೋಗದ ಜಿಜ್ಞಾಸೆಮಾಡುವವನೂ ಸಹ ಶಬ್ದ ಬ್ರಹ್ಮನನ್ನು ಮೀರಿರುತ್ತಾನೆ. ಜಿಜ್ಞಾಸು ಎಂದರೆ ಯೋಗದ ವಿಷಯವಾಗಿ ತಿಳಿಯಲು ಇಚ್ಛೆಯುಳ್ಳವನು. ಯೋಗಾಭ್ಯಾಸರತನೇ ಆಗಬೇಕಾಗಿಲ್ಲ. ಅಂತಹವನು ಕೂಡ ಶಬ್ದಬ್ರಹ್ಮನನ್ನು ಮೀರಿಹೋಗುತ್ತಾನೆ.

ಅವನ ಜಿಜ್ಞಾಸೆ ಪ್ರಾಮಾಣಿಕವಾಗಿದ್ದರೆ ಅವನು ಪರಮಾರ್ಥವಿಚಾರ ವನ್ನು ಕೇಳುತ್ತಾನೆ. ಆ ಪರಬ್ರಹ್ಮವಿಚಾರವಾದ ಶಬ್ದವು, ಎಂದರೆ ಪ್ರಣವವು ಅಥವಾ ವೇದವು ಶಬ್ದಬ್ರಹ್ಮ. ಆ ಜಿಜ್ಞಾಸುವಿಗೆ ಮೊದಲಿಗೆ ಶಬ್ದಬ್ರಹ್ಮದ ಸಾಕ್ಷಾತ್ಕಾರವಾದರೂ ಅವನು ಅಲ್ಲಿಯೇ ವಿರಮಿಸದೇ ಅದರ ಅರ್ಥಸಾಧನೆ ಯಲ್ಲಿ ಪ್ರವೃತ್ತನಾಗಿ ಕಾಲವಿಶೇಷದಲ್ಲಿ ಅರ್ಥಬ್ರಹ್ಮನನ್ನು ಪಡೆಯುತ್ತಾನೆ.

ಶಬ್ದಬ್ರಹ್ಮವನ್ನು ಮೀರುತ್ತಾನೆ ಎಂದರೆ ಶಬ್ದಬ್ರಹ್ಮದ ಅರ್ಥವಾದ ಸಾಕ್ಷಾತ್ ಪರಬ್ರಹ್ಮವನ್ನು ಪಡೆಯುತ್ತಾನೆ. ಆದರೆ ಅವನ ಜಿಜ್ಞಾಸೆಯು ದೃಢವಾಗಿರಬೇಕು. ಪ್ರಾಮಾಣಿಕವಾಗಿರಬೇಕು. ಹೀಗೆ ಅಭ್ಯಾಸಮಾಡಲ್ಪಟ್ಟ ಶಬ್ದಬ್ರಹ್ಮವು ಅವನನ್ನು ತನ್ನನ್ನು ಮೀರಿರುವ ಪರಬ್ರಹ್ಮಕ್ಕೆ ಒಯ್ಯುತ್ತದೆ.

ಶ್ರೀರಾಮಕೃಷ್ಣಪರಮಹಂಸರ ಒಂದು ಉದಾಹರಣೆಯು ಇದೇ ಅರ್ಥದ ಕಡೆಗೆ ನಮ್ಮನ್ನು ಒಯ್ಯುತ್ತದೆ. ಹಳ್ಳಿಯಲ್ಲಿದ್ದವನೊಬ್ಬನು ಪೇಟೆಯಲ್ಲಿದ್ದ ಸ್ನೇಹಿತನಿಗೆ ಕೆಲವು ಪದಾರ್ಥಗಳನ್ನು ತರಲು ಪತ್ರಬರೆದ. ಪೇಟೆಯಲ್ಲಿದ್ದವನು ಪತ್ರವನ್ನು ಓದಿಕೊಂಡು ಅದನ್ನು ಮನೆಯಲ್ಲಿಯೇ ಇಟ್ಟು ಆ ಕಾಗದದಲ್ಲಿರುವುದನ್ನು ತರಲು ಪೇಟೆಗೆ ಹೋದ.

ಕಾಗದದಲ್ಲಿ ಬರೆದಿರುವುದನ್ನು ಓದುವುದು ಮತ್ತು ಅದರ ಅಭಿಪ್ರಾಯವನ್ನು ತಿಳಿದುಕೊಳ್ಳುವುದೇ ಶಬ್ದಬ್ರಹ್ಮಜ್ಞಾನ. ಪದಾರ್ಥವನ್ನು ತರುವುದಕ್ಕೆ ಹೋಗುವುದೇ ಶಬ್ದಬ್ರಹ್ಮವನ್ನು ಅತಿಕ್ರಮಿಸುವುದು. ಪದಾರ್ಥವನ್ನು ತಂದ ಮೇಲೆ ಆ ಪತ್ರಕ್ಕೆ ಪ್ರಯೋಜನವೇನೂ ಇಲ್ಲ ತಾನೇ? ಇವರ ವಿವರಣೆಯಂತೆ ಈ ಶ್ಲೋಕಕ್ಕೆ ಹೀಗೆ ಅರ್ಥಮಾಡಬಹುದಾಗಿದೆ. ಯೋಗದ ಜಿಜ್ಞಾಸುವು ಶಬ್ದಬ್ರಹ್ಮದಲ್ಲಿ ಎಂದರೆ ವೇದದಲ್ಲಿರುವ ತತ್ತ್ವಗಳನ್ನೆಲ್ಲಾ ವಿಚಾರ ಮಾಡಿ ತಿಳಿದುಕೊಂಡನು. ವಿಚಾರಮಾಡಿ ತಿಳಿದುಕೊಂಡಿದ್ದನ್ನು ಕಾರ್ಯರೂಪಕ್ಕೆ ತರಲು ಹೊರಟ. ಅರ್ಥಾತ್ ಸಾಧನೆಗೆ ಪ್ರಾರಂಭಿಸಿ ಶಬ್ದಬ್ರಹ್ಮವನ್ನು ಅತಿಕ್ರಮಿಸಿದ. ವೇದದಲ್ಲಿನ ರಹಸ್ಯವನ್ನರಿತು ಆತ್ಮಜ್ಞಾನದ ಸಾಧನೆಯನ್ನಾರಂಭಿಸಿ ಅದರ ಪರಮಾರ್ಥವನ್ನು ಕಂಡುಕೊಂಡ. ಹೀಗೆ ಅರ್ಥಮಾಡಬಹುದಾಗಿದೆ.

ಯೋಗದ ಜಿಜ್ಞಾಸುವೂ ಕೂಡ ಎಂದರೆ ಯೋಗದ ಸ್ವರೂಪವನ್ನು ತಿಳಿಯುವ ಇಷ್ಟಹೊಂದಿ ಯೋಗಮಾರ್ಗದಲ್ಲಿ ತೊಡಗಿರುವ ಯೋಗಭ್ರಷ್ಟನಾದ ಸಂನ್ಯಾಸಿಯೂ ಕೂಡ ಶಬ್ದಬ್ರಹ್ಮವನ್ನು ಮೀರುತ್ತಾನೆ–ಎಂದರೆ ವೇದದಲ್ಲಿ ಹೇಳಿರುವ ಕರ್ಮಫಲವನ್ನು ಮೀರಿಹೋಗುತ್ತಾನೆ. ಹೀಗಿರುವಾಗ ಯೋಗವನ್ನರಿತು ಅದರಲ್ಲಿದ್ದು ಅಭ್ಯಾಸಮಾಡುವವನ ವಿಷಯದಲ್ಲಿ ಹೇಳತಕ್ಕದ್ದೇನಿದೆ? ಶಬ್ದಬ್ರಹ್ಮ =ವೇದದಲ್ಲಿ ಹೇಳಿರುವ ಕರ್ಮಫಲ. (ಶಂ.ಭಾ.)

ಮಹಾಭಾರತದ ಶಾಂತಿಪರ್ವತದಲ್ಲಿ ಶಬ್ದಬ್ರಹ್ಮದ ವಿಷಯವಾಗಿ ಹೀಗೆ ಹೇಳಿದ್ದಾರೆ :

**ದ್ವೇ ಬ್ರಹ್ಮಣೀ ವೇದಿತವ್ಯೇ ಶಬ್ದಬ್ರಹ್ಮ ಪರಂ ಚ ಯತ್ ।**
**ಶಬ್ದಬ್ರಹ್ಮಣಿ ನಿಷ್ಣಾತಃ ಪರಂ ಬ್ರಹ್ಮಾಧಿಗಚ್ಛತಿ ॥**

ಎರಡು ಬ್ರಹ್ಮಗಳಿವೆ. ಒಂದು ಶಬ್ದಬ್ರಹ್ಮ. ಮತ್ತೊಂದು ಪರಬ್ರಹ್ಮ. ಶಬ್ದಬ್ರಹ್ಮವನ್ನು ಚೆನ್ನಾಗಿ ತಿಳಿದುಕೊಂಡಿರುವವನು ಅದರಲ್ಲಿ ನಿಷ್ಣಾತನಾಗಿರ ತಕ್ಕವನು ಅದರಾಚೆಗಿರುವ ಪರಬ್ರಹ್ಮನನ್ನು ಪಡೆಯುತ್ತಾನೆ.

ಶಬ್ದಬ್ರಹ್ಮ =ದೇವ-ಮನುಷ್ಯ-ಪೃಥಿವೀ-ಅಂತರಿಕ್ಷ-ಸ್ವರ್ಗ-ಮುಂತಾದ ಶಬ್ದಗಳಿಂದ ಕರೆಯಲ್ಪಡಲು ಯೋಗ್ಯವಾದ ಬ್ರಹ್ಮ ಎಂದರೆ ಪ್ರಕೃತಿ. ಯೋಗದಲ್ಲಿ ತೊಡಗದೇ ಯೋಗವನ್ನು ತಿಳಿಯುವ ಇಚ್ಛೆಯುಳ್ಳವನಾಗಿ ಆ ಮಾರ್ಗದಲ್ಲಿ ತೊಡಗಿ ಅಲ್ಲಿಂದ ಮನಸ್ಸು ಕದಲಿದವನು ಕೂಡ ಮತ್ತೆ ಆ ಜಿಜ್ಞಾಸೆಯನ್ನು ಹೊಂದಿ ಕರ್ಮಯೋಗವೇ ಮುಂತಾದ ಯೋಗವನ್ನು ಅನುಷ್ಠಾನಮಾಡಿ ಶಬ್ದಬ್ರಹ್ಮವನ್ನು (ಅದರ ಪ್ರಕೃತಿಯನ್ನು) ಮೀರುತ್ತಾನೆ ಎಂದರೆ ಪ್ರಕೃತಿಬಂಧದಿಂದ ದಾಟಿ ಬಿಡುಗಡೆಯನ್ನು ಹೊಂದಿ ಜ್ಞಾನಾ ನಂದೈಕರಸವಾದ ಆತ್ಮವನ್ನು ಹೊಂದುತ್ತಾನೆ. (ರಾ.ಭಾ.)

'ನಾನು ಯೋಗವನ್ನು ತಿಳಿಯಬೇಕು' ಎಂದು ಅತ್ಯಂತವಾಗಿ ಇಷ್ಟ ವುಳ್ಳವನೂ ಕೂಡ ಶಬ್ದಬ್ರಹ್ಮವನ್ನು ಹೊಂದುತ್ತಾನೆ.

**ಜಿಜ್ಞಾಸುಃ= ಯೋಗಸ್ಯ ಜಿಜ್ಞಾಸುರಪಿ, ಜ್ಞಾತವ್ಯೋ ಮಯಾ ಯೋಗ ಇತಿ ಯಸ್ಯ ಅತೀವ ಇಚ್ಛಾ ಸೋಽಪಿ ಶಬ್ದಬ್ರಹ್ಮ ಅತಿ ವರ್ತತೇ.**

ಪರಂ ಬ್ರಹ್ಮ ಪ್ರಾಪ್ನೋತಿ ಶಬ್ದಬ್ರಹ್ಮ ಎಂಬ ಶಬ್ದವು ಇಲ್ಲಿ ವೈದಿಕವಿಧಿ-ನಿಷೇಧಗಳನ್ನು ಹೇಳುತ್ತದೆ. ಅದನ್ನು ಮೀರುವುದು ಪರಬ್ರಹ್ಮ ನನ್ನು ಹೊಂದಿದವನಿಗೆ ಮಾತ್ರವೇ ಸಾಧ್ಯ.) (ಮ.ಭಾ.)

**ಓಂ ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ ।**
**ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ॥೪೫॥**

ಪ್ರಯತ್ನಪೂರ್ವಕವಾಗಿ ಅಭ್ಯಾಸಮಾಡುತ್ತಿರುವ ಯೋಗಿಯು ಪಾಪ ಗಳನ್ನು ತೊಡೆದುಕೊಂಡು ಅನೇಕಜನ್ಮಗಳ ಪ್ರಯತ್ನದಿಂದ ಸಿದ್ಧಿಯನ್ನು ಪಡೆದು ಅದರಿಂದ ಪರಮಗತಿಯನ್ನು ಹೊಂದುತ್ತಾನೆ.

* * *

(ಈ ಶ್ಲೋಕದಲ್ಲಿ ಯೋಗಭ್ರಷ್ಟನಾಗದ ಯೋಗಿಯ ವಿಷಯವನ್ನು ಹೇಳುತ್ತಾನೆ.

ಅಧಿಕವಾಗಿ ಪೂರ್ಣತತ್ಪರತೆಯಿಂದ ಪ್ರಯತ್ನಮಾಡುತ್ತಾ ಇರುವ ಯೋಗಿಯು ಸಂಶುದ್ಧಕಿಲ್ಬಿಷನಾಗುತ್ತಾನೆ. ಅವನಲ್ಲಿರುವ ಪಾಪವೂ ಶುದ್ಧ ವಾಗಿಬಿಡುತ್ತದೆ. ಅರ್ಥಾತ್ ಪಾಪರಹಿತನಾಗುತ್ತಾನೆ.

ಹುಟ್ಟಿದೊಡನೆಯೇ ಅಥವಾ ಬಾಲ್ಯದಲ್ಲಿಯೇ ಒಬ್ಬನಿಗೆ ಆತ್ಮಜ್ಞಾನ ವಾಯಿತೆಂದರೆ ಅದು ಜನ್ಮಾಂತರದ ಪ್ರಯತ್ನದ ಫಲ–ಎಂದು ತಿಳಿಯ ಬಹುದು. **ಜನ್ಮಾಂತರವೃತಾಭ್ಯಾಸಾತ್ ಸ್ವಯಂ ತತ್ತ್ವಂ ಪ್ರಕಾಶತೇ**

ಅನೇಕಜನ್ಮಗಳ ಸತತಪ್ರಯತ್ನದಿಂದ ಸಿದ್ಧಿಯನ್ನು ಪಡೆದು ಅನಂತರ ದಲ್ಲಿ ಯೋಗಿಯು ಪರಮಗತಿಯನ್ನು ಹೊಂದುತ್ತಾನೆ. (ಮೋಕ್ಷವನ್ನು ಪಡೆ ಯುತ್ತಾನೆ.)

ಅನೇಕಜನ್ಮಗಳಲ್ಲಿ ಸಂಪಾದಿಸಿದ ಸಂಸ್ಕಾರದಿಂದ ಜ್ಞಾನಸಿದ್ಧಿಯನ್ನು ಪಡೆದು ಅದರಿಂದ ಶ್ರೇಷ್ಠತಮವಾದ ಗತಿಯನ್ನು ಎಂದರೆ ಮೋಕ್ಷವನ್ನು ಪಡೆಯುತ್ತಾನೆ. ಯೋಗಮಾರ್ಗದಲ್ಲಿ ಸರಿಯಾದ ಪ್ರಯತ್ನವನ್ನೇ ಚೆನ್ನಾಗಿ ಮಾಡುವ ಯೋಗಿಗೆ ನಿಸ್ಸಂಶಯವಾಗಿಯೂ ಉತ್ತಮಗತಿಯು ಸಿಕ್ಕುತ್ತದೆ. ಬೇರೆ-ಬೇರೆ ಜನ್ಮಗಳಲ್ಲಿ ಸ್ವಲ್ಪ-ಸ್ವಲ್ಪವಾಗಿ ಸಂಗ್ರಹಿಸಿದ ಸಂಸ್ಕಾರಗಳೆಲ್ಲವೂ ಕೂಡಿ ಅವನ ಪಾಪವನ್ನು ತೊಳೆದು ಜ್ಞಾನಸಿದ್ಧಿಯನ್ನುಂಟುಮಾಡುತ್ತವೆ. ಅದರಿಂದ ಮೋಕ್ಷಲಾಭವಾಗುತ್ತದೆ.

ಇಲ್ಲಿ ಒಂದೇ ಜನ್ಮದಲ್ಲಿ ಯಾವ ಯೋಗಿಯೂ ಮೋಕ್ಷಹೊಂದಲು ಸಾಧ್ಯವಿಲ್ಲ ; ಎಲ್ಲರಿಗೂ ಮೋಕ್ಷಪ್ರಾಪ್ತಿಗೆ ಅನೇಕಜನ್ಮಗಳೇ ಬೇಕು ಎಂಬು ದರಲ್ಲಿ ತಾತ್ಪರ್ಯವಿಲ್ಲ. ಮೋಕ್ಷಪ್ರಾಪ್ತಿಯು ಕ್ಲಿಷ್ಟ. ಅನೇಕಜನ್ಮಗಳಿಂದ ಸಾಧಿ ಸಿದ ಸಂಸ್ಕಾರವು ಅದಕ್ಕೆ ಪೋಷಕವಾಗುತ್ತದೆ ಎಂದು ಭಾವ.

**ಅನೇಕ...ಗತಿಂ** = ಅನೇಕಜನ್ಮಗಳಲ್ಲಿ ಸ್ವಲ್ಪ-ಸ್ವಲ್ಪ ಸಂಸ್ಕಾರಗಳನ್ನು ಒಂದುಗೂಡಿಸಿ ಅದರಿಂದ ಪಾಪರಹಿತನಾಗಿ ಸಿದ್ಧಾವಸ್ಥೆಯನ್ನು ಪಡೆದು **ಸಮ್ಯಕ್** ಜ್ಞಾನವನ್ನು ಹೊಂದಿ ಪರಮಗತಿಯನ್ನು ಪಡೆಯುತ್ತಾನೆ.

(ಶಂ.ಭಾ.)

ಯೋಗಮಾಹಾತ್ಮ್ಯೆಯು ಹೀಗಿರುವುದರಿಂದ, ಅನೇಕಜನ್ಮಗಳಲ್ಲಿ ಸಂಪಾದಿಸಿದ ಪುಣ್ಯಸಂಚಯಗಳಿಂದ ಪಾಪಗಳು ತೊಳೆದುಹೋಗಿ, ಸಂಸಿದ್ಧನಾಗಿ ಪ್ರಯತ್ನಪೂರ್ವಕವಾಗಿ ಸಾಧನೆಮಾಡುವ ಯೋಗಿಯು ಚಲಿತನಾಗಿದ್ದರೂ ಪರಾಗತಿಯನ್ನು ಹೊಂದಿಯೇ ಹೊಂದುತ್ತಾನೆ. (ರಾ.ಭಾ.)

(ಜಿಜ್ಞಾಸುವಿಗೆ) ಒಂದೇ ಜನ್ಮದಲ್ಲೇ ಬ್ರಹ್ಮಪ್ರಾಪ್ತಿಯಾಗಿಬಿಡುತ್ತದೆ ಎಂದಲ್ಲ. ಅದಕ್ಕೆ ಅನೇಕಜನ್ಮಗಳೂ ಬೇಕು, ಪ್ರಯತ್ನವೂ ಬೇಕು. (ಯೋಗಜಿಜ್ಞಾಸಾಮಾತ್ರದಿಂದಲೇ ಪರಬ್ರಹ್ಮವು ಸಿಕ್ಕುವ ಪಕ್ಷಕ್ಕೆ ಯೋಗಾನುಷ್ಠಾನವೇ ವ್ಯರ್ಥವಾಗುತ್ತದೆಯಲ್ಲವೇ? ಎಂದರೆ ಅದಕ್ಕೆ ಈ ಉತ್ತರ : ಕೇವಲ ಜಿಜ್ಞಾಸೆಯಿಂದಲೇ ಪರಬ್ರಹ್ಮವು ಸಿಕ್ಕುವುದಿಲ್ಲ.)

ಜಿಜ್ಞಾಸುವು ಯೋಗವನ್ನು ತಿಳಿದು ಪ್ರಯತ್ನಮಾಡುತ್ತಾನೆ. ಹೀಗೆ ಅನೇಕಜನ್ಮಗಳಿಂದ ಸಂಸಿದ್ಧನಾಗಿ ಅಪರೋಕ್ಷಜ್ಞಾನಿಯಾಗಿ ಪರಾಗತಿಯನ್ನು ಹೊಂದುತ್ತಾನೆ.

**ಅತೀವ ಶ್ರದ್ಧಯಾ ಯುಕ್ತಃ ಜಿಜ್ಞಾಸುರ್ವಿಷ್ಣುತತ್ಪರಃ ।**
**ಜ್ಞಾತ್ವಾ ಧ್ಯಾತ್ವಾ ತಥಾ ದೃಷ್ಟ್ವಾ ಜನ್ಮಭಿರ್ಬಹುಭಿಃ ಪುಮಾನ್ ॥**
**ವಿಶೇನ್ನಾರಾಯಣಂ ದೇವಂ ನಾನ್ಯಥಾ ತು ಕಥಂಚನ ॥**

(ನಾರದೀಯ) (ಮ.ಭಾ.)

**ಓಂ ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥**

ತಪಸ್ವಿಗಳಿಗಿಂತಲೂ ಯೋಗಿಯು ಹೆಚ್ಚಿನವನು. ಜ್ಞಾನಿಗಳಿಗಿಂತಲೂ ಹೆಚ್ಚಿನವನೆಂದು ನನ್ನ ಅಭಿಪ್ರಾಯ. ಕರ್ಮಿಗಳಿಗಿಂತಲೂ ಹೆಚ್ಚಿನವನು. ಆದುದರಿಂದ ಅರ್ಜುನ! ನೀನೂ ಕೂಡ ಯೋಗಿಯಾಗು.

* * *

(ಈ ಶ್ಲೋಕದಲ್ಲಿ ಶ್ರೀಕೃಷ್ಣನು ಧ್ಯಾನಯೋಗಿಯೇ ಸರ್ವಶ್ರೇಷ್ಠ ಎಂಬುದನ್ನು ಪ್ರತಿಪಾದಿಸುತ್ತಾನೆ.

ಯೋಗಿಯು ಸರ್ವಶ್ರೇಷ್ಠನೆಂಬುದನ್ನು ಭಗವಂತನು ನಿರೂಪಿಸಿ ಅರ್ಜುನನಿಗೆ ಅಂತಹ ಯೋಗಿಯಾಗಬೇಕೆಂದು ತಿಳಿವಳಿಕೆ ನೀಡುತ್ತಾನೆ.

ಯೋಗಿಗಳಲ್ಲೂ ತಪೋಜ್ಞಾನಕರ್ಮಗಳಿರಬಹುದು. ಇವುಗಳನ್ನು ಪರಮಸಿದ್ಧಿಗೆ ಕಾರಣವಾಗಿಯೂ ಶಾಸ್ತ್ರಗಳು ಹೇಳಿವೆ. ಉದಾಹರಣೆ : ತಪಸಾ **ಬ್ರಹ್ಮ ವಿಜಿಜ್ಞಾಸಸ್ವ । ತತ್ಸರ್ವಂ ತಪಸಾ ಸಾಧ್ಯಂ । ದೂರೇಣ ಹ್ಯವರಂ ಕರ್ಮ । ಬುದ್ಧಿಯೋಗಾದ್ಧನಂಜಯ । ಜ್ಞಾನಾದೇವ ತು ಕೈವಲ್ಯಂ । ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।** ಜ್ಞಾನವು ಯೋಗದ ಫಲ ಎಂದೂ ಕೇಳಿದ್ದೇವೆ. **ಜ್ಞಾನತಪಸಾ ಪೂತಾಃ** ಎಂದು ಹೇಳುವಂತೆ ಜ್ಞಾನವೂ ಒಂದು ಬಗೆಯ ತಪಸ್ಸೇ ಆಗಿದೆ. ಹೀಗಿರುವಾಗ ಯೋಗಿಯು ತಪಸ್ವೀ, ಜ್ಞಾನೀ ಮತ್ತು ಕರ್ಮೀ–ಈ ಮೂವರಿಗಿಂತಲೂ ಹೇಗೆ ಶ್ರೇಷ್ಠನಾಗುತ್ತಾನೆ? ಎಂಬ ಪ್ರಶ್ನೆಯೇಳುತ್ತದೆ. ಆದುದರಿಂದ ಈ ಶಬ್ದಗಳಲ್ಲಿ ಇಲ್ಲಿ ವಿಶಿಷ್ಟವಾದ ಅರ್ಥವನ್ನು ಹೇಳಬೇಕು.

ಯೋಗಿಯು ತಪಸ್ವಿಗಳಿಗಿಂತಲೂ ಅಧಿಕನಾದವನು. ತಪಸ್ವಿಗಳೆಂದರೆ ಕೇವಲ ಕೃಚ್ಛ್ರ-ಚಾಂದ್ರಾಯಣಾದಿಗಳನ್ನು ಆಚರಿಸುತ್ತಾ ಕಠೋರವ್ರತನಿಷ್ಠ ರಾಗಿರತಕ್ಕವರು. ಮೋಕ್ಷಸಾಧನೆಗಲ್ಲದೇ ಬೇರೆ ಸಿದ್ಧಿಗಳನ್ನು ಪಡೆಯಲು ತಪಸ್ಸುಮಾಡುವವರು. ಹಿರಣ್ಯಾಕ್ಷ, ಹಿರಣ್ಯಕಶಿಪು, ರಾವಣ–ಇವರೆಲ್ಲರೂ ಮಾಡಿದುದು ತಪಸ್ಸೇ. ದೇಹಶೋಷಣೆಮಾಡಿ ಕಾಮ್ಯಫಲಾಕಾಂಕ್ಷೆಯಿಂದ ಮಾಡತಕ್ಕದ್ದು ತಪಸ್ಸು. ಇಂತಹ ತಪಸ್ಸಿನಿಂದ ಯಾವ ಮುಕ್ತಿಯೂ ಸಿಕ್ಕುವುದಿಲ್ಲ. ಆದುದರಿಂದ ಇವರಿಗಿಂತಲೂ ಯೋಗಿಯು ಅಧಿಕನು.

ಜ್ಞಾನಿಗಳಿಗಿಂತಲೂ ಅಧಿಕನಾದವನು. ಇಲ್ಲಿ ಜ್ಞಾನೀ ಎಂದರೆ ಶಾಸ್ತ್ರಾಧ್ಯಯನಮಾಡಿ ಆತ್ಮಾನಾತ್ಮಭೇದವನ್ನು ತಿಳಿದಿರತಕ್ಕವನು. ಆತ್ಮಜ್ಞಾನಿಯಲ್ಲ. ಆತ್ಮಜ್ಞಾನಿಗೂ ಶಾಸ್ತ್ರಜ್ಞಾನಿಗೂ ಅಪಾರವಾದ ವ್ಯತ್ಯಾಸವಿದೆ. ಶಾಸ್ತ್ರಜ್ಞಾನಿಗೆ ಬೋಧನಾಪಾಂಡಿತ್ಯವಿರುತ್ತದೆ. ಅನೇಕವಿಷಯಗಳನ್ನು ತಿಳಿದು ಕೊಂಡಿರುತ್ತಾನೆ. ಆದರೆ ಅದು ಆಚರಣೆಯಲ್ಲಿ ಇರಬಹುದು ಅಥವಾ

ಇಲ್ಲದೆಯೂ ಇರಬಹುದು. ಸಾಧನೆಯಿಲ್ಲದೇ ಕೇವಲ ಅನೇಕಶಾಸ್ತ್ರಗಳ ಅಧ್ಯಯನದಿಂದ ಆತ್ಮಜ್ಞಾನವಾಗುವುದಿಲ್ಲ. ಶಾಸ್ತ್ರಗಳಿಗೆ, ಊರನ್ನು ತೋರಿಸಲು ನಿಲ್ಲಿಸಿರುವ ಕೈಮರದಷ್ಟೇ ಪ್ರಯೋಜನ. ಶಾಸ್ತ್ರಪಾಂಡಿತ್ಯವನ್ನು ಶ್ರೀರಾಮಕೃಷ್ಣರು ಗಿಳಿಯ ಪಾಠಕ್ಕೆ ಹೋಲಿಸುತ್ತಿದ್ದರು. ಗಿಳಿಗೆ 'ರಾಮ-ರಾಮ' ಎಂದು ಹೇಳುವುದನ್ನು ಕಲಿಸಿದ್ದರು. ಅದು ಯಾವಾಗಲೂ ಯಾರೇ ಬಂದರೂ 'ರಾಮ-ರಾಮ' ಎನ್ನುತ್ತಿತ್ತು. ಒಂದು ದಿನ ಅದರ ಸಮೀಪಕ್ಕೆ ಬೆಕ್ಕು ಬಂದಿತು. ಗಿಣಿಗೆ ರಾಮಮಂತ್ರವು ಮರೆತುಹೋಗಿ ಪ್ರಾಣಭಯದಿಂದ ಕಿರುಚಲು ಪ್ರಾರಂಭಿಸಿತು. ಸಾಧನೆಯಿಲ್ಲದ ಶಾಸ್ತ್ರಾಭ್ಯಾಸಕ್ಕೂ ಇಷ್ಟೇ ಪ್ರಯೋಜನ. ಮೃತ್ಯುಮುಖನಾದಾಗ ಶಾಸ್ತ್ರವೇತ್ತನಿಗೆ ಅವನು ಅಧ್ಯಯನಮಾಡಿದ ಶಾಸ್ತ್ರಗಳು ಯಾವ ಪ್ರಯೋಜನಕ್ಕೂ ಬರುವುದಿಲ್ಲ.

ಇಲ್ಲಿ ಶ್ರೀಶಂಕರರ ಭಜಗೋವಿಂದಸ್ತೋತ್ರವನ್ನು ಸ್ಮರಿಸಬಹುದಾಗಿದೆ.

**ಭಜ ಗೋವಿನ್ದಂ ಭಜ ಗೋವಿನ್ದಂ**
**ಗೋವಿನ್ದಂ ಭಜ ಮೂಢಮತೇ ।**
**ಸಮ್ಪ್ರಾಪ್ತೇ ಸಂನಿಹಿತೇ ಕಾಲೇ**
**ನ ಹಿ ನ ಹಿ ರಕ್ಷತಿ ಡು ಕೃಞ್ಕರಣೇ ॥**

ಮೂಢಬುದ್ಧಿಯವನೇ! ಗೋವಿಂದನನ್ನು ಭಜಿಸು ; ಗೋವಿಂದನನ್ನು ಭಜಿಸು. ಮೃತ್ಯುವು ಸನ್ನಿಹಿತವಾಗುವ ಕಾಲವು ಬಂದಾಗ ಡು ಕೃಞ್ಕರಣೆ ಮುಂತಾದ ವ್ಯಾಕರಣಪಾಠವು ಯಾವ ಪ್ರಯೋಜನಕ್ಕೂ ಬರುವುದಿಲ್ಲ.

ಈ ಎಲ್ಲ ಕಾರಣಗಳಿಂದಲೂ ಶ್ರೀಕೃಷ್ಣನು ಈ ವಿಧವಾದ ಜ್ಞಾನಿಗಳಿಗಿಂತಲೂ ಯೋಗಿಯು ಶ್ರೇಷ್ಠನು ಎನ್ನುತ್ತಾನೆ.

ಕರ್ಮಿಗಳು ಎಂದರೆ ಕೇವಲ ಕರ್ಮಗಳಲ್ಲಿ ಆಸಕ್ತರಾದ ಕರ್ಮಠರು. ಇವರಿಗಿಂತಲೂ ಧ್ಯಾನಯೋಗಿಯು ಹೆಚ್ಚಿನವನು.

ಹೀಗೆ ಧ್ಯಾನಯೋಗಿಯ ಹಿರಿಮೆಯನ್ನು ಶ್ರೀಕೃಷ್ಣನು ಅರ್ಜುನನಿಗೆ ಹೇಳಿ–'ತಸ್ಮಾದ್ಯೋಗೀ ಭವಾರ್ಜುನ ಧ್ಯಾನಯೋಗಕ್ಕೆ ಇಷ್ಟು ಹಿರಿಮೆಯಿರುವುದರಿಂದ ನೀನೂ ಸಹ ಧ್ಯಾನಯೋಗಿಯಾಗು'–ಎಂದು ಸಲಹೆ ನೀಡುತ್ತಾನೆ.

ತಪಸ್ವಿಭ್ಯಃ = ಕೇವಲತಪಸ್ವಿಭ್ಯಃ ಪರಮಾತ್ಮನ ಲಕ್ಷ್ಯವಿಲ್ಲದೇ ತಪಸ್ಸುಮಾಡುವವರಿಗಿಂತಲೂ. (ರಾ.ಭಾ.)

ತಪಸ್ವಿಭ್ಯಃ = ಕೃಚ್ಛ್ರಾದಿಚಾರಿಭ್ಯಃ (ಮ.ಭಾ.)

ಜ್ಞಾನಿಭ್ಯಃ = ಜ್ಞಾನಂ ಶಾಸ್ತ್ರಪಾಣ್ಡಿತ್ಯಂ ತದ್ವದ್ಭ್ಯಃ (ಶಂ.ಭಾ.)

ಆತ್ಮಜ್ಞಾನವ್ಯತಿರಿಕ್ತಜ್ಞಾನವದ್ಭ್ಯಃ (ರಾ.ಭಾ.)

ಯೋಗಜ್ಞಾನಿಭ್ಯಃ (ಮ.ಭಾ.)

ಕರ್ಮಿಭ್ಯಃ = ಅಗ್ನಿಹೋತ್ರಾದಿ ಕರ್ಮಕೃದ್ಭ್ಯಃ (ಶಂ.ಭಾ.)

ಓಂ ಯೋಗಿನಾಮಪಿ ಸರ್ವೇಷಾಂ ಮದ್ಗತೇನಾನ್ತರಾತ್ಮನಾ ।
ಶ್ರದ್ಧಾವಾನ್ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥

ಯೋಗಿಗಳಲ್ಲಿಯೂ ಯಾವನು ನನ್ನನ್ನೇ ಅಂತರಾತ್ಮದಲ್ಲಿ ನೆಲೆಸಿಕೊಂಡು ಶ್ರದ್ಧಾವಂತನಾಗಿ ನನ್ನನ್ನೇ ಭಜಿಸುವನೋ ಅವನೇ ಯುಕ್ತರಲ್ಲಿ ಶ್ರೇಷ್ಠತಮನು–ಎಂದು ನನ್ನ ಅಭಿಪ್ರಾಯವಾಗಿದೆ.

* * *

(ಯೋಗಿಗಳಲ್ಲಿ ಅನೇಕಬಗೆಯವರುಂಟು ; ಅನೇಕಮಟ್ಟದವರುಂಟು ; ಸಕಾಮರುಂಟು ; ನಿಷ್ಕಾಮರುಂಟು ; ಬೇರೆ ಬೇರೆ ಅನಿಷ್ಟಪರಿಹಾರಕ್ಕಾಗಿ ಇಷ್ಟಫಲಗಳ ಪ್ರಾಪ್ತಿಗಾಗಿ ದೇವತಾಂತರಗಳನ್ನು ಅಥವಾ ಭಗವಂತನನ್ನು ಭಜಿಸುವವರೂ ಉಂಟು. ಅವರಲ್ಲಿ, ತಮ್ಮ ಅಂತಃಕರಣವನ್ನು ಪರಮಾತ್ಮನಲ್ಲಿ ಸಂಪೂರ್ಣವಾಗಿ ಒಪ್ಪಿಸಿಕೊಂಡು ಭಗವನ್ಮಯರಾಗಿ, ಅವನಲ್ಲಿಯೇ ಸಂಪೂರ್ಣಶ್ರದ್ಧೆಯನ್ನಿಟ್ಟು, ಅವನಿಂದ ಏನನ್ನೂ ಪ್ರಾರ್ಥಿಸದೇ–'ನಮಗೆ ಯಾವುದು ಹಿತವೋ ಅವನಿಗೇ ಗೊತ್ತು. ಉಪಾಯವೂ ಅವನೇ–ಉಪೇಯವೂ ಅವನೇ. ಅದನ್ನು ನಾನು ಕೇಳುವುದಿಲ್ಲ. ಪರಮಾನಂದಶಾಂತಿ ಸ್ವರೂಪನಾದ ಅವನ ಧ್ಯಾನವೇ ಸ್ವಯಂ ಫಲವಾಗಿದೆ'–ಎಂದು ಪರಮಭಕ್ತಿಯಿಂದ ಅವನನ್ನು ಸೇವಿಸುವವರು ಅತ್ಯಂತಯುಕ್ತರು, ಅತ್ಯಂತ ಅತಿಶಯದ ಯೋಗಿಗಳು.

ಜ್ಞಾನೀ ತು ಪರಮೈಕಾನ್ತೀ ತದಾ ಯತಾತ್ಮಜೀವನಃ ।
ತತ್ಸಂಶ್ಲೇಷವಿಯೋಗೈಕಸುಖದುಃಖಸ್ತದೇಕಧೀಃ ॥

**ಭಗವದ್ಧ್ಯಾನಯೋಗೋಕ್ತಿವನ್ದನಸ್ತುತಿಕೀರ್ತನೈಃ ।**
**ಲಬ್ಧಾತ್ಮಾ ತದ್ಗತಪ್ರಾಣಮನೋಬುದ್ಧೀನ್ದ್ರಿಯಕ್ರಿಯಃ ॥**

**ನಿಜಕರ್ಮಾದಿಭಕ್ತ್ಯನ್ತಂ ಕುರ್ಯಾತ್ಪ್ರೀತ್ಯೈವ ಕಾರಿತಃ ।**
**ಉಪಾಯತಾಂ ಪರಿತ್ಯಜ್ಯ ನ್ಯಸ್ಯೇದ್ದೇವೇ ತು ತಾಮಭೀಃ ॥**

ಜ್ಞಾನಿಯೆಂಬುವನು ಪರಮೈಕಾಂತಿ. ತನ್ನ ಜೀವನವೇ ಭಗವದಧೀನ ವೆಂದು ಭಾವಿಸುವವನು. ಅವನ ಸೇರುವಿಕೆಯನ್ನೇ ಸುಖವೆಂದೂ, ವಿಯೋಗ ವನ್ನೇ ದುಃಖವೆಂದೂ ತಿಳಿದು ಅವನೊಬ್ಬನಲ್ಲೇ ಬುದ್ಧಿಯನ್ನಿಟ್ಟಿರುವವನು. ಭಗವಂತನ ಧ್ಯಾನಯೋಗ-ಉಕ್ತಿ-ವಂದನ-ಸ್ತುತಿ-ಕೀರ್ತನೆಗಳಿಂದ ಆತ್ಮ ವಂತನಾಗಿ ಮನೋಬುದ್ಧೀಂದ್ರಿಯಕ್ರಿಯೆಗಳೆಲ್ಲವನ್ನೂ ಭಗವಂತನಲ್ಲಿ ನೆಲೆ ಗೊಳಿಸಿರುವವನು. ಭಕ್ತಿಪರ್ಯಂತವಾದ ತನ್ನ ಕರ್ಮಾದಿಗಳೆಲ್ಲವನ್ನೂ ಭಗವತ್ಪ್ರೀತಿಯಿಂದಲೇ ಪ್ರೇರಿತನಾಗಿ ಮಾಡುವವನು. ಅವುಗಳು ಉಪಾಯ ವೆಂದು ಭಾವಿಸದೇ ನಿರ್ಭಯನಾಗಿ ಭಗವಂತನಿಗೆ ಸಮರ್ಪಿಸುವವನು.

ಭಗವಂತನಿಗೆ ಇಂತಹವನಲ್ಲದೆ ಬೇರೆ ಯಾವನು ತಾನೇ ಯುಕ್ತತಮ ನಾದಾನು?

ಯುಕ್ತ ; ಯುಕ್ತತರ ಇವರಿಗಿಂತಲೂ ಅತಿಶಯನಾದವನು ಯುಕ್ತತಮ.

ರುದ್ರರು, ಆದಿತ್ಯರು ಮುಂತಾದ ದೇವತೆಗಳ ಧ್ಯಾನದಲ್ಲಿ ಲಗ್ನವಾಗಿ ರುವ ಎಲ್ಲ ಯೋಗಿಗಳ ಮಧ್ಯದಲ್ಲಿ, ವಾಸುದೇವನಾದ ನನ್ನಲ್ಲಿ ಸಮಾಹಿತ ವಾದ ಅಂತಃಕರಣವುಳ್ಳವನಾಗಿ ನನ್ನನ್ನು ಸೇವಿಸುವವನು ನನಗೆ ಅತ್ಯಂತ ಯುಕ್ತನು ಎಂದು ನಾನು ತಿಳಿಯುತ್ತೇನೆ. (ಶಂ.ಭಾ.)

'ಎಲ್ಲ ಯೋಗಿಗಳ ಮಧ್ಯದಲ್ಲಿ' ಎಂದರೆ ಹಿಂದೆ ನಿರ್ದೇಶಿಸಲ್ಪಟ್ಟ ತಪಸ್ವಿಗಳೇ ಮುಂತಾದವರ ಮಧ್ಯದಲ್ಲಿ ಈ ಮುಂದೆ ಹೇಳುವ ಯೋಗಿಯು ಯುಕ್ತತಮನು. ನನ್ನಲ್ಲಿ ಅತ್ಯಂತಪ್ರೇಮವುಳ್ಳವರಾಗಿ, ಅನನ್ಯಧಾರಣಾ ಸ್ವಭಾವವುಳ್ಳ ಭಗವನ್ಮಯವಾದ ಮನಸ್ಸಿನಿಂದ ಅತ್ಯಂತಶ್ರದ್ಧೆಯುಳ್ಳವರಾಗಿ, ನನ್ನ ಕ್ಷಣಮಾತ್ರ ಅಗಲಿಕೆಯನ್ನೂ ಸಹಿಸದೇ ನನ್ನನ್ನು ಹೊಂದುವ ಪ್ರವೃತ್ತಿ ಯಲ್ಲಿ ಅತ್ಯಂತತ್ವರೆಯುಳ್ಳವರಾಗಿ, ನನ್ನನ್ನು ಉಪಾಸನೆಮಾಡುವವರು

ನನಗೆ ಯುಕ್ತತಮರು. ಸರ್ವಯೋಗಿಗಳಿಗಿಂತಲೂ ಶ್ರೇಷ್ಠರು. ಸಾಸುವೆಗಳಲ್ಲಿ ಪರಸ್ಪರ ಹೆಚ್ಚುಕಡಿಮೆ ಇರುವಂತೆ ತಪಸ್ವಿಗಳು ಮುಂತಾದವರಲ್ಲಿ ಪರಸ್ಪರ ಹೆಚ್ಚುಕಡಿಮೆ ಇರಬಹುದು. ಆದರೆ ಮೇರುಪರ್ವತದ ದೃಷ್ಟಿಯಿಂದ ಆ ಸಾಸುವೆಗಳೆಲ್ಲವೂ ಕಡಿಮೆಯಾಗಿರುವಂತೆ ಈ ಯುಕ್ತತಮನಾದ ಯೋಗಿಗಿಂತ ಅವರೆಲ್ಲರೂ ನ್ಯೂನರೇ. ಈ ಹಿಂದಿನ ಶ್ಲೋಕಗಳಲ್ಲಿ ಹೇಳಿರುವುದು ಪರವಿದ್ಯೆಗೆ ಅಂಗಭೂತವಾಗಿರುವ ಪ್ರತ್ಯಗಾತ್ಮದರ್ಶನವನ್ನು. ಆದರೆ ಇಲ್ಲಿ ಪ್ರಸ್ತಾಪಮಾಡಲ್ಪಟ್ಟಿರುವುದು ಅದಕ್ಕಿಂತಲೂ ಮಿಗಿಲಾದ ಪರವಿದ್ಯೆ.

(ರಾ.ಭಾ.)

ಶ್ರೀಮದ್ವಸಂಪ್ರದಾಯಕ್ಕೆ ಸೇರಿದ ಒಬ್ಬ ವಿದ್ವಾಂಸರು ಈ ಶ್ಲೋಕಕ್ಕೆ ಹೀಗೆ ಟೀಕೆಮಾಡಿದ್ದಾರೆ. ವೈಷ್ಣವರಾಗಿದ್ದುಕೊಂಡೇ ಇತರ ದೇವತೆಗಳನ್ನು ಧ್ಯಾನಮಾಡುವವರು, ಸಕಾಮರಾಗಿ ವಿಷ್ಣುವನ್ನು ಧ್ಯಾನಿಸುವವರು ಮತ್ತು ನಿಷ್ಕಾಮರಾಗಿ ವಿಷ್ಣುವನ್ನು ಧ್ಯಾನಿಸುವವರು ಈ ಮೂವರು ಯೋಗಿಗಳ ಮಧ್ಯೆ ಆಯಾ ದೇವತಾಸ್ವರೂಪವನ್ನನುಸರಿಸಿ ಅವರಲ್ಲಿ ದೃಢವಾದ ಪ್ರೇಮವುಳ್ಳವನು ಯುಕ್ತ. ಸಕಾಮನಾಗಿ ವಿಷ್ಣುವನ್ನು ಭಜಿಸುವವನು ಯುಕ್ತತರ. ನಿಷ್ಕಾಮನಾಗಿ ವಿಷ್ಣುವನ್ನು ಭಜಿಸುವವನು ಯುಕ್ತತಮ.

**ಅಕಾಮಃ ಸರ್ವಕಾಮೋ ವಾ.** (ಮ.ಭಾ.)

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ**
**ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**ಆತ್ಮಸಂಯಮಯೋಗೋ ನಾಮ ಷಷ್ಠೋಽಧ್ಯಾಯಃ**

ಭಗವದ್ಗೀತೆಯಲ್ಲಿ ೬ನೆಯ ಅಧ್ಯಾಯವು ಮುಗಿಯಿತು.

**ಭೀಷ್ಮಪರ್ವದಲ್ಲಿ ೩೦ನೆಯ ಅಧ್ಯಾಯವು ಮುಗಿಯಿತು.**

**ಹನ್ನೆರಡನೆಯ ಸಂಪುಟವು ಮುಗಿಯಿತು.**

ಶ್ರೀಕೃಷ್ಣಾರ್ಪಣಮಸ್ತು
ಶ್ರೀಸದ್ಗುರುಚರಣಾರವಿನ್ದಾರ್ಪಣಮಸ್ತು
ಓಂ ತತ್ಸತ್

